# ಶ್ರೀಮತ್ಕೃಷ್ಣರಾಜಾಷ್ಟಕಂ



ಶ್ರೀಮದ್ಭಾರತರಾಜ್ಯಶಾಸಕನೃಪಶ್ರೇಣ್ಯಾಂ ಪ್ರಭುರ್ಗಣ್ಯತೇ |
ಯೋ ವಿಶ್ವೈಸ್ಸಹಜೈಶ್ಶುಭೈರ್ನೃಪಗುಣೈರಾದೌ ಮಹಾನಾಯಕಃ ||
ಸೋಯಂ ಶ್ರೀಯದುವಂಶವಾರಿಧಿವಿಧುಃ ಸರ್ವೈಕ್ಕಲಾಭಿರ್ಯುತಃ |
ಜೀಯಾತ್ಕೃಷ್ಣನೃಪಾಲಕಃ ಕುವಲಯಾನನ್ದಂ ವಿತನ್ವಂಶ್ಚಿರಂ ||೧||

ಯದ್ವತ್ಸ್ವಾಶ್ರಿತರಕ್ಷಣಾಯ ಸಹತೇ ಮಾರ್ತಂಡತಾಪಂ ದ್ರುಮಃ |
ತದ್ವಲ್ಲೋಕಹಿತಾಯ ನೀತಿನಿಪುಣಃ ಕ್ಲಿಶ್ನಾತಿ ಯಃ ಸಂತತಂ ||
ಯೇನಾತ್ರ ಪ್ರಭುಪುಂಗವೇನ ಜನತಾ ಸೌಖ್ಯಂ ಪರಂ ಪ್ರಾಪಿತಾ |
ಸೋಯಂ ಕೃಷ್ಣಮಹೀಪತಿರ್ವಿಜಯತೇ ಕಾರುಣ್ಯರತ್ನಾಕರಃ ||೨||

ಯೋ ರಾಜಯೋಗೀ ಪ್ರಕೃತಿಂ ಸ್ವಕೀಯಾಂ |
ಜಾನಾತಿ ಸರ್ವಾಂ ಸುತನಿರ್ವಿಶೇಷಂ ||
ರಾಜನ್ವತೀತಿ ಪ್ರಥಿತಾಭಿಧೇಯಾಂ |
ಶ್ರೀಕೃಷ್ಣರಾಜಃ ಸ ಧರಾಮಕಾರ್ಷೀತ್ ||೩||

ಶ್ರೀಕೃಷ್ಣರಾಜ್ಯಂ ಕಥಯಂತಿ ತುಷ್ಟಾಃ |
ಸರ್ವಾಃ ಪ್ರಜಾಸ್ತಾ ಇತಿ ರಾಮರಾಜ್ಯಂ ||
ಚಿತ್ರಂ ಜಗತ್ಯಾಂ ಸುಖಪಾರವಶ್ಯಾಃ |
ಕಿಂ ಜಾನತೇ ವಿಸ್ಮೃತವಸ್ತುಭೇದಂ ? ||೪||

ಶ್ರೀಕೃಷ್ಣರಾಜಸ್ಯ ಯಶೋ ವಿಶಾಲಂ |
ಭೂಪಾಲನಾತ್ತಂ ಕಕುಬನ್ತರಾಣಿ ||
ಸಂಪ್ರಾಪ್ಯ ಸೂನಂ ಧವಲೀಕರೋತಿ |
ಕಾಷ್ಠಾಂಗನಾನಾಂ ಮುಖಮಂಡಲಾನಿ ||೫||

ಯಸ್ಯ ಶ್ರೀಗುಣಿವೃಂದಶೇಖರಮಣೇಃ ಕೀರ್ತಿಪ್ರತಿಷ್ಠಾಂ ಪರಾಂ |
ಕೌಶಲ್ಯಾನ್ನಿಜರಾಜ್ಯಪಾಲನಜನಿಂ ಶ್ರುತ್ವಾ ಮಹತ್ಕೌತುಕಾಃ ||
ನಾನಾದೇಶನಿವಾಸಿನೋತ್ರ ಸುಮುದಂ ಸಂಪ್ರಾಪ್ನುವಂತ್ಯಾಗತಾಃ |
ಶ್ರೀಕೃಷ್ಣಾಖ್ಯನೃಪಸ್ಯ ತಸ್ಯ ಮಹಿಮಾ ಪಾರೇಗಿರಾಂ ರಾಜತೇ ||೧||

ಸ್ವಾಮಿನ್ ! ಮಂಗನೃಪಾಲಕೇನ ರಚಿತಂ ಶ್ರೀನೇಮಿತೀರ್ಥೇಶಿತುಃ |
ಯತ್ಪುಣ್ಯಂ ಚರಿತಂ ಸುವಿಸ್ತೃತಮಿದಂ ತತ್ ತೋಷಸಂದಾಯಕಂ ||
ಭಕ್ತ್ಯಾ ಪಾಣಿಪುಟೇರ್ಪಣಾಯ ಭವತಾ ದತ್ತಾ ಯಶಃ ಸನ್ಮತಿಃ |
ಶ್ರೀಕೃಷ್ಣಕ್ಷಿತಿಪಾಲಕ ! ಪ್ರಮುದಿತಸ್ತೇಹಂ ಕೃತಜ್ಞಸ್ತತಃ ||೨||

ಸಾರ್ವಃ ಶ್ರೀಜಿನನೇಮಿನಾಥಭಗವಾನಾರೋಗ್ಯದೀರ್ಘಾಯುಷೀ |
ದತ್ವಾ ತೇ ಮಹಿತ ಪ್ರಶಸ್ತಚರಿತ ಕ್ಷ್ಮಾಪಾಲಚೂಡಾಮಣೇ ! ||
ಮಿತ್ರಾಮಾತ್ಯಸಮಸ್ತಬಂಧುಸಹಿತಂ ಪಾಯಾದ್ಭವಂತಂ ಚಿರಾತ್ |
ಇತ್ಥಂ ಪ್ರಾರ್ಥಯತೇ ಪ್ರಭಕ್ತಿಯುತಶಾಂತೀಶಃ ಪ್ರಭೋ ! ಸಂತತಂ ||೩||

ರಾಜಭಕ್ತಿವಿನತ

ಎ. ಶಾನ್ತಿರಾಜಶಾಸ್ತ್ರೀ.

ಮೈಸೂರು ಸಂಸ್ಥಾನದ ಮಹಾಪ್ರಭುಗಳಾದ

ಕರ್ನಲ್ ಸರ್

# ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್

ಬಹಾದುರ್ ಜಿ. ಸಿ. ಎಸ್. ಐ, ಜಿ. ಬಿ. ಇ.

ಮಹಾಸ್ವಾಮಿಯವರಿಗೆ

ಅವರ ಅಪ್ಪಣೆಯನ್ನು ಪಡೆದು

ಈ ಗ್ರಂಥವು ಸಮರ್ಪಿಸಲ್ಪಟ್ಟಿದೆ

# ಮುನ್ನುಡಿ

ಕ್ಷತ್ರಿಯರು ರಾಜ್ಯವನ್ನಾಳುತ್ತ ಪ್ರಜಾಪರಿಪಾಲನವನ್ನು ಮಾಡುವುದರಲ್ಲೇ ಅಲ್ಲದೆ ಸಾಹಿತ್ಯಸೇವೆಯಲ್ಲಿಯೂ ಅವರು ಹಿಂದಿಲ್ಲವೆಂಬುದಕ್ಕೆ ಶ್ರೀ ನೇಮಿಜಿನೇಶಸಂಗತಿಯೆಂಬ ಈ ಗ್ರಂಥವೂ ಮೂರ್ತಿಮತ್ತಾದ ಒಂದು ನಿದರ್ಶನವಾಗಿರುತ್ತದೆ. ಇದರ ಕರ್ತರು ಜೈನಕ್ಷತ್ರಿಯಕುಲೋತ್ಪನ್ನರಾದ ಶ್ರೀ ಮಂಗರಸಕವಿವರ್ಯರು. ಇವರ ವಿಸ್ತೃತವಾದ ಪರಿಚಯವನ್ನು ಮುಂದೆ "ಕವಿಪರಿಚಯ" ವೆಂಬ ಭಾಗದಲ್ಲಿ ಕೊಡಲಾಗುವುದು.

ಈ ಕವಿಯಿಂದಲೇ ರಚಿತವಾಗಿರುವ ಜಯನೃಪಕಾವ್ಯವನ್ನೂ ಸಮ್ಯಕ್ತ್ವಕೌಮುದಿಯನ್ನೂ ನಾನು ಓದಿ ನೋಡಿದಮೇಲೆ ನನಗೆ ಈ ಕವಿಯ ವಿಶೇಷವಿಷಯಗಳನ್ನು ತಿಳಿಯಬೇಕೆಂಬ ಕೌತುಕವು ಹುಟ್ಟಿತು. ಆಗ ನಾನು ನಮ್ಮ ಕಲ್ಲಹಳ್ಳಿ ಮೊದಲಾದ ಸ್ಥಳಗಳಲ್ಲಿದ್ದ ಹಳೆಯ ಗ್ರಂಥಗಳನ್ನೂ ಕಾಗದಪತ್ರಗಳನ್ನೂ ಹುಡುಕಿ ತೆಗೆದೆನು. ಆ ಕಾಗದ ಪತ್ರಗಳಿಂದ ನನಗೆ ಶ್ರೀ ಮಂಗರಸರ ವಿಶೇಷಪರಿಚಯವುಂಟಾಗಿ ಅವರಲ್ಲಿ ನನಗೆ ಆತ್ಮೀಯರೆಂಬ ಭಾವನೆಯಿಂದಿದ್ದ ಗೌರವಬುದ್ಧಿಯು ಇಮ್ಮಡಿಯಾಯ್ತು ಮತ್ತು ಕನ್ನಡಗ್ರಂಥಗಳನ್ನೋದಬೇಕೆಂಬ ಅಭಿಲಾಷೆಯು ಹೆಚ್ಚಿತು.

ನಮ್ಮ ಕಲ್ಲಹಳ್ಳಿಯಲ್ಲಿದ್ದ ಗ್ರಂಥಸಂಗ್ರಹದಲ್ಲಿ ಶ್ರೀ ಮಂಗರಸರ ನೇಮಿಜಿನೇಶಸಂಗತಿ—ಹರಿವಂಶಪುರಾಣವೆಂಬೀ ಗ್ರಂಥವು ನನಗೆ ದೊರೆತು ಇದನ್ನು ನಾನು ಓದಿನೋಡಲಾಗಿ ಇದು ಹಾಡುಗಬ್ಬವಾಗಿರುವುದರಿಂದಲೂ ಇದರ ಶೈಲಿಯು ಸುಲಲಿತವಾಗಿರುವುದರಿಂದಲೂ ವಿಷಯವು ಬಹು ಹೃದಯಂಗಮವಾಗಿರುವುದರಿಂದಲೂ ಕವಿಯ ಜೀವಕಳೆಯಂತಿರುವ ಕವಿಯ ಸಜೀವಸ್ಮಾರಕವಾಗಿರುವ ಈ ಗ್ರಂಥವನ್ನು ಪ್ರಕಾಶಕ್ಕೆ ತಂದು ಆ ಕವಿವರ್ಯರಲ್ಲಿ ನನಗಿರುವ ಪೂಜ್ಯಭಾವನೆಯನ್ನು ಸಾರ್ಥಕಗೊಳಿಸಬೇಕೆಂಬ ಇಚ್ಛೆಯು ಆಗಲೇ ಉಂಟಾಗಿದ್ದು ಅದು ಈಗ ನೆರವೇರಿದುದರಿಂದಲೂ ನಮ್ಮನ್ನಾಳುವ ಮಹಾಸ್ವಾಮಿಯವರು ಈ ಪುಸ್ತಕದ ಸಮರ್ಪಣೆಗೆ ತಮ್ಮ ಘನಸಮ್ಮತಿಯನ್ನು ದಯಪಾಲಿಸಿ ಅನುಗ್ರಹಿಸಿರುವುದರಿಂದಲೂ ನಾನು ಅತ್ಯಂತ ಸಂತೋಷವುಳ್ಳವನಾಗಿ ಮಹಾಸ್ವಾಮಿಯವರ ಅನು

ಗ್ರಹಕ್ಕಾಗಿಯೂ ಅವರಿಗಿರುವ ಕರ್ಣಾಟಕ ಭಾಷಾಭಿಮಾನಕ್ಕಾಗಿಯೂ ಸಾಹಿತ್ಯ ಸೇವಕರಿಗೆ ಸಮಯೋಚಿತವಾಗಿ ಅವರು ದಯಪಾಲಿಸುತ್ತಿರುವ ಪ್ರೋತ್ಸಾಹಕ್ಕಾಗಿಯೂ ಮಹಾಸ್ವಾಮಿಯವರ ಚರಣಕಮಲಕ್ಕೆ ರಾಜಭಕ್ತಿಕೃತಜ್ಞತಾಪೂರ್ವಕವಾದ ಅನಂತವಂದನೆಗಳನ್ನರ್ಪಿಸುತ್ತೇನೆ.

ಈ ಗ್ರಂಥವನ್ನು ಅರಮನೆಯ ಆಸ್ಥಾನವಿದ್ವಾನ್ ನ್ಯಾಯತೀರ್ಥ ವೇ|| ಎ. ಶಾಂತಿರಾಜಶಾಸ್ತ್ರಿಗಳವರು ಬಹುಶ್ರಮವಹಿಸಿ ಪರಿಶೋಧಿಸಿ, ಕಥಾಸಾರಾಂಶವನ್ನು ಬರೆದು, ಸಂದರ್ಭೋಚಿತವಾದ ಭಾವಚಿತ್ರಗಳನ್ನೊದಗಿಸಿಕೊಂಡು ಸರ್ವಾಂಗಸುಂದರವಾಗಿ ತಮ್ಮ ಮುದ್ರಣಾಲಯದಲ್ಲಿ ಮುದ್ರಿಸಿರುವುದಕ್ಕಾಗಿಯೂ ಧಾರ್ಮಿಕೋದ್ಯೋಗದಲ್ಲಿ ನನಗೆ ಸಹಾಯಕರಾಗುತ್ತಿರುವುದಕ್ಕಾಗಿಯೂ ನಾನು ಅವರಿಗೆ ಬಹಳ ಕೃತಜ್ಞನಾಗಿರುತ್ತೇನೆ.

**ಚತುರಂಗ ಬಸವರಾಜ ಅರಸು**



# ನಿವೇದನ

ಕನ್ನಡನಾಡಿನ ಜೈನಸಮಾಜದಲ್ಲಿ ಮಂಗರಸಕವಿಯ ಸಮ್ಯಕ್ತ್ವಕೌಮುದಿಯೂ ನೇಮಿಜಿನೇಶಸಂಗತಿಯೂ ಬಳಕೆಯಾಗಿರುವಷ್ಟು ಬೇರೆ ಕನ್ನಡಗ್ರಂಥಗಳು ಬಳಕೆಯಾಗಿರುವುದು ವಿರಳ. ಅದಕ್ಕೆ ಈ ಗ್ರಂಥಗಳ ಸುಲಭಶೈಲಿಯೂ ಕಥಾಮಾಧುರ್ಯವೂ ಕಾರಣಗಳು.

ನೇಮಿಜಿನೇಶಸಂಗತಿಯು ಬಹು ಪವಿತ್ರಗ್ರಂಥವೆಂದೂ ಇದರ ಪಠನಪಾಠನಾದಿಗಳಿಂದ ಶ್ರೇಯಸ್ಸಾಗುವುದೆಂದೂ ಜೈನರಲ್ಲಿ ರೂಢಮೂಲವಾದ ನಂಬಿಕೆಯಿದೆ. ಈ ಮಾತು ಕವಿಯ ಈ ಪದ್ಯದಿಂದಲೂ ವ್ಯಕ್ತವಾಗುವುದು:—

"ಇಂತಿದನೋದುವ ಪೇಳುವ ಕೇಳುವ | ಸಂತತಿ ಬರೆವ ಜನಗಳು ||
ಮುಂತೆ ಪಡೆವರಮರೇಂದ್ರಪದವ ಮುಕ್ತಿ | ಕಾಂತೆಗೆ ವಲ್ಲಭರಹರು || '

ಶುಭಶೋಭನಾದಿಗಳಲ್ಲಿ ಶುಭಾಶುಭನಿಮಿತ್ತಗಳನ್ನು ನೋಡುವುದಕ್ಕಾಗಿ ಈ ಗ್ರಂಥವನ್ನು ಪೂಜಿಸಿ ಚಿಕ್ಕಮಕ್ಕಳಿಂದ ಇದಕ್ಕೆ ಕಡ್ಡಿಯನ್ನು ಹಾಕಿಸಿ ಅಲ್ಲಿ ಬರುವ ಪ್ರಕರಣವನ್ನು ನೋಡಿ ಇಷ್ಟಾನಿಷ್ಟಫಲಗಳನ್ನು ನಿಶ್ಚಯಿಸಿಕೊಳ್ಳುವ ರೂಢಿಯೂ ಜೈನರಲ್ಲಿರುವುದು. ಇಂತಹ ಉದ್ಗ್ರಂಥವು ಈವರೆಗೆ ಮುದ್ರಣವಾಗದೆ ಇದರ ಪಠನಪಾಠನಾದಿಗಳು ಯಥೇಷ್ಟವಾಗಿ ನಡೆಯಲು ತಡೆಯಾಗಿದ್ದಿತು. ಮೈಸೂರಿನ ರಾಜಬಂಧುಗಳಾದ **ಶ್ರೀಮಾನ್ ಕೆ. ಬಸವರಾಜ ಅರಸ್** ಎಂ. ಎ., ಎಲ್ ಎಲ್. ಬಿ. ಯವರು ಇದನ್ನು ಪರಿಶೋಧಿಸಿ ಮುದ್ರಣಮಾಡಿಸಬೇಕಾಗಿ ನನ್ನಲ್ಲಿ ಪ್ರಸ್ತಾವಿಸಲು ನಾನು ಇದರ ಮುದ್ರಣಕಾರ್ಯವನ್ನು ಕೈಗೊಂಡೆನು. ಈ ಗ್ರಂಥದ ಪ್ರಕಟನೆಗೆ ಶ್ರೀಮಾನ್ ಅರಸರವರ ಉತ್ಸಾಹ ಪ್ರೋತ್ಸಾಹಗಳೇ ಮೂಲಕಾರಣಗಳೆಂದು ಬೇರೆ ಹೇಳಬೇಕಾದುದಿಲ್ಲವು.

ಈ ದೊಡ್ಡಗ್ರಂಥವನ್ನು ನಾನೇ ಬರೆದು ಪರಿಶೋಧಿಸುವುದು ಕಷ್ಟಸಾಧ್ಯ ಮತ್ತು ದೀರ್ಘಕಾಲಸಾಧ್ಯವಾಗುವ ಕೆಲಸವೆಂದು ನಾನು ಯೋಚಿಸುತ್ತಿರಲು ಶಾಲಿಗ್ರಾಮದ ಶ್ರೀಮಾನ್ ಸರಾಫ್ ಪದ್ಮರಾಜಯ್ಯನವರು ಗ್ರಂಥವನ್ನು ತಾವು ಬರೆದು ಪರಿಶೋಧಿಸಿಕೊಡುವುದಾಗಿ ಹೇಳಿ ಅದರಂತೆ ತಮ್ಮ ಸ್ಥಳದಲ್ಲಿ ಐದಾರು ಪ್ರತಿ

ಗಳನ್ನಿಟ್ಟುಕೊಂಡು ಶ್ರಮವಹಿಸಿ ಬರೆದುಕೊಟ್ಟು ಉಪಕರಿಸಿದುದಕ್ಕಾಗಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಗ್ರಂಥವನ್ನು ಮುದ್ರಣಕ್ಕೆ ಕೊಡುವ ಮೊದಲು ನಾನೂ ನಾಲ್ಕು ಓಲೆಯ ಪ್ರತಿಗಳನ್ನಿಟ್ಟುಕೊಂಡು ಪರಿಶೋಧಿಸಿ ಮುದ್ರಿಸಿಸಿರುತ್ತೇನೆ. ಈ ನಾಲ್ಕು ಪ್ರತಿಗಳಲ್ಲಿ ಶ್ರೀ. ಬಸವರಾಜ ಅರಸರವರು ಕೊಟ್ಟ ಕಲ್ಲಹಳ್ಳಿಯ ಪ್ರತಿಯು ಬೇರೆ ಪ್ರತಿಗಳಿಗಿಂತ ಶುದ್ಧವಾಗಿದ್ದುದರಿಂದ ಪರಿಶೋಧನೆಗೆ ಹೆಚ್ಚು ಸಹಕಾರಿಯಾಯಿತು.

ಮೂಲಗ್ರಂಥದಲ್ಲಿರುವ ಕಠಿನಶಬ್ದಗಳಿಗೆ ಸುಲಭವಾದ ಟಿಪ್ಪಣಿಗಳನ್ನೂ ಪಾಠಾಂತರಗಳನ್ನೂ ಸ್ವಲ್ಪದೂರ ಕೊಡುತ್ತಹೋದೆನು. ಆದರೆ ಅದರಿಂದ ಗ್ರಂಥ ಪ್ರಕಾಶನಕ್ಕೆ ಹೆಚ್ಚುಕಾಲವು ಹಿಡಿಯುವುದೆಂದೂ ಅದರಿಂದ ಮಹತ್ಪ್ರಯೋಜನವಿಲ್ಲ ವೆಂದೂ ಬಗೆದು ಆ ಮೇಲೆ ಟಿಪ್ಪಣಿಗಳನ್ನೂ ಸಂದರ್ಭೋಚಿತವಾದ ಒಳ್ಳೆಯ ಪಾಠ ಗಳನ್ನುಳಿಸಿಕೊಂಡು ಇತರ ಪಾಠಾಂತರಗಳನ್ನೂ ಬಿಟ್ಟುಬಿಟ್ಟೆನು.

ಸಾಮಾನ್ಯವಾಗಿ ಪ್ರಚಾರದಲ್ಲಿ ಱಳಕುಳಾಕ್ಷರಗಳ ಕಡೆಗೆ ಲಕ್ಷ್ಯವು ಕೊಡ ಲ್ಪಡದಿರುವುದರಿಂದ ಯಥಾಸ್ಥಾನಗಳಲ್ಲಿ ಆ ಅಕ್ಷರಗಳನ್ನು ಸಂಯೋಜಿಸಲಿಲ್ಲವೆಂದು ಸೂಚಿಸಲಿಚ್ಛಿಸುತ್ತೇನೆ.

ಈ ಮೂಲಗ್ರಂಥವು ಸುಲಭವಾದ ಸಾಂಗತ್ಯದಲ್ಲಿದ್ದು ಆಬಾಲಸ್ತ್ರೀಯರೂ ಓದುವುದಕ್ಕನುಕೂಲವಾಗಿರುವುದಾದರೂ ಇದು ಎಲ್ಲರಿಗೂ ಸುಲಭವಾಗಿ ಅರ್ಥ ವಾಗುವುದು ಸಾಧ್ಯವಲ್ಲವೆಂದು ಬಗೆದು ಸಂಕ್ಷೇಪವಾಗಿ ಇದರ ಕಥಾಸಾರಾಂಶ ವನ್ನು ಬರೆದು ಅದನ್ನೂ ಶ್ರೀ ಮಂಗರಸರ ಭಾವಚಿತ್ರವನ್ನೂ ಕಥೆಗೆ ಸಂಬಂಧಪಟ್ಟ ಚಿತ್ರಗಳನ್ನೂ ಕರ್ಣಾಟಕ ಭಾಷಾಮಾತೆಯ ಪೋಷಕರಾಗ ಶ್ರೀಮನ್ಮಹಾರಾಜ ರವರ, ಶ್ರೀಮದ್ಯುವರಾಜರವರ ಮತ್ತು ಶ್ರೀಮಜ್ಜಯಚಾಮರಾಜ ಒಡೆಯರವರ ಭಾವಚಿತ್ರಗಳನ್ನೂ ಸಂಯೋಜಿಸಿರುತ್ತೇನೆ.

ಈ ಸಂದರ್ಭದಲ್ಲಿ ಓಲೆಗರಿಯ ಪ್ರತಿಗಳನ್ನು ಕೊಟ್ಟು ಉಪಕರಿಸಿದ ಮಹಾ ಶಯರುಗಳಿಗೂ ಕೆಲವು ಭಾವಚಿತ್ರಗಳನ್ನು ಮುದ್ರಿಸಿ ಸಕಾಲದಲ್ಲಿ ಒದಗಿಸಿಕೊಟ್ಟ ಕಲ್ಕತ್ತ ಜಿನವಾಣೀಪ್ರಚಾರಕ ಕಾರ್ಯಾಲಯದವರಿಗೂ ನಾನು ಚಿರಕೃತಜ್ಞ ನಾಗಿದ್ದೇನೆ.

ಮೈಸೂರು,
೨೯—೮—೧೯೩೧.

ಎ. ಶಾಂತಿರಾಜಶಾಸ್ತ್ರೀ.

# ಕವಿಪರಿಚಯ



ಮಂಗರಸ— ಈ ಹೆಸರಿನ ಕವಿಗಳು ಮೂರುಮಂದಿಗಳಿದ್ದರು. ಇಲ್ಲಿ ಮಂಗಶಬ್ದವು ಹಿತಾರ್ಥವಾಚಿಯಾಗಿದೆ. ಮಂಗಲಶಬ್ದವೂ ಮಂಗಂ ಲಾತೀತಿ ಮಂಗಲವೆಂದು ಮಂಗಶಬ್ದದಿಂದಲೇ ನಿಷ್ಪನ್ನವಾಗಿರುವುದು.

ಮೊದಲನೆಯ ಮಂಗ+ಅರಸನು ಹೊಯ್ಸಳದೇಶದ ದೇವಳಿಗೆಯ ನಾಡಿನ ಮೂಗುಳಿಪುರದ ದೊರೆಯು. ಈತನು ಜೈನಕ್ಷತ್ರಿಯಕುಲೋತ್ಪನ್ನನೂ ಶ್ರೀ ಪೂಜ್ಯಪಾದಾಚಾರ್ಯರ ಶಿಷ್ಯನೂ ಆಗಿದ್ದನು. ಈತನು "ಧರೆಗಸುರಾಗಮಂ ಹರಿಹರಕ್ಷಿತಿಪಂ ಕುಡುತಿರ್ಪನೊಲ್ಮೆಯಿಂ" ಎಂದು ಹೇಳಿರುವುದರಿಂದ ಈತನು ವಿಜಯನಗರದ ಹರಿಹರರಾಯನ ಸಮಕಾಲದವನೆಂದೂ ಹದಿನಾಲ್ಕನೆಯ ಶತಮಾನದ ಮಧ್ಯಕಾಲದಲ್ಲಿದ್ದಿರಬೇಕೆಂದೂ ಗೊತ್ತಾಗುವುದು. ಈತನು ಖಗೇಂದ್ರಮಣಿದರ್ಪಣವೆಂಬ ವಿಷವೈದ್ಯಗ್ರಂಥವನ್ನು ಬರೆದಿರುತ್ತಾನೆ.

ಎರಡನೆಯ ಮಂಗರಸ—ಈತನು ಕಮ್ಮೆಕುಲದ ವಿಶ್ವಾಮಿತ್ರಗೋತ್ರದ ರೆಮ್ಮಾರ್ಯ ರಾಮರಸನ ಮಗನು. ಈತನು ಅಭಿನವಮಂಗರಸನೆಂದೂ ಕರೆಯಲ್ಪಡುತ್ತಿದ್ದನು. ಕ್ರಿಸ್ತಶಕ 1398ರಲ್ಲಿ ಮಂಗರಾಜನಿಘಂಟೆಂಬ ಗ್ರಂಥವನ್ನು ಬರೆದಿರುತ್ತಾನೆ.

ಮೂರನೆಯ ಮಂಗರಸ—ಈತನೇ ಪ್ರಕೃತಗ್ರಂಥದ ಕರ್ತನು. ಈತನು ಶಾಲಿವಾಹನ ಶಕ ೧೪೩೧ ರಲ್ಲಿ ಅಂದರೆ ಕ್ರಿಸ್ತಶಕ 1508 ರಲ್ಲಿ ಸಮ್ಯಕ್ತ್ವಕೌಮುದಿಯೆಂಬ ಗ್ರಂಥವನ್ನು ಬರೆದಿದ್ದಾನೆಂದು ಆ ಗ್ರಂಥದ ಕೊನೆಯ "ಸಾಸಿರದಮೇಲೆ ನಾನೂರಮೂವತ್ತೊಂದು | ಭಾಸುರಂಬಡೆದ ಶಕವರ್ಷದೆಸೆವಾಶ್ವಯುಜ | ಮಾಸದಾಶುಕ್ಲಪಕ್ಷದ ಪಾಡ್ಯಮುಂ ಮಂದವಾರದೊಳಗೀಕೃತಿಯ ನು ||" ಈ ಪದ್ಯಭಾಗದಿಂದ ಗೊತ್ತಾಗುವುದು. ಇದರಿಂದಲೂ ಮುಂದೆ ಹೇಳುವ ಬೇರೆ ಕೆಲವು ಆಧಾರಗಳಿಂದಲೂ ಈತನು ಹದಿನೈದನೆಯ ಶತಮಾನದ ಮಧ್ಯಭಾಗದಿಂದ ಹದಿನಾರನೆಯ ಶತಮಾನದ ಮಧ್ಯಭಾಗದವರೆಗೆ ಅಂದರೆ ಸುಮಾರು ನೂರುವರ್ಷಗಳವರೆಗೆ ಜೀವಿಸಿದ್ದನೆಂದು ಊಹೆಯಾಗುವುದು.

ಈ ಕವಿಯ ವಂಶದರಸುಗಳೂ ಪಿರಿಯಪಟ್ಟಣದರಸುಗಳೂ ಕಳಲೆಯ ಅರಸುಗಳೂ ವಿಜಯನಗರದಿಂದ ಬಂದವರೆಂದ— ಈ ಮೂರು ಮನೆತನದವರೂ ಕುರುವಂ

ಶದ ಭಾರದ್ವಾಜಗೋತ್ರದ ಅರಸುಗಳಿಂದೂ ಚಿಕ್ಕದೇವರಾಜ ಒಡೆಯರ ವಂಶಾವಳಿಯಿಂದಲೂ ಶಾಲಿವಾಹನ ಶಕ ೧೫೩೫ ನೆಯ ಒಂದು ಶಾಸನದಿಂದಲೂ ಗೊತ್ತಾಗುವುದು. ಮಂಗರಸಕವಿಯು ಚಂಗಾಳರಾಜರ ಸಚಿವಕುಲದಲ್ಲಿ ಜನಿಸಿ ಹೊಯ್ಸಳ ದೇಶದ ಹೊಸವೃತ್ತಿಯ ನಾಡಿನ ಧಾತುಪುರದರಸನಾಗಿದ್ದನು. ಧಾತುಪುರವೆಂಬುದು ಕಲ್ಲಹಳ್ಳಿಗ್ರಾಮದ ಮೊದಲಿನ ಹೆಸರು. ಇದು ಮೈಸೂರು ಜಿಲ್ಲೆ ಹುಣಸೂರು ತಾಲ್ಲೋಕು ಬಿಳಿಕೆರೆ ಹೋಬಳಿಗೆ ಸೇರಿದ ಒಂದು ಗ್ರಾಮವಾಗಿರುತ್ತದೆ. ಇಲ್ಲಿ ಮಂಗರಸರ ಮನೆತನವೂ ಅವರು ಕಟ್ಟಿಸಿರುವ ಶ್ರೀಚಂದ್ರನಾಥದೇವಾಲಯವೂ ಈಗಲೂ ಇವೆ. ಕವಿಯ ಪಿತಾಮಹನ ಹೆಸರು "ಚಂಗನಾಡರಸು ನಾಲ್ವತ್ತುನಾಯಕ ಗಜಸಿಂಗವೆಂದೆನಿಪ ಮಾಧವನು" ಮಾಧವರಾಯ; ತಂದೆಯ ಹೆಸರು ವಿಜಯೇಂದ್ರ. ಈ ವಿಷಯವನ್ನು ಕವಿಯು ಪೀಠಿಕಾಸಂಧಿಯಲ್ಲಿ ೩೮ ರಿಂದ ೪೨ ರ ವರೆಗಿನ ಪದ್ಯಗಳಲ್ಲಿಯೂ ಜಯನೃಪಕಾವ್ಯದ ಪ್ರಥಮ ಸಂಧಿಯ ೧೨-೧೩-೧೪-೧೫ ನೆಯ ಪದ್ಯಗಳಲ್ಲಿಯೂ ಹೇಳಿರುತ್ತಾನೆ. ಸಮ್ಯಕ್ತ್ವಕೌಮುದಿಯಲ್ಲಿ 'ಕಲ್ಲಹಳ್ಳಿಯ ಮಹಾಪ್ರಭು ವಿಜಯಭೂವಧೂ | ವಲ್ಲಭನ ತನುಜಾತ ಜಿನಪದಾಂಬುಜ ಭೃಂಗ | ಸಲ್ಲಲಿತಕಲೆಯಲ್ಲಿ ಬಲ್ಲಿದನು ಮಂಗರಸನಾನೀಕೌಮುದೀಕಥೆಯನು || ಸಲ್ಲಲಿತಮಪ್ಪ ಸಕ್ಕದದಿ ಪೂರ್ವಾಚಾರ್ಯ | ರುಲ್ಲಸದಿ ಪೇಳ್ದುದಂ ಕರ್ಣಾಟಕೃತಿಬಂಧ | ದಲ್ಲಿ ಯುದ್ದಂಡಷಟ್ಪದಮಾಗಿ ಒರೆದೆನಿಂತಿದನು ಭವ್ಯರು ಕೇಳ್ವುದು ||೯||" ಎಂದು ಹೇಳಿರುವನು. ಈ ಕವಿಯ ವಿಷಯವಾಗಿ ನಮಗೆ ದೊರೆತಿರುವ ಮುಂದೆ ಹೇಳುವ ಶಾಸನದಿಂದಲೂ ಕಲ್ಲಹಳ್ಳಿಯಲ್ಲಿ ದೊರೆತಿರುವ ಹಳೆಯ ರಿಕಾರ್ಡಿನಿಂದಲೂ ಈತನ ವಿಶೇಷ ಪರಿಚಯವಾಗುವುದು.

## ಶಾ ಸ ನ

(ಭಾರದ್ವಾಜ ಗೋತ್ರ, ತ್ರಿಭುವನಸೂತ್ರ, ಪದ್ಮಾಕರಪ್ರವರ, ಸೂರಿಕಾನುಯೋಗ ಶಾಖೆ, ಕುರುವಂಶ)

ನಮಸ್ಸಿದ್ಧೇಭ್ಯಃ

"ಕಂ|| ಶ್ರೀಕರಭಾಸುರಗುಣರ | ತ್ನಾಕರಲೋಕೈಕಮಥನಮಂಜುಳ....||
.........................|........................ಗದಾಪಹಾರಿಜಿನೇಶಾ || ||

ವ || ಅಥ ಚಂಗಳದೇಶಾಧಿಪಂ ಮಾಧವರಾಜೇಂದ್ರಂ. ಅವಗೆ ಹೆಂಡತಿ ಕುಸುಮಾಜಮ್ಮಣ್ಣಿ. ಅವರ್ಗೆ ಕುಮಾರನುಂ ವಿಜಯರಾಜಂ. ಅವಂ (ಮಾಧವರಾಜ) ಪಿರಿರಾಜಪಟ್ಟಣವನಾಳ್ವಂ ಎಂಬತ್ತುಲಕ್ಷ್ಯಸೀಮೆಗೆ ದೊರೆಯು. ಆತಗೆ

ಕುದುರೆ ಕಾಲಾಳು ೧ ಲಕ್ಷ, ಗಜ ೫೦, ಖಜಾನಿ ೪೦ ಸಾವಿರ. ಅವಂ ರಣದಲ್ಲಿ ಪರಾಕ್ರಮವುಳ್ಳವಂ. ಅವಗೆ ಜೈನಗುರುಗಳೇ ಗುರುಗಳು. ಜೈನ ಆಚಾರವೇ ಆಚಾರ. ಜೈನಾಗಮವೇ ಆಗಮ. ಅವಂ ಘನಶೀಲೋಪವಾಸಮನುಳ್ಳವಂ. ಯುವಕುಮಾರಕ ವಿಜಯರಾಜನುದಯಕಾಲದಲ್ಲಿ ಮಾಧವರಾಜೇಂದ್ರಂ ಪರರಾಯರಲ್ಲಿ ಯುದ್ಧಮಾಡಿ ಜಯಿಸಿದ ಕಾರಣದಿಂ ಈ ನಾಮ ಸಲ್ಲುವುದು. ಆತನುಂ (ವಿಜಯರಾಜ) ಸಮ್ಯಕ್ತ್ವಮುಸುಳ್ಳವಂ, ಸದಾ ಭಕ್ತಿಯುಳ್ಳವಂ, ಜೈನಾಗಮವಿಚಾರವುಳ್ಳವಂ, ಅವಗೆ ಹೆಂಡತಿ ಪದ್ಮಾಜಮ್ಮಣ್ಣಿಯವರು, ಅತಿ ರೂಪವುಳ್ಳವರು, ಜಿನಭಕ್ತಿಯುಳ್ಳವರು, ಜೈನಾಗಮಪ್ರೌಢಕಲಾಪವುಳ್ಳವರು, ಅವರ್ಗೆ ಕುಮಾರಂ ಮಂಗರಾಜ ಅರಸಂ. ಅವಾ ವೀರವಿಕ್ರಮಸುದಾರಗಂಭೀರ ಶೌರ್ಯಮಸುಳ್ಳವಂ. ಅರುಹನ ಸನ್ನಿಧಿಭವ್ಯಾತ್ಮನುಂ, ಚೌಸಟ್ಟಿವಿದ್ಯೆಯುಳ್ಳವಂ, ಅವಗೆ ಕುಟುಂಬವಾದಂಥವರು ಕಮಲಾಜಮ್ಮಣ್ಣಿಯುವರು; ಜಿನಧರ್ಮಾಗಮಜಿನ ಭಕ್ತಿಪರಾಯಣರು. ಈ ಮಂಗರಾಜ ಅರಸನೆಸಗಿದ ಪುಸ್ತಕಂ ರಾಮನ ಸಂಗೀತಂ, ಹರಿವಂಶಪುರಾಣಂ, (ನೇಮಿಜಿನೇಶಸಂಗತಿ) ಪ್ರಭಂಜನಚರಿತಂ, ಜಯನೃಪಕಾವ್ಯಂ, ಸಮ್ಯಕ್ತ್ವಕೌಮುದಿಯುಂ. ಇವಂ ೮ ಲಕ್ಷ ಸೀಮೆಗೆ ಅಧಿಪತಿಯಾಗಿರ ತಿರ್ದಂ. ಆತಂಗೆ ಹೆಣ್ಣುಗಳಂ ತರುವಮನೆ ಕೊಡುವಮನೆ—ಚಾಮುಂಡಿರಾಯರ ಮನೆ. ಚಂಗಾಳರಾಯರ ಮನೆ. ಇವಂ ಕೋಟೆ ಕಲ್ಲಹಳ್ಳಿ. ಚಿಲುಕುಂದ, ಮಲ್ಲರಾಜಪಟ್ಟಣ, ಕಟ್ಟೆಮಳಲುವಾಡಿ, ದೊಡ್ಡ ಹುಣಸೂರು, ಹನಗೋಡು, ಹೆಬ್ಬಿನಗುಪ್ಪೆ, ತಮ್ಮಡಿಹಳ್ಳಿ, ಪಾಲುಪಾರೆ ಈ ಮುಂತಾದ ಸ್ಥಳಗಳಲ್ಲಿ ಹೊಡ್ಯಗಳಂ ಕಟ್ಟಿಸಿದ್ದನು. ಕಿಲ್ಲ ಇಟ್ಟಿದ್ದನು. ಜಿನಚೈತ್ಯಾಲಯಗಳಂ ಕಟ್ಟಿಸಿ ಜಿನದೇವರ ಪ್ರತಿಷ್ಠೆಯುಂ ಮಾಡಿಸಿ ಕೆರೆಗಳಂ ಕಟ್ಟಿಸಿ ಪೂಜೋತ್ಸವ ನಡಿಸುವ ಬಗ್ಗೆ ಸ್ವಾಸ್ಥ್ಯವುಡುವಟ್ಟು ಸಹ ಬಿಟ್ಟು ಯಂಬಗುಂಬವೆನ್ನುವಲ್ಲಿ ೨೭ ಅಂಕಣದ ದೇವಸ್ಥಾನಮಂ ಕಟ್ಟಿಸಿ ಪಾರ್ಶ್ವನಾಥಸ್ವಾಮಿಯವರಂ ಪದ್ಮಾವತಿಯಮ್ಮನವರಂ ಚೆನ್ನಿಗಬ್ರಹ್ಮರಾಯರಂ ಸ್ಥಾಪಿಸಿ ಪೂಜೋತ್ಸವಕ್ಕೆಬೇಕಾದ ಸಾಮಾನು ಮುಂತಾದುವಂ ಕೊಡಿಸಿಕೊಟ್ಟು ಹಸ್ತೀಕು ಬೆದ್ದಲು ತೋಟ ಭೂಮಿಯನ್ನು ಬಿಟ್ಟು ಇದೆ ಎನ್ನುವ ಶಾಸನ.''

ಮೇಲೆ ಹೇಳಿದ ಶಾಸನವು ಮಂಗರಸನ ವರೆಗಿನ ವಿಷಯವನ್ನು ಮಾತ್ರ ತಿಳಿಸುತ್ತದೆ. ಅಲ್ಲಿಂದೀಚೆಗೆ ಈವರೆಗೆ ಮಂಗರಸರ ವಂಶವೃಕ್ಷವು ಈ ಕೆಳಗೆ ವಿವರಿಸುವಂತೆ ಬೆಳೆದಿರುವುದೆಂದು ನಮಗೆ ದೊರೆತ ಅನೇಕ ಆಧಾರಗಳಿಂದ ಹೇಳುವೆವು

ಮಂಗರಸರ ಪುತ್ರ ಜಯರಾಜೇಶ್ವರ, ಅವರ ಪುತ್ರ ಚೆಲುವರಾಜ ಅರಸು, ಅವರ ಪುತ್ರ ಪದ್ಮರಾಜ ಅರಸು, ಅವರ ಪುತ್ರ ಅನಂತರಾಜ ಅರಸು, ಅವರ ಪುತ್ರ ದೇವರಾಜ ಅರಸು, ಅವರ ಪುತ್ರ ಕೆಂಪರಾಜ ಅರಸು, ಅವರು ತುಂಗದ ಪದ್ಮ ರಾಜ ಅರಸರ ಪುತ್ರಿ ಕೆಂಪಾಜಮ್ಮಣ್ಣಿಯವರನ್ನು ಮದುವೆಯಾಗಿದ್ದರು. ಅವರ ಪುತ್ರ ಚೆನ್ನರಾಜ ಅರಸು. ಅವರು ಚಂಗಾಳರಾಯರ ವಂಶಸ್ಥರಾದ ಆದಿರಾಜ ಅರಸರ ಪುತ್ರಿ ಕೆಂಪಾಜಮ್ಮಣ್ಣಿಯುವರನ್ನು ಮದುವೆಯಾಗಿದ್ದರು. ಅವರಿಗೆ ಮಕ್ಕಳಾಗಲಿಲ್ಲ. ಅವರ ದತ್ತುದ ಮಗ ದೇವರಾಜ ಅರಸು. ಅವರು ಪಾಳ್ಯದ ಚತುರಂಗ ಬಸವರಾಜ ಅರಸರ ಪುತ್ರಿ ಚೆಲುವಾಜಮ್ಮಣ್ಣಿಯುವರನ್ನು ಮದುವೆ ಯಾಗಿದ್ದರು. ಅವರಿಗೆ ಪದ್ಮರಾಜ ಅರಸೆಂಬ ಒಬ್ಬ ಪುತ್ರನೂ ಅನಂತಮ್ಮಣ್ಣಿ, ಅಕ್ಕಾಜಮ್ಮಣ್ಣಿ, ಕೆಂಪಮ್ಮಣ್ಣಿ, ಮರುದೇವಮ್ಮಣ್ಣಿಯುರೆಂಬ ನಾಲ್ಕುಮಂದಿ ಪುತ್ರಿಯರೂ ಜನಿಸಿದರು. ಈ ಪದ್ಮರಾಜ ಅರಸರಿಗೆ ಗೌರಮ್ಮಣ್ಣಿಯೆಂಬ ಅವರ ಧರ್ಮಪತ್ನಿಯಲ್ಲಿ ಮೂರುಮಂದಿ ಹೆಣ್ಣುಮಕ್ಕಳಾಗಿ ಪದ್ಮರಾಜ ಅರಸರವರು ೧೮೯೭ನೆಯ ಇಸವಿಯಲ್ಲಿ ದೈವಾಧೀನರಾದರು. ಅವರ ಧರ್ಮಪತ್ನಿಯಾದ ಗೌರಮ್ಮಣ್ಣಿಯುವರು ಈಗಲೂ ಕಲ್ಲಹಳ್ಳಿಯಲ್ಲಿ ಶ್ರೀ ಚಂದ್ರನಾಥ ದೇವಾಲಯದಲ್ಲಿ ಜೈನಬ್ರಾಹ್ಮಣರಿಂದ ದೇವಪೂಜೆಯನ್ನೂ ತಾವು ಹೋಸದ ವ್ರತ ಮೊದಲಾದ ಜೈನಾ ಚಾರ ಪದ್ಧತಿಗಳನ್ನೂ ದಕ್ಷತೆಯಿಂದ ಮನೆತನದ ಎಲ್ಲಾ ಆಡಳಿತವನ್ನೂ ನಡೆಸಿ ಕೊಂಡು ಬರುತ್ತಿದಾರ್ದೆ. ಆಳುವ ಮಹಾಸ್ವಾಮಿಯುವರು ಈ ಮನೆತನಕ್ಕೆ ರಾಜ ಬಂಧುವೇತನವನ್ನು ದಯಪಾಲಿಸುತ್ತಿದ್ದಾರೆ. ಇದು ಅವರ ಕೃಪಾದೃಷ್ಟಿಗೆ ಪಾತ್ರವಾಗಿದೆ.

ಮೇಲೆ ಹೇಳಿದ ಪದ್ಮರಾಜ ಅರಸರವರಿಗೆ ಗಂಡುಮಕ್ಕಳಿಲ್ಲದಿರಲು ಅವರ ಸಹೋದರಿಯಾದ ಅನಂತಮ್ಮಣ್ಣಿಯುವರ ಪುತ್ರ ದೇವರಾಜ ಅರಸರ ಮಕ್ಕಳು ದೇವರಾಜ ಅರಸು, ಕೆಂಪರಾಜ ಅರಸು ಎಂಬಿಬ್ಬರಲ್ಲಿ ಜ್ಯೇಷ್ಠಪುತ್ರರಾದ ದೇವ ರಾಜ ಅರಸರನ್ನು ಕಲ್ಲಹಳ್ಳಿಯ ಮನೆತನಕ್ಕೆ ಗೌರಮ್ಮಣ್ಣಿಯುವರು ದತ್ತುಸ್ವೀಕಾರ ಮಾಡಿರುವರು.

ಪದ್ಮರಾಜ ಅರಸರ ನಾಲ್ಕುಮಂದಿ ಸಹೋದರಿಯರಲ್ಲಿ ಕಿರಿಯರಾದ ಮರು ದೇವಮ್ಮಣ್ಣಿಯುವರು ಚತುರಂಗ ಪುದ್ರಾಜ ಅರಸರವರಿಗೆ ವಿವಾಹಿತರಾಗಿ ಅವ ರಿಗೆ ಇಬ್ಬರು ಗಂಡುಮಕ್ಕಳೂ ಇಬ್ಬರು ಹೆಮ್ಮಕ್ಕಳೂ ಇದ್ದಾರೆ. ಇವರಲ್ಲಿ ಜ್ಯೇಷ್ಠಪುತ್ರರೇ ಈ ಗ್ರಂಥದ ಪ್ರಕಾಶಕರು.

**ಕವಿಯ ಗುಣವಿಚಾರ**—ಮೇಲೆ ಹೇಳಿರುವಂತೆ ಕವಿಯ ವಂಶಪರಂಪರೆಯನ್ನು ವಿಚಾರಮಾಡಿ ಆತನು ಮಹಾ ಪವಿತ್ರ ಕ್ಷತ್ರಿಯಕುಲೋತ್ಪನ್ನನೆಂದು ತಿಳಿದ ಬಳಿಕ ನಾವು ಆತನ ಇತರ ಗುಣಗಳನ್ನು ವಿಮರ್ಶೆಮಾಡುವಲ್ಲಿ ಆತನು ತನ್ನ ವಂಶದಲ್ಲಿ ಅಗ್ರಗಣ್ಯನೂ ದಾನಶೂರನೂ ಮಹಾಸುಂದರನೂ ಸಕಲಕಲಾನಿಪುಣನೂ ಉತ್ತಮಗುಣವಂತನೂ ನಿಷ್ಕಳಂಕಚರಿತನೂ ಮಹಾದ್ವೈವಭಕ್ತನೂ ಧೀರವೀರನೂ ಆಗಿದ್ದನೆಂದು ಸ್ವಾಭಿಮಾನದಿಂದಲೂ ಆತ್ಮವಿಶ್ವಾಸದಿಂದಲೂ ಹೊರಟಿರುವ ಆತನ ಉದ್ಗಾರಗಳಿಂದಲೇ ಗೊತ್ತಾಗುವುದು. ಆತನಿಗೆ ತನ್ನ ಗುಣಗಳಲ್ಲಿ ತನಗೇ ನಂಬುಗೆಯಿಲ್ಲದಿರುತ್ತಿದ್ದರೆ ಹೀಗೆ ನಿರ್ಭೀಕವಾಗಿ ಉದ್ಗರಿಸುವ ಆ ಕೆಚ್ಚೆದೆಯು ಎಲ್ಲಿ ಬರುತ್ತಿತ್ತು? ಕವಿಯ ಗುಣಪ್ರಶಂಸೆಯನ್ನು ಇದೋ ಅವನ ಬಾಯಿಂದಲೇ ಕೇಳಿ:—

" ಇದು ವಿಬುಧಜನವಿನುತವಿದು ವಿಬುಧಜನವಿನತ |
ವಿದು ವಿದಿತಜಿನಸಮಯಶರಧಿಸಂಪೂರ್ಣೇಂದು |
ಸದಮಲಚರಿತ್ರಯದುವಂಶಭೂವರರ ಸಚಿವಾನ್ವಯಾಂಬರಹಂಸನು ||
ಮದನಸಮರೂಪಸತ್ತಮಗುಣಕರಂಡಕಂ |
ಚದುರಮಂಗರಸನುಸಿರ್ದೀಕೌಮುದೀಕಥೆಯೊ |
ಳೊದವಿರಂಜಿಸಿದುದುದಿತೋದಯನ ಸಮ್ಯಕ್ತ್ವದೇಳ್ಗೆ ಪನ್ನೆರಡು ಸಂಧಿ ||೪೬|| "

(ಸಮ್ಯಕ್ತ್ವಕೌಮುದೀ ೧೨ ಸಂ)

" ಕಲ್ಲಹಳ್ಳಿಯ ಮಹಾಪ್ರಭುವಿಜಯಭೂವಧೂ |
ವಲ್ಲಭನ ತನುಜಾತ ಜಿನಪದಾಂಬುಜಭೃಂಗ- |
ನೆಲ್ಲಕಲೆಯಲ್ಲಿ ಬಲ್ಲಿದನು ಮಂಗರಸನಾನೀಕೌಮುದೀಕಥೆಯನು || '

(ಸಮ್ಯಕ್ತ್ವಕೌಮುದೀ ೧ ಸಂ. ೯ ಪ.)

' ಅತಿಚತುರಕಲಾಪರಿಪೂರ್ಣಂ ಸದಮಲಚರಿತಂ ಪ್ರಭುರಾಜಂ '

(ಜಯನೃಪಕಾವ್ಯದ ೧೬ ನೆಯ ಸಂಧಿಯ ಕೊನೆಯ ಪದ್ಯದ ಭಾಗ)

" ಆ ಪ್ರಭುವಿನ ತನುಜಾತನು ಸಕಲಕ | ಲಾಸುಪ್ರವೀಣನುತ್ತಮನು ||
ಅಪ್ರತಿಮನು ಗುಣಾನ್ವಿತ ಕಾಮಧೇನುಸ | ಮಪ್ರದನೆನೆ ರಂಜಿಸುವನು ||೪೧||
ಜಿನಪದಭಕ್ತಮಂಗರಸನಾನೀ ಮುಕ್ತಿ | ವನಿತೇಶನೇಮಿತೀರ್ಥಕರ || '

(ನೇಮಿಜಿನೇಶಸಂಗತಿ ೧ ಆ.)

" ಶ್ರೀರಮಣೀಪತಿಭಕ್ತವಿಜಯಭೂ | ನಾರೀಧವನಗ್ರಸೂನು ||

ಧೀರಮಂಗರಸನೊರೆದನಾಸುಮತ | ಕ್ಷೀರವಾರಾಶಿಚಂದ್ರಮನು ||೭೨|| ''

(ನೇಮಿಜಿನೇಶಸಂಗತಿ ೩೫ ಅ)

**ಕವಿಯ ಮತ, ಸಂಪ್ರದಾಯ**.—ಮೈಸೂರು ಸಂಸ್ಥಾನದಲ್ಲಿರುವ ಅರಸು ಮನೆತನಗಳಲ್ಲಿ ಕೆಲವು ಜೈನಸಂಪ್ರದಾಯದ ಮನೆತನಗಳೂ ಕೆಲವು ವೈಷ್ಣವಸಂಪ್ರದಾಯದ ಮನೆತನಗಳೂ ಕೆಲವು ಶೈವಸಂಪ್ರದಾಯದ ಮನೆತನಗಳೂ ಇರುತ್ತವೆ. ಹೀಗೆ ಸಂಪ್ರದಾಯ ಅಥವಾ ಮತದ ದೃಷ್ಟಿಯಿಂದ ಇಲ್ಲಿಯ ಅರಸರುಗಳಲ್ಲಿ ಮೂರುಭೇದಗಳಿದ್ದರೂ ಆಚಾರವ್ಯವಹಾರಗಳಲ್ಲಿ ಭೇದವಿಲ್ಲ ಅಂದರೆ ಮೂರುಸಂಪ್ರದಾಯದವರಲ್ಲಿಯೂ ಒಂದೇ ವಿಧವಾದ ಶುದ್ಧಾಚಾರವ್ಯವಹಾರಗಳಿರುವುದರಿಂದ ಪರಸ್ಪರ ಭೋಜನ ಪ್ರತಿಭೋಜನವೂ ಹೆಣ್ಣುಕೊಡುವ ಮತ್ತು ತರುವ ಪದ್ಧತಿಯೂ ನಡೆಯುತ್ತಲೇ ಬಂದಿರುವಂತೆ ತಿಳಿದುಬರುತ್ತದೆ. ಇದಕ್ಕೆ ಜೈನಪುರಾಣಗಳಲ್ಲಿಯೂ ಅವಕಾಶವಿರುವುದೆಂದು ಅನೇಕ ಉದಾಹರಣೆಗಳಿಂದ ತಿಳಿದುಬರುತ್ತದೆ. ಅಲ್ಲದೆ ಉತ್ತರಹಿಂದುಸ್ಥಾನದಲ್ಲಿ ಅಗ್ರವಾಲಜಾತಿಯ ಜೈನವೈಷ್ಣವರಲ್ಲಿಯೂ ವೈನಾಡಿನ ಜೈನವೈಷ್ಣವರಲ್ಲಿಯೂ ಈ ಪದ್ಧತಿಯು ಈಗಲೂ ಪ್ರಚಾರದಲ್ಲಿದೆ. ಇದರಿಂದ ಸೂಚಿತವಾಗುವ ಪರಮತಸಹಿಷ್ಣುತೆಯೂ ಹೃದಯವೈಶಾಲ್ಯವೂ ಸ್ತುತ್ಯವಾಗಿವೆ.

ಆಚಾರವ್ಯವಹಾರವು ಶರೀರದ ಧರ್ಮ. ಮತವು ಆತ್ಮನ ಧರ್ಮ. ಇವುಗಳು ಬಾಹ್ಯಾಭ್ಯಂತರಧರ್ಮಗಳೆಂದಾದರೂ ಹೇಳಬಹುದು. ಭೋಜನಪ್ರತಿಭೋಜನವ್ಯವಹಾರವೂ ಹೆಣ್ಣುಕೊಡುವ ತರುವ ವ್ಯವಹಾರವೂ ಬಾಹ್ಯಧರ್ಮಗಳಾಗಿರುತ್ತವೆ. ಇವು ಸಂಪ್ರದಾಯಗಳ ಆಚಾರವ್ಯವಹಾರಗಳಲ್ಲಿ ಪರಸ್ಪರ ವ್ಯತ್ಯಾಸವಿದ್ದರೆ ಮಾತ್ರ ಕೂಡಿಬಾರವು.

ಮತವೆಂಬುದು ಆಯಾ ವ್ಯಕ್ತಿನಿಷ್ಠವಾದ ಮನೋಧರ್ಮ. ಅದು ಶ್ರದ್ಧಾರೂಪವಾದುದು. ಅದು ಬದಲಾಗಲೂ ಬಹುದು. ಅದನ್ನು ನಾವು ಪ್ರಧಾನವಾಗಿಟ್ಟುಕೊಂಡು ವಿಚಾರಮಾಡುವುದಾದರೆ ಒಂದು ಕುಟುಂಬದಲ್ಲಿಯೂ ಬೇರೆ ಬೇರೆ ಮತಾವಲಂಬಿಗಳಿರಬಹುದು. ಅಂದಮೇಲೆ ಅತೀಂದ್ರಿಯವಾದ ಈ ಮತ-ಧರ್ಮದ ಸಾಜಾತ್ಯವನ್ನು ವ್ಯವಹಾರಧರ್ಮಕ್ಕೆ ಗಂಟುಹಾಕಲು ಹೇಗೆ ಸಾಧ್ಯ? ಆದರೆ ಬಾಹ್ಯಾಚರಣೆಯನ್ನು ನೋಡಿ ಅಭ್ಯಂತರಧರ್ಮದ ಅಸ್ತಿತ್ವವನ್ನು ಊಹಿಸಿ ಅದಕ್ಕೂ ವ್ಯವಹಾರಧರ್ಮಕ್ಕೂ ಗಂಟುಹಾಕುವ ಪದ್ಧತಿಯೇ ಪ್ರಚಾರದಲ್ಲಿರುವುದು. ಇದು ಗ್ರಾಹ್ಯವಾದುದೆಂದರೆ ಮೇಲೆ ಹೇಳಿದ ಮತ್ತೊಂದು ಪದ್ಧತಿಯು ಅಗ್ರಾಹ್ಯವೆಂದು ತಿಳಿಯತಕ್ಕುದಲ್ಲವು.

ಮೇಲೆ ಹೇಳಿದ ಮೂರು ಮತ, ಸಂಪ್ರದಾಯಗಳಲ್ಲಿ ಮಂಗರಸಕವಿಯು ಜೈನಮತಕ್ಕೆ ಸೇರಿದವನು. ಈ ಮಾತು, ಆತನು ಕಟ್ಟಿಸಿರುವ ಜಿನದೇವಾಲಯಗಳಿಂದಲೂ ಆತನು ಜೈನಪುರಾಣಕಥೆಗಳ ಅವಲಂಬನದಿಂದಲೇ ಬರೆದಿರುವ ಗ್ರಂಥಗಳಿಂದಲೂ ಆ ಗ್ರಂಥಗಳ ಆದಿಯಲ್ಲಿರುವ ಜಿನದೇವ ಗುರು ಕವಿಪರಂಪರೆಯ ಸ್ತುತಿಗಳಿಂದಲೂ ತನ್ನ ಗ್ರಂಥಗಳಲ್ಲಿ ಪ್ರಯೋಗಿಸಿರುವ "ಜಿನಪದಸರಸಿಜಮದಮಧುಕರನು" "ಜಿನಮತಕ್ಷೀರವಾರಾಶಿಚಂದ್ರಮನು" "ಜಿನಪದವಾರಿಜಮಧುಕರ" "ತ್ರಿಭುವನಪತಿಜಿನಭಕ್ತಂ" "ಜಿನಪತಿಪದಸರಸಿಜಮದಮಧುಕರಂ" "ಜಿನಪದಾಂಬುಜಭೃಂಗಂ" ಇತ್ಯಾದಿ ಜಿನಭಕ್ತ್ಯತಿಶಯದ್ಯೋತಕ ಪದಗಳಿಂದಲೂ ಸಿದ್ಧವಾಗುವುದರಿಂದ ಇದಕ್ಕೆ ಬೇರೆಪ್ರಮಾಣಗಳು ಬೇಕಾಗಿಯೇ ಇಲ್ಲವು

**ಜೈನಮತ**—ಜಿನನೆಂದರೆ ಕರ್ಮಶತ್ರುವನ್ನು ಜಯಿಸಿ ಲೋಕವ್ಯಾಪಾರವನ್ನೂ ಪತ್ನೀಪುತ್ರಾದಿಮೋಹವನ್ನೂ ರಾಗದ್ವೇಷಾದಿವಿಕಾರಭಾವಗಳನ್ನೂ ಕ್ಷುಧಾ ತೃಷಾ ಜನ್ಮ ಜರಾ ಮರಣಾದಿದೋಷಗಳನ್ನೂ ದೂರಮಾಡಿ ಪವಿತ್ರಪರಮಾತ್ಮನಾಗಿರುವವನೆಂದೂ ನಿರ್ವಿಕಾರಚಿದಾನಂದೈಕಸ್ವರೂಪನೆಂದೂ ಅವನೇ ದೇವರೆಂದೂ ಅಂತಹ ಜಿನನ ಸಂಬಂಧವಾದ ಅಭಿಪ್ರಾಯವೇ ಜೈನಮತವೆಂದೂ ಇದು ಅಹಿಂಸಾಪ್ರಧಾನವಾಗಿಯೂ ಸಕಲದೋಷದುರ್ವ್ಯಾಪಾರದೂರವಾಗಿಯೂ ಇರುವ ಪವಿತ್ರಮತವೆಂದೂ ಜೈನರ ಹೇಳಿಕೆ ಮತ್ತು ನಂಬಿಕೆ. ಈ ಮತವೇ ಕವಿಗೆ ಅಭೀಷ್ಟವಾದ ಮತವಾಗಿದ್ದಿತು. ಅಲ್ಲದೆ ಚಾಗನಾಡಿನಲ್ಲಿರುವ ಎಲ್ಲಾ ಜೈನದೇವಾಲಯಗಳೂ ಅಂಜನಗಿರಿಯ ಜೈನದೇವಾಲಯವೂ ಹನಸೋಗೆಯ ತ್ರಿಕೂಟಚೈತ್ಯಾಲಯ ಮೊದಲಾದ ಆ ಪ್ರಾಂತದಲ್ಲಿರುವ ಜೈನದೇವಾಲಯಗಳೂ ಬಿಳಿಕೆರೆಯ ಸಮೀಪದ ಗುಡ್ಡದಲ್ಲಿರುವ ಗೋಮಟೇಶ್ವರವಿಗ್ರಹವೂ ಜೈನರಾಜವಂಶೀಯರುಗಳಿಂದಲೇ ನಿರ್ಮಿತವಾದುವೆಂದೂ ಈ ಪ್ರಾಂತದಲ್ಲಿದ್ದ ಕ್ಷತ್ರಿಯರೆಲ್ಲರೂ ಜೈನಮತೀಯರೇ ಆಗಿದ್ದರೆಂದೂ ಶಾಸನಗಳಿಂದಲೂ ದೇವಸ್ಥಾನಗಳಲ್ಲಿ ರಾಣಿವಾಸದವರು ಪ್ರದಕ್ಷಿಣೆ ಬರುವುದಕ್ಕಾಗಿ ಮಾಡಿಸಿರುವ ಒಳಭಾಗದ ಪೌಳಿಗಳಿಂದಲೂ ಇತರ ಕುರುಹುಗಳಿಂದಲೂ ಗೊತ್ತಾಗುವುದು. ಈಗಲೂ ಕವಿಯ ವಂಶೀಯರೇ ಅಲ್ಲದೆ ಬೇರೆ ಕೆಲವು ಅರಸುಮನೆತನದವರೂ ಈಮತದ ಶ್ರದ್ಧಾಳುಗಳಾಗಿದ್ದಾರೆ. ಹೀಗೆ ಹಿಂದೆ ಅನೇಕ ರಾಜಾಧಿರಾಜರುಗಳನ್ನು ತನ್ನ ಮಡಿಲಲಿಟ್ಟುಕೊಂಡು ವೈಭವಶಿಖರದಲ್ಲಿ ರಾರಾಜಿಸುತ್ತಿದ್ದ ಮತವಿದು ಇಂದು ಅವನತಿಪಥಗಾಮಿಯಾಗಿರುತ್ತದೆಂದರೆ ಉನ್ನತ್ಯವನತಿಗಳು ಕಾಲಚಕ್ರಕ್ಕಧೀನಗಳಲ್ಲವೇ ?

**ಈ ಕವಿಯ ಗ್ರಂಥಗಳು**—ಮೇಲೆ ಕೊಟ್ಟಿರುವ ಶಾಸನದಲ್ಲಿ ಈತನ ೧. ಹರಿವಂಶಪುರಾಣ, ೨. ರಾಮನ ಸಂಗೀತ, ೩. ಪ್ರಭಂಜನಚರಿತ, ೪. ಶ್ರೀಪಾಲಚರಿತ, ೫, ಜಯನೃಪಕಾವ್ಯ, ೬. ಸಮ್ಯಕ್ತ್ವಕೌಮುದಿ ಈ ಗ್ರಂಥಗಳು ಉಲ್ಲೇಖಿಸಲ್ಪಟ್ಟಿರುತ್ತವೆ. ಮುದ್ರಿತವಾಗಿರುವ ಜಯನೃಪಕಾವ್ಯದ "ಪೀಠಿಕೆ' ಯಿಂದಲೂ ಸಮ್ಯಕ್ತ್ವಕೌಮುದಿಯ ಮುನ್ನುಡಿಯಿಂದಲೂ ಈತನು "ಪಾಕಶಾಸ್ತ್ರ" ವೆಂಬ ಇನ್ನೊಂದು ಗ್ರಂಥವನ್ನೂ ಬರೆದಿರುವಂತೆ ತಿಳಿದುಬರುತ್ತದೆ. ಹೀಗೆ ಏಳು ಗ್ರಂಥಗಳ ನಾಮನಿರ್ದೇಶವಾಗಿರುವುದಾದರೂ ಅವುಗಳಲ್ಲಿ ಇದುವರೆಗೆ ಮುದ್ರಿತವಾಗಿ ಪ್ರಚಾರಕ್ಕೆ ಬಂದಿರುವ ಗ್ರಂಥಗಳೇನೋ ಜಯನೃಪಕಾವ್ಯ ಸಮ್ಯಕ್ತ್ವಕೌಮುದಿಗಳೆರಡೇ. ಮೂರನೆಯದಿದು ನೇಮಿಜಿನೇಶಸಂಗತಿ.

ಮೇಲೆ ಹೇಳಿದ ಏಳು ಗ್ರಂಥಗಳಲ್ಲಿ ಸಮ್ಯಕ್ತ್ವಕೌಮುದಿಯು ಉದ್ದಂಡ ಷಟ್ಪದಿಯಲ್ಲಿಯೂ ಜಯನೃಪಕಾವ್ಯವು ಪರಿವರ್ಧಿನಿಷಟ್ಪದಿಯಲ್ಲಿಯೂ ನೇಮಿಜಿನೇಶಸಂಗತಿಯೂ ಶ್ರೀಪಾಲಚರಿತೆಯೂ ಸಾಂಗತ್ಯದಲ್ಲಿಯೂ ಬರೆಯಲ್ಪಟ್ಟಿವೆ. ಸಾಂಗತ್ಯಕ್ಕೆ "ಚರಿತೆಯ ರಾಗ" ವೆಂದು ರೂಢಿ. ಈತನು ಅಶ್ರುತಪೂರ್ವವಾದ ಇನ್ನಾವ ಗ್ರಂಥಗಳನ್ನು ಬರೆದಿರುವನೋ ತಿಳಿಯದು. ಈತನು ಮೇಲೆ ಹೇಳಿದಂತೆ ಎಂಟುಲಕ್ಷ ಸೀಮೆಗಳಿಗೆ ಅಧಿಪತಿಯಾಗಿ ರಾಜ್ಯಪರಿಪಾಲನಕಾರ್ಯದಲ್ಲಿ ದತ್ತಚಿತ್ತನಾಗಿದ್ದರೂ ತನ್ಮಧ್ಯದಲ್ಲಿ ಅವಕಾಶಮಾಡಿಕೊಂಡು ಈ ಗ್ರಂಥರಾಶಿಯನ್ನು ರಚಿಸಿ ಕರ್ಣಾಟಕ ಭಾಷಾಜನನಿಯ ಸೇವೆಯನ್ನು ಮಾಡಿ ಕೀರ್ತಿಕಾಯನಾಗಿ ಮೆರೆಯುತ್ತಿರುವುದು ಸಾಹಿತ್ಯ ಕವಿತಾಗೋಷ್ಠಿಯಲ್ಲಿ ಈತನ ಅದ್ಭುತಸಾಮರ್ಥ್ಯದ್ಯೋತಕವಾಗಿದೆ. ಆತನು ಸಮಯದ ಬೆಲೆಯನ್ನು ಚೆನ್ನಾಗಿ ಅರಿತಿದ್ದನು. ಆತನು ರಾಜ್ಯಕಾರ್ಯ ವಿಶ್ರಾಂತಿಸಮಯವನ್ನು ಸಾಹಿತ್ಯಸೇವೆಯಲ್ಲಿ ಕವಿತಾರಸಾಸ್ವಾದನದಲ್ಲಿ ಕಳೆದು ಕ್ಷತ್ರಿಯವೃಂದಕ್ಕೇ ಯಶಸ್ಸನ್ನು ತಂದು ಅನುಕರಣೀಯನಾದನಲ್ಲದೆ ಭೋಗಸುಖ ಮಗ್ನನಾಗಿ ಆಯುಷ್ಯಭಾಗವನ್ನು ಕಳೆದವನಲ್ಲ. ಆತನು ಕ್ಷತ್ರಿಯವೀರನೇ ಆಗಿರಲಿಲ್ಲ, ಧೀರ ಅಂದರೆ ವಿದ್ವಾಂಸನೂ ಆಗಿದ್ದನು. ರತ್ನಾಕರನು ಭರತೇಶವೈಭವದಲ್ಲಿ:--

"ಲೌಕಿಕಜಯವಂತರುಂಟು ಪಲಂಬರಾ | ಲೌಕಿಕಪರಮಾರ್ಥವೆರಡಾ ||
ಭೂಕಾಂತರಲ್ಲಿ ಪಡೆವುದು ದುರ್ಲಭ ಸುವಿ | ವೇಕಬೇಕದಕೆ ಚಕ್ರೇಶಾ ||"

ಎಂದು ಹೇಳಿರುವಂತೆ ಸ್ವನಾಮಧನ್ಯನಾದ ಮಂಗರಸನಲ್ಲಿ ವೀರತ್ವ ಧೀರತ್ವಗಳೆರಡೂ ಸಮಾವಿಷ್ಟವಾಗಿದ್ದುವೆಂದರೆ ಎಲ್ಲರಲ್ಲಿಯೂ ಹಾಗಾಗುವುದು ಸಾಧ್ಯವೇ?

ವೀರತ್ವ—ಮಂಗರಸನ ಯುದ್ಧಾನುಭವವನ್ನೂ ಯುದ್ಧಚಾತುರ್ಯವನ್ನೂ ನೋಡಲು ವಾಚಕರನ್ನು ನಾವು ಈ ಗ್ರಂಥದ ೨೭, ೨೮, ೩೦, ೩೧ ನೆಯ ಆಶ್ವಾಸಗಳ ಕಡೆಗೆ ಕರೆದೊಯ್ಯುವೆವು. ಅಲ್ಲಿ ಕವಿಯ ಯುದ್ಧಪಾಂಡಿತ್ಯವು ಚೆನ್ನಾಗಿ ವ್ಯಕ್ತವಾಗುವುದು. ಚಕ್ರವ್ಯೂಹ, ಪದ್ಮವ್ಯೂಹ ಗರುಡವ್ಯೂಹಗಳನ್ನು ಅದೆಷ್ಟು ಅನುಭವದಿಂದ ವರ್ಣಿಸಿರುವನು! ಸ್ವಯಂ ವೀರರಲ್ಲದವರೂ ಸೊಗಸಾಗಿ ಯುದ್ಧವನ್ನು ವರ್ಣಿಸುವುದುಂಟು. ಆದರೆ ಅದಕ್ಕೂ ಸ್ವಯಂ ವೀರನಾದ ಕವಿಯು ತನ್ಮಯನಾಗಿ ಆವೇಶಪೂರಿತನಾಗಿ ವರ್ಣಿಸುವ ವರ್ಣನೆಗೂ ವ್ಯತ್ಯಾಸವುಂಟು. ಅದು ಉನ್ಮೇಜಿತವಾದ ಆತನ ಪದಸರಣಿಯಿಂದ ಧ್ವನಿತವಾಗುವುದು. ಆತನು ಕುದುರೆ ಸವಾರಿಯಲ್ಲಿಯೂ ಜಟ್ಟಿಕಾಳಗದಲ್ಲಿಯೂ ಅಸದೃಶನಾಗಿದ್ದನೆಂದು ಈಗಲೂ ಪ್ರಸಿದ್ಧಿಯಿದೆ.

ವಿದ್ವತ್ವ—ಕ್ಷತ್ರಿಯನಾದ ಮಂಗರಸನಿಗೆ ವೀರತ್ವವು ಸ್ವಭಾವಜನ್ಯವಾದುದೆಂದು ಹೇಳಿದರೂ ವಿದ್ವತ್ವವು ಹಾಗೆಂದು ಹೇಳಲಾಗುವುದಿಲ್ಲ. ಅದು ಪ್ರಯತ್ನಲಬ್ಧವಾದುದು. ಇದು ಅವನ ಗ್ರಂಥಗಳಿಂದ ಗೊತ್ತಾಗುವುದು. ಈ ಗ್ರಂಥವು ಆಬಾಲಸ್ತ್ರೀಯರಿಗೂ ಸುಲಭಗ್ರಾಹ್ಯವಾಗಬೇಕೆಂಬ ಪರಾನುಗ್ರಹಬುದ್ಧಿಯಿಂದ ಕವಿಯು ಇದನ್ನು ಸಾಂಗತ್ಯದಲ್ಲಿ ಬರೆದಿದ್ದಾನೆ. ಇದು ಆತನ ಪ್ರಥಮ ಪ್ರಯತ್ನವೆಂದು ಶೈಲಿಯಿಂದ ಗೊತ್ತಾಗುವುದು. ಸಂಸ್ಕೃತದಲ್ಲಿ ಬಹು ವಿಸ್ತೃತವಾಗಿರುವ ಈ ಪುರಾಣವನ್ನು ಕವಿಯು ಸಂಕ್ಷೇಪಮಾಡಿದ್ದಾನೆ ಈತನು ಜಯನೃಪಕಾವ್ಯದಲ್ಲಿಯೂ ಸವ್ಯಕ್ತ್ವಕೌಮುದಿಯಲ್ಲಿಯೂ ತನ್ನ ಪಾಂಡಿತ್ಯವನ್ನು ತೋರಿಸಿರುವಂತೆ ಹಾಡುಗಬ್ಬವಾದ ಈ ಗ್ರಂಥದಲ್ಲಿ ತೋರಿಸಲು ವೃತ್ತ—ಪದ್ಯಗಳ ಕ್ಷೇತ್ರವಿಸ್ತಾರವಿಲ್ಲವಾದರೂ ಇದ್ದುದರಲ್ಲೇ ಅವಕಾಶಮಾಡಿಕೊಂಡು ಅದೆಷ್ಟು ಚೆನ್ನಾಗಿ ವರ್ಣಿಸಿರುವನೆಂಬುದಕ್ಕೆ ಇದೇ ಗ್ರಂಥದ ಕೆಲವೇ ಪದ್ಯಗಳನ್ನು ಇಲ್ಲಿ ಉದಹರಿಸುವೆವು:—

"ಹಾವಿಗೆ ಹಾಲನೆರೆಯಲದರೊಡಲೊಳ | ಗಾವಿಷಪೂರಿಸುವಂತೆ ||
ಭಾವಕರಿಗೆಲೇಸಮಾಡಲು ಕಷ್ಟವ | ನೇವೈಸಿಕೊಂಡು ಕೊನೆವರು ||೩೩||
ತಾನಳಿದುಂಡವರಿಗೆ ಓಕರವಾ | ಳ್ವಾನೊಣದಂತೆ ದುರ್ಜನರು ||
ಹಾನಿತಮಗೆಯಾದೊಡಾಗಲಿಮಾನ್ಯರ | ಮಾನಾಪಹಾರಮಾಡುವರು ||೩೪||
ಕಾಸಲುಕಾಂಚನ ಕಡುರಂಗುವಡೆವಂತೆ | ದೂಸಕರಾಸಜ್ಜನರಿಗೆ ||
ಏನೇನುಪರಿನೊಳು ಕಪಟವನೆಸಗಲು | ಲೇಸನವರಿಗೆಸಗುವರು ||೩೫||

ಪಿಸುಣರಸಂಸರ್ಗವನುರೆವಾಡಿದ | ರಸಿಕರ್ಗೇಡಾಗದಿಹುದೇ ? ||
ಮಿಸುಗುವಪೊಸಪೊನ್ನ ಗಟ್ಟಿಯೊಳವಲೋಹ | ಮುಸುಕಲಂತದುಕೆಡುವಂತೆ||"

(ಆ. ೧.)

ಈ ಪದ್ಯಗಳಲ್ಲಿ ಕವಿಯು ಸಜ್ಜನ ದುರ್ಜನರ ಸ್ವಭಾವಗಳನ್ನು ವರ್ಣಿಸುವಾಗ ಉಪಯೋಗಿಸಿರುವ ಉಪಮಾನೋಪಮೇಯಭಾವಗಳೂ ಮುಂದೆ ವಸಂತರ್ತು ವರ್ಣನೆಯಲ್ಲಿ ಬಂದಿರುವ—

"ಸ್ಮರನೆನ್ನ ಹೂವಿನಮಾರ್ಗಣದಿಂ ಹರಿ | ಹರವಿಧಿಗಳಗೆಲ್ದನೆಂದು ||
ಉರುಗಬ್ಬದಿಂಬಿಬ್ಬನೆಬಿರಿವಂದದಿ | ಬಿರಿದೊಪ್ಪಿದುವು ಮಲ್ಲಿಗೆಗಳು ||೧೨||"

(ಆ. ೩೨.)

ಈ ಪದ್ಯದಲ್ಲಿಯ ಉತ್ಪ್ರೇಕ್ಷೆಯೂ ಎಷ್ಟೊಂದು ಸಹೃದಯಹೃದಯಾಹ್ಲಾದಕಗಳಾಗಿರುತ್ತವೆ!

ಶೈಲಿ---ಕವಿಯ ಭಾವದ್ಯೋತಕವಾದ ಪದಗಳ ಸಂಯೋಜನೆಗೆ ಶೈಲಿಯೆಂದು ಹೆಸರು. ಕೆಲವು ಕವಿಗಳು ತಮ್ಮಲ್ಲಿ ಉಚ್ಚಭಾವಗಳಿದ್ದರೂ ಅವುಗಳು ಓದುಗಾರರ ಹೃದಯಪಟಲದಲ್ಲಿ ಚೆನ್ನಾಗಿ ಪ್ರತಿಬಿಂಬಿಸುವಂತೆ ಮಾಡಲು ತಕ್ಕ ಪದಗಳು ಸಕಾಲಕ್ಕೊದಗದೆ ಪೇಚಾಡುವರು. ಇನ್ನು ಕೆಲವರು ಪದಗಳ ಸಂಗ್ರಹವಿದ್ದರೂ ಉಚ್ಚಭಾವಗಳಿಲ್ಲದೆ ಪೇಚಾಡುವರು. ಅವೆರಡೂ ಏಕತ್ರ ಸಮಾವಿಷ್ಟವಾಗುವುದು ಅಪರೂಪ. ಅದಕ್ಕೆ ಪುರುಷಪ್ರಯತ್ನವೊಂದೇ ಸಾಲದು, ಪೂರ್ವಸಂಸ್ಕೃತವೂ ಬೇಕು. ಮಂಗರಸನ ಉಚ್ಚಭಾವಗಳೂ ಅವುಗಳನ್ನು ಅಭಿವ್ಯಕ್ತಗೊಳಿಸುವ ಸಂಸ್ಕೃತ ಬಾಹುಳ್ಯವಿಲ್ಲದ ಸುಲಭ, ಸುಗಮ ಪದಸರಣಿಯೂ ಹೃದಯಂಗಮವಾಗಿವೆಯೆಂದರೆ ಸಾಕಾಗುವುದು. ಈತನ ಕವಿತೆಯು ಮೃದುಪಾಕ, ದ್ರಾಕ್ಷಾಪಾಕವೆಂದು ಬೇರೆ ಹೇಳಬೇಕಾಗಿಲ್ಲ. ಕವಿಯು ತನ್ನ ಕವಿತೆಯನ್ನು ಕುರಿತು ಸಮ್ಯಕ್ತ್ವಕೌಮುದಿಯ ಪ್ರಥಮಸಂಧಿಯಲ್ಲಿ ಹೀಗೆ ಹೇಳಿರುತ್ತಾನೆ—

"ತೆಂಬೆಲರ ಸೋಂಕು ತಕ್ಕರ ಮಾತು ತರುಣಿಯರ | ಬಿಂಬಾಧರಂ ಬೀರುವೊಂದು ರುಚಿ ಪೂವಿನ ತೊ | ಡಂಬೆ ಪೀಯೂಷಪಿಂಡಂ ಜೇನ ಸೋನೆ ಪೊಸಪುಗ್ಗರಂಜನೆಯ ಹಡೆದಾ || ಕೆಂಬರಲ ತೊಡವು ಚಂದನದಣ್ಪು ಸಿರಿಪಚ್ಚೆ | ಯೆಂಬಂಬು ಜಾಕಾರ ಕೋಗಿಲೆಯ ನವಪಂಚ | ಮಂಬೊರೆದ ನುಣ್ಚರಂ ಪ್ರಭುರಾಜಮಂಗರಸ ನೊರೆದ ಕೌಮುದಿಯ ಮಾತು||೧|| ರಸದಾಳಿಯಂತೆ ರಮಣಿಯರ ಚೆಂದುಟಿಯಂತೆ| ಪೊಸಜೇನ ಕೊಡದಂತೆ ಪೊಣ್ಮುವೆಳಜವ್ವನೆಯ | ರೊಸದೀವ ತಾಂಬೂಲದಂತೆ ಕಾ

ದಿಳಿಪಿಯೂರಿದ ಬಟ್ಟವಾಲಿಸಂತೆ || ಅಸಿಯುಳೊಡನಾಟದಂತೆ ಮಾವಿನ ತನಿವಣ್ಣಿ | ರಸದಂತೆಯುಮ್ಮೃತದಂತತಿರುಚಿಯು ಪಡೆದುದತಿ | ರಸಿಕಜನತಿನಿಪುಣ ಮಂಗರಸನೊಪ್ಪುವ ವಾಕ್ಯಗುಂಫನಂ ಭಾವಿಸಿದೊಡೆ ||೧೧|| "

ಇದೇ ಅಭಿಪ್ರಾಯವನ್ನು ಕವಿಯು ಜಯನೃಪಕಾವ್ಯದಲ್ಲಿ ಪ್ರಥಮಸಂಧಿಯ ೨೪, ೨೫, ೨೬ ನೆಯ ಪದ್ಯಗಳಲ್ಲಿಯೂ ತೋರಿಸಿದ್ದಾನೆ. ಈ ಗ್ರಂಥಗಳು ಬೇರೆಯಾದರೂ ಕವಿಯು ಬೇರೆಯಲ್ಲ.

ಕವಿಯ ಬಿರುದುಗಳು— ಈತನಿಗೆ "ಪ್ರಭುರಾಜ" "ಪ್ರಭುಕುಲದೀಪ" ಎಂಬೀ ಬಿರುದುಗಳಿದ್ದುವು. ಇವುಗಳನ್ನು ಕವಿಯು ತನ್ನ ಗ್ರಂಥಗಳಲ್ಲಿ ಉಲ್ಲೇಖಿಸಿರುತ್ತಾನೆ. ಕ್ಷತ್ರಿಯರು ಸಾಹಿತ್ಯಸೇವೆಯಲ್ಲಿ ಕವಿತಾಗೋಷ್ಠಿಯಲ್ಲಿ ಇತರ ವರ್ಣಾಶ್ರಮದವರೊಡನೆ ಹೋರಾಡದೆ ಹಿಂದುಳಿದಿಲ್ಲವೆಂಬ ವಿಷಯವನ್ನು ವಿಶ್ವಕ್ಕೆ ತೋರ್ಪಡಿಸಿ ಕ್ಷತ್ರಿಯಸಮುದಾಯಕ್ಕೇ ಕೀರ್ತಿಪ್ರತಿಷ್ಠೆಯನ್ನು ತಂದಿರುವ ಚಾಮುಂಡರಾಯ, ನೃಪತುಂಗ, ಚಿಕ್ಕದೇವರಾಜ, ಚಾಮರಾಜ, ನಂಜುಂಡರಸ, ಕವಿಹಂಸರಾಜ ಮೊದಲಾದ ರಾಜಕವಿರತ್ನಮಾಲೆಯಲ್ಲಿ ಶೋಭಿಸುತ್ತಿರುವ ಮಂಗರಸನೂ ಒಂದು ಕವಿರತ್ನವಾದರೂ ಈತನು ರಚಿಸಿರುವ ಗ್ರಂಥಬಾಹುಳ್ಯದೃಷ್ಟಿಯಿಂದಲೂ ಈತನಿಗೆ ಮೇಲೆ ಹೇಳಿದ ಬಿರುದುಗಳು ಅನ್ವರ್ಥಗಳಾಗಿ ಬೆಳಗುತ್ತಿವೆಯೆಂಬಲ್ಲಿಗೆ ಕವಿಪರಿಚಯವನ್ನು ಮುಗಿಸುವೆವು.



# ಚಿತ್ರಪರಿಚಯ

ಶ್ರೀಮಚ್ಚಾಮರಾಜೇಂದ್ರ ಒಡೆಯರವರೂ ಶ್ರೀಮನ್ಮಹಾರಾಜರವರೂ ಶ್ರೀ ಮಂಗರಸರೂ ಶ್ರೀಮದ್ಯುವರಾಜರವರೂ ಶ್ರೀಮಜ್ಜಯಚಾಮರಾಜ ಒಡೆಯರವರೂ ಲೋಕಪ್ರಸಿದ್ಧರಾಗಿರುವುದರಿಂದ ನಾವು ಇವರುಗಳ ಪರಿಚಯವನ್ನು ವಾಚಕರಿಗೆ ಮಾಡಿಕೊಡಬೇಕಾದ ಆವಶ್ಯಕತೆಯಿಲ್ಲ. ಕಥಾಸಂದರ್ಭೋಚಿತವಾಗಿ ಅಲ್ಲಲ್ಲಿ ಸೇರಿಸಲ್ಪಟ್ಟಿರುವ ಇತರ ಚಿತ್ರಗಳ ಪರಿಚಯವಾದರೋ ಆಯಾ ಕಥಾಸಂದರ್ಭಗಳಿಂದಲೇ ಗೊತ್ತಾಗುವುದರಿಂದ ಅದನ್ನು ಬರೆಯಬೇಕಾದ ಆವಶ್ಯಕತೆಯೂ ತೋರುವುದಿಲ್ಲ. ಆದುದರಿಂದ ಆ ಭಾವಚಿತ್ರಗಳ ನಾಮನಿರ್ದೇಶವನ್ನು ಮಾಡಿದರೆ ಸಾಕಾಗಬಹುದೆಂದು ಭಾವಿಸಿ ಅದನ್ನು ಯಥಾಕ್ರಮವಾಗಿ ಈ ಕೆಳಗೆ ಕೊಡುವೆವು:—

೧. ಶ್ರೀಮಚ್ಚಾಮರಾಜೇಂದ್ರ ಒಡೆಯರವರು. ೨. ಶ್ರೀಮನ್ಮಹಾರಾಜರವರು. ೩. ಶ್ರೀ ಮಂಗರಸರ ಕೈಬರಹಗಳು. ೪. ಚಾರುದತ್ತ ಸೆಟ್ಟಿ ಮತ್ತು ವಸಂತತಿಲಕೆ. ೫. ಗೋಂವ ಮತ್ತು ಚಾರುದತ್ತಸೆಟ್ಟಿ. ೬. ದೇವಕೀದೇವಿಯು ನಿದ್ರಿಸುತ್ತ ಬೆಳಗಿನ ಜಾವದಲ್ಲಿ ಸೂರ್ಯ, ಚಂದ್ರ, ಲಕ್ಷ್ಮೀ, ವಿಮಾನ, ಅಗ್ನಿಜ್ವಾಲೆ, ಧ್ವಜ, ರತ್ನರಾಶಿ ಈ ಏಳು ಸ್ವಪ್ನಗಳನ್ನು ಕಾಣುವಳು. ಶ್ರೀ ಮಂಗರಸರು ಸೂರ್ಯ, ಚಂದ್ರ, ಆನೆಯ ಮರಿ, ಸಿಹ್ಮ, ಚಕ್ರ ಈ ಐದು ಸ್ವಪ್ನಗಳನ್ನು ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ೭. ಕೃಷ್ಣನು ಯಮುನಾನದಿಯ ಮಡುವಿಗಿಳಿದು ಸರ್ಪರಕ್ಷಿತವಾದ ಸಹಸ್ರದಳ ಕಮಲವನ್ನು ತರುವುದು. ೮. ಕೃಷ್ಣನು ಕಂಸನ ಸಭೆಯಲ್ಲಿ ಚಾಣೂರಮಲ್ಲನೊಡನೆ ಮಲ್ಲಯುದ್ಧವನ್ನು ಮಾಡಿ ಅವನನ್ನು ನೆಲಕ್ಕಿಕ್ಕಿದುದು. ೯. ದೇವೇಂದ್ರನು ಐರಾವತಗಜದ ಮೇಲೆ ಶ್ರೀನೇಮಿಜಿನಬಾಲಕನನ್ನು ಕುಳ್ಳಿರಿಸಿಕೊಂಡು ದೇವಸಮೂಹದೊಡನೆ ಮೇರುವಿನ ಪಾಂಡುಕಶಿಲೆಗೆ ಪ್ರಯಾಣಮಾಡುವುದು. ೧೦. ದ್ರೌಪದಿಯು ಅರ್ಜುನನಿಗೆ ಸ್ವಯಂವರಮಾಲೆಯನ್ನು ಹಾಕುವುದು. ೧೧. ಧರ್ಮರಾಜನು ಕೌರವನೊಡನೆ ಜೂಜಾಡಿ ಸೋತು ಪಾಂಡವರು ವನವಾಸಕ್ಕೆ ಹೋಗುವುದು. ೧೨. ಶ್ರೀ ನೇಮಿಕುಮಾರರು ಮದುವೆ ಮೆರವಣಿಗೆ ಹೊರಟು ದಾರಿಯಲ್ಲಿ ಬಂಧಿಸಿದ್ದ ಪಶುಗಳನ್ನು ನೋಡಿ ಅವುಗಳನ್ನೇಕೆ ಬಂಧಿಸಿರುವುದೆಂದು ಸಾರಥಿಯನ್ನು ಕೇಳಲು ಅವನು ಕೈನೀಡಿ ತೋರಿಸಿ ಕಾರಣವನ್ನು ತಿಳಿಸುವುದು. ೧೩. ಶ್ರೀ ನೇಮಿತೀರ್ಥಂಕರರು

ನಿರ್ವಿಕಲ್ಪಪರಮಸಮಾಧಿಯೆಂಬ ಧ್ಯಾನಮಗ್ನರಾಗಿರುವುದು. ೧೪. ಅರಣ್ಯದಲ್ಲಿ ಜರತ್ಕುಮಾರನು ಬಿಟ್ಟ ಬಾಣವು ಕೃಷ್ಣನ ಕಾಲಿಗೆ ತಗುಲಿ ಅವನು ಮಡಿದುದು. ೧೫, ೧೬, ೧೭. ಈ ಮೂರು ಚಿತ್ರಗಳಲ್ಲಿ ಜ್ಞಾನಾವರಣ, ದರ್ಶನಾವರಣ, ಮೋಹನೀಯ, ಅಂತರಾಯ, ಆಯುಷ್ಯ, ನಾಮ, ಗೋತ್ರ ವೇದನೀಯವೆಂಬ ಎಂಟು ಕರ್ಮಗಳೂ ನರಕದ ದುಃಖವೂ ಯಥಾಕ್ರಮವಾಗಿ ನಿದರ್ಶನಗಳಿಂದ ತೋರಿಸಲ್ಪಟ್ಟಿವೆ. ಜ್ಞಾನಾವರಣಕರ್ಮವು, ಪ್ರತಿಮೆಯನ್ನು ಪರದೆಯು ಮರೆಮಾಡುವಂತೆ, ಜೀವಾತ್ಮರ ಜ್ಞಾನಗುಣವನ್ನು ಮರೆಮಾಡುವುದು. ದರ್ಶನಾವರಣಕರ್ಮವು, ರಾಜದರ್ಶನಕ್ಕೆ ದ್ವಾರಪಾಲಕನು ಅಡ್ಡಿಮಾಡುವಂತೆ, ದೇವಗುರು ಮೊದಲಾದ ಪೂಜ್ಯರ ಮತ್ತು ಪುಣ್ಯಕರವಾದ ದೃಶ್ಯಗಳ ದರ್ಶನಕ್ಕೆ ಅಡ್ಡಿಮಾಡುವುದು. ಮದ್ಯವು ಮದ್ಯಪಾಯಿಗಳನ್ನು ಆಚಾರವಿಚಾರಶೂನ್ಯರನ್ನಾಗಿಯೂ ವಿಪರೀತವ್ಯಾಪಾರವುಳ್ಳವರನ್ನಾಗಿಯೂ ಮತ್ತರನ್ನಾಗಿಯೂ ಮಾಡುವಂತೆ, ಮೋಹನೀಯಕರ್ಮವು ಜೀವಾತ್ಮರನ್ನು ಸದಸದ್ವಿಷಯಗಳಲ್ಲಿ ವಿವೇಕಶೂನ್ಯರನ್ನಾಗಿ ಮಾಡಿ ಪಾಪಕಾರ್ಯದಲ್ಲಿ ತೊಡಗುವಂತೆ ಮಾಡುವುದು. ಭಿಕ್ಷುಕನಿಗೆ ದಾನಮಾಡಲುದ್ಯುಕ್ತನಾದ ಯಜಮಾನನನ್ನು ಅವನ ಗುಮಾಸ್ತನು ಅಡ್ಡಿಮಾಡುವಂತೆ, ಅಂತರಾಯಕರ್ಮದ ನಿಮಿತ್ತದಿಂದ ಸತ್ಪಾತ್ರದಾನಾದಿ ಸತ್ಕಾರ್ಯಗಳಿಗೆ ವಿಘ್ನಗಳೊದಗುವುವು. ಈ ನಾಲ್ಕು ಕರ್ಮಗಳಿಗೆ ಘಾತಿಕರ್ಮಗಳೆಂದು ಹೆಸರು. ಇವುಗಳ ಸಂಪೂರ್ಣ ನಾಶವಾದರೆ ಜೀವಾತ್ಮನಿಗೆ ಸರ್ವಜ್ಞತ್ವವುಂಟಾಗುವುದು.

ತಪ್ಪುಮಾಡಿ ಶಿಕ್ಷೆಗೊಳಗಾದವನು ಮರದ ಬೇಡಿಗೆ ಕಾಲುಗಳನ್ನುಕೊಟ್ಟು ಬಂಧನದಲ್ಲಿ ಸಿಕ್ಕಿ ನರಳುವಂತೆ, ಆಯುಷ್ಯಕರ್ಮವು ಜೀವಾತ್ಮನನ್ನು ನರಕ, ತಿರ್ಯಕ್, ಮನುಷ್ಯ, ದೇವಗತಿಗಳಲ್ಲಿ ತಡೆದಿರಿಸುವುದು. ಚಿತ್ರಕಾರನು ನಾನಾಚಿತ್ರಗಳನ್ನು ರಚಿಸುವಂತೆ, ನಾಮಕರ್ಮದಿಂದ ಜೀವಾತ್ಮನಿಗೆ ಎಂಬತ್ತುನಾಲ್ಕುಲಕ್ಷಯೋನಿಗಳಲ್ಲಿ ನಾನಾರೂಪಗಳುಂಟಾಗುತ್ತವೆ. ಕುಂಬಾರನು ಮಣ್ಣಿನಿಂದ ಶ್ರೇಷ್ಠ ಮತ್ತು ನಿಕೃಷ್ಟಪಾತ್ರಗಳನ್ನುಮಾಡುವಂತೆ, ಉಚ್ಚ ನೀಚ ಗೋತ್ರಕರ್ಮಗಳಿಂದ ಜೀವಾತ್ಮನಿಗೆ ಉಚ್ಚನೀಚಕುಲಗಳುಂಟಾಗುತ್ತವೆ. ಕತ್ತಿಯ ಬಾಯಲ್ಲಿರುವ ಜೇನನ್ನು ನೆಕ್ಕುವ ಸಿಪಾಯಿಗೆ ಅದರ ಸವಿಯಿಂದ ಅಲ್ಪಸುಖವೂ ಕತ್ತಿಯನ್ನು ತೆಗೆಯುವಾಗ ನಾಲಗೆಯು ಕತ್ತರಿಸಿ ಅದರಿಂದ ಅಧಿಕ ದುಃಖವೂ ಉಂಟಾಗುವಂತೆ, ವೇದನೀಯಕರ್ಮದಿಂದ ಸಂಸಾರಿಜೀವನಿಗೆ ಸುಖದುಃಖಗಳುಂಟಾಗುತ್ತವೆ. ಈ ನಾಲ್ಕು ಕರ್ಮಗಳಿಗೆ ಅಘಾತಿಕರ್ಮಗಳೆಂದು ಹೆಸರು. ಈ ಕರ್ಮಗಳೂ ನಾಶವಾದಮೇಲೆ

ಆತ್ಮನು ಮುಕ್ತನಾಗುವನು. ಶ್ರೀ ನೇಮಿತೀರ್ಥಂಕರರು ಮೇಲೆ ಹೇಳಿದ ಅಘಾತಿ ಘಾತಿಕರ್ಮಗಳೆಂಟನ್ನೂ ಧ್ಯಾನ ತಪಸ್ಸುಗಳಿಂದ ನಾಶಮಾಡಿ ಮುಕ್ತರಾದರೆಂದು ಈಗ್ರಂಥದ ಮುಖ್ಯಭಾವವು. ಮೇಲಿನ ಕೊನೆಯ ಚಿತ್ರದ ಕೊನೆಯ ಭಾಗದಲ್ಲಿ ಘೋರಪಾಪದಿಂದ ನರಕಗಾಮಿಗಳಾದ ಜೀವಗಳು ಅನುಭವಿಸುವ ವಿವಿಧ ದುಃಖ ಗಳು ತೋರಿಸಲ್ಪಟ್ಟಿವೆ.

ಮೇಲೆ ಹೇಳಿದ ಒಂಬತ್ತು ವಿಷಯಗಳನ್ನೂ ಬೇರೆ ಬೇರೆಯಾಗಿ ವರ್ಣಿಸುವ ಸುಂದರವಾದ ಒಂದೊಂದು ಹಿಂದೀಪದ್ಯಗಳನ್ನು ಈ ಕೆಳಗೆ ಕೊಡುವೆವು:—

ಜೈಸೇ ಪರದಾ ಪಡಾ ಮೂರ್ತಿಪರ್ ಜ್ಞಾನ ನಹೀ ಹೋನೇ ಪಾತಾ |
ವೈಸೇ ಜ್ಞಾನಾವರಣಕರ್ಮಸೇ ಜ್ಞಾನ ಜೀವಕಾ ಢಕ್ ಜಾತಾ ||
ಪ್ರಥಮ ಘಾತಿಯಾ ಕರ್ಮ ಯಹೀ ಹೈ ಚಿದ್ಬೋಧಕ ಯಹ ಕಹಲಾತಾ |
ಜಗಕೋ ಇಸ್‌ನೇ ಅಜ್ಞಬನಾಯಾ ಅಜ್ಞಮನುಜ ನಹಿ ಲಖ್‌ಪಾತಾ ||೧||

ಯೇ ಭೂಪತಿ ಹೈ ಸರ್ವಜಗತ್‌ಕೇ ದರ್ಶನಕರ್‌ತೇ ಹೈ ಸಬ್‌ಲೋಗ್ |
ದ್ವಾರಪಾಲಭೀ ಖೂಬ್ ಅಜಬ್ ಹೈ ದೇತಾ ನಹೀ ದರ್ಶಸಂಯೋಗ ||
ಇಸೀ ತರಹ ದರ್ಶನಸೇ ಸಬ್‌ಕೋ ಕರ್‌ದೈ ದರ್ಶನಾವರಣ ನಿರಾಶ |
ಚಕ್ಷು ಅವಧೀ ಕೇವಲದರ್ಶನ ಅರು ಅಚಕ್ಷುಕಾ ಸತ್ಯಾನಾಶ ||೨||

ಮದಿರಾ ಪೀಕರ್ ಮಸ್ತಹುಯೇ ಹೈ ಭೂಲೇಹೈ ಕುಲಗೌರವಮಾನ |
ಸುಧಿ ಬುಧಿ ಭೂಲ್‌ಗಯೇ ಸಬ್ ತನಕೀ ರಹಾ ನ ಕುಛ್‌ಭೀ ಜ್ಞಾನ ||
ಮೋಹನೀಯಭೀ ಗಹರೀ ಮದಿರಾ ದೂಷಿತಕರ್‌ದೇತೀ ಹೈ ಪ್ರಾಣ |
ಸಮ್ಯಗ್ದರ್ಶನ ಜ್ಞಾನ ಚರಣಪರ್ ತಾನೇ ರಹತೀ ಸದಾ ಕೃಪಾಣ ||೩||

ದೀನವಿಪ್ರ ಕುಛ್ ಮಾಂಗ್‌ರಹಾ ಹೈ ದಾತಾ ದೇನೇ ಲಗಾ ಇನಾಮ್ |
ಪರ್ ಮುನೀಮನೇ ಮನಾಕಿಯಾ ತಬ್ ಹುಆ ನ ಕುಛ್‌ಭೀ ಕಾಮ್ ||
ಠೀಕ್ ಸಮ್‌ಝಲೋ ಇಸೀ ತರಹ ಹೈ ಅಂತರಾಯಭೀ ಕರ್ಮ ಮಹಾನ್ |
ಅಂತರಾಯ ಯಹ ಕರ್‌ದೇತಾಹೈ ಜೋ ಹೋತಾಹೋ ಶುಭಕಲ್ಯಾಣ ||೪||

ಫಸೇಹುಯೇ ಹೈ ಪೈರ್ ಕಾಷ್ಠಮೇ ಇಧರ್ ಉಧರ್ ನಹಿ ಹೋಸಕ್‌ತೇ |
ನಷ್ಟ ಹುಆ ಸ್ವಾತಂತ್ರ್ಯ ಮನುಜಕಾ ಫಿರ್ ಕುಛ್‌ಭೀ ನಹಿ ಕರ್‌ಸಕ್‌ತೇ ||
ಸಂಸಾರೀಭೀ ಫಸೇ ಹುಯೇಹೈ ಆಯುಜಾಲಕೇ ಬಂಧನಮೇ |
ದೇವ ಮನುಜ ಪಶು ನರಕಯೋನಿಮೇ ಫಿರ್‌ತೇ ಹೈ ಸಬ್‌ಕೇ ತನಮೇ ||೫||

ಚಿತ್ರಕಾರ ಕುರ್ಸೀಪರ್ ಬೈಠೇ ಬನಾರಹೇ ಹೈ ಚಿತ್ರವಿಚಿತ್ರ |
ನಾಮಕರ್ಮಭೀ ವೇಹೋಂಕೋ ಹೈ ರಚಿತಾ ಮಾನೋ ಮೋರೇ ಮಿತ್ರ ||
ಶ್ವೇತ ಕೃಷ್ಣ ಅರು ಹಲ್‌ಕಾ ಭಾರೀ ರೂಪರಸಾದಿಕ ಗಂಧಮಹಾನ್ |
ಯೇಹೀ ವೇಷ್ಟನ ಕರ್ಮಸಂಗತನ ರಚ್‌ದೇತಾ ಹೈ ಕರ್ಮಪ್ರಮಾಣ ||೬||

ಕುಂಭಕಾರ ಜೋ ಚಾಹೇ ಜೈಸೇ ಪ್ಯಾಲೋಂಕಾ ನಿರ್ಮಾಣಕರೇ |
ಗೋತ್ರಕರ್ಮಭೀ ಉಚ್ಚನೀಚಕಾ ಉನ್‌ಮೇ ಜೋ ವ್ಯವಹಾರಕರೇ ||
ಆತ್ಮಪ್ರಶಂಸಾ ಪರನಿಂದಾಸೇ ಗೋತ್ರಕರ್ಮಕಾ ಹೋತಾ ಬಂಧ |
ಅನ್ಯಗುಣೋಂಕೇ ಢಕಾನೇಸೇಭೀ ಹೋತಾ ನೀಚಗೋತ್ರಸಂಬಂಧ ||೭||

ಮೂರ್ಖಸಿಪಾಹೀ ಲಗಾ ಚಾಟನೇ ಶಹದ್ ಲಪೇಟೀ ವಹ ತಲ್‌ವಾರ್ |
ಮಿಲಾ ಸ್ವಾದ್ ಪರ್ ಜೀಭ್ ಕಟ್‌ಗಈ ಬಹನೇ ಲಗೀ ಖೂನ್‌ಕೀ ಧಾರ ||
ಥೋಡೇ ಝೂಠೇ ಸುಖಕೇ ಕಾರಣ ಸಹತಾಹೈ ದುಃಖೋಂಕಾ ಭಾರ |
ವೇದನೀಯಸೇ ಸುಖ ದುಖ ಮಿಲ್‌ತಾ ಮನಮೇ ಐಸಾ ಕರೋ ವಿಚಾರ ||೮||

ಮಾರ್‌ರಹೇ ಹೈ ಪೀಟ್‌ರಹೇ ಹೈ ಏಕ್ ದೂಸರೇ ಆಪಸ್‌ಮೇ |
ಕಾಟ್‌ರಹೇ ಹೈ ಛೇದ್‌ರಹೇ ಹೈ ಕುಚಲ್‌ರಹೇ ಹೈ ಆಪಸ್‌ಮೇ ||
ವೃಕ್ಷೋಂಕೇ ಪತ್ತೇ ಅಸಿ ಜೈಸೇ ದೇಹ ವಿದಾರೇ ಛೇದೇ ಗಾತ |
ಮುಂಡಭೂಮಿಪರ್ ಪಡೇಹುಯೇಹೈ ನರಕದುಃಖ ಯಹ ದೇಖೋ ಭ್ರಾತ ||೯||

೧೮ ಶ್ರೀಮದ್ಯುವರಾಜ ಕಂಠೀರವನೃಸಿಂಹರಾಜ ಒಡೆಯರವರು.
೧೯ ಶ್ರೀಮಜ್ಜಯಚಾಮರಾಜ ಒಡೆಯರವರು.



# ಕಥಾಸಾರಾಂಶ.

## ೧. ಪೀಠಿಕಾ ಸಂಧಿ

ಕವಿಯು ನೇಮಿಜಿನೇಶ್ವರರನ್ನೂ ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯ ಸಾಧುಗಳೆಂಬ ಪಂಚಪರಮೇಷ್ಠಿಗಳನ್ನೂ ವಾಣಿಯನ್ನೂ ಸರ್ವಾಹ್ಣಯಕ್ಷನನ್ನೂ ಯಕ್ಷೇಶ್ವರಿಯನ್ನೂ ಗಣಧರರನ್ನೂ ಗೃಧ್ರಪಿಂಛಾಚಾರ್ಯರನ್ನೂ ಕವಿಪರಮೇಷ್ಠಿಯನ್ನೂ ಗುಣಭದ್ರರನ್ನೂ ಮಾಘನಂದಿಯನ್ನೂ ದೇವನಂದಿಯನ್ನೂ ಅಕಲಂಕಾಚಾರ್ಯರನ್ನೂ ಪ್ರಭಾಚಂದ್ರಮುನಿಯನ್ನೂ ಶ್ರುತಮುನಿಯನ್ನೂ ವಿಮಲಕೀರ್ತಿಮುನಿಯನ್ನೂ ನವಕೋಟಿಮುನಿಗಳನ್ನೂ ಯಥಾಕ್ರಮವಾಗಿ ವಂದಿಸಿ ಪೂರ್ವ ಕವೀಶ್ವರರನ್ನೂ ಪಂಪ, ರನ್ನ, ಶ್ರೀವಿಜಯ, ಗುಣವರ್ಮ, ಜನ್ನ, ಪೊನ್ನ, ನಾಗಚಂದ್ರ, ಕಣ್ಣಪ, ನೇಮಿಚಂದ್ರ, ಬಂಧುವರ್ಮ ಮೊದಲಾದ ಜೈನಕವಿಗಳನ್ನೂ ಸ್ಮರಿಸಿ ತನಗ ತಿಳಿದಮಟ್ಟಿಗೆ ಹಾಡುಗಬ್ಬದಲ್ಲಿ ನೇಮಿನಾಥಚರಿತೆಯನ್ನು ಹೇಳುತ್ತೇನೆನ್ನುತ್ತಾನೆ. ಸುಜನ ದುರ್ಜನರ ಮತ್ತು ತನ್ನ ವಂಶಪರಂಪರೆಯ ವರ್ಣನೆಯನ್ನು ಮಾಡಿ ಮುಂದೆ ಹೀಗೆ ಕಥಾರಂಭಮಾಡುತ್ತಾನೆ :—

ಘನೋದಧಿ ಘನಾನಿಲ ತನುವಾತಗಳೆಂಬ ಮೂರು ಗಾಳಿಗಳ ಆಧಾರದಿಂದ ಮೂರು ಲೋಕವು ನಿಂತಿದೆ. ಅದರ ಮಧ್ಯದಲ್ಲಿ ದಂಡಾಕಾರದ ತ್ರಸನಾಳವಿರುವುದು. ಅದರ ಮಧ್ಯದಲ್ಲಿ ನರಲೋಕವು ಅಸಂಖ್ಯಾತ ದ್ವೀಪ ಸಮುದ್ರಗಳಿಂದ ಕೂಡಿದೆ. ಆ ದ್ವೀಪ ಸಮುದ್ರಗಳ ನಡುವಿನಲ್ಲಿ ಮಹಾಲವಣಸಮುದ್ರವೂ ಅದರ ನಡುವಿನಲ್ಲಿ ಜಂಬೂದ್ವೀಪವೂ ಅದರ ನಡುವಿನಲ್ಲಿ ಮಹಾಮೇರುಪರ್ವತವೂ ಶೋಭಿಸುತ್ತಿವೆ. ಆ ಮೇರುಗಿರಿಯ ದಕ್ಷಿಣದಿಕ್ಕಿನಲ್ಲಿ ನಿಷಧಪರ್ವತವಿದೆ. ಅದರ ಮೇಲೆ ಹುಟ್ಟಿದ ಸೀತೋದಾನದಿಯು ಪಶ್ಚಿಮಕ್ಕೆ ಹರಿದು ಸಮುದ್ರವನ್ನು ಸೇರುತ್ತದೆ. ಆ ನದಿಯ ಎಡಬಲಗಳಲ್ಲಿ ಎಂಟೆಂಟು ದೇಶಗಳಿವೆ. ದಕ್ಷಿಣದಿಕ್ಕಿನಲ್ಲಿ ವತ್ಸಕಾವತಿಯೆಂಬ ದೇಶವಿದೆ. ಅದರ ಮಧ್ಯದಲ್ಲಿ ಉದ್ಯಾನವನಗಳಿಂದಲೂ ಸಕಲ ಭೋಗ್ಯವಸ್ತುಗಳಿಂದಲೂ, ಇಂದ್ರನಗರದಂತೆ, ಶೋಭಿಸುವ ಸಿಹ್ಮಪುರವೆಂಬ ಪಟ್ಟಣವಿರುತ್ತದೆ. ಅದನ್ನು ಅರುಹದ್ದಾಸನೆಂಬ ದೊರೆಯು, ಅಮರಾವತಿಯನ್ನು ದೇವೇಂದ್ರನಂತೆ, ಆಳುತ್ತಿದ್ದನು.

## ೨. ಇಭ್ಯಕೇತುಕುಮಾರಾಭ್ಯುದಯ ಸಂಧಿ

ಆ ಅರುಹದ್ದಾಸನಿಗೆ ಜಿನದತ್ತೆಯೆಂಬವಳು ಪತ್ನಿಯಾದಳು. ಆ ದಂಪತಿಗಳಿಗೆ ಅಪರಾಜಿತನೆಂಬ ಮಗನಾದನು. ಆತನು ಚಂದ್ರನಂತೆ ಸಕಲಕಲಾಪರಿಪೂರ್ಣನಾಗಿ ಬೆಳೆಯುತ್ತಿರಲು ಪ್ರೀತಿಮತಿಯೆಂಬ ರಾಜಕನ್ಯೆಯನ್ನು ತಂದು ಆತನಿಗೆ ವಿವಾಹಮಾಡಿದರು. ಅರುಹದ್ದಾಸನು ಪುತ್ರಸಹಿತನಾಗಿ ರಾಜ್ಯವಾಳುತ್ತ ಒಂದು ದಿನ ವಿಮಲವಾಹನರೆಂಬ ತೀರ್ಥಂಕರರ ಸಮವಸರಣಕ್ಕೆ ಹೋಗಿ ಅವರಿಂದ ಧರ್ಮಾಧರ್ಮಸ್ವರೂಪವನ್ನು ಕೇಳಿ ವೈರಾಗ್ಯಪರನಾಗಿ ಪುತ್ರನಿಗೆ ರಾಜ್ಯಭಾರವನ್ನಿತ್ತು ತನ್ನ ಪತ್ನಿಯೊಡನೆ ಸನ್ಯಾಸಾಶ್ರಮವನ್ನು ಸ್ವೀಕರಿಸಿದನು. ಅಪರಾಜಿತನು ಶ್ರಾವಕವ್ರತವನ್ನು ಕೈಕೊಂಡು ನೀತಿಯಿಂದ ರಾಜ್ಯವಾಳುತ್ತಿದ್ದನು.

ಅತ್ತ ಅರುಹದ್ದಾಸಮುನಿಯು ಕಠಿನತಪಸ್ಸನ್ನು ಮಾಡಿ ಸಕಲಕರ್ಮಮಲವನ್ನು ನಿರ್ಮೂಲ ಮಾಡಿ ಮೋಕ್ಷವನ್ನು ಪಡೆದನು. ಈ ವಿಚಾರವನ್ನು ತಿಳಿದು ದೇವೇಂದ್ರನು ನಿರ್ವಾಣಪೂಜೆಯನ್ನು ಮಾಡಬೇಕೆಂದು ಬಗೆದು ಸಮಸ್ತದೇವತೆಗಳೊಡನೆ ವೈಭವದಿಂದ ಬಂದನು. ಆ ವಾದ್ಯಧ್ವನಿಯನ್ನು ಕೇಳಿ ಅಪರಾಜಿತರಾಜನು ತನ್ನ ತಂದೆಗೆ ಮೋಕ್ಷಪ್ರಾಪ್ತಿಯಾದುದೆಂದು ತಿಳಿದು ಮೂರ್ಛೆಹೋದನು. ಶೈತ್ಯೋಪಚಾರದಿಂದ ಮೂರ್ಛೆಯು ಹೋದ ಮೇಲೆ ಕಣ್ಣುತೆರೆದು ನೋಡಿ ದುಃಖಿಸಿ ತನ್ನ ತಂದೆಯೆಲ್ಲಿರುವನೋ, ಅತನನ್ನು ನೋಡುವವರೆಗೂ ಈ ಭೋಗೋಪಭೋಗಗಳೆಲ್ಲ ತ್ಯಾಜ್ಯವಾಗಿರಲೆಂದು ವ್ರತವನ್ನು ಕೈಕೊಂಡು ತಾನು ಮೇರುಪರ್ವತಕ್ಕೂ ಅಲ್ಲಿಂದ ಸ್ವರ್ಗಕ್ಕೂ ಹೋಗಿ ಸರ್ವಾರ್ಥಸಿದ್ಧಿಯ ಮಾರ್ಗವಾಗಿ ಮೋಕ್ಷಕ್ಕೆ ಹೋಗಬೇಕೆಂದು ಯೋಚಿಸಿ ಸನ್ನಾಹಭೇರಿಯನ್ನು ಹೊಯ್ಸಿ ಸಕಲ ಸೈನ್ಯದೊಡನೆ ಉತ್ತರಾಭಿಮುಖನಾಗಿ ಹೊರಟನು. ಅವನ ವಿಪರೀತವ್ಯಾಪಾರವನ್ನು ತಿಳಿದು ದೇವೇಂದ್ರನು ಸಮೀಪಕ್ಕೆ ಕುಬೇರನನ್ನು ಕರೆದು ಅಪರಾಜಿತನ ಉದ್ಯಮವನ್ನು ಪರಿಹರಿಸೆಂದನು. ಕುಬೇರನು ಹೋಗಿ ಅಪರಾಜಿತನು ಬರುವ ದಾರಿಗೆ ನೇರವಾಗಿ ಆಕಾಶದಲ್ಲಿ ಸಮವಸರಣವನ್ನೂ ಅದರಲ್ಲಿ ವಿಮಲವಾಹನ ತೀರ್ಥಂಕರರನ್ನೂ ಅರುಹದ್ದಾಸಮುನಿಯನ್ನೂ ತನ್ನ ವಿದ್ಯಾಬಲದಿಂದ ತೋರಿಸಿದನು. ಆ ಮಾಯೆಯನ್ನು ನಿಜವೆಂದೇ ಬಗೆದು ಅಪರಾಜಿತನು ವಂದಿಸಿ ತಂದೆಯ ಮುಖವನ್ನು ನೋಡಿದುದರಿಂದ ತನ್ನ ವ್ರತವು ಕೈಗೂಡಿತೆಂದು ಸಂತುಷ್ಟನಾಗಿ ಹಿಂದಿರುಗಿ ಬಂದು ಬಹುಕಾಲ ರಾಜ್ಯವಾಳುತ್ತಿದ್ದನು. ಒಂದು

ದಿನ ಚೈತ್ರಮಾಸದಲ್ಲಿ ವನವಿಹಾರಕ್ಕೆ ಹೋಗಿ ಅಲ್ಲಿ ತನ್ನ ತಂದೆಯು ಮಾಡಿಸಿದ್ದ ಸುವರ್ಣಮಯವಾದ ಬಸದಿಯನ್ನು ಕಂಡು ಜಿನರಿಗೆ ವಂದಿಸಿ ಮಣಿಮಂಟಪಕ್ಕೆ ಬಂದು ನಿಂತನು. ಆಗ ಆಕಾಶಮಾರ್ಗದಿಂದ ಇಬ್ಬರು ಚಾರಣಮುನಿಗಳು ಇಳಿದು ಬಂದು ಬಸದಿಗೆ ಪ್ರದಕ್ಷಿಣೆಮಾಡಿ ದೇವರಿಗೆ ವಂದಿಸಿ ಆ ಮಣಿಮಂಟಪಕ್ಕೆ ಬರಲು ಅಪರಾಜಿತನು ಅವರಿಗೆ ಭಕ್ತಿಪ್ರೀತಿಯಿಂದ ಉನ್ನತಾಸನವನ್ನಿತ್ತು ವಂದಿಸಿದನು. ಆ ಮುನಿಗಳು ಅಪರಾಜಿತನಿಗೆ ಧರ್ಮಾಧರ್ಮಸ್ವರೂಪವನ್ನುಪದೇಶಿಸಿದರು. ಅದನ್ನು ಕೇಳಿ ಅಪರಾಜಿತನು ಕೈಮುಗಿದು "ಎಲೈ ಮುನಿಗಳಿರಾ! ನಿಮ್ಮಗಳ ಮೇಲೆ ನನಗೆ ಬಹುಮೋಹವಿದೆ ಅದಕ್ಕೆ ಕಾರಣವೇನು?" ಎಂದು ಕೇಳಲು ಅವರಲ್ಲಿ ಮೊದಲನೆಯವರು ಇಂತೆಂದರು:—

ರಾಜನೆ! ನಿನ್ನ ಮತ್ತು ನಮ್ಮ ಭವದ ಸ್ಥಿತಿಯನ್ನು ಕೇಳು,— ಪೂರ್ವವಿದೇಹದ ಪುಷ್ಕಳಾವತಿದೇಶದ ಪುಂಡರೀಕಪುರದ ಇಂದ್ರದಿಕ್ಕಿನಲ್ಲಿ ಒಂದು ದೊಡ್ಡ ಕಾಡಿದೆ. ಅದರಲ್ಲಿ ವಿಂಧ್ಯಕನೆಂಬ ಬೇಡರ ದೊರೆಯಿದ್ದನು. ಅವನು ಬಹು ಭಯಂಕರಾಕಾರದವನು. ಆತನ ಹೆಂಡತಿ ವಾಗುರೆಯೆಂಬವಳು. ಒಂದು ದಿನ ವಿಂಧ್ಯಕನು ವಾಗುರೆಯೊಡನೆ ಬೇಟೆಗೆ ಹೋಗಿ ಅನೇಕ ಮೃಗಗಳನ್ನು ಬೇಟೆಯಾಡಿ ಬರುತ್ತಿರುವಾಗ ಒಂದು ಅಶೋಕವೃಕ್ಷದ ಬುಡದಲ್ಲಿ ಕುಳಿತಿದ್ದ ಅಮಲಬುದ್ಧಿ ವಿಮಲಬುದ್ಧಿಗಳೆಂಬೀರ್ವರು ಮುನಿಗಳನ್ನು ಕಂಡನು. ವಿಂಧ್ಯಕನು "ನಾನೆಂದೂ ಕಾಣದ ಮನುಷ್ಯಾಕಾರದ ಎರಡು ಮೃಗಗಳನ್ನು ಹೊಸದಾಗಿ ಈದಿನ ಕಂಡೆನು' ಎಂದು ಹೇಳಿ ಬಿಲ್ಲಿಗೆ ಬಾಣವನ್ನು ಸೇರಿಸಿ ಅವರಿಗೆ ಗುರಿಯಿಟ್ಟು "ಎಲೈ ವಾಗುರೆ! ಒಂದೇ ಬಾಣದಿಂದ ಈ ಮೃಗಗಳು ಭೂಮಿಗುರುಳುವಂತೆ ಹೊಡೆಯುತ್ತೇನೆ. ನನ್ನ ಕೈಯ ಚಾತುರ್ಯವನ್ನು ನೋಡು" ಎಂದು ಹೇಳಿ ಬಾಣವನ್ನು ಬಿಡುವಷ್ಟರಲ್ಲಿ ವಾಗುರೆಯು ಮುಂದೆ ಬಂದು ಭೀತಿಯಿಂದ "ವಿಂಧ್ಯಕನೆ! ಇವರು ಮನುಷ್ಯಮೃಗಗಳಲ್ಲ, ಮಹಾನುಭಾವರು. ಇವರನ್ನು ಹೊಡೆಯುವುದು ನಮಗೆ ತಕ್ಕುದಲ್ಲ" ಎಂದು ಹೇಳಿದಳು. ಆ ಮಾತನ್ನು ಕೇಳಿ ವಿಂಧ್ಯಕನು "ಇವು ಮೃಗಗಳಲ್ಲವೆಂಬುದನ್ನು ನೀನು ಹೇಗೆ ತಿಳಿದೆ?" ಎಂದು ಕೇಳಲು ವಾಗುರೆಯು "ನೀನು ಬೇಟೆಯಾಡಿದ ಮೃಗತತಿಯ ಮುತ್ತುರತ್ನಗಳನ್ನು ಮಾರಲು ನಾನು ಪಟ್ಟಣಕ್ಕೆ ಕೊಂಡುಹೋಗಿ ವೃಷಭಸೇನನೆಂಬ ದೊಡ್ಡ ವರ್ತಕನಿಗೆ ಮಾರುವಾಗ ಆ ಮನೆಯಲ್ಲಿ ಈ ಪೂಜ್ಯರಿರುವುದನ್ನು ಕಂಡೆನು. ಆ ವೃಷಭಸೇನನು ಇವರಿಗೆ ಉನ್ನತಾಸನವನ್ನಿತ್ತು, ಕಾಲ್ತೊಳೆದು ಸುಗಂಧಫಲಪುಷ್ಪಗಳಿಂದ

ಪೂಜಿಸಿದನು. ಆ ಮೇಲೆ ಪಟ್ಟಣಿಗರೆಲ್ಲ ತಮ್ಮ ಬಳಗದೊಡನೆ ಬಂದು ಇವರ ಕಾಲ್ಗೊಳಿದು ಪೂಜಿಸಿ ವಂದಿಸಿ ಏನನ್ನೋ ಕೊಡಿ ಕೊಡಿಯೆಂದು ಕೇಳುತ್ತಿರಲು ಇವರು ನವಿಲ್ಗರಿಯನ್ನು ಅವರ ತಲೆಯಮೇಲಿರಿಸಿ ಇವನ್ನು ಕೊಟ್ಟೆವು ಕೈಕೊಳ್ಳಿ ಎಂದು ಹೇಳುತ್ತಿದ್ದರು. ಆದರಿಂದ ಇವರು ಎಲ್ಲರಿಗೂ ದೊಡ್ಡವರೆಂದು ತಿಳಿದೆನು. ಇವರಿಗೆ ಹೊಡೆದರೆ ನಮಗೆ ಪಾಪವು ಬರುವುದು" ಎಂದು ಹೇಳಿದಳು.

ಆ ಮಾತನ್ನು ಕೇಳಿ ವಿಂಧ್ಯಕನು ತನ್ನ ಬಿಲ್ಲುಬಾಣಗಳನ್ನು ಬಿಸುಟು ವಾಗುರೆಯೊಡನೆ ಹೋಗಿ ಸಂತೋಷದಿಂದ ಆ ಮುನಿಗಳಿಗೆರಗಿದನು. ಅವರು ಕಣ್ದೆರೆದು "ಧರ್ಮವೃದ್ಧಿರಸ್ತು" ಎಂದು ಹರಸಿದರು. ಇವರನ್ನು ಹೊಡೆಯಲು ಬಿಲ್ಲಿಗೆ ಬಾಣವನ್ನು ತೊಟ್ಟಿದ್ದ ನನ್ನನ್ನೂ ತಮ್ಮ ಪ್ರಾಣವನ್ನುಳಿಸಿದ ಈ ವಾಗುರೆಯನ್ನೂ ಒಂದೇರೀತಿಯಾಗಿ ಇವರು ಹರಸಿದರು. ಇವರಿಗಿಂತ ಉತ್ತಮರಾರು? ಎಂದು ವಿಂಧ್ಯಕನು ಕೊಂಡಾಡಿ ಕಾಡಿನ ಹೂಗಳನ್ನು ತಂದು ಹರ್ಷದಿಂದ ಅವರ ಪಾದಾರ್ಚನೆಮಾಡಿ ಬಳಿಕ "ಪಟ್ಟಣದಲ್ಲಿ ಆ ವರ್ತಕರಿಗೆ ಕೊಟ್ಟ ವರವನ್ನು ನನಗೂ ದಯೆಪಾಲಿಸಿ,' ಎಂದು ಕೇಳಿದನು. ಅವನು ಹಿಂದೆ ಮಾಡಿದ ದುಷ್ಕರ್ಮವು ಈಗ ನಾಶವಾಯ್ತೆಂದು ತಿಳಿದು ಆ ಮುನಿಗಳು "ಎಲೈ ಬೇಡನೆ! ನಿನಗೆ ಕಾಲಲಬ್ಧಿಯಿಂದ ಜೀವಹಿಂಸೆಯ ಆಶೆಯು ತೊಲಗಿತು. ಎಲೈ ಭವ್ಯನೆ! ಕಳವು, ಹುಸಿ, ಪರಸ್ತ್ರೀಗಮನ, ಕೊಲೆ, ಅತಿಕಾಂಕ್ಷೆ ಇವುಗಳನ್ನು ಬಿಟ್ಟರೆ ನೀನು ಬಯಸಿದ ಫಲವು ನಿನಗೆ ದೊರಕುವುದು. ನಾವು ಕೊಟ್ಟ ಈ ವ್ರತಗಳನ್ನು ನೀನು ಪಾಲಿಸಿದರೆ ನಿನಗೆ ಮೂರುಲೋಕದ ಒಡೆತನವು ದೊರೆಯುವುದು." ಎಂದು ಹೇಳಲು "ಹಾಗಾದರೆ ಆ ವ್ರತಗಳನ್ನು ನನಗೆ ಕೊಡಿ' ಎಂದು ಆ ಬೇಡನು ಮುನಿಗಳ ಪಾದಗಳಿಗೆರಗಿದನು. ಅವರು ಆ ವ್ರತಗಳನ್ನು ಬಿಡದೆ ಪಾಲಿಸು ವಂತೆ ಹೇಳಿ ಕೊಟ್ಟರು. ವಾಗುರೆಯು ಆ ವ್ರತಗಳನ್ನು ಕೈಕೊಂಡಳು. ತರುವಾಯ ದಂಪತಿಗಳು ಆ ಮುನಿಗಳಿಗೆರಗಿ ತಮ್ಮ ಸ್ಥಾನಕ್ಕೆ ಹೊರಟುಹೋಗಿ ಬಿಲ್ಲುಬಾಣಗಳನ್ನು ಮುರಿದು ಬಿಸಾಟು ಮೃಗಗಳನ್ನೆಲ್ಲ ಬಿಟ್ಟು ನೆಂಟರಿಷ್ಟರ ಮನೆಯಲ್ಲಿ ತಿನ್ನುವುದನ್ನು ತೊರೆದು ಹಿಂಸೆಯಿಲ್ಲದ ಮತ್ತು ಶುಚಿಯಾದ ಸ್ಥಾನದಲ್ಲಿ ಮನೆಮಾಡಿಕೊಂಡು ಆ ವ್ಯಾಧದಂಪತಿಗಳಿದ್ದರು. ಬಿದಿರಿನ ಅಕ್ಕಿಯನ್ನೂ ಫಲಪತ್ರಗಳನ್ನೂ ತಮ್ಮ ಆಹಾರಕ್ಕುಪಯೋಗಿಸುತ್ತಿದ್ದರು. ಉಪ್ಪುಕಾರವಿಲ್ಲದೆ ಸಪ್ಪೆಯನ್ನು ತಿಂದು ಜೀವಿಸುತ್ತಿರಲು ಅವರು ದಿನದಿನಕ್ಕೆ ಕೃಶವಾಗುತ್ತಬಂದರು. ಆದರೂ ವ್ರತಗಳನ್ನು ಬಿಡಲಿಲ್ಲ. ಒಂದು ದಿನ ಬೇರೆ ಬೇಡತಿಯರು ವಾಗುರೆ

ಯನ್ನು ಕುರಿತು "ಹಸುರು ಹುಲ್ಲನ್ನು ತಿಂದ ಜಿಂಕೆಯನ್ನು ತಿಂದರೆ ಕಣ್ಣು ಹಸುರಾಗುವುದೆಂದು ಗಂಡುಜಿಂಕೆಯನ್ನು ತಿನ್ನುವವನಿಗೆ ಹಸುರೆಲೆಯನ್ನು ತಿನ್ನುವಂತಾಯ್ತೋ" ಎಂದು ಹೇಳಲು ಆ ಮಾತನ್ನು ಕೇಳಿ ವಾಗುರೆಯು 'ಅಂದು ನಾನು ಆ ಮುನಿಗಳನ್ನು ಕಂಡುದುದರಿಂದ ಇಂದು ನಮಗೆ ಈ ವಿಧಿಯಾಯ್ತು. ಅವರು ನಮ್ಮನ್ನು ನಂಬಿಸಿ ಬಾಣವನ್ನು ಬಿಡುವ ಕೈಯನ್ನೂ ಮದ್ಯಮಾಂಸವನ್ನು ತಿನ್ನುವ ಬಾಯನ್ನೂ ಕಟ್ಟಿದರು" ಎಂದು ಹೇಳುತ್ತ ಕಣ್ಣೀರು ಬಿಟ್ಟಳು. ಆ ಮಾತನ್ನು ಕೇಳಿ ಆ ಬೇಡತಿಯರು "ತಾನು ಬೇಯಿಸಿ ತಿನ್ನುವುದನ್ನು ವ್ರತಮಾಡಿದ್ದರೆ ನಮ್ಮಗಳ ಮನೆಗೆ ಬಂದು ತಿಂದುಂಡುಹೋಗು" ಎಂದು ಹೇಳಿದರು. ಆ ಮಾತಿಗೆ ವಾಗುರೆಯು "ಮೊದಲು ಮುಂದಾಲೋಚನೆಯಿಲ್ಲದೆ ಕೊಂಡ ವ್ರತವನ್ನು ಬಿಟ್ಟರೆ ದೋಷಬರುತ್ತದೆ. ಇನ್ನೇಕೆ? ಅವನು ಆಚರಿಸಿದ ಆಚಾರವೇ ನನ್ನ ಆಚಾರ" ಎಂದು ಹೇಳಿ ವಾಗುರೆಯು ಪತಿಯಂತೆ ಆಚರಿಸುತ್ತ ಕಾಯಿಹಣ್ಣುಗಳನ್ನು ತಿನ್ನುತ್ತಿದ್ದಳು. ಒಂದು ದಿನ ವಿಂಧ್ಯಕನು ಬಹಳ ಹಸಿವೆಯಿಂದ ಬರುತ್ತ ಒಂದು ಮಾವಿನ ಮರವನ್ನು ಕಂಡು ಅದರ ಮಧುರಫಲಗಳನ್ನೆಲ್ಲ ತಿನ್ನುವೆನೆಂದು ಮರಕ್ಕೇರಿ ಹಣ್ಣನ್ನು ಕಿತ್ತನು. ಅದು ಮರದ ಪೊಟರೆಯೊಳಗೆ ಬಿದ್ದಿತು. ಅದಕ್ಕೆ ಕೈಹಾಕಿ ಹಣ್ಣನ್ನು ತೆಗೆದುಕೊಳ್ಳುವಾಗ ಅದರಲ್ಲಿದ್ದ ಒಂದು ಕಾಳಿಂಗಸರ್ಪವು ಕೈಯನ್ನು ಕಚ್ಚಿತು. ವಿಂಧ್ಯಕನು ವಿಷವೇರಿ ಭೂಮಿಗೆ ಬಿದ್ದು ಸತ್ತನು. ವಾಗುರೆಯು ತಾನೂ ಮರವನ್ನು ಹತ್ತಿ ಪೊಟರೆಗೆ ಕೈಯಿಕ್ಕಿ ಹಾವಿನಿಂದ ಕಚ್ಚಿಸಿಕೊಂಡು ಸತ್ತಳು. ವಿಂಧ್ಯಕನು ಸತ್ತು ಅದೇ ನಗರದ ವೃಷಭದತ್ತನೆಂಬ ವೈಶ್ಯನಿಗೆ ಪದ್ಮಶ್ರೀಯೆಂಬ ಪತ್ನಿಯಲ್ಲಿ ಇಭ್ಯಕೇತುವೆಂಬ ಪುತ್ರನಾಗಿ ಜನಿಸಿದನು. ವಾಗುರೆಯು ಸತ್ತು ಅದೇ ಪಟ್ಟಣದಲ್ಲಿ ಒಬ್ಬ ಬೆಸ್ತರವನಿಗೆ ಧೀವರನೆಂಬ ಪುತ್ರನಾಗಿ ಹುಟ್ಟಿ ಆ ಪಂಗಡದವರಿಗೆ ಅವನೇ ಮುಂದಾಳಾದನು. ಆ ಪಟ್ಟಣದಲ್ಲಿರುವ ಪುರುಷರಲ್ಲೆಲ್ಲ ಇಭ್ಯಕೇತುವು ವಿದ್ಯಾ ವಿನಯ ರೂಪ ವಿಕ್ರಮ ವಿತರಣಗಳಲ್ಲಿ ಮೊದಲನೆಯವನಾಗಿ ಪ್ರಖ್ಯಾತನಾದನು. ಆ ನಗರದ ದೊರೆ ನಾಗದತ್ತನಿಗೆ ಸುಪ್ರಭೆಯೆಂಬ ಪತ್ನಿಯಲ್ಲಿ ಜನಿಸಿದ ಬಹುರೂಪವತಿಯಾದ ಸೌಂದರಿಯೆಂಬವಳಿಗೆ ದೊರೆಯು ರತ್ನಮಯವಾದ ಸ್ವಯಂವರ ಮಂಟಪವನ್ನು ರಚಿಸಿ ರಾಜಕುಮಾರರನ್ನೆಲ್ಲ ಒರುಮಾಡಿದನು. ಅಲ್ಲಿಗೆ ಇಭ್ಯಕೇತುಕುಮಾರನೂ ಬಂದಿರಲು ರಾಜಪುತ್ರಿಯು ಅವನಿಗೆ ಮಾಲೆಯನ್ನು ಹಾಕಿದಳು. ನಾಗದತ್ತನು ಶುಭಲಗ್ನದಲ್ಲಿ ಅವರ ವಿವಾಹವನ್ನು ನೆರವೇರಿಸಿದನು.

ಒಂದು ದಿನ ದೊರೆಯು ತನ್ನ ಕೆನ್ನೆಯಲ್ಲಿ ನರೆಗೂದಲನ್ನು ಕಂಡು ತಾನು ಅಪುತ್ರನಾಗಿದ್ದುದರಿಂದ ತನ್ನ ಅಳಿಯ ಇಭ್ಯಕೇತುವಿಗೆ ರಾಜ್ಯಭಾರವನ್ನು ವಹಿಸಿ ತಾನು ದೀಕ್ಷೆಯನ್ನು ಸ್ವೀಕರಿಸಿದನು. ಮದನಸದೃಶನಾದ ಇಭ್ಯಕೇತುಕುಮಾರನು ಮಾವನ ರಾಜ್ಯಕ್ಕೆ ಪ್ರಭುವಾಗಿ ಸುಖದಿಂದ ರಾಜ್ಯವಾಳುತ್ತಿದ್ದನು

## ೩. ಚಿಂತಾಗತಿಯ ನಿರ್ವೇಗ ಸಂಧಿ.

ಇಭ್ಯಕೇತುಕುಮಾರನು ಒಂದು ದಿನ ಇಂದ್ರವೈಭವದಿಂದ ಒಡ್ಡೋಲಗದಲ್ಲಿರುವಾಗ ಹಿಂದೆ ಹೇಳಿದ ಧೀವರಪತಿಯು ಮದಗಜದ ಮರಿಯನ್ನೂ ಸಿಷ್ಮದ ಮರಿಯನ್ನೂ ಕಸ್ತೂರಿಮೃಗದ ಮರಿಯನ್ನೂ ಕೈಗಾಣಿಕೆಯಾಗಿ ಕೊಟ್ಟು ಇಭ್ಯಕೇತುರಾಜನನ್ನು ಕಂಡನು. ರಾಜನು ಜನ್ಮಾಂತರದ ಮೋಹದಿಂದ ಧೀವರಪತಿಗೆ ಮಂತ್ರಿಪದವನ್ನು ಕೊಟ್ಟನು. ಆತನು ದೊರೆಗೆ ಪರಮವಿಶ್ವಾಸಿಯಾಗಿರುತ್ತಿರಲು ಒಂದು ದಿನ ದೊರೆಯು ವನಕ್ಕೆ ಹೋಗಿದ್ದು ಅಲ್ಲಿ ಅತಿನಿರ್ಮಲರೆಂಬ ಮುನಿಗಳನ್ನು ಕಂಡು ಅವರನ್ನು ವಂದಿಸಿ ಧರ್ಮಶ್ರವಣವನ್ನು ಮಾಡಿ ತನಗೆ ಆ ಧೀವರಪತಿಯಲ್ಲಿ ಅತಿ ಮಮತೆಯಾಗಲು ಕಾರಣವೇನೆಂದು ಕೇಳಿದನು. ದಿವ್ಯಜ್ಞಾನಿಗಳಾದ ಆ ಮುನಿಗಳು "ಹಿಂದಿನ ಭವದಲ್ಲಿ ನೀನು ವಿಂಧ್ಯಕನಾಗಿದ್ದಾಗ ಈ ಧೀವರನು ನಿನಗೆ ವಾಗುರೆಯೆಂಬ ಪ್ರಿಯಪತ್ನಿಯಾಗಿದ್ದನು. ಆದುದರಿಂದ ಈ ಧೀವರನಲ್ಲಿ ನಿನಗೆ ಮಮತೆಯುಂಟಾಗಿದೆ" ಎಂದು ಹೇಳಿದರು. ಅದನ್ನು ಕೇಳಿ ಸಂಸಾರನಾಟಕವನ್ನು ಭಾವಿಸಿ ಹೇಸಿ ವೈರಾಗ್ಯಪರನಾಗಿ ಸುಕೇತುವೆಂಬ ಪುತ್ರನಿಗೆ ರಾಜ್ಯಭಾರವನ್ನು ವಹಿಸಿ ತಾನು ದೀಕ್ಷೆಯನ್ನು ಪಡೆದನು. ಆತನ ಪತ್ನಿ ಸೌಂದರಿಯೂ ದೀಕ್ಷೆಯನ್ನು ಸ್ವೀಕರಿಸಿದಳು.

ಇಭ್ಯಕೇತುಮುನಿಯ ಬಳಿಯಲ್ಲಿ ಧೀವರನು ಅಣುವ್ರತವನ್ನು ಕೈಕೊಂಡನು. ಇಭ್ಯಕೇತುಮುನಿಯು ಅವಸಾನಕಾಲದಲ್ಲಿ ಸಮಾಧಿವಿಧಿಯಿಂದ ಸತ್ತು ಸೌಧರ್ಮಸ್ವರ್ಗದಲ್ಲಿ ಶ್ರೀದೇವನೆಂಬ ದೇವನಾಗಿಯೂ ಸೌಂದರಿಯು ಅದೇ ಸ್ವರ್ಗದ ಸುಪ್ರಭವಿಮಾನದಲ್ಲಿ ವಿಮಲಪ್ರಭನೆಂಬ ದೇವನಾಗಿಯೂ ಧೀವರನು ವಿದ್ಯುತ್ಪ್ರಭವಿಮಾನದಲ್ಲಿ ಶ್ರುತಪ್ರಭನೆಂಬ ದೇವನಾಗಿಯೂ ಹುಟ್ಟಿದರು. ಆ ಮೂವರೂ ಸುರಲೋಕದ ಸುಖವನ್ನುಂಡು ಬಂದು ಪುಷ್ಕರಾರ್ಧದ್ವೀಪದ ಪಡುದಿಕ್ಕಿನ ಮೇರು ಪರ್ವತದ ಪಶ್ಚಿಮವಿದೇಹದ ಸೀತೋದಾನದಿಯ ಉತ್ತರಭಾಗದಲ್ಲಿರುವ ಗಂಧಿಲದೇಶದ ವಿಜಯಾರ್ಧ್ದಿಯ ಉತ್ತರಶ್ರೇಣಿಯಲ್ಲಿ ಸೂರ್ಯಪ್ರಭಪುರದ ಸೂರ್ಯಪ್ರಭನೆಂಬ ಖೇಚರನಿಗೆ ಗಾಂಧಾರಿಯೆಂಬ ಪತ್ನಿಯಲ್ಲಿ ಇಭ್ಯಕೇತು—

ಶ್ರೀದೇವನು ಚಿಂತಾಗತಿಯೆಂಬ ಪ್ರಿಯಪುತ್ರನಾಗಿ ಜನಿಸಿದನು. ಅವನು ಸಕಲಕಲಾಪರಿಪೂರ್ಣನಾಗಿ ಬೆಳೆಯುತ್ತಿರಲು ಆ ಸುಪ್ರಭದೇವನು ಚ್ಯುತನಾಗಿ ಬಂದು ಅವನಿಗೆ ಸಹೋದರನಾಗಿ ಜನಿಸಿ ಮನೋಗತಿಯೆಂಬ ಹೆಸರನ್ನು ಪಡೆದು ಬೆಳೆಯುತ್ತಿದ್ದನು. ಬಳಿಕ ಧೀವರನಾಗಿದ್ದ ವಿದ್ಯುತ್ಪ್ರಭದೇವನು ಸ್ವರ್ಗದಿಂದ ಚ್ಯುತನಾಗಿ ಬಂದು ಸೂರ್ಯಪ್ರಭ ಗಾಂಧಾರಿಯರಿಗೆ ಚಪಲಗತಿಯೆಂಬ ಮೂರನೆಯ ಮಗನಾಗಿ ಜನಿಸಿದನು. ಈ ಮೂವರೂ ರತ್ನತ್ರಯದಂತೆ ಶೋಭಿಸುತ್ತಿದ್ದರು. ಆ ಪರ್ವತಶ್ರೇಣಿಯಲ್ಲಿ ಅರಿಂಧರಪುರವೆಂಬುದೊಂದು ಪಟ್ಟಣವಿದೆ. ಅದಕ್ಕೆ ಅರಿಂಜಯನೆಂಬ ಖೇಚರನು ದೊರೆಯಾಗಿದ್ದನು. ಆತನಿಗೆ ಜಿತಸೇನೆಯೆಂಬವಳು ಪತ್ನಿಯಾದಳು. ಅವರಿಗೆ ವಿಲಾಸವತಿಯೆಂಬ ಪುತ್ರಿಯು ಜನಿಸಿದಳು. ಐಶ್ವರ್ಯ ರೂಪ ವಿದ್ಯೆಗಳಲ್ಲಿ ಅನುಪಮಳಾಗಿದ್ದ ಆಕೆಯು ಗತಿಯುದ್ಧದಲ್ಲಿ ತನ್ನನ್ನು ಜಯಿಸಿದವನೇ ತನ್ನ ಪತಿಯೆಂದು ಡಂಗುರ ಹೊಯ್ಸಿದಳು. ಎಲ್ಲಾ ವಿದ್ಯಾಧರ ಕುಮಾರರು ಆಕೆಯನ್ನು ವರಿಸಲು ಬಂದುಸೇರಿದರು. ಅಲ್ಲಿಗೆ ಚಿಂತಾಗತಿ ಮನೋಗತಿ ಚಪಲಗತಿಕುಮಾರರೂ ಬಂದರು. ಆಗ ಅರಿಂಜಯನು ತನ್ನ ಪುತ್ರಿ ವಿಲಾಸವತಿಯೊಡನೆ ಆ ಪರ್ವತದ ಜಿನಗೃಹಕ್ಕೆ ಬಂದು ತ್ರಿಃಪ್ರದಕ್ಷಿಣೆ ಮಾಡಿ ಭಕ್ತಿಯಿಂದರ್ಚಿಸಿ ವಿಲಾಸವತಿಯು ರತ್ನಮಂಟಪಕ್ಕೆ ಹೋಗಿ ಅಲ್ಲಿ ಅರ್ಚಿಸಿದನಂತರ ಆಕೆಯ ಗೆಳತಿ ಲಲಿತೆಯೆಂಬವಳು ಗತಿಯುದ್ಧನಿಮಿತ್ತವಾಗಿ ಒಂದು ಹೂವಿನಮಾಲೆಯನ್ನು ತೆಗೆದುಕೊಂಡು " ಈ ಬೆಳ್ಳಿಯ ಬೆಟ್ಟದಲ್ಲಿ ಬಿಟ್ಟ ಈ ಪುಷ್ಪಮಾಲೆಯು ಭೂಮಿಗೆ ಮುಟ್ಟುವ ಮೊದಲು ಮೇರುವಿಗೆ ಹೋಗಿ ಬಸದಿಗೆ ಹೊಕ್ಕು ಹಿಂದಿರುಗಿ ಬಂದು ಇದನ್ನು ಹಿಡಿಯುವವರು ಹೊರಡಿ" ಎಂದು ಹೇಳಿದಳು. ಆ ಮಾತನ್ನು ಕೇಳಿ ಈ ಕೆಲಸವು ತಮಗಶಕ್ಯವೆಂದು ಆ ರಾಜರುಗಳು ವಿಮುಖರಾಗಲು ಚಿಂತಾಗತಿಯು 'ಈ ಗತಿಯುದ್ಧವನ್ನು ನಾನೊಮ್ಮೆ ಮಾಡುತ್ತೇನೆ; ನೀವೆಲ್ಲ ನೋಡಿ" ಎಂದು ಹೇಳಿ ಗೊತ್ತಾದ ಸ್ಥಳಕ್ಕೆ ಹೋಗಿ ನಿಂತನು. ಆತನ ಎಡಗಡೆಯಲ್ಲಿ ಆ ವಿದ್ಯಾಧರಕನ್ಯೆಯೂ ಬಂದು ನಿಂತಳು. ಆಕೆಗೆ ಚಿಂತಾಗತಿಯ ಸೌಂದರ್ಯವನ್ನು ನೋಡಿ ಸಾತ್ತ್ವಿಕಭಾವವುಂಟಾಯ್ತು. ಸಾವಧಾನವೆಂದು ಹೇಳಿ ಆ ಸಖಿಯು ಹೂವಿನಮಾಲೆಯನ್ನು ಬಿಡಲು ಅವರೀರ್ವರೂ ಆಕಾಶಕ್ಕೆ ಹಾರಿ ಚಿಂತಾಗತಿಯು ವಿಲಾಸವತಿಯನ್ನು ಹಿಂದಿಕ್ಕಿ ಹೂವಿನ ಮಾಲೆಯು ನೆಲಕ್ಕೆ ಬೀಳುವುದರೊಳಗಾಗಿ ಮೊದಲು ಗೊತ್ತುಮಾಡಲ್ಪಟ್ಟಿದ್ದ ಸ್ಥಳಕ್ಕೆ ಹೋಗಿ ಬಂದು ಆ ಮಾಲೆಯನ್ನು ಹಿಡಿದನು. ಆಗ ವಿಲಾಸವತಿಯು ಸ್ವಯಂವರಮಾಲಿಕೆ

ಯನ್ನು ಆತನ ಕೊರಳಿಗೆ ಹಾಕಲು ಬಂದಳು. ಚಿಂತಾಗತಿಯು "ಈಕೆಗೆ ವಿದ್ಯಾಧರರಾಜರೆಲ್ಲ ಆಶೆಪಟ್ಟರು. ಸಾಹಸಿಗಳಾದ ನನ್ನ ತಮ್ಮಂದಿರೂ ಆಶೆಪಟ್ಟರು. ಈ ಬಾಲಕಿಯೋರ್ವಳನ್ನು ಅನೇಕರು ಇಚ್ಛಿಸಿದರು. ಇದು ಮನ್ಮಥನ ಗೊಡ್ಡಾಟವಲ್ಲವೇ ?" ಎಂದು ಭಾವಿಸುತ್ತ ಹೂವಿನ ಮಾಲೆಯನ್ನು ತರುತ್ತಿದ್ದ ಆ ಬಾಲಕಿಯನ್ನು ಕುರಿತು "ಸ್ವಲ್ಪ ನಿಲ್ಲು" ಎಂದೆಂದು ಮುಂದೆ ಹೇಳುತ್ತಾನೆ:— "ಕನ್ನೆಯೆ! ನನ್ನ ಗೆಲುವು ನನ್ನ ಪ್ರೀತಿಯ ತಮ್ಮಂದಿರದು. ಅವರಲ್ಲಿ ಬೇಕಾದವನನ್ನು ವರಿಸು' ಎಂದ ಮಾತನ್ನು ಕೇಳಿ ಆಕೆಯು ತಾನೊಂದೆಣಿಸಿದರೆ ತನ್ನ ದುಷ್ಕೃತವು ತಾನೊಂದೆಣಿಸಿತೆಂದು ಚಿಂತಿಸುತ್ತ "ಗತಿಯುದ್ಧದಲ್ಲಿ ನನ್ನನ್ನು ಗೆದ್ದವನೇ ಈ ಜನ್ಮದಲ್ಲಿ ನನಗೆ ಪತಿಯೆಂದು ಲೋಕವೆಲ್ಲ ತಿಳಿಯುವಂತೆ ನಾನು ಪ್ರತಿಜ್ಞೆ ಮಾಡಿದ್ದೇನೆ. ಆದುದರಿಂದ ನೀನೇ ನನಗೆ ಪತಿಯು. ಉಳಿದವರೆಲ್ಲ ನನಗೆ ಸಹೋದರಸಮಾನರು. ಇದಕ್ಕಿನ್ನು ಸಂದೇಹವೇಕೆ?" ಎಂದು ಪ್ರತಿಜ್ಞೆಯನ್ನು ಮಾಡಿ ಅಲ್ಲಿಂದ ಹೊರಟು ದೇವಾಲಯಕ್ಕೆ ಪೋಗಿ ತನ್ನ ಜತೆಯಲ್ಲಿ ಬಂದಿದ್ದ ಸಾವಿರಮಂದಿ ಸ್ತ್ರೀಯರೊಡನೆ ತಾನು ದೀಕ್ಷೆಯನ್ನು ಸ್ವೀಕರಿಸಿದಳು. ಇತ್ತ ಚಿಂತಾಗತಿಯೂ ವೈರಾಗ್ಯಪರನಾಗಿ ತನ್ನ ತಮ್ಮಂದಿರೊಡನೆಯೂ ಎರಡು ಸಾವಿರ ದೊರೆಗಳೊಡನೆಯೂ ದಮವರಮುನಿಗಳಲ್ಲಿ ದೀಕ್ಷೆಯನ್ನು ಪಡೆದು ತಪಸ್ಸುಮಾಡಿ ಆಯುಷ್ಯಾವಸಾನದಲ್ಲಿ ಆ ಮೂವರೂ ಮಾಹೇಂದ್ರವೆಂಬ ನಾಲ್ಕನೆಯ ಸ್ವರ್ಗದಲ್ಲಿ ಸಾಮಾನಿಕರೆಂಬ ದೇವತೆಗಳಾಗಿ ಜನಿಸಿದರು ಅವರಲ್ಲಿ ಮೊದಲನೆಯ ಚಿಂತಾಗತಿಯು ದೇವಸುಖವನ್ನನುಭವಿಸಿ ಬಂದು ನೀನು ಅಪರಾಜಿತನಾಗಿ ಹುಟ್ಟಿರುತ್ತೀ. ಜಂಬೂದ್ವೀಪದ ಪುಷ್ಕಳಾವತೀದೇಶದ ವಿಜಯಾರ್ಧಗಿರಿಯ ಉತ್ತರಶ್ರೇಣಿಯಲ್ಲಿರುವ ಗಗನವಲ್ಲಭಪುರದ ಗಗನಚಂದ್ರನೆಂಬ ದೊರೆಗೆ ಗಗನಸೌಂದರಿಯೆಂಬ ಪತ್ನಿಯಲ್ಲಿ ಚಿಂತಾಗತಿಯ ಸಹೋದರರಾಗಿದ್ದ ದೇವತೆಗಳು ಸ್ವರ್ಗದಾಯುಷ್ಯವು ಪೂರ್ತಿಯಾದಮೇಲೆ ಬಂದು ಜನಿಸಿ ಅಮಿತಗತಿ ಅಮಿತರಾಜನೆಂಬ ಹೆಸರುಗಳನ್ನು ತಳೆದರು. ಯೌವನಾವಸ್ಥೆಯಲ್ಲೇ ವೈರಾಗ್ಯವನ್ನು ಹೊಂದಿ ದೀಕ್ಷೆಯನ್ನು ಪಡೆದು ಚಾರಣತ್ವವನ್ನು ಸಂಪಾದಿಸಿದ ಆ ಮುಮುಕ್ಷುಗಳೇ ನಾವು. ನಿನ್ನನ್ನು ನೋಡಬೇಕೆಂದು ಈ ಭೂಮಿಗಿಳಿದೆವು. ನಿನಗಿನ್ನು ಒಂದೇ ತಿಂಗಳ ಆಯುಷ್ಯವಿರುವುದು. ಸಮಸ್ತಪರಿಗ್ರಹಗಳನ್ನು ತೊರೆದು ಹೆಚ್ಚು ಪುಣ್ಯವನ್ನು ಗಳಿಸು." ಎಂದು ಹೇಳಿ ಧರ್ಮಲಾಭದ ಆಶೀರ್ವಾದವನ್ನು ಮಾಡಿ ಆಕಾಶಮಾರ್ಗವಾಗಿ ಹೊರಟುಹೋದರು.

ಇತ್ತ ಅಪರಾಜಿತನು ತನ್ನ ಪುರಕ್ಕೆ ಬಂದು ಆ ತಪಸ್ವಿಗಳು ಹೇಳಿದಂತೆಯೇ ರಾಜ್ಯಭಾರವನ್ನು ಪ್ರೀತಿಂಕರನೆಂಬ ತನ್ನ ಪುತ್ರನಿಗೆ ವಹಿಸಿ ಎಂಟುದಿವಸ ನಂದೀಶ್ವರದ ನೋಂಪಿಯನ್ನು ಮಾಡಿ ಸಕಲಪರಿಗ್ರಹಗಳನ್ನು ತೊರೆದು ಇಪ್ಪತ್ತೆರಡುದಿವಸ ಪ್ರಾಯೋಪಗಮನವೆಂಬ ಸನ್ನ್ಯಸನವಿಧಿಯನ್ನು ಮಾಡಿ ಮರಣವನ್ನು ಹೊಂದಿ ಅಚ್ಯುತಸ್ವರ್ಗದಲ್ಲಿ ಅಚ್ಯುತೇಂದ್ರನೆಂಬ ದೇವೇಂದ್ರನಾಗಿ ಹುಟ್ಟಿದನು ಅಲ್ಲಿ ಇಪ್ಪತ್ತೆರಡು ಸಾಗರೋಪಮಕಾಲದವರೆಗೆ ಸುಖವನ್ನುಂಡು ಅಲ್ಲಿಂದ ಬಂದು ಜಂಬೂದ್ವೀಪದ ಭರತಕ್ಷೇತ್ರದ ಕುರುಜಾಂಗಣದೇಶದಲ್ಲಿರುವ ಹಸ್ತಿನಾಪುರದರಸು ಶ್ರೀಚಂದ್ರನೆಂಬವನಿಗೆ ಶ್ರೀಮತಿಯೆಂಬ ಪತ್ನಿಯಲ್ಲಿ ಸುಪ್ರತಿಷ್ಠನೆಂಬ ಪುತ್ರನಾಗಿ ಜನಿಸಿದನು. ಆತನಿಗೆ ಸುನಂದಾದೇವಿಯೆಂಬ ರಾಜಕನ್ಯೆಯೊಡನೆ ವಿವಾಹವಾಯ್ತು. ಕೆಲವುಕಾಲದಮೇಲೆ ಶ್ರೀಚಂದ್ರನಿಗೆ ಸಂಸಾರಭೋಗಗಳಲ್ಲಿ ವೈರಾಗ್ಯವುಂಟಾಗಿ ಪುತ್ರನಿಗೆ ರಾಜ್ಯಭಾರವನ್ನಿತ್ತು ತಾನು ದೀಕ್ಷೆಗೆ ಹೋದನು.

ಇತ್ತ ಸುಪ್ರತಿಷ್ಠರಾಜನಿಗೆ ಸುನಂದೆಯಲ್ಲಿ ಸುದೃಷ್ಟನೆಂಬ ಪುತ್ರನು ಹುಟ್ಟಿದನು. ಒಂದುದಿನ ರಾತ್ರಿ ಸುಪ್ರತಿಷ್ಠನು ಉಪ್ಪರಿಗೆಯಲ್ಲಿ ತನ್ನ ಅಂತಃಪುರಸ್ತ್ರೀಜನರೊಡನೆ ವಿನೋದದಿಂದಿರುತ್ತಿರುವಾಗ ಆಕಾಶದಿಂದೊಂದು ಉಳ್ಕಾಪಾತವಾಯ್ತು. ಅದನ್ನು ಕಂಡು ದೊರೆಯು ತನ್ನ ದೇಹವೂ ಹೀಗೇ ಅಳಿಯುವುದೆಂದು ಬಗೆದು ವೈರಾಗ್ಯದಿಂದ ತನ್ನ ಪುತ್ರ ಸುದೃಷ್ಟನಿಗೆ ರಾಜ್ಯಭಾರವನ್ನು ವಹಿಸಿ ತಾನು ಸುಮಂದರರೆಂಬ ಕೇವಲಿಗಳಲ್ಲಿ ದೀಕ್ಷೆಯನ್ನು ಪಡೆದು ಏಕವಿಹಾರಿಯಾಗಿ ಕಠಿನತಪಸ್ಸನ್ನು ಮಾಡುತ್ತ ಷೋಡಶಭಾವನೆಗಳನ್ನು ಭಾವಿಸಿ ಮೂರು ತಿಂಗಳ ಸನ್ನ್ಯಸನ—ನಿರಾಹಾರವಿಧಿಯಿಂದ ಮೃತನಾಗಿ ಸರ್ವಾರ್ಥಸಿದ್ಧಿಯೆಂಬ ಸ್ವರ್ಗದಲ್ಲಿ ಹುಟ್ಟಿ ಮೂವತ್ತುಮೂರು ಸಾಗರೋಪಮವರ್ಷಾಯುಷ್ಯವುಳ್ಳವನಾಗಿ ಅನುಪಮಸುಖಕ್ಕೊಡೆಯನಾದನು. ಸುನಂದಾದೇವಿ ಮೊದಲಾದ ಎರಡು ಸಾವಿರ ಅಂತಃಪುರಸ್ತ್ರೀಯರೂ ಒಂದುಸಾವಿರಮಂದಿ ಮಕ್ಕಳೂ ಐನೂರುಮಂದಿ ರಾಜರುಗಳೂ ಆ ಸುಪ್ರತಿಷ್ಠರಾಜನೊಡನೆ ದೀಕ್ಷೆಯನ್ನು ಪಡೆದು ತಪಸ್ಸುಮಾಡಿ ಯಥೋಚಿತವಾದ ಗತಿಗಳನ್ನು ಪಡೆದರು.

---

# ೪. ಹರಿವಂಶೋತ್ಪತ್ತಿಯ ಸಂಧಿ



ಜಂಬೂದ್ವೀಪದ ಭರತಕ್ಷೇತ್ರದ ಆರ್ಯಖಂಡದ ವತ್ಸದೇಶದಲ್ಲಿ ಕೌಶಂಬಿ ಯೆಂಬ ಪುರವಿದೆ. ಅಲ್ಲಿ ಮಗಧರಾಜನು ರಾಜ್ಯವಾಳುತ್ತಿದ್ದನು. ಅವನಿಗೆ ವನ ಮಾಲೆಯೆಂಬವಳು ಹೆಂಡತಿ. ಆ ದಂಪತಿಗಳಿಗೆ ರಘುವೆಂಬ ಮಗನು ಹುಟ್ಟಿ ರಾಜ್ಯ ಕ್ಕೊಡೆಯನಾದನು. ಅವನಿಗೆ ಬಹಳ ಧನಿಕನಾದ ಸುಮುಖನೆಂಬ ರಾಜಶ್ರೇಷ್ಠಿ ಯಿದ್ದನು. ಆ ಸುಮುಖನಿಗೆ ವೀರದತ್ತನೆಂಬವನೊಬ್ಬ ಬಂಧುವಿದ್ದನು. ಆತನಿಗೆ ವನಮಾಲೆಯೆಂಬ ರೂಪವತಿಯಾದ ಹೆಂಡತಿಯಿದ್ದಳು. ಆಕೆಯ ಸೌಂದರ್ಯವನ್ನು ನೋಡಿ ಸುಮುಖನು ಮೋಹಿತನಾಗಿ ವೀರದತ್ತನನ್ನು ಉಪಾಯಾಂತರದಿಂದ ಹಡ ಗನ್ನೇರಿಸಿ ವ್ಯಾಪಾರಕ್ಕೆ ಕಳುಹಿ ತಾನು ವನಮಾಲೆಯಲ್ಲಿ ಅನುರಕ್ತನಾಗಿದ್ದನು. ಅತ್ತ ವೀರದತ್ತನು ಹನ್ನೆರಡು ವರುಷಗಳವರೆಗೆ ವ್ಯಾಪಾರ ಮಾಡಿ ಹೇರಳವಾದ ದ್ರವ್ಯವನ್ನು ಸಂಪಾದಿಸಿಕೊಂಡು ಹಿಂದಿರುಗಿಬಂದು ಪುರಜನರಿಂದ ತನ್ನ ಪತ್ನಿಯ ದುರ್ವ್ಯಾಪಾರವನ್ನು ತಿಳಿದು, ಯಾರಿಗೋಸ್ಕರ ತಾನು ಪರದೇಶಕ್ಕೆ ಹೋಗಿ ಕಷ್ಟ ಪಟ್ಟು ಈ ದ್ರವ್ಯವನ್ನು ಸಂಪಾದಿಸಿದೆನೋ ಆಕೆಯು ಪರಪುರುಷನಲ್ಲಿ ಆಸಕ್ತಳಾದ ಮೇಲೆ ತನಗೇಕೀಬದುಕೆಂದು ವೈರಾಗ್ಯಪರನಾಗಿ ಪ್ರೋಷ್ಠಿಲನೆಂಬ ಮುನಿಯ ಸಮೀಪದಲ್ಲಿ ತಾಪಸರೂಪವನ್ನು ಧರಿಸಿ ತಪಸ್ಸನ್ನು ಮಾಡಿ ಮಡಿದು ಸೌಧರ್ಮವೆಂಬ ಮೊದಲನೆಯ ಸ್ವರ್ಗದಲ್ಲಿ ಚಿತ್ರಾಂಗದನೆಂಬ ದೇವನಾಗಿ ಹುಟ್ಟಿದನು.

ಇತ್ತ ಸುಮುಖನು ವನಮಾಲೆಯಲ್ಲಿ ಸುಖಿಸುತ್ತಿರುವಾಗ ಒಂದು ದಿನ ಮುನಿಗಳು ಆಹಾರನಿಮಿತ್ತವಾಗಿ ಬರುತ್ತಿರುವುದನ್ನು ಕಂಡು ಅವರನ್ನು ಮನೆಗೆ ಕರೆದೊಯ್ದು ಸುಮುಖನು ಅವರಿಗೆ ಆಹಾರದಾನವನ್ನು ಕೊಟ್ಟನು ಆ ಮುನಿ ಗಳು "ಅಕ್ಷಯದಾನವಾಗಲಿ" ಎಂದು ಹರಸಿ ಧರ್ಮಾಧರ್ಮಸ್ವರೂಪವನ್ನು ಪ ದೇಶಿಸಿದರು. ಅದನ್ನು ಕೇಳಿ ಆ ಸುಮುಖವನಮಾಲೆಯರು ನಿರ್ಮಲವಾದ ವ್ರತ ವನ್ನು ಕೈಕೊಂಡು ಪಾಲಿಸಿ ಮಡಿದು ಸುಮುಖನು ಭರತಕ್ಷೇತ್ರದ ವಿಜಯಾರ್ಧ ಪರ್ವತದ ತಪ್ಪಲಿನಲ್ಲಿರುವ ಹರಿವರ್ಷದೇಶದ ಭೋಗನಗರಿಯ ದೊರೆಯಾದ ಪ್ರಭಂಜನನೆಂಬ ವಿದ್ಯಾಧರನಿಗೂ ಆತನ ಪತ್ನಿ ಮೃಕಂಡುವೆಂಬವಳಿಗೂ ಹರಿಕೇತು ವೆಂಬ ಮಗನಾಗಿ ಹುಟ್ಟಿ ಬೆಳೆಯುತ್ತಿದ್ದನು.

ವನಮಾಲೆಯು ಸತ್ತು ಅದೇ ದೇಶದ ವಿಶ್ವಾವಲಯವೆಂಬ ಪಟ್ಟಣದ ದೊರೆ ಯಾದ ವಜ್ರಚಾಪನಿಗೂ ಆತನ ಸತಿ ಸುಭಾಮಾದೇವಿಗೂ ವಿದ್ಯುನ್ಮಾಲೆಯೆಂಬ ಮಗಳಾಗಿ ಜನಿಸಿದಳು. ಆಕೆಯನ್ನು ಹರಿಕೇತುವಿಗೆ ಕೊಟ್ಟು ವಿವಾಹಮಾಡಿ

ದರು. ಅವರೀರ್ವರೂ ಪೂರ್ವಭವಬದ್ಧಮೋಹದಿಂದ ಕೂಡಿದ್ದು ಒಂದು ದಿನ ವಸಂತರ್ತುವಿನಲ್ಲಿ ನಂದನವನಕ್ಕೆ ಹೋಗಿ ಕುಂದಲತಾಮಂಟಪದಲ್ಲಿ ರತಿಕ್ರೀಡೆಯಲ್ಲಿರುವಾಗ ಹಿಂದಿನ ಭವದಲ್ಲಿ ವೀರದತ್ತ—ಪರದನಾಗಿದ್ದ ಚಿತ್ರಾಂಗದ ದೇವನು ಸ್ವರ್ಗದಿಂದಿಳಿದು ಆ ವನಕ್ಕೆ ಬಂದು ಆ ದಂಪತಿಗಳನ್ನು ಕಂಡು ಬಹು ಕೋಪಾವಿಷ್ಟನಾಗಿ ಅವರಿಬ್ಬರನ್ನೂ ಎತ್ತಿಕೊಂಡು ' ನಿಮ್ಮ ಪ್ರಾಣವನ್ನು ಹಿಂಡದೆ ಸುಮ್ಮನಿರುವೆನೇ?!" ಎಂದು ಮೂದಲಿಸಿ ಒಯ್ಯುವ ಸಮಯದಲ್ಲಿ ಹಿಂದಿನ ಭವದಲ್ಲಿ ಸುಮುಖನ ಮಿತ್ರನಾದ ರಘುರಾಜನು ಕೆನ್ನೆಯ ನರೆಗೂದಲನ್ನು ಕಂಡು ವೈರಾಗ್ಯದಿಂದ ದೀಕ್ಷೆಯನ್ನು ತೆಗೆದುಕೊಂಡು ಆಯುಷ್ಯಾವಸಾನದಲ್ಲಿ ಸತ್ತು ಸೌಧರ್ಮ ಸ್ವರ್ಗದಲ್ಲಿ ಸೂರ್ಯಪ್ರಭನೆಂಬ ದೇವನಾಗಿ ಹುಟ್ಟಿ ಈ ಹರಿಕೇತುವಿನ ಪುಣ್ಯವಶದಿಂದ ಆಕಾಶದಲ್ಲಿ ಅದೇ ಮಾರ್ಗವಾಗಿ ಬರುತ್ತ ಇವರನ್ನು ಕಂಡು ಕಾರುಣ್ಯದಿಂದ ಚಿತ್ರಾಂಗದ ದೇವನನ್ನು ಕುರಿತು "ಬಹುಕೋಪದಿಂದ ಇವರನ್ನೇಕೆ ಒಯ್ಯುವೆ ?" ಎಂದು ಕೇಳಿದನು. ಆದಕ್ಕಾದೇವನು ಪೂರ್ವಭವದ ವೃತ್ತಾಂತವನ್ನೆಲ್ಲ ತಿಳುಹಿ ಅವರನ್ನು ಕೊಲ್ಲುವುದಕ್ಕಾಗಿ ಒಯ್ಯುತ್ತಿರುವೆನೆನ್ನಲು ಸೂರ್ಯಪ್ರಭದೇವನು "ಇವು ನರಕೀಟಗಳು. ನಾವು ದೇವತೆಗಳು. ಇವುಗಳನ್ನು ನಾವು ಕೈಮುಟ್ಟಿ ಕೊಲ್ಲುವುದು ವಿವೇಕತನವಲ್ಲ. ಇದರಿಂದ ಪಾಪಸಂಭವಿಸುವುದನ್ನು ನೀನು ತಿಳಿಯೆಯಾ? ನಾವು ವಿಚಾರಮಾಡಿ ನೋಡಿದರೆ ಸ್ಥಾವರಜಂಗಮಜೀವರಾಶಿಯಲ್ಲಿ ನೀನು ತಿಳಿದಹಾಗೆ ಜೀವಕ್ಕೆ ಶತ್ರುಮಿತ್ರರಾಗಿ ಹುಟ್ಟದವರಾರು? ಶತ್ರುಗಳನ್ನು ಕೊಲ್ಲಬೇಕೆಂಬಾಸೆಯು ನಿನಗಾದರೆ ಜಗತ್ತಿನ ಜೀವಗಳೆಲ್ಲ ನಿನಗೆ ಶತ್ರುಗಳು. ಕೆಲವು ವೇಳೆಗಳಲ್ಲಿ ಅವರೇ ಮಿತ್ರರು. ನೀನು ಯಾರು? ಯಾರನ್ನು ಕೊಲ್ಲುವೆ? ಸಂಸಾರದಲ್ಲಿ ಯಾರಿಗೆ ಯಾರು ಶತ್ರುಗಳು? ಮತ್ತು ಬಂಧುಗಳು? ಯಾರಿಗೆ ಯಾರು ಪತ್ನಿಯರು? ಯಾರಿಗೆ ಯಾರು ಅರಸುಗಳು? ವಿವೇಕಿಯೇ! ವಿಚಾರಮಾಡಿ ನೋಡು. ಆದುದರಿಂದ ಮನಸ್ಸಿನಲ್ಲಿ ರಾಗದ್ವೇಷಗಳನ್ನಿಟ್ಟುಕೊಳ್ಳುವುದು ಗುಣವಂತರ ಕೆಲಸವಲ್ಲವೆಂಬುದನ್ನು ನೀನೇ ಬಲ್ಲೆ. ಜೀವದಯಾಪರವಾದ ಜಿನಧರ್ಮವನ್ನು ಹಿಡಿದು ಈ ದೇವಗತಿಯನ್ನು ಪಡೆದು ಹೀಗೆ ಮಾಡುವುದು ನಮಗೆ ಯೋಗ್ಯವೇ?" ಈ ಮೊದಲಾದ ಯುಕ್ತಿವಚನಗಳಿಂದ ಸೂರ್ಯಪ್ರಭನು ಚಿತ್ರಾಂಗದ ದೇವನನ್ನು ಒಡಂಬಡಿಸಿದನು. ತರುವಾಯ ಚಿತ್ರಾಂಗದನು ಸೂರ್ಯಪ್ರಭನನ್ನು ಕುರಿತು "ಎಲೆ ಸೂರ್ಯಪ್ರಭ! ನಿನ್ನ ಒಳ್ನುಡಿಗಳನ್ನು ಮೀರುವುದು ನನಗೆ ಉಚಿತವಲ್ಲವು." ಎಂದು ಹೇಳಿ ಆ ರಾಜದಂಪತಿಗಳನ್ನು

ಸೂರ್ಯಪ್ರಭದೇವನಿಗೊಪ್ಪಿಸಿದನು. ಅವನು ಅವರನ್ನು ಚಂಪಾನಗರದಲ್ಲಿ ತಂದಿಳಿಸಿ ಹೊರಟುಹೋದನು.

ಇತ್ತಲಾ ಚಂಪಾಪುರದರಸು ಶ್ರೀಚಂದ್ರಕೀರ್ತಿಯೆಂಬವನು ತನುಜಾತ ಸಂತಾನವಿಲ್ಲದೆ ವಿಧಿವಶನಾಗಿರಲು ಅವನ ಮಂತ್ರಿಗಳು ಸೇರಿ ಪಟ್ಟದಾನೆಯನ್ನು ಬಿಡಲು ಅದು ರಾಜಧಾನಿಯ ನಂದನವನಕ್ಕೆ ಹೋಗಿ ಅಲ್ಲಿದ್ದ ಆ ರಾಜದಂಪತಿಗಳಿಗೆ ಸುವರ್ಣಕುಂಭದಿಂದ ಅಭಿಷೇಕಮಾಡಿ ತನ್ನ ಮಸ್ತಕದಲ್ಲಿರಿಸಿಕೊಂಡು ಪಟ್ಟಣಕ್ಕೆ ಬಂದಿತು. ಆ ದಂಪತಿಗಳನ್ನು ನೋಡಿ ಮಂತ್ರಿಗಳು ಸಂತುಷ್ಟರಾಗಿ ಪುರವನ್ನಲಂಕರಿಸಿ ಅರಮನೆಗೆ ವೈಭವದಿಂದ ಪ್ರವೇಶಮಾಡಿಸಿ ಪಟ್ಟಾಭಿಷೇಕವನ್ನು ಮಾಡಿದರು. ತದನಂತರ ಮಂತ್ರಿ, ಸಾಮಂತ, ಮಂಡಳಿಕ, ಸೈನ್ಯಾಧಿಪತಿ ಮೊದಲಾದವರು ಹರಿಕೇತುವಿನ ದೇಶವಾವುದೆಂದು ಕೇಳಲಾಗಿ ಅವನು ತಾನು ಭರತವಿಜಯಾರ್ಧಗಿರಿಯ ಹರಿವರ್ಷದೇಶದ ಭೋಗಪುರದ ಪ್ರಭಂಜನರಾಜನ ಮತ್ತು ಆತನ ಪತ್ನಿ ಮೃಕಂಡುವಿನ ಪುತ್ರನೆಂದು ಹೇಳಿದನು. ಆ ಮಾತನ್ನು ಕೇಳಿ ಮಂತ್ರಿ ಮೊದಲಾದವರು ಹರಿಕೇತುವನ್ನು ಕುರಿತು "ಹತ್ತನೆಯ ಶೀತಳತೀರ್ಥಂಕರರು ಹರಿವಂಶಸಂಭೂತರಾಗಿ ಧರ್ಮವನ್ನುಪದೇಶಮಾಡಿದರು. ನೀನೀಗ ಹರಿವರ್ಷದೇಶದರಸನಾಗಿಯೂ ಹರಿಕೇತುವೆಂಬ ಹೆಸರುಳ್ಳವನಾಗಿಯೂ ಇರುವುದರಿಂದ ಇನ್ನು ನಿನ್ನೀವಂಶಕ್ಕೆ 'ಹರಿವಂಶ' ವೆಂಬ ಹೆಸರಿರಲಿ. ಸ್ತ್ರೀಸಮುದಾಯಕ್ಕೆ ಶಿರೋಮಣಿಯಾದ ಮೃಕಂಡುವಿನ ಮಗನಾದುದರಿಂದ ನಿನ್ನ ಹೆಸರು ಲೋಕದಲ್ಲಿ 'ಮಾರ್ಕಂಡೇಯ' ನೆಂದಾಗಲಿ" ಎಂದು ಎಲ್ಲರೂ ಹೇಳಿದರು. ಹರಿ—ಸಿಹ್ಮಕೇತುವು ಪರಾಕ್ರಮದಿಂದ ನಿಷ್ಕಂಟಕನಾಗಿ ರಾಜ್ಯವಾಳುತ್ತಿರುವಾಗ ಆ ಹರಿಕೇತು ವಿದ್ಯುನ್ಮಾಲೆಯರಿಗೆ ಒಬ್ಬ ಪುತ್ರನು ಜನಿಸಿದನು. ಆತನಿಗೆ ಹರಿಯೆಂದು ಹೆಸರನ್ನಿಟ್ಟರು. ಆ ಹರಿಗೆ ಹಿಮಗಿರಿಯೆಂಬ ಮಗನೂ ಅವನಿಗೆ ವಸುಗಿರಿಯೆಂಬ ಮಗನೂ ಹುಟ್ಟಿದರು. ಹೀಗೆ ಆ ವಂಶದಲ್ಲಿ ಅನೇಕ ರಾಜರು ಕ್ರಮವಾಗಿ ಹುಟ್ಟಿದ ಬಳಿಕ ಇಂದ್ರವಂದಿತರಾದ ಮುನಿಸುವ್ರತತೀರ್ಥಂಕರರು ಉದ್ಭವಿಸಿದರು. ಆ ಶ್ರೇಷ್ಠವಂಶದಲ್ಲಿ ಅನೇಕರಾಜರು ಹುಟ್ಟಿದಬಳಿಕ ವಸುವೆಂಬ ರಾಜನೂ ಅವನಿಗೆ ಸುವಸು ಬೃಹದ್ವಸುವೆಂಬ ಮಕ್ಕಳೂ ಅವರಲ್ಲಿ ಸುವಸುವಿಗೆ ಶತಮನ್ಯುವೂ ಅವನಿಗೆ ಬೃಹದ್ರಥನೂ ಯಥಾಕ್ರಮವಾಗಿ ಉದ್ಭವಿಸಿದರು. ಬೃಹದ್ರಥನು ಮಗಧದೇಶದ ರಾಜಗೃಹದಲ್ಲಿ ರಾಜ್ಯವಾಳುತ್ತಿರುವಾಗ ಆತನಿಗೆ ಜರಾಸಂಧನೆಂಬ ಮಗನು ಹುಟ್ಟಿದನು. ಅವನ ಪೂರ್ವಪುಣ್ಯದಿಂದ ಆಯುಧಶಾಲೆಯಲ್ಲಿ

ಚಕ್ರರತ್ನವು ಉದ್ಭವಿಸಿತು. ಅದರಿಂದ ಜರಾಸಂಧನು ಸಕಲರಾಜರನ್ನು ಗೆದ್ದು ಭರತತ್ರಿಖಂಡಗಳಿಗಧಿಪತಿಯಾಗಿ ಅರ್ಧಚಕ್ರಿಯಾದನು.

ಅತ್ತ ಬೃಹದ್ವಸುವಿನ ಪರಂಪರೆಯಲ್ಲಿ ಅನೇಕ ರಾಜರು ಜನಿಸಿ ಕೀರ್ತಿಶಾಲಿಗಳಾದರು. ತರುವಾಯ ಆ ವಂಶದಲ್ಲಿ ಯದುವೆಂಬವನು ಹುಟ್ಟಿ ಮಹಾಪರಾಕ್ರಮಿಯಾಗಿ ರಾಜ್ಯವಾಳುತ್ತಿದ್ದು ಕೀರ್ತಿಯನ್ನು ಪಡೆದನು. ಅಂದಿನಿಂದ ಆ ವಂಶಕ್ಕೆ ಯದುವಂಶವೆಂದು ಹೆಸರಾಯಿತು. ಆ ಯದುರಾಜನ ಮಗ ನರಪತಿಯೆಂಬವನಿಗೆ ಶೂರ ವೀರರೆಂಬಿಬ್ಬರು ಮಕ್ಕಳು ಹುಟ್ಟಿ ಬೆಳೆಯುತ್ತಿದ್ದರು. ನರಪತಿಯು ಕೆನ್ನೆಯು ನರೆಗೂದಲನ್ನು ಕಂಡು ವಿರಕ್ತನಾಗಿ ಮಕ್ಕಳಿಗೆ ರಾಜ್ಯವನ್ನು ವಹಿಸಿ ತಾನು ದೀಕ್ಷೆಯನ್ನು ತೆಗೆದುಕೊಂಡನು. ಶೂರನು ಕೃತಾರ್ಥವೆಂಬ ದೇಶವನ್ನು ಸಾಧಿಸಿ ಅಲ್ಲಿ ಶೌರೀಪುರವೆಂಬ ಹೆಸರಿನ ನಗರವನ್ನು ನಿರ್ಮಿಸಿದನು. ತನ್ನ ತಮ್ಮನಾದ ವೀರನನ್ನು ಮಥುರಾಪುರದಲ್ಲಿರಿಸಿ ತಾವೀರ್ವರೂ ಸುಖದಿಂದ ರಾಜ್ಯಭಾರವಮಾಡುತ್ತಿರಲು ಶೂರರಾಜನಿಗೂ ಆತನ ಪತ್ನಿ ಗಾಂಧಾರಿಗೂ ಅಂಧಕವೃಷ್ಟಿಯೆಂಬ ಮಗನೂ ವೀರರಾಜನಿಗೆ ನರಪತಿವೃಷ್ಟಿಯೆಂಬ ಮಗನೂ ಹುಟ್ಟಿ ನವಮನ್ಮಥರಂತೆ ಬೆಳೆಯುತ್ತಿದ್ದರು. ಅಂಧಕವೃಷ್ಟಿಗೆ ಸುಭದ್ರೆಯೆಂಬ ರಾಜಕನ್ಯೆಯನ್ನೂ ನರಪತಿವೃಷ್ಟಿಗೆ ಪದ್ಮಾವತಿಯೆಂಬ ರಾಜಕನ್ಯೆಯನ್ನೂ ತಂದು ಮದುವೆಮಾಡಿದರು. ಅವರಲ್ಲಿ ಮೊದಲನೆಯ ಅಂಧಕವೃಷ್ಟಿಗೆ ಶರಧಿವಿಜಯ, ಅಕ್ಷೋಭ, ಸ್ಥಿಮಿತಸಾಗರ, ಹಿಮವಂತ, ವಿಜಯ, ಅಚಲ, ಧಾರಣ, ಪೂರಣ, ಅಭಿನಂದನ, ವಸುದೇವರೆಂಬ ಹತ್ತುಮಂದಿ ಗಂಡುಮಕ್ಕಳೂ, ಕೊಂತಿ ಮಾದ್ರಿಯರೆಂಬೀರ್ವರು ಹೆಮ್ಮಕ್ಕಳೂ ಹುಟ್ಟಿದರು. ನರಪತಿವೃಷ್ಟಿಗೂ ಪದ್ಮಾವತಿಗೂ ಉಗ್ರಸೇನ, ದೇವಸೇನ, ಮಹಾಸೇನರೆಂಬ ಮೂರುಮಂದಿ ಗಂಡುಮಕ್ಕಳೂ, ಗಾಂಧಾರಿಯೆಂಬ ಹೆಮ್ಮಗಳೂ ಹುಟ್ಟಿದರು. ಯೋಗ್ಯಕಾಲದಲ್ಲಿ ಶರಧಿವಿಜಯನಿಗೆ ಬಹು ರೂಪವತಿಯಾದ ಶಿವದೇವಿಯೆಂಬ ರಾಜಕನ್ಯೆಯನ್ನು ತಂದು ವಿವಾಹವಮಾಡಿದರು. ಉಳಿದ ಗಂಡುಮಕ್ಕಳಿಗೂ ಯಥಾಸಮಯದಲ್ಲಿ ಮದುವೆಮಾಡಿ ಮಕ್ಕಳು ಮೊಮ್ಮಕ್ಕಳೊಡನೆ ಆ ಶೂರವೀರರಾಜರುಗಳು ಸುಖದಿಂದಿರುವಲ್ಲಿ ಒಂದು ದಿನ ಗಂಧಮಾದನಪರ್ವತದ ಬಳಿಗೆ ಸುಪ್ರತಿಷ್ಠರೆಂಬ ಮುನಿಗಳು ಬಂದಿರುವರೆಂಬ ವಾರ್ತೆಯನ್ನು ಕೇಳಿ ಅಲ್ಲಿಗೆ ಹೋಗಿ ಅವರಿಂದ ಧರ್ಮಾಧರ್ಮಸ್ವರೂಪವನ್ನು ತಿಳಿದು ವೈರಾಗ್ಯವನ್ನು ಹೊಂದಿ ತಮ್ಮ ರಾಜಧಾನಿಗೆ ಬಂದು ಒಂದುದಿನ ಶೌರೀಪುರದಲ್ಲಿ ಅಂಧಕವೃಷ್ಟಿಗೂ ಮಥುರೆಯಲ್ಲಿ ನರಪತಿವೃಷ್ಟಿಗೂ ರಾಜ್ಯಾಭಿಷೇಕವನ್ನು ಮಾಡಿ ಶೂರ ವೀರ ರಾಜ

ರುಗಳು ದೀಕ್ಷೆಯನ್ನು ಪಡೆದು ತಪಸ್ಸನ್ನು ಮಾಡಿ ಕರ್ಮಕ್ಷಯಂಗೈದು ಮೋಕ್ಷ ವನ್ನು ಹೊಂದಿದರು.

## ೫. ಧೃತರಾಷ್ಟ್ರ ಗಾಂಧಾರಿ ವಿವಾಹಸಂಧಿ

ಒಂದು ದಿನ ಅಂಧಕವೃಷ್ಟಿಯು ಸಭಾಸ್ಥಾನದಲ್ಲಿ ಮಂಡಳಿಕರಿಂದ ಓಲೈಸಲ್ಪಡುತ್ತಿರುವಾಗ ಹಸ್ತಿನಾಪುರದಿಂದ ಅಲ್ಲಿಯ ಮಂತ್ರಿಗಳು ಬಂದು ರಾಜನನ್ನು ಕಂಡು ನಮಸ್ಕರಿಸಿ ಉಚಿತಾಸನದಲ್ಲಿ ಕುಳಿತು ರಾಜನನ್ನು ಕುರಿತು "ರಾಜನ! ಬಿನ್ನಪವು. ಕುರುಕುಲರತ್ನದೀಪರಾದ ಭೀಷ್ಮರು ತಮ್ಮಬಳಿಗೆ ನಮ್ಮನ್ನು ಕಳುಹಿದರು" ಎಂದು ಹೇಳಲು ಅಂಧಕವೃಷ್ಟಿಯು "ಏನುಕಾರ್ಯ?" ಎಂದು ಕೇಳಿದನು. ಅದಕ್ಕವರು "ಸುಂದರರಾದ ನಮ್ಮದೊರೆಯ ಮಕ್ಕಳಿಗೆ ತಮ್ಮ ತನುಜೆಯರನ್ನು ಕೇಳುವುದಕ್ಕಾಗಿ ನಮ್ಮನ್ನು ತಮ್ಮಬಳಿಗೆ ಕಳುಹಿದರು" ಎಂದು ಹೇಳಿದರು. ಅಂಧಕವೃಷ್ಟಿಯು ತನ್ನ ಮಂತ್ರಿಗಳ ಕಡೆ ನೋಡಿದನು. ಉದ್ಧಾಯನನೆಂಬ ಮಂತ್ರಿಯು ಆ ಹಸ್ತಿನಾಪುರದ ಮಂತ್ರಿಗಳ ಮುಖವನ್ನು ನೋಡಿ "ನಿಮ್ಮ ರಾಜರ ವಂಶವರ್ಣನೆಯನ್ನು ಮಾಡಿ" ಎನ್ನಲು ಆ ಮಹತ್ತರರಲ್ಲೊಬ್ಬನು ಗಂಭೀರ ವಚನದಿಂದ "ಭೂಮಿಗೆ ಸೂತ್ರಧಾರರಂತಿದ್ದ ಆದೀಶ್ವರಸ್ವಾಮಿಯು ಮೊತ್ತಮೊದಲು ವಂಶಭೇದವನ್ನು ನಿರ್ಮಿಸಿದರು. ಆ ವಂಶಗಳಲ್ಲಿ ಕುರುವಂಶವೆಂಬುದೊಂದು. ಅದರಲ್ಲಿ ಸೋಮಪ್ರಭರಾಜನೂ ಅವನ ತಮ್ಮ ಶ್ರೇಯಾಂಸರಾಜನೂ ಪ್ರಸಿದ್ಧರಾಗಿದ್ದರು. ಸೋಮಪ್ರಭನ ಮಗ ಜಯರಾಜನೆಂಬವನು ಭರತಚಕ್ರಿಗೆ ಸೇನಾನಾಯಕನಾಗಿದ್ದು ಕೊನೆಯಲ್ಲಿ ದೀಕ್ಷೆಯನ್ನು ಪಡೆದು ಮುಕ್ತಿಯನ್ನು ಹೊಂದಿದನು. ಆ ವಂಶದಲ್ಲಿ ಸೋಮಪ್ರಭನು ಪ್ರಸಿದ್ಧನಾಗಿದ್ದುದರಿಂದ ಅದಕ್ಕೆ ಸೋಮವಂಶವೆಂದು ಇಂದ್ರನು ಹೆಸರನ್ನಿಟ್ಟನು. ಅದರಲ್ಲಿ ಕ್ರಮವಾಗಿ ಅನೇಕ ರಾಜರುಗಳಾಗಿ ಹೋದಮೇಲೆ ಹಸ್ತಿಯೆಂಬೋರ್ವರಾಜನು ಹುಟ್ಟಿ ತನ್ನ ಹೆಸರಿನಲ್ಲಿ ಹಸ್ತಿನಾಪುರವನ್ನು ಕಟ್ಟಿಸಿದನು. ತರುವಾಯ ಆ ವಂಶದಲ್ಲಿ ಅನೇಕ ರಾಜರುಗಳಾಗಿಹೋದ ಮೇಲೆ ಶ್ರೀ ಶಾಂತಿತೀರ್ಥಂಕರರು ಜನಿಸಿದರು. ಅನಂತರ ಅರ್ಧಪಲ್ಯಕಾಲವು ಕಳೆದಮೇಲೆ ಶ್ರೀ ಕುಂಥುತೀರ್ಥಂಕರರೂ, ಆ ಮೇಲೆ ಕೆಲವು ಕಾಲಾನಂತರ ಅರತೀರ್ಥಂಕರರೂ, ತರುವಾಯ ಶಕ್ತಿಯೆಂಬೋರ್ವ ರಾಜನೂ ಉದ್ಭವಿಸಿದರು.

ಶಕ್ತಿರಾಜನಿಗೆ ಧಾರಿಣಿಯೆಂಬವಳು ಪತ್ನಿಯಾದಳು. ಅವರಿಗೆ ಪರಾಶರ ಶಾಂತನು ನೆಂಬೀರ್ವರು ಮಕ್ಕಳು ಹುಟ್ಟಿದರು. ಅವರಲ್ಲಿ ಶಾಂತನುವಿಗೆ ರಾಜ್ಯಭಾರವನ್ನು ವಹಿಸಿ ಶಕ್ತಿರಾಜನು ಪರಾಶರನೊಡನೆ ತಪಸ್ವಿಯಾದನು.

ಶಾಂತನುರಾಜನು ಒಂದು ದಿನ ವನವಿಹಾರಕ್ಕಾಗಿ ಹೋಗಿದ್ದು ಒಂದು ಸ್ಥಳದಲ್ಲಿ ಓರ್ವ ವಿದ್ಯಾಧರತರುಣಿಯು ಒಂದು ಬಾವಿಯಲ್ಲಿ ತನ್ನ ಆಭರಣಗಳನ್ನು ಹಾಕಿ ಶೋಕಿಸುತ್ತಿರುವುದನ್ನು ಕಂಡು ಆಕೆಯ ಅನುಪಮರೂಪಕ್ಕೆ ಸೋತು "ಎಲೈ ಬಾಲಕಿ! ನೀನೇಕೆ ಅಳುತ್ತಿರುವೆ? ಆ ವಿಷಯವನ್ನು ಹೇಳು" ಎಂದನು. ಆ ಬಾಲಕಿಯು ಶಾಂತನುವಿಗೆ "ಈ ನೀರಿನಲ್ಲಿ ಬಿದ್ದ ನನ್ನ ಆಭರಣಗಳನ್ನು ತೆಗೆದು ಕೊಡುವವರಾರನ್ನೂ ಕಾಣದೆ ದುಃಖಿಸುತ್ತಿರುವೆನು" ಎಂದಳು. ಶಾಂತನುವು ಆ ಆಭರಣಗಳನ್ನು ತಾನು ತೆಗೆದುಕೊಡುವುದಾಗಿ ಹೇಳಿ ದುಃಖವನ್ನು ಸಮಾಧಾನ ಪಡಿಸಿದನು ಆ ಬಾಲೆಯು ಆಭರಣಗಳನ್ನು ತೆಗೆದುಕೊಟ್ಟರೆ ಶಾಂತನುವನ್ನು ಮದು ವೆಯಾಗುವುದಾಗಿ ಮಾತುಕೊಟ್ಟಳು. ಶಾಂತನುವು ಆಕೆಯ ವೃತ್ತಾಂತವನ್ನು ಕೇಳ ಲು ಆಕೆಯು ತಾನು ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ಪೃಥ್ವೀತಿಲಕವೆಂಬ ನಗರದ ಮಹೀಧರನ ಮತ್ತು ಆತನ ಸತಿ ಮನೋಹರಿಯ ಲಕ್ಷ್ಮೀಮತಿಯೆಂಬ ಪುತ್ರಿಯೆಂದೂ ತಾನು ಶ್ರೀಪಂಚಮಿಯ ನೋಂಪಿಯನ್ನು ಮಾಡಿ ಮೇರುಪರ್ವತಕ್ಕೆ ಹೋಗಿ ಅಲ್ಲಿಯ ಅಕೃತ್ರಿಮಚೈತ್ಯಾಲಯದಲ್ಲಿ ಸಿದ್ಧರನ್ನು ಪೂಜಿಸುತ್ತಿರಲು ಅಲ್ಲಿಗೆ ಚಾರಣಮುನಿಗಳು ಬರಲು ಅವರಿಗೆ ವಂದಿಸಿ ಅವರಿಂದ ಧರ್ಮಾಧರ್ಮಸ್ವರೂಪ ವನ್ನು ಕೇಳಿ ವಿರಕ್ತಿಹುಟ್ಟಿ ಊರಿಗೆ ಹೋಗಿ ತಂದೆತಾಯಿಗಳಿಗೆ ಗಂಧೋದಕ ವನ್ನು ಕೊಟ್ಟು ತಾನು ದೀಕ್ಷೆಯನ್ನು ತೆಗೆದ ಕೊಳ್ಳುವುದಾಗಿ ಹೇಳಿದೆನೆಂದೂ ಅದ ಕ್ಕವರು ತಮಗೆ ಗಂಡುಮಕ್ಕಳಿಲ್ಲದಿರಲು ಅವಳನ್ನೇ ಗಂಡುಮಗನೆಂದು ತಿಳಿದು ನಿಶ್ಚಿಂತರಾಗಿದ್ದುದರಿಂದ ಆಕೆಯು ಮದುವೆಯಾಗಿ ಗಂಡುಮಕ್ಕಳನ್ನು ಹಡೆದು ಆಮೇಲೆ ದೀಕ್ಷೆಗೆ ಹೋಗೆಂದು ತನ್ನನ್ನು ಬೇಡಿಕೊಳ್ಳಲು ಅವರ ಮಾತನ್ನು ತಿರ ಸ್ಕರಿಸದೆ ತನಗೆ ಅನುರೂಪನಾದ ಪುರುಷನು ವಿದ್ಯಾಧರಲೋಕದಲ್ಲಿಲ್ಲದಿರಲು ಭೂ ಚರರಲ್ಲಾದರೂ ಹುಡುಕುವೆನೆಂದು ಭೂಮಿಗಿಳಿದು ಶಾಂತನುವಿನ ರೂಪ, ಕುಲ ಬಲ, ಚತುರತೆಗಳನ್ನು ಕೇಳಿ ಆತನನ್ನೇ ವರಿಸಬೇಕೆಂದು ಈ ಉಪಾಯವನ್ನು ಮಾಡಿದೆನೆಂದೂ ಹೇಳಲು ಶಾಂತನುವು ಆ ಬಾವಿಯಲ್ಲಿದ್ದ ಆಭರಣಗಳನ್ನು ಬಾಣ ಪ್ರಯೋಗದಿಂದ ತೆಗೆದುಕೊಟ್ಟನು. ಅದನ್ನು ನೋಡಿ ಆ ಲಕ್ಷ್ಮೀಮತಿಯು ಸಂತುಷ್ಟಳಾಗಿ ತನಗೆ ಹುಟ್ಟುವ ಮಕ್ಕಳನ್ನು ಗಂಗೆಯಲ್ಲಿ ಬಿಡುವುದಕ್ಕೂ ಆಮೇಲೆ

ತಾನು ದೀಕ್ಷೆಯನ್ನು ಪಡೆಯುವುದಕ್ಕೂ ಸಮ್ಮತಿಸಬೇಕೆಂದು ಶಾಂತನುವನ್ನು ಕೇಳಿಕೊಂಡಳು. ಶಾಂತನುವು ಅದಕ್ಕೆ ಸಮ್ಮತಿಸಿದನು. ಆ ವಿದ್ಯಾಧರಕುಮಾರಿಯು ಶಾಂತನುವನ್ನು ಕುರಿತು ' ನೀನು ಗಂಗಾನದಿಯ ದಡದಲ್ಲಿರುವ ವನಕ್ಕೆ ಬಾ. ನಾನು ಗಂಗೆಯ ಮಡುವಿನಿಂದ ಉದ್ಭವಿಸಿದಂತೆ ಬರುವೆನು '' ಎಂದು ಹೇಳಿ ತಾನು ಬರುವ ದಿವಸ ಸಮಯವನ್ನು ತಿಳಿಸಿ ಹೋಗಿ ಎಲ್ಲಾ ಸಮಾಚಾರವನ್ನು ತಂದೆಗೆ ತಿಳಿಸಲು ಆತನು ಸಂತೋಷಪಟ್ಟನು. ಲಕ್ಷ್ಮೀಮತಿಯು ತಾನು ಹೇಳಿದ್ದ ವೇಳೆಗೆ ಸರಿಯಾಗಿ ಗಂಗೆಯ ಮಡುವಿನಿಂದೆದ್ದು ಬಂದಳು. ಶಾಂತನುವು ವೈಭವದಿಂದಿದಿರ್ಗೊಂಡು ಕರೆತಂದು ಮದುವೆಯಾಗಿ ಆಕಗೆ ಗಂಗೆಯೆಂಬ ಹೆಸರನ್ನಿಟ್ಟು ಸಂತೋಷದಿಂದಿದ್ದನು. ಗಂಗೆಯು ತನಗೆ ಹುಟ್ಟಿದ ಎಂಟುಮಂದಿ ಮಕ್ಕಳನ್ನು ಗಂಗಾನದಿಗೆ ಹಾಕಿದಂತೆ ಮಾಡಿ ವಿದ್ಯಾಸಾಮರ್ಥ್ಯದಿಂದ ತನ್ನ ತಂದೆಯ ಬಳಿಗೆ ಅವುಗಳನ್ನು ಸಾಗಿಸಿದಳು. ಒಂಬತ್ತನೆಯ ಮಗುವನ್ನೂ ಸಾಗಿಸುತ್ತಿರಲು ಶಾಂತನುವು ತಾನೊಂದು ಮಗುವನ್ನು ಸಾಕುವೆನೆಂದು ಹೇಳಿ ಹಿಂದಿರುಗಿ ತರಿಸಿ ಆ ಮಗುವಿಗೆ ಭೀಷ್ಮನೆಂದೂ ಆ ಗಂಗೆ (ಲಕ್ಷ್ಮೀಮತಿ) ಯ ಪುತ್ರನಾದುದರಿಂದ ಗಾಂಗೇಯನೆಂದೂ ಹೆಸರನ್ನಿಟ್ಟು ಪ್ರೀತಿಯಿಂದ ಸಲಹುತ್ತಿದ್ದನು. ಗಾಂಗೇಯನು ರೂಪ ವಿಕ್ರಮಶಾಲಿಯಾಗಿ ಬೆಳೆಯುತ್ತಿರಲು ಲಕ್ಷ್ಮೀಮತಿಯು ತನ್ನ ವಿದ್ಯೆಗಳನ್ನೆಲ್ಲ ಕಲಿಸಿ ತನ್ನ ಪೂರ್ವಸಂಕಲ್ಪದಂತೆ ದೀಕ್ಷೆಯನ್ನು ಪಡೆದು ತಪಸ್ಸನ್ನು ಮಾಡಿ ಮಡಿದು ಅತುಲಸುಖನಿಲಯವಾದ ಅಚ್ಯುತವೆಂಬ ಹದಿನಾರನೆಯ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದಳು.

ಇತ್ತ ಶಾಂತನುವು ಒಂದು ದಿನ ರಾಜರುಗಳೊಡನೆ ಗಂಗಾನದೀತೀರಕ್ಕೆ ಹೋಗಿರಲು ಅಲ್ಲಿ ಸುಂದರಳಾದ ಓರ್ವ ತಾಪಸಕನ್ಯೆಯನ್ನು ಕಂಡು ಮೋಹಿತನಾಗಿ ಆಕೆಯನ್ನು ತನಗೆ ವಿವಾಹಮಾಡಿಕೊಡಬೇಕೆಂದು ಆಕೆಯ ತಂದೆ ವಸುವೆಂಬವನನ್ನು ಕೇಳಲಾಗಿ ಆತನು ವಯಸ್ಸು ಕಳೆದವರಿಗೆ ಹೆಣ್ಣನ್ನು ಕೊಡುವುದು ನ್ಯಾಯವಲ್ಲವೆನ್ನಲು ರಾಜನು ಕೇಳಿ ಪಟ್ಟಣಕ್ಕೆ ಬಂದು ವಿರಹತಾಪದಿಂದ ಆಯಾಸಗೊಂಡಿರಲು ಆ ವಿಷಯವನ್ನು ಭೀಷ್ಮನು ತಿಳಿದು ತಾಪಸಿಯಿದ್ದಲ್ಲಿಗೆ ಹೋಗಿ ತನ್ನ ತಂದೆಗೆ ಆತನ ಮಗಳನ್ನು ಕೇಳಿದನು. ಆ ತಾಪಸಿಯು " ಎಲೈ ಸುಕುಮಾರ ಭೀಷ್ಮನೆ! ನಿನ್ನ ತಂದೆಗೆ ನನ್ನ ಮಗಳನ್ನಿತ್ತರೆ ಆಕೆಯ ಮಕ್ಕಳೆಲ್ಲ ವಿಕ್ರಮಿಯಾದ ನಿನಗೆ ಭೃತ್ಯರಾಗುವರು. ಆದುದರಿಂದ ಕೊಡುವುದಿಲ್ಲ '' ಎಂದನು. ಆ ಮಾತನ್ನು ಕೇಳಿ ಭೀಷ್ಮನು ತನಗೀಭವಕ್ಕೆ ಬ್ರಹ್ಮಚರ್ಯವಿರಲೆಂದು ವ್ರತವನ್ನು ಕೈಕೊಂಡನು. ಆ ತಾಪಸಿಯು ಸಂತುಷ್ಟನಾಗಿ ತನ್ನ ಮಗಳು ಸತ್ಯವತಿಯನ್ನು

ಶಾಂತನುವಿಗೆ ಕೊಟ್ಟು ಮದುವೆಮಾಡಿದನು. ಆ ದಂಪತಿಗಳಿಗೆ ಚಿತ್ರವೀರ್ಯ ವಿಚಿತ್ರವೀರ್ಯರೆಂಬೀರ್ವರು ಮಕ್ಕಳು ಹುಟ್ಟಿದರು. ಒಂದು ದಿನ ಶಾಂತನುವು ತನ್ನ ಅಲ್ಪಸುಖಕ್ಕಾಗಿ ಭೀಷ್ಮನು ಬ್ರಹ್ಮಚಾರಿಯಾದನೆಂದು ಚಿಂತಿಸಿ ಇನ್ನೇಕೀಬಾಳ್ವೆಯೆಂದು ವೈರಾಗ್ಯದಿಂದ ಜಿನದೀಕ್ಷೆಯನ್ನು ಕೈಕೊಂಡನು.

ಇತ್ತ ಭೀಷ್ಮನು ಅನುಜರೊಡನೆ ಸುಖವಾಗಿರುವಾಗ ಚಿತ್ರವೀರ್ಯನು ಶತ್ರುರಾಜರಲ್ಲಿ ಕಾದಿ ಮಡಿದನು. ಭೀಷ್ಮನು ವಿಚಿತ್ರವೀರ್ಯನಿಗೆ ಮದುವೆಮಾಡಲೆಳಸಿ ಕಾಶೀರಾಜನ ಅಂಬಿಕೆ, ಅಂಬೆ, ಅಂಬಾಲೆಯೆಂಬ ಪುತ್ರಿಯರನ್ನು ಕೇಳಿಸಿದನು. ಆತನು ಕೊಡಲೊಪ್ಪದಿರಲು ಭೀಷ್ಮನು ದಂಡೆತ್ತಿಹೋಗಿ ಆತನನ್ನು ನೆಲಕ್ಕಿಕ್ಕಿ ಆ ಮೂವರು ಕನ್ಯೆಯರನ್ನೂ ತಂದು ತಮ್ಮನಿಗೆ ಮದುವೆಮಾಡಿದನು. ಆ ವಿಚಿತ್ರವೀರ್ಯನಿಗೆ ಅಂಬೆಯಲ್ಲಿ ಧೃತರಾಷ್ಟ್ರನೆಂಬ ಹುಟ್ಟುಗುರುಡನೂ, ಅಂಬಿಕೆಗೆ ಪಾಂಡುಕುಮಾರನೂ, ಅಂಬಾಲಿಕೆಗೆ ವಿದುರನೂ ಹುಟ್ಟಿದ ತರುವಾಯ ವಿಚಿತ್ರವೀರ್ಯನು ರೋಗದಿಂದ ಸತ್ತುಹೋದನು. ಭೀಷ್ಮನು ಆ ಮಕ್ಕಳನ್ನು ಸಾಕಿ ಕೀರ್ತಿಶಾಲಿಯಾದನು " ಎಂದು ಕುರುವಂಶದ ವಿಸ್ತಾರವನ್ನು ಹೇಳಿ ಅಂಧಕವೃಷ್ಟಿಯನ್ನು ಕುರಿತು ಪುನಃ ಆ ಮಂತ್ರಿಯು " ರಾಜನೆ! ವಿಚಿತ್ರವೀರ್ಯನ ಮಕ್ಕಳಿಗೆ ನಿನ್ನ ಪುತ್ರಿಯರನ್ನು ಕೇಳಲು ಭೀಷ್ಮನು ನಮ್ಮನ್ನು ಕಳುಹಿಸಿದನು " ಎಂದನು. ಆ ಮಾತನ್ನು ಕೇಳಿ ಅಂಧಕವೃಷ್ಟಿಯು " ನಿಮ್ಮ ಮೂವರು ರಾಜಕುಮಾರರಲ್ಲಿ ಜ್ಯೇಷ್ಠನಿಗೆ ನಮ್ಮ ಪುತ್ರಿಯರನ್ನು ಕೊಡುವೆವು ' ಎಂದನು. ಮಂತ್ರಿಯು " ದೊರೆತನಕ್ಕೆ ಧೃತರಾಷ್ಟ್ರನು ಕರ್ತ, ಅವನೇ ಜ್ಯೇಷ್ಠ " ಎಂದನು. ಆ ಮಾತನ್ನು ಕೇಳಿ ಅಂಧಕವೃಷ್ಟಿಯು ಧೃತರಾಷ್ಟ್ರನು ಹುಟ್ಟುಗುರುಡನಾದರೂ ದೊರೆತನಕ್ಕೆ ಅವನೇ ಕರ್ತನಾದುದರಿಂದ ಅವನಿಗೇ ತನ್ನ ಪುತ್ರಿಯರನ್ನು ಕೊಡಬೇಕೆಂದೆಣಿಸಿ ಮಂತ್ರಿಯನ್ನು ಕುರಿತು " ಧೃತರಾಷ್ಟ್ರನಿಗೆ ನರಪತಿವೃಷ್ಟಿಯ ಮಗಳನ್ನು ಕೊಡುವೆನು " ಎಂದನು. ಮಂತ್ರಿಯು ಸಂತುಷ್ಟನಾಗಿ ಹೊರಟುಹೋಗಿ ಭೀಷ್ಮನಿಗೆ ಆ ಸಮಾಚಾರವನ್ನು ಹೇಳಿದನು. ಭೀಷ್ಮನು ಆ ಮಾತನ್ನು ಕೇಳಿ ಸಂತುಷ್ಟನಾಗಿ ಶೌರೀಪುರಕ್ಕೆ ಹೋಗಿ ಧೃತರಾಷ್ಟ್ರನಿಗೆ ಗಾಂಧಾರಿಯನ್ನು ತಂದು ಮದುವೆಮಾಡಿದನು. ಅಂಧಕವೃಷ್ಟಿಯು ಬಳುವಳಿ ಕೊಟ್ಟುಕಳುಹಲು ಭೀಷ್ಮನು ಮದವಕ್ಕಳೊಡನೆ ಹಸ್ತಿನಾಪುರಕ್ಕೆ ಬಂದನು. ಮತ್ತೊಂದು ದಿನ ಭೀಷ್ಮನು ಪಾಂಡುವಿಗೆ ಕೊಂತಿಯನ್ನು ಕೇಳಲು ಮಂತ್ರಿಗಳನ್ನು ಕಳುಹಿಸಿದನು. ಅಂಧಕವೃಷ್ಟಿಯು ನೂತನಪಾಂಡುರೋಗಪೀಡಿತನಿಗೆ ಮಗಳನ್ನು ಕೊಡುವುದುಚಿತವಲ್ಲವೆಂದು ಹೇಳಲು ಅವನು

ಹೋಗಿ ಆ ವಾರ್ತೆಯನ್ನು ತಿಳಿಸಿದರು. ಆ ಮಾತನ್ನು ಕೇಳಿ ಕೊಂತಿಯ ರೂಪ ಲಾವಣ್ಯಕ್ಕೆ ಮೋಹಿತನಾಗಿ ಆ ಪಾಂಡುಕುಮಾರನು ಮರುಗುತ್ತಿದ್ದು ಒಂದು ದಿನ ನಗರದ ಬಹಿರುದ್ಯಾನಕ್ಕೆ ಹೋಗಿ ವಿಹರಿಸುತ್ತಿದ್ದನು. ಅಲ್ಲೊಬ್ಬ ಖೇಚರನು ತನ್ನ ಪತ್ನಿಯೊಡನೆ ಕ್ರೀಡಿಸುತ್ತಿದ್ದು ಕೈಬೆರಳಿನ ಮುದ್ರಿಕೆಯನ್ನು ಮರೆತುಬಿಟ್ಟು ಹೋಗಿದ್ದನು. ಅದನ್ನು ತೆಗೆದು ಪಾಂಡುರಾಜನು ತನ್ನ ಕೈಗಿಟ್ಟುಕೊಂಡಿರಲು ಆ ವಿದ್ಯಾಧರನು ಬಂದು ಅಲ್ಲಿ ಹುಡುಕುತ್ತಿರುವುದನ್ನು ನೋಡಿ ಪಾಂಡುಕುಮಾರನು "ನೀವು ಏನನ್ನು ಹುಡುಕುತ್ತಿರುವಿರಿ?" ಎಂದು ಕೇಳಿದನು. ಆ ವಿದ್ಯಾಧರನು "ಇಲ್ಲಿ ನನ್ನ ಕೈಯ ಮುದ್ರಿಕೆಯನ್ನು ಹುಡುಕುತ್ತಿರುವೆನು' ಎಂದನು. ಅದನ್ನು ಕೇಳಿ ಪಾಂಡುರಾಜನು ಮುದ್ರಿಕೆಯನ್ನು ಕೊಟ್ಟನು. ವಿದ್ಯಾಧರನು ಹರ್ಷಿತನಾಗಿ ಹೊಗಳಿ ಆ ಮುದ್ರಿಕೆಯು ಇಷ್ಟಾರ್ಥವನ್ನೀಯುವ ಶಕ್ತಿಯುಳ್ಳದೆಂದು ಹೇಳಿ ಮಂತ್ರವನ್ನುಪದೇಶಿಸಿ ತಾನು ಅಪೇಕ್ಷಿಸುವವರೆಗೂ ಅದು ನಿನ್ನಲ್ಲಿರಲೆಂದೂ ತಾನು ವಿಜಯಾರ್ಧಗಿರಿಯ ದಕ್ಷಿಣಶ್ರೇಣಿಯ ಕಿನ್ನರಗೀತವೆಂಬ ಪಟ್ಟಣದ ವಜ್ರಮಾಲಿಯೆಂಬ ರಾಜನೆಂದೂ ಹೇಳಿ ಹೊರಟುಹೋದನು.

ಇತ್ತ ಮುದ್ರಿಕೆಯ ಸಾಮರ್ಥ್ಯದಿಂದ ನೀರೋಗಿಯಾದ ಪಾಂಡುವು ಒಂದು ವಿಮಾನವನ್ನು ರಚಿಸಿ ತನ್ನ ಗೆಳೆಯರೊಡನೆ ಆಕಾಶಮಾರ್ಗದಲ್ಲಿ ಶೌರೀಪುರಕ್ಕೆ ಹೋಗಿ ಉದ್ಯಾನದಲ್ಲಿ ವಿಹರಿಸುತ್ತಿದ್ದನು. ಅಲ್ಲಿಗೆ ಕೊಂತಿಯು ನಾಲ್ವೀರನ್ನು ಮಿಂದು ಗೆಳತಿಯರೊಡನೆ ವನವಿಹಾರಾರ್ಥವಾಗಿ ಬಂದಿದ್ದು ಈ ಸುಂದರ ಪಾಂಡು ಕುಮಾರನನ್ನು ನೋಡಿ ಮನವೊಲಿದು ಈತನಾರೆಂದು ಸಖಿಯರನ್ನು ಕೇಳಿದಳು. ಅವರು ಧೃತರಾಷ್ಟ್ರನ ಮದುವೆಯಲ್ಲಿ ಬಂದಿದ್ದ ಗುರುತಿನಿಂದ ಆತನು ಕೊಂತಿಯ ಭಾವನಾದ ಪಾಂಡುಕುಮಾರನೆಂದರು. ಆ ಮಾತನ್ನು ಕೇಳಿ ಬಹು ಹರ್ಷಿತಳಾಗಿ ಅತ್ಯಾಸಕ್ತಿಯಿಂದ ನೋಡುತ್ತಿದ್ದಳು. ಆತನೂ ಆಕೆಯನ್ನು ನೋಡುತ್ತಿದ್ದನು. ಅವರ ಪರಸ್ಪರಾನುರಾಗವನ್ನು ಕಂಡು ಸಖಿಯರು ಅವರಿಗೆ ಗಾಂಧರ್ವ ವಿವಾಹವನ್ನು ಮಾಡಿದರು ಅವರಿಬ್ಬರೂ ಏಳೆಂಟು ದಿನಗಳವರೆಗೆ ಗುಪ್ತವಾಗಿ ಅನುರಕ್ತರಾಗಿದ್ದು ತರುವಾಯ ಪಾಂಡುಕುಮಾರನು ತನ್ನೂರಿಗೆ ಹೋದನು.

ಇತ್ತ ಕೊಂತಿಗೆ ಗರ್ಭಚಿಹ್ನೆಯು ತೋರಿ ದಿನದಿನಕ್ಕೆ ಬೆಳೆದು ಶುಭಲಗ್ನದಲ್ಲಿ ಗುಪ್ತವಾಗಿ ಗಂಡುಮಗುವನ್ನು ಹಡೆದಳು. ಆ ಶಿಶುವನ್ನು ಒಂದು ಮಂದಾಸಿನಲ್ಲಿ ರತ್ನರಾಶಿಯ ಮಧ್ಯದಲ್ಲಿಟ್ಟು ಚಂದ್ರವಂಶದ ಮಗುವೆಂದು ಬರೆದು ಆ ಮಂದಾಸನ್ನು ಸಖಿಯರು ಕಾಳಿಂದೀನದಿಯಲ್ಲಿ ಬಿಟ್ಟರು. ಅದು ಚಂಪಾಪುರದ

ಒಳಿಯಲ್ಲಿ ಓರ್ವ ಅಂಬಿಗನಿಗೆ ಸಿಕ್ಕಲು ಅವನು ಮನೆಗೊಯ್ದು ನೋಡುವಲ್ಲಿ ಆ ಮಗುವು ರತ್ನರಾಶಿಯ ನಡುವಿನಲ್ಲಿ ತನ್ನ ಎರಡು ಕೈಗಳನ್ನು ಕಿವಿಗಳಿಗಿಟ್ಟು ಬಂಗಾರದ ಪುತ್ಥಳಿಯಂತೆ ಶೋಭಿಸುವುದನ್ನು ಕಂಡು ಸಂತುಷ್ಟನಾಗಿ ಕರ್ಣನೆಂದು ಮಗುವಿಗೆ ಹೆಸರನ್ನಿಟ್ಟು ಸಾಕುತ್ತಿದ್ದನು. ಆ ಸಮಾಚಾರವನ್ನು ಆ ನಗರದ ಸೂರ್ಯನೆಂಬ ರಾಜನು ಕೇಳಿ ತಾನು ಅಪುತ್ರವಂತನಾದುದರಿಂದ ಆ ಮಗುವನ್ನೂ ಮಂದಾಸನ್ನೂ ತರಿಸಿ ಅದರಲ್ಲಿ ಚಂದ್ರವಂಶದವನೆಂದು ಬರೆದಿದ್ದುದನ್ನು ನೋಡಿ ಬಹಳ ಸಂತೋಷಪಟ್ಟು ತನ್ನ ಹೆಂಡತಿ ರಾಧೆಗೆ ಕೊಟ್ಟು ಚೆನ್ನಾಗಿ ಸಾಕುತ್ತಿರಲು ಅದು ಪ್ರಾತಃಸಂಧ್ಯೆಯ ಬೆಳಕಿನಂತೆ ಬೆಳೆಯುತ್ತಿದ್ದಿತು.



## ೬. ಪಾಂಡು ಕೊಂತಿ ಮಾದ್ರಿವಿವಾಹ ಸಂಧಿ.



ಅತ್ತ ಸೂರ್ಯರಾಜನೂ ರಾಧೆಯೂ ಕರ್ಣನನ್ನು ಸಾಕುತ್ತಿರಲು ಇತ್ತ ಕೊಂತಿಯ ರಹಸ್ಯಕಾರ್ಯವು ಹೊರಬೀಳಲು ತಂದೆ-ಅಂಧಕವೃಷ್ಟಿಯು ಚಿಂತಾಕ್ರಾಂತನಾಗಿ ಯೋಚಿಸಿ ಇನ್ನು ಕೊಂತಿಯನ್ನು ಪಾಂಡುವಿಗೆ ಕೊಟ್ಟು ಮದುವೆ ಮಾಡುವುದೇ ಲೇಸೆಂದೆಣಿಸಿ ಭೀಷ್ಮನಿಗೆ ಹೇಳಿಕಳುಹಿದನು. ಅದನ್ನು ಕೇಳಿ ಪಾಂಡುವು ಮಾದ್ರಿಯನ್ನೂ ಕೊಡುವುದಾದರೆ ಕೊಂತಿಯನ್ನು ಮದುವೆಯಾಗುವುದಾಗಿ ಹೇಳಲು ಹಾಗೆಯೇ ಆಗಲೆಂದು ಅಂಧಕವೃಷ್ಟಿಯು ಇಬ್ಬರನ್ನೂ ಕೊಟ್ಟು ಮದುವೆಮಾಡಿ ಬಳುವಳಿಯನ್ನು ಕೊಟ್ಟು ಕಳುಹಿದನು. ಧೃತರಾಷ್ಟ್ರ ಪಾಂಡು ಕುಮಾರರು ಸುಖದಿಂದಿರುವಾಗ ಒಂದು ದಿನ ಭೀಷ್ಮನು "ರಾಜ್ಯವನ್ನು ಹಿರಿಯನಿಗೆ ಕೊಡಬೇಕೆಂದರೆ ಆತನು ಕುರುಡ; ಹಿರಿಯನಿರುವಾಗ ಕಿರಿಯನಿಗೆ ಕೊಡತಕ್ಕದ್ದೂ ಅಲ್ಲ" ಎಂದು ಸಚಿವರಲ್ಲಿ ಆಲೋಚಿಸಿ ರಾಜ್ಯವನ್ನು ಧೃತರಾಷ್ಟ್ರ ಪಾಂಡುರಾಜರಿಬ್ಬರಿಗೂ ಹಂಚಿಕೊಟ್ಟು ಬಾಲಕನಾಗಿದ್ದ ವಿದುರನನ್ನು ತಾನು ಸಾಕುತ್ತಿದ್ದನು. ಅವರೀರ್ವರೂ ಸುಖದಿಂದ ರಾಜ್ಯವಾಳುತ್ತ ವಸಂತರ್ತುವಿನಲ್ಲಿ ಒಂದು ದಿನ ಪಾಂಡುವು ಮಾದ್ರಿಯೊಡನೆ ವಿಮಾನವನ್ನೇರಿ ವನಕ್ಕೆ ಹೋಗಿ ದಂಪತಿಗಳು ರತಿಕ್ರೀಡೆಯನ್ನಾಡಿ ಬಳಿಕ ಪಾಂಡುಕುಮಾರನು ದಿಕ್ಕುಗಳನ್ನು ನೋಡುತ್ತಿರುವಾಗ ಮುಂದೆ ಎರಡು ಹುಲ್ಲೆಗಳು ಓಡಾಡುತ್ತಿರುವುದನ್ನು ಕಂಡು ಕೋಪದಿಂದ ಬಾಣಪ್ರಯೋಗವನ್ನು ಮಾಡಿ ಕೊಂದನು. ದಯೆಯಿಲ್ಲದೆ ಆ ಮೃಗಗ

ಳನ್ನು ಕೊಂದುದನ್ನು ನೋಡಿ ಮಾದ್ರಾದೇವಿಯು ಮರುಕದಿಂದ "ನಿರಪರಾಧಿಗಳಾದ ಮೃಗಗಳನ್ನು ದಯೆಯಿಲ್ಲದೆ ವಿಪರೀತವ್ಯಾಪಾರದಿಂದ ಕೊಲ್ಲುವುದು ರಾಜರ ಒಳ್ಳೆಯ ನಡತೆಯೇ?' ಎನ್ನಲು ಆ ಮಾತು ಮನಸ್ಸಿಗೆ ನಾಟಿ ಬಿಲ್ಲು ಬಾಣಗಳನ್ನು ಬಿಸಾಟು ಪಾಂಡುವು ದಯಾರ್ದ್ರಹೃದಯನಾಗಿರುವ ವೇಳೆಯಲ್ಲಿ ಅಲ್ಲಿಗೋರ್ವ ದಿವ್ಯಜ್ಞಾನಿಯಾದ ಮುನಿಯು ಬರಲು ಆ ದಂಪತಿಗಳು ಆತನ ಬಳಿಗೆ ಹೋಗಿ ಭಕ್ತಿಯಿಂದ ವಂದಿಸಿ ಕೈಮುಗಿದು ಪಾಂಡುರಾಜನು "ಎಲೆ ಮುನಿಪತಿಯೆ! ಎರಡು ಜಿಂಕೆಗಳನ್ನು ಕಂಡು ನನಗೆ ಕೋಪಬರಲು ಕಾರಣವೇನು?" ಎಂದು ಕೇಳಿದನು. ಆ ಮುನಿಯು "ಕುರುಣಿಯೆಂಬ ಅಗ್ರಹಾರದಲ್ಲಿ ವಟುಕನೆಂಬ ಬ್ರಾಹ್ಮಣನೂ ಅವನಿಗೆ ಅಗ್ನಿಲೆಯೆಂಬ ಪತ್ನಿಯೂ ಇದ್ದರು. ಅವರಿಗೆ ನೀನು ದಾರಕನೆಂಬ ಮಗನಾಗಿ ಯಾವಾಗಲೂ ವೇದವನ್ನೋದುತ್ತಿರಲು ಜಿನಮಾರ್ಗದಲ್ಲಿ ನಿನಗೆ ಆಸಕ್ತಿಯು ಹುಟ್ಟಿತು. ವೇದವೋದುವುದನ್ನು ಬಿಟ್ಟು ಅಹಿಂಸಾದಿ ಪಂಚಾಣುವ್ರತಗಳನ್ನು ಧರಿಸಿ ನಿಶ್ಚಿಂತನಾಗಿ ವಸಂತಮಾಲೆಯೆಂಬೋರ್ವ ವನಿತೆಯೊಡನೆ ಕೂಡಿರಲು ಅದು ದ್ವಿಜವಂಶಕ್ಕೆ ಕುಂದಕವಾಯಿತೆಂದು ಕೋಪದಿಂದ ವಟುಕನು ಬಂದು ಧಿಕ್ಕರಿಸಿದರೂ ನೀನು ಆ ಸೂಳೆಯೊಡನೆ ಪ್ರೀತಿಯಿಂದಿದ್ದು ಒಂದುದಿನ ಆ ಊರಿನ ನಂದನವನಕ್ಕೆ ಹೋಗಿ ರತಿಕ್ರೀಡೆಯನ್ನು ಮಾಡುತ್ತಿರುವಾಗ ಆ ವಟುಕನು ಬಂದು ಕೋಪದಿಂದ ಖಡ್ಗವನ್ನು ತೆಗೆದುಕೊಂಡು ಇರಿದು ಕೊಲ್ಲಲು ನೀನು ಆ ವ್ರತದ ಫಲದಿಂದ ಪಾಂಡುಕುಮಾರನಾಗಿ ಹುಟ್ಟಿದೆ. ಆ ವಟುಕನು ಮಾಡಿದ ಅನ್ಯಾಯವನ್ನು ತಿಳಿದು ಆ ನಗರದ ಹಾರವರೆಲ್ಲ ಅವನನ್ನು ಬಹಿಷ್ಕರಿಸಲು ಅವನು ಆರ್ತಧ್ಯಾನದಿಂದ ಮಡಿದು ಹರಿಣನಾದನು. ನಿನಗೆ ಅದನ್ನು ನೋಡಿದ ಕೂಡಲೆ ಕೋಪಬಂದು ಅದನ್ನು ಕೊಂದುಹಾಕಿದೆ." ಎಂದುಹೇಳಿ ಶ್ರೇಷ್ಠವಾದ ಧರ್ಮೋಪದೇಶವನ್ನೂ ಮಾಡಿದರು. ಅದನ್ನು ಕೇಳಿ ದಂಪತಿಗಳು ಹರ್ಷಿತರಾಗಿ ನಗರಕ್ಕೆ ಬಂದು ಧರ್ಮೋದ್ಯೋಗದಲ್ಲಿ ಆಸಕ್ತರಾಗಿರಲು ಕೊಂತಿಯ ಗರ್ಭದಲ್ಲಿ ಅಚ್ಯುತಸ್ವರ್ಗದಿಂದ ದೇವನು ಚ್ಯುತನಾಗಿ ಬಂದು ಶುಭಲಗ್ನದಲ್ಲಿ ಪುತ್ರನಾಗಿ ಹುಟ್ಟಿದನು. ಆಶಿಶುವಿಗೆ ಹತ್ತನೆಯ ದಿವಸ ಯುಧಿಷ್ಠಿರನೆಂದೂ ಧರ್ಮೋದ್ಯೋಗದಲ್ಲಿರುವಾಗ ಹುಟ್ಟಿದುದರಿಂದ ಧರ್ಮಜನೆಂದೂ ಹೆಸರನ್ನಿಟ್ಟು ಪಾಂಡುರಾಜನು ಸಂತೋಷಚಿತ್ತನಾಗಿದ್ದನು. ತರುವಾಯ ಅಚ್ಯುತಸ್ವರ್ಗದಿಂದ ಮತ್ತೋರ್ವ ದೇವನು ಚ್ಯುತನಾಗಿ ಬಂದು ಕೊಂತಿಯ ಗರ್ಭದಲ್ಲಿ ಜನಿಸಿ ಒಂಬತ್ತನೆಯ ತಿಂಗಳಲ್ಲಿ ಮೂಲನಕ್ಷತ್ರದಲ್ಲಿ ಹುಟ್ಟಿದನು. ಅದು ಅನಿಷ್ಟವೆಂದು ಬಗೆದು

ಬಂಧುಗಳು ಪಾಂಡುವಿಗೆ ಹೇಳದೆ ಆ ಮಗುವನ್ನು ಸುಡುಗಾಡಿನಲ್ಲಿ ಹಾಕಿಸಿದರು. ಆ ಮಗುವಿನ ಪುಣ್ಯದೇವತೆಯು ಸುಂಟರಗಾಳಿಯ ಆಕಾರದಿಂದ ಅದನ್ನು ಬಳಸಿ ರಕ್ಷಿಸಿದ್ದಿತು. ಆ ವಿಷಯವನ್ನು ಪಾಂಡುರಾಜನು ತಿಳಿದು ಮಸಾಣಕ್ಕೆ ಹೋಗಲು ಆ ಸುಂಟರಗಾಳಿಯು ಬೈಲಾದುದು. ಮಗನ ಪುಣ್ಯಪ್ರಭಾವವನ್ನು ಕಂಡು ಸಂತೋಷಪಟ್ಟು ಅದನ್ನು ಮನೆಗೆ ತೆಗೆದುಕೊಂಡು ಬಂದು ಆ ಮಗುವಿಗೆ ಜಾತಕರ್ಮವನ್ನು ಮಾಡಿದನು. ಭೀಮ—ಭಯಂಕರ ಶ್ಮಶಾನದಲ್ಲಿ ಗಾಳಿಯಿಂದ ಆ ಮಗುವು ರಕ್ಷಿಸಲ್ಪಟ್ಟಿದ್ದುದರಿಂದ ಭೀಮನೆಂದೂ ವಾಯುಕುಮಾರನೆಂದೂ ಹೆಸರನ್ನಿಟ್ಟನು. ತದನಂತರ ಅಚ್ಯುತಸ್ವರ್ಗದಿಂದ ಇನ್ನೊಬ್ಬ ದೇವನು ಚ್ಯುತನಾಗಿ ಬಂದು ಕೊಂತಿಯ ಗರ್ಭದಲ್ಲಿ ಜನಿಸಿ ನವಮಾಸ ತುಂಬಿದಮೇಲೆ ಉತ್ತಮಲಗ್ನದಲ್ಲಿ ಇಂದ್ರವೈಭವದಿಂದ ಜನಿಸಿದನು. ಹತ್ತನೆಯ ದಿವದಲ್ಲಿ ಆ ಮಗುವಿಗೆ ಅರ್ಜುನನೆಂದೂ ಇಂದ್ರಸುತನೆಂದೂ ನಾಮಕರಣಮಾಡಿ ಪಾಂಡುರಾಜನು ಸಂತೋಷದಿಂದಿದ್ದನು. ಚರಮಶರೀರಿಗಳೂ ಅನುಪಮಶಕ್ತಿಸಂಪನ್ನರೂ ಆದ ಆ ಮೂವರೂ ಬೆಳೆಯುತ್ತಿದ್ದರು. ಮತ್ತೆ ಆ ಅಚ್ಯುತಸ್ವರ್ಗದಿಂದ ಇಬ್ಬರು ದೇವತೆಗಳು ಚ್ಯುತರಾಗಿ ಬಂದು ಪಾಂಡುವಿನ ಕಿರಿಯ ಹೆಂಡತಿ ಮಾದ್ರಿಯ ಗರ್ಭದಲ್ಲಿ ಜನಿಸಿ ನವಮಾಸತುಂಬಲು ಉತ್ತಮಲಗ್ನದಲ್ಲಿ ಅವಳಿಮಕ್ಕಳಾಗಿ ಹುಟ್ಟಿದರು. ಅವರಿಗೆ ನಕುಲ ಸಹದೇವರೆಂದು ನಾಮಕರಣಮಾಡಿದನು. ಅವರೈವರೂ ಮಹಾಬಲಶಾಲಿಗಳಾಗಿ ಬೆಳೆಯುತ್ತಿರಲು ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ಒಬ್ಬಮಗನು ಹುಟ್ಟಿದನು. ಅವನಿಗೆ ದುರ್ಯೋಧನನೆಂದು ನಾಮಕರಣಮಾಡಿದರು. ತರುವಾಯ ದುಶ್ಶಾಸನ, ದುರ್ದರ್ಶನ, ದುರ್ಮರ್ಷಣ ಮೊದಲಾದ ನೂರುಮಂದಿ ಮಕ್ಕಳು ಹುಟ್ಟಿದರು. ಆಮೇಲೆ ದುಶ್ಶಲ್ಯೆಯೆಂಬ ಮಗಳು ಹುಟ್ಟಿದಳು. ಆಕೆಯನ್ನು ಸಿಂಧುದೇಶದ ಸೈಂಧವರಾಜನಿಗೆ ಮದುವೆಮಾಡಿ ಕೊಟ್ಟರು. ಪಾಂಡುವಿನ ಐವರು ಮಕ್ಕಳೂ ಧೃತರಾಷ್ಟ್ರನ ನೂರುಮಂದಿ ಮಕ್ಕಳೂ ಯಾವಾಗಲೂ ಕಾದಾಡುತ್ತಲೇ ಇದ್ದರು.

## ೭. ಅಂಧಕವೃಷ್ಟಿ ಭವಾವಳಿ ಸಂಧಿ.

ಇತ್ತ ಅಂಧಕವೃಷ್ಟಿಯು ರಾಜ್ಯವಾಳುತ್ತ ಹನ್ನೆರಡು ವರುಷಗಳು ಕಳೆಯುತ್ತಿರಲು ಒಂದುದಿನ ಗಂಧಮಾದನಪರ್ವತದ ತಪ್ಪಲಲ್ಲಿ ಸುಪ್ರತಿಷ್ಠಮುನಿಯು ಯೋಗಾರೂಢನಾಗಿರುವಾಗ ಪೂರ್ವಜನ್ಮದ ವೈರಿಯಾದ ಸುದರ್ಶನನೆಂಬ ದೈತ್ಯ

ನು ಬಂದು ಆ ಮುನಿಗೆ ಉಪಸರ್ಗಮಾಡಿದನು. ಅದರಿಂದ ಮುನಿಯು ಕರ್ಮವು ಸವೆದು ಶುಕ್ಲಧ್ಯಾನವು ಪ್ರಾಪ್ತವಾಯ್ತು. ಆಗ ದೇವತೆಗಳು ಬಂದು ಪೂಜಿಸಿದರು. ಅಂಧಕವೃಷ್ಟಿಯೂ ಆ ಯೋಗಿವರ್ಯನ ಗಂಧಕುಟಿಮಂಟಪಕ್ಕೆ ಬಂದು ಪೂಜಿಸಿ ವಂದಿಸಿ ಆ ಧನುಜನು ಬಾಧೆಪಡಿಸಲು ಕಾರಣವೇನೆಂದು ಕೇಳಿದನು. ಆ ಯೋಗಿಯು ಉತ್ತರವನ್ನು ಹೇಳುತ್ತಾನೆ— ಜಂಬೂದ್ವೀಪದ ಭರತಕ್ಷೇತ್ರದ ಕಾಂಚೀಪುರದಲ್ಲಿ ಸೂರದತ್ತ ಸುದತ್ತರೆಂಬಿಬ್ಬರು ವರ್ತಕರಿದ್ದರು. ಅವರು ವ್ಯಾಪಾರನಿಮಿತ್ತವಾಗಿ ಪರದೇಶಕ್ಕೆ ಹೋಗಿ ವ್ಯಾಪಾರವನ್ನು ಮಾಡಿಕೊಂಡು ಹಿಂದಿರುಗಿ ಬಂದು ತಮ್ಮ ಹೆಚ್ಚು ಸಾಮಾನುಗಳಿಗೆ ಸುಂಕದವರು ಹೆಚ್ಚು ಸುಂಕವನ್ನು ವಸೂಲುಮಾಡುವರೆಂದು ಯೋಚಿಸಿ ಪಟ್ಟಣದ ಹೊರಗೆ ಒಂದು ಪೊದರಿನಲ್ಲಿ ತಾವು ತಂದ ರತ್ನವನ್ನೆಲ್ಲ ಹುಗಿದಿಟ್ಟು ಹೋದರು. ಅಲ್ಲಿಗೊಬ್ಬ ಬೆಸ್ತರವನು ಔಷಧಿಮೂಲಿಕೆಯನ್ನು ಹುಡುಕುವುದಕ್ಕಾಗಿ ಬಂದು ಆ ಪೊದರನ್ನು ಅಗೆದು ನೋಡುವಲ್ಲಿ ಆ ರತ್ನರಾಶಿಯು ದೃಷ್ಟಿಗೋಚರವಾಯ್ತು. ಅದನ್ನೆಲ್ಲ ಮನೆಗೊಯ್ದನು. ಮರುದಿನ ಆ ವರ್ತಕರು ಬಂದು ನೋಡುವಾಗ ತಾವು ಹೂಳಿಟ್ಟಿದ್ದ ದ್ರವ್ಯವಿಲ್ಲದಿರಲು ಪರಸ್ಪರವಾಗಿ ಸಂಶಯಪಟ್ಟು ಕೋಪದಿಂದ ಹೊಡೆದಾಡಿಕೊಂಡು ಸತ್ತು ಮೊದಲನೆಯ ನರಕದಲ್ಲಿ ಹುಟ್ಟಿ ಅಲ್ಲಿಯೂ ಪರಸ್ಪರವಾಗಿ ಕಾದಾಡುತ್ತ ದುಃಖವನ್ನನುಭವಿಸಿ ಸತ್ತು ಕುರಿಯ ಹಿಂಡಿನಲ್ಲಿ ಟಗರುಗಳಾಗಿ ಹುಟ್ಟಿ ಬೆಳೆದು ಪರಸ್ಪರವಾಗಿ ಹೋರಾಡಿ ಮಡಿದು ಗಂಗಾನದೀತೀರದಲ್ಲಿ ಹೋರಿಗಳಾಗಿ ಜನಿಸಿ ಬೆಳೆದು ಕಾದಾಡಿ ಸತ್ತು ಸಮ್ಮೇದಶಿಖರಿಯಲ್ಲಿ ಕಪಿಗಳಾಗಿ ಹುಟ್ಟಿ ಅಲ್ಲಿಯೂ ಒಂದಕ್ಕೊಂದು ಕಚ್ಚಾಡಿ ಅವುಗಳಲ್ಲಿ ಒಂದು ಕಪಿಯು ಸತ್ತುಹೋಯ್ತು. ಮತ್ತೊಂದು ಕಂಠಗತಪ್ರಾಣವಾಗಿರುವಾಗ ಆಕಾಶಮಾರ್ಗದಿಂದ ಸುರಗುರುದೇವಗುರುಗಳೆಂಬ ಚಾರಣಮುನಿಗಳು ಬಂದು ಆ ಕಪಿಯು ಆಸನ್ನಭವ್ಯಜೀವವೆಂದು ದಿವ್ಯಜ್ಞಾನದಿಂದ ತಿಳಿದು ದಯೆಯಿಂದ ಅದಕ್ಕೆ ತಮ್ಮ ಕಮಂಡಲದ ನೀರನ್ನೆರಚಿ "ಎಲೈ ಮರ್ಕಟನೆ! ಧರ್ಮಶೂನ್ಯನಾಗಿ ನೀನು ಕೋಪವನ್ನು ಹೊಂದಿ ದುರ್ಗತಿಗೆ ಹೋಗುವುದನ್ನು ಬಿಟ್ಟು ಸದ್ಗತಿಗೆ ಹೋಗುವ ಸಮತಾಭಾವವನ್ನು ಹೊಂದು." ಎಂದುಪದೇಶಿಸಿ ಸನ್ಯಸನವ್ರತವನ್ನು ಕೊಡಲು ಅದು ಕೈಕೊಂಡು ಕಣ್ಣುಬಿಟ್ಟು ನೋಡಿತು. ಆಗ ಮುನಿಗಳು ಅದರ ಕಿವಿಯಲ್ಲಿ "ಓಂ ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಇರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸವ್ವಸಾಹೂಣಂ" ಎಂಬೀ ಪಂಚನಮಸ್ಕಾರಮಂತ್ರಗಳನ್ನುಪದೇ

ಶಿಸಲು ಅದನ್ನು ಆಲಿಸಿ ಕೇಳಿ ಮಡಿದು ಸೌಧರ್ಮವೆಂಬ ಮೊದಲ ಸ್ವರ್ಗದಲ್ಲಿ ಚಿತ್ರಾಂಗದನೆಂಬ ದೇವನಾಗಿ ಹುಟ್ಟಿ ಸುಖವನ್ನನುಭವಿಸಿ ಅಲ್ಲಿಂದ ಬಂದು ಭರತ ಕ್ಷೇತ್ರದ ಕಾಂಚೀಪುರದಲ್ಲಿ ಜಿತಸೇನರಾಜನಿಗೂ, ಸುಭದ್ರಾದೇವಿಗೂ ಸಾಗರಸೇನನೆಂಬ ಮಗನಾಗಿ ಹುಟ್ಟಿ ಬೆಳೆದು ಮಂಡಲಿಕರಾಜನಾಗಿ ಒಂದುದಿನ ವನವಿಹಾರಾರ್ಥವಾಗಿ ಹೋಗಿ ಅಲ್ಲಿ ಕಪಿಗಳು ಜಗಳವಾಡುತ್ತಿರುವುದನ್ನು ಕಂಡು ಭವಸ್ಮರಣೆಯಾಗಲು ವೈರಾಗ್ಯದಿಂದ ದೀಕ್ಷೆಯನ್ನು ಪಡೆದು ತಪಸ್ಸುಮಾಡಿ ಮಡಿದು ಗ್ರೈವೇಯಕವೆಂಬ ಸ್ವರ್ಗದಲ್ಲಿ ಅಹಮಿಂದ್ರನಾಗಿ ಹುಟ್ಟಿ ಸುಖವನ್ನನುಭವಿಸಿ ಬಂದು ಸುರಮ್ಯದೇಶದ ಪೌದನಪುರದ ದೊರೆ ಸುಸ್ಥಿರನಿಗೂ ಲಕ್ಷ್ಮಣೆಗೂ ಸುಪ್ರತಿಷ್ಠನೆಂಬ ಮಗನಾಗಿ ಜನಿಸಿ ಬೆಳೆದು ಸೂರ್ಯಾಸ್ತಮಾನವನ್ನು ಕಂಡು ವೈರಾಗ್ಯಗೊಂಡು ದೀಕ್ಷೆಯನ್ನು ಪಡೆದು ಕರ್ಮವನ್ನು ಸಮೆಯಿಸಿದ ನಾನೇ ಆ ಸೂರದತ್ತನೆಂಬ ವರ್ತಕನ ಜೀವವು.

ಅತ್ತ ಆ ಸುದತ್ತನೆಂಬ ವರ್ತಕನು ಕೋತಿ, ನರಿ, ನಾಯಿ, ಹಂದಿ, ಮೊದಲಾದ ಅನೇಕ ಭವಗಳಲ್ಲಿ ತಿರುಗಿ ಬಂದು ಸಿಂಧುನದೀತೀರದ ಋಷಿಗಳ ಹಳ್ಳಿಯಲ್ಲಿ ಮೃಗಾಯಣನಿಗೂ ವಿಶಾಖೆಗೂ ಗೌತಮನೆಂಬ ಮಗನಾಗಿ ಹುಟ್ಟಿ ತಪಸ್ವಿಯಾಗಿ ಸತ್ತು ಸುದರ್ಶನನೆಂಬ ಜ್ಯೋತಿಷ್ಕದೇವನಾಗಿ ಹುಟ್ಟಿ ಈಗ ನಮಗೆ ಈ ಬಾಧೆಯನ್ನು ಕೊಟ್ಟನು ಎಂದು ಸುಪ್ರತಿಷ್ಠಯೋಗೀಶ್ವರರು ಅಂಧಕವೃಷ್ಟಿಗೆ ಹೇಳಲು ಆ ಮಾತನ್ನು ಸುದರ್ಶನನು ಕೇಳಿ ನೊಂದು ಅವರಲ್ಲಿ ಸುದರ್ಶನವೆಂಬ ವ್ರತವನ್ನು ಕೈಕೊಂಡನು. ತರುವಾಯ ಅಂಧಕವೃಷ್ಟಿಯು ತನ್ನ ಪೂರ್ವಭವವೃತ್ತಾಂತವನ್ನು ಆ ಯೋಗೀಶ್ವರರಲ್ಲಿ ಕೇಳಲು ಅವರು ಇಂತೆಂದರು—

ಕೌಶಲದೇಶದ ಅಯೋಧ್ಯಾನಗರದಲ್ಲಿ ಜಿನೇಂದ್ರದತ್ತನೆಂಬ ವರ್ತಕನು ದಿನಕ್ಕೆ ನೂರು ಹೊನ್ನುಗಳಿಂದ ದೇವಪೂಜೆಮಾಡುತ್ತಿದ್ದನು. ಒಂದು ದಿನ ಹಡಗಿನ ವ್ಯಾಪಾರಕ್ಕೆ ಹೋಗಲೆಳಸಿ ರುದ್ರದತ್ತನೆಂಬ ಹಾರವನನ್ನು ಕರೆದು ಪ್ರತಿದಿನ ನೂರು ಹೊನ್ನುಗಳಿಂದ ದೇವಪೂಜೆಮಾಡುವಂತೆ ನೇಮಿಸಿ ಹನ್ನೆರಡು ವರುಷಗಳಿಗಾಗುವಷ್ಟು ದ್ರವ್ಯವನ್ನಿತ್ತು ಹಡಗೇರಿಹೋದನು. ಇತ್ತ ರುದ್ರದತ್ತನು ದೇವದ್ರವ್ಯವನ್ನು ದುರ್ವಿನಿಯೋಗಪಡಿಸಬಾರದೆಂದು ಭಾವಿಸದೆ ವೇಶ್ಯಾಲಂಪಟನಾಗಿ ಆ ದ್ರವ್ಯವನ್ನು ವ್ಯಯಮಾಡುತ್ತಿರಲು ಅವನು ಮಹಾಪಾತಕಿಯೆಂದು ರಾಜದೂತರು ಅವನನ್ನು ಊರಿಂದ ತಳ್ಳಿದರು. ಅವನು ಒಂದು ವನದಲ್ಲಿ ಬೇಡರೊಡನೆ ಸೇರಿ ಒಂದುದಿನ ಆ ನಗರದ ದನಗಳನ್ನು ಕದಿಯಲು ಬೇಡರೊಡನೆ ಬಂದು ಪುರನಿವಾಸಿ

ಗಳ ಕೈಗೆ ಸಿಕ್ಕಿ ಅವರಿಂದ ಕೊಲ್ಲಲ್ಪಟ್ಟು ಸಪ್ತಮನರಕದಲ್ಲಿ ಜನಿಸಿ ಮೂವತ್ತು ಮೂರು ಸಾಗರೋಪಮಕಾಲದವರೆಗೆ ದುಃಖವನ್ನನುಭವಿಸಿ ಬಂದು ಲವಣಸಮುದ್ರದಲ್ಲಿ ತಿಮಿಂಗಿಲ—ಮೀನಾಗಿ ಹುಟ್ಟಿ ಅಲ್ಲಿ ಸತ್ತು ಆರನೆಯ ನರಕದಲ್ಲಿ ಹುಟ್ಟಿ ಇಪ್ಪತ್ತೆರಡು ಸಾಗರೋಪಮಕಾಲದವರೆಗೆ ದುಃಖವನ್ನುಂಡು ಬಂದು ಅದೇ ಸಮುದ್ರದಲ್ಲಿ ಪುನಃ ಮೀನಾಗಿ ಜನಿಸಿ ಅನೇಕ ಮೀನುಗಳನ್ನು ತಿಂದು ಆಯುಷ್ಯವು ತೀರಿದಮೇಲೆ ಸತ್ತು ಐದನೆಯ ನರಕದಲ್ಲಿ ಹುಟ್ಟಿ ಹದಿನೇಳು ಸಾಗರೋಪಮಕಾಲದವರೆಗೆ ದುಃಖವನ್ನುಂಡು ಬಂದು ಸಿಹ್ಮವಾಗಿ ಹುಟ್ಟಿ ಅನೇಕ ಮೃಗಗಳನ್ನು ಕೊಂದು ತಿಂದು ಸತ್ತು ನಾಲ್ಕನೆಯ ನರಕದಲ್ಲಿ ಹುಟ್ಟಿ ಹತ್ತು ಸಾಗರೋಪಮಕಾಲದವರೆಗೆ ದುಃಖವನ್ನನುಭವಿಸಿ ಬಂದು ದೃಷ್ಟಿವಿಷದ ಹಾವಾಗಿ ಹುಟ್ಟಿ ಬಹು ಪಾಪವನ್ನು ಸಂಗ್ರಹಿಸಿಕೊಂಡು ಸತ್ತು ಮೂರನೆಯ ನರಕದಲ್ಲಿ ಜನಿಸಿ ಏಳು ಸಾಗರೋಪಮಕಾಲದವರೆಗೆ ದುಃಖವನ್ನುಂಡು ಬಂದು ಶಾರ್ದೂಲನಾಗಿ ಹುಟ್ಟಿ ಅನೇಕ ಪ್ರಾಣಿಗಳನ್ನು ಕೊಂದು ತಿಂದ ಪಾಪದಿಂದ ಸತ್ತು ಎರಡನೆಯ ನರಕದಲ್ಲಿ ಹುಟ್ಟಿ ಮೂರು ಸಾಗರೋಪಮಕಾಲದವರೆಗೆ ದುಃಖವನ್ನುಂಡು ಬಂದು ಗರುಡನಾಗಿ ಹುಟ್ಟಿ ಅನೇಕ ಜೀವಜಂತುಗಳನ್ನು ಕೊಂದು ತಿಂದು ಸತ್ತು ಪಾಪವಶದಿಂದ ಒಂದನೆಯ ನರಕದಲ್ಲಿ ಹುಟ್ಟಿ ಒಂದು ಸಾಗರೋಪಮಕಾಲದವರೆಗೆ ದುಃಖವನ್ನುಂಡು ಬಂದು ಗಂಡಭೇರುಂಡಪಕ್ಷಿಯಾಗಿ ಜನಿಸಿ ಅನೇಕ ಜೀವಗಳನ್ನು ಕೊಂದು ಮಡಿದು ಅನೇಕ ಕುಯೋನಿಗಳಲ್ಲಿ ಹುಟ್ಟಿ ಸತ್ತು ಕೊನೆಯಲ್ಲಿ ಕರ್ಮೋಪಶಮದಿಂದ ಕುರುಜಾಂಗಣದೇಶದ ಹಸ್ತಿನಾಪುರದಲ್ಲಿ ಗೌತಮಕುಲದ ಕೌಶಿಷ್ಟನೆಂಬ ತಾಪಸಿಗೂ ಆತನ ಸೌಂದರಿಯೆಂಬ ಹೆಂಡತಿಗೂ ಮೃಗೌತಮನೆಂಬ ಮಗನಾಗಿ ಹುಟ್ಟಿ ಬೆಳೆಯುತ್ತಿರುವಾಗ ಅವನ ಪಾಪಫಲದಿಂದ ಅವನ ಮಾತಾಪಿತೃ ಬಂಧುಗಳೆಲ್ಲ ಅಳಿದರು. ಆತನು ಅಶನವಸನಗಳಿಗಿಲ್ಲದೆ ಭಿಕ್ಷೆಯನ್ನು ಬೇಡಿದರೂ ಕರ್ಮವಶದಿಂದ ದೊರೆಯದಿರಲು ಆ ಊರಿನ ತಿಪ್ಪೆಯಲ್ಲಿ ಸುರಿದ ಎಂಜಲನ್ನು ತಿಂದು ಜೀವಿಸಿಕೊಂಡಿದ್ದನು. ಆತನನ್ನು ಜನಗಳು ನೋಡಿ ಮನುಷ್ಯರೂಪಿನ ಹಂದಿಯೆಂದು ಹೀಯಾಳಿಸಿ ಹೊಡೆದೋಡಿಸಲು ಭಯದಿಂದ ಓಡಿಹೋಗುತ್ತಿರುವಾಗ ಸಾಗರಸೇನನೆಂಬ ನಗ್ನಮುನೀಶನೋರ್ವನು ಆಹಾರನಿಮಿತ್ತವಾಗಿ ನಗರಕ್ಕೆ ಬರುತ್ತಿದ್ದನು. ಅವನನ್ನು ನೋಡಿ ಮೃಗೌತಮನು, ತನಗಿಂತಲೂ ಆ ನಗ್ನಮುನಿಯು ಬಡವನೆಂದೂ ಅವನನ್ನು ನೋಡಿ ಪುರನಿವಾಸಿಗಳು ತನ್ನನ್ನು ಹೊಡೆಯುವಂತೆ ಆ ನಗ್ನಮುನಿಯನ್ನೂ ಹೊಡೆಯುವರೆಂದೂ ಅದನ್ನು ತಾನು ನೋಡ

ಬೇಕೆಂದೂ ಯೋಚಿಸಿ ಆ ಮುನೀಶನ ಹಿಂದೆ ಹೋದನು. ಆ ನಗರದ ವೈಶ್ರವಣ ನೆಂಬ ವೈಶ್ಯನು ಆ ಮುನಿಪತಿಯನ್ನು ಕಂಡು ವಂದಿಸಿ ತನ್ನ ಮನೆಗೆ ಕರೆದೊಯ್ದನು. ಅದನ್ನು ನೋಡಿ ಸ್ವಗೌತಮನು ಆಶ್ಚರ್ಯಪಡುತ್ತಿರಲು ಅವನನ್ನು ನೋಡಿ ಆ ಮುನೀಶನು "ಈತನ ಕರ್ಮವು ಉಪಶಮಕ್ಕೆ ಬಂದಿದೆ" ಎಂದು ದಿವ್ಯಜ್ಞಾನ ದಿಂದ ತಿಳಿದು ಮರುಕದಿಂದ ಅವನನ್ನು ಕರೆದೊಯ್ದು ಊಟಕ್ಕಿಡಿಸಿದನು. ಅಂದಿ ನಿಂದ ಅವನು ಆ ಮುನಿಯನ್ನು ಬೆಂಬಿಡದೆ ಜೀವಿಸುತ್ತಿದ್ದು ಕೊನೆಗೆ ಅವನಿಗೆ ಆ ಉತ್ತಮವಾದ ರೂಪವನ್ನು ತಾನು ಧರಿಸಬೇಕೆಂಬ ಭಾವನೆಯು ಹುಟ್ಟಿತು. ಆ ವಿಷಯವನ್ನು ಮುನೀಶನು ದಿವ್ಯಜ್ಞಾನದಿಂದ ತಿಳಿದು ಕಾರುಣ್ಯದಿಂದ ದೀಕ್ಷೆಯ ನ್ನಿತ್ತು ಅವನಿಗೆ ಶ್ರೀಗೌತಮನೆಂಬ ಹೆಸರನ್ನಿಟ್ಟನು. ಆತನು ನಿರತಿಚಾರವಾಗಿ ಆ ವ್ರತವನ್ನು ಪಾಲಿಸಿ ಮಡಿದು ಗ್ರೈವೇಯಕವೆಂಬ ಸ್ವರ್ಗದಲ್ಲಿ ಅಹಮಿಂದ್ರನಾಗಿ ಹುಟ್ಟಿ ಇಪ್ಪತ್ತೆಂಟು ಸಾಗರೋಪಮಕಾಲದವರೆಗೆ ದಿವ್ಯಸುಖವನ್ನುಂಡು ಅಲ್ಲಿಂದ ಬಂದು ಅಂಧಕವೃಷ್ಟಿಯಾಗಿ ನೀನು ಹುಟ್ಟಿದೆ' ಯೆಂದು ಹೇಳಲು ಅಂಧಕವೃಷ್ಟಿಯು ತನ್ನ ಹತ್ತು ಮಂದಿ ಮಕ್ಕಳ ಭವಾಂತರಗಳನ್ನೂ ಹೇಳಬೇಕೆಂದು ಪ್ರಾರ್ಥಿಸಲು ಆ ಮುನೀಶನು ಇಂತೆಂದನು.—ಭರತಕ್ಷೇತ್ರದ ಆರ್ಯಖಂಡದ ಮಲಯದೇಶದಲ್ಲಿ ಭದ್ರಿಳಮೆಂಬುದೊಂದು ಪೊಳಲು. ಅಲ್ಲಿ ಘನರಥನೆಂಬವನು ರಾಜ್ಯವಾಳುತ್ತಿ ದ್ದನು. ಆ ನಗರದಲ್ಲಿ ಧನದೇವನೆಂಬ ವೈಶ್ಯನಿಗೂ ನಂದೆಯೆಂಬ ಆತನ ಪತ್ನಿಗೂ ಧನದೇವ, ಧನದತ್ತ, ಜಿನದೇವ, ಜಿನಪಾಲ, ಅರ್ಹದ್ದತ್ತ, ಜಿನದತ್ತ, ಅರ್ಹದ್ದಾಸ, ಪ್ರಿಯದತ್ತ, ಮನುಧರ್ಮರುಚಿಯೆಂಬ ಒಂಬತ್ತು ಮಂದಿ ಗಂಡುಮಕ್ಕಳೂ ಪ್ರಿಯದರ್ಶನೆ ಜ್ಯೇಷ್ಠೆಯೆಂಬೀರ್ವರು ಹೆಣ್ಣುಮಕ್ಕಳೂ ಜನಿಸಿ ತಂದೆತಾಯಿಗಳಿಗೆ ಸಂತೋಷವನ್ನುಂಟುಮಾಡುತ್ತಿರುವಾಗ ಒಂದು ದಿನ ಅಲ್ಲಿಯ ವನಕ್ಕೆ ಓರ್ವ ಮುನೀಶನು ಬರಲು ಧನದೇವನು ತನ್ನ ಹೆಂಡತಿಮಕ್ಕಳು ಸಹಿತವಾಗಿ ಅವನಲ್ಲಿಗೆ ಹೋಗಿ ವಂದಿಸಿ ಸದ್ಧರ್ಮೋಪದೇಶವನ್ನು ಕೇಳಿ ವೈರಾಗ್ಯಪರರಾಗಿ ಅವರೆಲ್ಲರೂ ತಪಸ್ವಿಗಳಾದರು. ಅವರಲ್ಲಿ ಧನದೇವನು ಕಠಿನತಪಸ್ಸಿನಿಂದ ಕರ್ಮಕ್ಷಯವನ್ನು ಮಾಡಿ ಮುಕ್ತನಾದನು. ನಂದೆಯು "ಉತ್ತರಭವದಲ್ಲಿಯೂ ಇವರು ನನಗೆ ಮಕ್ಕ ಳಾಗಲಿ" ಎಂದು ನಿದಾನಶಲ್ಯದಿಂದ ತಪಸ್ಸುಮಾಡಿ ಮಡಿದು ಆನತವೆಂಬ ಹದಿ ಮೂರನೆಯ ಸ್ವರ್ಗದಲ್ಲಿ ಆಕೆಯೂ ಆ ಮಕ್ಕಳೂ ಹುಟ್ಟಿ ಇಪ್ಪತ್ತು ಸಾಗರೋಪ ಮಕಾಲದವರೆಗೆ ಸುಖವನ್ನುಂಡು ಅಲ್ಲಿಂದ ಬಂದು ನಂದೆಯು ನಿನಗೆ—ಅಂಧಕ ವೃಷ್ಟಿಗೆ ಸುಭದ್ರೆಯೆಂಬ ಹೆಂಡತಿಯಾದಳು. ಆ ಒಂಬತ್ತು ಮಂದಿ ಮಕ್ಕಳು

ಸಮುದ್ರವಿಜಯ ಮೊದಲಾದ ಮಕ್ಕಳಾಗಿ ಹುಟ್ಟಿದರು. ಆ ಹೆಣ್ಣುಮಕ್ಕಳು ಕೊಂತಿ ಮಾದ್ರಿಯರೆಂಬ ಸುತೆಯರಾದರು '' ಎಂದು ಹೇಳಿ ಮುಂದೆ ವಸುದೇವನ ಜನ್ಮವನ್ನು ಹೇಳುತ್ತಾರೆ.

ಕುರುಭೂಮಿಯ ಪಲಾಶಕೂಟಗ್ರಾಮದಲ್ಲಿ ವೇದಶಾಸ್ತ್ರಗಳನ್ನು ಬಲ್ಲ ಸೋಮಶರ್ಮನೆಂಬ ಬ್ರಾಹ್ಮಣನಿದ್ದನು. ಅವನಿಗೆ ಅಗ್ನಿಲೆಯೆಂಬವಳು ಹೆಂಡತಿ. ಅವರಿಗೆ ಮಹಾಪಾಪಿಯಾದ ನಂದಿಯೆಂಬೋರ್ವ ಮಗನು ಹುಟ್ಟಲು ಅವರು ರೋಗಪೀಡಿತರಾಗಲು ಆ ಮಗುವನ್ನು ಅಗ್ನಿಲೆಯ ಸಹೋದರನಾದ ದೇವ ಶರ್ಮನ ವಶಕ್ಕೆ ಕೊಟ್ಟು ಅವರೀರ್ವರೂ ಮಡಿದರು.

ಇತ್ತ ದೇವಶರ್ಮನು ನಂದಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡ ಬೇಕೆಂದಿರುವುದನ್ನು ಆತನ ಹೆಂಡತಿಯು ತಿಳಿದು ನಂದಿಯ ಕುರೂಪಕ್ಕೆ ಹೇಸಿ ತನ್ನ ಮಗಳನ್ನು ಗಂಡನಿಗೆ ತಿಳಿಯದಂತೆ ಕರೆದೊಯ್ದು ಇನ್ನೊಬ್ಬ ಸುಂದರ ವರನಿಗೆ ಕೊಟ್ಟು ಮದುವೆಮಾಡಿದಳು. ಆ ವಿಷಯವನ್ನು ನಂದಿಯು ತಿಳಿದು ತನಗೆ ತಾನೇ ಹೇಸಿ ಖಿನ್ನನಾಗಿರಲು ಅದನ್ನು ದೇವಶರ್ಮನು ತಿಳಿದು ಕಿರಿಯ ಮಗಳ ನ್ನಾದರೂ ಕೊಟ್ಟು ಮದುವೆಮಾಡಿಕೊಡುವೆನೆಂದೊಡಂಬಡಿಸಲು ಅದನ್ನು ತಿಳಿದು ಆ ಹುಡುಗಿಯು ಮದುವೆಯಾದ ಮರುದಿನವೇ ಆತ್ಮಹತ್ಯವನ್ನು ಮಾಡಿಕೊಳ್ಳುವೆ ನೆಂದು ಚಿಂತಿಸುತ್ತಿರಲು ನಂದಿಯು ಒಂದು ದಿನ ಬಿಸಿಲಲ್ಲಿ ಮನೆಗೆ ಬರಲು ಆತನ ವಿಕಾರರೂಪವನ್ನೂ ದುರ್ನಾತವನ್ನೂ ನೋಡಿ ಆ ಹುಡುಗಿಯು ಬಹಳವಾಗಿ ಜುಗುಪ್ಸೆಪಡುತ್ತಿರಲು ತಂದೆಯು ಕಂಡು ಆಕೆಯನ್ನು ಸಮಾಧಾನಗೊಳಿಸಿ ನಂದಿಯ ತಲೆಗೆ ಹಳೇ ಬೆಣ್ಣೆಯನ್ನೂ ಅರಿಸಿನವನ್ನೂ ಸವರಿ ಬಟ್ಟೆಯನ್ನು ಸುತ್ತಿ ಸ್ನಾನಕ್ಕೆ ಹೊಳೆಗೆ ಹೋಗಿ ಬರುವಂತೆ ಕಳುಹಿದನು. ಈತನು ನದಿಗೆ ಹೋಗುತ್ತಿರು ವಾಗ ಬೀದಿಯಲ್ಲಿ ಸೇರಿರುವ ಜನರ ಗುಂಪನ್ನು ನೋಡಿ ಅಲ್ಲಿಗೆ ಹೋಗಲು ಅವರೆಲ್ಲರು ಇವನ ವೇಷವನ್ನು ನೋಡಿ ಓಡಿಸಿಕೊಂಡುಬಂದರು. ಈ ನಂದಿಯು ಓಡಿ ಹೋಗಿ ಒಂದು ಮರವನ್ನೇರಿ ಕುಳಿತನು. ಬಿಸಿಲಿನಿಂದ ಅವನ ತಲೆಯ ಬೆಣ್ಣೆಯು ಕರಗಿ ಕೆಳಗಿರುವವರ ತಲೆಯ ಮೇಲೆ ಸುರಿಯಲು ಅವರು ಹೇಸಿ ಹೊಡೆಯ ಲಾರಂಭಿಸಲು ಅಲ್ಲಿಂದಿಳಿದು ಲಜ್ಜೆಯಿಂದ ಓಡಿ ತನಗಾರೂ ದಿಕ್ಕಿಲ್ಲವೆಂದು ಬಗೆದು ಒಂದು ಕಲ್ಲು—ಬಂಡೆಯನ್ನೇರಿ ಕೆಳಕ್ಕೆ ನೋಡಿ ಯಮನೂ ಏಕೆ ತನ್ನನ್ನು ಒಯ್ಯುವುದಿಲ್ಲವೆಂದು ಚಿಂತಿಸುತ್ತಿರುವಾಗ ಆ ಬಂಡೆಯ ಕೆಳಗೆ ಶಂಖ ಮತ್ತು. ನಿರ್ನಾಮಿಕರೆಂಬ ಇಬ್ಬರು ಮುನಿಗಳು ತಪಸ್ಸುಮಾಡುತ್ತಿದ್ದರು. ಅವರಲ್ಲಿ

ಶಂಖಮುನಿಯು ನಂದಿಯ ನೆರಳನ್ನು ನೋಡಿ ಆತನು ಮುಂದೆ ಮೂರನೆಯ ಭವದಲ್ಲಿ ತಮಗೆ ತಂದೆಯಾಗುವನೆಂದು ಶಿಷ್ಯಮುನಿಗೆ ಹೇಳಿ ಆ ಬಂಡೆಯನ್ನೇರಿ ನಂದಿಯನ್ನು ಕುರಿತು "ಏತಕ್ಕಿಲ್ಲಿ ನಿಂತಿರುವೆ?" ಎಂದು ಕೇಳಿದನು. ನಂದಿಯು ಎಲ್ಲಾ ವಿಷಯವನ್ನು ಹೇಳಲು ಮುನಿಯು ಕೇಳಿ ತಮ್ಮಂತೆ ಮುನಿರೂಪವನ್ನು ಧರಿಸಿದರೆ ಉತ್ತಮ ಸುಖವು ದೊರೆಯುವುದೆಂದು ಹೇಳಲು ನಂದಿಯು ಆ ಮಾತನ್ನು ಕೇಳಿ ಮುನಿವ್ರತವನ್ನು ಕೈಕೊಂಡು ಅದನ್ನು ನಿರತಿಚಾರವಾಗಿ ಪಾಲಿಸಿ ಸಮಾಧಿವಿಧಿಯಿಂದ ಮಡಿದು ಮಹಾಶುಕ್ರವೆಂಬ ಸ್ವರ್ಗದಲ್ಲಿ ಹುಟ್ಟಿ ಹದಿನಾರು ಸಾಗರೋಪಮಕಾಲದವರೆಗೆ ದಿವ್ಯಸುಖವನ್ನುಂಡು ಬಂದು ನಿನಗೆ (ಅಂಧಕವೃಷ್ಟಿಗೆ) ವಸುದೇವನೆಂಬ ಸುಂದರಪುತ್ರನಾಗಿ ಜನಿಸಿದನು" ಎಂದು ಸುಪ್ರತಿಷ್ಠಯೋಗೀಶ್ವರರು ಹೇಳಲು ಆ ಮಾತನ್ನು ಕೇಳಿ ಅಂಧಕವೃಷ್ಟಿಗೆ ವೈರಾಗ್ಯವಂಕುರಿಸಿ ಮನೆಗೆ ಹೋಗಿ ಸಮುದ್ರವಿಜಯನಿಗೆ ರಾಜ್ಯಭಾರವನ್ನಿತ್ತು ಐದು ನೂರು ಮಂದಿ ರಾಜರುಗಳೊಡನೆ ಆ ಸುಪ್ರತಿಷ್ಠಯೋಗೀಶ್ವರರ ಬಳಿಯಲ್ಲಿ ದೀಕ್ಷೆಯನ್ನು ಹೊಂದಿ ಘೋರತಪಸ್ಸನ್ನು ಮಾಡಿ ಮುಕ್ತಿಯನ್ನು ಪಡೆದನು.

## ೮. ವಸುದೇವ ಶೃಂಗಾರವರ್ಣನಸಂಧಿ

ಶೌರೀಪುರದಲ್ಲಿ ಸಮುದ್ರವಿಜಯನು ಒಂಬತ್ತುಮಂದಿ ಸಹೋದರರೊಡನೆ ರಾಜ್ಯವಾಳುತ್ತ ಸುಖದಿಂದಿರಲು ಕಿರಿಯನಾದ ವಸುದೇವಕುಮಾರನು ಬಹು ಸುಂದರನಾಗಿ ಬೆಳೆಯುತ್ತಿದ್ದನು. ತನ್ನ ವಾರಿಗೆಯ ಬಾಲಕರೊಡನೆ ಕೇರಿಕೇರಿಗಳಲ್ಲಿ ಸಂಚರಿಸುತ್ತ ಸಮಸ್ತ ಸ್ತ್ರೀಜನರ ಮನಸ್ಸಿಗೆ ಆನಂದವನ್ನುಂಟುಮಾಡುತ್ತಿದ್ದನು. ವಸುದೇವನು ಬೀದಿಯಲ್ಲಿ ಬರುತ್ತಾನೆಂದರೆ ಸ್ತ್ರೀಯರೆಲ್ಲ ತಮ್ಮ ಕೆಲಸಗಳನ್ನು ಬಿಟ್ಟು ಅತ್ತೆಮಾವಂದಿರ ಮತ್ತು ಪತಿಯ ಭಯವಿಲ್ಲದೆ ಬಂದು ನೋಡುತ್ತಿದ್ದರು. ಕೆಲವು ಸ್ತ್ರೀಯರು ಕನಸಿನಲ್ಲಿಯೂ ಆ ವಸುದೇವನ ಸುಂದರರೂಪವನ್ನೇ ನೋಡುತ್ತಿದ್ದರು. ಆ ಭಾವನೆಯಿಂದ ವಸುದೇವನಂತೆ ಅನೇಕ ಮಕ್ಕಳು ಹುಟ್ಟಿದುವು. ಕೆಲವು ಸ್ತ್ರೀಯರು ಅವನ ಚಿತ್ರವನ್ನು ಬರೆದು ಸದಾ ನೋಡುತ್ತಿದ್ದರು. ಹೀಗೆ ಲಜ್ಜಾಶೂನ್ಯರಾಗಿ ಸ್ತ್ರೀಯರು ಮದನಪಿಶಾಚಗ್ರಸ್ತರಾದವರಂತೆ ವರ್ತಿಸಲು ಪುರಜನರೆಲ್ಲ ಸೇರಿ ಒಂದು ದಿನ ಸಮುದ್ರವಿಜಯನ ಆಸ್ಥಾನಕ್ಕೆ ಹೋಗಿ ವಿಷಯವನ್ನೆಲ್ಲ ನಿವೇದಿಸಿ ತಂತಮ್ಮ ಶಿಶುಗಳನ್ನು ಮುಂದಿಟ್ಟರು. ರಾಜನು ಚಕಿತ

ನಾಗಿ ತಮ್ಮನು ಇಂತಹ ಕೆಲಸಕ್ಕೆ ಹೋಗುನವನಲ್ಲವೆಂದು ಯೋಚಿಸಿ " ನೀವು ಹೆದರಬೇಡಿ " ಎಂದು ಹೇಳಿ ಕಳುಹಿಸಿಕೊಟ್ಟು ತಾನು ಮಂತ್ರಾಲೋಚನಾಸ್ಥಾನಕ್ಕೆ ಹೋಗಿ ಮುಖ್ಯಮಂತ್ರಿಗಳನ್ನು ಕರೆಯಿಸಿ ಆ ಸಮಾಚಾರವನ್ನು ತಿಳಿಸಿದನು. ಆ ಮಾತನ್ನು ಕೇಳಿ ಮಂತ್ರಿಗಳೂ ಪುರನಿವಾಸಿಗಳಂತೆ ಎಲ್ಲಾ ವಿಷಯಗಳನ್ನು ತಿಳುಹಲು ಕೇಳಿ ಸಮುದ್ರವಿಜಯನು ಅವರನ್ನು ಬೀಳ್ಕೊಟ್ಟು ಮರುದಿನದ ಸಭೆಗೆ ತನ್ನ ಅನುಜ ವಸುದೇವನನ್ನು ಬರಮಾಡಿ ಆಲಿಂಗಿಸಿ ಸಮೀಪದಲ್ಲಿ ಕುಳ್ಳಿರಿಸಿಕೊಂಡು ಮೈದಡವಿ " ಹಸುಳೆಯೆ ! ನಿನ್ನ ಸುಕುಮಾರ ಶರೀರವೇಕೆ ಹೊಸೆದ ಹೂವಿನಂತಾಯ್ತು ? ನಿನ್ನ ಮುಖವೇಕೆ ಕಳೆಗುಂದಿದುದು ? ಬಿಸಲಿನಲ್ಲಿ ತಿರುಗಿದುದರಿಂದಲೂ ಜನರದೃಷ್ಟಿ ಬಿದ್ದುದರಿಂದಲೂ ನಿನ್ನ ಶರೀರವು ಕೃಶವಾಯ್ತು. ಇನ್ನು ಮೇಲೆ ತಿರುಗಿದರೆ ನನ್ನಾಣೆ " ಎಂದು ಹೇಳಿ ತಮ್ಮನಿಗೆ ಸ್ವಲ್ಪವೂ ಸಂದೇಹವು ತೋರದಂತೆ ಅವನ ಪತ್ನೀಪರಿವಾರಸಮೇತ ನಗರದ ಉದ್ಯಾನದಲ್ಲಿರಿಸಿ ದಾರುಕ ವಲ್ಲಭೀಕರ ರಂಜೀರ್ವರು ಭಟರನ್ನು ಕಾವಲಿರಿಸಿದನು. ಈ ರಹಸ್ಯವನ್ನು ಸ್ವಲ್ಪವೂ ವಸುದೇವನು ತಿಳಿಯಲಿಲ್ಲ. ಒಂದುದಿನ ಸಮುದ್ರವಿಜಯನ ಪತ್ನಿ ಶಿವದೇವಿಯು ವಸುದೇವನ ಪತ್ನಿಯರಿಗೆ ತನ್ನದಾಸಿಯ ಕೈಯಲ್ಲಿ ಕೆಲವು ಪರಿಮಳ ವಸ್ತುಗಳನ್ನು ಕಳುಹಿಸಿಕೊಟ್ಟಳು. ಆ ದಾಸಿಯನ್ನು ಕಂಡು ವಸುದೇವನು ಅತ್ತಿಗೆಯ ದಾಸಿಯೆಂದು ಸರಸಕ್ಕಾಗಿ ಓಡಾಡಿಸಲು ಆಕೆಯು ಕೋಪಗೊಂಡು " ಕಪಿಯಂತೆ ಬಂಧನದಲ್ಲಿದ್ದು ಈ ಚೇಷ್ಟೆಯನ್ನು ತೋರುತ್ತಿರುವೆ " ಎಂದಳು. ಆ ಮಾತನ್ನು ಕೇಳಿ ಚಕಿತನಾಗಿ ವಸುದೇವನು ಆಕೆಯ ಕೈಯನ್ನು ಹಿಡಿದು ತನ್ನ ಕೈಯ ಕಂಕಣವನ್ನವಳಿಗಿತ್ತು ಆಕೆಯಿಂದ ಆ ಸಮಾಚಾರವನ್ನೆಲ್ಲ ತಿಳಿದು ಬೆರಗಾಗಿ ದುಷ್ಟರ ಮಾತನ್ನು ಕೇಳಿ ತನ್ನ ಅಣ್ಣನು ನಿರ್ದೋಷಿಯಾದ ತನ್ನನ್ನು ಬಂಧನದಲ್ಲಿಡುವುದು ಚಿತವೇ ? ಎಂದು ಮನದಲ್ಲಿ ನೊಂದು ಪರದೇಶಕ್ಕೆ ಹೋಗಲೆಳಸಿ ಅರ್ಧರಾತ್ರಿಯಲ್ಲಿ ಹೊರಟು ಭಯಂಕರವಾದ ಶ್ಮಶಾನಕ್ಕೆ ಹೋಗಿ ಅಲ್ಲಿ ಉರಿಯುತ್ತಿರುವ ಅಗ್ನಿಕುಂಡದ ಒಳಿಯಲ್ಲಿ ತನ್ನ ರತ್ನಾಭರಣಗಳನ್ನೆಲ್ಲ ತೆಗೆದಿಟ್ಟು ಒಂದು ಚೀಟಿಯನ್ನು ಬರೆದಿರಿಸಿ ಅಲ್ಲೇ ಸಮೀಪದಲ್ಲಿ ಶೂಲದಲ್ಲಿದ್ದ ಒಬ್ಬ ಮನುಷ್ಯನಿಗೆ ತನ್ನ ಸಮಾಚಾರವನ್ನೆಲ್ಲ ತಿಳುಹಿ ಒಂದು ಹೆಣವನ್ನು ಅಗ್ನಿಕುಂಡಕ್ಕೆ ಎಳೆದು ಹಾಕಿ ಕಣ್ಮರೆಯಾಗಿ ಮುಂದಕ್ಕೆ ಹೋದನು.

ಇತ್ತ ಶ್ಮಶಾನವನ್ನು ಕಾಯುವ ಆಳುಗಳು ಪ್ರಾತಃಕಾಲದಲ್ಲಿ ಆ ಅಗ್ನಿಕುಂಡದ ಬಳಿಗೆ ಬಂದು ನೋಡುವಲ್ಲಿ ಅವರಿಗೆ ಆ ದಿವ್ಯಭೂಷಣವೂ ಕುಂಡದಲ್ಲಿ ಅರೆಬರೆ

ಯಾಗಿ ಬೆಂದ ಹೆಣವೂ ವಸುದೇವನು ಬರೆದಿಟ್ಟಿದ್ದ ಕಾಗದವೂ ಕಾಣಿಸಿದುವು. ಶೂಲದಲ್ಲಿದ್ದ ಆ ಮನುಷ್ಯನೂ ವಸುದೇವನ ವಾರ್ತೆಯನ್ನು ತಿಳಿಸಿದನು. ಆ ಆಳುಗಳು ದುಃಖಪಟ್ಟುಕೊಂಡು ಆ ಕಾಗದವನ್ನೂ ಆಭರಣವನ್ನೂ ತೆಗೆದುಕೊಂಡು ಹೋಗಿ ಸಮುದ್ರವಿಜಯನಿಗೆ ಕೊಟ್ಟು ಸಮಾಚಾರವನ್ನು ತಿಳಿಸಿದರು. ಆ ಕಾಗದವನ್ನು ತೆಗೆದುಕೊಂಡು ಒಬ್ಬ ಓದುಗಾರನು ಓದಿದನು. ಅದರಲ್ಲಿ "ಬಾಲ್ಯದಲ್ಲಿ ನಾನು ಪ್ರೀತಿಯಿಂದ ಊರೊಳಗೆ ತಿರುಗಿದುದೇ ತಪ್ಪೆಂದು ಭಾವಿಸಿದಿರಲ್ಲದೆ ನಾನು ಪರನಾರೀಸಹೋದರನೆಂದು ಭಾವಿಸಲಿಲ್ಲ. ನಿರ್ದೋಷಿಯನ್ನು ದೋಷಿಯೆಂದು ಹೇಳಿದ ಆ ದುಷ್ಟರ ಮಾತನ್ನು ಕೇಳಿ ಮೋಸಮಾಡಿ ಸೆರೆಮನೆಯಲ್ಲಿಟ್ಟಿರಿ. ಈ ಹೀಯಾಳಿಕೆಗಾಗಿ ಅಗ್ನಿಕುಂಡದಲ್ಲಿ ಬಿದ್ದು ದೇಹತ್ಯಾಗಮಾಡಿದ್ದೇನೆ. ಹಿಂದೆ ಯಾರೂ ಮಾಡದ ತಪ್ಪನ್ನು ಇಂದು ನಾನು ಮಾಡಿದೆನು. ಅದರ ಫಲವು ನನ್ನನ್ನೀಗ ತುಪ್ಪದಲ್ಲಿ ಬೇಯಿಸಿ ಕೊಂದಿತು. ತಮ್ಮನು ಸತ್ತನೆಂದು ಅಣ್ಣಂದಿರಾರೂ ಅಳಬೇಡಿ. ನಾನು ಮಾಡಿದ ದೊಡ್ಡ ತಪ್ಪಿನ ಪ್ರಾಯಶ್ಚಿತ್ತಕ್ಕಾಗಿ ದೇಹತ್ಯಾಗವನ್ನು ಮಾಡಿದ್ದೇನೆ" ಎಂದು ಬರೆಯಲ್ಪಟ್ಟಿದ್ದಿತು. ಅದನ್ನು ಓದಿಸಿ ಕೇಳಿದೊಡನೆಯೇ ಸಮುದ್ರವಿಜಯನು ಮೂರ್ಛಿತನಾಗಲು ಶೈತ್ಯೋಪಚಾರದಿಂದೆಚ್ಚತ್ತು "ಹಾ ವಸುದೇವ! ಹಾ ಯದುಕುಲರತ್ನದೀಪ! ಹಾ ವನಿತಾಜನಮನ್ಮಥ! ಹಾ ವಸುಧಾಲಂಕಾರ! ಎಲ್ಲಿಯ ರಾಜ್ಯ? ಎಲ್ಲಿಯ ಭೋಗಕಾಂಕ್ಷೆ? ಎಲ್ಲಿಯ ಮಹದೈಶ್ವರ್ಯ? ನೀನಿಲ್ಲದಿರಲು ನಮ್ಮ ಬಾಳುವೆ ಹೆಂಗುಸರ ಬಾಳುವೆ" ಎಂದು ದುಃಖಿಸಿ "ಅನುಜನೆ! ನಿನ್ನನ್ನು ಉರಿವ ಅಗ್ನಿಕುಂಡದಲ್ಲಿ ಕೆಡಹಿದ ಪಾಪಿಯಾದ ನನಗೆ ಇನ್ನೇಕೆ ದೊರೆತನದ ಹಂಬಲು?" ಎನ್ನುವಷ್ಟರಲ್ಲಿ ಆ ಓಲಗಕ್ಕೆ ಅರಿಂದಮರೆಂಬ ಮುನೀಶರು ಬಂದು ತಮಗೆ ನಮಸ್ಕರಿಸಿದ ರಾಜನಿಗೆ "ಎಲೆ ರಾಜನೆ! ವಸುದೇವನು ಅಗ್ನಿಕುಂಡದಲ್ಲಿ ಬಿದ್ದು ಮಡಿದುದು ಸುಳ್ಳು; ಕೆಲವು ದಿನಗಳಲ್ಲಿ ನಿನ್ನ ಒಳಗೆ ಬಂದು ಸೇರುವನು" ಎಂದು ಹೇಳಿ ರಾಜನ ಸಂದೇಹವನ್ನು ಹೋಗಲಾಡಿಸಿ ಸಂತೋಷವನ್ನುಂಟುಮಾಡಿ ಹೊರಟುಹೋದರು.

ಇತ್ತ ವಸುದೇವನು ಅನೇಕ ದೇಶಗಳಲ್ಲಿ ಸಂಚರಿಸಿಕೊಂಡು ವಿಜಯಖೇಟವೆಂಬ ನಗರದ ನಂದನವನಕ್ಕೆ ಬಂದು ಅಲ್ಲಿ ತಾವರೆಗೊಳದಲ್ಲಿ ಮಿಂದು ಮಾರ್ಗಾಯಾಸವನ್ನು ನೀಗಿಕೊಂಡು ಪಕ್ಕದಲ್ಲಿ ಎಳೆಮಾವಿನಗಿಡದ ಬುಡದಲ್ಲಿ ಸೇವಂತಿಗೆಯ ಹೂವನ್ನು ಚೆಲ್ಲಿ ಅದರ ಮೇಲೆ ಮಲಗಿ ನಿದ್ರಿಸುತ್ತಿರುವಾಗ ಇಬ್ಬರು ಸುಂದರಿಯರು ತನ್ನ ಕಾಲುಗಳನ್ನೊತ್ತುವ ಕನಸನ್ನು ಕಂಡು ನಿದ್ರೆಯಿಂದೆಚ್ಚತ್ತು ನೋಡು

ವಲ್ಲಿ ನಿಜವಾಗಿಯೂ ಇಬ್ಬರು ವನಿತೆಯರು ವಸುದೇವನ ಪಾದಗಳನ್ನು ತಮ್ಮ ತೊಡೆಗಳ ಮೇಲಿಟ್ಟು ಮೃದುಹಸ್ತಗಳಿಂದೊತ್ತುತ್ತಿದ್ದರು. ವಸುದೇವನು ಕಣ್ದೆರೆದು ನೋಡಿ "ಸ್ತ್ರೀಯರ ದೆಸೆಯಿಂದಲೇ ನಾನು ನಾಡುಬೀಡೆಲ್ಲವನ್ನೂ ಬಿಟ್ಟು ಓಡಿಬಂದರೂ ನನ್ನ ಬೆನ್ನಬಿಡದೆ ಬಂದು ಕಾಲನ್ನು ಹಿಡಿದರು" ಎಂದಂದುಕೊಂಡು ಅವರಮೇಲಿನ ದೃಷ್ಟಿಯನ್ನೂ ಮನಸ್ಸನ್ನೂ ತೆಗೆಯದೆ ಕಾಲುಗಳನ್ನು ತೆಗೆದನು. ಆಗ ಆತನ ತಲೆಯ ದೆಸೆಯಲ್ಲಿದ್ದ ಚಿತ್ರಲತೆಯೆಂಬ ಆ ಕನ್ನೆಯರ ಗೆಳತಿಯು ಬೀಸಣಿಗೆಯಿಂದ ಬೀಸುತ್ತ "ಸುಕುಮಾರ! ಇದೇಕೆ ನಾಚಿಕೆ? ಕಾಲ್ದೆಗೆಯುವೆ. ಮದನನು ಈ ಕನ್ನೆಯರ ಕಾಲುಗಳನ್ನು ನಿನ್ನ ಕೈಯಿಂದೊತ್ತಿಸುವನು." ಎಂದಳು. ಆ ಮಾತನ್ನು ಕೇಳಿ ವಸುದೇವನು ತನ್ನ ಕಾಲುಗಳನ್ನು ಆ ಕನ್ನೆಯರೊತ್ತಲೇನು ಕಾರಣವೆಂದು ಕೇಳಲು ಚಿತ್ರಲತೆಯು "ಈ ಪುರದ ಜಿತಶತ್ರುವಿಗೆ ಜಯೆ ವಿಜಯೆಯೆಂಬೀ ಹೆಣ್ಣುಮಕ್ಕಳು ಹುಟ್ಟಿ ಅನುಪಮರೂಪಕಲಾಪರಿಣತೆಯರಾಗಿ ಪ್ರಾಪ್ತವಯಸ್ಕರಾಗಲು ಇವರ ತಂದೆಯು ಒಬ್ಬ ನೈಮಿತ್ತಿಕನನ್ನು ಕರೆಯಿಸಿ ಈ ಕನ್ನೆಯರಿಗೆ ವರನಾರಾಗುವನೆಂದು ಕೇಳಲು ಅವನು 'ಈ ಊರ ಕೊಳದ ದಡದಲ್ಲಿರುವ ಮಾವಿನಗಿಡದಡಿಯಲ್ಲಿ ಬಂದು ಮಲಗುವ ರಾಜಕುಮಾರನು ಇವರನ್ನು ಸಂಗೀತದಲ್ಲಿ ಗೆದ್ದು ವರಿಸುವನು' ಎಂದು ಹೇಳಿದನು. ಆ ಮಾತನ್ನು ಕೇಳಿ ರಾಜನು ಅಂದಿನಿಂದ ಇಲ್ಲಿ ಕಾವಲಿರಿಸಿದನು. ಶಕುನಿಗನ ನುಡಿಯಂತೆ ನೀನಿಲ್ಲಿಗೆ ಬಂದು ಮಲಗಿರಲು ಕಾವಲುಗಾರರು ಬಂದು ದೊರೆಗೆ ತಿಳಿಸಿದರು. ಈ ಸುಂದರಿಯರು ಶಕುನಿಗನು ಹೇಳಿದಂದಿನಿಂದ ವನಸ್ತ್ರೀಯರಂತೆ ಈ ವನದಲ್ಲಿರುತ್ತಾರೆ. ಈದಿನ ನೀನು ಮಾರ್ಗಾಯಾಸದಿಂದ ಮಲಗಿರಲು ನಿನ್ನ ಶ್ರಮಪರಿಹಾರಾರ್ಥವಾಗಿ ಕಾಲುಗಳನ್ನೊತ್ತುತ್ತಿದ್ದಾರೆ. ಇದಕ್ಕೇಕೆ ಲಜ್ಜೆ? ನಿನ್ನ ಪತ್ನಿಯರಲ್ಲದೆ ಬೇರೆಯಲ್ಲ. ಸಂತೋಷದಿಂದ ಕಾಲುಗಳನ್ನು ನೀಡಿದರೆ ನೋವನ್ನು ಹೋಗಲಾಡಿಸುವರು." ಎಂದು ಹೇಳುವಷ್ಟರಲ್ಲಿ ಜಿತಶತ್ರುರಾಜನು ಬಹು ವೈಭವದಿಂದ ಬಂದು ವಸುದೇವನನ್ನು ಮನೆಗೆ ಕರೆದೊಯ್ದು ಸತ್ಕರಿಸಿ ಅವನಿಂದ ತನ್ನ ಹೆಣ್ಣುಮಕ್ಕಳ ಸಂಗೀತವಿದ್ಯೆಯನ್ನು ಪರೀಕ್ಷೆ ಮಾಡಿಸಿದನು. ಅದರಲ್ಲಿ ವಸುದೇವನು ಅವರನ್ನು ಸೋಲಿಸಲು ಅವರು ಸಂತುಷ್ಟರಾಗಿ ಅವನಿಗೆ ಪುಷ್ಪಮಾಲೆಯನ್ನು ಹಾಕಿದರು. ದೊರೆಯು ಶುಭಮುಹೂರ್ತದಲ್ಲಿ ವಿವಾಹವನ್ನು ಮಾಡಿ ಅಳಿಯನಿಗೆ ಅರ್ಧರಾಜ್ಯವನ್ನು ಕೊಟ್ಟನು. ವಸುದೇವನು ಅಲ್ಲಿ ಕೆಲವು ದಿನ ಸುಖದಿಂದಿದ್ದನು.

# ೯. ವಸುದೇವ ಗಜಾರೋಹಣ ಸಂಧಿ.

ವಸುದೇವನು ಜಯೆ ವಿಜಯೆಯರಲ್ಲಿ ಸುಖದಿಂದಿರುತ್ತಿರಲು ವಿಜಯೆಗೆ ಅಕ್ರೂರನೆಂಬ ವೀರಪುತ್ರನು ಜನಿಸಿದನು. ಒಂದು ದಿನ ವಸುದೇವನು ತಾನು ಸದಾ ಆ ಸ್ತ್ರೀಯರ ಮೋಹದಲ್ಲಿರುವುದು ತಕ್ಕುದಲ್ಲವೆಂದು ಯೋಚಿಸಿ ಆ ರಾತ್ರಿಯಲ್ಲಿ ಯಾರಿಗೂ ಹೇಳದೆ ಹೊರಟು ದುಷ್ಟಮೃಗಗಳಿಂದ ನಿಬಿಡವಾದೊಂದು ಅರಣ್ಯಕ್ಕೆ ಹೋದನು. ಅಲ್ಲಿ ದೊಡ್ಡ ಆನೆಯು ಹಿಂಡಿನಿಂದ ಒಂದು ಮದದಾನೆಯು ವಸುದೇವನ ಕಡೆಗೆ ಬಂದಿತು. ಈ ಮದಗಜವನ್ನೇರಿದರೆ ತಾನೇ ಆನೆಯ ವಿಜ್ಞಾನಿಯಾಗುವೆನೆಂದು ಬಗೆದು ವಸುದೇವನು ಅದನ್ನು ಎದುರಿಸಿ ಧ್ವನಿಮಾಡಿದನು. ಅದನ್ನು ಕೇಳಿ ಸುಂಡಿಲನ್ನೆತ್ತಿಕೊಂಡು ಬಂದು ಕೋಪದಿಂದ ಹೊಡೆಯಲು ವಸುದೇವನು ಬಗ್ಗಿ ನೆಲಕ್ಕುರುಳಿದನು. ಆನೆಯು ದಂತಗಳಿಂದ ತಿವಿಯಲು ವಸುದೇವನು ದಂತಗಳ ಮಧ್ಯಕ್ಕೆ ನುಲಿಚಿಕೊಂಡನು. ಆನೆಯು ಕೋಪಾವೇಶದಿಂದ ಒದರಿ ಕಾಲಿನಿಂದ ಒದೆಯಿತು. ಆ ಏಟನ್ನು ತಪ್ಪಿಸಿಕೊಂಡು ವಸುದೇವನು ಕಾಲುಗಳ ಮಧ್ಯಕ್ಕೆ ಜಾರಿಕೊಂಡನು. ಆನೆ ಬಿಟ್ಟರೂ ತಾನು ಬಿಡದೆ ಮೂವತ್ತೆರಡು ರೀತಿಗಳಿಂದ ಆನೆಯೊಡನೆ ಹೋರಾಡಿ ಅದನ್ನು ಬಳಲಿಸಿ ಅದರ ಬೆನ್ನಿನ ಮೇಲೆ ಹತ್ತಿದನು. ಆಗ ಆಕಾಶಮಾರ್ಗದಿಂದ ಚತುರರಾದ ಇಬ್ಬರು ಖೇಚರರು ಬಂದು ವಸುದೇವನ ಕಾಲುಗಳಿಗೆ ನಮಸ್ಕಾರಮಾಡಿ "ಎಲೆ ರಾಜೋತ್ತಮನೆ! ವಿಜಯಾರ್ಧಗಿರಿಯ ಉತ್ತರಶ್ರೇಣಿಯಲ್ಲಿ ಕುಂಜರಾವರ್ತವೆಂಬುದೊಂದು ಪಟ್ಟಣವಿರುವುದು. ಅಲ್ಲಿಗೆ ಅಶನಿವೇಗನೆಂಬವನು ದೊರೆ. ಆತನಿಗೆ ಶಾಲ್ಮಲಿದತ್ತೆಯೆಂಬ ಮಗಳಿರುವಳು. ಆ ಸುಂದರಿಗೆ ಅನುರೂಪನಾದ ವರನಿಲ್ಲದಿರಲು ತಂದೆಯು ಖಿನ್ನನಾಗಿದ್ದನು. ಅಲ್ಲಿಗೊರ್ವ ಶಕುನಿಗನು ಬಂದು ಈ ಮದಗಜವನ್ನು ಈ ರೀತಿಯಾಗಿ ಹತ್ತುವ ಮಹಾಪುರುಷನೇ ಶಾಲ್ಮಲಿದತ್ತೆಗೆ ಪತಿಯಾಗುವನೆಂದು ಹೇಳಲು ಅಂದಿನಿಂದ ದೊರೆಯು ನಮ್ಮನ್ನಿಲ್ಲಿ ಕಾವಲಿರಿಸಿರುತ್ತಾನೆ. ಇಂದು ನಮ್ಮ ಪುಣ್ಯದಿಂದ ನೀನು ಈ ಮದಗಜವನ್ನೇರಿದೆ. ಇನ್ನು ತಾವಕಾಶ ಮಾಡದೆ ಶಾಲ್ಮಲಿದತ್ತೆಯೊಡನೆ ಸುಖದಿಂದಿರಲು ಏಳು" ಎಂದು ಹೇಳಿ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಹೋಗಲು ದೊರೆಯು ಸಂತುಷ್ಟನಾಗಿ ಮಗಳನ್ನು ಕೊಟ್ಟು ಮದುವೆಮಾಡಿದನು. ಆಕೆಯೊಡನೆ ವಸುದೇವನು ಬಹುದಿವಸ ಸುಖದಿಂದಿರಲು ಧ್ರುವನೆಂಬ ಮಗನು ಹುಟ್ಟಿ ಶಕ್ತಿಸಂಪನ್ನನಾಗಿ ಬೆಳೆಯುತ್ತಿದ್ದನು. ಒಂ

ದು ದಿವಸ ಚೈತ್ರಮಾಸದಲ್ಲಿ ಉಪ್ಪರಿಗೆಯ ಮೇಲೆ ಆ ದಂಪತಿಗಳು ರತಿಕ್ರೀಡೆ ಯಿಂದುಂಟಾದ ಬಳಲಿಕೆಯನ್ನು ನೀಗಿಕೊಳ್ಳಲು ಬಾಗಿಲನ್ನು ತೆರೆದು ಪತ್ನಿಯ ತೋಳಿನಮೇಲೆ ತಲೆಯನ್ನಿಟ್ಟು ವಸುದೇವನು ಮಲಗಿರುವಾಗ ಒಬ್ಬ ದುಷ್ಟ ಖೇಚ ರನು ಆಕಾಶಮಾರ್ಗದಿಂದ ಒಂದು ವಸುದೇವನನ್ನು ಎತ್ತಿಕೊಂಡು ಹೋದನು. ಶಾಲ್ಮಲಿದತ್ತೆಯು ಎಚ್ಚೆತ್ತು ಪತಿಯನ್ನು ಕಾಣದೆ ಖಿನ್ನಳಾಗಿ ಕಾಸೆಯನ್ನು ಬಿಗಿದು ಖಡ್ಗವನ್ನು ಹಿಡಿದು ವಿಮಾನವನ್ನೇರಿ ಆರ್ಭಟಿಸುತ್ತ ಆ ದುಷ್ಟನನ್ನು ಬೆನ್ನಟ್ಟಿಕೊಂಡು ಹೋದಳು. ಆತನು ಬೆದರಿ ವಸುದೇವನನ್ನು ಬಿಟ್ಟನು. ಶಾಲ್ಮಲಿದತ್ತೆಯು ತನ್ನ ಪ್ರಿಯಪತಿಯನ್ನು ಅಂತು ಆಲಂಗಿಸಿ ಮುತ್ತಿಟ್ಟು ಕರೆದೊಯ್ಯುವಾಗ " ಖೇಚ ರಿಯೆ ! ಈ ರಾಜನನ್ನು ಭೂಮಿಗೆ ಇಳಿಸಿದರೆ ಈತನು ನಿನ್ನೆಡೆಗೆ ಬರುವನು. ನಿನ್ನ ತಂದೆಯ ಮನೋರಥಕ್ಕೆ ಈತನು ಸಾರಥಿಯಾಗುವನು, ಇದು ನಿಶ್ಚಯ ' ಎಂ ದು ಆಕಾಶವಾಣಿಯಾಯಿತು. ಅದನ್ನು ಕೇಳಿ ಆಕೆಯು ಸುತ್ತಲು ನೋಡಿ ಇದು ದೇವವಚನವೆಂದು ತಿಳಿದು ಪತಿಯನ್ನು ಪರ್ಣಲಘುವೆಂಬ ವಿದ್ಯೆಯಿಂದ ಭೂತಳಕ್ಕೆ ಬಿಟ್ಟಳು. ಅದು ವಸುದೇವನನ್ನು ಮೆಲ್ಲನೆ ತಂದು ಅಂಗದೇಶದ ಚಂಪಾಪುರದ ನಂದನವನದಲ್ಲಿ ಸಿಂಗರಿಸಿದ ಲತಾಮಂಟಪದಲ್ಲಿ ಬಿಟ್ಟಿತು. ಅಲ್ಲಿ ಮಲಗಿದ್ದು ಪ್ರಾ ತಃಕಾಲದಲ್ಲಿ ಕಣ್ದೆರೆದು ನೋಡಿ ಪತ್ನಿಯನ್ನು ಕಾಣದೆ ಅಚ್ಚರಿವಟ್ಟು ಅಲ್ಲಿಂದೆದ್ದು ಬರುತ್ತ ಪಥಿಕರನ್ನು ಕಂಡು " ಇದೆಲ್ಲಿಯ ದಾರಿ ? ಈ ಊರಾವುದು ? ಹೇಳಿ " ಎಂದು ಕೇಳಿದನು. " ಇವನು ಆಕಾಶವನ್ನೊಡೆದು ಭೂತಳಕ್ಕೆ ಬಿದ್ದವನಂತೆ ಕೇಳುವುದು ಆಶ್ಚರ್ಯಕರವಾಗಿದೆ " ಎಂದು ಆ ಪಥಿಕರು ಹೇಳು ವುದನ್ನು ಕೇಳಿ ನಗುತ್ತ ಮುಂದಕ್ಕೆ ಹೋಗಿ ಕೊಳದಲ್ಲಿ ಮುಖತೊಳೆದು ಅಲ್ಲಿ ವಾಸುಪೂಜ್ಯತೀರ್ಥಂಕರರ ಮಂದಿರವನ್ನು ಕಂಡು ಭಕ್ತಿಯಿಂದ ವಂದಿಸಿ ಸಿದ್ಧಶೇಷೆ—ಪ್ರಸಾದವನ್ನು ತೆಗೆದುಕೊಂಡು ಅಲ್ಲಿದ್ದ ಬೋಧಸಿಂಧುಗಳೆಂಬ ಮುನೀ ಶರನ್ನು ಕಂಡು ವಂದಿಸಿ ರಾತ್ರಿಯಲ್ಲಾದ ವಿಷಯವನ್ನು ಕೇಳಿದನು. ಅವರು " ಎಲೆ ರಾಜನೆ! ಶಾಲ್ಮಲಿದತ್ತೆಯ ತಂದೆ ಅಶನಿವೇಗನ ಅಣ್ಣನ ಮಗನಾದ ಅಂ ಗಾರವೇಗನೆಂಬ ಶತ್ರುವು ಅಶನಿವೇಗನ ರಾಜ್ಯ ಬೊಕ್ಕಸಗಳನ್ನೆಲ್ಲ ಸುಲಿದುಕೊಂಡು ಆತನನ್ನು ಓಡಿಸಲು ಅಶನಿವೇಗನು ಒಂದು ಕಾಡಿನಲ್ಲಿ ಪಟ್ಟಣವನ್ನು ನಿರ್ಮಿಸಿ ಕೊಂಡಿದ್ದು ಒಂದು ದಿನ ಚಾರಣಮುನಿಗಳನ್ನು ಕಂಡು ತನಗೆ ತನ್ನ ರಾಜ್ಯವು ಯಾವಾಗ ಕೈಸೇರುವುದೆಂದು ಕೇಳಲು ಅವರು ಆತನ ಮಗಳು ಶಾಲ್ಮಲಿದತ್ತೆಗೆ ಭೂಚರನೋರ್ವನು ಪತಿಯಾಗಿ ಆತನಿಗೆ ಹುಟ್ಟುವ ಮಗನಿಂದ ದೇಶವು ಕೈವಶ

ವಾಗುವುದೆಂದು ಹೇಳಲು ಅಶನಿವೇಗನು ಸಂತುಷ್ಟನಾಗಿದ್ದನು. ಆ ವಾರ್ತೆಯನ್ನು ಕೇಳಿ ದುಷ್ಟ ಅಂಗಾರವೇಗನು ಸಮಯವನ್ನು ಕಾದು ನಿನ್ನನ್ನೆತ್ತಿಕೊಂಡುಹೋಗುತ್ತಿರಲು ನಿನ್ನ ಹೆಂಡತಿಯು ಅವನ ಬೆನ್ನಟ್ಟಿಕೊಂಡುಹೋಗಿ ನಿನ್ನನ್ನು ಬಿಡಿಸಿ ಅಶರೀರವಾಕ್ಯವನ್ನು ಕೇಳಿ ಈಸ್ಥಳಕ್ಕೆ ಮೆಲ್ಲನೆ ಬಿಡಿಸಿದಳು " ಎಂದು ಹೇಳಿದನು. ವಸುದೇವನು ಆ ಮುನೀಶ್ವರರನ್ನು ವಂದಿಸಿ ಬೀಳ್ಕೊಂಡು ಮುಂದೆ ಹೋಗುವಾಗ ಸಮೀಪದಲ್ಲೇ ಧನುಷ್ಟಂಕಾರದಂತಹ ಒಂದು ಸಪ್ಪಳವನ್ನು ಕೇಳಿದನು. ಅದನ್ನು ನೋಡಲು ಹೋಗಿ ಅಲ್ಲೊಂದು ಅರ್ಹನ್ಮಂದಿರದ ರತ್ನಮಂಟಪವನು ಕಂಡನು. ಅಲ್ಲಿ ಓರ್ವ ಕನ್ಯೆಯು ಅಭಿನವಶಾರದೆಯಂತೆ ವೀಣೆಯನ್ನು ಬಾರಿಸುತ್ತಿದ್ದಳು. ಲೋಕಾತಿಶಯವಾದ ರೂಪವತಿಯಾದ ಆಕೆಯನ್ನು ನೋಡುವ ಕೌತುಕದಿಂದ ವಸುದೇವನು ಒಂದು ಕಂಬದ ಮರೆಯಲ್ಲಿ ನಿಂತನು. ಆವನನ್ನು ಆ ಕನ್ಯೆಗೆ ಪಾಠಹೇಳುವ ಗಾಂಧರ್ವಾಚಾರ್ಯನು ಕಂಡು ಆರಿವನೆಂದು ನೋಡಿ ಅವನ ರೂಪಕ್ಕೆ ಮೆಚ್ಚಿ ತನ್ನ ಬಳಿಗೆ ಕರೆದು ಕುಳ್ಳಿರಿಸಿಕೊಂಡನು. ಆಗ ದೇವಾಲಯದ ಪದ್ಮಾವತೀದೇವಿಯು ಕನ್ಯೆಯ ವೀಣಾನಾದಕ್ಕೆ ಮೆಚ್ಚಿ ತನ್ನ ತಲೆಯ ಹೂವನ್ನು ಪ್ರಸಾದವಾಗಿತ್ತಳು. ಕನ್ಯೆಯು ಇಷ್ಟಾರ್ಥಸಿದ್ಧಿಯಾದುದೆಂದು ಆ ಹೂವನ್ನು ತನ್ನ ಮುಡಿಗಿಟ್ಟು ಮನಸ್ಸನ್ನು ವಸುದೇವನಲ್ಲಿಟ್ಟು ಗುರುವಿಗೆ ವಂದಿಸಿ ಮನೆಗೆ ಹೊರಟುಹೋದಳು. ಇತ್ತ ಗಾಂಧರ್ವಾಚಾರ್ಯನು " ಈಸುಂದರನು ಬಂದೊಡನೆಯೇ ಪದ್ಮಾವತೀದೇವಿಯು ತನ್ನ ಒಪ್ಪಿಗೆಯನ್ನು ಕೊಟ್ಟುದುದರಿಂದ ಈ ಕನ್ಯೆಗೆ ಇವನೇ ವರನು " ಎಂದು ಸಂತೋಷಗೊಂಡು ಮುಗುಳ್ನಗೆ ನಕ್ಕನು. ಅದನ್ನು ತಿಳಿದು ವಸುದೇವನು " ಈ ನಾರೀಮಣಿಯು ಯಾವ ರಾಜನ ಮಗಳು? ಇವಳ ಹೆಸರೇನು? ಏತಕ್ಕಾಗಿ ವೀಣೆಯ ಅಭ್ಯಾಸ? " ಎಂದು ಕೇಳಿದನು. ಅದಕ್ಕವನು " ಈಕೆಯು ಚಾರುದತ್ತನೆಂಬ ವರ್ತಕನ ಮಗಳು. ಈ ಸೌಂದರ್ಯವತಿಯ ಹೆಸರು ಗಾಂಧರ್ವದತ್ತೆಯೆಂದು. ಈ ವೀಣೆಯಿಂದ ಯಾವನು ತನ್ನನ್ನು ಸೋಲಿಸುವನೋ ಅವನೇ ತನ್ನ ಪತಿಯೆಂದು ಈಕೆಯು ಪ್ರತಿಜ್ಞೆಮಾಡಿಕೊಂಡಿರುವುದರಿಂದ ಚಾರುದತ್ತನು ತಿಂಗಳಿಗೊಮ್ಮೆ ವೀಣಾಸ್ವಯಂವರವನ್ನು ಮಾಡುತ್ತಾನೆ. ದೇಶದ ರಾಜಕುಮಾರರು ಬಂದು ಈ ಕಾರ್ಯವು ತಮಗೆ ಸಾಧ್ಯವಾಗದೆ ಹೋಗುತ್ತಿದ್ದಾರೆ " ಎಂದನು. ಆ ಮಾತನ್ನು ಕೇಳಿ ವಸುದೇವನು "ಈಮಾತು, ಈನಡೆ, ಈಸೌಂದರ್ಯ, ಈಶೃಂಗಾರ, ಈಸೊಬಗು ಭೂಚರಸ್ತ್ರೀಯರಿಗಿಲ್ಲ " ಎಂದನು. ಆ ಮಾತನ್ನು ಕೇಳಿ ಗಾಂಧರ್ವಾಚಾರ್ಯನು ವಸುದೇವನಿಗೆ ಚಾರುದತ್ತನ ಕಥೆಯನ್ನೂ ಗಾಂಧರ್ವದತ್ತೆಯ ಕಥೆಯನ್ನೂ ಹೇಳುವನು.

# ೧೦. ಚಾರುದತ್ತನ ಪ್ರಸಂಗಸಂಧಿ



ಅಂಗದೇಶದ ರಾಜಧಾನಿಯಾದ ಚಂಪಾನಗರದಲ್ಲಿ ವಿಮಲವಾಹನನು ದೊರೆಯಾಗಿದ್ದನು. ಆ ನಗರದಲ್ಲಿ ಭಾನುದತ್ತನೆಂಬ ವರ್ತಕನು ಆತನ ಪತ್ನಿ ದೇಯಿಲೆಯೆಂಬವಳೊಡನೆ ಸುಖವಾಗಿರುವಾಗ ಒಂದು ದಿನ ದೇಯಿಲೆಯು ನಾಲ್ನೀರನ್ನು ಮಿಂದು ಆ ರಾತ್ರಿ ಪತಿಯೊಡನೆ ಭೋಗಸುಖದಲ್ಲಿದ್ದು ಬೆಳಗಪ್ಪಜಾವದಲ್ಲಿ ಚಾರಣಮುನಿಗಳು ತನ್ನ ಕೈಯಲ್ಲಿ ಒಂದು ಮಾಣಿಕವನ್ನಿರಿಸಿದ ಸ್ವಪ್ನವನ್ನು ಕಂಡು ಎಚ್ಚತ್ತು ಸುಖವಾಗಿರಲು ಕೆಲವು ದಿನಗಳಲ್ಲಿ ಗರ್ಭೋತ್ಪತ್ತಿಯಾಗಿ ಶುಭಲಗ್ನದಲ್ಲಿ ಗಂಡುಮಗುವನ್ನು ಹಡೆದಳು. ದೇಯಿಲೆಯು ಚಾರಣರು ರತ್ನವನ್ನಿತ್ತ ಕನಸನ್ನು ಕಂಡು ಮಗನನ್ನು ಹಡೆದುದರಿಂದ ಆ ಮಗುವಿಗೆ ಚಾರುದತ್ತನೆಂದು ನಾಮಕರಣವನ್ನು ಮಾಡಿದರು. ಆ ದಿನದಲ್ಲಿ ಹುಟ್ಟಿದ ಬೇರೆ ಐದುಮಂದಿ ವರ್ತಕರ ಮಕ್ಕಳನ್ನೂ ತಂದು ಭಾನುದತ್ತನು ಹರಿಬಾಂಧವ, ಗೋಮುಖ, ಮರುಭೂತಿ ಪರಂತಪ, ದೇವದತ್ತ ಎಂದು ಹೆಸರುಗಳನ್ನಿಟ್ಟು ಸಾಕುತ್ತಿದ್ದನು. ಚಾರುದತ್ತನು ಅವರೊಡನೆ ಸಕಲಕಲಾಪರಿಪೂರ್ಣನಾಗಿ ಯೌವನವನ್ನು ಹೊಂದಿದನು. ಒಂದು ದಿನ ಪಟ್ಟಣದ ಸಮೀಪದಲ್ಲಿರುವ ಹೊಳೆಗೆ ಹೋಗಿ ಸ್ನಾನವನ್ನು ಮಾಡಿಕೊಂಡು ಉದ್ಯಾನದಲ್ಲಿ ವಿಹರಿಸಿ ಪಟ್ಟಣಕ್ಕೆ ಹಿಂದಿರುಗುವ ಸಮಯದಲ್ಲಿ ಒಬ್ಬ ಮನುಷ್ಯನು ಶೂಲದಲ್ಲಿ ಅರ್ಧಜೀವವಾಗಿರುವುದನ್ನು ಕಂಡನು. ಆ ಮನುಷ್ಯನ ಕಣ್ಣುಗಳು ಪಕ್ಕದಲ್ಲಿದ್ದ ರತ್ನದ ಗುರಾಣಿಯನ್ನು ನೋಡುತ್ತಿದ್ದುವು. ಚಾರುದತ್ತನು ಆ ಭಾವವನ್ನು ತಿಳಿದು ಆ ಗುರಾಣಿಯ ಮಧ್ಯದಲ್ಲಿದ್ದ ಒಂದು ಸರ್ವೌಷಧಿ ಘುಟಿಕೆಯನ್ನು ತೆಗೆದುಕೊಂಡು ಆ ಶೂಲದ ಪುರುಷನನ್ನು ಬಿಡಿಸುವುದಕ್ಕಾಗಿ ಮುಟ್ಟಲು ಆ ಘುಟಿಕೆಯ ಸಾಮರ್ಥ್ಯದಿಂದ ಆ ಮನುಷ್ಯನು ಶೂಲದಿಂದ ಮುಕ್ತನಾಗಿ ಚೇತರಿಸಿಕೊಂಡು ಬಂದು ಚಾರುದತ್ತನನ್ನು ಹೊಗಳಿ ನಮಸ್ಕರಿಸಿ ತನ್ನ ವೃತ್ತಾಂತವನ್ನು ಹೇಳುತ್ತಾನೆ:—

"ನಾನು ವಿಜಯಾರ್ಧಗಿರಿಯ ದಕ್ಷಿಣಶ್ರೇಣಿಯ ಶಿವಂಕರವೆಂಬ ಪಟ್ಟಣದ ಅಮಿತಗತಿಯೆಂಬ ದೊರೆಯು. ನನ್ನ ಪತ್ನಿ ಕಮಲಾವತಿಯೆಂಬವಳೊಡನೆ ನಾನು ಸುಖದಿಂದಿರುತ್ತಿರಲು ಆಕೆಯ ಸೌಂದರ್ಯಕ್ಕೆ ಮೋಹಿಸಿ ಓರ್ವ ಖೇಚರನು ತನ್ನ ರಾಜ್ಯವನ್ನೂ ಬಿಟ್ಟು ಬಂದು ನನ್ನಲ್ಲಿ ಕಪಟಸ್ನೇಹವನ್ನು ಮಾಡಿಕೊಂಡಿದ್ದನು. ಒಂದು

ದಿನ ನಾನು ಈ ಚಂಪಾನಗರಿಗೆ ಬಂದು ವಾಸುಪೂಜ್ಯಜಿನರನ್ನು ಭಕ್ತಿಯಿಂದರ್ಚಿಸಿ ಈ ವನದ ಕುಂದಲತಾಮಂಟಪದಲ್ಲಿ ರತಿಕ್ರೀಡೆಯನ್ನಾಡಿ ಆಯಾಸಪರಿಹಾರಾರ್ಥ ವಾಗಿ ಮಲಗಿರಲು ಆ ದುಷ್ಟನು ಬಂದು ನನ್ನನ್ನು ಶೂಲಕ್ಕೆಹಾಕಿ ನನ್ನ ಹೆಂಡತಿಯನ್ನೆತ್ತಿಕೊಂಡು ಹೋದನು. ಇನ್ನು ನಾನು ಸಾವಕಾಶಮಾಡಿದರೆ ನನ್ನವಿಪತ್ತನ್ನು ಸೈರಿಸದೆ ನನ್ನಪತ್ನಿಯು ಆತ್ಮಹತ್ಯಮಾಡಿಕೊಳ್ಳುವಳು " ಎಂದು ಹೇಳಿ ಆಕಾಶಕ್ಕೆ ಹಾರಿಹೋದನು.

ಇತ್ತ ಚಾರುದತ್ತನು ತನ್ನ ಐದುಮಂದಿ ಗೆಳೆಯರೊಡನೆ ಮನೆಗೆ ಬಂದು ವಿದ್ಯಾಭ್ಯಾಸವನ್ನುಮಾಡುತ್ತ ಸುಖವಾಗಿರುತ್ತಿರಲು ಭಾನುದತ್ತನು ತನ್ನವೈದು ನನಾದ ಸಿದ್ಧಾರ್ಥನ ಮಗಳಾದ ಮಿತ್ರಾವತಿಯೆಂಬ ಬಹುಸುಂದರಳಾದ ಕನ್ಯೆಯ ನ್ನುತಂದು ಚಾರುದತ್ತನಿಗೆ ಬಹುವೈಭವದಿಂದ ಮದುವೆಮಾಡಿದನು. ಚಾರುದತ್ತ ನಾದರೋ ಸದಾ ವಿದ್ಯಾವ್ಯಾಸಂಗದಲ್ಲೇ ಆಸಕ್ತನಾಗಿ ಪತ್ನೀಸುಖವಿಮುಖನಾಗಿ ದ್ದನು. ಅದರಿಂದ ಮಿತ್ರಾವತಿಯು ಚಿಂತಾಕ್ರಾಂತಳಾಗಿರಲು ಅದನ್ನು ತಿಳಿದು ಆಕೆಯ ತಾಯಿ ಸೌಮಿತ್ರೆಯು ಮಗಳ ಬಳಿಗೆ ಬಂದು ಆಕೆಯ ಬಣ್ಣಗೆಡದ ತುಟಿಯ ನ್ನೂ ಕೆಡದಿರುವ ನೇತ್ರಾಂಜನವನ್ನೂ ಮಾಸದಿರುವ ಅಂಗರಾಗವನ್ನೂ ಸಡಿಲದ ಮುಡಿಹೂವನ್ನೂ ಕಡುಸೊಗಯಿಪ ತಿಲಕವನ್ನೂ ಗುಜ್ಜುವಡೆಯದ ಕುಚಗಳನ್ನೂ ನೋಡಿ ಈ ಬಾಲೆಗೆ ರತಿಸುಖವಿಲ್ಲವೆಂದು ಬಗೆದು "ಎಲೆ ಮಗಳೆ! ನಿಮ್ಮತ್ತೆಯು ಮಾತನ್ನು ಕೇಳಿದುದರಿಂದ ನಾವು ಮೂರ್ಖರಾದೆವು " ಎಂದು ಹೇಳಿ ದೇಯಿಲೆಯ ಬಳಿಗೆ ಹೋಗಿ "ಎಲೆ ಪಾತಕಿ! ನಪುಂಸಕನಾದ ನಿನ್ನಮಗನಿಗೆ ನನ್ನಮಗಳನ್ನು ತಂದು ಕೆಡಿಸುವುದುಚಿತವೇ ?" ಎನಲು ದೇಯಿಲೆಯು "ಉತ್ತಮನಾಯಕನಾದ ನನ್ನಮಗನು ವಿದ್ಯಾತುರದಿಂದ ರತಿಸುಖಕ್ಕೆಳಸದಿರುವನು. ಒಂದೆರಡು ದಿನಗಳಲ್ಲಿ ಆ ಕೊರತೆಯನ್ನು ಹೋಗಲಾಡಿಸುವೆನು. ನೀನು ನಂಬು " ಎಂದು ಹೇಳಿ ನಾದು ನಿಯನ್ನು ಕಳುಹಿಸಿಕೊಟ್ಟು ತನ್ನಗಂಡನ ತಮ್ಮನೂ ವೇಶ್ಯಾಲಂಪಟನೂ ಆದ ರುದ್ರದತ್ತನಿಗೆ ಈ ವಿಷಯವನ್ನು ತಿಳಿಸಲು ಅವನು ಚಾರುದತ್ತನ ಬಳಿಗೆ ಹೋಗಿ ಕೆಲವು ದಿವಸ ಒಡನಾಟದಲ್ಲಿದ್ದು ಊರಿನ ಶೋಭೆಯನ್ನು ನೋಡುವ ನೆವದಿಂದ ಆ ಊರಿನ ಕೇರಿಕೇರಿಗಳಲ್ಲಿ ಕರೆದೊಯ್ದು ಸುಂದರ ರಮಣಿಯರ ರೂಪ ಸೌಂದರ್ಯವನ್ನು ತೋರಿಸುತ್ತಿದ್ದು ಒಂದುದಿನ ಸೂಳೆಗೇರಿಗೆ ಕರೆದೊಯ್ಯಲು ಆ ಸುಂದರ ಸುಕುಮಾರ ಚಾರುದತ್ತನನ್ನು ನೋಡಿ ಅನೇಕ ಸೂಳೆಯರು ಇಂತಹ ಸುಂದರನನ್ನು ತಾವೆಂದೂ ನೋಡಲಿಲ್ಲವೆಂದಂದುಕೊಳ್ಳುತ್ತಿದ್ದರು. ಚಾರುದತ್ತನು

ಮುಂದೆ ನಡೆವಾಗ ಒಂದೆಡೆಯಲ್ಲಿ ರುದ್ರದತ್ತನ ಪ್ರೇರಣೆಯಿಂದ ಒಂದು ಮದಗಜವು ಎದುರಾಗಿ ಬಂದಿತು. ಹಿಂದುಗಡೆಯಿಂದ ಮತ್ತೊಂದು ಮದದಾನೆಯು ಬಂದಿತು. ಆ ಇಕ್ಕಟ್ಟಿನಲ್ಲಿ ವಸಂತತಿಲಕೆಯೆಂಬ ವೇಶ್ಯೆಯ ದಾದಿಯರು ರುದ್ರದತ್ತನ ಸಂಜ್ಞೆಯಿಂದ ಚಾರುದತ್ತನನ್ನು ಆ ಆನೆಗಳು ಹೋಗುವವರೆಗೆ ತಮ್ಮ ಒಡತಿಯ ಮನೆಗೆ ಬರಬೇಕೆಂದು ಹೇಳಿ ಅವರನ್ನು ವಸಂತತಿಲಕೆಯ ಕರುಮಾಡಕ್ಕೆ ಕರೆದೊಯ್ದರು. ರತಿರೂಪವತಿಯಾದ ವಸಂತತಿಲಕೆಯು ಶೃಂಗರಿಸಿಕೊಂಡು ಬಂದು ಚಾರುದತ್ತನ ಪಕ್ಕದಲ್ಲಿ ಕುಳಿತಳು. ಆಕೆಯ ದಾದಿಯರು ಈರ್ವರ ನಡುವಿನಲ್ಲಿ ಪಗಡೆ-ನೆತ್ತವನ್ನು ತಂದಿರಿಸಿದರು, ರುದ್ರದತ್ತನು ಪ್ರೋತ್ಸಾಹಿಸಿ ಚಾರುದತ್ತನನ್ನು ವಸಂತತಿಲಕೆಯೊಡನೆ ಪಗಡೆಯಾಡಿಸಿದನು. ಕಣ್ಣಸನ್ನೆಯಿಂದ ಚಾರುದತ್ತನ ಐವರು ಗೆಳೆಯರನ್ನು ಕಳುಹಿಸಿ ಕೊನೆಯಲ್ಲಿ ತಾನೂ ಕಣ್ಮರೆಯಾದನು.

ಇತ್ತ ಚಾರುದತ್ತನು ಒಂದೆರಡಾಟಗಳನ್ನಾಡಿ ಗೆಲ್ಲಲು ತನ್ನ ಸೋಲಿಗೆ ಸೋಲನ್ನು ಕೊಡದೆ ಪೋಗಲಾಗದೆಂದು ವಸಂತತಿಲಕೆಯು ಚಾರುದತ್ತನ ಕೈ ಪಿಡಿದು ಮನೆಯ ಮೇಲ್ನೆಲೆಗೊಯ್ದು ನಾನಾವಿಧವಾದ ಸರಸಸಲ್ಲಾಪಗಳಿಂದಲೂ ಹಾವಭಾವಗಳಿಂದಲೂ ಪರಿಮಳವಸ್ತುಗಳಿಂದಲೂ ಅವನ ಮನಸ್ಸನ್ನು ಅಂಗಜ ಕೇಳಿಗೆ ಅನುಗೊಳಿಸಿ ಸುರತಸುಖಲೋಲರಾದರು. ಅಂದಿನಿಂದ ಅವರೀರ್ವರೂ ಹಗಲಿರುಳು ಸಮರತಿಯಿಂದ ಸುಖಪರವಶರಾಗಿರಲು ವಸಂತತಿಲಕೆಯ ತಾಯಿಯು ತನ್ನ ದಾದಿಯರನ್ನು ಚಾರುದತ್ತನ ತಾಯಿಯ ಬಳಿಗೆ ಕಳುಹಿಸಿ ದಿನಕ್ಕೆ ಸಾವಿರ ರೂಪಾಯಿಗಳಂತೆಯೂ ಪರ್ವಕ್ಕೆ ಹತ್ತುಸಾವಿರ ರೂಪಾಯಿಗಳಂತೆಯೂ ವೆಚ್ಚಕ್ಕೆ ತರಿಸಲಾರಂಭಿಸಿದಳು. ವಸಂತತಿಲಕೆಗೆ ಗೋಚರವಿಲ್ಲದಂತೆ ಹಲವು ಕಾರಣಗಳಿಂದ ಆರು ವರುಷಗಳವರೆಗೆ ಹದಿನಾರುಕೋಟಿ ದ್ರವ್ಯವನ್ನು ಸೆಳೆದಳು. ಮನೆಯು ಬರಿದಾಗುತ್ತಬರುವುದನ್ನು ಕಂಡು ಚಾರುದತ್ತನ ತಂದೆ—ಭಾನುದತ್ತನು ಮನನೊಂದು ಜಿನದೀಕ್ಷೆಯನ್ನು ತೆಗೆದುಕೊಂಡು ಹೋದನು. ಇತ್ತ ಚಾರುದತ್ತನು ಇತರವಿಷಯಗಳನ್ನೆಲ್ಲ ಮರೆತು ವಸಂತತಿಲಕೆಯ ಪ್ರೀತಿಯೇ ಜೀವವೆಂದು ಬಗೆದು ಮತ್ತೆ ಆರುವರುಷಕಾಲ ವಸಂತತಿಲಕೆಯಲ್ಲಿ ಲಂಪಟನಾಗಿರುತ್ತಿರಲು ಆಕೆಯ ತಾಯಿ ಕುಂಟಣಿಯು ಮೊದಲಿನಂತೆ ಪುನಃ ಹದಿನಾರುಕೋಟಿ ದ್ರವ್ಯವನ್ನು ತರಿಸಿದಳು. ಮನೆಯು ಬರಿದಾಯ್ತು. ದಾದಿಯರು ಮುನ್ನಿನಂತೆ ಆ ಮರುದಿನ ಹೋಗಿ ದ್ರವ್ಯವನ್ನು ಬೇಡಲು ದೇಯಿಲೆಯು ಮನೆಯನ್ನು ಮಾರಿ ಹಣವನ್ನು ಕೊಟ್ಟು ಆ ದಿನವೇ ತನ್ನ ಸಹೋದರ ಸಿದ್ಧಾರ್ಥನ ಮನೆಗೆ ಹೊರಟು

ಹೋದಳು. ಅದರ ಮರುದಿನ ಅಲ್ಲಿಗೂ ಹೋಗಿ ದಾದಿಯರು ಹಣವನ್ನು ಕೇಳಲು ದೇಯಿಲೆಯು ಲಜ್ಜಿತಳಾಗಿ ತಲೆಬಾಗಿಸಿದಳು. ಅದನ್ನು ಕಂಡು ಚಾರುದತ್ತನ ಹೆಂಡತಿ ಮಿತ್ರಾವತಿಯು ತನ್ನ ಆಭರಣಗಳನ್ನಿತ್ತಳು. ಈ ಎಲ್ಲ ಸಮಾಚಾರವನ್ನು ವಸಂತತಿಲಕೆಯು ಕೇಳಿ ಮನನೊಂದು " ಜಾತಿವೇಶ್ಯೆಯರು ವಿಟರ ಪತ್ನಿಯರು ತೊಡುವ ಆಭರಣಗಳಿಗೆ ಆಶಿಪಟ್ಟರೆ ಪಾತಕವು ಬರುವುದು" ಎಂದು ತಾಯಿಯನ್ನು ಬೈವುತ ಆ ಪರಿಚಾರಕಿಯರನ್ನು ಕರೆದು " ಇಂದಿನಿಂದ ನೀವು ಹಣವನ್ನು ಕೇಳಲು ಆ ಕಡೆಗೆ ಹಜ್ಜೆಯಿಡಬೇಡಿ " ಎಂದು ತಡೆದಳು. ಆ ಮಾತನ್ನು ಕೇಳಿ ಕುಂಟಣಿಯು ಮಗಳ ಬಳಿಗೆ ಹೋಗಿ " ಚಾರುದತ್ತನ ಮನೆಯು ಬರಿದಾಯ್ತು, ಬಡತನವು ಬಂದಿತು, ಆವನನ್ನು ಕಂಡರೆ ಊರೆಲ್ಲ ಹೇಸುವಂತಾಯ್ತು. ಮಗಳೇ ! ಕೇಳು, ಹಣವುಳ್ಳವನೇ ಇಂದ್ರ, ಹಣವುಳ್ಳವನೇ ಚಂದ್ರ, ಹಣವುಳ್ಳವನೇ ಜಯಂತ, ಹಣವುಳ್ಳವನೇ ಕಾಮ, ಹಣವಿಲ್ಲದವನು ಹೆಣಕ್ಕೆ ಸಮಾನನು. ಈ ಊರಲ್ಲಿ ಯೌವನ ರೂಪ ಲಾವಣ್ಯ ಸಂಪತ್ತುಗಳಿಂದ ಚಾರುದತ್ತನನ್ನು ಮೀರಿಸುವವರಿದ್ದಾರೆ. ಅವರನ್ನು ವರಿಸು. ಹಸುವು ಹಾಲುಕೊಡುವುದನ್ನು ಬಿಟ್ಟರೆ ಅದನ್ನು ಮೊದಲಿನಂತೆ ಪೋಷಿಸುವರೇ ? ಹಣವನ್ನು ಸುಲಿದುಕೊಂಡು ವಿಟರನ್ನು ಹೊರನೂಂಕುವುದು ಸೂಳೆಯರ ನೀತಿ. ಚಾರುದತ್ತನನ್ನು ತ್ಯಜಿಸುವುದಕ್ಕೆ ಇದೇ ಸಮಯ." ಎಂದಳು. ಆ ಮಾತನ್ನು ಕೇಳಿ ವಸಂತತಿಲಕೆಯು ಬಹಳವಾಗಿ ನೊಂದು ಹಲವು ಮಾತುಗಳಿಂದ ತಾಯಿಯ ರೀತಿಯನ್ನು ಖಂಡಿಸಿ ಸಮರೂಪ, ಸಮಯೌವನ, ಸಮಚತುರತೆ, ಸಮಭೋಗಬಲ, ಸಮಸೋಲ, ಸಮರತಿ, ಸಮಸುಖವುಳ್ಳ ಅನುಪಮಸುಂದರನಾದ ಚಾರುದತ್ತನನ್ನು ಬಿಟ್ಟು ಜೀವಿಸಲಾರೆನೆಂದಳು. ಮಗಳ ಮಾತನ್ನು ಕೇಳಿ ಮನನೊಂದು ಕುಂಟಣಿಯು ಹಿಂದಿರುಗಿಬಂದು ಒಂದುದಿನ ಎಳೆನೀರಿನಲ್ಲಿ ಮಾದಕ ವಸ್ತುವನ್ನು ಬೆರಸಿ, ಕಳುಹಲು ಅವರೀರ್ವರೂ ಕುಡಿದು ಮತ್ತರಾಗಿ ಬಿದ್ದರು ಇದೇ ಸಮಯವೆಂದು ಬಗೆದು ಕುಂಟಣಿಯು ಚಾರುದತ್ತನನ್ನು ಕಂಬಳಿಯಲ್ಲಿ ಕಟ್ಟಿಸಿ ಆ ಊರಿನ ತಿಪ್ಪೆಯಲ್ಲಿ ಹಾಕಿಸಿದಳು. ಕೆಲವು ಹೊತ್ತಿನಮೇಲೆ ಸೊಕ್ಕಿಳಿದು ಚಾರುದತ್ತನು " ಆ ಕರುಮಾಡದಲ್ಲಿ ಪ್ರಿಯಳ ತೋಳಿನ ತೆಕ್ಕೆಯಲ್ಲಿ ಸುಖವಾಗಿ ಮಲಗಿದ್ದ ನನ್ನನ್ನು ಇಲ್ಲಿಗೆ ಯಾರು ತಂದುಹಾಕಿದರು ' ಎಂದಂದುಕೊಂಡು ಕಡೆಯ ರಾತ್ರಿಯಲ್ಲಿ ಅಲ್ಲಿಂದೆದ್ದು ತನ್ನ ಮನೆಗೆ ಹೋಗಲು ಆ ಮನೆಯನ್ನು ಕ್ರಯಕ್ಕೆ ಪಡೆದವರು ಆ ಮನೆಯನ್ನು ಏಳೆಂಟು ದಿನಗಳ ಹಿಂದೆ ದೇಯಿಲೆಯು ತಮಗೆ ಮಾರಿ ತನ್ನ ತವರ್ಮನೆಗೆ ಹೋದಳೆಂದ ಮಾತನ್ನು ಕೇಳಿ ದುಃಖಿಸಿ ಅಲ್ಲಿಗೆ ಹೋಗಿ

ತಾಯಿಗೂ ಮಾವನಿಗೂ ವಂದಿಸಿ ಧನಹಾನಿಯಾದುದನ್ನೂ ತಂದೆಯು ದೀಕ್ಷೆಗೆ ಹೋದುದನ್ನೂ ಮನೆಯನ್ನು ಮಾರಿದವಿಷಯವನ್ನೂ ಕೇಳಿದನು. ಆಗ ಮಿತ್ರಾವತಿಯು ಬಂದು ಗಂಡನ ಮೈಯಲ್ಲಿ ಅಂಟಿದ್ದ ತಿಪ್ಪೆಯ ಧೂಳನ್ನೊರಸಿ ಬಹು ಆಸಕ್ತಿಯಿಂದ ಮೈಯೊತ್ತಿ ಸ್ನಾನಭೋಜನಗಳನ್ನು ಮಾಡಿಸಿದಳು. ಆಗಿನ ದೃಶ್ಯವು ನೋಡತಕ್ಕದಾಗಿದ್ದಿತು. ನಿಜವಾದ ಪ್ರೀತಿಯು ಎಲ್ಲಿರುವುದೆಂಬುದನ್ನು ಕಂಡು ಚಾರುದತ್ತನು ಸಂತುಷ್ಟನಾಗಿ ತಾಯಿಯ ಮುಖವನ್ನು ನೋಡಿ “ ಎಲೆ ತಾಯಿ! ನನ್ನಿಂದ ನಿನಗೀ ಪರಿಸ್ಥಿತಿಯಾಯ್ತು; ತಂದೆಯು ದೀಕ್ಷೆಗೆ ಹೋದನು; ಈ ಅಪವಾದವನ್ನು ನಾನೆಂತು ನೀಗುವೆನು! ನಾನು ಹಾಳುಮಾಡಿದಷ್ಟು ದ್ರವ್ಯವನ್ನು ಗಳಿಸದೆ ಮನೆಗೆ ಹೊಕ್ಕೆನು ” ಎಂದು ಭಾಷೆಕೊಟ್ಟನು. ಈ ವಿಷಯವನ್ನು ಆತನ ಮಾವ—ಸಿದ್ಧಾರ್ಥನು ತಿಳಿದು ಅಳಿಯನ ಬಳಿಗೆ ಬಂದು “ ನಾನು ನಿನಗೆ ಬೇರೆಯವನಲ್ಲ, ನಿನ್ನ ಸೋದರಮಾವ. ನನ್ನಲ್ಲಿ ಹದಿನಾರುಕೋಟಿ ದ್ರವ್ಯವಿರುವುದು. ನನಗೆ ಗಂಡುಮಕ್ಕಳಿಲ್ಲ, ಮಿತ್ರಾವತಿಯೊಬ್ಬಳೆ ಮಗಳು. ಆಕೆಯು ನಿನ್ನ ಹೆಂಡತಿ. ಈ ದ್ರವ್ಯಕ್ಕೆಲ್ಲ ನೀನೇ ಒಡೆಯ. ಮೊದಲಿನಂತೆ ಸುಖವಾಗಿರು ” ಎಂದನು. ಆ ಮಾತನ್ನು ಕೇಳಿ ಚಾರುದತ್ತನು “ ತಂದೆಯ ಆಸ್ತಿಯನ್ನೆಲ್ಲ ಹಾಳುಮಾಡಿ, ಮನೆಯನ್ನು ಮಾರಿ ಬಂದು ಮಾವನ ಮನೆಯ ಸೊತ್ತಿಗೊಡೆಯನಾಗಿದ್ದಾನೆಂಬ ಅಪಕೀರ್ತಿಯನ್ನು ಪಡೆದು ಬದುಕುವವನಲ್ಲವಾದುದರಿಂದ ಪರದೇಶಕ್ಕೆ ಹೋಗಿ ಬಹುದ್ರವ್ಯವನ್ನು ಗಳಿಸಿಕೊಂಡು ಬಂದರೆ ನಾನು ನಿನ್ನ ಅಳಿಯನು; ಇಲ್ಲವಾದರೆ ಭೂಮಿಗೆ ಭಾರನು; ಇದಕ್ಕೇಕೆ ಸಂದೇಹ? ” ಎಂದನು. ಆ ಮಾತನ್ನು ಕೇಳಿ ಸಿದ್ಧಾರ್ಥನು “ಹಾಗಾದರೆ ಬಂಡವಾಳವನ್ನು ತೆಗೆದುಕೊಂಡುಹೋಗಿ ವ್ಯಾಪಾರಮಾಡು” ಎನಲು ನಸುನಕ್ಕು “ ವ್ಯಾಪಾರಕ್ಕೆ ಬಂಡವಾಳವನ್ನು ಕೇಳುವವನು ವರ್ತಕನ ಮಗನೇ? ” ಎಂದು ಸಮಾಧಾನಪಡಿಸಿ ತಾಯಿಯ ಮತ್ತು ಮಾವನ ಕಾಲುಗಳಿಗೆ ನಮಸ್ಕಾರ ಮಾಡಿ ಪ್ರೀತಿಯಿಂದ ಮಿತ್ರಾವತಿಯನ್ನು ಸಂತೈಸಿ ದಕ್ಷಿಣಾಭಿಮುಖನಾಗಿ ಹೊರಟುಹೋದನು. ಮರುಕದಿಂದ ಮರುದಿನ ಸಿದ್ಧಾರ್ಥನೂ ಹೋಗಿ ಚಾರುದತ್ತನೊಡನೆ ಸೇರಿಕೊಳ್ಳಲು ಅವರೀರ್ವರೂ ಒಂದು ವನಕ್ಕೆ ಹೋಗಿ ದಿವ್ಯಮೂಲಿಕೆಗಳನ್ನು ಕಿತ್ತು ಹೊರೆಗಟ್ಟಿ ಪಲಾಶನಗರಕ್ಕೊಯ್ದು ಮಾರುತ್ತಿದ್ದು ಅದರಿಂದ ಬಂದ ಹಣದಿಂದ ಜವಳಿಯನ್ನು ತೆಗೆದುಕೊಂಡು ಬಂದು ಮನೆಯಲ್ಲಿಟ್ಟರು. ಅದು ಅಕಸ್ಮಾತ್ ಬೆಂಕಿಯಿಂದ ಉರಿದುಹೋಗಲು ಅಚ್ಚರಿವಟ್ಟು ಮತ್ತೆ ಕೆಲವು ವರ್ತಕರೊಡನೆ ಅವರು ಒಂದು ಪರ್ವತದ ತುದಿಗೆ ಹೋಗಿ ಒಂದು ಗುಹೆಯನ್ನು ಹೊಕ್ಕು

ಅಲ್ಲಿ ಅಗೆದು ಉತ್ತಮರತ್ನಗಳನ್ನು ದೊರಕಿಸಿ ಹೇರಿಸಿಕೊಂಡು ಬರುವಾಗ ಮಧ್ಯ ಮಾರ್ಗದಲ್ಲಿ ಬೇಡರು ಅಡ್ಡಗಟ್ಟಿ ಅವುಗಳನ್ನು ಕಸಿದುಕೊಳ್ಳಲು ಆ ಸಾಹಸಿಯು ಅವರನ್ನು ಓಡಿಸಿ ಅಲ್ಲಿಂದ ಮತ್ತೊಂದು ಪಟ್ಟಣಕ್ಕೆ ಹೋಗಲು ಅಲ್ಲಿ ವಾಸವದತ್ತ ನೆಂಬೋರ್ವನು ಕಂಡು ಸಂತೋಷದಿಂದ ತನ್ನಮನೆಗೆ ಕರೆದೊಯ್ದು ಉಪಚರಿಸಿ ಅವರಿಗೊದಗಿದ ತೊಂದರೆಯನ್ನು ಕೇಳಿ ವಿಷಾದಿಸಿ "ಸದ್ಗುಣಿ ಚಾರುದತ್ತನೆ! ನಿನ್ನತಂದೆಯು ನನ್ನಲ್ಲಿ ಭೇದಭಾವವನ್ನಿಟ್ಟಿರಲಿಲ್ಲವಾದುದರಿಂದ ನನ್ನಮನೆಯ ದ್ರವ್ಯವನ್ನು ತೆಗೆದುಕೊ" ಎಂದನು. ಆ ಮಾತನ್ನು ಕೇಳಿ ಚಾರುದತ್ತನು "ಹಡ ಗಿನ ವ್ಯಾಪಾರಕ್ಕೆ ಹೊರಡಲು ಅನುಕೂಲಪಡಿಸಿಕೊಡು" ಎಂದನು. ಅದರಂತೆ ಅವನು ಸಿದ್ಧಪಡಿಸಿಕೊಡಲು ಹಡಗನ್ನೇರಿ ದ್ವೀಪಾಂತರಕ್ಕೆ ಹೋಗಿ ಹನ್ನೆರಡು ವರುಷಗಳ ವರೆಗೆ ರತ್ನಗಳ ವ್ಯಾಪಾರವನ್ನು ಮಾಡಿ ಮೊದಲು ತಾನು ಹಾಳುಮಾ ಡಿದ್ದ ದ್ರವ್ಯದಷ್ಟು ಸಂಪಾದಿಸಿಕೊಂಡು ಹಿಂದಿರುಗಿ ಸಮುದ್ರದಲ್ಲಿ ಬರುತ್ತಿರು ವಾಗ ಅಶುಭಕರ್ಮೋದಯದಿಂದ ಸುಂಟುರೆಗಾಳಿಯು ಬಂದು ಹಡಗನ್ನುರುಳಿ ಸಲು ಹಡಗೊಡೆದು ಹೋಯ್ತು. ಚಾರುದತ್ತನೂ ಸಿದ್ಧಾರ್ಥನೂ ಅಗಲಿಹೋಗಿ ಒಂದೊಂದು ಹಲಗೆಯ ತುಂಡುಗಳ ಸಹಾಯದಿಂದ ದಡವನ್ನು ಹೊಂದಿದರು. ಚಾರುದತ್ತನು ಒಂದೆಡೆಯಲ್ಲಿ ಮೂರು ದಿನಗಳವರೆಗಿದ್ದು ಗಾಳಿಯು ಕಡಿಮೆಯಾದ ಮೇಲೆ ಮುಂದೆ ನಡೆದು ಶಂಬರಿಯೆಂಬೂರಿಗೆ ಹೋದನು. ಅಲ್ಲಿ ಧನದತ್ತನೆಂಬ ವರ್ತಕನು ಚಾರುದತ್ತನನ್ನು ಮನೆಗೆ ಕರೆದೊಯ್ದು ಉಪಚರಿಸಿ "ಹಿಂದೆ ನಿನ್ನ ತಂದೆಯು ಆಪದ್ಧನವೆಂದು ಹದಿನಾರುಕೋಟಿ ದ್ರವ್ಯವನ್ನು ನನ್ನಲ್ಲಿರಿಸಿದ್ದಾನೆ. ಅದರಲ್ಲಿ ಎಂಟುಕೋಟಿ ದ್ರವ್ಯವನ್ನು ಮೊನ್ನೆಯದಿವಸ ಸಿದ್ಧಾರ್ಥನು ತೆಗೆದು ಕೊಂಡು ಚಂಪಾಪುರಕ್ಕೆ ಹೋದನು. ಉಳಿದುದನ್ನು ನೀನು ತೆಗೆದುಕೊಂಡು ಹೋಗು" ಎನಲು ಚಾರುದತ್ತನು ಆ ಹಣವನ್ನೆಲ್ಲ ತೆಗೆದುಕೊಂಡು ಆ ಊರಿನ ಜಿನಮಂದಿರಗಳ ದಾನಶಾಲೆಗಳಿಗೆ ವೆಚ್ಚಮಾಡಿದನು. ಅವನ ದಾನಗುಣವನ್ನು ನಗರನಿವಾಸಿಗಳೆಲ್ಲ ಹೊಗಳುತ್ತಿರಲು ಅದನ್ನು ನೋಡಬೇಕೆಂದು ವೀರಭದ್ರನೆಂಬ ಯಕ್ಷನು ಆ ಊರಹೊರಗೆ ಜಿನಮಂದಿರದ ಮಂಟಪದಲ್ಲಿ ರೂಪವನ್ನುಬದಲಾಯಿಸಿ ಕೊಂಡು ಒಂದು ಗ್ರಹವು ಹಿಡಿದ ಮನುಷ್ಯನಂತೆ ಬಿದ್ದಿದ್ದು ಇನ್ನೊಬ್ಬನನ್ನು ನಿರ್ಮಿಸಿ ಊರಿಗೆ ಕಳುಹಿಸಲು ಅವನು ಊರಿನ ಜನರಿಗೆ "ನನ್ನ ಒಡೆಯ ವಿಕ್ರ ಮಾಂಕನಿಗೆ ನಿಮ್ಮೂರ ಬಸದಿಯ ಬಳಿಯಲ್ಲಿ ಒಂದು ಗ್ರಹವು ಹಿಡಿದು ಮಾನವ ರಕ್ತವನ್ನುಬೇಡುತ್ತದೆ. ಯಾರಾದರು ರಕ್ತವನ್ನುಕೊಡುವ ಧೀರರಿದ್ದಾರೆಯೇ?"

ಎಂದು ಕೇಳಿದನು. ಯಾರೂ ಉತ್ತರವನ್ನು ಕೊಡದಿರಲು ಧೀರ ಚಾರುದತ್ತನು ಅವನೊಡನೆ ಹೋಗಿ ದೇವರಿಗೆ ವಂದಿಸಿ ಆ ಗ್ರಹಪೀಡಿತನ ಬಳಿಗೆ ಹೋಗಿ ತನ್ನ ಶರೀರಕ್ಕೆ ತಿವಿದು ರಕ್ತವನ್ನು ಬಸಿದುಕೊಟ್ಟು ತಾನು ಮೂರ್ಛೆಹೋದನು. ಅವನ ತ್ಯಾಗವನ್ನು ನೋಡಿ ಯಕ್ಷನು ಸಂತುಷ್ಟನಾಗಿ ಮೂರ್ಛೆಯನ್ನೂ ವ್ರಣವನ್ನೂ ಹೋಗಲಾಡಿಸಿ ತನ್ನ ನಿಜರೂಪವನ್ನು ತೋರಿ ಚಾರುದತ್ತನನ್ನು ಹೊಗಳಿ ಪುಷ್ಪ ವೃಷ್ಟಿಯನ್ನೂ ಸುವರ್ಣವೃಷ್ಟಿಯನ್ನೂ ಆತನ ಮೇಲೆ ಸುರಿದು ಹೊರಟುಹೋದನು. ಆ ಸುವರ್ಣವನ್ನು ಚಾರುದತ್ತನು ಊರಿನ ಜನರಿಗೆಲ್ಲ ದಾನಮಾಡಿ ಅಲ್ಲಿಂದ ಮುಂದಕ್ಕೆ ಹೊರಟು ಒಂದು ಕಾಡಿಗೆ ಹೋಗಿ ಒಂದು ತಾಪಸಾಶ್ರಮದಲ್ಲಿ ಒಬ್ಬ ತಾಪಸಿಯನ್ನು ಕಂಡನು. ಆ ಗೊರವನು ಚಾರುದತ್ತನನ್ನು ಕಂಡು " ನನ್ನಲ್ಲೊಂದು ರಸವಿದ್ಯೆಯುಂಟು. ಅದನ್ನು ಸಾಧಿಸಲು ಈವರೆಗೆ ಸಹಾಯಕರಾರೂ ದೊರೆಯಲಿಲ್ಲ ' ಎಂದನು. ಆ ಮಾತನ್ನು ಕೇಳಿ ಚಾರುದತ್ತನು ತಾನು ಸಹಾಯಕನಾಗುವೆನೆನಲು ಆ ಗೊರವನು ಸಂತುಷ್ಟನಾಗಿ ಅವನನ್ನು ಒಂದು ಸಿದ್ಧರಸದ ಬಾವಿಯ ಬಳಿಗೆ ಕರೆದೊಯ್ದು " ಈ ಬಾವಿಯಲ್ಲಿ ಸಿದ್ಧರಸವಿದೆ. ಇದಕ್ಕೆ ಪ್ರವೇಶಮಾಡುವುದು ನಿನಗೆ ಸಾಧ್ಯವಲ್ಲ. ನೀನಿಲ್ಲಿರು ನಾನಿಳಿದು ರಸವನ್ನು ತರುವೆನು " ಎನಲು ಕೇಳಿ ಚಾರುದತ್ತನು ನಸುನಕ್ಕು ತಾನೇ ಹೋಗುವೆನೆಂದನು. ಆ ಮಾತನ್ನು ಕೇಳಿ ಆ ವಂಚಕನಾದ ಗೊರವನು ಹರ್ಷಿತನಾಗಿ " ಈ ಹಗ್ಗವನ್ನು ಹಿಡಿದು ಬಾವಿಗಿಳಿದು ರಸಕ್ಕೆ ಕೈಗಳನ್ನು ಸೋಕಿಸದೆ ಈ ಸೋರೆಯ ಬುರುಡೆಯಲ್ಲಿ ತುಂಬಿ ಹಗ್ಗಕ್ಕೆ ಕಟ್ಟಿ ಅಲುಗಾಡಿಸಿದರೆ ಅದನ್ನು ಎಳೆದುಕೊಂಡು ಮತ್ತೊಂದುಸರ್ತಿ ನಿನಗಾಗಿ ಹಗ್ಗವನ್ನು ಬಿಡುವೆನು. ಅದರಿಂದ ನೀನು ಮೇಲಕ್ಕೆ ಬಾ ' ಎಂದನು. ಹಾಗೆಯೇ ಆಗಲೆಂದು ಚಾರುದತ್ತನು ಹಗ್ಗವನ್ನು ಹಿಡಿದು ಆ ಭಯಂಕರವಾದ ಬಾವಿಗಿಳಿದು ರಸವನ್ನು ತುಂಬಿ ಹಗ್ಗವನ್ನಲುಗಾಡಿಸಲು ಗೊರವನು ರಸವನ್ನು ಮೇಲಕ್ಕೆಳೆದುಕೊಂಡು ಹೊರಟುಹೋದನು. ಒಂದೆರಡು ಗಳಿಗೆಯಾದರೂ ಹಗ್ಗವು ಬಾರದಿರಲು ಆ ದುಷ್ಟನು ತನ್ನನ್ನು ವಂಚಿಸಿ ಹೊರಟುಹೋದನೆಂದು ತಿಳಿದು ಹೊರಡಲಾಗದ ಈ ಬಾವಿಯಲ್ಲಿ ತನಗೆ ಅಳಿವಲ್ಲದೆ ಉಳಿವಿಲ್ಲವೆಂದು ಬಗೆದು ಎದೆಗುಂದದೆ ಶಾಂತಚಿತ್ತನಾಗಿದ್ದು ಹಿಂದೆ ತಾನು ಮಾಡಿರುವ ದುಷ್ಕರ್ಮದ ಫಲದಿಂದ ಈ ಅವಸ್ಥೆಯೊದಗಿತೆಂದೂ ಮುಂದೆ ಸದ್ಗತಿಯನ್ನು ಸಾಧಿಸುವುದಕ್ಕಾಗಿ ಸನ್ಯಸನವ್ರತವನ್ನು ಧರಿಸುವೆನೆಂದೂ ತನ್ನಲ್ಲಿ ತಾನೇ ಮಾತನಾಡಿಕೊಳ್ಳುತ್ತಿರುವಾಗ ಆ ಬಾವಿಯ ಮತ್ತೊಂದೆಡೆಯಲ್ಲಿ ಬಿದ್ದಿರ್ದ ಓರ್ವ ಮನುಷ್ಯನು " ಅಯ್ಯಾ ! ಈ ಭಯಂಕರ

ವಾದ ಬಾವಿಯಿಂದ ಮೇಲಕ್ಕೆ ಹೋಗುವ ರೀತಿಯನ್ನು ಹೇಳುವೆನು, ಚಿಂತಿಸಬೇಡ '' ಎಂದನು ಆ ಮಾತನ್ನು ಕೇಳಿ ಚಾರುದತ್ತನು " ನನಗೆ ಹೇಳುವ ಉಪಾಯವನ್ನು ನೀನೇಕೆ ಮಾಡದಿರುವೆ ? " ಎನಲು ಆ ಮನುಷ್ಯನು " ಇಂದಿಗೆ ಮೂರು ದಿನಗಳ ಹಿಂದೆ ನಿನ್ನಂತೆ ನನ್ನನ್ನೂ ಆ ವಂಚಕ ಗೊರವನು ಈ ಬಾವಿಗಿಳಿಸಿ ಹೋದನು. ನಾನಿಲ್ಲಿ ಬಿದ್ದಿದ್ದು ಸಹಿಸಲಾಗದ ಬಾಯಾರಿಕೆಯಾಗಲು ಈ ನೀರನ್ನು ಕುಡಿಯಲು ನನ್ನ ಕೈಗಳನ್ನು ಹಾಕಿದೆನು. ಈ ರಸವು ಸ್ಪರ್ಶವಾದೊಡನೆಯೇ ನನ್ನ ಕೈಗಳು ಮುರುಟಿದುವು. ಆದುದರಿಂದ ನನಗೆ ಸಾಧ್ಯವಲ್ಲ. ಈ ಸಿದ್ಧರಸವನ್ನು ಒಂದು ಉಡುವು ಕುಡಿದು ಹೋಗುತ್ತಿದೆ. ಅದರ ಬಾಲವನ್ನು ಹಿಡಿದು ನೀನು ಮೇಲಕ್ಕೆ ಹೋಗು ' ಎಂದು ಹೇಳಿ ಕಂಠಗತಪ್ರಾಣನಾಗಲು ಚಾರುದತ್ತನು ಅವನಿಗೆ ಪಂಚನಮಸ್ಕಾರಮಂತ್ರವನ್ನು ಪದೇಶಿಸಿದನು. ಅವನು ಸತ್ತು ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು.

ಇತ್ತ ಉಡುವು ಒಂದು ರಸವನ್ನು ಕುಡಿದು ಹಿಂದಿರುಗುವಾಗ ಚಾರುದತ್ತನು ಅದರ ಬಾಲವನ್ನು ಹಿಡಿಯಲು ಅದು ರಭಸದಿಂದ ಹತ್ತಿ ಮೇಲಕ್ಕೆ ಸ್ವಲ್ಪ ದೂರದಲ್ಲಿ ಒಂದು ಹುತ್ತದ ಬಿಲಕ್ಕೆ ಹೊಕ್ಕಿತು. ಆ ಹುತ್ತದ ಬಿಲವು ಇಟ್ಟಿಡೆಯಾಗಿದ್ದುದರಿಂದ ಬಾಲವು ಕೈತಪ್ಪಿಹೋಯ್ತು. ಇನ್ನೇನು ಗತಿಯೆಂದು ಚಾರುದತ್ತನು ಚಿಂತಿಸುತ್ತಿರುವಷ್ಟರಲ್ಲಿ ಒಂದು ಆಡು ಬಂದು ಆ ಹುತ್ತದ ಬಿಲದಲ್ಲಿ ಕಾಲಿಕ್ಕಲು ಅದನ್ನು ಹಿಡಿದುಕೊಂಡನು. ಆ ಮೇಕೆಯು ಅರಚುತ್ತಿರಲು ಆಡುಮೇಯಿಸುವ ಬಾಲಕರು ಬಂದು ಆ ಕಾಲನ್ನೆಳೆದರೂ ಬಾರದಿರಲು ಆ ಹುತ್ತದ ಬಾಯನ್ನು ತೆರಪುಮಾಡಿದರು. ಆಗ ಚಾರುದತ್ತನು ಅಲ್ಲಿಂದ ಮೆಲ್ಲನೆ ಪೊರಮಟ್ಟು ಕಾಡಿನಲ್ಲಿ ಬರುತ್ತಿರುವಾಗ ಒಂದು ಭಯಂಕರವಾದ ಕಾಡುಕೋಣವು ಎದುರಿಸಲು ಅವನು ಅಲ್ಲಿ ಬಿದ್ದಿದ್ದ ಹೆಬ್ಬಾವಿನ ಬೆನ್ನನ್ನು ಮೆಟ್ಟಿ ದಾಟಿದನು. ಆ ಅಜಗರವು ಕೋಪಗೊಂಡೆದ್ದು ಎದುರಾಗಿ ಬರುತ್ತಿದ್ದ ಕಾಡುಕೋಣನನ್ನು ನುಂಗಿತು. ಹಾಗೆ ಆ ವಿಪತ್ತಿನಿಂದ ಪಾರಾಗಿ ಚಾರುದತ್ತನು ಮುಂದೆ ಹೋಗಿ ಹೊಳೆಯಲ್ಲಿ ಸ್ನಾನವನ್ನು ಮಾಡಿಬಂದು ಫಲಭರಿತವಾದ ಒಂದು ಮಾವಿನಮರದಡಿಯಲ್ಲಿ ಕುಳಿತಿರಲು ಅಲ್ಲಿಗೆ ಹರಿಸಖ ಮೊದಲಾದ ಅವನ ಐದುಮಂದಿ ಸ್ನೇಹಿತರೂ ರುದ್ರದತ್ತನೂ ಬಂದು ಸೇರಿದರು. ಅವರಿಗೆ ಯಥೋಚಿತವಾಗಿ ಅಭಿವಂದಿಸಿ ಪರಸ್ಪರ ಕುಶಲವಾರ್ತೆಯಾದಮೇಲೆ ಚಾರುದತ್ತನು ತನ್ನ ತಾಯಿಯ ಮತ್ತು ಹೆಂಡತಿ ಮೊದಲಾದವರ ಕ್ಷೇಮಸಮಾಚಾರವನ್ನು ಕೇಳಲು ಅವರ ಕ್ಷೇಮವನ್ನು ತಿಳಿಸಿ ರುದ್ರದತ್ತನು

" ಕಮಲಲತೆಯು ಸೂರ್ಯನನ್ನು ನೆನೆವಂತೆ ವಸಂತತಿಲಕೆಯು ನೆನೆದು ನಿನ್ನ ಬರುವಿಕೆ ಯನ್ನೇ ಎದುರು ನೋಡುತ್ತಿದ್ದಾಳೆ " ಎಂದನು. ಅದಕ್ಕೆ ಚಾರುದತ್ತನು " ಎಲೆ ಚಿಕ್ಕಯ್ಯನೆ! ಪ್ರತಿದಿನ ಬಂದು ತನಗೆರಗಿ ಮಕರಂದವನ್ನು ಪಾನಮಾಡುವ ತುಂಬಿ ಯು ಅಗಲಿದರೆ ಕುಮುದಲತೆಯು ಬಳಿಕ ಅದನ್ನು ಬಯಸುವುದೇ? ವಿಟರ ಅಗಲಿಕೆ ಯಿಂದ ಬೆಲೆವೆಣ್ಣುಗಳಿಗೆ ದುಃಖವಾಗುವುದೆಂಬ ಕುಟಿಲವಚನವನ್ನು ನಂಬಬಹುದೇ?" ಎಂದನು. ಆ ಮಾತನ್ನು ಕೇಳಿ ರುದ್ರದತ್ತನೂ ಹರಿಸಖ ಮೊದಲಾದವರೂ " ನೀನು ತೊಲಗಿದಂದಿನಿಂದ ವಸಂತತಿಲಕೆಯು ಇತರ ವಿಟರನ್ನು ಸಹೋದರರಂತೆ ಭಾವಿಸಿ ಕೊಂಡಿದ್ದು ಆಭರಣಾಲಂಕಾರಗಳನ್ನೂ ಭೋಜನವನ್ನೂ ತೊರೆದು ಮೌನವನ್ನು ಧರಿಸಿ ಪರಪುರುಷರನ್ನು ನೋಡುವುದಿಲ್ಲವೆಂಬ ವ್ರತವನ್ನು ಕೈಕೊಂಡಿರುವಳು" ಎಂದು ಆಕೆಯ ನಿಜಸ್ಥಿತಿಯನ್ನು ಹೇಳಿದರು. ಆ ನುಡಿಯನ್ನು ಕೇಳಿ ಚಾರುದತ್ತನು ಬಹು ಸಂತುಷ್ಟನಾಗಿ ತನಗೊದಗಿದ ಆಪತ್ತುಗಳನ್ನು ಅವರುಗಳಿಗೆ ಹೇಳುತ್ತ ಅಲ್ಲಿಂ ದೆದ್ದು ಪಶ್ಚಿಮಸಮುದ್ರತೀರಕ್ಕೆ ಹೋಗಿ ಅಲ್ಲಿರುವ ರಜತಪರ್ವತದ ಸಮೀ ಪದಲ್ಲಿರುವ ಪಾರ್ಶ್ವಕವೆಂಬ ಪಟ್ಟಣಕ್ಕೆ ಪ್ರವೇಶಿಸಿ ರುದ್ರದತ್ತನ ಮೂಲಕ ಓರ್ವ ಪಾರಸಿಕನನ್ನು ಕರೆಯಿಸಿ ರತ್ನದ್ವೀಪಕ್ಕೆ ಹೋಗುವ ದಾರಿಯಾವುದೆಂ ದೂ ಅದು ಯಾವಕಡೆ ಇರುವುದೆಂದೂ ಅಲ್ಲಿಗೆ ಹೋಗುವ ರೀತಿ ಯಾವುದೆಂದೂ ಕೇಳಲು ಅವನು ಆ ರತ್ನದ್ವೀಪವು ಪೂರ್ವಸಮುದ್ರದ ನಟ್ಟನಡುವಿನಲ್ಲಿರುವುದೆಂ ದೂ ಅಲ್ಲಿಗೆ ಹೋಗಲು ನಾಲ್ಕು ಬೆರಳಗಲದ ಕಲ್ಲಿನ ದಾರಿಯಿರುವುದೆಂದೂ ಆ ದಾರಿಯ ಇಕ್ಕೆಲದಲ್ಲೂ ಅಗಾಧವಾದ ನೀರಿರುವುದರಿಂದ ಅಲ್ಲಿಗೆ ಹೋಗ ಲು ಸಾಧ್ಯವಲ್ಲವೆಂದೂ ಆಡಿನ ಬೆನ್ನಿನಮೇಲೆ ಕುಳಿತು ಮನಸ್ಸನ್ನು ಬಿಗಿಹಿ ಡಿದು ಹೋಗಬೇಕೆಂದೂ ಅದು ಸಾಮಾನ್ಯರಿಗಳವಲ್ಲವೆಂದೂ ಹೇಳಿದನು. ಆ ಮಾತನ್ನು ಕೇಳಿ ಚಾರುದತ್ತನು ಏಳು ಆಡುಗಳನ್ನು ತರಿಸಿ ಖಡ್ಗದಮೇಲೆ ಅವು ಗಳಿಗೆ ನಡೆಗಲಿಸಿ ಆ ಏಳುಮಂದಿಗಳೂ ಆಡುಗಳನ್ನೇರಿಕೊಂಡು ಸಮುದ್ರತೀರಕ್ಕೆ ಹೋಗಿ ಚಾರುದತ್ತನು ಮೊದಲೊಮ್ಮೆ ತಾನೊಬ್ಬನೇ ಹೋಗಿ ಆ ರತ್ನದ್ವೀಪವನ್ನು ನೋಡಿಕೊಂಡು ಬಂದು ಆ ಮೇಲೆ ಎಲ್ಲರೂ ಹೋಗುವುದಾಗಿ ನಿರ್ಣಯಿಸಿ ಕೊಂಡು ಚಾರುದತ್ತನು ಹೊರಟುಹೋಗಿ ಘೋರವಾದ ಅರಣ್ಯದ ನಡುವಿನಲ್ಲಿರುವ ಆ ರತ್ನದ್ವೀಪಕ್ಕೆ ಹೋಗಿ ನೋಡಿಕೊಂಡು ಹಿಂದಿರುಗುವುದು ತಡವಾದುದರಿಂದ ರುದ್ರದತ್ತ ಮೊದಲಾದವರು ಚಾರುದತ್ತನಿಗೆ ಇದಿರಾಗಿ ಹೊರಟು ಸಮುದ್ರ ಮಧ್ಯದಲ್ಲಿ ಸಂಧಿಸಲು ಅವರನ್ನು ನೋಡಿ ಚಾರುದತ್ತನು " ನೀವುಗಳು ವಿಚಾರ

ಮಾಡದೆ ಹೀಗೆ ಬರಬಹುದೇ ?" ಎನಲು ರುದ್ರದತ್ತನು "ಗೊತ್ತಾದ ಸಮಯಕ್ಕೆ ನೀನು ಬಾರದಿರಲು ಸಂದೇಹಗೊಂಡು ನಾವು ಬಂದೆವು" ಎಂದನು. ಅದಕ್ಕೆ ಚಾರುದತ್ತನು "ಸಮುದ್ರದ ಈ ಇಕ್ಕಟ್ಟಿನ ದಾರಿಯಲ್ಲಿ ಹಿಂದಿರುಗುವ ಧೀರರುಂಟೇ ? ಆದುದರಿಂದ ನಾನೀ ಸಮುದ್ರದಪಾಲಾಗಿ ನಿಮ್ಮನ್ನು ಕಳುಹುವೆನು" ಎನಲು ಹರಿಸಖ ಮೊದಲಾದವರು "ಲೋಕದಲ್ಲಿ ನಮ್ಮಂಥ ಮನುಷ್ಯರನೇಕರುಂಟು. ಏಕಾಂಗವೀರನಾದ ನಿನ್ನಂಥ ಗುಣಿಗಳು ಅಪರೂಪವಾದುದರಿಂದ ನಾವು ಪ್ರಾಣಗಳನ್ನು ಬಿಡುವೆವು, ನೀನು ಹೋಗು" ಎಂದರು. ಅದಕ್ಕೆ ಚಾರುದತ್ತನು "ನಿಮ್ಮೆಲ್ಲರನ್ನು ಕೊಂದು ಬಂದನೆಂಬ ಅಪಕೀರ್ತಿಯನ್ನು ನಾನು ನೀಗುವುದೆಂತು?" ಎಂದು ಹೇಳಿ ತನ್ನ ಜಾಣ್ಮೆಯನ್ನು ನೋಡುವೆನೆಂದು ಯೋಚಿಸಿ "ನಮಸ್ಸಿದ್ಧೇಭ್ಯಃ" ಎಂಬ ಮಂತ್ರವನ್ನುಚ್ಚರಿಸಿ ಎಡಗಡೆಗೆ ಸರಿದು ಒಂದು ಕಾಲನ್ನು ದಾರಿಯಲ್ಲಿಟ್ಟು ನಿಂದು ಆಡಿನ ಮುಂಗಾಲುಗಳನ್ನು ರತ್ನದ್ವೀಪದ ಕಡೆಗೆ ತಿರುಗಿಸಿ ದಾರಿಯಲ್ಲಿ ತಂದಿಟ್ಟು ಹಿಂಗಾಲುಗಳನ್ನು ತಿರುಗಿಸಿ ನೆಟ್ಟನೆ ಮಾಡಿ ಹೊರಟನು. ಆ ಚಾತುರ್ಯವನ್ನು ನೋಡಿ ರುದ್ರದತ್ತ ಮೊದಲಾದವರು ಬಹು ಸಂತುಷ್ಟರಾದರು. ತರುವಾಯ ಎಲ್ಲರೂ ರತ್ನದ್ವೀಪಕ್ಕೆ ಹೋಗಿ ಒಂದು ಕೊಳದಲ್ಲಿ ಕೈಕಾಲುಗಳನ್ನು ತೊಳೆದು ಮುಂದೆ ಹೋಗಿ ಚಾರುದತ್ತನು ಒಂದು ಮಾವಿನಮರದಡಿಯಲ್ಲಿ ಮಲಗಿ ನಿದ್ರೆಹೋದನು. ಇತ್ತ ಆ ಕ್ರೂರಕರ್ಮಿಯಾದ ರುದ್ರದತ್ತನು ಅವನಿಗೆ ಮಾದಕಪದಾರ್ಥವನ್ನು ಕೊಟ್ಟು ಹಿಂದೆ ಆ ಪಾರಸಿಕನು ತನ್ನಲ್ಲಿ ಹೇಳಿದ್ದಂತೆ ಆಡುಗಳ ತಲೆಗಳನ್ನು ಕಡಿದು ಚರ್ಮವನ್ನು ಮಗುಚಿ ಏಳು ಚೀಲಗಳನ್ನು ಮಾಡಿ ಒಂದು ಚೀಲದಲ್ಲಿ ಮೈಮರೆತುಬಿದ್ದಿದ್ದ ಚಾರುದತ್ತನನ್ನು ಹೊಗಿಸಿ ಅದರ ಬಾಯಿಯನ್ನು ಕಟ್ಟಿ ಉಳಿದ ಆರು ತಿದಿಗಳಲ್ಲಿ ಆರು ಮಂದಿಗಳು ಹೊಕ್ಕು ಅವುಗಳ ಬಾಯಿಗಳನ್ನು ಕಟ್ಟಿದರು. ಅಲ್ಲಿಗೆ ಎಂಟು ಬೇರುಂಡ ಪಕ್ಷಿಗಳು ಹಾರಿಬಂದು ಅವುಗಳಲ್ಲಿ ಆರುಪಕ್ಷಿಗಳು ಆರು ತಿದಿಗಳನ್ನು ಕಚ್ಚಿಕೊಂಡು ಆಕಾಶಕ್ಕೆ ಹಾರಿದುವು. ಚಾರುದತ್ತನು ಹೊಕ್ಕಿರ್ದ ತಿದಿಯನ್ನು ಒಕ್ಕಣ್ಣಿನ ಒಂದು ಬೇರುಂಡವು ಕಚ್ಚಿಕೊಂಡು ಆಕಾಶಕ್ಕೆ ಹಾರುತ್ತಿರಲು ಮತ್ತೊಂದು ಬೇರುಂಡವು ಅದನ್ನು ಹಿಂಬಾಲಿಸಿಕೊಂಡು ಹೋಗಿ ಕಣ್ಣಿಲ್ಲದ ಕಡೆಯಲ್ಲಿ ಕುಟುಕಿ ಎಳುಸಲ ಬೀಳಿಸಿತು. ಏಳುಸಲವೂ ನೆಲಕ್ಕೆ ಬೀಳಲು ಬಿಡದೆ ಮತ್ತೆ ಮತ್ತೆ ಕಚ್ಚಿಕೊಂಡಿತು. ಹೀಗೆ ಅವೆರಡು ಪಕ್ಷಿಗಳೂ ಕೋಪದಿಂದ ಹೋರಾಡಲು ಆ ತಿದಿಯು ಸಮುದ್ರಕ್ಕೆ ಬಿದ್ದು ತೆರೆಗಳ ಹೊಡೆತದಿಂದ ದಡಕ್ಕೆ ಸೇರಿತು. ಆಗ ಚಾರುದತ್ತನು

ಎಚ್ಚತ್ತು ತಿದಿಯನ್ನು ಹರಿದು ದೇವರೇಗತಿಯೆಂದು ಹೊರಟು ಒಂದು ಸರೋವರಕ್ಕೆ ಹೋಗಿ ಸ್ನಾನಮಾಡಿ ದೇವರನ್ನು ಸ್ಮರಿಸಿ ಕರ್ಮವಶದಿಂದ ತಾನೊಬ್ಬನೇ ಸಮುದ್ರತೀರದಲ್ಲಿ ಸಿಲುಕಿದೆನೆಂದು ಯೋಚಿಸಿ ಅದಕ್ಕಾಗಿ ಚಿಂತಿಸದೆ ಧೈರ್ಯವಾಗಿದ್ದು ಒಂದು ಬಂಡೆಯನ್ನೇರಿ ಸುತ್ತಲು ನೋಡುವಾಗ ಅಲ್ಲೊಂದು ಮಾವಿನ ಮರದಡಿಯಲ್ಲಿದ್ದ ಯತಿರಾಯನನ್ನು ಕಂಡು ತನ್ನ ಚಿಂತೆಯೆಲ್ಲವನ್ನೂ ನೀಗಿಕೊಂಡು ಗುರುಭಕ್ತಿಯಿಂದ ಆ ಮುನಿವರ್ಯರಿಗೆ ನಮಸ್ಕರಿಸಿದನು. ಆ ಚಾರಣ ಮುನಿಗಳು ಕಣ್ದೆರೆದು ಕೈಯೆತ್ತಿ ಹರಸಿ ಸಂತೈಸುವಾಗ ಆಕಾಶದಿಂದ ಹರಿಕೇತುವೆಂಬ ಖೇಚರನು ಇಳಿದು ಬಂದು ತಂದೆಯಾದ ಆ ಮುನಿಗಳಿಗೆರಗಲು ಅವರು "ಹರಿಕೇತುವೇ ಕೇಳು, ನಮ್ಮನ್ನು ಚಂಪಾಪುರದ ನದೀತೀರದಲ್ಲಿ ಆ ವೈರಿಯು ಶೂಲದಲ್ಲಿ ಹಾಕಿರಲು ಕರುಣದಿಂದ ಈ ಚಾರುದತ್ತನು ರಕ್ಷಿಸಿದನು. ಆದುದರಿಂದ ನಿನಗೆ ನಮಗಿಂತಲೂ ಹೆಚ್ಚಿನ ಪಿತೃಸ್ಥಾನವು ಈ ಚಾರುದತ್ತನಿಗೆ ಸಲ್ಲತಕ್ಕದಾಗಿದೆ. ಇವನನ್ನು ಕರೆದೊಯ್ದು ನಿನ್ನ ಸಾಮ್ರಾಜ್ಯಪದವಿಯನ್ನಿತ್ತು ಬಾಳು" ಎನಲು "ಹಾಗೆಯೇ ಮಾಡುವೆನು" ಎಂದು ಹರಿಕೇತುವು ಸಮ್ಮತಿಸಿ ಸಂತೋಷದಿಂದ ಚಾರುದತ್ತನ ಚರಣಗಳಿಗೆ ನಮಸ್ಕರಿಸಿ ಕುಳಿತಿರುವಾಗ ಆಕಾಶಮಾರ್ಗದಿಂದಿಳಿದು ಬಂದು ಕುಸುಮಶೇಖರನೆಂಬೊರ್ವ ದೇವನು ಮೊದಲು ಚಾರುದತ್ತನಿಗೆ ನಮಸ್ಕಾರಮಾಡಿ ಬಳಿಕ ಮುನಿಗಳಿಗೆ ನಮಸ್ಕರಿಸಲು ಹರಿಕೇತುವು ನೋಡಿ "ಎಲೆ ದೇವನೆ! ಗುರುಗಳಿರುವಾಗ ಗೃಹಸ್ಥನಿಗೆರಗುವುದುಚಿತವೇ ?" ಎಂದನು. ಅದಕ್ಕೆ ಆ ದೇವನು 'ರಸಕೂಪದಲ್ಲಿ ಬಿದ್ದು ಅಜ್ಞಾನದಿಂದ ಸತ್ತು ದುರ್ಗತಿಗೆ ಹೋಗುವವನಿಗೆ ಈ ಚಾರುದತ್ತನು ಕಿವಿಯಲ್ಲಿ ಪಂಚನಮಸ್ಕಾರಮಂತ್ರವನ್ನುಪದೇಶಿಸಿ ಸದ್ಗತಿಗೆ ಕಳುಹಿದವನೂ ದೇವ ಗುರು ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳ ಸ್ವರೂಪವನ್ನು ತಿಳುಹಿದವನೂ ಆಗಿರುವುದರಿಂದ ಇವನಿಗೆ ಮೊದಲು ವಂದಿಸಿದೆನು" ಎಂದು ಹೇಳಿ ಪುಷ್ಪವೃಷ್ಟಿಯನ್ನು ಮಾಡಿ ವಸ್ತ್ರಾಭರಣಗಳಿಂದಲಂಕರಿಸಿ ಹೊಗಳಿ ಚಂಪಾನಗರಕ್ಕೆ ಕರೆದೊಯ್ದು ಬಿಡುವೆನೆಂದನು. ಆ ಮಾತನ್ನು ಕೇಳಿ ಮುನೀಶ್ವರರು ಹರಿಕೇತುವಿನೊಡನೆ ಚಾರುದತ್ತನು ತಮ್ಮ ಪಟ್ಟಣಕ್ಕೆ ಹೋಗಬೇಕೆಂದು ತಡೆಯಲು ಆ ದೇವನು ದೇವಲೋಕಕ್ಕೆ ಹೋದನು.

ಇತ್ತ ಹರಿಕೇತುಖೇಚರನು ಮುನೀಶ್ವರರ ಅಪ್ಪಣೆಯನ್ನು ಪಡೆದು ಚಾರುದತ್ತನೊಡನೆ ಪುಷ್ಪಕವಿಮಾನವನ್ನೇರಿ ತನ್ನ ಪಟ್ಟಣಕ್ಕೆ ಹೋಗಿ ತನ್ನ ದೊರೆತನವನ್ನು ಕೊಡಲು ಅದನ್ನು ಚಾರುದತ್ತನು ಸ್ವೀಕರಿಸಲಿಲ್ಲವು. ಆಗ ಹದಿನಾರು

ಮಂದಿ ರಾಜಕನ್ಯೆಯರನ್ನು ತಂದು ಚಾರುದತ್ತನಿಗೆ ಮದುವೆಮಾಡಿದನು. ಆ ಸ್ತ್ರೀಯರೊಡನೆ ಸುಖವಾಗಿದ್ದು ಒಂದು ದಿನ ಹರಿಕೇತುವನ್ನು ಕರೆದು ಆ ಗಂಡ ಬೇರುಂಡಗಳು ರತ್ನದ್ವೀಪಕ್ಕೊಯ್ದ ರುದ್ರದತ್ತ ಹರಿಸಖ ಮೊದಲಾದವರನ್ನು ಕರೆತಂದು ಚಂಪಾನಗರದಲ್ಲಿ ಬಿಡುವಂತೆ ಹೇಳಿದನು. ಹರಿಕೇತುವು ಅದರಂತೆ ಮಾಡಿದನು. ಚಾರುದತ್ತನು ಹರಿಕೇತುವಿನ ಶತ್ರುಗಳನ್ನೆಲ್ಲ ನಿರ್ಮೂಲಮಾಡಿ ಹರಿಕೇತುವನ್ನು ಸಂತೈಸಿ ಒಂದು ದಿನ ತಾನು ತನ್ನ ಊರಿಗೆ ಹೋಗಬೇಕೆಂದನು. ಆಗ ಹರಿಕೇತುವು ತನ್ನ ತಂಗಿಯಾದ ಗಂಧರ್ವದತ್ತೆಯನ್ನು ಚಾರುದತ್ತನ ವಶಪಡಿಸಿ ಆಕೆಯನ್ನು ಭೂಚರರಲ್ಲಿ ಅನುರೂಪನಾದ ವರನಿಗೆ ಕೊಟ್ಟು ಮದುವೆಮಾಡುವಂತೆ ಕೇಳಿಕೊಂಡನು. ಆಗ ಚಾರುದತ್ತನು ಕುಸುಮಶೇಖರ ದೇವನನ್ನು ಸ್ಮರಿಸಲು ಅವನು ಬಂದು ಕೊಂಡಾಡಿ ಕಾಮಧೇನು ಚಿಂತಾರತ್ನಗಳ ನ್ನಿತ್ತು ಪೂಜಿಸಿದ ಬಳಿಕ ಚಾರುದತ್ತನು ತನ್ನ ಪತ್ನಿಯರೊಡನೆ ವಿಮಾನಾರೂಢನಾಗಿ ದೇವವಿದ್ಯಾಧರ ಸೈನ್ಯಸಮೇತನಾಗಿ ಚಂಪಾನಗರದ ಬಾಹ್ಯೋದ್ಯಾನಕ್ಕೆ ಬಂದು ಬೀಡುಬಿಡಿಸಿದನು. ಆ ವಾರ್ತೆಯನ್ನು ವಿಮಲವಾಹನರಾಜನು ಕೇಳಿ ನಗರವನ್ನು ಶೃಂಗರಿಸಿ ವೈಭವದಿಂದ ಚಾರುದತ್ತನನ್ನು ಪಟ್ಟಣದೊಳಕ್ಕೆ ಕರೆತಂದನು. ಚಾರುದತ್ತನು ರಾಜನಿಗೂ ಗುರುಹಿರಿಯರಿಗೂ ವಂದಿಸಿ ಬಂಧುಬಳಗದವರಿಗೆ ಮಧುರವಚನವನ್ನೂ ಮಿತ್ರಾವತಿಗೆ ವಿನಯವಚನವನ್ನೂ ನುಡಿದು ತನ್ನ ಮನೆಯನ್ನು ತೆಗೆದುಕೊಂಡಿದ್ದವನಿಗೆ ನೂರ್ಮಡಿಯಾಗಿ ದ್ರವ್ಯವನ್ನು ಕೊಟ್ಟು ಅದನ್ನು ಪಡೆದನು. ಆದಿನ ಕುಸುಮಶೇಖರದೇವನು ಸುವರ್ಣವೃಷ್ಟಿಯನ್ನೂ ರತ್ನವೃಷ್ಟಿಯನ್ನೂ ಕರೆದು ಚಾರುದತ್ತನ ಅಪ್ಪಣೆಯನ್ನು ಪಡೆದು ಹೊರಟುಹೋದನು. ಹರಿಕೇತುವನ್ನು ಹತ್ತೆಂಟು ದಿನಗಳವರೆಗೆ ಇರಿಸಿಕೊಂಡಿದ್ದು ಪ್ರೀತಿಯಿಂದ ಶಿವಮಂದಿರಪುರಕ್ಕೆ ಕಳುಹಿಸಿಕೊಟ್ಟನು. ಬಳಿಕ ವಸಂತತಿಲಕೆಯನ್ನು ತನ್ನ ಮನೆಗೆ ಕರೆಯಿಸಿ ಪಟ್ಟಣದ ಬಹಿರುದ್ಯಾನದಲ್ಲಿ ಹದಿನೆಂಟು ಉಪ್ಪರಿಗೆ ಮನೆಗಳನ್ನು ಕಟ್ಟಿಸಿ ಅಲ್ಲಿ ಮಿತ್ರಾವತಿಯನ್ನೂ ಹದಿನಾರುಮಂದಿ ವಿದ್ಯಾಧರಸ್ತ್ರೀಯರನ್ನೂ ವಸಂತತಿಲಕೆಯನ್ನೂ ಇರಿಸಿ ಅವರೊಡನೆ ಸುಖವಾಗಿರುವನು. ಗಂಧರ್ವದತ್ತೆಗೆ ಸುವರ್ಣದ ಮನೆಯನ್ನು ಕಟ್ಟಿಸಿಕೊಟ್ಟು ಚಾರುದತ್ತನು ಕುಬೇರನಂತೆ ಸಂತುಷ್ಟನಾಗಿರುವನು ''



# ೧೧. ಗಾಂಧರ್ವದತ್ತೆಯ ವೀಣಾಸ್ವಯಂವರ ಸಂಧಿ.

ಗಾಂಧರ್ವದತ್ತೆಯ ವೀಣಾಗುರುವು ಮೇಲೆ ಹೇಳಿದಂತೆ ವಸುದೇವನಿಗೆ ಚಾರುದತ್ತನ ಮತ್ತು ಗಾಂಧರ್ವದತ್ತೆಯ ವಿಷಯವನ್ನು ತಿಳುಹಲು ವಸುದೇವನು ಸಂತುಷ್ಟನಾಗಿ ತನ್ನ ಕೈಕಡಗವನ್ನು ಆತನಿಗೆ ಕೊಟ್ಟನು. ಅಷ್ಟರಲ್ಲಿ ಸೂರ್ಯಾಸ್ತಮಾನವಾಗಲು ಆ ಮನೋಹರನು ವಸುದೇವನನ್ನು ಮನೆಗೊಯ್ದು ಆ ಮರುದಿನವೇ ನಡೆದ ವೀಣಾಸ್ವಯಂವರಕ್ಕೆ ವಸುದೇವನನ್ನು ಕರೆದೊಯ್ದು ಸಕಲ ರಾಜಕುಮಾರರ ಮಧ್ಯದಲ್ಲಿ ಕುಳ್ಳಿರಿಸಿದನು. ವಸುದೇವನು, ನಕ್ಷತ್ರಗಳ ಮಧ್ಯದಲ್ಲಿ ಚಂದ್ರನಂತೆ, ಶೋಭಿಸಿದನು. ಆಗ ಗಾಂಧರ್ವದತ್ತೆಯು ಸರ್ವಾಭರಣಭೂಷಿತಳಾಗಿ ಸ್ವಯಂವರಮಂಟಪಕ್ಕೆ ಬಂದಳು. ವೀಣಾಗುರುವು ರಾಜಕುಮಾರರನ್ನು ಸಂಬೋಧಿಸಿ ವೀಣಾವಾದನವನ್ನು ಮಾಡುವಂತೆ ಹೇಳಲು ಅವರು ವೀಣೆಯನ್ನು ನುಡಿಸಿದರು. ಗಾಂಧರ್ವದತ್ತೆಯ ಚಿತ್ತವು ವಸುದೇವನಲ್ಲಿ ಆಸಕ್ತವಾಗಿದ್ದಿತು. ಬೇರೆಯವರ ವೀಣಾವಾದನವನ್ನು ಆಕೆಯು ಮೆಚ್ಚಲಿಲ್ಲ. ಕೊನೆಗೆ ವಸುದೇವನಿಗೆ ವೀಣೆಯನ್ನು ತರುಕೊಡಲು ಆತನು ತಂತಿಯನ್ನು ಮೀಟಿನೋಡಿ ನಿರ್ದೋಷವಾದ ವೀಣೆಯನ್ನು ತರಿಸಿಕೊಡುವಂತೆ ಹೇಳಿದನು. ಆಗ ಹತ್ತೆಂಟು ವೀಣೆಗಳನ್ನು ತಂದು ಮುಂದಿರಿಸಲು ಅವುಗಳಲ್ಲಿ ಉತ್ತಮವಾದೊಂದು ವೀಣೆಯನ್ನು ಆಯ್ದುಕೊಳ್ಳಲು ಆ ವೀಣಾಗುರುವು "ಚಾತುರ್ಯದಿಂದ ನೀನು ಹಿಡಿದ ವೀಣೆಯ ಕುಲವಾವುದು ?" ಎಂದು ಕೇಳಿದನು, ಅದಕ್ಕೆ ವಸುದೇವನು.

"ಹಸ್ತಿನಾಪುರದ ಮೇಘರಥನಿಗೂ ಪದ್ಮಾವತಿಗೂ ವಿಷ್ಣುಕುಮಾರ ಪದ್ಮರಥರೆಂಬಿಬ್ಬರು ಮಕ್ಕಳು ಹುಟ್ಟಿದರು. ಒಂದಾನೊಂದು ದಿನ ಮೇಘರಥನು ಮೇಘವನ್ನು ನೋಡಿ ವೈರಾಗ್ಯವನ್ನು ಹೊಂದಿ ಕಿರಿಯಮಗನಾದ ಪದ್ಮರಥನಿಗೆ ರಾಜ್ಯಭಾರವನ್ನು ವಹಿಸಿ ತನ್ನ ಹಿರಿಯಮಗನೊಡನೆ ದೀಕ್ಷೆಯನ್ನು ತೆಗೆದುಕೊಂಡು ತಪಸ್ಸನ್ನು ಮಾಡುತ್ತಿದ್ದನು—

ಇತ್ತ ಉಜ್ಜಯನಿಯ ನಂದನವನದಲ್ಲಿ ಅಕಂಪನರೆಂಬ ಮಹಾಯೋಗಿವರ್ಯರು ಯೋಗಾರೂಢರಾಗಿದ್ದರು. ಅಲ್ಲಿಗೆ ಆ ನಗರದ ದೊರೆಯಾದ ವೃಷಭಸೇನನ ಮಂತ್ರಿಗಳಾದ ಬಲಿ ಬೃಹಸ್ಪತಿ ಶುಕ್ರ ಇವರು ಹೋಗಿ ಅಕಂಪನರೊಡನೆ ಮಿಥ್ಯಾವಾದವನ್ನು ಮಾಡಿ ಸೋತುಹೋದರು. ಬಲಿಯು ಅವರಲ್ಲಿ ಕೋಪಗೊಂಡು ಒಂದುದಿನ ಆ ವನಕ್ಕೆ ಹೋಗಿ ಅಕಂಪನರನ್ನು ಕೊಲ್ಲಬೇಕೆಂದು ಖಡ್ಗ

ವನ್ನೆತ್ತಿದನು. ಆಗ ವನದೇವತೆಗಳು ಕೋಪದಿಂದ ಅವನನ್ನು ಬಂಧಿಸಿ ಬಾಧೆಪಡಿಸಲು ಅದನ್ನು ತಾಳಲಾರದೆ ಮೊರೆಯಿಟ್ಟನು. ಆಗ ಆ ನಗರದ ದೊರೆಯು ಬಂದು ಮುನೀಶರಿಗೆರಗಿ ಬಲಿಯು ಉಪಸರ್ಗವನ್ನು ದೂರಮಾಡಿ ಆ ನೂರು ಮಂದಿ ಮಂತ್ರಿಗಳನ್ನೂ ಊರಿಂದಟ್ಟಿದನು. ದೇಶಭ್ರಷ್ಟರಾದ ಆ ಮೂರುಮಂದಿ ಮಂತ್ರಿಗಳೂ ಹಸ್ತಿನಾಪುರಕ್ಕೆ ಹೋಗಿ ಪದ್ಮರಥನಲ್ಲಿ ಮಂತ್ರಿಗಳಾಗಿ ಆ ಪದ್ಮರಥನ ಶತ್ರುರಾಜರುಗಳನ್ನು ಗೆದ್ದು ಬಲಿಯು ದೊರೆಯ ಮೆಚ್ಚಿಗೆಗೆ ಪಾತ್ರನಾದನು. ದೊರೆಯು ಮೆಚ್ಚಿಗೆಯನ್ನು ಬೇಡೆನಲು ಬಲಿಯು "ದೊರೆಯೆ! ನೀನು ಕೊಡುವ ಮೆಚ್ಚಿಗೆಯು ಭಂಡಾರದಲ್ಲಿರಲಿ" ಎಂದು ಹೇಳಿ ಸುಖವಾಗಿರುವಾಗ ಒಂದುದಿನ ಆ ಅಕಂಪನಮುನೀಶ್ವರರು ಏಳುನೂರು ಮಂದಿ ಮುನಿಗಳೊಡನೆ ಬಂದು ಆ ಊರಿನ ಬಳಿಯಲ್ಲಿರುವ ಸೌಮ್ಯಗಿರಿಯಲ್ಲಿ ಯೋಗಾರೂಢರಾಗಿರಲು ಅದನ್ನು ತಿಳಿದು ಬಲಿಯು ತನ್ನ ಮುಯ್ಯಿಯನ್ನು ತೀರಿಸಿಕೊಳ್ಳಬೇಕೆಂದೆಣಿಸಿ ದೊರೆಯ ಬಳಿಗೆ ಹೋಗಿ ಆ ಮೆಚ್ಚಿಗೆಯನ್ನು ಬೇಡಿದನು. ಪದ್ಮರಥನು ಬಲಿಯ ಇಚ್ಛಾನುಸಾರವಾಗಿ ಏಳು ದಿನಗಳ ದೊರೆತನವನ್ನು ಬಿಟ್ಟುಕೊಟ್ಟು ತಾನು ಮರೆಯಾಗಿದ್ದನು. ಬಲಿಯು ಮುನಿಗಳಿಗೆ ಬಾಧೆಪಡಿಸಬೇಕೆಂಬ ಉದ್ದೇಶದಿಂದ ಆ ಬೆಟ್ಟದಲ್ಲಿ ದೊಡ್ಡ ಹೋಮವನ್ನೂ ಬ್ರಾಹ್ಮಣಭೋಜನವನ್ನೂ ಮಾಡಿಸುವುದಾಗಿ ನೆವವನ್ನು ಹೇಳಿ ಯಜ್ಞದೀಕ್ಷಿತರು ಮೊದಲಾದ ಬ್ರಾಹ್ಮಣರನ್ನು ಬರಮಾಡಿ ಆ ಮುನಿಗಳು ಯೋಗಾರೂಢರಾಗಿರುವ ಗುಹೆಯ ಬಾಗಿಲಲ್ಲಿ ಕೋಟಿಹೋಮಗಳನ್ನು ಮಾಡಿಸಲಾರಂಭಿಸಿದನು. ಆ ಭಯಂಕರವಾದ ಉರಿಯಿಂದ ಬೆಟ್ಟವು ಕಾದ ಒಲೆಯಂತಾಗಿ ಅಕಂಪನಾದಿಮುನಿಗಳಿಗೆ ಬಹು ಬಾಧೆಯಾಗುತ್ತಿರಲು ಅಲ್ಲಿಗೆ ಬಹುದೂರದಲ್ಲಿರುವ ಒಂದಾನೊಂದು ಬೆಟ್ಟದ ಗುಹೆಯಲ್ಲಿ ತಪಸ್ಸುಮಾಡುತ್ತಿದ್ದ ಸುಗ್ರೀವನೆಂಬ ಮುನಿಯು ರಾತ್ರಿಯಲ್ಲೆದ್ದು ಆಕಾಶದಲ್ಲಿ ಶ್ರವಣನಕ್ಷತ್ರವು ಅದ್ಭುತವಾಗಿ ಕಂಪಿಸುತ್ತಿರುವುದನ್ನು ನೋಡಿ ದಿವ್ಯಜ್ಞಾನದಿಂದ ಅಕಂಪನಾದಿ ಮುನಿಗಳಿಗೆ ಬಲಿಯು ಕೊಡುವ ಉಪಸರ್ಗವನ್ನು ತಿಳಿದು ಮಲುಮಲನೆ ಮರುಗಿ ಈ ಉಪಸರ್ಗವನ್ನು ನಿವಾರಿಸುವವರಾರೆಂದು ಯೋಚಿಸುತ್ತಿರುವಷ್ಟರಲ್ಲಿ ಆತನ ಶಿಷ್ಯರಲ್ಲೋರ್ವ ವಿದ್ಯಾಧರಮುನಿಯು ಕೈ ಮುಗಿದು "ಎಲೈ ಮುನಿವರ್ಯನೆ! ನಾನು ಹೋಗಿ ಬಲಿಯನ್ನು ನಾಶಮಾಡಿ ಮುನಿಗಳ ಉಪಸರ್ಗವನ್ನು ಹೋಗಲಾಡಿಸಿ ಬರುವೆನು.' ಎಂದನು. ಅದಕ್ಕಾ ಸುಗ್ರೀವಮುನಿಯು "ವ್ರತಿಗಳು ಹೀಗೆ ಮಾಡುವುದುಚಿತವಲ್ಲ" ಎಂದು ಹೇಳಿ ಆ ವಿದ್ಯಾಧರಮುನಿಯ ಕೋಪವನ್ನು ಸಮಾಧಾನಪಡಿಸಿ ಆ ಗುಹೆಯ ಮೂಲೆ

ಯಲ್ಲಿ ಮಲಗಿದ್ದ ವಿಷ್ಣುಕುಮಾರಮುನಿಯನ್ನು ಕರೆದು ಆ ಉಪಸರ್ಗವನ್ನು ನಿವಾರಣೆಮಾಡುವಂತೆ ಹೇಳಲು ಋದ್ಧಿಸಂಪನ್ನನಾದ ವಿಷ್ಣುಮುನಿಯು ಒಪ್ಪಿ ಆಕಾಶಚಾರಣತ್ವದಿಂದ ಬಹು ಶೀಘ್ರವಾಗಿ ಹಸ್ತಿನಾಪುರಕ್ಕೆ ಹೋಗಿ ತನ್ನ ತಮ್ಮನಾದ ಪದ್ಮರಥರಾಜನನ್ನು ಕಂಡು ಅಸಮಾಧಾನಗೊಂಡು "ಬಲಿಯ ಮೂಲಕ ಮುನಿಗಳಿಗೆ ಉಪಸರ್ಗಮಾಡುವುದು ಉಚಿತವೆ ?' ಎನಲು ಪದ್ಮರಥನು ಚಕಿತನಾಗಿ ಬಲಿಯಮೇಲೆ ಬಹು ಕೋಪಗೊಂಡು ಆತನ ತಲೆಯನ್ನು ಚೆಂಡಾಡುವೆನೆಂದೇಳ್ವಾಗ ವಿಷ್ಣುಮುನಿಯು ದೊರೆಯನ್ನು ಸಮಾಧಾನಗೊಳಿಸಿ ತಾನೇ ಆ ಉಪಸರ್ಗವನ್ನು ಹೋಗಲಾಡಿಸುವುದಾಗಿ ಹೇಳಿ ವಾಮನಾವತಾರವನ್ನು ಧರಿಸಿ ಬಲಿಯಬಳಿಗೆ ಹೋಗಿ ಅವನನ್ನು ಹೊಗಳಿ ಆಶೀರ್ವದಿಸಲು ಬಲಿಯು ಸಂತುಷ್ಟನಾಗಿ ಮುನಿಗೆ ವಂದಿಸಿ "ಎಲೈವಟುವೆ ! ನಿನ್ನಿಚ್ಛೆಯನ್ನು ಕೇಳು, ಕ್ಷಿಪ್ರವಾಗಿ ಕೊಡುವೆನು.' ಎಂದನು ಆ ಮಾತನ್ನು ಕೇಳಿ ಮುನಿಯು ತಾನು ಕುಳಿತು ಅನುಷ್ಠಾನಮಾಡುವುದಕ್ಕಾಗಿ ತನ್ನ ಕಾಲಿನಲ್ಲಿ ಮೂರು ಹಜ್ಜೆ ನೆಲವನ್ನು ಕೊಡಬೇಕೆಂದು ಕೇಳಲು ಬಲಿಯು "ಘನತರವಾದ ವಸ್ತುವನ್ನು ಕೇಳದೆ ಈ ಅಲ್ಪವಿಷಯವನ್ನು ಕೇಳಿದೆ, ನೀನು ಕೇಳಿದುದನ್ನು ಕೊಟ್ಟೆನು, ಅಳೆದುಕೊ" ಎಂದನು. ಆಗ ಶುಕ್ರನು ಬಂದು ಆ ವಾಮನನು ಕಪಟರೂಪಿಯೆಂದು ಬಲಿಯನ್ನು ತಡೆಯಲು ಬಲಿಯು "ದಾನಕ್ಕೇಕೆ ಕಂಟಕನಾಗುವೆ" ಎಂದು ಶುಕ್ರನನ್ನು ನೂಕುವಾಗ ಆತನ ಕೈಯ ದರ್ಭೆಯು ತಗುಲಿ ಶುಕ್ರನ ಒಂದು ಕಣ್ಣು ಕುರುಡಾಯ್ತು. ಬಳಿಕ ಬಲಿಯು ಧಾರಾಪೂರ್ವಕವಾಗಿ ಮೂರಡಿ ಭೂಮಿಯನ್ನು ಕೊಡಲು ಕೃತ್ರಿಮವಾಮನನು ತನ್ನ ತಪಸ್ಸಾಮರ್ಥ್ಯದಿಂದ ಸ್ವಲ್ಪಸ್ವಲ್ಪವಾಗಿ ಬೆಳೆದು ಕೊನೆಗೆ ಆಕಾಶ ಭೂಮಿಗೊಂದಾಗಿ ಬೆಳೆದು ಆ ತ್ರಿವಿಕ್ರಮನು ತನ್ನ ಒಂದು ಹಜ್ಜೆಯಿಂದ ಭೂಮಿಯನ್ನೆಲ್ಲ ಅಳೆದನು. ಮತ್ತೊಂದು ಹಜ್ಜೆಯಿಂದ ಆಕಾಶವನ್ನಳೆದನು. ಹೀಗೆ ವಿಷ್ಣುವಿನ ಪಾದಗಳು ಭೂವ್ಯಾಕಾಶವನ್ನು ವ್ಯಾಪಿಸಲು ದೇವೇಂದ್ರನ ಸಿಂಹಾಸನವು ಅದಿರಿತು. ಆಗ ಇಂದ್ರನು ಅವಧಿಜ್ಞಾನದಿಂದ ತಿಳಿದು ಹದಿನಾರು ಸ್ವರ್ಗಗಳ ಇಂದ್ರರೂ ಚತುರ್ನಿಕಾಯಾಮರರೂ ಸಮೇತನಾಗಿ ಬಂದು ಆಕಾಶದಲ್ಲಿ ವ್ಯಾಪಿಸಿರುವ ವಿಷ್ಣುಪಾದವನ್ನರ್ಚಿಸಿ ಸ್ತುತಿಸಿ ಕೈಗಳನ್ನು ಮುಗಿದು ಆ ವಿಗುರ್ವಣೆಯನ್ನು ಉಪಸಂಹರಿಸುವಂತೆ ಪ್ರಾರ್ಥಿಸಿ ಬಲಿಯನ್ನು ಬಂಧನದಲ್ಲಿಡುವಾಗ ಗಾಂಧರ್ವದೇವತೆಗಳು ಗಾಂಧಾರಿ ಸುಘೋಷಣೆಗಳೆಂಬೆರಡು ವೀಣೆಗಳನ್ನು ತಂದು ವಿಷ್ಣುಮುನಿಯ ಮುಂದೆ ಬಾರಿಸಿ ಅವುಗಳನ್ನು ಪದ್ಮರಥನಿಗೆ ಕೊಟ್ಟುಹೋದರು. ವಿಷ್ಣುಮುನಿಯು ಆ ಅಕಂಪನಾದಿ ಮುನಿಗಳ ಉಪಸರ್ಗ

ವನ್ನು ನಿವಾರಣಮಾಡಿ ಬಲಿಗೆ ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳೆಂಬ ರತ್ನತ್ರಯ ಗಳನ್ನು ಪದೇಶಿಸಿ ತಮ್ಮಸ್ಥಾನಕ್ಕೆ ಹೊರಟುಹೋದರು. ವಂಶಪರಂಪರೆಯಾಗಿ ಬಂದ ಆ ವೀಣೆಯೇ ಇದು '' ಎಂದು ಹೇಳಿ ಅದನ್ನು ವಸುದೇವನು ತನ್ನೆದೆಗಿಟ್ಟು ಬಲು ಸೊಗಸಾಗಿ ಬಾರಿಸಿದನು. ಅವನ ವೀಣಾವಾದನಚಾತುರ್ಯವನ್ನೂ ರೂಪ ಸೌಂದರ್ಯವನ್ನೂ ನೋಡಿ ಮೆಚ್ಚಿ ಗಾಂಧರ್ವದತ್ತೆಯು ಅವನಿಗೆ ಮಾಲೆಯನ್ನು ಹಾಕಿದಳು. ಚಾರುದತ್ತನು ಬಹುಸಂತುಷ್ಟನಾಗಿ ಆ ರಾತ್ರಿ ಅನುಪಮವೈಭವ ದಿಂದ ವಸುದೇವನಿಗೆ ಗಾಂಧರ್ವದತ್ತೆಯನ್ನು ಕೊಟ್ಟು ಮದುವೆಮಾಡಿದನು. ವಸುದೇವನು ಗಾಂಧರ್ವದತ್ತೆಯೊಡನೆ ಸುಖವಾಗಿದ್ದನು.

---

## ೧೨. ರೋಹಿಣೀಸ್ವಯಂವರ ಸಂಧಿ

ಒಂದು ದಿನ ವಸಂತಋತುವಿನಲ್ಲಿ ವಸುದೇವ ಗಾಂಧರ್ವದತ್ತೆಯರು ಬಹು ವೈಭವದಿಂದ ವನಕ್ರೀಡೆಗೆ ಹೋಗಿ ನಾನಾವಿಧವಾದ ಕ್ರೀಡಾವಿಲಾಸಗಳಿಂದ ತಣಿ ದು ಸುರತಾಂತಶ್ರಮವನ್ನಾರಿಸಲೆಂದು ವಸುದೇವನು ಬರುತ್ತಿರುವಾಗ ಮುಂಗಡೆ ಯಲ್ಲಿ ಒಂದು ಮಾವಿನಮರದ ನೆಳಲಿನಲ್ಲಿ ಓರ್ವ ತರಳಾಕ್ಷಿಯು ತಾಳಮೇಳದೊಡನೆ ಬಹುಮನೋಹರವಾಗಿ ನರ್ತಿಸುತ್ತಿದ್ದಳು. ಆಕೆಯ ಸುಂದರರೂಪವನ್ನು ನೋಡುವ ಕೌತುಕದಿಂದ ವಸುದೇವನು ಒಂದು ಲತೆಯನ್ನೊರಗಿ ನಿಂತನು. ಆಕೆಯ ಹಾವಭಾ ವ ವಿಲಾಸ ವಿಭ್ರಮಯುಕ್ತವಾದ ನರ್ತನವನ್ನೂ ಸೌಂದರ್ಯವನ್ನೂ ನೋಡಿ ವಸು ದೇವನು '' ಈಕೆಯು ಯಾರ ಮಗಳು ? '' ಎಂದು ಆಕೆಯ ಗೆಳತಿಯನ್ನು ಕೇಳಲು '' ಈಕೆಯು ಚಾಂಡಾಲಳು '' ಎಂದಳಾ ಗೆಳತಿ. ಆ ಮಾತನ್ನುಕೇಳಿ ವಸುದೇವನು '' ಈ ಚಾಂಡಾಲಿಕೆಗೆ ಈ ರೂಪವಿಲಾಸಗಳಿರುವುದು ಆಶ್ಚರ್ಯ'' ವೆಂದು ಹೇಳುವಾಗ ಆಕೆಯು ವಸುದೇವನನ್ನು ನೋಡಿ ಮೂರ್ಛಿತಳಾದಳು. ಆಗ ಆಕೆಯ ಸಖಿಯರು ಶೈತ್ಯೋಪಚಾರವನ್ನು ಮಾಡುತ್ತಿರಲು ಗಾಂಧರ್ವದತ್ತೆಯು ಇನಿಯನ ಬಳಿಗೆ ಬಂ ದು '' ನೀನು ಈಕೆಯನ್ನು ನೋಡುವುದುಚಿತವಲ್ಲ ' ವೆಂದು ಹೇಳಿ ಆತನನ್ನು ಪ್ರಣ ಯ ಕಲಹದಿಂದ ಎಳೆದುಕೊಂಡು ಹೋದಳು.

ಇತ್ತ ಆ ಕೃತ್ರಿಮಚಾಂಡಾಲಿಕೆಯ ಸಖಿಯರು ಅಭೀಷ್ಟಪುರುಷನು ದೊರೆತನೆಂದು ಸಂತೋಷದಿಂದ ಆಕೆಯನ್ನು ಪಟ್ಟಣಕ್ಕೆ ಕರೆದೊಯ್ದು ಆಕೆಗಾದ ಅವಸ್ಥೆಯನ್ನು ಅವಳ ತಂದೆ ಸಿಹ್ಮನಾದನೆಂಬ ಖೇಚರನಿಗೆ ಹೇಳಲು ಆತನು ಸಂತು

ಷ್ಟನಾಗಿ ವೈತಾಳಿಯೆಂಬ ದೇವತೆಯನ್ನು ಕರೆದು ವಸುದೇವನನ್ನು ಕರೆದುಕೊಂಡು ಬರುವಂತೆ ಹೇಳಿದನು. ಆ ದೇವತೆಯು ಚಂಪಾಪುರಕ್ಕೆ ಹೋಗಿ ಗಾಂಧರ್ವದತ್ತೆ ಯೊಡನೆ ನಿದ್ರಿಸುತ್ತಿದ್ದ ವಸುದೇವನನ್ನು ಎತ್ತಿಕೊಂಡು ವಿಜಯಾರ್ಧಪರ್ವತದ ಆ ಮೇಘಪುರಕ್ಕೆ ತಂದಿತು. ಸಿಹ್ಮನಾದನು ವಸುದೇವನನ್ನು ಇದಿರ್ಗೊಂಡು ತನ್ನ ಅರಮನೆಗೆ ಕರೆದೊಯ್ದು ಮಗಳನ್ನು ಕೊಟ್ಟು ಮದುವೆಮಾಡಿದನು. ಆ ನೀಲಾಂಜನೆಯನ್ನು ಮದುವೆಯಾಗಿ ವಸುದೇವನು ಆಕೆಯೊಡನೆ ಕೆಲವುದಿನ ಸುಖ ಪಡುತ್ತಿದ್ದು ಒಂದುದಿನ ತಾನು ಭೂಮಿಗಿಳಿಯುವೆನೆಂದು ಆ ಸಿಹ್ಮನಾದನಲ್ಲಿ ಹೇಳಲು ಆತನು ಪರ್ಣಲಘುವೆಂಬ ವಿದ್ಯೆಯಿಂದ ಮೆಲ್ಲನೆ ವಸುದೇವನನ್ನು ಭೂಮಿ ಗಿಳಿಸಿದನು. ವಸುದೇವನು ಭೂಚರ ಖೇಚರ ಕನ್ಯೆಯರಲ್ಲಿ ಕೆಲವರನ್ನು ಸ್ವಯಂವರದಿಂದಲೂ ಕೆಲವರನ್ನು ಗಾಂಧರ್ವವಿವಾಹದಿಂದಲೂ ಕೆಲವರನ್ನು ಶಕುನಗಳ ಮೂಲಕವೂ ಹೀಗೆ ಏಳುನೂರತೊಂಬತ್ತೆಂಟು ಮಂದಿ ಕನ್ಯೆಯರನ್ನು ಮದುವೆಯಾಗಿ ಅಲ್ಲಲ್ಲಿ ಸುರತಸುಖವನ್ನನುಭವಿಸುತ್ತ ಆ ಪತ್ನಿಯರನ್ನು ಅವರವರ ತಂದೆತಾಯಿಗಳ ಬಳಿಯಲ್ಲಿ ಬಿಟ್ಟು ಒಂದುದಿನ ಅರಿಷ್ಟಪುರದ ನಂದನವನಕ್ಕೆ ಹೋದನು. ಆ ನಗರದ ಹಿರಣ್ಯಾಕ್ಷನೆಂಬ ರಾಜನಿಗೂ ಆತನ ಹೆಂಡತಿ ಗುಣವ ತಿಗೂ ಅತ್ಯಂತರೂಪವತಿಯಾದ ರೋಹಿಣಿಯೆಂಬ ಮಗಳಿದ್ದಳು. ಆಕೆಯನ್ನು ಯಾವ ರಾಜರು ಕೇಳಿದರೂ ಕೊಡದೆ ಹಿರಣ್ಯಾಕ್ಷನು ಸ್ವಯಂವರವನ್ನು ರಚಿಸಿ ದನು. ಆ ಸ್ವಯಂವರಕ್ಕೆ ಸಮುದ್ರವಿಜಯ ಮೊದಲಾದ ರಾಜರು ಬಂದು ಸೇರಿ ದರು. ಅಲ್ಲಿಗೆ ಹೋಗಿ ವಸುದೇವನೂ ಒಂದುಕಡೆಯಲ್ಲಿ ಕುಳಿತು ಓರ್ವ ವಾದ್ಯ ಗಾರನ ವಾದ್ಯವನ್ನು ತೆಗೆದುಕೊಂಡು ತನ್ನ ಕೊರಳಿಗೆ ಹಾಕಿ ವಾದ್ಯ ಗಾರರೂ ಚೋದ್ಯಪಡುವಂತೆ ಬಹು ಚತುರತೆಯಿಂದ ಬಾರಿಸಿದನು. ರಾಜಕನ್ಯೆಯು ಮಾಲೆಯನ್ನು ಹಿಡಿದುಕೊಂಡು ರಾಜರು ಕುಳಿತಿರುವ ಬಳಿಯಲ್ಲಿ ಸಂಚರಿಸಿ ತನ್ನ ಮನಸಿಗೊಪ್ಪುವ ಸೌಂದರ್ಯವಂತರಾರನ್ನೂ ಕಾಣದೆ ಮುಂದೆ ನಡೆದು ವಸುದೇ ವನ ಅನುಪಮ ಸೌಂದರ್ಯವನ್ನು ನೋಡಿ ಮೋಹಿತಳಾಗಿ ಆತನ ಕೊರಳಿಗೆ ಪುಷ್ಪ ಮಾಲೆಯನ್ನು ಹಾಕಿದಳು. ಮಗಳು ವಾದ್ಯಗಾರನಿಗೆ ಮಾಲೆಯನ್ನು ತೊಡಿದಳೆಂ ದು ಚಿಂತೆಗೊಳಗಾದ ಹಿರಣ್ಯಾಕ್ಷನು ವಸುದೇವನ ಬಳಿಗೆ ಬಂದು ಆತನ ಸೌಂದರ್ಯ ಯೌವನ ಲಾವಣ್ಯಾದಿಗಳನ್ನು ನೋಡಿ ಸಂತೋಷಪಟ್ಟು ಆತನು ಉತ್ತಮ ಜಾತಿಯವನೆಂದು ಬಗೆದು ಆ ದಂಪತಿಗಳನ್ನು ರಥದಲ್ಲಿ ಕುಳ್ಳಿರಿಸಿ ನಗರಪ್ರವೇಶಮಾ ಡಿಸಿದನು. ಅದನ್ನು ಕಂಡು ಇತರ ರಾಜರುಗಳು " ನೀಚಕುಲದವನಿಗೆ ಕನ್ಯೆಯು

ಮಾಲೆಯನ್ನು ಸೂಡಿದಳು. ಅದನ್ನು ನಾವು ವಿಚಾರಿಸದಿದ್ದರೆ ನಮಗೆ ದೋಷವು ಬರುವುದು." ಎಂದು ಒಬ್ಬ ಭೃತ್ಯನನ್ನು ಕರೆದು "ರಾಜಕನ್ಯೆಯನ್ನು ಕ್ಷತ್ರಿಯನಿಗೆ ಕೊಡುವುದನ್ನು ಬಿಟ್ಟು ವಾದ್ಯಗಾರನಿಗೆ ಕೊಡುವುದುಚಿತವೇ? ಮಗಳನ್ನು ಯಾರಿಗೆ ಕೊಡುವುದೆಂದು ಸಂದೇಹಮಾಡದೆ ನಮ್ಮಲ್ಲಿ ಜರಾಸಂಧಚಕ್ರವರ್ತಿಗೆ ಕೊಡು" ಎಂದು ಹಿರಣ್ಯಾಕ್ಷನಿಗೆ ಹೇಳಿಕಳುಹಲು ಆ ಮಾತನ್ನು ಕೇಳಿ ವಸುದೇವನು ಕುಪಿತನಾಗಿ ಆ ರಾಜರು ತನ್ನೊಡನೆ ಯುದ್ಧಮಾಡಿ ಕನ್ಯೆಯನ್ನು ತೆಗೆದುಕೊಂಡು ಹೋಗಲೆಂದು ಹೇಳಿಕಳುಹಿ ತಾನೂ ಹಿರಣ್ಯಾಕ್ಷನೂ ಯುದ್ಧಸನ್ನದ್ಧರಾದರು. ಅತ್ತ ರಾಜರು ದೂತನು ಬಂದು ಹೇಳಿದ ಮಾತನ್ನು ಕೇಳಿ ಕೋಪಾರೂಢರಾಗಿ ತಮ್ಮ ಸಕಲಸೈನ್ಯದೊಡನೆ ಆ ನಗರವನ್ನು ಮೂರು ಸುತ್ತು ಮುತ್ತಿದರು. ಆಗ ಹಿರಣ್ಯಾಕ್ಷನೂ ವಸುದೇವನೂ ತಮ್ಮ ಸೈನ್ಯದೊಡನೆ ಎದುರಿಸಿ ವಸುದೇವನು ಅನೇಕ ಯೋಧರನ್ನೂ ಆನೆ ಕುದುರೆಗಳನ್ನೂ ರಥಗಳನ್ನೂ ನಾಶಮಾಡಿದನು. ಅನೇಕ ರಾಜರು ಓಡಿಹೋದರು. ಅದನ್ನು ತಿಳಿದು ಜರಾಸಂಧಚಕ್ರೇಶನು ಸಮುದ್ರವಿಜಯನಿಗೆ ಈ ಯುದ್ಧವು ಸಾಧ್ಯವಲ್ಲದೆ ಬೇರೆಯವರಿಗೆ ಸಾಧ್ಯವಲ್ಲವೆಂದನು. ಆ ಮಾತನ್ನು ಕೇಳಿ ಸಮುದ್ರವಿಜಯನು ವೀರಾವೇಶದಿಂದ ವಸುದೇವನ ರಥಕ್ಕಿದಿರಾಗಿ ತನ್ನ ರಥವನ್ನು ನೂಂಕಿ ಬಾಣಪ್ರಯೋಗವನ್ನು ಮಾಡಿದನು. ವಸುದೇವನು ಪ್ರತಿಬಾಣಗಳನ್ನು ಬಿಟ್ಟನು. ಸಮುದ್ರವಿಜಯನು ಬಿಟ್ಟ ಬಾಣಗಳು ವಸುದೇವನ ತಲೆಯಮೇಲೂ ವಸುದೇವನು ಬಿಟ್ಟ ಬಾಣಗಳು ಸಮುದ್ರವಿಜಯನ ಕಾಲಿನ ಕೆಳಗೂ ಹಾದುಹೋದುವು. ಈ ವೈಚಿತ್ರ್ಯವನ್ನು ನೋಡಿ ವಸುದೇವನು ಆ ಪ್ರತಿಭಟನಾರೆಂದು ತನ್ನ ಸಾರಥಿಯನ್ನು ಕೇಳಿದನು. ಸಾರಥಿಯು ಸಮುದ್ರವಿಜಯನೆಂದು ಹೇಳಲು ಆ ಮಾತನ್ನು ಕೇಳಿ ವಸುದೇವನು ತನಗೆ ಪಾಪವಶದಿಂದ ಅಣ್ಣನೊಡನೆ ಕಾದುವ ಪಾತಕವು ಒದಗಿತೆಂದು ಭೀತನಾಗಿ ಬಿಲ್ಲುಬಾಣಗಳನ್ನು ಬಿಸಾಟು ಸುಮ್ಮನೆ ನಿಂತಿರಲು ಸಾರಥಿಯು ನೋಡಿ ಹಾಗೆ ಬಿಲ್ಲುಬಾಣಗಳನ್ನು ಬಿಸಾಟು ಸುಮ್ಮನಿರುವುದು ಕೊರತೆಯಾಗುವುದೆಂದನು. ಅದನ್ನು ಕೇಳಿ ವಸುದೇವನು ತಾನು ತಿಳಿಯದೆ ಹಿರಿಯಣ್ಣನಲ್ಲಿ ಕಾದಿದೆನೆಂದೂ ತಾನು ಬರುವ ವಿಷಯವನ್ನು ಮೊದಲು ಹೋಗಿ ಸಾರಥಿಯು ಸಮುದ್ರವಿಜಯನಿಗೆ ತಿಳುಹಬೇಕೆಂದೂ ಹೇಳಿಕಳುಹಿದನು. ಸಾರಥಿಯು ಹೋಗಿ ಅದರಂತೆ ತಿಳುಹಲು ಸಮುದ್ರವಿಜಯನು ಬಹು ಸಂತುಷ್ಟನಾಗಿ ಬಿಲ್ಲನ್ನು ಬಿಸಾಟು ತಾನು ತೊಟ್ಟಿದ್ದ ಉಡುಪನ್ನು ಆ ಸಾರಥಿಗೆ ಬಹುಮಾನವಾಗಿ ಕೊಟ್ಟನು.

ಅಷ್ಟರಲ್ಲಿ ವಸುದೇವನು ರಥದಿಂದಿಳಿದು ಬಂದು ಅಣ್ಣನ ಪಾದಗಳಿಗೆ ನಮಸ್ಕಾರ ಮಾಡಿದನು. ಸಮುದ್ರವಿಜಯನು ತಮ್ಮನನ್ನು ಬಿಗಿದಪ್ಪಿ "ಹರಿವಂಶಸೂರ್ಯನೆ! ನೀನು ನನ್ನನ್ನು ಬಿಟ್ಟು ಸಾಧಾರಣಮನುಷ್ಯನಂತೆ ಹೀಗೆ ಪರದೇಶಕ್ಕೆ ಹೋಗುವುದು ಚಿತವೇ?' ಎಂದು ಕಣ್ಣೀರನ್ನು ಬಿಡುವಾಗ ಅಕ್ಷೋಭ ಮೊದಲಾದ ಅಣ್ಣಂದಿರು ಬಂದರು. ಅವರಿಗೂ ವಸುದೇವನು ನಮಸ್ಕರಿಸಲು ಅವರು ಸಂತುಷ್ಟರಾಗಿ ತಮ್ಮನನ್ನು ಆಲಿಂಗಿಸಿ ಹರಸಿದರು. ಈ ವಿಷಯವನ್ನೆಲ್ಲ ಹಿರಣ್ಯಾಕ್ಷನೂ ಅಲ್ಲಿ ಸೇರಿದ್ದ ರಾಜರೂ ತಿಳಿದು ಬಹುಸಂತುಷ್ಟರಾದರು. ಹಿರಣ್ಯಾಕ್ಷನು ಸಮುದ್ರವಿಜಯ ಮೊದಲಾದ ರಾಜರೊಡನೆ ಪುರಪ್ರವೇಶವನ್ನು ಮಾಡಿ ಬಹು ವೈಭವದಿಂದ ವಸುದೇವ ರೋಹಿಣಿಯರ ಮದುವೆಯನ್ನು ಮಾಡಿದನು. ಬಳಿಕ ವಸುದೇವನು ರೋಹಿಣಿಯಲ್ಲಿ ಸುಖಪಡುತ್ತ ಒಂದುದಿನ ರಾತ್ರಿ ಮಲಗಿ ನಿದ್ರಿಸುತ್ತಿರುವಾಗ ಓರ್ವ ಖೇಚರಸ್ತ್ರೀಯು ಬಂದು ವಸುದೇವನನ್ನು ಎತ್ತಿ ತನ್ನ ವಿಮಾನದಲ್ಲಿರಿಸಿ ಕೊಂಡುಹೋಗಿ ಆನಂದಪುರದ ನಂದನವನದಲ್ಲಿರಿಸಿ ಆಕೆಯ ತಂದೆ ಮರುತವೇಗನಿಗೆ ಸೂಚಿಸಲು ಅವನು ಇದಿರ್ಗೊಂದು ವಸುದೇವನನ್ನು ತನ್ನ ಆನಂದಪುರಕ್ಕೆ ಕರೆದೊಯ್ದು ತನ್ನ ಪುತ್ರಿಯಾದ ಆ ಚಂದ್ರಲೇಖೆಯನ್ನು ಕೊಟ್ಟು ಮದುವೆಮಾಡಿದನು. ವಸುದೇವನು ಕೆಲವುಕಾಲ ಆ ಚಂದ್ರಲೇಖೆಯಲ್ಲಿ ಸುಖವನ್ನನುಭವಿಸಿ ಒಂದುದಿನ ಆಕೆಯ ತಂದೆಗೆ ತಾನು ಭೂಮಂಡಲಕ್ಕೆ ಹೋಗುವೆನೆನಲು ಆತನು ಸಮ್ಮತಿಸಿ ಮಗಳಿಗೆ ಬಳುವಳಿಯನ್ನು ಕೊಟ್ಟು ದಂಪತಿಗಳನ್ನು ಕಳುಹಿಸಿದನು. ವಸುದೇವನು ಚಂದ್ರಲೇಖೆಯೊಡನೆ ಅರಿಷ್ಟನಗರಕ್ಕೆ ಬಂದು ಆಕೆಯ ವಿದ್ಯೆಯಿಂದ ತನ್ನ ಎಲ್ಲಾ ಪತ್ನಿಯರನ್ನೂ ಕರೆಯಿಸಿ ರೋಹಿಣಿ ಮೊದಲಾದ ಆ ಪತ್ನಿಯರೊಡನೆ ಆ ನಗರದಿಂದ ಹೊರಟು ಮಹಾವೈಭವದಿಂದ ಶೌರೀಪುರಕ್ಕೆ ಬಂದನು. ಅಲ್ಲಿ ಸಮುದ್ರವಿಜಯನು ನಗರಾಲಂಕಾರವನ್ನು ಮಾಡಿಸಿ ಇದಿರ್ಗೊಂಡು ತನ್ನ ಕಾಲಿಗೆರಗಿದ ತಮ್ಮನನ್ನು ಆಲಿಂಗಿಸಿ ಅವನೊಡನೆ ಪುರಪ್ರವೇಶಮಾಡಿದನು. ತದನಂತರ ವಸುದೇವನು ರೋಹಿಣಿಗೆ ಅಗ್ರಮಹಿಷೀಪಟ್ಟವನ್ನು ಕಟ್ಟಿ ಸುಖದಿಂದಿದ್ದನು.

## ೧೩. ಕಂಸಪ್ರಸಂಗ ಸಂಧಿ.

ಒಂದುದಿನ ರೋಹಿಣಿಯು ಋತುಮತಿಯಾಗಿ ನಾಲ್ನೀರನ್ನು ಮಿಂದು ಪತಿಯ ಶಯ್ಯೆಗೆ ಹೋಗಿ ಸುರತಸುಖದೊಳೋಲಾಡಿ ನಿದ್ರಿಸಿ ಬೆಳಗಿನ ಜಾವದಲ್ಲಿ ಚಂದ್ರನನ್ನು ಕನಸುಗಂಡು ಸಂತೋಷದಿಂದೆಚ್ಚತ್ತು ಪ್ರಾತಃಕಾಲದ ಕ್ರಿಯೆಗ

ಳನ್ನು ತೀರಿಸಿಕೊಂಡು ಪತಿಯೆಡೆಗೈದಿ ತಾನು ಕಂಡ ಕನಸನ್ನು ಹೇಳಿದಳು. ಅದನ್ನು ಕೇಳಿ ವಸುದೇವನು ಆ ಸ್ವಪ್ನದ ಫಲದಿಂದ ರೋಹಿಣಿಗೆ ಮಹಾ ಪುಣ್ಯ ಶಾಲಿಯೂ ಪರಾಕ್ರಮಿಯೂ ಆದ ಪುತ್ರನು ಜನಿಸುವನೆಂದು ಹೇಳಲು ರೋಹಿ ಣಿಯು ಬಹು ಸಂತುಷ್ಟಳಾಗಿದ್ದಳು. ಕ್ರಮದಿಂದ ಗರ್ಭವು ಬೆಳೆದು ರೋಹಿ ಣಿಯು ಪುತ್ರನನ್ನು ಪ್ರಸವಿಸಲು ವಸುದೇವನು ಬಹು ವೈಭವದಿಂದ ಶುಭಮುಹೂ ರ್ತದಲ್ಲಿ ಆ ಶಿಶುವಿಗೆ ಬಲಭದ್ರನೆಂದು ನಾಮಕರಣವನ್ನು ಮಾಡಿದನು. ಮುತ್ತಿನ ಬಣ್ಣವುಳ್ಳವನೂ ವಜ್ರಶರೀರನೂ ಧೀರೋದಾತ್ತನೂ ಸಾಹಸಿಯೂ ಸುಂದರನೂ ಸದ್ಗುಣಿಯೂ ಏಕಕುಂಡಲಿಯೂ ಅಸಹಾಯಶೂರನೂ ಅನೇಕ ಕಲಾಕೋವಿದನೂ ಆದ ಆ ಮಗನೊಡನೆ ವಸುದೇವನು ಸುಖವಾಗಿದ್ದನು. ರೋಹಿಣೀಸ್ವಯಂವರ ದಲ್ಲಿ ವಸುದೇವನ ಧನುರ್ವಿದ್ಯಾಪಾಂಡಿತ್ಯವನ್ನು ನೋಡಿದ ರಾಜಪುತ್ರರು ಧನು ರ್ವಿದ್ಯಾಭ್ಯಾಸಕ್ಕಾಗಿ ವಸುದೇವನ ಬಳಿಗೆ ಬರುತ್ತಿರಲು ಅವರಿಗೆ ವಸುದೇವನು ಧನು ರ್ವಿದ್ಯಾಗುರುವಾಗಿರುವಾಗ ಒಂದು ದಿನ ಅಲ್ಲಿಗೋರ್ವ ಕಂಸನೆಂಬವನು ಬಂದು ವಸುದೇವನಿಗೆ ನಮಸ್ಕರಿಸಿ ತಾನು ಬೆಸ್ತರವನೆಂದೂ ವಸುದೇವನಲ್ಲಿ ಧನುರ್ವಿದ್ಯೆ ಯನ್ನು ಕಲಿಯುವುದಕ್ಕಾಗಿ ಬಂದವನೆಂದೂ ಹೇಳಲು ವಸುದೇವನು ಅವನ ರೂಪ ವನ್ನು ನೋಡಿ ಅವನು ಹೀನಕುಲದವನಲ್ಲವೆಂದು ಬಗೆದು ಆತನಿಗೆ ಧನುರ್ವಿದ್ಯೆ ಯನ್ನು ಕಲಿಸಿದನು. ಮರೆತುದನ್ನು ಜ್ಞಾಪಿಸಿಕೊಳ್ಳುವಂತೆ ಕಂಸನು ಬಹು ಶೀಘ್ರ ವಾಗಿ ಧನುರ್ವಿದ್ಯೆಯನ್ನಭ್ಯಾಸಮಾಡಿ ಗುರುವಿಗೆ—ವಸುದೇವನಿಗೆ ಸಮನೆನಿಸಿ ಲೋಕವಿಖ್ಯಾತನಾಗಿರಲು ಅತ್ತ ಪೌದನಪುರದ ದೊರೆಯು ತನ್ನ ರಥಕ್ಕೆ ಎರಡು ಸಿಹ್ಮಗಳನ್ನು ಕಟ್ಟಿ ಪ್ರಖ್ಯಾತನಾಗಿ ಅದರಿಂದ ಸಿಹ್ಮರಥನೆಂಬ ಹೆಸರನ್ನು ಪಡೆದು ಯುದ್ಧಾಸಕ್ತನಾಗಿ ಜರಾಸಂಧಚಕ್ರಿಗೆ ಎದುರಾಗಿ ಮಾರ್ಮಲೆಯುತ್ತಿದ್ದನು. ಜರಾಸಂಧನು ಆ ಸಿಹ್ಮರಥನಮೇಲೆ ತನ್ನ ಕೆಲವು ದಂಡನ್ನು ಕಳುಹಲು ಅದನ್ನು ಅವನು ಓಡಿಸಿಬಿಟ್ಟನು. ಜರಾಸಂಧನು ಉದ್ರೇಕಗೊಂಡು " ಸಿಹ್ಮರಥನನ್ನು ಸೋಲಿಸುವವನಿಗೆ ತನ್ನ ಮಗಳನ್ನೂ ಅವನು ಬೇಡುವ ರಾಜ್ಯವನ್ನೂ ಕೊಡುವೆನು ", ಎಂದು ಡಂಗುರ ಹೊಯ್ಸಿದನು. ಯಾರೂ ಮುಂದೆ ಬಾರದಿರಲು ಆ ಸಿಹ್ಮರಥ ನನ್ನು ಜಯಿಸುವ ಶಕ್ತಿಯು ವಸುದೇವನಿಗಲ್ಲದೆ ಬೇರೆಯವರಿಗಿಲ್ಲವೆಂದು ಬಗೆದು ಜರಾಸಂಧನು ಸಮುದ್ರವಿಜಯನಿಗೆ ಲೇಖನವನ್ನು ಕಳುಹಿಸಿದನು. ಅವನು ಲೇಖ ನವನ್ನು ನೋಡಿ ಸಿಹ್ಮರಥನಮೇಲೆ ದಂಡೆತ್ತಿಹೋಗುವಂತೆ ವಸುದೇವನಿಗೆ ಆಜ್ಞೆ ಮಾಡಲು ಅವನು ಯೋಧರೊಡನೆ ಹೋಗಿ ಸಿಹ್ಮರಥನ ಬಳಿಗೆ ದೂತರನ್ನು ಕಳುಹಿ

ದನು. ಅವರು ಹೋಗಿ ಸಿಹ್ಮರಥನನ್ನು ಕಂಡು "ನೀನು ಈಗಲೇ ಬಂದು ವಸು ದೇವನನ್ನು ಕಂಡು ಅವನಿಗೆ ನಮಸ್ಕರಿಸಿ ಸುಖವಾಗಿ ಜೀವಿಸುವುದು ಲೇಸು" ಎನಲು ಅವನು ಉದ್ರೇಕಗೊಂಡು ಗರ್ಜಿಸಿ ಆ ದೂತರನ್ನು ಕಳುಹಿಸಿ ತಾನು ಸಮ ರಸನ್ನದ್ಧನಾಗಿ ಪಟ್ಟಣದಿಂದ ಹೊರಟುಬಂದು ತನ್ನ ಪಡೆಗೆ ಕೈಬೀಸಲು ಅದು ವಸುದೇವನ ಸೈನ್ಯದಮೇಲೆ ಬಾಣಗಳನ್ನು ಪ್ರಯೋಗಿಸಿತು. ಅದನ್ನು ಕಂಡು ವಸುದೇವನು ತನ್ನ ಪಡೆಯ ಮಹಾರಥಿಕರನ್ನು ಕಳುಹಲು ಅವರು ಶತ್ರುಸೈನ್ಯ ವನ್ನು ಸಂಹರಿಸಿದರು. ಅದನ್ನು ಕಂಡು ಸಿಹ್ಮರಥನು ತನ್ನ ರಥವನ್ನು ಮುಂದೆ ನೂಕಿ ಧನುಸ್ಸನ್ನು ಹಿಡಿದು ಯಾದವಸೇನೆಯನ್ನು ಹೊಕ್ಕಿ ಮಹಾರಥಿಕರ ಮೇಲೆ ಬಾಣಪ್ರಯೋಗವನ್ನು ಮಾಡಿದನು. ಅದನ್ನು ಕಂಡು ವಸುದೇವನು ಕೋಪಪ ರವಶನಾಗಿ ತನ್ನ ರಥವನ್ನು ಮುಂದೆ ಚಾಚುವ ಸಮಯದಲ್ಲಿ ಕಂಸನು ಮುಂದೆ ಬಂದು ತನಗೆ ಸಿಹ್ಮರಥನೊಡನೆ ಯುದ್ಧಮಾಡಲು ಅಪ್ಪಣೆಯನ್ನು ಕೊಡಬೇಕೆಂದು ಬಿನ್ನವಿಸಿದನು. ವಸುದೇವನು ಅದಕ್ಕೊಪ್ಪಲು ಕಂಸನು ತನ್ನ ರಥವನ್ನು ಮುಂದೆ ನೂಕಿ ಇದಿರಾದನು. ಅವನನ್ನು ಕಂಡು ಸಿಹ್ಮರಥನು ಹಸಿದ ಹುಲಿಯಂತೆ ಮೇಲೆ ಹಾಯ್ದು ಬರಲು ಕಂಸನು ಅವನ ರಥದ ಸಿಹ್ಮಗಳ ತಲೆಯನ್ನು ಚೆಂಡಾಡಿ ರಥವನ್ನೂ ಬಿಲ್ಲುಬಾಣಗಳನ್ನೂ ಕವಚವನ್ನೂ ಕಡಿದು ವಿರಥನನ್ನಾಗಿ ಮಾಡಿ ಅವನನ್ನು ಹಿಡಿದು ವಸುದೇವನ ಮುಂದೆ ನಿಲ್ಲಿಸಿದನು. ತರುವಾಯ ಅಭಯ ಘೋಷಣೆಯನ್ನು ಮಾಡಿ ಪುರವನ್ನು ಪ್ರವೇಶಿಸಿ ಬಾಹುಬಲಿಸ್ವಾಮಿಯ ಬಸದಿಗೆ ಹೊಕ್ಕು ವಂದಿಸಿ ಅಲ್ಲಿಂದ ಹೊರಟು ಶೌರೀಪುರಕ್ಕೆ ಬಂದು ಸಿಹ್ಮರಥನನ್ನು ಸಮು ದ್ರವಿಜಯನ ಕಾಲುಗಳ ಮುಂದಿರಿಸಲು ಅವನು ಜರಾಸಂಧಚಕ್ರೇಶ್ವರನ ಬಳಿಗೆ ಕರೆದೊಯ್ದು ಅವನಿಗೊಪ್ಪಿಸುವಂತೆ ತಮ್ಮನಿಗೆ ಅಪ್ಪಣೆಮಾಡಿದನು. ವಸುದೇ ವನು ಅಣ್ಣನ ಅಪ್ಪಣೆಯಂತೆ ಮಾಡಲು ಜರಾಸಂಧನು ಸಂತುಷ್ಟನಾಗಿ "ವಸುದೇ ವನೆ! ಇವನನ್ನು ಗೆದ್ದವನಿಗೆ ನಮ್ಮ ಪುತ್ರಿ ಜೀವಂಜಸೆಯನ್ನೂ ಅವನಿಚ್ಛಿಸಿದ ರಾಜ್ಯವನ್ನೂ ಕೊಡುವೆವೆಂದೆವು. ಕುವರಿಯು ನಿನಗೆ ತಕ್ಕವಳಲ್ಲ. ಇವಳನ್ನು ನಿನಗಿಷ್ಟಬಂದವನಿಗೆ ಕೊಟ್ಟು ಮದುವೆಮಾಡು" ಎಂದನು. ವಸುದೇವನು ಕಂಸ ನನ್ನು ತೋರಿ ಅವನೇ ಸಿಹ್ಮರಥನನ್ನು ಹಿಡಿದನೆಂದನು. ಜರಾಸಂಧನು ಕಂಸನ ವಂಶವನ್ನು ಕೇಳಲು ಕಂಸನು ತಾನು ಕೌಶಂಬಿಯಲ್ಲೋರ್ವ ಬೆಸ್ತರವನ ಮಗನೆ ನಲು ಅವನ ಭುಜ, ಎದೆ, ಲಕ್ಷಣ, ಸೌಂದರ್ಯ ಮೊದಲಾದುವುಗಳನ್ನು ನೋಡಿ ಅವನು ಉತ್ತಮಕುಲದವನಲ್ಲದೆ ನೀಚಕುಲದವನಲ್ಲವೆಂದು ಬಗೆದು ಆ ಬೆಸ್ತ

ರವನ ಬಳಿಗೆ ದೂತರನ್ನು ಕಳುಹಲು ಅವರು ಹೋಗಿ ಕಂಸನು ಅವನ ಮಗನಹುದೋ ಅಲ್ಲವೋ ಎಂದು ಕೇಳಿದರು. ಅದಕ್ಕವನು ಬೆದರಿ ಕಂಸನು ತನ್ನ ಔರಸಪುತ್ರನಲ್ಲವೆಂದು ಹೇಳಿ ಒಂದು ಮಂದಾಸನ್ನು ತೆಗೆದುಕೊಂಡು ಜರಾಸಂಧನ ಬಳಿಗೆ ಹೋಗಿ ದೂರದಿಂದ ಸಾಷ್ಟಾಂಗನಮಸ್ಕಾರವನ್ನು ಮಾಡಿ ಮಂದಾಸನ್ನು ಮುಂದಿಟ್ಟು ಭೀತಿಯಿಂದ "ದೇವ! ಬಿನ್ನಪವು. ಕಾಳಿಂದೀನದಿಯಲ್ಲಿ ಬರುತ್ತಿದ್ದ ಈ ಮಂದಾಸನ್ನು ತೆಗೆದುಕೊಂಡು ಇವನು ಆ ಕಂಚಿನ ಮಂಟಾಸಿನಲ್ಲಿದ್ದ ಕಾರಣ ದಿಂದ ಇವನಿಗೆ ಕಂಸನೆಂದು ಹೆಸರನ್ನಿಟ್ಟು ನನ್ನ ಔರಸಪುತ್ರನಂತೆ ಇವನನ್ನು ಸಾಕುತ್ತಿರಲು ಇವನು ದುಷ್ಟನಾಗಿ ಕಂತಕಂಡವರಲ್ಲಿ ಜಗಳವಾಡುತ್ತಿರಲು ನಾನು ಬೇಸತ್ತು ನನ್ನಲ್ಲಿರಬೇಡವೆಂದು ಈ ದುಷ್ಟನನ್ನು ಊರಿಂದ ಹೊರಪಡಿಸಿದೆನು." ಎಂದನು. ಆ ಮಾತನ್ನು ಕೇಳಿ ಜರಾಸಂಧನು ಆ ಮಂದಾಸನ್ನು ತರಿಸಿ ನೋಡಲು ಅದರಲ್ಲಿ ಸೋಮವಂಶಜನಾದ ಉಗ್ರಸೇನನಿಗೂ ಆತನ ಸತಿ ಪದ್ಮಾವತಿಗೂ ಜನಿಸಿದ ಶಿಶುವೆಂದು ಬರೆದಿದ್ದುದನ್ನು ನೋಡಿ ತನ್ನ ತಂಗಿಯಾದ ಪದ್ಮಾವತಿಯ ಮಗನೆಂಬುದನ್ನು ತಿಳಿದು ಬಹು ಸಂತುಷ್ಟನಾಗಿ ಕಂಸನಿಗೆ ಜೀವಂಜಸೆಯನ್ನು ಕೊಟ್ಟು ಮದುವೆಮಾಡಿ "ನಿನಗಿಷ್ಟವಾದ ರಾಜ್ಯವನ್ನು ಕೇಳು, ಕೊಡುವೆನು" ಎಂದನು. ಅದಕ್ಕೆ ಕಂಸನು ತನ್ನ ತಂದೆಯಾದ ಉಗ್ರಸೇನನ ರಾಜ್ಯವನ್ನೇ ಬೇಡಲು ಜರಾಸಂಧನು ತಂದೆಗೂ ಮಗನಿಗೂ ವೈರವು ಬರಲು ಕಾರಣವೇನೆಂಬುದನ್ನು ತಿಳಿಯಬೇಕೆಂದು ಬಗೆದು ದಿವ್ಯಜ್ಞಾನಸಂಪನ್ನರಾದ ಓರ್ವ ಮುನೀಶ್ವರರ ಬಳಿಗೆ ಹೋಗಿ ಕೈಮುಗಿದು ಕಂಸನಿಗೆ ತನ್ನ ತಾಯಿತಂದೆಗಳಲ್ಲಿ ವೈರಕ್ಕೆ ಕಾರಣವೇನೆಂದು ಕೇಳಿದನು. ಅದಕ್ಕಾ ಮುನೀಶ್ವರರಿಂತೆಂದರು:—

ಈ ಪೃಥ್ವಿಯಲ್ಲೋರ್ವ ತಾಪಸಿಯು ಪಂಚಾಗ್ನಿಮಧ್ಯದಲ್ಲಿ ತಪಸ್ಸು ಮಾಡುತ್ತಿರಲು ಅಲ್ಲಿಗೋರ್ವ ವೀರಭದ್ರನೆಂಬ ದಿಗಂಬರಮುನಿಯು ಬಂದು "ಇದು ಹಿಂಸಾರೂಪವಾದ ಕಠಿನತಪಸ್ಸು" ಎನಲು ಅದನ್ನು ಕೇಳಿ ಆ ತಾಪಸಿಯು ಕೋಪದಿಂದ ಕೊಡಲಿಯನ್ನು ತೆಗೆದುಕೊಂಡು "ಇದರಲ್ಲಿ ನೀನು ಹಿಂಸೆಯನ್ನು ತೋರು" ಎಂದನು. ಅದಕ್ಕಾ ವೀರಭದ್ರಮುನಿಯು ಉರಿಯುವ ಬೆಂಕಿ—ಅಗ್ಗಿಷ್ಟಿಕೆಯಲ್ಲಿ ಬಿದ್ದು ನಾಶವಾಗುತ್ತಿದ್ದ ಜೀವಗಳನ್ನು ತೋರಲು ಆ ತಾಪಸಿಯು ಬೆರಗಾಗಿ ತಾನು ಮುಂದರಿಯದೆ ಮುನಿಗೆ ಮುನಿದೆನೆಂದು ಕೊಡಲಿಯನ್ನು ಬಿಸುಟು ಆ ಮುನಿಗೆರಗಿ ಅವರಿಂದ ಜಿನದೀಕ್ಷೆಯನ್ನು ಸ್ವೀಕರಿಸಿ ಕಠಿನತಪಸ್ಸನ್ನು ಮಾಡಲು ವನದೇವತೆಗಳು ಅವನ ತಪಸ್ಸಾಮರ್ಥ್ಯಕ್ಕೆ ಮೆಚ್ಚಿ ಕೈಮುಗಿದು "ಮುನೀ

ಶನೆ! ಏನಪ್ಪಣೆ?" ಎಂದು ಕೇಳಿದುವು. ಅದಕ್ಕಾ ಯತಿಯು "ನಾನು ಸ್ಮರಿಸಿದಾಗ ಬನ್ನಿ" ಎಂದನು. ಬಳಿಕ ಮಥುರೆಗ ಬಂದು ಮಾಸೋಪವಾಸವನ್ನು ಮಾಡುತ್ತಿರಲು ಒಂದುದಿನ ಉಗ್ರಸೇನರಾಜನು ಬಂದು ಆ ಮುನಿಗೆ ವಂದಿಸಿ ತನ್ನೊಡನೆ ಬಂದಿದ್ದ ಭವ್ಯಜನರನ್ನು ಕುರಿತು "ಇವರು ಪಾರಣೆಗೆ ಬಂದಾಗ ನಾನೇ ಇವರನ್ನು ನಿಲ್ಲಿಸುವೆನು. ಊರಲ್ಲಿ ಬೇರೆಯಾರೂ ನಿಲ್ಲಿಸಬೇಡಿ' ಎಂದು ಹೇಳಿ ಮುನಿಗೆ ವಂದಿಸಿ ತನ್ನ ಪಟ್ಟಣಕ್ಕೆ ಹೋದನು. ಮರುದಿನ ಆ ಯತಿವರ್ಯರು ಪಾರಣೆಗೆಂದು ನಗರಕ್ಕೆ ಬರುವಾಗ ಉಗ್ರಸೇನನ ಪಟ್ಟದಾನೆಯು ಮದಿಸಿ ಕೋಲಾಹಲವನ್ನು ಮಾಡುತ್ತಿರಲು ಆ ಗಲಿಬಿಲಿಯಲ್ಲಿ ಅವನು ಯತಿವರ್ಯರನ್ನು ಪಾರಣೆಗೆ ಕರೆಯಲು ಮರೆತನು. ಯತೀಶರು ನಿರಾಹಾರಿಗಳಾಗಿ ಹಿಂದಿರುಗಿ ಹೋಗಿ ಪುನಃ ಮಾಸೋಪವಾಸವನ್ನು ಮಾಡಿ ಹಸಿವೆಯಿಂದ ಆ ನಗರಕ್ಕೆ ಭಿಕ್ಷೆಗೆ ಬಂದರು. ಆಗ ಅರಮನೆಗೆ ಬೆಂಕಿ ಹತ್ತಿದ್ದುದರಿಂದ ಆ ಸಂಭ್ರಮದಲ್ಲಿ ರಾಜನು ಮುನಿಪತಿಗೆ ಆಹಾರದಾನಮಾಡುವುದನ್ನು ಮರೆತುಬಿಟ್ಟನು. ರಾಜನ ಅಪ್ಪಣೆಯಂತೆ ನಗರವಾಸಿಗಳೂ ಆಹಾರವನ್ನು ಕೊಡಲಾರದಾದರು. ಮುನಿಪತಿಯು ಮೊದಲಿನಂತೆ ಉಪವಾಸವನ್ನು ಕೈಕೊಂಡು ವನಕ್ಕೆ ಹೋಗಿ ಪುನಃ ಪಾರಣೆಗೆ ಬಂದನು. ಆಗ ಒಬ್ಬ ದೊರೆಯು ಆ ಪಟ್ಟಣಕ್ಕೆ ಬರಲು ಅವನನ್ನು ಇದಿರ್ಗೊಳ್ಳುವ ವೈಭವದಲ್ಲಿ ಉಗ್ರಸೇನನು ಈ ಯತಿಪತಿಗೆ ಆಹಾರಕೊಡುವುದನ್ನು ಮರೆತು ಬಿಟ್ಟನು. ಯತೀಶ್ವರನಿಗೆ ಉದರಾಗ್ನಿಯು ಉದ್ದೀಪಿತವಾಗಲು ಬಲಹೀನನಾಗಿ ನಡೆಯಲಾರದೆ ಒಂದು ಗೋಡೆಗೆ ಒರಗಿ ನಿಂತನು. ಅವನನ್ನು ನೋಡಿ ಬೀದಿಯಲ್ಲಿ ತಿರುಗಾಡುವ ಜನರು "ದೊರೆಯು ಈ ಮುನಿಗೆ ತಾನೂ ಆಹಾರಕೊಡುವುದಿಲ್ಲ; ಬೇರೆಯವರಿಗೂ ಬಿಡುವುದಿಲ್ಲ; ಅವನಿಗೆ ಈ ಮುನಿಯಲ್ಲಿ ಹಟವೋ?" ಎಂದರು. ಆ ಮಾತನ್ನು ಕೇಳಿದೊಡನೆಯೇ ಮುನಿಪತಿಗೆ ದೊರೆಯಮೇಲೆ ಭಗ್ಗನೆ ಕೋಪವು ಬಂದಿತು. ಆಗ ಆ ಹಿಂದೆ ಹೇಳಿದ ದೇವತೆಗಳು ಬಂದು "ಏನಪ್ಪಣೆ?" ಎಂದು ಕೇಳಲು ಯತಿಯು "ಈಗ ನನಗೆ ಪ್ರಾಣವು ತೊಲಗುವ ವೇಳೆಯಾಯ್ತು. ಮುಂದಿನ ಭವದಲ್ಲಿ ಬಂದೊದಗಿ" ಎನಲು ಆ ದೇವತೆಗಳು ಹೋದುವು. ಆ ಯತಿಯು ಮಡಿದು ಉಗ್ರಸೇನನ ಮಡದಿಯ ಗರ್ಭದಲ್ಲಿ ಜನಿಸಿದನು. ಆಗ ಆ ಪದ್ಮಾವತಿಗೆ ತನ್ನ ಪತಿಯ ಎದೆಯನ್ನು ಸೀಳಿ ರಕ್ತಪಾನಮಾಡಬೇಕೆಂಬ ಕೆಟ್ಟ ಬಯಕೆಯುಂಟಾಗಲು ಅದನ್ನು ಹೇಳಲಾರದೆ ದಿನದಿನಕ್ಕೆ ಕೃಶವಾಗುತ್ತ ಬಂದಳು. ಹಾಗೆ ಕೃಶವಾಗಲು ಕಾರಣವೇನೆಂದು ಉಗ್ರಸೇನನು ನಿರ್ಬಂಧಿಸಿ ಕೇಳಲು ಆಕೆಯು ಬಯಕೆಯ ಪರಿಯನ್ನು

ಉಸುರಿ ತನ್ನ ಜೀವದಾಸೆಯನ್ನು ಬಿಡುವಂತೆ ಹೇಳಿದಳು. ಆ ಮಾತನ್ನು ಕೇಳಿ ದೊರೆಯು ಆಕೆಯ ಬಸಿರಲ್ಲಿರುವ ಶಿಶುವಿಸ ಮುನಿಸಿನ ತೆರಸಲ್ಲದೆ ಬೇರೊಂದಲ್ಲವೆಂದು ಆಕೆಗೆ ಹೇಳಿ ಮನೆಯಿಂದ ಹೊರಟು ಮಂತ್ರಾಲೋಚನಾಶಾಲೆಗೆ ಹೋಗಿ ಮಂತ್ರಿಗಳೊಡನೆ ಮಂತ್ರಾಲೋಚನೆಯನ್ನು ಮಾಡಲು ಒಬ್ಬಮಂತ್ರಿಯು ತಂತ್ರದಿಂದ ಆ ಕೆಲಸವನ್ನು ಮಾಡುತ್ತೇನೆಂದು ಹೇಳಿ ಹೋಗಿ ದೊರೆಯ ಒಂದು ಲೆಪ್ಪದ ಪ್ರತಿಕೃತಿಯನ್ನು ಮಾಡಿಸಿ ಅದರಲ್ಲಿ ಅಲತಗೆಯ ರಸವನ್ನು ತುಂಬಿ ಮರೆಯಲ್ಲಿಟ್ಟು ಅರಸಿಯನ್ನು ಕರೆಸಿ ಆಕೆಯ ಮುಖಕ್ಕೆ ವಸ್ತ್ರವನ್ನು ಮರೆಮಾಡಿ ಆಕೆಯ ಬಯಕೆಯನ್ನು ಪೂರಯಿಸುವಂತೆ ಹೇಳಿದನು. ಆಕೆಯು ಪ್ರತಿಕೃತಿಯ ಎದೆಯನ್ನು ತಿವಿದು ಕೋಪದಿಂದ ಕೆಂಪುನೀರನ್ನು ಹೀರಿ ತನ್ನಿಚ್ಛೆಯು ತೀರಲು ತನ್ನ ನಿಜಪತಿಯೆಂದು ಬಗೆದು ಮೂರ್ಛಿತಳಾದಳು. ಶೈತ್ಯೋಪಚಾರದಿಂದ ಆಕೆಯನ್ನು ಎಚ್ಚರಿಸಿ ಪತಿಯು ಬದುಕಿದ್ದಾನೆಂದು ಹೇಳಿ ಸಂತೈಸಿ ಆತನ ಗಾಯವು ಗುಣವಾಯಿತೆಂದು ಹೇಳಲು ಆಕೆಯ ವ್ಯಸನವು ದೂರವಾಯ್ತು. ಬಳಿಕ ನವಮಾಸವು ತುಂಬಿ ಕ್ರೂರ ಲಗ್ನದಲ್ಲಿ ಮಗುವನ್ನು ಹಡೆದಳು. ರಾಜನು ಅದರ ಮುಖವನ್ನು ನೋಡಿದನು. ಅದು ತಂದೆಯ ಮುಖವನ್ನು ನೋಡಿದಕೂಡಲೆ ಕೋಪದಿಂದ ಅದರ ಕಣ್ಣುಗಳು ಕೆಂಪೇರಿದುವು. ಅದರಿಂದ ಆ ಶಿಶುವು ತನಗೆ ವೈರಿಯೆಂದು ಬಗೆದು ರಾಜನು ಮಂತ್ರಿಗೆ ತಿಳುಹಲು ಅವನು ಕಂಚಿನ ಮಂಡಾಸಿನಲ್ಲಿ ಮಗುವನ್ನಿರಿಸಿ ಪಕ್ಕದಲ್ಲಿ ರತ್ನವನ್ನು ಸುರಿದು ತಂದೆತಾಯಿಗಳ ಕುಲವನ್ನೂ ಹೆಸರುಗಳನ್ನೂ ಬರೆಯಿಸಿ ಯಮುನಾನದಿಯಲ್ಲಿ ಬಿಡಿಸಲು ಅದು ಪ್ರವಾಹದಲ್ಲಿ ಹರಿದುಬರುತ್ತಿರುವುದನ್ನು ಕೌಶಂಬಿಯ ಬಿಸ್ಮರವನೊಬ್ಬನು ಕಂಡು ಸಂತೋಷದಿಂದ ಅದನ್ನು ಕೊಂಡೊಯ್ದು ಸಲಹಿದನು." ಎಂದು ಹೇಳಿದ ಆ ಮುನಿಗೆ ವಂದಿಸಿ ತನ್ನಮನೆಗೆ ಹೋಗಿ ಮರು ದಿನ ಮಗಳಿಗೆ ಬಳುವಳಿಯನ್ನಿತ್ತು ಕಂಸನನ್ನು ಕರೆದು ತಂದೆತಾಯಿಗಳನ್ನು ಕೊಂದು ರಾಜ್ಯವಾಳಬೇಡವೆಂದು ಹೇಳಿ ಮಧುರೆಗೆ ಕಳುಹಲು ಕಂಸನು ಜರಾಸಂಧನಿಗೆ ವಂದಿಸಿ ಪೊರಮಟ್ಟು ವಸುದೇವನನ್ನು ಕುರಿತು 'ದೇವಾ! ನಿಮ್ಮ ಅನುಗ್ರಹದಿಂದ ನನಗೀ ಮಹದೈಶ್ವರ್ಯವು ಪ್ರಾಪ್ತವಾದುದು. ನೀವು ಮಧುರೆಗೆ ಬಂದು ಅಲ್ಲಿ ನನ್ನನ್ನು ಸ್ಥಾಪಿಸಬೇಕು " ಎಂದನು. ಆ ಮಾತನ್ನು ಕೇಳಿ ವಸುದೇವನು ಕಂಸನೊಡನೆ ಮಧುರೆಗೆ ಹೋದನು. ಕಂಸನು ತನ್ನ ತಂದೆತಾಯಿಗಳನ್ನು ಕೋಪದಿಂದ ಪುರದ್ವಾರದ ಮೇಲೆ ಅಸಿಪಂಜರದಲ್ಲಿ ಸೆರೆಯಿಟ್ಟು ಆ ನಗರಕ್ಕೆ ದೊರೆಯಾಗಿ ವಸುದೇವನಲ್ಲಿ ಸ್ವಾಮಿಭಾವವನ್ನಿಟ್ಟು ಸುಖದಿಂದಿದ್ದನು. ಉಗ್ರಸೇನನ ತಮ್ಮ

ನಾದ ದೇವಸೇನನಿಗೂ ಆತನ ಪತ್ನಿ ಧನದೇವಿಗೂ ಜನಿಸಿದ ಅತಿಮುಕ್ತನೆಂಬವನು ಕಂಸನ ದುಷ್ಟತನವನ್ನು ಕಂಡು ವೈರಾಗ್ಯದಿಂದ ದೀಕ್ಷೆಯನ್ನು ತೆಗೆದುಕೊಂಡನು. ಕಂಸನು ತನ್ನ ತಂಗಿಯಾದ ದೇವಕಿಯೆಂಬ ಬಹು ಸುಂದರಳಾದ ಕನ್ಯೆಯನ್ನು ಗುರುಪೂಜೆಯೆಂದು ವಸುದೇವನಿಗಿತ್ತು ಮದುವೆಮಾಡಿದನು. ಆ ಸ್ತ್ರೀರತ್ನದಲ್ಲಿ ವಸುದೇವನು ಬಹು ಪ್ರೀತಿಯಿಂದ ಸುಖಸಂಕಥಾವಿನೋದದಲ್ಲಿದ್ದನು.

---

## ೧೪ ಮಂಗಿಯ ಕಥಾಸಂಧಿ

---

ಕಂಸನ ಪ್ರಖ್ಯಾತಿಯು ದಿನದಿನಕ್ಕೆ ಲೋಕದಲ್ಲಿ ಪಸರಿಸಲು ಅನೇಕ ವೀರ ಭಟರೂ ರಾವುತರೂ ಅರ್ಧರಥ ಸಮರಥ ಅತಿರಥ ಮಹಾರಥರುಗಳೂ ಮಕುಟ ವರ್ಧನರೂ ಕಂಸನಲ್ಲಿ ಬಂದು ಸೇರಿದರು. ಕಂಸನು ಅಷ್ಟಮದೋಪೇತನೂ ದುಷ್ಟ ನೂ ಸತ್ಯಸದಾಚಾರದೂರನೂ ಕಪಟಹೃದಯನೂ ಆಗಿ ಮೆರೆಯುತ್ತಿದ್ದನು. ಮುನಿಯಾಗಿದ್ದ, ದೇವಕಿಯ ಅಣ್ಣನಾದ, ಅತಿಮುಕ್ತನು ಮಹಾತಪಸ್ವಿಯಾಗಿ ಅವಧಿಜ್ಞಾನವೆಂಬ ದಿವ್ಯಜ್ಞಾನವನ್ನು ಪಡೆದು ಒಂದು ದಿನ ಆ ಊರಿಗೆ ಪಾರಣೆ ಗೆಂದು ಬೀದಿಯಲ್ಲಿ ಬರುತ್ತಿರಲು ದೇವಕಿಯು ಕಂಡು ಅನುರಾಗದಿಂದ ನಿಲ್ಲಿಸಿ ಉನ್ನತಾಸನದಲ್ಲಿ ಕುಳ್ಳಿರಿಸಿ ಕಾಲುಗಳನ್ನು ತೊಳೆದು ಅಷ್ಟವಿಧಾರ್ಚನೆಗಳಿಂದರ್ಚಿ ಸುತ್ತಿರುವಾಗ ಕಂಸನ ಪತ್ನಿ ಜೀವಂಜಸೆಯು ಬಂದು ದೇವಕಿಯ ಮುಟ್ಟಿನ ಬಟ್ಟೆ ಯನ್ನು ಮುನಿಯ ಮುಂದೆ ಹಿಡಿದು "ಅತಿಮುಕ್ತಭಾವನೆ! ನೀನೇಕೆ ಬೆತ್ತಲೆ ಬಂದಿರುವೆ? ಈ ವಸ್ತ್ರವನ್ನುಟ್ಟು ನಿನ್ನೀತಂಗಿಯು ಎಂತಹ ಮಗನನ್ನು ಹಡೆವಳು ಹೇಳು" ಎನಲು ಆ ಮುನಿವರ್ಯನು ಮುಂದಕ್ಕೆ ತೆರಳಿದನು. ಜೀವಂಜಸೆಯು ಮುಂದೆ ಹೋಗಿ ಅಡ್ಡಕಟ್ಟಿ ಕಾಡಲು ಮುನಿಯು 'ದೇವಕಿಯ ಮಗನು ನಿನ್ನ ಗಂಡನನ್ನೂ ತಂದೆಯನ್ನೂ ಕೊಲ್ಲುವನು. ಇದು ಸತ್ಯ" ಎನಲು ಆ ನುಡಿ ಯನ್ನು ಕೇಳಿ ದುಃಖದಿಂದ ಮನೆಗೆ ಹೋಗಿ ತನ್ನಪತಿಗೆ ತಿಳಿಸಿದಳು. ಅದನ್ನು ಕೇಳಿ ಕಂಸನು ಮುನಿಯ ಮಾತು ಸುಳ್ಳಾಗದೆಂದು ಬಗೆದು ಭೀತನಾಗಿ ಪತ್ನಿಯ ನ್ನುಕುರಿತು "ಮತ್ತಳಾಗಿ ನೀನು ಕಾಡಲು ಆ ಮುನಿಗೆ ಪಿತ್ತೋದ್ರೇಕವಾಗಿ ಒದರಿದರೆ ಅದಕ್ಕೇಕೆ ಚಿಂತೆ? ಅದಕ್ಕೆ ನಾನು ದಾರಿ. ಉಪಾಯವನ್ನು ಕಾಣದಿ ದ್ದರೆ ನಿನ್ನಗಂಡನೇ?" ಎಂದು ಸಮಾಧಾನಪಡಿಸಿದನು. ದೇವಕಿಗೆ ಗರ್ಭೋ ತ್ಪತ್ತಿಯಾಗಿ ಬೆಳೆದು ಏಳು ತಿಂಗಳಾಗಲು ಕಪಟಹೃದಯನಾದ ಕಂಸನು ವಸುದೇ

ವನ ಬಳಿಗೆ ಬಂದು ಕೈಮುಗಿದು ತನ್ನ ತಂಗಿ ದೇವಕಿಯನ್ನು ಹೆರಿಗೆಗೆ ತನ್ನ ಮನೆಗೆ ಕಳುಹಬೇಕೆಂದು ಕೇಳಲು ವಸುದೇವನು ಸಂದೇಹಪಟ್ಟು ಸುಮ್ಮನಿದ್ದನು. ಕಂಸ ನು ವಸುದೇವನ ಕಾಲಿಗೆ ಬಿದ್ದು ಸಂದೇಹವೇಕೆಂದು ನಿರ್ಬಂಧಿಸಿ ಅವನಿಂದ ವಾಗ್ದಾನವನ್ನು ತೆಗೆದುಕೊಂಡು ಮನೆಗೆ ಹೋದನು. ಆ ವಿಷಯವನ್ನು ದೇವ ಕಿಯು ತಿಳಿದು ಭೀತಳಾಗಿ ಪತಿಯ ಬಳಿಗೆ ಹೋಗಿ ಯತಿಯು ಜೀವಂಜಸೆಗೆ ಹೇಳಿದ ಮಾತನ್ನು ಹೇಳಿ ದುಷ್ಟಕಂಸನು ತನ್ನ ಗರ್ಭದ ಶಿಶುವಿಗೆ ಅಪಾಯವನ್ನುಂಟು ಮಾಡದಿರುವವನಲ್ಲವೆನಲು ವಸುದೇವನು ದೇವಕಿಯೊಡನೆ ಆ ಅತಿಮುಕ್ತಯತಿಯ ಬಳಿಗೆ ಹೋಗಿ ಭಕ್ತಿಯಿಂದೆರಗಿ ಕಂಸನಿಂದ ದೇವಕಿಯ ಗರ್ಭಕ್ಕೆ ಕೇಡಾಗುವುದೇ ಎಂದು ಕೇಳಿದನು. ಅದಕ್ಕೆ ಯತಿಯು ಇಂತೆಂದನು:—" ಈ ನಗರದ ದೊರೆ ಯಾದ ಸೂರಸೇನನ ರಾಜಶ್ರೇಷ್ಠಿ ರವಿದತ್ತನಿಗೂ ಆತನ ಪತ್ನಿ ಸುಮನಾದತ್ತೆಗೂ ಯಥಾಕ್ರಮವಾಗಿ ಭಾನು, ಸುರ, ಸೂರಕೀರ್ತಿ, ಭಾನುಸೇನ, ಅಸುರದೇವ, ಸೂರ, ಸೂರಸೇನರೆಂಬ ಏಳು ಮಂದಿ ಮಕ್ಕಳು ಹುಟ್ಟಿ ಬಹು ದುರಾಚಾರಿಗಳಾ ಗಿದ್ದರು. ಒಂದು ದಿನ ಆ ಪಟ್ಟಣಕ್ಕೆ ಒಬ್ಬ ಮುನಿಯು ಬರಲು ಅವನ ಬಳಿಗೆ ಆ ನಗರದ ರಾಜನು ರವಿದತ್ತನೊಡನೆ ಹೋಗಿ ಧರ್ಮದ ಸ್ವರೂಪವನ್ನು ಕೇಳಿ ವೈರಾಗ್ಯವನ್ನು ಹೊಂದಿ ಇಬ್ಬರೂ ಜಿನದೀಕ್ಷೆಯನ್ನು ತೆಗೆದುಕೊಂಡರು. ಇತ್ತ ಆ ಏಳುಮಂದಿ ಮಕ್ಕಳು ತಮ್ಮ ತಂದೆಯು ಗಳಿಸಿದ್ದ ಹನ್ನೆರಡು ಕೋಟಿ ದ್ರವ್ಯ ವನ್ನು ದುರ್ವ್ಯಸನಗಳಿಂದ ಕಳೆದು ಕಳುವಿನಿಂದ ಜೀವಿಸಿಕೊಂಡಿರಲು ಅದನ್ನು ಆ ನಗರದ ದೊರೆಯು ತಿಳಿದು ಅವರನ್ನು ಊರಿಂದ ಹೊರಡಿಸಿದನು. ಅವರು ಕದಿಯು ವುದಕ್ಕಾಗಿ ಒಂದು ರಾತ್ರಿಯಲ್ಲಿ ಉಜ್ಜಯನಿಗೆ ಹೋಗಿ ಅಲ್ಲಿಯ ಶ್ಮಶಾನದಲ್ಲಿ ಕಿರಿಯತಮ್ಮನಾದ ಸೂರಸೇನನನ್ನಿರಿಸಿ ಉಳಿದ ಆರುಮಂದಿಗಳೂ ಕದಿಯುವುದಕ್ಕೆ ಹೋದರು. ಆ ನಗರದಲ್ಲಿ ವೃಷಭಕೇತುವೆಂಬ ದೊರೆಗೆ ವಜ್ರಮುಷ್ಟಿಯೆಂಬ ಭೃತ್ಯನಿದ್ದನು. ಅವನಿಗೆ ಕನಕವಲ್ಲರಿ ಮತ್ತು ಮಂಗಿಯೆಂಬ ಈರ್ವರು ಹೆಂಡತಿಯ ರಿದ್ದರು. ವಜ್ರಮುಷ್ಟಿಯು ಮಂಗಿಯಲ್ಲಿ ಹೆಚ್ಚುಪ್ರೀತಿಯುಳ್ಳವನಾಗಿದ್ದನು. ಒಂದು ದಿನ ವಜ್ರಮುಷ್ಟಿಯು ಬೇರೊಂದೂರಿಗೆ ಹೋಗಿರಲು ಮಂಗಿಯ ಸವತಿ ಯಾದ ಕನಕವಲ್ಲರಿಯು ಮಂಗಿಯಲ್ಲಿ ಕಪಟಸ್ನೇಹವನ್ನು ಮಾಡಿ ಆಕೆಯ ಮುಡಿ ಹೂವಿನಮಾಲೆಯಲ್ಲಿ ಒಂದು ಹಾವನ್ನಿರಿಸಿದಳು. ಮಂಗಿಯು ತಿಳಿಯದೆ ಆ ಹೂವಿನಮಾಲೆಗೆ ಕೈಹಾಕಲು ಅಲ್ಲಿದ್ದ ಕಾಳಸರ್ಪವು ಕಚ್ಚಿತು ವಿಷವೇರಿ ಮಂ ಗಿಯು ಬೀಳಲು ಆಕೆಯನ್ನು ಕನಕವಲ್ಲರಿಯು ಆ ಊರಿನ ಮಸಣದಲ್ಲಿ ಹಾಕಿಸಿ

ಠಲು ವಜ್ರಮುಷ್ಟಿಯು ಬಂದು ಆ ಪ್ರಿಯವಲ್ಲಭೆಯೆಲ್ಲಿರುವಳೆಂದು ಕೇಳಿದನು. ಅದಕ್ಕೆ ಕನಕವಲ್ಲರಿಯು "ಮಂಗಿಯು ಹಿತ್ತಿಲಲ್ಲಿ ಹೂಕೊಯ್ವಾಗ ಬಂದು ಹಾವು ಕಚ್ಚಲು ಸತ್ತುಹೋದಳು. ಅದಕ್ಕಾಗಿ ನಾನು ಅಳುತ್ತಿರಲು ತಳವಾರರು ಬಂದು ರಾಜನಿಗೆ ಪುತ್ರೋತ್ಪತ್ತಿಯಾಗಿರುವುದರಿಂದ ನಗರದಲ್ಲಿ ಯಾರೂ ಅಳಕೂಡದೆಂದೂ ಹರ್ಷದಿಂದಿರಬೇಕೆಂದೂ ಹೇಳಿದುದರಿಂದ ನಾನು ಮಂಗಿಯ ಹೆಣವನ್ನು ಸುಡುಗಾಡಿಗೆ ಕಳುಹಿದೆನು" ಎಂದಳು. ಆ ಮಾತನ್ನು ಕೇಳಿ ವಜ್ರಮುಷ್ಟಿಯು ನೊಂದು ದುಃಖಿತನಾಗಿ ಹೊರಟು ಹೆಂಡತಿಯ ಶವವನ್ನು ಹುಡುಕಿಕೊಂಡು ಆ ಸುಡುಗಾಡಿಗೆ ಬರುತ್ತಿರುವಾಗ ಜಿನಮುನಿಯೋರ್ವನನ್ನು ಕಂಡು ಅವನ ಕಾಲಿಗೆ ನಮಸ್ಕರಿಸಿ ಮಂಗಿಯ ಹೆಣವು ಕಾಣಿಸಿಕೊಂಡರೆ ಆ ಮುನಿಯ ಕಾಲುಗಳಿಗೆ ಸಾವಿರ ಕೆಂದಾವರೆಗಳನ್ನರ್ಚಿಸುವುದಾಗಿ ಪ್ರತಿಜ್ಞೆಮಾಡಿ ಅಲ್ಲಿಂದ ಮುಂದಕ್ಕೆ ಹೋಗಿ ಮಂಗಿಯು ಬಿದ್ದಿರುವುದನ್ನು ಕಂಡು ದುಃಖಿಸಿ ಅವಳನ್ನು ಮುನಿಯ ಬಳಿಗೆ ತಂದಿರಿಸಲು ಸರ್ವೌಷಧಿಋದ್ಧಿಸಂಪನ್ನರಾದ ಆ ಮುನಿಗಳಮೇಲೆ ಬೀಸಿದ ಗಾಳಿಯು ಮಂಗಿಯ ಶರೀರವನ್ನು ಸ್ಪರ್ಶಿಸಿದೊಡನೆಯೇ ವಿಷಹರವಾಗಿ ಮಂಗಿಯು ಕಣ್ದೆರೆದಳು. ವಜ್ರಮುಷ್ಟಿಯು ನೋಡಿ ಬಹು ಸಂತುಷ್ಟನಾಗಿ ಆಕೆಯನ್ನು ಅಲ್ಲಿ ಬಿಟ್ಟು ಕೆಂದಾವರೆಗಳನ್ನು ತರುವುದಕ್ಕಾಗಿ ಓಡಿಹೋದನು.

ಇತ್ತ ಆ ಮಸಣದಲ್ಲಿ ಅಡಗಿರ್ದ ಸೂರಸೇನನು ಮಂಗಿಯ ರೂಪವನ್ನು ನೋಡಬೇಕೆಂದು ಕೊಡದಲ್ಲಿರಿಸಿದ್ದ ದೀಪವನ್ನು ಹೊರಕ್ಕೆ ತೆಗೆದು ಮಂಗಿಯ ಹತ್ತಿರಕ್ಕೆ ಬರಲು ಆಕೆಯು ಆತನ ರೂಪಕ್ಕೆ ಮೆಚ್ಚಿ "ನಾನು ನಿನಗೆ ಒಲಿದೆನು ; ಬೇಗನೆ ನನ್ನನ್ನು ಕರೆದುಕೊಂಡು ಹೋಗು" ಎನಲು ಸೂರಸೇನನು "ನಿನ್ನ ಗಂಡನು ಬಹು ಪರಾಕ್ರಮಿಯಾಗಿರುವುದರಿಂದ ನಾನು ಹೆದರುತ್ತೇನೆ" ಎಂದನು. ಆ ಮಾತನ್ನು ಕೇಳಿ ಮಂಗಿಯು "ಅದಕ್ಕೆ ತಕ್ಕುದನ್ನು ನಾನು ಬಲ್ಲೆನು. ಮದನಸದೃಶನೆ! ನೀನು ಮೊದಲಿನಂತೆ ಈ ಮರದಡಿಯಲ್ಲಿರು" ಎಂದಳು. ಆಗ ಸೂರಸೇನನು ತನ್ನ ಮನಸ್ಸಿನಲ್ಲಿ ಹೀಗೆ ಯೋಚಿಸಿದನು:— "ಹೆಂಗುಸರ ಕಪಟವನ್ನು ನಂಬುವ ಮನುಜನು ಹೆಡ್ಡನು. ಪರಪುರುಷರಲ್ಲಿ ತಮ್ಮ ಗಂಡನಿಗಿಂತಲೂ ರೀತಿ ಯೌವನ ರಸಿಕತೆ ಹೆಚ್ಚಾಗಿದ್ದರೆ ಅವರಮೇಲೆ ತಮ್ಮ ಕಣ್ಣನ್ನೂ ಮನಸ್ಸನ್ನೂ ಇಡುವರು. ದೇಹವೆರಡು, ಪ್ರಾಣವೊಂದೆಂಬಂತೆ ಕೈವಿಡಿದ ಕಾಂತನನ್ನು ಬಿಟ್ಟು ಬೇರೆಯವರನ್ನು ನೋಡುವರು. ಮಾವಿನಮರವನ್ನು ಹಬ್ಬಿದ ಮಲ್ಲಿಗೆಯ ಬಳ್ಳಿಯು ವಸಂತಋತುವನ್ನು ಪ್ರೀತಿಯಿಂದಿಚ್ಛಿಸುವಂತೆ ಪ್ರಾಣೇಶ್ವರನಲ್ಲಿದ್ದುಕೊಂಡು ಪರಪುರುಷರನ್ನಿ

ಚ್ಛಿಸುತ್ತಾರೆ. ನಾನು ಬಡವನೋ ಬಲ್ಲಿದನೋ ದುಷ್ಕುಲದವನೋ ಸತ್ಕುಲದವನೋ ಕುರೂಪಿಯೋ ಎಂಬುದನ್ನರಿಯದೆ ಈಕೆಯು ನನ್ನನ್ನು ಮೋಹಿಸಿದಳು. ಈ ಸುಡುಗಾಡಿನಲ್ಲಿ ಸುಡುಸುಣ್ಣವಾಗಿ ಮಡಿದುಹೋಗುವವಳನ್ನು ಕಾಪಾಡಿದ ಪ್ರಾಣಕಾಂತನ ಕ್ಷೇಮವನ್ನು ಮರೆತಿರುವ ಈ ಪಾಪಿಯನ್ನು ನಂಬಬಹುದೇ ? ಸುಡುಗಾಡಿನಲ್ಲಿ ಭೂತಪ್ರೇತಗಳು ಭುಂಜಿಸುವುದಕ್ಕೀಡಾಗಿ ಬಿದ್ದಿದ್ದ ಈ ಶರೀರವನ್ನು ರಕ್ಷಿಸಿದ ಪತಿಯನ್ನು ಮರೆತಿರುವ ಈ ಪಾತಕಿಯನ್ನು ನಂಬಬಹುದೇ ?'' ಹೀಗೆ ಯೋಚಿಸುತ್ತಿರುವಷ್ಟರಲ್ಲಿ ವಜ್ರಮುಷ್ಟಿಯು ಕೆಂದಾವರೆಗಳನ್ನು ಹೊರೆಗಟ್ಟಿ ತಲೆಯ ಮೇಲೆ ಹೊತ್ತುಕೊಂಡು ಬಂದು ಮುನಿಯ ಸನ್ನಿಧಿಯಲ್ಲಿ ನಿಂತು ತನ್ನ ಕೈಯಲ್ಲಿದ್ದ ಖಡ್ಗವನ್ನು ಮಂಗಿಯ ಕೈಗಿತ್ತು ತಾನು ಮುನಿಯ ಪಾದಕ್ಕೆ ತಾವರೆಗಳನ್ನರ್ಚಿಸಿ ಅಡ್ಡಬೀಳುವ ವೇಳೆಯಲ್ಲಿ ಮಂಗಿಯು ತನ್ನ ಕೈಯ ಖಡ್ಗದಿಂದ ಗಂಡನ ತಲೆಯೊಡೆಯಲು ಯತ್ನಿಸಿದಳು. ಆಗ ಸೂರಸೇನನು ಕರುಣದಿಂದ ತನ್ನ ಕೈಯಲ್ಲಿದ್ದ ಕಬ್ಬಿಣದ ಕೋಲನ್ನು ಅಡ್ಡವಾಗಿ ಹಿಡಿಯಲು ಖಡ್ಗವು ಖಣಿಲೆಂದು ಶಬ್ದವಾಗಿ ಕೆಳಕ್ಕೆ ಬೀಳಲು ವಜ್ರಮುಷ್ಟಿಯು ಇದೇನೆಂದು ಕೇಳಿದನು. ಅದಕ್ಕೆ ಆ ದುಷ್ಟೆಯು "ಮರುಳಾಟ" ವೆಂದಳು. ಆಕೆಯ ಕಾಪಟ್ಯವನ್ನರಿಯದೆ ವಜ್ರಮುಷ್ಟಿಯು ಖಡ್ಗವನ್ನು ಎಡಗೈಯಲ್ಲಿ ತೆಗೆದುಕೊಂಡು ಬಲಗೈಯಿಂದ ಆ ಸಾವಿರ ಹೂಗಳನ್ನರ್ಚಿಸಿ ವಂದಿಸಿ ಮಂಗಿಯೊಡನೆ ತನ್ನ ಊರಿಗೆ ಹೋದನು.

ಇತ್ತ ಸೂರಸೇನನು "ನಾವು ಸ್ತ್ರೀಯರ ಕಾಪಟ್ಯವನ್ನು ಯೋಚಿಸದೆ ಉತ್ತಮಾಚರಣೆಯನ್ನು ಬಿಟ್ಟು ನೀಚಕೃತ್ಯದಿಂದ ಕೆಟ್ಟೆವು" ಎಂದು ಭಾವಿಸುತ್ತಿರುವಾಗ ಅವನ ಅಣ್ಣಂದಿರು ಆರುಮಂದಿಗಳು ಆ ಊರಿನ ಅರಸನ ಮನೆಗೆ ಹೊಕ್ಕು ಬಹು ವಸ್ತುಗಳನ್ನು ಕದ್ದು ಹೊರೆಗಟ್ಟಿಕೊಂಡು ಆ ಸುಡುಗಾಡಿಗೆ ಬಂದು ಏಳು ಭಾಗ ಮಾಡಿ ಸೂರಸೇನನ ಮುಂದಿಟ್ಟು ಅವನಿಗಿಷ್ಟವಾದ ಭಾಗವನ್ನು ತೆಗೆದುಕೊಳ್ಳುವಂತೆ ಹೇಳಿದರು. ಸೂರಸೇನನು "ಸ್ತ್ರೀಯರನ್ನು ನಂಬಿ ಪ್ರಾಣದಾಶೆಯನ್ನು ಬಿಟ್ಟು ಪರರ ವಸ್ತುಗಳನ್ನು ಕದ್ದು ನರಕಗತಿಗೆ ಹೋಗಬೇಡಿ" ಎಂದು ಅವರಿಗೆ ಮಂಗಿಯ ಕಥೆಯನ್ನು ಸುರಿದನು. ಆ ಮಾತನ್ನು ಕೇಳಿ ಆ ಆರುಮಂದಿಗಳೂ ಅಚ್ಚರಿವಟ್ಟು ಸೂರಸೇನನೊಡನೆ ಆ ಮುನಿಯ ಬಳಿಯಲ್ಲಿ ದೀಕ್ಷೆಯನ್ನು ತೆಗೆದುಕೊಂಡರು. ಅವರುಗಳ ಹೆಂಡತಿಯರೂ ಮಂಗಿಯ ಕಥೆಯನ್ನು ಕೇಳಿ ದೀಕ್ಷೆಯನ್ನು ಪಡೆದರು. ಆ ಭಾನುಮುನಿ ಮೊದಲಾದ ಏಳು ಮಂದಿಗಳು ಪಕ್ಷೋಪವಾಸವನ್ನು ಮಾಡಿ ಬಳಿಕ ಪಾರಣೆಗಾಗಿ ಉಜ್ಜಯನಿಗೆ ಬರುತ್ತಿರಲು ಅವರನ್ನು ವಜ್ರ

ಮುಷ್ಟಿಯು ತಡೆದು ತನ್ನ ಮನೆಗೆ ಕರೆದೊಯ್ದು ಯಥಾವಿಧಿಯಾಗಿ ಭಿಕ್ಷೆ ಮಾಡಿಸಿ ಕೈಮುಗಿದು "ಮನ್ಮಥನನ್ನು ಗೆಲುವ ಸೌಂದರ್ಯವೂ ಯೌವನವೂ ಲಾವಣ್ಯವೂ ಇದ್ದು ನೀವುಗಳು ಯಾವ ಕಾರಣದಿಂದ ಈ ಅಸಿಧಾರಾವ್ರತ—ಕಠಿಣವ್ರತವನ್ನು ಧರಿಸಿರುವಿರಿ?" ಎಂದು ಕೇಳಿದನು. ಅದಕ್ಕವರು ಮಂಗಿಯು ಕಥೆಯನ್ನು ವಿವರಿಸಲು ಕೇಳಿ ವಿಸ್ಮಿತನಾಗಿ ಪತ್ನಿಯರ ಕಪಟವನ್ನು ನೋಡಿ ನೊಂದು ವೈರಾಗ್ಯದಿಂದ ದೀಕ್ಷೆಯನ್ನು ಪಡೆದನು. ಆ ವಿಷಯಗಳನ್ನೆಲ್ಲ ತಿಳಿದು ಮಂಗಿಯೂ ದೀಕ್ಷೆಯನ್ನು ಹೊಂದಿದಳು.

ಭಾನುಮುನಿ ಮೊದಲಾದ ಸಪ್ತರ್ಷಿಗಳು ಬಹುದಿನಗಳವರೆಗೆ ತಪಸ್ಸು ಮಾಡಿ ಸತ್ತು ಮೊದಲನೆಯ ಸೌಧರ್ಮಕಲ್ಪದಲ್ಲಿ ದೇವತೆಗಳಾಗಿ ಹುಟ್ಟಿ ಒಂದು ಸಾಗರೋಪಮಕಾಲದವರೆಗೆ ದಿವ್ಯಸುಖವನ್ನುಂಡು ಅಲ್ಲಿಂದ ಚ್ಯುತರಾಗಿ ಬಂದು ಇಲ್ಲಿ ಧಾತಕೀಖಂಡದ ಇಂದ್ರದಿಕ್ಕಿನಲ್ಲಿರುವ ಮೇರುಗಿರಿಯ ದಕ್ಷಿಣಭರತಕ್ಷೇತ್ರದ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯಲ್ಲಿರುವ ಸುಂದರವಾದ ದೇಶದ ನಿತ್ಯಾಲೋಕವೆಂಬ ಪಟ್ಟಣದಲ್ಲಿ ಚಿತ್ರಚೂಳನೆಂಬ ದೊರೆಗೂ ಆತನ ಸತಿ ಮನೋಹರಿಗೂ ಚಿತ್ರಾಂಗದ, ಗರುಡಧ್ವಜ, ಗರುಡವಾಹನ, ಮಣಿಚೂಡ, ಸುರಭಿಚೂಳ, ಗಗನಾನಂದ, ಗಗನೇಚರರೆಂಬ ಮಕ್ಕಳಾಗಿ ಜನಿಸಿ ಬಹು ಸುಂದರರಾಗಿಯೂ ಸಾಹಸಿಗಳಾಗಿಯೂ ಬೆಳೆದು ಯೌವನವನ್ನು ಹೊಂದಿ ಕೀರ್ತಿಶಾಲಿಗಳಾಗಿರಲು ಹರಿವಾಹನನೆಂಬವನಿಗೆ ಓರ್ವ ಕನ್ಯೆಯು ಸ್ವಯಂವರದಲ್ಲಿ ಮಾಲೆಯನ್ನು ಹಾಕಿ ವರಿಸಲು ಅವನನ್ನು ಓರ್ವ ಚಕ್ರವರ್ತಿಯು ಕೊಂದು ಆ ತರುಣಿಯನ್ನು ಎಳೆದೊಯ್ದನು. ಈ ಸಮಾಚಾರವನ್ನು ಕೇಳಿ ಚಿತ್ರಾಂಗದ ಮೊದಲಾದವರು ಸಂಸಾರಕ್ಕೆ ಭಯಪಟ್ಟು ಉತ್ತಮವಾದ ಜಿನದೀಕ್ಷೆಯನ್ನು ಪಡೆದು ತಪಸ್ಸು ಮಾಡಿ ಮಡಿದು ನಾಲ್ಕನೆಯ ಸ್ವರ್ಗದಲ್ಲಿ ಹುಟ್ಟಿ ಏಳು ಸಾಗರೋಪಮಕಾಲದವರೆಗೆ ಸುಖವನ್ನನುಭವಿಸಿ ಆಯುಷ್ಯವು ತೀರಿದ ಬಳಿಕ ಅಲ್ಲಿಂದ ಚ್ಯುತರಾಗಿ ಕುರುಜಾಂಗಣದೇಶದ ಹಸ್ತಿನಾಪುರದಲ್ಲಿ ಸಿತವಾಹನನೆಂಬ ವೈಶ್ಯನಿಗೆ ಬಂಧುಮತಿಯೆಂಬ ಪತ್ನಿಯಲ್ಲಿ ಚಿತ್ರಾಂಗದನಾಗಿದ್ದ ದೇವನು ಶಂಖನೆಂಬ ಪುತ್ರನಾಗಿ ಜನಿಸಿದನು. ಉಳಿದ ಆರುಮಂದಿಗಳು ಆ ಊರಿನ ದೊರೆಯಾದ ಗಂಗದೇವನಿಗೆ ನಂದಯಶೆಯೆಂಬ ಪತ್ನಿಯಲ್ಲಿ ಗಂಗ, ಗಂಗದೇವ, ಗಂಗಾಮಿತ್ರ, ನಂದಿ, ನಂದಿಬಾಂಧವ, ನಂದಿಷೇಣರೆಂಬ ಪುತ್ರರಾಗಿ ಹುಟ್ಟಿದರು. ಅವರನ್ನು ರೇವತಿಯೆಂಬೋರ್ವ ದಾದಿಯು ಸಾಕುತ್ತಿರಲು ಬೆಳೆದು ಅವರು ಶಂಖನಲ್ಲಿ ಪೂರ್ವಜನ್ಮದ ಸಂಸ್ಕಾರದಿಂದ ಬಹು ಸ್ನೇಹವುಳ್ಳವರಾಗಿದ್ದು

ಒಡನುಂಡು ಒಡನಾಡಿಕೊಂಡಿದ್ದರು. ಆ ದೊರೆಯು ಹೆಂಡತಿ ನಂದಯಶೆಯು ಮತ್ತೊಂದು ಮಗುವನ್ನು ಹಡೆದು ಅದನ್ನು ಪೂರ್ವಜನ್ಮದ ವೈರದಿಂದ ಮುನಿದು ಆ ರೇವತಿಯ ಕೈಯಲ್ಲಿ ಕೊಟ್ಟು ಅದನ್ನು ಸಾಕುತ್ತೇವೆನ್ನುವವರಿಗೆ ಕೊಟ್ಟುಬಿಡು ವಂತೆ ಹೇಳಿ ಕಳುಹಿದಳು. ಆ ಮಗುವನ್ನೆತ್ತಿಕೊಂಡು ಬರುತ್ತಿರುವ ಕೇರಿಯಲ್ಲಿ ಇದಿರಾಗಿ ಬರುತ್ತಿದ್ದ ಶಂಖನು ಕಾರುಣ್ಯದಿಂದ ಅದು ಯಾರ ಮಗುವೆಂದು ಕೇಳ ಲು ಆ ದಾದಿಯು ನಿಜಾಂಶವನ್ನು ಹೇಳಿದಳು. ಅದನ್ನು ಕೇಳಿ ಮರುಕದಿಂದ ಶಂಖನು ಮಗುವನ್ನು ತನ್ನ ಕೈಗೆ ತೆಗೆದುಕೊಂಡು ಬಂದು ತನ್ನ ತಾಯಿ ಬಂಧು ಮತಿಗೆ ಕೊಟ್ಟನು. ಆಕೆಯು ಆ ಮಗುವಿಗೆ ನಿರ್ನಾಮಿಕನೆಂದು ಹೆಸರನ್ನಿಟ್ಟು ಸಾಕುತ್ತಿದ್ದಳು.

ಇತ್ತ ಗಂಗದೇವನು ಒಂದುದಿನ ಅವಧಿಜ್ಞಾನಸಂಪನ್ನರಾದ ಮುನಿಗಳ ಬಳಿಗೆ ಹೋಗಿ ನಮಸ್ಕರಿಸಿ ನಿರ್ನಾಮಿಕನನ್ನು ಆತನ ತಾಯಿಯು ಮುನಿಯಲು ಕಾರಣವೇನೆಂದು ಕೇಳಿದನು. ಅದಕ್ಕಾ ಮುನಿಗಳು "ಸೌರಾಷ್ಟ್ರದೇಶದ ಗಿರಿ ನಗರದ ದೊರೆಯಾದ ಘನರಥನು ತನ್ನ ಪತ್ನಿ ಕನಕಮಾಲೆಯೊಡನೆ ಸುಖವಾಗಿ ದ್ದನು. ಆತನಿಗೆ ಅಮೃತರಸಾಯನನೆಂಬೋರ್ವ ಬಾಣಸಿಗನಿದ್ದನು. ಒಂದುದಿನ ಆತನು ಮಾಂಸವನ್ನು ಬೇಯಿಸಿ ದೊರೆಗೆ ಬಡಿಸಲು ಅದು ಸವಿಯಾಗಿದ್ದುದರಿಂದ ದೊರೆಯು ಮೆಚ್ಚಿ ಅವನಿಗೊಂದು ಗ್ರಾಮವನ್ನು ಕೊಟ್ಟು ಅವನು ಬೇಯಿಸಿದ ಮಾಂಸದ ಸವಿಯಾದ ಆಹಾರವನ್ನು ಭುಂಜಿಸುತ್ತ ಸುಖವಾಗಿದ್ದನು. ಒಂದು ದಿನ ಅಲ್ಲಿಗೆ ಸುಧರ್ಮರೆಂಬ ಮುನೀಶ್ವರರು ಬಂದು ಆ ದೊರೆಗೆ ಸದ್ಧರ್ಮವನ್ನುಪ ದೇಶಿಸಲು ಅವನು ವೈರಾಗ್ಯವನ್ನು ಹೊಂದಿ ತನ್ನ ಮಗನಾದ ಚಿತ್ರರಥನಿಗೆ ರಾಜ್ಯ ಭಾರವನ್ನು ವಹಿಸಿ ತಾನು ದೀಕ್ಷೆಯನ್ನು ಪಡೆದನು. ಬಳಿಕ ಚಿತ್ರರಥನು ಉತ್ತ ಮವಾದ ವ್ರತವನ್ನು ಕೈಕೊಂಡು ಆ ಬಾಣಸಿಗನ ಗ್ರಾಮವನ್ನು ಕಿತ್ತುಕೊಂಡನು. ಅವನು "ಈ ಸವಣನ ದೆಸೆಯಿಂದ ನನ್ನ ಉಂಬಳಿಯು ತಪ್ಪಿಹೋಯ್ತು" ಎಂದು ಕಡುನೊಂದು ಕಪಟಭಾವದಿಂದ ಆ ಸುಧರ್ಮಮುನೀಶ್ವರರ ಬಳಿಗೆ ಹೋಗಿ ಕಾಲಿಗೆ ನಮಸ್ಕಾರಮಾಡಿ "ಎಲೈ ಮುನಿಪತಿಯೆ! ಶ್ರೇಷ್ಠವಾದ ವ್ರತವನ್ನು ನನಗೆ ದಯಪಾಲಿಸು" ಎಂದು ಹೇಳಿ ಅಹಿಂಸಾವ್ರತವನ್ನು ಕೈಕೊಂಡನು. ಹೀಗೆ ಕಪಟಾಚರಣೆಯಲ್ಲಿದ್ದ ಬಾಣಸಿಗನು ಒಂದು ದಿನ ಆ ಮುನಿಯು ಪಾರಣೆಗೆ ಬರುತ್ತಿರುವುದನ್ನು ಕಂಡು ಕುಟಿಲಪ್ರೀತಿಯಿಂದ ಅವರನ್ನು ನಿಲ್ಲಿಸಿ ವಿಷಮಿಶ್ರವಾದ ಆಹಾರವನ್ನು ಕೊಟ್ಟನು. ಅದನ್ನುಂಡು ಮುನಿಯು ಕೂಡಲೆ ಮೃತನಾಗಿ ಸ್ವರ್ಗ

ದಲ್ಲಿ ದೇವನಾದನು. ಮುನಿಯುನ್ನು ಕೊಲೆಮಾಡಿದ ವಿಷಯವು ರಾಜನಿಗೆ ತಿಳಿದು ಆತನು ಆ ಬಾಣಸಿಗನನ್ನು ಕೊಲ್ಲಿಸಲು ಸತ್ತು ಕ್ರಮವಾಗಿ ಎಲ್ಲಾ ನರಕಗಳಲ್ಲಿಯೂ ಹುಟ್ಟಿ ಕಡುಕಷ್ಟವನ್ನನುಭವಿಸಿ ದುರಿತೋಪಶಮದಿಂದ ಆರ್ಯಖಂಡದ ಮಲಯ ದೇಶದ ಪಲಾಶಕೂಟವೆಂಬ ಹಳ್ಳಿಯಲ್ಲಿ ಯಕ್ಷದೇವನೆಂಬ ಶೂದ್ರನಿಗೂ ಆತನ ಪತ್ನಿ ಯಕ್ಷದತ್ತೆಯೆಂಬವಳಿಗೂ ಹುಟ್ಟಿದ ಯಕ್ಷಿಳನೆಂಬವನಿಗೆ ಯಕ್ಷದತ್ತನೆಂಬ ತಮ್ಮನಾಗಿ ಹುಟ್ಟಿದನು. ಆ ಸಹೋದರರೊಂದುದಿನ ಬತ್ತದ ಪೈರನ್ನು ನೋಡುವೆವೆಂದು ಬಂಡಿಯನ್ನೇರಿ ಬರುತ್ತ ಯಕ್ಷದತ್ತನು ತನ್ನ ಬಂಡಿಯನ್ನು ಒಂದು ಹೆಣ್ಣು ಹಾವಿನ ಮೇಲೆ ಹಾಯಿಸಿ ಕೊಂದನು. ಅದು ಸತ್ತು ಶ್ವೇತಪುರಾಧಿಪತಿಯಾದ ವಾಸವನಿಗೂ ಆತನ ಸತಿ ವಸುದೇವಿಗೂ ನಂದಯಶೆಯೆಂಬ ಮಗಳಾಗಿ ಜನಿಸಿ ನಿನಗೆ—ಗಂಗದೇವನಿಗೆ ಪತ್ನಿಯಾದಳು. ಅತ್ತ ತಮ್ಮನು ಕೋಪದಿಂದ ಹೆಣ್ಣು ಹಾವನ್ನು ಕೊಂದುದನ್ನು ನೋಡಿ ಯಕ್ಷಿಳನು "ಎಲೈ ತಮ್ಮನೆ! ಈದಿನ ನೀನು ನಿರಪರಾಧಿಯಾದ ಹಾವನ್ನು ಕೊಂದುದು ಯೋಗ್ಯವೇ?" ಎಂದು ಕೇಳಿ ಅವನಿಗೆ ಹಿತವನ್ನು ಬೋಧಿಸಲು ಅದನ್ನು ಕೇಳಿ ಯಕ್ಷದತ್ತನು ಕರುಣಾರ್ದ್ರಹೃದಯನಾಗಿ ಕೆಲವು ದಿನವಿದ್ದು ಮರಣವನ್ನು ಹೊಂದಿ ನಿನಗೆ—ಗಂಗದೇವನಿಗೆ ಈ ನಂದಯಶೆಯಲ್ಲಿ ನಿರ್ನಾಮಿಕನೆಂಬ ಮಗನಾಗಿ ಜನಿಸಿದನು. ಈಕೆಯು ಪೂರ್ವಜನ್ಮವೈರದಿಂದ ಆತನಮೇಲೆ ಕೋಪಿಸಿದಳು," ಎಂದು ಹೇಳಲು ಗಂಗದೇವನು ಆ ಮುನಿಯ ಮಾತನ್ನು ಕೇಳಿ ವೈರಾಗ್ಯದಿಂದ ತನ್ನ ಆರುಮಂದಿ ಮಕ್ಕಳೂ ಶಂಖನಿರ್ನಾಮಿಕರೂ ಸಮೇತನಾಗಿ ದೀಕ್ಷೆಯನ್ನು ತೆಗೆದುಕೊಂಡನು. ಇತ್ತ ನಂದಯಶೆಯೂ ರೇವತಿ—ದಾದಿಯೂ ದೀಕ್ಷೆಯನ್ನು ತೆಗೆದುಕೊಂಡು ಮುಂದಿನ ಭವದಲ್ಲಿಯೂ ಆ ಆರುಮಂದಿಗಳು ತನಗೆ ಮಕ್ಕಳಾಗಬೇಕೆಂದು ನಂದಯಶೆಯೂ ಆ ಆರುಮಂದಿಗಳನ್ನು ತಾನು ಆರೈಕೆಮಾಡಬೇಕೆಂದು ರೇವತಿಯೂ ನಿದಾನಶಲ್ಯವನ್ನು ಮಾಡಿ ಸನ್ಯಸನವಿಧಿಯಿಂದ ಮಡಿದು ಹದಿನಾರನೆಯ ಸ್ವರ್ಗದಲ್ಲಿ ಹುಟ್ಟಿ ಉತ್ತಮಸುಖವನ್ನನುಭವಿಸಿ ಬಂದು ನಂದಯಶೆಯು ದೇವಸೇನನ ಮಗಳಾಗಿ ಜನಿಸಿ ಸುಂದರಿಯಾದ ದೇವಕಿಯೆಂಬ ಹೆಸರನ್ನು ಪಡೆದು ವಸುದೇವಾ! ನಿನಗೆ ಪತ್ನಿಯಾದಳು. ರೇವತಿಯೂ ಅದೇ ಸ್ವರ್ಗದಲ್ಲಿ ಹುಟ್ಟಿ ಅಲ್ಲಿಂದ ಬಂದು ಮಲಯದೇಶದ ಭದ್ರಿಳವೆಂಬ ನಗರದಲ್ಲಿ ಸುದೃಷ್ಟಿಯೆಂಬ ವರ್ತಕನಿಗೆ ಅಳಕೆಯೆಂಬ ಪತ್ನಿಯಾದಳು. ಅತ್ತ ಶಂಖಮುನಿಯು ಸತ್ತು ಮಹಾಶುಕ್ರವೆಂಬ ಸ್ವರ್ಗದಲ್ಲಿ ಹುಟ್ಟಿ ಅಲ್ಲಿಂದ ಬಂದು ಬಲರಾಮನಾಗಿ ಹುಟ್ಟಿದನು. ಆ ಗಂಗದೇವನ ಆರುಮಂದಿ ಮಕ್ಕಳು

ನ್ನು ಮಾಡಿ ಸತ್ತು ಅದೇ ಸ್ವರ್ಗದಲ್ಲಿ ಹುಟ್ಟಿ ಸುಖವನ್ನುಂಡುಬಂದು ನಿನಗೆ (ವಸುದೇವನಿಗೆ) ಮೂರುಸರ್ತಿ ಎರಡೆರಡು—ಅವಳಿ ಮಕ್ಕಳಾಗಿ ಜನಿಸುವರು. ಆ ಮಕ್ಕಳನ್ನು ದೇವೇಂದ್ರನ ಅಪ್ಪಣೆಯಿಂದ ನೈಗಮದೇವನು ಎತ್ತಿಕೊಂಡು ಹೋಗಿ ಅಳಕೆಯ ಬಳಿಯಲ್ಲಿರಿಸುವನು. ಆಕೆಯು ಹೆರುವ ಅಧರ್ಾಯುಷ್ಯದ ಮಕ್ಕಳನ್ನು ದೇವಕಿಯ ಮುಂದಿರಿಸಲು ಅವುಗಳನ್ನು ಕಂಸನು ಕೊಲ್ಲಿಸುವನು. ಅತ್ತ ಅಳಕೆಯು ಸಾಕುವ ಆರು ಮಂದಿ ಮಕ್ಕಳು ದೀಕ್ಷೆಯನ್ನು ಪಡೆದು ಮುಕ್ತರಾಗುವರು ಆ ನಿನರ್ಾಮಿಕನಾಗಿದ್ದ ದೇವನು ದೇವಕಿಯ ಗರ್ಭದಲ್ಲಿ ಜನಿಸಿ ಏಳು ತಿಂಗಳಲ್ಲಿ ಹುಟ್ಟಿ ಬೇರೊಂದೆಡೆಯಲ್ಲಿ ಬೆಳೆದು ಅರ್ಧಚಕ್ರಿಯಾಗಿ ಮೆರೆವನು. ಇದು ವೃಷಭತೀರ್ಥಂಕರರು ಭರತಚಕ್ರವರ್ತಿಗೆ ಹೇಳಿದ ಮಾತು. ಇದನ್ನು ನೀನು ನಂಬು" ಎಂಬುದಾಗಿ ಆ ಮುನಿಪತಿಯು ಹೇಳಲು ಮುನಿಗಳು ಸಾರ್ಥಕವಾದ ವಚನವುಳ್ಳವರೆಂದು ವಸುದೇವನು ತನ್ನಪತ್ನಿಯೊಡನೆ ಮುನಿಗೆರಗಿ ಬೀಳ್ಕೊಂಡು ಮನೆಗೆಹೋದನು.

## ೧೫. ಕೃಷ್ಣೋದಯವರ್ಣನಸಂಧಿ

ದೇವಕಿಯ ಗರ್ಭವು ಬೆಳೆದು ಏಳುತಿಂಗಳಾದಾಗ ಕಂಸನು ತನ್ನ ಮನೆಗೆ ಕರೆದೊಯ್ದನು. ಒಂಬತ್ತನೆಯ ತಿಂಗಳಲ್ಲಿ ಆಕೆಯು ಅವಳಿಮಕ್ಕಳನ್ನು ಹಡೆದಳು. ಮುನಿವಾಕ್ಯದಂತೆ ನೈಗಮದೇವನು ಬಂದು ದೇವಕಿಗೆ ಮಾಯಾನಿದ್ರೆಯನ್ನು ಬರಿಸಿ ತಾನು ತಂದ ಅಳಕೆಯ ಶಿಶುಗಳನ್ನು ಅಲ್ಲಿರಿಸಿ ಆಕೆಯ ಶಿಶುಗಳನ್ನು ಅಳಕೆಯ ಬಳಿಗೊಯ್ದುಬಿಟ್ಟನು ಆಗ ಕಂಸನು ಬಂದು ಸೂಲಗಿತ್ತಿಗೆ ಗುಟ್ಟಾಗಿ ಹೇಳಿ ಆ ಅಧರ್ಾಯುಷ್ಯದ ಶಿಶುಗಳ ಕೊರಳುಗಳನ್ನು ಮುರಿಸಿ ಬಹಿರಂಗದಲ್ಲಿ ದುಃಖವನ್ನು ತೋರಿಸಿ ದೇವಕಿಯನ್ನು ಸಂತೈಸುತ್ತ ಸುಖದಿಂದಿದ್ದನು. ಹೀಗೆ ಮೂರಾವರ್ತಿಯೂ ಅವಳಿಮಕ್ಕಳನ್ನು ಕೊಲ್ಲಿಸಿ ಕಂಸನು ಮುನಿವಚನವನ್ನು ಗೆದ್ದೆನೆಂದು ನಿಶ್ಚಿಂತನಾಗಿದ್ದನು. ಒಂದುದಿನ ದೇವಕಿಯು ಋತುಮತಿಯಾಗಿ ನಾಲ್ಕನೀರನ್ನು ಮಿಂದು ಅಲಂಕೃತಳಾಗಿ ರಾತ್ರಿಯಲ್ಲಿ ಪತಿಯೆಡೆಗೈದಿ ರತಿಸುಖವನ್ನನುಭವಿಸಿ ನಿದ್ರಾಮುದ್ರಿತಳಾಗಿರಲು ಬೆಳಗಿನ ಜಾವದಲ್ಲಿ ಸೂರ್ಯ, ಚಂದ್ರ, ಆನೆಯುಮರಿ, ಸಿಹ್ಮ, ಚಕ್ರ ಇವುಗಳನ್ನು ಕನಸಿನಲ್ಲಿ ಕಂಡು ಬೆಳಿಗ್ಗೆ ಎದ್ದು ಮುಖಪ್ರಕ್ಷಾಲನಾದಿಗಳನ್ನು ತೀರಿಸಿಕೊಂಡು ಪತಿಯ ಬಳಿಗೆ ಹೋಗಿ ತಾನು ಕಂಡ ಕನಸುಗಳನ್ನು

ಹೇಳಲು ವಸುದೇವನು "ಆ ಕನಸುಗಳನ್ನು ಕಂಡ ಫಲದಿಂದ ನಿನಗೆ ವಿಕ್ರಮಿ ಯಾದ ಬಾಲಕನು ಜನಿಸುವನು" ಎಂದನು. ಆ ಮಾತನ್ನು ಕೇಳಿ ದೇವಕಿಯು ಸಂತೋಷಚಿತ್ತಳಾಗಿರಲು ಆ ನಿರ್ನಾಮಿಕನಾಗಿದ್ದ ದೇವನು ಬಂದು ಆಕೆಯ ಗರ್ಭದಲ್ಲಿ ಉದ್ಭವಿಸಿ ದಿನಕ್ರಮದಿಂದ ಬೆಳೆದು ಏಳನೆಯ ತಿಂಗಳಲ್ಲಿ ಉತ್ತಮ ಲಗ್ನ ದಲ್ಲಿ ಅಷ್ಟಮಿಯ ಅರ್ಧರಾತ್ರಿಯಲ್ಲಿ ಜನಿಸಿದನು. ಆಗ ಆಕಾಶದಲ್ಲಿ ಗುಡುಗಿನ ಧ್ವನಿಯಾಗಿ ಮೋಡವು ಆವರಿಸಿ ಸೋನೆಯು ಸುರಿಯಲಾರಂಭಿಸಿದುದು. ವಸು ದೇವನು ಬಂದು ಶಿಶುವನ್ನು ನೋಡಿ ಆ ಪಾಪಿ ಕಂಸನು ಮೊದಲಿನ ಮಕ್ಕಳನ್ನು ಕೊಲ್ಲಿಸಿದಂತೆ ಈ ಶಿಶುವನ್ನೂ ಕೊಲ್ಲಿಸುವನೆಂದು ಬಗೆದು ಮರುಕದಿಂದ ಶಿಶುವನ್ನೆತ್ತಿ ಕೊಂಡು ಮನೆಯಿಂದ ಹೊರಟು ಬರುವಾಗ ಬಲರಾಮನು ಶಿಶುವಿಗೆ ಕೊಡೆಯನ್ನು ಹಿಡಿದುಕೊಂಡುಬಂದನು. ಈರ್ವರೂ ಪುರದ್ವಾರಕ್ಕೆ ಬಂದು ಬಾಗಿಲು ಮುಚ್ಚಿ ರುವುದನ್ನು ಕಂಡು, ಮುಂದಕ್ಕೆ ಹೋಗುವ ದಾರಿಯನ್ನು ಕಾಣದೆ ಚಿಂತಿಸು ತ್ತಿರಲು ಆ ಪುಣ್ಯಶಿಶುವಿನ ಕಾಲಿನ ಕಾಂತಿಯು ಸೋಂಕಿದೊಡನೆಯೇ ಬಾಗಿಲು ತೆರೆಯಲ್ಪಟ್ಟಿತು. ಮಗುವಿನ ಪುಣ್ಯಪ್ರಭಾವಕ್ಕೆ ಅವರು ಅಚ್ಚರಿವಟ್ಟು ಅಲ್ಲಿಂದ ಹೊರಹೊರಟು ಕತ್ತಲೆಯಲ್ಲಿ ದಾರಿಗಾಣದೆ ಚಿಂತಿಸುತ್ತಿರಲು ಮಗುವಿನ ಪುಣ್ಯ ದೇವತೆಯು ವೃಷಭಾಕಾರವನ್ನು ಧರಿಸಿ ತನ್ನ ಎರಡು ಕೊಂಬುಗಳಲ್ಲಿ ಪ್ರಜ್ವಲಿ ಸುವ ದೀವಿಗೆಗಳನ್ನು ನಿರ್ಮಿಸಿಕೊಂಡು ಮುಂದೆ ನಡೆಯಿತು. ಅದನ್ನು ಹಿಂಬಾ ಲಿಸಿ ವಸುದೇವ ಬಲರಾಮರು ಹೋಗುತ್ತ ಮುಂದೆ ಯಮುನಾನದಿಯು ತುಂಬಿ ಹರಿಯುತ್ತಿರುವುದನ್ನು ಕಂಡು ಅದನ್ನು ಹೇಗೆ ದಾಟುವುದೆಂದು ಚಿಂತಿಸುತ್ತಿರು ವಾಗ ಆ ಎತ್ತು ಮುಂದಾಗಿ ಹೊಳೆಗೆ ಇಳಿಯಲು ಕಟ್ಟೆಯನ್ನು ಹಾಕಿದಂತೆ ಎರಡು ಕಡೆಗಳಲ್ಲಿಯೂ ನೀರು ತಡೆಯಲ್ಪಟ್ಟು ಮಧ್ಯದಲ್ಲಿ ದಾರಿಯಾಯಿತ್ತು. ಅದನ್ನು ಬೆಂಬಿಡದೆ ವಸುದೇವ ಬಲರಾಮರು ನದಿಯನ್ನು ದಾಂಟಿ ಕೆಲವು ದೂರ ನಡೆದು ಒಂದು ಯಕ್ಷಿಯ ಮಂದಿರದ ಬಳಿಗೆ ಹೋದರು. ಅಲ್ಲಿ ಆ ವೃಷಭವು ಅದೃಶ್ಯವಾಯ್ತು. ವಸುದೇವ ಬಲರಾಮರು ಆ ಯಕ್ಷಿಯ ಮಂದಿರಕ್ಕೆ ಪ್ರವೇ ಶಿಸಿದರು. ಆಗ ನಂದನೆಂಬವನು ಕೈದೀವಿಗೆಯನ್ನು ಹಿಡಿದುಕೊಂಡು ಆ ಮಂದಿರಕ್ಕೆ ಬರುತ್ತಿರಲು ಕಂಸನು ಬಂದನೆಂದಂಜಿ ಅವರೀರ್ವರೂ ದೇವಿಯ ವಿಗ್ರಹದ ಹಿಂದೆ ಅಡಗಿಕೊಂಡರು. ಆಗ ನಂದನು ಒಂದು ಹೆಣ್ಣುಗೂಸನ್ನು ತಂದು ದೇವಿಯ ಮುಂದೆ ನಿಂತು ಕೋಪದಿಂದ "ಎಲೆ ದೇವಿ! ನನಗೆ ಗಂಡು ಮಗುವನ್ನು ಕೊಡು ವೆನೆಂದು ನಂಬಿಸಿ ಬಹುದಿನಗಳವರೆಗೆ ಹಲವು ಪೂಜೆಗಳನ್ನು ಮಾಡಿಸಿಕೊಂಡು ಹರ

ಕೆಯು ಹಣವನ್ನು ತೆಗೆಯಿಸಿ ಈಗ ನನ್ನ ಹೆಂಡತಿ ಗೋಪಿಗೆ ಗಂಡುಮಕ್ಕಳ ವರವನ್ನು ಕೊಡದೆ ಹೆಣ್ಣು ಮಗುವನ್ನು ನೀನು ಕೊಡಬಹುದೇ? ನೀನು ಕೊಟ್ಟಿರುವ ಪೀಡೆಯನ್ನು ನೀನೇ ತೆಗೆದುಕೊ" ಎಂದು ಆ ಕೂಸನ್ನಿರಿಸಿ ಹೊರಡುವಾಗ ವಸುದೇವನು ತನ್ನ ಗಂಡುಮಗುವನ್ನು ಅಲ್ಲಿರಿಸಿ ಆ ಹೆಣ್ಣುಗೂಸನ್ನು ತೆಗೆದುಕೊಂಡು ಬಲರಾಮನ ಕೈಗೆ ಕೊಟ್ಟು ಮಂದಿರದ ಬಾಗಿಲಿಗೆ ಹೋಗಿ "ಎಲೆ ಗೋಪ! ನಿನಗೊಂದು ಗಂಡುಮಗುವನ್ನು ನಾನು ಒಲಿದು ಕೊಡುವೆನು, ಹಿಂದಿರುಗು" ಎನಲು ಅವನು ತಿರಿಗಿ ಬಂದು ನೀಲದ ಬೊಂಬೆಯಂತಿರುವ ಮಗುವನ್ನೆತ್ತಿಕೊಂಡು ದೇವಿಯು ವರವನ್ನಿತ್ತಳೆಂದು ವಂದಿಸಿ ಮನೆಗೆ ಬಂದು ಗೋಪಿಯನ್ನು ಕುರಿತು "ಯಕ್ಷಿಯು ಪ್ರತ್ಯಕ್ಷಳಾಗಿ ನನ್ನನ್ನು ಕರೆದು ಈ ಗಂಡುಮಗುವನ್ನು ಕೊಟ್ಟಳು. ಲೋಕದಲ್ಲಿ ನಮ್ಮಂತಹ ಪುಣ್ಯವಂತರುಂಟೇ? ಪ್ರೀತಿಯಿಂದ ಮಗುವನ್ನು ತೆಗೆದುಕೊ" ಎಂದು ಆನಂದದಿಂದ ಕೊಡಲು ಆಕೆಯು ತೆಗೆದುಕೊಂಡು ಸಂತೋಷಪರವಶಳಾದಳು. ಆ ಮಗುವು ಕೃಷ್ಣಯಕ್ಷಿಯ ವರದಿಂದ ಪ್ರಾಪ್ತವಾದುದೆಂದು ಅದಕ್ಕೆ ನಂದನು "ಕೃಷ್ಣ" ಎಂದು ಹೆಸರನ್ನಿಟ್ಟನು.

ಇತ್ತ ವಸುದೇವನು ಆ ಹೆಣ್ಣುಮಗುವನ್ನು ತಂದು ದೇವಕಿಗಿತ್ತು ಆ ವಿಷಯವನ್ನೆಲ್ಲ ಹೇಳಿದನು. ಏಳು ತಿಂಗಳಲ್ಲಿ ದೇವಕಿಯು ಹೆಣ್ಣುಮಗುವನ್ನು ಹೆತ್ತಳೆಂದು ಕೇಳಿ ಕಂಸನು ಆ ಹೆಣ್ಣಿನ ಗಂಡನ ದೆಸೆಯಿಂದ ತನಗೆ ಕೇಡೊದಗುವುದೆಂದು ಬಗೆದು ಗುಟ್ಟಾಗಿ ಅದರ ಮೂಗನ್ನೊತ್ತಿಸಿದನು. ಆ ಮಗುವು ಬೆಳೆದು ಯೌವನವಾಂತು ತನ್ನ ವಿಕಾರಕ್ಕೆ ತಾನೇ ಹೇಸಿ ತಾಪಸರೂಪವನ್ನು ಧರಿಸಿ ವಿಂಧ್ಯಪರ್ವತದಲ್ಲಿ ತಪಸ್ಸನ್ನು ಮಾಡಿ ಮಡಿದು ದೇವಲೋಕದಲ್ಲಿ ಹುಟ್ಟಿತು. ವಿಂಧ್ಯದ ವನಚರರು ಆ ತಪಸ್ವಿನಿಯ ರೂಪವನ್ನು ವಿಂಧ್ಯಾದೇವತೆಯೆಂದು ಪೂಜಿಸುತ್ತಾರೆ.

ಇತ್ತ ಕಂಸನ ಮನೆಯಲ್ಲಿ ಕಣ್ಣೆತ್ತರಿನ ಹನಿಗಳು ಸುರಿದುವು. ಸತ್ತಿಗೆಯು ಮುರಿದುದು, ಗದ್ದುಗೆಯು ಅದುರಿತು. ಹಗಲಿನಲ್ಲಿ ಉಳ್ಕಾಪಾತವಾಯ್ತು, ಮನೆಯ ದೇವತೆಗಳು ಅತ್ತುವು, ಖಡ್ಗಗಳ ಮೊನೆಯಲ್ಲಿ ಬೆಂಕಿಯ ಕಿಡಿಗಳು ಸೂಸಿದುವು, ಭೂಕಂಪವಾಯ್ತು. ಆ ಅಪಶಕುನಗಳನ್ನು ಕಂಡು ಕಂಸನು ಭೀತನಾಗಿ ಓರ್ವ ಶಕುನಿಗನನ್ನು ಕರೆಯಿಸಿ ಆ ಉತ್ಪಾತಗಳಿಗೆ ಕಾರಣವೇನೆಂದು ಕೇಳಲು ಅವನು 'ರಾಜನೆ! ಈ ಭೂಮಿಯಲ್ಲಿ ನಿನಗೆ ಬಹು ಪರಾಕ್ರಮಿಯಾದ ಓರ್ವ ಶತ್ರುವು ಬೆಳೆಯುತ್ತಿದ್ದಾನೆ' ಎಂದನು. ಆ ಮಾತನ್ನು ಕೇಳಿ ಚಿಂತೆಯೊಳಿರುವಾಗ ಆ

ಹಿಂದಿನ ಭವದಲ್ಲಿ ಮುನಿಯಾಗಿದ್ದಾಗ ಬಂದೊದಗಿದ್ದ ದೇವತೆಗಳು ಬಂದು ತಮ್ಮಿಂ ದೇನಾಗಬೇಕೆಂದು ಕೇಳಲು ಕಂಸನು ತನಗೋರ್ವ ಶತ್ರುವು ಬೆಳೆಯುತ್ತಿರುವ ನೆಂದೂ ಅವನನ್ನು ಕೊಲ್ಲಬೇಕೆಂದೂ ಹೇಳಿದನು. ಆ ಮಾತನ್ನು ಕೇಳಿ ಆ ಏಳು ದೇವತೆಗಳೂ ವಿಭಂಗವೆಂಬ ಜ್ಞಾನದಿಂದ ಕೃಷ್ಣನಿರುವ ಸ್ಥಳವನ್ನು ತಿಳಿದು ಒಂ ದೊಂದೇ ದೇವತೆಯು ಹೋಗಿ ಕೊಲ್ಲಬಹುದೆಂದು ಯೋಚಿಸಿ ಮೊದಲು ಪೂತಿನಿ ಯೆಂಬ ದೇವತೆಯು ಯಶೋದೆಯು ನೀರಿಗೆ ಹೋಗಿರುವ ಸಮಯದಲ್ಲಿ ಆಕೆಯ ರೂಪವನ್ನು ಮಾರ್ಪಡಿಸಿಕೊಂಡು ಹೋಗಿ ವಿಷವನ್ನು ತುಂಬಿದ ತನ್ನ ಮೊಲೆ ಯನ್ನು ಆ ಮಗುವಿಗೆ ಕೊಡಲು ಅದು ಮೊಲೆಯನ್ನು ಕಚ್ಚಿ ವಿಷವನ್ನೂ ಬಿಸಿಯ ರಕ್ತವನ್ನೂ ಹೀರಿದರೂ ಅದರ ಹಸಿವು ಹೋಗದೆ ಮತ್ತೆ ಹೀರುತ್ತಿರಲು ಪೂತಿನಿಯು ಉಬ್ಬಸಗೊಂಡು ಮೊಲೆಯ ತೊಟ್ಟು ಕಿತ್ತುಹೋಗುವಂತೆ ಎಳೆದು ಓಡಿಹೋದಳು. ಯಶೋದೆಯು ನೀರನ್ನು ತಂದು ಮನೆಯಲ್ಲಿ ರಕ್ತವು ಸುರಿದಿರುವುದನ್ನು ಕಂಡು ಬೆದರಿ ತೊಟ್ಟಿಲ ಬಳಿಗೆ ಹೋಗಿ ಮಗುವಿನ ಬಾಯಲ್ಲಿದ್ದ ಮೊಲೆದೊಟ್ಟನ್ನೂ ಕೆನ್ನೆಗ ಳಲ್ಲಿ ಸುರಿದ ರಕ್ತವನ್ನೂ ಕಂಡು ಮಗುವನ್ನೆತ್ತಿಕೊಂಡು ರಕ್ತವನ್ನು ತೊಳೆದು ಮೊಲೆ ಯುಣಿಸಿ ಮುಖವನ್ನು ನೋಡಿ ಆ ಕೃಷ್ಣಯಕ್ಷಿಗೆ ಹರಕೆಯನ್ನು ಹೇಳಿ ಮಗು ವನ್ನು ಸಂತೋಷದಿಂದ ಸಾಕುತ್ತಿದ್ದಳು. ಆಗ ಮಾಕಾಳಿಯೆಂಬ ಎರಡನೆಯ ದೇವತೆಯು ಕಾಗೆಯ ಆಕಾರವನ್ನು ಧರಿಸಿಕೊಂಡು ಬಹುಕೋಪದಿಂದ ಕೃಷ್ಣನ ಬಳಿಗೆ ಹೋಗಿ ಹರಿತವಾದ ಕೊಕ್ಕಿನಿಂದ ಕಣ್ಣುಗಳನ್ನು ಕುಕ್ಕಿತು. ಆಗ ಮಗುವು ತನ್ನ ಎಡಗೈಯನ್ನು ಬೀಸಲು ಅದರ ರೆಕ್ಕೆಗಳು ಮುರಿದು ಕಾಕಾ ಎಂದು ಅರಚುತ್ತ ಆ ರಕ್ಕಸಿಯು ಓಡಿಹೋದಳು. ಯಶೋದೆಯು ಮಗುವಿಗೆ ಎರಡನೆಯ ಕಂಟಕವು ತಪ್ಪಿತೆಂದು ಸಂತೋಷದಿಂದಿದ್ದಳು. ಮಗುವು ಅಂಬೆಗಾಲಿಟ್ಟು ಹರಿದಾಡುವ ಸಮ ಯದಲ್ಲಿ ಕೌಶಂಬಿಯೆಂಬ ಮೂರನೆಯ ರಕ್ಕಸಿಯು ಬಹು ಕೋಪದಿಂದ ಬಂದು ಕತ್ತೆಯ ರೂಪವನ್ನು ಧರಿಸಿ ಮಗುವನ್ನು ಕಚ್ಚಿ ಕೊಲ್ಲುವೆನೆಂದು ಬಾಯನ್ನು ತೆರೆಯುವಾಗ ಕೃಷ್ಣನು ತನ್ನ ಎರಡು ಕೈಗಳಿಂದ ಅದರ ತುಟಿಗಳನ್ನು ಸೀಳಿ ಹಾಕಲು ಅದು ಅರಚುತ್ತ ಓಡಿಹೋಯ್ತು. ಮಗುವಿನ ಸಾಹಸವನ್ನು ನೋಡಿ ಗೋಪಾಲರೆಲ್ಲ ಆಶ್ಚರ್ಯಪಟ್ಟರು. ಒಂದುದಿನ ಕೃಷ್ಣನು ಬಾಲದೊಡಿಗೆಗಳನ್ನು ಧರಿಸಿಕೊಂಡು ಅಂಗಣದಲ್ಲಿ ಆಡುತ್ತಿರುವಾಗ ಪೃಥುಕಿಯೆಂಬ ನಾಲ್ಕನೆಯ ರಕ್ಕ ಸಿಯು ಗಾಡಿಯ ಆಕಾರವನ್ನು ಧರಿಸಿಕೊಂಡು ಬಹು ಭಯಂಕರವಾಗಿ ಬಂದು ಬಾಲಕೃಷ್ಣನನ್ನು ಇಟ್ಟೆಡೆಯಲ್ಲಿ ಸಿಲುಕಿಸಿ ಕೊಲ್ಲಬೇಕೆಂದು ಯತ್ನಿಸಲು ಅದನ್ನು

ಕೃಷ್ಣನು ತನ್ನ ಕಾಲಿನಿಂದ ಒದೆದು ನುಚ್ಚುನೂರಾಗುವಂತೆ ಮಾಡಿದನು. ಅದ ರಿಂದ ಆ ರಕ್ಕಸಿಯೂ ಬೆಚ್ಚಿ ಮಾಯವಾಯಿತು.

ದಿನಕ್ರಮದಿಂದ ಕೃಷ್ಣನು ನಡೆಗಲಿತು ತನ್ನ ಓರಗೆಯ ಮಕ್ಕಳೊಡನೆ ಮನೆಮನೆಗೆ ನುಗ್ಗಿ ಹಾಲುಬೆಣ್ಣೆಗಳನ್ನು ಮೆದ್ದು ತನ್ನ ಜತೆಗಾರರಿಗೂ ಮೆಲ್ಲಿಸಿ ಹಾವಳಿಯನ್ನು ಮಾಡುತ್ತಿರಲು ಅದನ್ನು ಸಹಿಸಲಾರದೆ ಗೋಪಿಕಾಸ್ತ್ರೀಯರು ಹೋಗಿ ಯಶೋದೆಗೆ ದೂರುಹೇಳಿದರು. ಆಗ ಯಶೋದೆಯು ಮಗುವನ್ನು ಎತ್ತಿಕೊಂಡು ಮುದ್ದಾಡಿ ಮೊಲೆಯುಣಿಸಿ ಬೆಣ್ಣೆಯನ್ನೂ ಕೆನೆಯನ್ನೂ ಕೊಟ್ಟು ಅತ್ತಿತ್ತ ಹೋಗಬೇಡವೆಂದರೂ ಕೇಳದಿರಲು ಹಿಡಿದು ಬೀಸುವ ಕಲ್ಲಿನ ಗೂಟಕ್ಕೆ ಕಟ್ಟಿಹಾಕಿದಳು. ಕೃಷ್ಣನು ಅದನ್ನು ಕಿತ್ತು ಅಂಗಣಕ್ಕೆ ಬರುವಾಗ ಅರ್ಜುನಿ ಯೆಂಬ ಐದನೆಯ ದೇವತೆಯು ಬಂದು ಒಂದೆಡೆಯಲ್ಲಿ ಎರಡು ಮತ್ತಿಯ ಮರ ವಾಗಿ ಕೃಷ್ಣನು ಬರುವ ದಾರಿಯ ಇಕ್ಕೆಲದಲ್ಲಿ ಬೆಳೆದು ಅವನನ್ನು ಇರುಂಕಿ ಕೊಲ್ಲಲು ಪ್ರಯತ್ನಿಸಿತು. ಆಗ ಕೃಷ್ಣನು ತನ್ನ ತೋಳುಗಳಿಂದ ಆ ಮರವನ್ನು ಹಿಗ್ಗಿಸಿ ಕಿತ್ತು ಬಿಸಾಡಲು ಆ ರಕ್ಕಸಿಯು ಗೋಳಿಡುತ ಮಾಯವಾಯ್ತು. ಬಳಿಕ ಮೊದಲಿನಂತೆ ಕೃಷ್ಣನು ತನ್ನ ಜತೆಗಾರರೊಡನೆ ಅಂಗಣದಲ್ಲಿ ಆಡುತ್ತಿರಲು ತಾಳಜಂಘೆಯೆಂಬ ಆರನೆಯ ದೇವತೆಯು ತಾಳೆಯ ಮರದ ಆಕಾರವನ್ನು ಧರಿಸಿ ಕೊಂಡು ಬಂದು ಕೃಷ್ಣನ ಮೇಲೆ ಗುಂಡುಗಳನ್ನು—ಫಲಗಳನ್ನು ಸುರಿಯಲು ಕೃಷ್ಣನು ಕೋಪಗೊಂಡು ಅದನ್ನು ತನ್ನ ಎಡದ ಕಾಲಿನಿಂದ ಒದೆಯಲು ಅದು ಗೋಳಿಡುತ ಓಡಿಹೋಯ್ತು. ಬಳಿಕ ಬಾಲಕೃಷ್ಣನು ಬಾಲಲೀಲೆಯಲ್ಲಿರಲು ಒಂದುದಿನ ಕೇಸರಿಯೆಂಬ ದೇವತೆಯು ಕುದುರೆಯ ರೂಪವನ್ನು ಧರಿಸಿಕೊಂಡು ಬಂದು ಅನೇಕರಿಗೆ ಗಾಯಪಡಿಸಿ ಕೃಷ್ಣನ ಬಳಿಗೆ ಬಂದು ಕಚ್ಚುವುದಕ್ಕೆ ಬಾಯನ್ನು ತೆರೆದಾಗ ತನ್ನ ಕೈಯಿಂದ ಬಾಯೊಳಗೆ ತಿವಿದು ಎರಡು ಕೈಗ ಳಿಂದ ಬಾಯನ್ನು ಸೀಳಲು ಆ ರಕ್ಕಸಿಯು ಓಡಿಹೋಯ್ತು ಬಳಿಕ ಒಂದು ದಿನ ಯಶೋದೆಯು ಊರಲ್ಲಿ ಕೃಷ್ಣನ ಕಾಟವನ್ನು ತಡೆಯಲಾರದೆ ಗೋವುಗಳನ್ನು ಕಾಯುವುದಕ್ಕಾಗಿ ಹೋಗೆಂದು ಹೇಳಿ ಕಲಸುಗೂಳನ್ನು ಕಟ್ಟಿಕೊಟ್ಟು ಕಳುಹಿ ದಳು. ಕೃಷ್ಣನು ತನ್ನ ಓರಗೆಯ ಮಕ್ಕಳೊಡನೆ ಹೋಗಿ ಗೋವುಗಳನ್ನು ಮೇಯಿಸುತ್ತ ಕೊಳಲನ್ನೂದುತ್ತಿದ್ದನು. ದುಷ್ಟಮೃಗಗಳೂ ತಮ್ಮ ವೈರವನ್ನು ಬಿಟ್ಟು ಆ ಕೊಳಲಿನ ಧ್ವನಿಯನ್ನು ಕೇಳುತ್ತಿದ್ದುವು. ಕಾಡೆಮ್ಮೆ ಹುಲಿ ಆನೆ ಮೊದ ಲಾದ ದುಷ್ಟಮೃಗಗಳ ಲಕ್ಷ್ಯವನ್ನು ಮಾಡದೆ ಅವುಗಳಿಗೆ ಬಾಧೆಗೊಡುತ್ತಿದ್ದನು.

ಒಂದು ದಿನ ಅಲ್ಲಿಗೆ ಆ ಪ್ರೀತಿನಿ ಮೊದಲಾದ ಏಳು ದೇವತೆಗಳು ಬಂದು ತಮ್ಮ ಮಾಯೆಯಿಂದ ಮೋಡ ಸಿಡಿಲು ಗುಡುಗು ಮಿಂಚುಗಳನ್ನುಂಟುಮಾಡಿ ಏಳು ದಿನಗಳವರೆಗೆ ಹಗಲಿರುಳೆನ್ನದೆ ಜಲವೃಷ್ಟಿಯನ್ನೂ ಆಲಿಕಲ್ಲನ್ನೂ ಕಲ್ಲುಗುಂಡು ಗಳನ್ನೂ ಸುರಿಯುತ್ತಿರಲು ಕೃಷ್ಣನು ಗೋವರ್ಧನಪರ್ವತವನ್ನು ತನ್ನ ಬಾಹು ಗಳಿಂದೆತ್ತಿ ಎಡಗೈಯಲ್ಲಾಂತು ಗೋವುಗಳನ್ನೂ ಗೋಪಬಾಲಕರನ್ನೂ ರಕ್ಷಿಸಿದನು. ಅದನ್ನು ನೋಡಿ ಆ ದೇವತೆಗಳು ತಾವೇ ಬೇಸತ್ತು ಬಿಟ್ಟು ಹೋದುವು. ಆಕಾಶದಿಂದ ಪುಷ್ಪವೃಷ್ಟಿಯಾಯ್ತು ; ದೇವದುಂದುಭಿಯು ಮೊಳ ಗಿದುದು. ಆಗ ಕೇಶವನು ಪರ್ವತವನ್ನು ಇಳುಹಲು ಆ ನಾಡುಬೀಡುಗಳ ಜನ ರೆಲ್ಲ ಬಂದು " ಲೋಕಕ್ಕೆ ನೀನೇ ಪರದೈವವು " ಎಂದು ಕೊಂಡಾಡಿ ಹರಿಯನ್ನು ಪೂಜಿಸಿದರು. " ಮಹಾಬಲಿಷ್ಠನಾದ ಇವನು ಯಾರದೆಸೆಯಿಂದಲೂ ಚ್ಯುತ ನಾಗುವವನಲ್ಲ " ಎಂದು ಆಗ ಲೋಕದ ಜನರು ಅವನಿಗೆ " ಅಚ್ಯುತ " ನೆಂದು ಹೆಸರನ್ನಿಟ್ಟರು.

## ೧೬. ಕಂಸವಧ ಸಂಧಿ.

ಪುತ್ರನ ಪ್ರಖ್ಯಾತಿಯನ್ನು ಕೇಳಿ ದೇವಕಿಯು ಬಹು ಸಂತೋಷಪಟ್ಟು ಆತನನ್ನು ನೋಡಬೇಕೆಂದು ಗುಪ್ತವಾಗಿ ಪತಿಯಲ್ಲಿಯೂ ಬಲರಾಮನಲ್ಲಿಯೂ ಪ್ರಸ್ತಾವಿಸಲು ಅವರು ದೇವಕಿಯು ಗೋಮುಖಿಯೆಂಬ ನೋಂಪಿಯನ್ನು ಮಾಡ ಬೇಕೆಂದು ನೆವವನ್ನು ಮಾಡಿಕೊಂಡು ಸೈನ್ಯಸಮೇತರಾಗಿ ಹೊರಟು ಗೋಕುಲಕ್ಕೆ ಹೋಗಿ ನಂದಗೋಪನನ್ನು ಕರೆಸಿ " ನಾಳೆ ಬೆಳಿಗ್ಗೆ ನಿನ್ನ ಪತ್ನಿಯರೆಲ್ಲರು ಬಂದು ಪೂಜೆಯನ್ನು ಮಾಡಿಸಬೇಕು ' ಎಂದರು. ಆತನು ಸಂತೋಷದಿಂದ ಮನೆಗೆ ಬರಲು ಅತ್ತ ವಿಜಯಾರ್ಧಗಿರಿಯಲ್ಲಿ ಶಾಲ್ಮಲಿದತ್ತೆಯ ತಂದೆಯ ದಾಯಾದನು ಕೃಷ್ಣನಿಂದ ತನಗೆ ಆಪತ್ತುಂಟೆಂಬುದನ್ನು ಶಕುನಿಗರಿಂದ ತಿಳಿದು ಅವನನ್ನು ಕೊಲ್ಲ ಲೋಸುಗ ತನ್ನ ಅರಿಷ್ಟನೆಂಬೋರ್ವ ವೀರಖೇಚರನನ್ನು ಕರೆದು ಗೋಕುಲಕ್ಕೆ ಹೋಗಿ ಕೃಷ್ಣನನ್ನು ಕೊಂದುಬರುವಂತೆ ಹೇಳಿದನು. ಆ ಮಾತನ್ನು ಕೇಳಿ ಅರಿ ಷ್ಟನು ಭಯಂಕರವಾದ ವೃಷಭಾಕಾರವನ್ನು ಧರಿಸಿ ಗೋಪಾಲಕರುಗಳನ್ನು ಹಿಂಸಿ ಸುತ್ತ ಕೋಲಾಹಲವನ್ನು ಮಾಡುತ್ತಿರಲು ಅದನ್ನು ಕಂಡು ಕೃಷ್ಣನು ಇದಿ

ರ್ನಂದು ಎರಡು ಕೊಂಬುಗಳನ್ನು ಹಿಡಿದು ನೆಲಕ್ಕೊತ್ತಲು ಸಹಿಸಲಾರದೆ ಗೋಳಿಟ್ಟು ಆ ವೃಷಭವು ಮಾಯವಾಯ್ತು. ಅದನ್ನು ಕಂಡು ಗೋಪಾಲಕರೂ ನಂದಗೋಪನೂ ಬಹುಸಂತೋಷಪಟ್ಟರು. ಮರುದಿವಸ ದೇವಕೀವಸುದೇವರಿದ್ದ ಕೃಷ್ಣಯಕ್ಷಿಯ ದೇವಾಲಯಕ್ಕೆ ಕೃಷ್ಣನು ಗೋಪಿಗೋಪರೊಡಗೂಡಿ ಬಹು ವೈಭವದಿಂದ ಬಂದನು. ಬಳಿಕ ದೇವಕಿಯು ಕೃಷ್ಣಯಕ್ಷಿಯ ನೋಂಪಿಯನ್ನು ಮಾಡಿ ಸಂತುಷ್ಟಳಾಗಿ ನಂದಗೋಪನಿಗೆ ಉಡುಗರೆಯನ್ನೂ ಗೋಪಿಗೆ ರತ್ನಾಭರಣಗಳನ್ನೂ ಕೊಟ್ಟಳು. ಅವರ ಪಕ್ಕದಲ್ಲಿದ್ದ ಕೃಷ್ಣನನ್ನು ನೋಡಿ ವಸುದೇವನು "ಇವನು ಯಾರ ಮಗನು ?" ಎಂದು ಕೇಳಲು ಅವರು ತಮ್ಮ ಮಗನೆಂದುತ್ತರವನ್ನಿತ್ತರು. ಆಗ ಕೃಷ್ಣನನ್ನು ಸಮೀಪಕ್ಕೆ ಕರೆದು ವಸುದೇವ ದೇವಕಿ ಬಲರಾಮರು ಬಹುಸಂತೋಷಪಟ್ಟು ವೈದಡಪಿ "ನಿಮ್ಮ ಮಗನು ಬಲುಜಾಣನು" ಎಂದು ಹೇಳಿ ವಸ್ತ್ರಾಭರಣಗಳಿಂದ ಅವನನ್ನು ಶೃಂಗರಿಸಿ ದೇವಕಿಯು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅಮಿರ್ದಪ್ಪಿ ಆನಂದಾಶ್ರುಗಳನ್ನು ಸುರಿದಳು. ತರುವಾಯ ಆ ನಂದಗೋಪನೂ ಗೋಪಿಯೂ ವಸುದೇವ ದೇವಕೀ ಬಲರಾಮರುಗಳಿಗೆ ಪೂತಿನಿ ಮೊದಲಾದ ದೇವತೆಗಳು ಕೃಷ್ಣನನ್ನು ಕೊಲ್ಲಲು ಬಂದಾಗ ಅವನು ಮಾಡಿದ ಸಾಹಸಕೃತ್ಯಗಳ ಗುರುತುಗಳನ್ನು ಒಂದೊಂದಾಗಿ ತೋರಿಸಲು ಅವರು ನೋಡಿ ಸಂತೋಷಪಟ್ಟು ಆ ಗೋಪಗೋಪಿಯರನ್ನು ಬೀಳ್ಕೊಟ್ಟು ತಾವು ಹಿಂದಿರುಗಿ ಹೊರಟರು. ದಾರಿಯಲ್ಲಿ ಬರುತ್ತ ಬಲರಾಮನು ತನ್ನ ಅತುಲಭುಜಬಲದಿಂದ ಒಂದು ದೊಡ್ಡ ಶಿಲೆಯನ್ನುರುಳಿಸಿ ಕಿತ್ತು ಬಿಸಾಟನು. ಆಗ ದೇವತೆಗಳು ಆಕಾಶದಿಂದ ಪುಷ್ಪವೃಷ್ಟಿಯನ್ನು ಮಾಡಿದರು. ಅದನ್ನು ಕಂಡು ಮಾತಾಪಿತೃಗಳು ಬಹಳ ಸಂತೋಷಪಡುತ್ತ ಮಧುರೆಗೆ ಬಂದು ಸುಖವಾಗಿದ್ದರು.

ಅತ್ತ ವಿಜಯಾರ್ಧಗಿರಿಯ ರಥನೂಪುರಚಕ್ರವಾಳವೆಂಬ ನಗರದ ಸುಕೇತುವೆಂಬ ದೊರೆಗೂ ಆತನ ಸತಿ ಸ್ವಯಂಪ್ರಭೆಗೂ ಸತ್ಯಭಾಮೆಯೆಂಬ ಮಗಳು ಹುಟ್ಟಿ ಬಹುರೂಪವತಿಯಾಗಿ ಬೆಳೆದು ಯೌವನದಶೆಯನ್ನು ಹೊಂದಿದಳು. ಒಂದು ದಿನ ತಂದೆಯು ಆಕೆಯ ಲೋಕಾತಿಶಯವಾದ ಸೌಂದರ್ಯವನ್ನು ನೋಡಿ ಆಕೆಗೆ ಎಂತಹ ಗಂಡನಾಗುವನೆಂದು ಸಂಭಿನ್ನನೆಂಬ ಶಕುನಿಗನನ್ನು ಕೇಳಲು ಅವನು "ನಿನ್ನ ಶಸ್ತ್ರಶಾಲೆಯ ನಾಗಶಯ್ಯೆಯನ್ನು ಹತ್ತಿ ಈಶಾರ್ಙಧನುಸ್ಸನ್ನು ಹೆದೆಯೇರಿಸಿ ಈ ಶಂಖವನ್ನೂದುವವನೇ ಭರತಖಂಡಕ್ಕಧಿಪತಿಯಾಗುವನು. ಅವನೇ ನಿನ್ನ ಮಗಳಿಗೆ ಗಂಡನಾಗುವನು." ಎನಲು ಆ ಮಾತನ್ನು

ಕೇಳಿ ಸಂತುಷ್ಟನಾಗಿ ಆ ಖೇಚರನು ಭರತಖಂಡದಲ್ಲಿ ಕಂಸನೇ ಮಹಾವೀರನೆಂದು ಬಗೆದು ಅವನಲ್ಲಿಗೆ ಆ ಸರ್ಪಶಯ್ಯೆಯನ್ನೂ ಧನುಸ್ಸನ್ನೂ ಶಂಖವನ್ನೂ ತನ್ನ ಭೃತ್ಯರ ವಶದಲ್ಲಿ ಕೊಟ್ಟು ಕಳುಹಲು ಅವರು ಆ ದಿವ್ಯವಸ್ತುಗಳನ್ನು ಮಧುರಾ ನಗರದ ನಂದನವನದಲ್ಲಿರುವ ಜಿನಮಂದಿರದ ಮಂಟಪಕ್ಕೆ ತಂದಿರಿಸಿ ಆ ವಿಷಯ್ಯ ವನ್ನು ಕಂಸನಿಗೆ ತಿಳುಹಿದರು. ಅವನು ಓರ್ವ ಶಕುನಿಗನನ್ನು ಕರೆಯಿಸಿ ಕೇಳಲು ಅವನು ಆ ವಸ್ತುಗಳನ್ನು ವಶಪಡಿಸಿಕೊಳ್ಳುವವನೇ ಸತ್ಯಭಾಮೆಗೆ ಪತಿಯಾಗುವ ನೆಂದೂ ಅವನಿಂದಲೇ ಕಂಸನಿಗೆ ಕೇಡಾಗುವುದೆಂದೂ ಹೇಳಿದನು. ಆ ಮಾತನ್ನು ಕೇಳಿ ಕಂಸನು ಸಂದೇಹಪಟ್ಟು ಆ ವಸ್ತುಗಳನ್ನು ಸಾಧಿಸುವವರಿಗೆ ಅವರು ಕೇಳಿ ದುದನ್ನು ಕೊಡುವೆನೆಂದು ಡಂಗುರ ಹೊಯಿಸಿದನು. ಅದನ್ನು ಗೋಕುಲದಲ್ಲಿ ಕೃಷ್ಣನು ತಡೆದು ತಾನು ಆ ವಸ್ತುಗಳನ್ನು ಸಾಧಿಸುವುದಾಗಿ ಹೇಳಿದನು. ಆ ವಾರ್ತೆಯನ್ನು ಕೇಳಿ ಕಂಸನ ಆಸ್ಥಾನದಲ್ಲಿದ್ದವರು ಕೃಷ್ಣನು ಸ್ತನ್ಯಪಾನಮಾಡು ತ್ತಿದ್ದ ಕಾಲದಲ್ಲಿ ಮಾಡಿದ ಸಾಹಸಕಾರ್ಯ ಮೊದಲುಗೊಂಡು ಗೋವರ್ಧನಗಿರಿ ಯನ್ನೆತ್ತಿದಲ್ಲಿವರೆಗಿನ ಕಾರ್ಯಗಳನ್ನು ವರ್ಣಿಸಿ ಆತನಿಗೆ ಆ ಕಾರ್ಯವು ಅಸಾಧ್ಯ ವಲ್ಲವೆಂದು ಹೇಳಿದರು. ಕಂಸನು ಆ ಖೇಚರಭೃತ್ಯರನ್ನು ಕರೆದು ಮರುದಿನ ಪ್ರಾತಃಕಾಲದಲ್ಲಿ ಆ ವಸ್ತುಗಳನ್ನು ಸಿದ್ಧಪಡಿಸುವಂತೆ ಹೇಳಲು ಅದರಂತೆ ಅವರು ಸಿದ್ಧಪಡಿಸಿದರು. ಕಂಸನು ಸಾಮಂತರಾಜರುಗಳೊಡನೆ ಅಲ್ಲಿಗೆ ಹೋದನು. ಆ ದೈವಿಕವಾದ ವಾಸುಕಿಯು ಭಯಂಕರವಾಗಿ ಉಸುರಾಡಿ ವಿಷವನ್ನು ಕಾರುತ್ತಿ ರಲು ಅದನ್ನು ಕಂಡು ಸಭಿಕರೆಲ್ಲ ಹೆದರಿದರು. ಆಗ ಕೃಷ್ಣನು ಹೋಗಿ ಸರ್ಪಶ ಯ್ಯೆಯನ್ನು ಮೆಟ್ಟಿ ಅದನ್ನು ಹತ್ತಿ ಧನುಸ್ಸನ್ನು ಹೆದೆಯೇರಿಸಿ ಶಂಖವನ್ನೂದಿ ದನು. ಆ ವಸ್ತುಗಳನ್ನು ರಕ್ಷಿಸುತ್ತಿದ್ದ ದೇವತೆಗಳು ಸಂತೋಷದಿಂದ ಕೃಷ್ಣ ನನ್ನು ಪೂಜಿಸಿ ಹೊಗಳಿದುವು. ಬಳಿಕ ಕೃಷ್ಣನು ಗೋಕುಲಕ್ಕೆ ಹೋದನು. ಅವನು ಮಾಡಿದ ಸಾಹಸಕಾರ್ಯವನ್ನು ನೋಡಿ ಕಂಸನು ಕರುಬುತ್ತ ಅವನನ್ನು ಕೊಲಿಸಬೇಕೆಂದು ಬಗೆದನು. ಆ ವಿಷಯವನ್ನು ಬಲಭದ್ರನು ತಿಳಿದು ಗೋಕು ಲಕ್ಕೆ ಹೋಗಿ ಸದಾ ತಮ್ಮನೊಡನಿದ್ದನು.

ಇತ್ತ ಕಂಸನು ಯಮುನಾನದಿಯ ಮಡುವಿನ ಸಹಸ್ರದಳಕಮಲವನ್ನು ತಂದುಕೊಡಬೇಕೆಂದು ನಂದಗೋಪನಿಗೆ ಹೇಳಿಕಳುಹಲು ಅವನು ಬಹು ಚಿಂತಾ ಕ್ರಾಂತನಾದನು. ಕೃಷ್ಣನು ನಂದಗೋಪನನ್ನು ನೋಡಿ "ಇದೇಕೆ ಚಿಂತೆ?" ಎಂದು ಕೇಳಲು ಅವನು "ಎಲೈ ಮಗನೆ! ಏನು ಹೇಳಲಿ? ಯಮುನ ಮನೆಯಂ

ತಿರುವ ಜಗುನೆಯ ಮಡುವಿನಲ್ಲೊಂದು ತಾವರೆಯು ಹುಟ್ಟಿದೆ. ಅದನ್ನು ಭಯಂಕರವಾದ ಸರ್ಪವು ಕಾಯುತ್ತಿದೆ. ಅದಕ್ಕೆ ತುಂಬಿಗಳು ಮೊಗವಿಕ್ಕವು. ಅದನ್ನು ತಂದುಕೊಡಬೇಕೆಂದು ಕಂಸನು ನನಗೆ ಅಜ್ಞೆಮಾಡಿದ್ದಾನೆ. ಅದರಿಂದ ನನಗೆ ಬಹು ಚಿಂತೆಯಾಗಿದೆ '' ಎಂದನು. ಆ ಮಾತನ್ನು ಕೇಳಿ ಹರಿಯು '' ಎಲೈ ತಂದೆಯೆ ! ಒಳ್ಳೆಯ ಕಾವಲಿರುವ ತಾವರೆಯನ್ನು ತರಲು ಇದೇಕೆ ಚಿಂತೆ ? '' ಎಂದು ಸಂತೈಸಿ ತಾನು ಆ ಮಡುವಿಗೆ ಹೋಗಿ ತಾವರೆಯನ್ನು ಕೀಳಲು ಆ ಕಾಳಿಂಗ ಸರ್ಪವು ರೇಗಿ ವಿಷವನ್ನು ಗುಳುತ್ತ ಕೃಷ್ಣನ ಮೇಲೆ ಹಾಯ್ದು ಬಂದಿತು. ಅದನ್ನು ಕಂಡು ಕೇಶವನು ಎಡಗೈಯಿಂದ ಅದರ ಹೆಡೆಯನ್ನು ಹಿಡಿಯಲು ಅದು ಕೈಯನ್ನು ಸುತ್ತಿಕೊಂಡಿತು. ಅದನ್ನು ಬಿಡಿಸಿಕೊಂಡು ಒಂದು ಕೈಯಲ್ಲಿ ಆ ಹಾವನ್ನೂ ಮತ್ತೊಂದು ಕೈಯಲ್ಲಿ ತಾವರೆಯನ್ನೂ ಹಿಡಿದುಕೊಂಡು ಬಂದು ನಂದಗೋಪನಿಗೊಪ್ಪಿಸಿದನು. ಅವನು ಅವುಗಳನ್ನು ತೆಗೆದುಕೊಂಡು ಹೋಗಿ ಕಂಸನಿಗೊಪ್ಪಿಸಲು ಅವನು ಮೆಚ್ಚಿದಂತೆ ನಟಿಸಿ ಉಡಿಗೆ ತೊಡಿಗೆಗಳನ್ನು ಬಹುಮಾನವಾಗಿ ಕೊಟ್ಟು ಕಳುಹಿ ಮನಸ್ಸಿನಲ್ಲಿ '' ಈ ವೈರಿಯು ಹಲವು ಕೃತಕಗಳಿಂದ ಸಾಯಲಿಲ್ಲ. ಯುದ್ಧದಲ್ಲಿ ಕೊಲ್ಲೋಣವೆಂದರೆ ಬಲಿಷ್ಠರಾದ ವಸುದೇವ ಬಲಭದ್ರರು ಬಂದು ಇವನಿಗೆ ಸಹಾಯಕರಾಗುವರು. ಆದುದರಿಂದ ಈ ಶತ್ರುವನ್ನು ಜಟ್ಟಿಗಳಿಂದ ಕೊಲ್ಲಿಸಿ ನಿಶ್ಚಿಂತನಾಗಿರುವೆನು '' ಎಂದು ಬಗೆದು ಮಹಾಭುಜಬಲಶಾಲಿಗಳಾದ ಚಾಣೂರ ಕೇಸರಿ ಮುಷ್ಟಿಗ ವಜ್ರಜಂಘ ಮೊದಲಾದ ಜಗಜಟ್ಟಿಗಳನ್ನು ಕರೆದು '' ನಿಮ್ಮ ವಿದ್ಯೆಯಿಂದ ನಿಮಗೆ ಗೋಕುಲದಲ್ಲಿರುವ ನಂದನ ಮಗನನ್ನು ನೆಲಕ್ಕಿಕ್ಕುವ ಸಾಮರ್ಥ್ಯವುಂಟೇ ? '' ಎಂದು ಕೇಳಲು ಅವರು ತಮಗೆ ದಿಗ್ಗಜಗಳು ಕಾಳಗಕ್ಕೆ ಸಮಾನಗಳಲ್ಲದೆ ಗೋಪನ ಮಗನು ಸಮಾನನಲ್ಲವೆಂದೂ ಆದಿಶೇಷನ ಹೆಡೆಯ ಮಣಿಯನ್ನು ತರುವುದಕ್ಕೆ ಹೇಳದೆ ದನಕಾಯುವವನನ್ನು ಇದಿರುಹಾಕುವುದು ಉಚಿತವಲ್ಲವೆಂದೂ ಹೇಳಿದರು. ಆ ಮಾತನ್ನು ಕೇಳಿ ಕಂಸನು ಕೃಷ್ಣನನ್ನು ಕೊಂದರೆ ಆ ಜಟ್ಟಿಗಳು ಬೇಡಿದುದನ್ನು ಕೊಡುವುದಾಗಿ ಹೇಳಿ ಮರುದಿನ ರಂಗಸ್ಥಳವನ್ನು ಮಾಡಿಸಿದನು. ಆ ವಿಷಯವನ್ನು ವಸುದೇವ ಬಲರಾಮರು ತಿಳಿದು ನಂದಗೋಪನನ್ನೂ ಕೃಷ್ಣನನ್ನೂ ಗುಟ್ಟಾಗಿ ಕರೆಯಿಸಿ ಅವರುಗಳಿಗೆ ಕೃಷ್ಣನ ಪೂರ್ವೋತ್ತರವನ್ನೂ ಅತಿಮುಕ್ತಮುನಿವರ್ಯರು ಹೇಳಿದ ವಚನಗಳನ್ನೂ ಹರಿಯಿಂದ ಕಂಸ ಜರಾಸಂಧರಿಗೆ ಮರಣವಾಗುವುದೆಂಬುದನ್ನೂ ಹೇಳಿ ವಸುದೇವನು ಬಲರಾಮನೊಡನೆ ಅವರನ್ನು ಕಳುಹಿದನು

ಇತ್ತ ಕಂಸನು ಮಲ್ಲರಂಗಸ್ಥಳಕ್ಕೆ ಬಂದು ಎತ್ತರವಾದ ಜಗಲಿಯನ್ನು ಮಾಡಿಸಿ ಅದರ ಮೇಲೆ ಕುಳಿತು ಸುತ್ತಲು ಸೈನಿಕರನ್ನಿರಿಸಿದನು. ವಸುದೇವನೂ ಯುದ್ಧಸನ್ನದ್ಧನಾಗಿ ತನ್ನ ಸೈನ್ಯದೊಡನೆ ಬಂದು ಮತ್ತೊಂದೆಡೆಯಲ್ಲಿ ಜಗಲಿಯ ಮೇಲೆ ಕುಳಿತನು. ಕಂಸನು ನಂದಗೋಪನ ಬಳಿಗೆ ಭೃತ್ಯರನ್ನು ಕಳುಹಿ "ಈ ದಿವಸ ನಿನ್ನ ಮಗನನ್ನು ಜಟ್ಟಿಗಳೊಡನೆ ಹೋರಾಡಿಸಬೇಕು, ಶೀಘ್ರವಾಗಿ ಕಳುಹಿಸಿಕೊಡು" ಎಂದು ಹೇಳಿಕಳುಹಿದನು. ಅದನ್ನು ಭೃತ್ಯರು ಹೋಗಿ ಹೇಳಲು ಯಶೋದೆಯು "ನನ್ನ ಮಗನು ಯಮನಿಂದ ಸಾಯನು, ಬೆಂಕಿಯಿಂದ ಬೇಯನು, ಇವನನ್ನು ನೋಯಿಸುವವರುಂಟೆ?" ಎಂದು ಹೇಳಿ ಮಗನನ್ನು ಶೃಂಗರಿಸಿ "ಈ ದಿನ ನಿನ್ನ ಶತ್ರುಗಳನ್ನೆಲ್ಲ ಸಂಹರಿಸು" ಎಂದು ಹರಸಿ ಕಳುಹಲು ಬಲಕೇಶವರು ಕಂಸನನ್ನು ಕೊಲ್ಲುವೆವೆಂದು ನಂದ ಮತ್ತು ಹಲವು ಗೋಪಬಾಲಕರೊಡನೆ ಹೊರಟು ಕೊಂಬು ತಮ್ಮಟೆ ಮೊದಲಾದ ವಾದ್ಯಗಳನ್ನು ಊದಿಸಿಕೊಂಡು ಬಂದರು. ಆಗ ಉನ್ಮತ್ತನಾದ ಕಂಸನು ತನಗೆ ವಿಶ್ವಾಸಪಾತ್ರನಾದ ಕೈಟಭನೆಂಬ ಅಸುರನನ್ನು ತನ್ನೊತ್ತಿಗೆ ಕರೆದು "ಗೋಪನ ಮಗನು ಜಟ್ಟಿಕಾಳಗಕ್ಕೆ ಬರುತ್ತಾನೆ. ನೀನು ನನ್ನವನಾದರೆ ಅವನನ್ನು ಕೊಲ್ಲಬೇಕು" ಎನಲು ಅವನು ತನ್ನ ಪೌರುಷವನ್ನು ಕೊಚ್ಚಿಕೊಂಡು ಹೊರಟು ಕೃಷ್ಣನು ಬರುವ ದಾರಿಯಲ್ಲಿ ಹಲವು ಬಣ್ಣದ ಬಟ್ಟೆಗಳನ್ನು ಹರಡಿ ತಾನು ಬಲಿಷ್ಠನಾದ ಅಗಸನ ರೂಪವನ್ನು ಧರಿಸಿಕೊಂಡು ಯಮುನಾನದಿಯಲ್ಲಿ ಬಟ್ಟೆಗಳನ್ನು ಒಗೆಯುತ್ತಿದ್ದನು. ಕೃಷ್ಣನು ತನ್ನ ಇಕ್ಕೆಲದಲ್ಲಿಯೂ ಬರುತ್ತಿರುವ ಗೋವಳರ ನಡುವಿನಲ್ಲಿ ಬರುತ್ತ "ಎಲೆ ಅಗಸನೆ! ದಾರಿಯಲ್ಲಿ ಹರಡಿರುವ ಬಟ್ಟೆಗಳನ್ನು ತೆಗೆ" ಎನಲು ಅವನು "ಎತ್ತು ಕತ್ತೆ ಕಾಗೆಗಳನ್ನು ಕೊಂದ ಗರ್ವದಿಂದ ಮಾತನಾಡಿ ಕೆಡಬೇಡ, ತೊಲಗು. ಕಂಸನಿಗಾಗಿ ಒಗೆಯುವ ಬಟ್ಟೆಗಳನ್ನು ಯಾರಾದರು ನಿನ್ನವರು ತುಳಿದರೆ ನಿನಗೆ ತಕ್ಕುದನ್ನು ಮಾಡುವೆನು. ನೋಡಿಸಡೆ" ಎಂದನು. ಆ ಮಾತನ್ನು ಕೇಳಿ ಮುಕುಂದನು "ಮುಂದೆ ಬರುವುದನ್ನು ನೋಡಿಕೊಳ್ಳೋಣ. ಬರುವುದು ಬರಲಿ" ಎಂದು ತನ್ನ ಪರಿವಾರಸಮೇತನಾಗಿ ಆ ಬಟ್ಟೆಗಳನ್ನು ಮೆಟ್ಟಿದನು. ಅದನ್ನು ನೋಡಿ ಆ ಅಗಸನು "ಎಲವೋ ದನಕಾಯುವವನೆ! ಎದೆಕೆಚ್ಚಿನಿಂದ ದೊರೆಯ ಬಟ್ಟೆಗಳನ್ನು ಗೋವಳರೊಡನೆ ನೀನು ಮೆಟ್ಟಬಹುದೇ?" ಎಂದು ಕೋಪದಿಂದ ಕೃಷ್ಣನ ಬಳಿಗೆ ಬಂದು "ಕೆನ್ನೆಗೆ ಹೊಡೆದು ಕೆಡಹಿ ಕೊಲ್ಲುವೆನು" ಎಂದು ತನ್ನ ಉದ್ದವಾದ ಕೈಯನ್ನು ಎತ್ತಿಕೊಂಡು ಹತ್ತಿರಕ್ಕೆ ಬರುವವರೆಗೆ ಸುಮ್ಮನಿದ್ದು ನಸುನಕ್ಕು

ಬಿದಿರು ಕಳಿಲೆಯನ್ನು ಮುರಿಯುವಂತೆ ಆ ಮಾಯದ ಮಡಿವಳನನ್ನು ಮುರಿದು ಆಕಾಶಕ್ಕೆಸೆದನು. ಅದನ್ನು ಕಂಡು ಗೋವಳರೆಲ್ಲ ಬಹುಸಂತೋಷಪಟ್ಟು ಕೃಷ್ಣನನ್ನು ಹೊಗಳಿ ಆ ಬಟ್ಟೆಗಳನ್ನು ಸೂರೆಮಾಡಿ ತಮ್ಮ ಕೈಯ ಕೋಲುಗಳ ತುದಿಗೆ ಕಟ್ಟಿ ಕುಣಿಕುಣಿದು ಗೋವಿಂದನೊಡನೆ ಹೋದರು. ಬಲಕೇಶವರು ಪಟ್ಟಣಕ್ಕೆ ಬರುವ ದಾರಿಯಲ್ಲಿ ಕಂಸನು ಅಜಿತಂಜಯವೆಂಬ ತನ್ನ ಪಟ್ಟದಾನೆಯನ್ನು ಹೊರಡಿಸಲು ಅದು ಪಟ್ಟಣವನ್ನೆಲ್ಲ ಗಜಿಬಿಜಿಮಾಡಿ ಕೃಷ್ಣನಿಗೆದುರಾಗಿ ಬರುತ್ತಿರಲು ಅವನು ಸಿಹ್ಮನಾದವನ್ನು ಮಾಡಿದನು. ಆ ಆನೆಯು ಸೊಂಡಲಿನಿಂದ ಹೊಡೆಯಲು ಕೃಷ್ಣನು ರೇಗಿ ಅದನ್ನು ತನ್ನ ಕಾಲಿನಿಂದ ಒದೆದು ಅದರ ದಂತವನ್ನು ಕಿತ್ತು ಗದೆಯನ್ನಾಗಿ ಮಾಡಿ ಹೆಗಲಿನಲ್ಲಿಟ್ಟುಕೊಂಡು ಬರುತ್ತಿರುವಾಗ ಪಟ್ಟಣಿಗರು ಅವನ ಪರಾಕ್ರಮವನ್ನು ಹೊಗಳುತ್ತಲೂ ಕಂಸನ ಮೂಢತನವನ್ನು ನಿಂದಿಸುತ್ತಲೂ ಇದ್ದರು. ಕಂಸನು ತನ್ನ ಪಟ್ಟದಾನೆಯು ಸತ್ತಿತೆಂಬ ವಾರ್ತೆಯನ್ನು ಕೇಳಿ ಬಹು ಕೋಪಗೊಂಡನು. ಕೃಷ್ಣನು ಬಂದು ವಸುದೇವನ ಪಕ್ಕದಲ್ಲಿ ನಿಂತನು. ಜಟ್ಟಿಗಳೆಲ್ಲ ಸಿದ್ಧರಾಗಿದ್ದರು. ಆಗ ಅಸಮಸಾಹಸಿಯಾದ ಚಾಣೂರಮಲ್ಲನು ಅಖಾಡಕ್ಕಿಳಿದು ಸಭಿಕರೆಲ್ಲ ನೋಡುವಂತೆ "ಇತ್ತ ನೋಡು ಕೃಷ್ಣ" ಎಂದು ತನ್ನ ಭುಜಗಳನ್ನು ತಟ್ಟುತ್ತ ಹತ್ತಿರಕ್ಕೆ ಬಂದು ನಿಲ್ಲಲು ಕೃಷ್ಣನು ತನ್ನ ಎಡಗೈಯನ್ನು ನೀಡಿದನು. ಆ ಮಲ್ಲನು ತನ್ನ ಕೈಗಳಿಂದ ಅದನ್ನು ಬಗ್ಗಿಸಲು ಯತ್ನಿಸಿದನು. ಅದು ಕಗ್ಗಲಿಯ ಒನಕೆಯಂತೆ ಬಗ್ಗದಿರಲು ತನ್ನ ಭುಜಗಳಿಂದ ಹಿಡಿದು ನೋಡಿದನು. ಅದು ಹುಲ್ಲಿನ ಬೊಂಬೆಯು ಉಕ್ಕಿನ ಬೊಂಬೆಯನ್ನು ಹಿಡಿದಂತಾಯ್ತು. ಬಳಿಕ ಕೃಷ್ಣನ ಕಾಲುಗಳನ್ನು ಹಿಡಿದು ನೋಡಲು ಆನೆಯ ಕಾಲನ್ನು ಕಾಡುಹಂದಿ ಹಿಡಿದಂತಾಯ್ತು. ಹೀಗೆ ನಾನಾವಿಧಗಳಿಂದ ನೋಡಿ ಕೃಷ್ಣನು ತನಗೆ ಸಾಧ್ಯನಲ್ಲವೆಂದು ಚಾಣೂರಮಲ್ಲನು ತಿಳಿಯುವಷ್ಟರಲ್ಲಿ ಕೃಷ್ಣನು ನಸುನಗುತ್ತ ತನ್ನೊಡನೆ ಬಗೆಬಗೆಯಾಗಿ ಹೋರಾಡಲು ಅವನಿಗೆ ಎಡೆಗೊಟ್ಟು ಆಟಕ್ಕಾಗಿ ತಾನು ಒಮ್ಮೆ ಸೋಲುವನ್ನೂ ಒಮ್ಮೆ ಗೆಲುವನ್ನೂ ತೋರಿಸುತ್ತಿದ್ದು ಕೃಷ್ಣನು ತನಗೆ ಸಮಸತ್ತ್ವನೆಂದು ತಿಳಿದು ಅವನು ಹೋರಲು ಬಂದಾಗ ಕೃಷ್ಣನು ಅವನನ್ನು ಎತ್ತಿ ಹಿಡಿದು ಕತ್ತನ್ನು ಮುರಿದುಹಾಕಲು ಚಾಣೂರಮಲ್ಲನು ನೆಲಕ್ಕುರುಳಿದನು. ಬಳಿಕ ಒಬ್ಬೊಬ್ಬನಾಗಿ ಕೇಸರಿಯೆಂಬ ಮಲ್ಲನೂ ಮುಷ್ಟಿಗನೂ ವಜ್ರಜಂಘನೂ ಬಂದು ಹೋರಾಡಲು ಅವರನ್ನೂ ಕೃಷ್ಣನು ಯಮಪುರಕ್ಕೆ ಕಳುಹಿದನು. ಆಗ ಕಂಸನ ಸುತ್ತಲಿದ್ದ ಸಾವಿರಮಂದಿ ಜಟ್ಟಿಗಳು ಒಟ್ಟಾಗಿ ಬಂದು ಕೃಷ್ಣನನ್ನು ಮುತ್ತಿದರು. ಅವರನ್ನೆಲ್ಲ,

ಕಂಸನ ಎದೆಯು ಹವ್ವನೆ ಹಾರುವಂತೆ ಪರಿಪರಿವಿಧದಿಂದ ಕೊಂದನು. ಅದನ್ನು ಕಂಡು ಕಂಸನು, ಭಗ್ಗನೆ ಉರಿದು ಕೆಡುವ ದೀಪದಂತೆ, ಕೋಪಗೊಂಡು ತನ್ನ ಸೈನ್ಯಕ್ಕೆ ಕೈವೀಸಲು ಅದು ಮುತ್ತಿತು. ಅದಕ್ಕೆ ವಸುದೇವ ಬಲರಾಮರು ಇದಿರಾಗಲು ಕಂಡು ಕಂಸನು ಕೋಪದಿಂದೆದ್ದನು. ಆಗ ಕೇಶವನು ಓರ್ವ ಜಟ್ಟಿಯ ಕಾಲ್ವಿಡಿದು ಬೀಸಿ ಎಸೆಯಲು ಅವನು ನೆಲಕ್ಕುರುಳಿದನು. ಬಳಿಕ ಕಂಸನನ್ನು ಹಿಡಿದು, ಅಗಸನು ಬಟ್ಟೆಯನ್ನು ಒಗೆವಂತೆ, ನೆಲಕ್ಕಪ್ಪಳಿಸಿ ಕೊಂದನು.

---

## ೧೭. ದ್ವಾರಾವತಿಯ ನಿರ್ಮಾಣ ಸಂಧಿ.

---

ವಸುದೇವ ಬಲಭದ್ರರು ತಮಗಿದಿರಾದ ಸೈನ್ಯವನ್ನು ಸಂಹರಿಸಿ ಬಂದು ಕೃಷ್ಣನೊಡಗೂಡಿ ಅಭಯಘೋಷಣವನ್ನು ಮಾಡಿಸಿ ಅಲ್ಲಿದ್ದ ಸಭಿಕರನ್ನೆಲ್ಲ ಸಂತೈಸಿ ಅಸಿಪಂಜರದಲ್ಲಿದ್ದ ಉಗ್ರಸೇನನನ್ನು ಕರೆಯಿಸಿ ಕಂಸನ ಶವಸಂಸ್ಕಾರ ಮಾಡಿ ಅವನ ಹೆಂಡತಿ ಜೀವಂಜಸೆಯು ಎಲ್ಲಿಗೂ ಹೋಗದಂತೆ ಕಾವಲಿರಿಸಿ ಅಲ್ಲಿರುವಾಗ ಕಂಸನ ಸ್ನೇಹಿತರಾದ ಪಲ್ಲವದೇಶದ ದೊರೆಗಳೂ ಅಸುರರೂ ಮುರ ಮಧು ಕೈಟಭ ಅರಿಷ್ಟ ನರಕಾಸುರ ಮೊದಲಾದವರೂ ತಮ್ಮ ಸೈನ್ಯಸಮೇತರಾಗಿ ಅಲ್ಲಿಗೆ ಬಂದರು. ಆ ವಿಷಯುವನ್ನು ಕೇಶವನು ತಿಳಿದು ಅವರ ಸೈನ್ಯವನ್ನೂ ಅವರುಗಳನ್ನೂ ಕೊಂದು ಅವರ ಗದೆ ರಥ ಖಡ್ಗ ಮೊದಲಾದ ವಸ್ತುಗಳನ್ನು ತೆಗೆದುಕೊಂಡು ವಸುದೇವ ಬಲರಾಮರೊಡನೆ ಮಧುರೆಗೆ ಹೋದನು. ಮಧುಕೈಟಭನ ಮಗ ಹಿರಣ್ಯಾಕ್ಷನು ತನ್ನ ತಂಗಿಯಾದ ರೇವತಿಯನ್ನು ಬಲರಾಮನಿಗೆ ಕೊಟ್ಟು ಮದುವೆಮಾಡಿ ನಿಶ್ಚಿಂತನಾಗಿದ್ದನು. ತರುವಾಯ ಶೌರೀಪುರಕ್ಕೆ ಹೋಗಬೇಕೆಂದು ಯೋಚಿಸಿ ಉಗ್ರಸೇನನನ್ನು ಕರೆಸಿ ವಸುದೇವನು ತನ್ನ ಮಕ್ಕಳೊಡನೆ ಹೊರಟು ಶೌರೀಪುರವನ್ನು ಪ್ರವೇಶಿಸಿ ಸಮುದ್ರವಿಜಯನ ಕಾಲುಗಳಿಗೆ ನಮಸ್ಕರಿಸಲು ಅವನು ಅನುಜ ತನುಜರನ್ನು ಆಲಿಂಗಿಸಿ ಹರಸಿ ಸಂತುಷ್ಟನಾದನು. ಮರುದಿನ ಉಗ್ರಸೇನನಿಗೆ ಉಡುಗರೆಯನ್ನು ಕೊಟ್ಟು ಮಧುರೆಗೆ ಕಳುಹಿದನು. ಅಲ್ಲಿ ಜೀವಂಜಸೆಯು ತನ್ನ ಗಂಡನನ್ನು ಕೊಂದ ಶತ್ರುವನ್ನು ಕೊಲ್ಲದೆ ತುರುಬನ್ನು ಕಟ್ಟೆನೆಂದು ಭಾಷೆಯನ್ನು ತೊಟ್ಟು ಕೂದಲುಗಳನ್ನು ಬಿಟ್ಟು ಉಗ್ರಸೇನನಿಗೆ ತಿಳಿಯದಂತೆ ಆ ಊರಿಂದ ಹೊರಟು ಬಹುದುಃಖದಿಂದ ರಾಜಗೃಹಕ್ಕೆ ಹೋಗಿ ತನ್ನ ತಂದೆಯಾದ ಜರಾಸಂಧ ಚಕ್ರೇಶ್ವರನ ಮುಂದೆ ಬಿದ್ದು ಉರುಳಾಡಿದಳು. ಜರಾಸಂಧನು ವಿಸ್ಮಿತನಾಗಿ

ಮಗಳ ದುಃಖವನ್ನು ಹೋಗಲಾಡಿಸಿ ಬಳಿಕ ದುಃಖದ ಕಾರಣವನ್ನು ಕೇಳಲು ಆಕೆಯು ತನ್ನ ಪತಿಯನ್ನು ಆ ಗೋಪಾಲನು ಕೊಂದನೆಂದು ಹೇಳಿದಳು. ಅದನ್ನು ಕೇಳಿ ಜರಾಸಂಧನು "ಎಲೆ ಮಗಳೆ! ನಿನ್ನ ಗಂಡನನ್ನು ಕೊಂದ ದುಷ್ಟನ ತಲೆಯನ್ನು ಮೆಟ್ಟದಿದ್ದರೆ ನನಗೇಕೆ ಈ ಪೃಥ್ವಿಯ ಆಧಿಪತ್ಯ?" ಎಂದು ರೇಗಿ ಕಾಲವಯನೆಂಬ ತನ್ನ ಮಗನನ್ನು ಕರೆದು "ನೀನು ಈ ದಿನವೇ ಹೋಗಿ ಕೃಷ್ಣನ ತಲೆಯನ್ನು ತಂದು ನಿನ್ನ ಈ ತಂಗಿಯಾದ ಜೀವಂಜಸೆಯ ಪ್ರತಿಜ್ಞೆಯನ್ನು ಪೂರ್ತಿ ಮಾಡು" ಎನಲು ಅವನು ಬಹುಸೈನ್ಯವನ್ನು ಸೇರಿಸಿಕೊಂಡು ಶೌರೀಪುರಕ್ಕೆ ಹೋದನು. ಆ ವಿಷಯವನ್ನು ತಿಳಿದು ಬಲಕೇಶವರು ತಮ್ಮ ಸೈನ್ಯದೊಡನೆ ಇದಿರಾಗಿ ಕಾಲವಯನ ಫೌಜನ್ನು ಸಂಹರಿಸುತ್ತಿರಲು ಅವನು ಅವರಿಗಿದಿರಾಗಲಾರದೆ ಊರಿಗೆ ಹಿಂತಿರುಗಿದನು. ಬಳಿಕ ಜರಾಸಂಧನು ಅಪರಾಜಿತನೆಂಬ ಅಧೀನರಾಜನನ್ನು ಅಪರಿಮಿತಸೈನ್ಯದೊಡನೆ ಕಳುಹಲು ಅವನೂ ಬಲಕೇಶವರಲ್ಲಿ ಹೋರಲಾರದೆ ಹಿಮ್ಮೆಟ್ಟಿದನು. ಒಂದುದಿನ ಸಮುದ್ರವಿಜಯನು ತನ್ನ ಮಂತ್ರಿಗಳನ್ನು ಕರೆಸಿ ಅವರೊಡನೆ ಆಲೋಚಿಸಲಾಗಿ ಅವರು "ಎಲೈ ರಾಜನೆ! ನಿನ್ನ ಮಕ್ಕಳು ಈ ಕಾಲದ ಬಲದೇವ ವಾಸುದೇವರ್ಕಳು. ಇವರು ಪ್ರತಿವಾಸುದೇವನಾದ ಮಗಧರಾಜನನ್ನು ಯುದ್ಧದಲ್ಲಿ ಕೊಲ್ಲುವರು; ಇದು ನಿಜ. ಆದರೆ ಇವರು ಇನ್ನೂ ಚಿಕ್ಕವರಾಗಿರುವುದರಿಂದ ಈ ಸ್ಥಳದಿಂದ ಹೊರಟು ಬೇರೊಂದೆಡೆಗೆ ಹೋಗಿ ಕಾಲವಂಚನೆಯನ್ನು ಮಾಡಬೇಕು" ಎನಲು ಅದಕ್ಕೆ ಸಮುದ್ರವಿಜಯನು ಒಡಂಬಟ್ಟು ಎಲ್ಲರನ್ನೂ ಪಟ್ಟಣದಿಂದ ಹೊರಡಿಸಿ ಬರಿದುಮಾಡಿ ತಾನು ಬಲಕೇಶವಾದಿಗಳೊಡನೆ ದಕ್ಷಿಣಾಭಿಮುಖನಾಗಿ ಹೊರಟನು.

ಇತ್ತ ಜರಾಸಂಧನು ಅಪರಾಜಿತನ ಅಪಜಯವನ್ನು ಕೇಳಿ ಕುಪಿತನಾಗಿ ಪುನಃ ಕಾಲವಯನನ್ನು ಬಹುಸೈನ್ಯದೊಡನೆ ಕಳುಹಲು ಅವನು ಬಲಕೇಶವರು ಹೋದ ದಾರಿಯನ್ನು ಹಿಡಿದು ಹೋಗಿ ಅವರನ್ನು ತಗುಲಿದನು. ಅವರು ಅವನ ಸೈನ್ಯದೊಡನೆ ಕಾದಿ ಸೋಲಿಸಿ ಬಂದು ತಮ್ಮ ಪಾಳಯವನ್ನು ನಾಲ್ವತ್ತೆಂಟುಗಾವುದ ಪರ್ಯಂತರ ಮುಂದೆ ತೆಗೆದುಕೊಂಡು ಹೋಗಿ ಅಲ್ಲಿರಿಸಿ ಪುನಃ ಹಿಂದಿರುಗಿಬಂದು ಒಂದು ದಿನ ಕಾಲವಯನ ಸೈನ್ಯದೊಡನೆ ಬಹುಪರಾಕ್ರಮದಿಂದ ಕಾದಿ ಅದನ್ನು ಸಂಹರಿಸಿದರು. ಆ ರಾತ್ರಿ ಅವರ ಪುಣ್ಯಾದೇವತೆಗಳು ಅವರಿಗೆ ಬರುವ ಅಪಾಯವನ್ನು ತಪ್ಪಿಸುವುದಕ್ಕಾಗಿ ಅವರು ಬೀಡುಬಿಟ್ಟುಹೋಗಿದ್ದ ಸ್ಥಳದಲ್ಲಿ ಅನೇಕ ಅಗ್ನಿಕುಂಡಗಳನ್ನು ಮಾಡಿ ಆ ಕುಂಡಗಳ ಬಳಿಯಲ್ಲಿ ದಾದಿಯರಾಗಿ ಓಡಾಡುತ್ತಿರಲು

ಅಲ್ಲಿಗೆ ಪುನಃ ಕಾಲವಯುನು ದಂಡೆತ್ತಿಬಂದು ಆ ಮುದುಕಿಯರನ್ನು ಕಂಡು "ಏತಕ್ಕೆ ದುಃಖಿಸುತ್ತಿರುವಿರಿ ?" ಎಂದು ಕೇಳಿದನು. ಅದಕ್ಕವರು ಭರತತ್ರಿಖಂಡಾಧಿಪತಿಯೊಡನೆ ನಮಗೆ ವೈರವು ಸಂಭವಿಸಿತು. ಇನ್ನು ನಮಗೆ ಉಳಿವಿಲ್ಲವೆಂದು ಹರಿವಂಶದ ರಾಜರುಗಳು ಅಗ್ನಿಕುಂಡಗಳನ್ನು ಮಾಡಿಸಿ ಆ ಉರಿಯಲ್ಲಿ ತಂಡತಂಡವಾಗಿ ಬಿದ್ದು ಸತ್ತರು. ಅವರನ್ನು ಬಾಲ್ಯದಲ್ಲಿ ಎತ್ತಿಕೊಂಡು ಆಡಿಸಿದ ದಾದಿಯರು ನಾವು. ಅವರ ಮೇಲಿನ ಪ್ರೀತಿಯಿಂದ ಈ ಕುಂಡಗಳ ಬಳಿಯಲ್ಲಿ ಶೋಕಿಸುತ್ತಿರುವೆವು" ಎನಲು ಆ ಮಾತನ್ನು ಕೇಳಿ ಕಾಲವಯುನು ಅವರ ದೊಡ್ಡ ಸೈನ್ಯವು ಎತ್ತಪೋದುದೆಂದು ಕೇಳಲು ಆ ದೇವತೆಗಳು "ಈ ಪರ್ವತದ ಕಾಡಿನಲ್ಲಿ ಕಂಡಕಂಡ ಕಡೆಗೆ ಚದರಿಹೋಯಿತು" ಎಂದುವು. ಆ ಮಾತನ್ನು ಕೇಳಿ ಬಹು ವಿಸ್ಮಿತನಾಗಿ ತಲೆದೂಗಿ ಅಲ್ಲಿಂದ ತನ್ನ ಅಪಾರವಾದ ಸೇನೆಯೊಡನೆ ಹಿಂದಿರುಗಿ ಅತಿ ಸಂತೋಷದಿಂದ ರಾಜಗೃಹಕ್ಕೆ ಹೋಗಿ ತಂದೆಗೆ ನಮಸ್ಕಾರಮಾಡಿ ಆ ಸಮಾಚಾರವನ್ನು ಹೇಳಲು ಅವನು ಬಹು ಸಂತೋಷಪಟ್ಟನು.

ಇತ್ತ ಬಲಕೇಶವಾದಿಗಳು ತಮ್ಮ ಬೀಡನ್ನೆತ್ತಿಕೊಂಡು ಊರ್ಜಯಂತಗಿರಿಯ ಚೆಲ್ವಿಕೆಯನ್ನು ನೋಡುತ್ತ ಪಶ್ಚಿಮಸಮುದ್ರತೀರಕ್ಕೆ ಹೋಗಿ ಪೂರ್ವಭಾಗದಲ್ಲಿ ಬೀಡನ್ನುಬಿಡಿಸಿ ಸಮುದ್ರವಿಜಯನ ಅನುಮತಿಯಿಂದ ಕೃಷ್ಣನು ಎಂಟು ದಿನಗಳವರೆಗೆ ದರ್ಭಶಯ್ಯೆಯಲ್ಲಿರಲು ಆಗ ಅವನ ಪುಣ್ಯದಿಂದ ನೇಮಿಶ್ವರರು ಅಲ್ಲಿ ಉದಯಿಸುವ ಪುಣ್ಯಪ್ರಭಾವವನ್ನು ದೇವೇಂದ್ರನು ಅವಧಿಜ್ಞಾನದಿಂದ ತಿಳಿದು ನೈಗಮದೇವನನ್ನು ಕಳುಹಿದನು. ಅವನು ಬಂದು ಕುದುರೆಯ ರೂಪವನ್ನುಧರಿಸಿ ನಿಂತಿರಲು ಅದನ್ನು ಕೃಷ್ಣನು ನೋಡಿ ಸಂತೋಷಪಟ್ಟನು. ಆಗ ಆ ಕುದುರೆಯು ಸಮುದ್ರಕ್ಕೆ ಹಾರಲು ಅಲ್ಲಿ ಹನ್ನೆರಡು ಗಾವುದ ವಿಸ್ತಾರವಾಗಿ ಒಂದು ದಿಣ್ಣೆಯು ಆವಿರ್ಭವಿಸಿ ಸಮುದ್ರವು ತೆರಪಾಯಿತು. ಆಗ ಆ ನೈಗಮದೇವನು ತನ್ನ ನಿಜರೂಪವನ್ನು ತೋರಿ ಪುಷ್ಪವೃಷ್ಟಿಯನ್ನುಮಾಡಿ ಸ್ವರ್ಗಕ್ಕೆ ಹೊರಟುಹೋದನು. ಬಳಿಕ ದೇವೇಂದ್ರನ ಅಪ್ಪಣೆಯಿಂದ ಕುಬೇರನು ಬಂದು ಅಲ್ಲಿ ಬಹು ಸುಂದರವಾದ ನಗರವನ್ನು ನಿರ್ಮಿಸಿ ಉದ್ಯಾನವನ್ನೂ ರತ್ನಮಯವಾದ ಪ್ರಾಕಾರವನ್ನೂ ರಚಿಸಿ ಅದರ ಮಧ್ಯದಲ್ಲಿ ಸಮುದ್ರವಿಜಯನಿಗೂ ಎಡಬಲಗಡೆಗಳಲ್ಲಿ ಕೃಷ್ಣ ಬಲರಾಮರಿಗೂ ಪಕ್ಕಗಳಲ್ಲಿ ವಸುದೇವ ಮೊದಲಾದವರಿಗೂ ಅರಮನೆಗಳನ್ನು ರಚಿಸಿ ಅವರುಗಳನ್ನು ಅಲ್ಲಲ್ಲಿರಿಸಿ ಅವರ ಅಂಗಣಗಳಲ್ಲಿ ಸುವರ್ಣವೃಷ್ಟಿಯನ್ನು ಕರೆದು ಕುಬೇರನು ತನ್ನ ಸ್ಥಾನಕ್ಕೆ ಹೊರಟುಹೋದನು. ಇತ್ತ ಸಮುದ್ರವಿಜಯ ಬಲಕೇಶ

ವಾದಿಗಳು ಸುಖದಿಂದಿರುತ್ತಿರಲು ಈ ವಿಷಯುವನ್ನು ವಿಜಯಾರ್ಧಪರ್ವತದ ರಥ ನೂಪುರದ ದೊರೆಯಾದ ಸುಕೇತುಖೇಚರನು ತಿಳಿದು ಸಂತುಷ್ಟನಾಗಿ ಬಹು ವೈಭವದಿಂದ ಬಂದು ಭುವನಸ್ತುತ್ಯೆಯಾದ ತನ್ನ ಪುತ್ರಿ ಸತ್ಯಭಾಮೆಯುನ್ನು ಕಮಲ ಲೋಚನ—ಕೃಷ್ಣನಿಗೆ ಕೊಟ್ಟನು. ಕೃಷ್ಣನು ಸತ್ಯಭಾಮೆಯೊಡನೆ ರತಿಸುಖಸಂಕಥಾವಿನೋದದಲ್ಲಿದ್ದನು.

ಒಂದು ದಿನ ಆಕಾಶಮಾರ್ಗದಿಂದ ನಾರದನು ಬರಲು ಕೃಷ್ಣನು ಎದ್ದು ಕೈ ಮುಗಿದು "ನೀವು ಬಂದ ಕಾರಣವೇನು?" ಎಂದು ಕೇಳಿದನು. ಅದಕ್ಕೆ ನಾರದನು "ವಿದರ್ಭದೇಶದ ಕುಂಡಿನಪುರದ ದೊರೆಯಾದ ವಿಶ್ವಾವಸುಮಂಡಲೇಶ್ವರನಿಗೂ ಆತನ ಸತಿ ಲಕ್ಷ್ಮೀಮತಿಗೂ ಹುಟ್ಟಿದ ಹಿರಿಯುಮಗನು ರುಗ್ಮಿಣನು. ಆತನ ತಂಗಿ ರುಗ್ಮಿಣಿಯು ಬಹು ರೂಪವತಿಯಾಗಿರುತ್ತಾಳೆ. ಆಕೆಯುನ್ನು ಜವಭೂಪತಿಯು ತನ್ನ ಪುತ್ರನಾದ ಶಿಶುಪಾಲನಿಗೆ ಕೇಳಲು ಬಂದು ಪಟ್ಟಣದ ಹೊರಗೆ ಬೀಡಬಿಟ್ಟಿರುವನು" ಎಂದನು. ಆ ಮಾತನ್ನು ಕೇಳಿದೊಡನೆಯೇ ಕೃಷ್ಣನು ನಾರದನಿಗೆ ಭಕ್ತಿಯಿಂದ ವಂದಿಸಿ ಬೀಳ್ಕೊಟ್ಟು ಆ ವಿಷಯುವನ್ನು ಬಲರಾಮನಿಗೆ ತಿಳಿಸಿ ಸಾತ್ತ್ವಕಿಯುನ್ನೂ ಅರ್ಜುನನನ್ನೂ ಕರೆಯಿಸಿ ಅವರುಗಳೊಡನೆ ಶೀಘ್ರವಾಗಿ ನಗರದಿಂದ ಹೊರಟು ಕುಂಡಿನಪುರದ ಹೊಳೆಯು ದಡಕ್ಕೆ ಹೋಗಿ ನಿಂತು ಆ ನಾಲ್ವರೂ ಆಚೆಯು ದಡದಲ್ಲಿ ಬಿಟ್ಟಿದ್ದ ಶಿಶುಪಾಲನ ದಂಡನ್ನು ನೋಡಿದರು. ಬಳಿಕ ಸಾತ್ತ್ವಕಿಯೂ ಅರ್ಜುನನೂ ವಿಶ್ವಾವಸುರಾಜನ ಪಟ್ಟಣಕ್ಕೆ ಪ್ರವೇಶಮಾಡಿ ಅಲ್ಲಿ ಅರ್ಹದ್ದೇವದರ್ಶನವನ್ನು ಮಾಡಿ ಮನೆಗೆ ಹೋಗುತ್ತಿದ್ದ ರುಗ್ಮಿಣಿಯನ್ನು ನೋಡಿ ಕಾವಲುಗಾರರನ್ನು ಬೆದರಿಸಿ ಆ ರಾಜಕನ್ಯೆಯುನ್ನು ಎತ್ತಿ ಹೆಗಲಮೇಲಿರಿಸಿ ಕೊಂಡು ಪುರಜನರೆಲ್ಲ ಬೆದರುವಂತೆ ಅರ್ಜುನನು ಸಿಹ್ಮನಾದವನ್ನು ಮಾಡುತ್ತಲೂ ಇದಿರಾದವರನ್ನು ಸದೆಬಡಿಯುತ್ತಲೂ ಹೋಗಿ ಆ ಸುಂದರಿಯುನ್ನು ಕೃಷ್ಣನಿಗೊಪ್ಪಿಸಿದರು. ಆ ವಾರ್ತೆಯುನ್ನು ಕೇಳಿ ವಿಶ್ವಾವಸುವೂ ಶಿಶುಪಾಲನೂ ತಮ್ಮ ಸೈನ್ಯಸಮೇತರಾಗಿ ಬರುತ್ತಿರಲು ಅವರಿಗಿದಿರಾಗಿ ಬಲಕೇಶವರು ತಮ್ಮ ಬಲವನ್ನು ಅನುಗೊಳಿಸಿದರು. ಅದನ್ನು ಕಂಡು ಶಿಶುಪಾಲ ವಿಶ್ವಾವಸುರಾಜರು ತಮ್ಮ ಸೇನೆಗೆ ಕೈವೀಸಲು ಅದು ಕೃಷ್ಣನ ಸೈನ್ಯದೊಡನೆ ಕದನಕ್ಕಾರಂಭಿಸಿತು. ಆಗ ನಾರಾಯಣನ ಸೈನ್ಯವು ಶಿಶುಪಾಲನ ಸೈನ್ಯವನ್ನು ಸೋಲಿಸಲು ಕಂಡು ಶಿಶುಪಾಲನು ತನ್ನ ಪಟ್ಟದಾನೆಯುನ್ನೇರಿ ಕೃಷ್ಣನ ಮುಂದೆ ಬಂದು ಅವನನ್ನು ಬಯ್ದರೂ ಕೃಷ್ಣನು ಸುಮ್ಮನಿರುವುದನ್ನು ನೋಡಿ ಪಕ್ಕದಲ್ಲಿದ್ದ ಅರ್ಜುನನು "ಏಕೆ ಸುಮ್ಮನೆ

ನಿಂತಿರುವಿರಿ ?" ಎಂದು ಕೇಳಿದನು. ಅದಕ್ಕೆ ಕೃಷ್ಣನು "ಈ ಶಿಶುಪಾಲನು ಹುಟ್ಟಿದಾಗ ಇವನಿಗೆ ಹಣೆಯಲ್ಲೊಂದು ಕಣ್ಣಿತ್ತು. ಆಗ ಇವನ ತಂದೆಯು ಓರ್ವ ಶಕುನಿಗನನ್ನು ಕೇಳಲು ಅವನು 'ಈ ಮಗುವು ಯಾರ ಮುಖವನ್ನು ನೋಡಿದೊಡನೆಯೇ ಈ ಕಣ್ಣು ನಷ್ಟವಾಗುವುದೋ ಅವನಿಂದ ಇವನಿಗೆ ಮರಣವಾಗುವುದು' ಎಂದನು. ಆ ಮಾತನ್ನು ಕೇಳಿ ಇವನ ತಂದೆತಾಯಿಗಳು ಮಗುವನ್ನೆತ್ತಿಕೊಂಡು ಅನೇಕ ರಾಜರುಗಳ ಬಳಿಗೆ ಹೋಗಿ ನನ್ನಲ್ಲಿಗೆ ಬಂದರು. ನನ್ನ ಮುಖವನ್ನು ನೋಡಿ ಇವನ ಆ ಮೂರನೆಯ ಕಣ್ಣು ನಷ್ಟವಾಯ್ತು. ಆಗ ಇವನ ತಂದೆತಾಯಿಗಳು ನನ್ನಲ್ಲಿ ಪುತ್ರಭಿಕ್ಷೆಯನ್ನು ಬೇಡಲು ನಾನು ಅವರ ದೈನ್ಯವನ್ನು ನೋಡಿ ಇವನ ನೂರು ತಪ್ಪುಗಳನ್ನು ಸೈರಿಸುವೆನೆಂದು ಹೇಳಿದೆನು. ಆದುದರಿಂದ ಇವನ ಮಾತನ್ನು ಸೈರಿಸಿದೆನು' ಎಂದನು. ಆ ಮಾತನ್ನು ಕೇಳಿ ಶಿಶುಪಾಲನು ಬಹು ಕೋಪದಿಂದ ನೂರು ಬಯ್ಗಳಗಳನ್ನು ಬಯ್ದು ಕೃಷ್ಣನ ಮೇಲೆ ಬಾಣಗಳನ್ನು ಬಿಟ್ಟನು. ಆ ಬಾಣಗಳನ್ನು ಕೃಷ್ಣನು ಒಂದೇ ಬಾಣದಿಂದ ಕಡಿದು ಬಳಿಕ ಅವನ ತಲೆಯನ್ನು ಚೆಂಡಾಡಿದನು. ಅತ್ತ ಅರ್ಜುನನು ಯವನನ್ನೂ, ಬಲರಾಮನು ವಿಶ್ವಾವಸುವನ್ನೂ ಸಂಹರಿಸಿದರು. ಬಳಿಕ ಸೈನ್ಯಕ್ಕೆ ಅಭಯಘೋಷಣೆಯನ್ನು ಮಾಡಿಸಿ ರುಗ್ಮಿಣಿಯನ್ನು ಸಂತೈಸಿ ಆ ಪುರದಲ್ಲಿರಿಸಿ ತಾವು ದ್ವಾರಾವತಿಗೆ ಹಿಂದಿರುಗಿ ಬಂದು ರುಗ್ಮಿಣಿದೇವಿಗೆ ದೇವತಾಕಾರದ ತೊಡಿಗೆಗಳನ್ನು ತೊಡಿಸಿ ಊರ ಮುಂದಿನದೊಂದು ಮಂಟಪದಲ್ಲಿರಿಸಿ ಕೃಷ್ಣನು ಸತ್ಯಭಾಮೆಗೆ ರಾಜಪುತ್ರಿಯನ್ನು ತೋರಿಸುತ್ತೇನೆಂದು ಆಕೆಯನ್ನು ಕರೆತರುವಾಗ ಆ ಕೃತ್ರಿಮದೇವತೆಯನ್ನು ಕೆಲವರು ಪರಿಚಾರಿಕೆಯರು ಪೂಜಿಸುತ್ತಿದ್ದರು. ಅದನ್ನು ಕಂಡು ಸತ್ಯಭಾಮೆಯು "ಇವಳು ಯಾವ ದೇವತೆ ?" ಎಂದು ಕೇಳಿದಳು. ಅದಕ್ಕವರು "ಬೇಡಿದ ವರವನ್ನು ಕೊಡುವಳು ಈ ವನದೇವತೆ" ಎಂದು ಉತ್ತರವನ್ನಿತ್ತರು. ಆ ಮಾತನ್ನು ಕೇಳಿ ಸತ್ಯಭಾಮೆಯು ಇದನ್ನು ನೋಡುವೆನೆಂದು ಆ ಮಂಟಪಕ್ಕೆ ಬಂದು ನೋಡಿ ಪೂಜಿಸಿ ಕೈಮುಗಿದು ಹಣೆಗಿಟ್ಟು "ಎಲೈ ದೇವಿ ! ಈಗ ತಂದವಳ ಮೇಲೆ ಅಚ್ಯುತನಿಗೆ ಪ್ರೀತಿಯಿಲ್ಲದಂತೆ ಮಾಡಿದರೆ ನಿನಗೆ ಹಲವು ವಿಧವಾದ ಪೂಜೆಗಳನ್ನು ಮಾಡುವೆನು" ಎಂದಳು. ಆಗ ಕೃಷ್ಣನು ನಗುತ್ತ ಬಂದು "ಸತ್ಯಭಾಮೆ! ನೀನು ನಿಸ್ಸಂದೇಹವಾಗಿ ರುಗ್ಮಿಣಿಗೆ ನಮಸ್ಕರಿಸುವುದುಚಿತವೇ ?" ಎನಲು ಕೇಳಿ ಕೋಪದಿಂದ ಸತ್ಯಭಾಮೆಯು ತನ್ನ ಸಖಿಯರೊಡನೆ ರುಗ್ಮಿಣಿಯಮೇಲೆ ಬಿದ್ದು ತೊಡಿಗೆಗಳನ್ನು ಸುಲಿದುಕೊಂಡಳು. ಆದರೂ ರುಗ್ಮಿಣಿಯ ಪೂರ್ವಜನ್ಮದ ಪುಣ್ಯದಿಂದ

ಮೊದಲಿನಂತೆಯೇ ಮೈಮೇಲೆ ತೊಡಿಗೆಗಳಿರುವುದನ್ನು ಕಂಡು ಸತ್ಯಭಾಮೆಯು ಕೋಪದಿಂದ ತನ್ನ ಮನೆಗೆ ಹೊರಟುಹೋದಳು. ಕೃಷ್ಣನು ವಿಸ್ಮಿತನಾಗಿ ರುಗ್ಮಿಣಿಗೆ ನಮಸ್ಕಾರಮಾಡಿ ಆಕೆಯ ಮನೋವಿಷಾದವನ್ನು ದೂರಮಾಡಿ ದ್ವಾರಾವತಿಯನ್ನು ಪ್ರವೇಶಿಸಿ ಶುಭಲಗ್ನದಲ್ಲಿ ಮದುವೆಯಾಗಿ ಆಕೆಯನ್ನು ಪಟ್ಟಮಹಿಷಿಯನ್ನಾಗಿ ಮಾಡಿ ಸುಖದಲ್ಲಿರುವಾಗ ಒಂದು ದಿನ ನಾರದನು ಆಕಾಶದಿಂದ ಇಳಿದು ಬಂದು ಹರಿಯನ್ನು ಕುರಿತು “ ಎಲೈ ಪ್ರಭುವೆ! ವಿಜಯಾರ್ಧಗಿರಿಯ ಉತ್ತರಶ್ರೇಣಿಯಲ್ಲಿರುವ ಜಂಬೂಪುರದ ಜಾಂಬವನೆಂಬ ದೊರೆಗೂ ಆತನ ಸತಿ ಜಂಬೂಷಣೆಗೂ ಜಂಬುಕುಮಾರನೆಂಬ ಪುತ್ರನೂ ಆತನಿಂದ ಕಿರಿಯಳು ಜಾಂಬಾವತಿಯೆಂಬ ಪುತ್ರಿಯೂ ಇರುತ್ತಾರೆ. ಆ ಜಂಬಾವತಿಯನ್ನು ವಿದ್ಯಾಧರದೇಶದ ರಾಜರೆಲ್ಲ ಕೇಳಿದರೂ ಜಾಂಬವನು ಕೊಡದಿರುತ್ತಾನೆ. ಅವಳಿಗೆ ತಕ್ಕವನು ನೀನು, ನಿನಗೆ ತಕ್ಕವಳು ಅವಳು” ಎಂದು ಹೇಳಿ ಆಕಾಶಮಾರ್ಗವಾಗಿ ಹೊರಟುಹೋದನು ಆ ವಿಷಯವನ್ನು ಕೃಷ್ಣನು ಬಲರಾಮನಿಗೆ ತಿಳಿಸಿ ಅವರು ಸೈನ್ಯಸಮೇತರಾಗಿ ಉತ್ತರಾಭಿಮುಖವಾಗಿ ಹೊರಟುಹೋಗಿ ಆ ವಿಜಯಾರ್ಧಗಿರಿಯ ಕೆಳಗೆ ಬೀಡುಬಿಡಿಸಿದರು. ತಾವು ಭೂಚರರಾಗಿರುವುದರಿಂದ ಆ ಗಿರಿಯ ಮೇಲುಭಾಗಕ್ಕೆ ಹೋಗಲಾಗದೆಂದು ಕೃಷ್ಣನು ಮರುದಿನ ಶುಚಿಯಾಗಿ ದರ್ಭಶಯನದಲ್ಲಿರಲು ಆಗ ಅವನ ಪೂರ್ವಜನ್ಮದ ಅಣ್ಣನಾದ ಯಕ್ಷಿಳನು ಸಹಸ್ರಾರವೆಂಬ ಹನ್ನೆರಡನೆಯ ಸ್ವರ್ಗದಲ್ಲಿ ಹುಟ್ಟಿದ್ದು ಅಲ್ಲಿಂದ ಬಂದು ಬಲಕೇಶವರಿಗೆ ಸಿಹ್ಮವಾಹಿನಿ ಗರುಡವಾಹಿನಿಗಳೆಂಬ ಎರಡು ರಥಗಳನ್ನಿತ್ತು ಯಾರಿಗೂ ಸಾಧ್ಯವಲ್ಲದ ಕ್ಷೀರಸಮುದ್ರವನ್ನು ಅವರ ಸುತ್ತಲೂ ನಿರ್ಮಿಸಿ ಭೀಕರವಾದ ಸರ್ಪಶಯ್ಯೆಯಲ್ಲಿ ಅವರನ್ನಿರಿಸಿ “ಈ ವಿಧದಿಂದ ನಿಮ್ಮ ಕೆಲಸವಾಗುವುದು ” ಎಂದು ಹೇಳಿ ಆ ದೇವನು ದೇವಲೋಕಕ್ಕೆ ಹೊರಟುಹೋದನು.

ಇತ್ತ ಬಲವಾಸುದೇವರು ನಾಲ್ಕುತಿಂಗಳವರೆಗೆ ಅಲ್ಲಿರಲು ಆಗ ವಿದ್ಯಾದೇವತೆಗಳು ಬಂದು “ ಕೆಲಸವನ್ನು ಹೇಳಿ ಹೇಳಿ ” ಎನಲು ಅವುಗಳನ್ನು ಅಂಗೀಕರಿಸಿ ಅವುಗಳು ತಂದ ಪುಷ್ಪಕವಿಮಾನವನ್ನೇರಿ ಬಲಕೇಶವರು ವಿಜಯಾರ್ಧಗಿರಿಯ ಕಿನ್ನರಗೀತವೆಂಬ ಪಟ್ಟಣಕ್ಕೆ ಹೋಗಿ ಅಲ್ಲಿ ತಮ್ಮ ತಂದೆ ವಸುದೇವನ ಪತ್ನಿಯಾದ ಶಾಲ್ಮಲಿದತ್ತೆಯ ಮಗ ಧ್ರುವಕುಮಾರನನ್ನು ಕಂಡು ಅಣ್ಣನಾದ ಅವನ ಕಾಲುಗಳಿಗೆ ಸಮಸ್ಕಾರಮಾಡಿ “ ಈ ದಿನ ನಿಮ್ಮನ್ನು ಕಾಣಬೇಕೆಂಬ ಆತುರದಿಂದ ಬಂದೆವು ” ಎಂದು ಹೇಳಿ ನೀತಿವಂತರಾದ ಕೆಲವು ಖೇಚರರನ್ನು ಆ ಜಂಬಾವತಿಯನ್ನು ಕೇಳುವುದಕ್ಕಾಗಿ ಕಳುಹಲು ಅವರು ಹೋಗಿ ಜಾಂಬವನನ್ನು ಕಂಡು

" ದ್ವಾರಾವತಿಯ ಅಧಿಪತಿಯಾದ ನಾರಾಯಣನಿಗೆ ನಿನ್ನ ಮಗಳನ್ನು ಕೊಡು " ಎಂದು ಕೇಳಿದರು. ಆ ಮಾತನ್ನು ಕೇಳಿ ಜಾಂಬವನು " ಒಳ್ಳೆಯದು ಒಳ್ಳೆಯದು, ಮದಗಜದೊಡನೆ ಆಡು ಕೊಳ್ಳು ಕೊಡುವನ್ನು ಮಾಡುವುದೆಂಬ ಪೊಳ್ಳು ಮಾತೇಕೆ ? ಹೋಗಿ " ಎಂದು ಅವರನ್ನು ತಳ್ಳಿಸಲು ಅವರು ಬಂದು ಆ ಸಮಾಚಾರವನ್ನು ಧ್ರುವ ಬಲ ಕೇಶವರಿಗೆ ತಿಳಿಸಿದರು. ಅವರು ಕನಲಿ ಯುದ್ಧ ಸನ್ನದ್ಧರಾಗಿ ಜಂಬೂ ಪುರಕ್ಕೆ ಬರಲು ಅದನ್ನು ತಿಳಿದು ಜಾಂಬವನು ತನ್ನ ಸೈನ್ಯದೊಡನೆ ಪುರದಿಂದ ಹೊರಟು ಬಂದನು. ಆಗ ಧ್ರುವನು ಬಲಕೇಶವರನ್ನು ಹಿಂದಿಕ್ಕಿ ಹೋಗಿ ಯುದ್ಧ ರಂಗದಲ್ಲಿ ಜಾಂಬವನನ್ನು ಕೊಂದು ಆ ಜಂಬಾವತಿಯನ್ನು ತಂದು ಕೃಷ್ಣನಿಗೆ ಕೊಡಲು. ಅವನು ಆಕೆಯನ್ನು ದ್ವಾರಾವತಿಗೆ ಕರೆತಂದು ಬಹು ವೈಭವದಿಂದ ಮದುವೆಯಾದನು.

ಮತ್ತೊಂದು ದಿನ ನಾರದನು ಬಂದು " ಎಲೈ ಪುರುಷೋತ್ತಮನೆ! ಗಿರಿ ನಗರದ ದೊರೆಯಾದ ಜ್ಯೇಷ್ಠವರ್ಧನನಿಗೂ ಆತನ ಸತಿ ಜ್ಯೇಷ್ಠಾವತಿಗೂ ಸುಸೀಮೆಯೆಂಬ ಬಹು ಸುಂದರಿಯಾದ ಮಗಳಿರುವಳು. ಆಕೆಯು ನಿನಗೆ ತಕ್ಕವಳಾಗಿದ್ದಾಳೆ " ಎಂದು ಹೇಳಿ ಹೋದನು. ಕೃಷ್ಣನು ಆ ಗಿರಿನಗರಕ್ಕೆ ಹೋಗಿ ಯುದ್ಧ ಮುಖಾಂತರ ಆ ಕನ್ಯೆಯನ್ನು ತಂದು ಮದುವೆಯಾದನು. ಹೀಗೆ ಅನೇಕ ರಾಜ ಪುತ್ರಿಯರನ್ನು ತಂದು ಕೃಷ್ಣನು ಮದುವೆಯಾದನು. ಕೃಷ್ಣನಿಗೆ ಸತ್ಯಭಾಮೆ, ರುಗ್ಮಿಣಿ, ಜಂಬಾವತಿ, ಸುಸೀಮೆ, ಲಕ್ಷ್ಮಣೆ, ಗಾಂಧಾರಿ, ಗೌರಿ, ಪದ್ಮಾವತಿ ಈ ಎಂಟುಮಂದಿ ಸ್ತ್ರೀಯರು ಪಟ್ಟಮಹಿಷಿಯರಾಗಿದ್ದರು.

## ೧೮. ಮನ್ಮಥೋದಯ ಸಂಧಿ.

ಒಂದುದಿನ ದ್ವಾರಾವತಿಯಲ್ಲಿ ಕೃಷ್ಣನು ಇಂದ್ರವೈಭವದಿಂದ ಅನೇಕ ರಾಜರುಗಳ ಮಧ್ಯದಲ್ಲಿ ಸಿಂಹಪೀಠದಲ್ಲಿ ಕುಳಿತು ತನ್ನ ಪತ್ನಿಯರನ್ನು ಓಲಗಶಾಲೆಗೆ ಕರೆಯಿಸಲು ಮೊದಲು ರುಗ್ಮಿಣಿಯು ಬಂದು ಪತಿಯ ಬಲದ ಭಾಗದಲ್ಲಿ ಕುಳಿತಳು. ಬಳಿಕ ಸತ್ಯಭಾಮೆಯು ಬಂದು ಕೋಪದಿಂದ ಮುಂದೆ ನಿಂತಿರಲು ಕಂಡು ಹರಿಯು 'ಎಲೆ ಬಾಲೆ! ನೀನೇಕೆ ಮುಂದೆ ನಿಂತಿರುವೆ ? " ಎಂದನು. ಆಕೆಯು ಬಾರದಿರಲು ರುಗ್ಮಿಣಿಯು ಅವಳ ಮನೋಭಾವವನ್ನು ತಿಳಿದು " ಯೋಚಿಸಿ ನೋಡಿದರೆ

ಪತಿಯ ವಾಮಭಾಗವೇ ಸತಿಯರಿಗೆ ಮುಖ್ಯವು" ಎಂದು ತಾನು ಪತಿಯ ಎಡಗಡೆ ಬಂದು ನಿಂತಳು. ಆಗ ಕೃಷ್ಣನು "ಎಲೆ ಯುವತಿಯರಿರಾ! ನಿಮ್ಮೊಳಗೆ ಯಾವಳು ಮೊದಲು ಪುತ್ರನನ್ನು ಹೆರುವಳೋ ಆವಳು ಶ್ರೇಷ್ಠಳು' ಎಂದನು. ಆ ಮಾತಿಗೆ ಅವರೀರ್ವರೂ ಸಮ್ಮತಿಸಲು ಮತ್ತೆ ಕೃಷ್ಣನು "ನೀವು ಮೊದಲು ಹಡೆದ ಮಗನ ಮದುವೆಯಲ್ಲಿ ಆತನ ತಾಯಿಯು ಹಿಂದುಳಿದವಳ ತಲೆ—ಮುಡಿಯನ್ನು ಮೆಟ್ಟಿ ಮೀಯಬೇಕು' ಎನಲು ಅವರು ಒಪ್ಪಿ ತಂತಮ್ಮ ಮನೆಗೆ ಹೋದರು. ಮಾಧವನು ತನ್ನ ಸ್ತ್ರೀಯರಲ್ಲಿ ಅನುದಿನವೂ ರತಿಸುಖವನ್ನನುಭವಿಸುತ್ತಿರಲು ಒಂದುದಿನ ರುಗ್ಮಿಣಿಯು ಋತುಮತಿಯಾಗಿ ನಾಲ್ನೀರನ್ನು ಮಿಂದು ಬಿಳಿಯ ತೊಡಿಗೆಗಳನ್ನು ತೊಟ್ಟು ಪತಿಯ ಶಯ್ಯಾಗೃಹಕ್ಕೆ ಹೋಗಿ ಹಂಸತೂಲತಲ್ಪದೊಳೊರಗಿರ್ದ ಪ್ರಾಣಕಾಂತನೊಡನೆ ಸುರತಸುಖವನ್ನನುಭವಿಸಿ ನಿದ್ರೆಗೈದು ಬೆಳಗಿನಜಾವದಲ್ಲಿ ಲಕ್ಷ್ಮಿ ಸಿಹ್ಮ ಮೀನ ಸಮುದ್ರ ವಿಮಾನ ಇವುಗಳನ್ನು ಕನಸಿನಲ್ಲಿ ಕಂಡು ಹರ್ಷದಿಂದೆದ್ದು ತನಗಾದ ಕನಸುಗಳನ್ನು ಪತಿಗೆ ಹೇಳಿ ಅವನಿಂದ ಅವುಗಳ ಫಲಗಳನ್ನು ತಿಳಿದು ಸಂತೋಷದಿಂದಿದ್ದಳು. ಬಳಿಕ ರುಗ್ಮಿಣಿಗೆ ಪೃಥಿವೀಮಂಡಲವನ್ನು ನೋಡಬೇಕೆಂಬಿಚ್ಛೆಯಾಗಲು ಕೃಷ್ಣನು ದರ್ಭಶಯ್ಯೆಯಲ್ಲಿ ಕುಳಿತು ಧ್ಯಾನಿಸಿದನು. ಆಗ ಗರ್ಭಸ್ಥಶಿಶುವಿನ ಪುಣ್ಯದಿಂದ ದೇವೇಂದ್ರನು ಕಳುಹಿದ ವಿಮಾನವನ್ನೇರಿ ಆ ದಂಪತಿಗಳು ನರಲೋಕವನ್ನು ನೋಡಿಕೊಂಡು ತಮ್ಮ ಪಟ್ಟಣಕ್ಕೆ ಬಂದು ಸುಖದಲ್ಲಿರುತ್ತಿರಲು ಒಂಬತ್ತನೆಯ ತಿಂಗಳಲ್ಲಿ ರುಗ್ಮಿಣಿಯು ಶುಭಲಗ್ನದಲ್ಲಿ ಪುತ್ರನನ್ನು ಹಡೆದಳು. ಅದನ್ನು ತಿಳಿದು ಕೃಷ್ಣನು ಉತ್ಸವವನ್ನು ಮಾಡಿಸುವಷ್ಟರಲ್ಲಿ ಅತ್ತ ಸತ್ಯಭಾಮೆಯು ಗಂಡುಮಗುವನ್ನು ಪ್ರಸವಿಸಿ ಸುಖವಾಗಿದ್ದಳು. ರುಗ್ಮಿಣಿಯ ಮಗನ ಪೂರ್ವಭವದ ಶತ್ರುವಾದ ಧೂಮಕೇತುವೆಂಬ ಜ್ಯೋತಿಷ್ಕದೇವನು ಆಕಾಶಮಾರ್ಗದಿಂದಿಳಿದುಬಂದು ಆ ಮಗುವನ್ನೆತ್ತಿಕೊಂಡು ಆಕಾಶಕ್ಕೆ ನೆಗೆದನು. ಇತ್ತ ರುಗ್ಮಿಣಿಯು ತನ್ನ ಮಗುವನ್ನು ಕಾಣದೆ ಬಹು ದುಃಖಿತಳಾಗಿ ಭೂಮಿಯಲ್ಲಿ ಬಿದ್ದು ಉರುಳಾಡುತ್ತಿರಲು ಕೃಷ್ಣನು ಬಂದು ಆಕೆಯನ್ನು ಸಂತೈಸಿ ತನ್ನ ಮಗನು ಎಲ್ಲಿದ್ದರೂ ತಾನು ತಾರದಿದ್ದರೆ ತಾನಿರುವುದೇಕೆನ್ನುವಾಗ "ಹರಿಯೆ! ಕೇಳು, ಆ ನಿನ್ನ ಕುಮಾರನು ವಿದ್ಯಾಧರದೇಶದಲ್ಲಿ ಚೆನ್ನಾಗಿ ಬಳೆದು ಮಹಾಭುಜಬಲೋಪೇತನಾಗಿ ಹದಿನಾರು ವರುಷಕ್ಕೆ ಬರುವನು' ಎಂದು ಆಕಾಶವಾಣಿಯಾಯ್ತು. ಕೃಷ್ಣನು ಅದನ್ನು ರುಗ್ಮಿಣಿಗೆ ತಿಳಿಸಿದಬಳಿಕ ಸಮಾಧಾನಪಡಿಸಿ ನಿಶ್ಚಿಂತೆಯಾಗಿರಲು ಅತ್ತ ಆ ಜ್ಯೋತಿಷ್ಕದೇವನು ಶಿಶುವನ್ನೆತ್ತಿಕೊಂಡು ಆಕಾಶದಲ್ಲಿ ಹೋಗುತ್ತ ಕೋಪದಿಂದ

' ಎಲವೋ ನನ್ನ ಶತ್ರುವೆ! ಸತ್ತೆ, ನನ್ನ ಕೈಯಿಂದ ನಿನ್ನನ್ನು ಬಿಡಿಸಿಕೊಳ್ಳುವ ಶಕ್ತ ನಾರು? ಪೂರ್ವಜನ್ಮದಲ್ಲಿ ನನ್ನ ಹೆಂಡತಿಯನ್ನು ತೆಗೆದುಕೊಂಡುಹೋದ ಅನ್ಯಾಯಕಾರನೆ! ಕೇಳು, ನಿನ್ನನ್ನೀಗ ಛಿನ್ನಭಿನ್ನಮಾಡಿದರೆ ನನ್ನನ್ನು ದಂಡಿಸುವವರಿದ್ದಾರೆಯೇ?" ಎಂದು ಹೇಳುತ್ತ ಆ ಮಗುವನ್ನು ಒಯ್ಯುವಾಗ ಒಂದು ಕಾಡಿನಲ್ಲಿ ವ್ಯಂತರದೇವತೆಗಳ ಕೃತಕದಿಂದ ಒಂದೆಡೆಯಲ್ಲಿ ಎರಡು ಕಲ್ಲುಗಳು ಒಂದಕ್ಕೊಂದು ತಾಕಿ ಒಡದಾಡುತ್ತಿದ್ದುವು. ಅದನ್ನು ಕಂಡ ಆ ಧೂಮಕೇತುವು "ಈ ಕಲ್ಲುಗಳ ಮಧ್ಯದಲ್ಲಿ ಈವೈರಿಯನ್ನು ಹಾಕಿದರೆ ಸಾಯುವನೆಂದು ಬಗೆದು ಶಿಶುವನ್ನು ಆ ಕಲ್ಲುಗಳಮಧ್ಯದಲ್ಲಿ ಹಾಕಿ ಆಕಾಶಕ್ಕೆ ನೆಗೆದನು. ಇತ್ತ ಆ ಕಲ್ಲುಗುಂಡುಗಳು ಗಂಡುಮಗುವಿನ ಪುಣ್ಯದಿಂದ ತಾಗದಿರಲು ಆಗ ಆಕಾಶದಲ್ಲಿ ವಿಜಯಾರ್ಧಗಿರಿಯ ದಕ್ಷಿಣಶ್ರೇಣಿಯ ಘನಕೂಟವೆಂಬ ಪಟ್ಟಣದ ಕಾಳಶಂಬರನೆಂಬ ವಿದ್ಯಾಧರನು ತನ್ನ ಸತಿ ಕಾಂಚನಮಾಲೆಯೊಡನೆ ಬರುತ್ತಿರಲು ಆ ಚರಮಾಂಗನಾದ ಮಗುವಿನಮೇಲೆ ತನ್ನ ವಿಮಾನವು ಮುಂದುವರಿಯದೆ ನಿಂತಿರಲು ಆಖೇಚರನು ಇಳಿದುಬಂದು ಆ ಕಲ್ಲುಗಳ ಮಧ್ಯದಲ್ಲಿ ಹೊಳೆಯುತ್ತಿರುವ ಮಗುವನ್ನೂ ಅದರ ಶುಭಲಕ್ಷಣಗಳನ್ನೂ ನೋಡಿ ಈ ರಾಜಪುತ್ರನನ್ನು ಆವನೋ ಪೂರ್ವಭವದ ವೈರಿಯು ಹಾಕಿ ಹೋಗಿರುವನೆಂದು ತಿಳಿದು ಆ ಶಿಶುವನ್ನೆತ್ತಿಕೊಂಡು ಎದೆಗಿಟ್ಟು ಆಕಾಶಕ್ಕೆ ಹೋಗಿ ವಿಮಾನದಲ್ಲಿದ್ದ ತನ್ನ ಪತ್ನಿಗೆ ಮಗುವನ್ನಿತ್ತು ವಿಷಯವನ್ನು ತಿಳಿಸಿ ಅದನ್ನು ಸಾಕುವಂತೆ ಹೇಳಿದನು. ಆಕೆಗೆ ಪೂರ್ವಭವಸಂಬಂಧದಿಂದ ಆ ಮಗುವಿನ ಮೇಲೆ ದಯೆಯುಂಟಾಗಿ ಪತಿಯನ್ನು ಕುರಿತು "ನಿನ್ನ ಇತರ ಪತ್ನಿಯರಿಗೆ ಮಕ್ಕಳಿರುವಾಗ ನಾನು ಈ ಮಗುವನ್ನು ಸಾಕುವುದರಿಂದೇನು ಫಲ?" ಎನಲು ಆ ಮಾತನ್ನು ಕೇಳಿ ಕಾಳಶಂಬರನು ತನ್ನ ಕೊರಳಲ್ಲಿದ್ದ ಹಾರವನ್ನು ತೆಗೆದು ಮಗುವಿನ ಕೊರಳಿಗೆ ಹಾಕಿ "ಇವನೇ ಯುವರಾಜನು" ಎಂದನು. ಆಗ ಕಾಂಚನಮಾಲೆಗೆ ಮೊಲೆಹಾಲು ಸುರಿಯಲು ಸಂತೋಷದಿಂದ ಅವರು ತಮ್ಮ ನಗರಕ್ಕೆ ಬಂದು ನಂದನವನದಲ್ಲಿದ್ದು ಕಾಂಚನಮಾಲೆಯು ಗೂಢಗರ್ಭದಿಂದ ಪುತ್ರನನ್ನು ಹಡೆದಳೆಂದು ಕಾಳಶಂಬರನು ಪಟ್ಟಣಕ್ಕೆ ಒಸಗೆಯನ್ನು ಕಳುಹಿದನು. ಪುರಜನರು ಸಂತೋಷದಿಂದ ಇದಿರ್ಗೊಂಡರು. ಕಾಳಶಂಬರನು ಇಂದ್ರವೈಭವದಿಂದ ಅರಮನೆಗೆ ಬಂದು ಮಗುವಿಗೆ ಜಾತಕರ್ಮವನ್ನೂ ಹತ್ತನೆಯ ದಿವಸದಲ್ಲಿ "ಪ್ರದ್ಯುಮ್ನ" ನೆಂದು ನಾಮಕರಣವನ್ನೂ ಮಾಡಿದನು. ಆ ಮಗುವು ಬಾಲಸೂರ್ಯನಂತೆ ಬೆಳೆದು ಅಕ್ಷರಾದಿ ಸಕಲ ವಿದ್ಯೆಗಳನ್ನು ಕಲಿತು ಯೌವನವನ್ನು ಹೊಂದಿ ಅತ್ಯಂತರೂಪ ಸೌಂದರ್ಯಯುತನಾದನು. ಒಂದುದಿನ

ಪ್ರದ್ಯುಮ್ನನು ಶುಚಿಯಾಗಿ ಹಿಮವತ್ಪರ್ವತದ ಸಿದ್ಧಕೂಟಕ್ಕೆ ಹೋಗಿ ಆರುತಿಂಗಳ ವರೆಗೆ ಅನೇಕ ವಿದ್ಯೆಗಳನ್ನು ಸಾಧಿಸಿಕೊಂಡು ಬಂದನು.

ಕಾಳಶಂಬರನಿಗೆ ಅಗ್ನಿರಾಜನೆಂಬ ಬಲಿಷ್ಠನಾದ ಶತ್ರುವು ಮಾರ್ವಲೆಯು ತ್ತಿದ್ದನು. ಅವನ ಮೇಲೆ ಕಾಳಶಂಬರನು ಯುದ್ಧಕ್ಕೆ ಹೋಗಬೇಕೆಂದಿರುವುದನ್ನು ತಿಳಿದು ಪ್ರದ್ಯುಮ್ನನು ತಂದೆಯ ಬಳಿಗೆ ಹೋಗಿ ಆ ಕೆಲಸವನ್ನು ತನಗೆ ವಹಿಸು ವಂತೆ ಕೇಳಿಕೊಂಡು ಅಪ್ಪಣೆ ಪಡೆದು ಬಹುಸೈನ್ಯದೊಡನೆ ಹೋಗಿ ಅಗ್ನಿರಾಜನ ಸೈನ್ಯವನ್ನು ಸೋಲಿಸಿ ಅವನನ್ನು ಸೆರೆಹಿಡಿದು ಅವನ ಉತ್ತಮ ವಸ್ತುಗಳನ್ನು ದೋಚಿಕೊಂಡು ಹಿಂದಿರುಗಿ ಬರಲು ಕಾಳಶಂಬರನು ಇದಿರ್ಗೊಂದು ತನ್ನ ಕಾಲ ಗೆರಗಿದ ಮನ್ಮಥನನ್ನು ಆಲಿಂಗಿಸಿ ಹರಸಿ ಪಟ್ಟದಾನೆಯಮೇಲೇರಿಸಿ ಬಹು ವೈಭವದಿಂದ ಪುರಪ್ರವೇಶಮಾಡಿಸಿದನು. ಎಲ್ಲಿ ನೋಡಿದರೂ ಸ್ತ್ರೀಯರು ಸುತ್ತು ಮುತ್ತಿ ಮದನಕುಮಾರನನ್ನು ನೋಡುತ್ತಿದ್ದರು. ಅವರ ಮನಸ್ಸಿನಲ್ಲಿ ಮನ್ಮ ಥನ ರೂಪವು ಖಚಿತವಾಗಿರಲು ಅಂದಿನಿಂದ ಸ್ಮರನಿಗೆ ಚಿತ್ತಜನೆಂದು ಹೆಸರಾಯ್ತು. ಕಾಳಶಂಬರನು ಉತ್ಸಾಹದಿಂದ ಪುತ್ರನನ್ನು ಅರಮನೆಗೆ ಕರೆದೊಯ್ದು ಉತ್ತಮ ಮುಹೂರ್ತದಲ್ಲಿ ಯುವರಾಜಪಟ್ಟವನ್ನು ಕಟ್ಟುವುದಕ್ಕಾಗಿ ತೀರ್ಥಜಲದಿಂದ ಮಜ್ಜನಮಾಡಿಸಿ ಹಾರ ಮುಕುಟ ಕುಂಡಲಾದಿ ಭೂಷಣಗಳಿಂದ ಭೂಷಿಸಿ ಸಿಹ್ಮಾಸನವನ್ನೇರಿಸಿದನು ಆಗ ಕಾಂಚನಮಾಲೆಯು ಕಂಠಹಾರವನ್ನು ತಂದು ಮಗನ ಕೊರಳಿಗೆ ಹಾಕಿದಳು. ಆಗ ಆ ನವಮನ್ಮಥನ ಅನುಪಮ ರೂಪ ಸೌಂದ ರ್ಯವನ್ನು ನೋಡಿ ಮೋಹಿತಳಾಗಿ ಕಾಂಚನಮಾಲೆಯು ಅವನಿಗೆ ತಾನು ತಾಯಿ ಯೆಂಬ ಭಾವವನ್ನು ಬಿಟ್ಟು ಪುಲ್ಲಶರನನ್ನು ಆತುರದಿಂದ ನೋಡಿದಳು. ಆಕೆಯ ಮೈ ನಡುಗಿತು. ಮುಖವು ವಿಕಾರವಾಯ್ತು. ಮೈಬೆಮರಿತು. ಹೀಗೆ ವಿಕಾರ ದೃಷ್ಟಿಯಿಂದ ನೋಡಿ ಒಂದು ಕ್ಷಣಕಾಲದ ಸುಖಕ್ಕೋಸುಗ ತನ್ನ ಧರ್ಮವನ್ನು ಮರೆತು ಆದರಿಂದ ತನಗೆ ಮುಂದೆ ನರಕಗತಿಯಾಗುವುದೆಂಬುದನ್ನೂ ಲೋಕದಲ್ಲಿ ಆಚಂದ್ರಾರ್ಕಸ್ಥಾಯಿಯಾದ ದೊಡ್ಡ ಅಪಕೀರ್ತಿಯು ಬರುವುದೆಂಬುದನ್ನೂ ಯೋ ಚಿಸದೆ ಸದಾಚಾರ, ಧರ್ಮ, ಸ್ವರ್ಗ, ಮೋಕ್ಷಗಳನ್ನು ಮರೆತು ತನ್ನ ಸವತಿಯರೂ ಪತಿಯೂ ತಿಳಿದರೆ ತನಗೆ ಕೆಡಕಾಗುವುದೆಂಬುದನ್ನು ಯೋಚಿಸದೆ ಲಜ್ಜೆಯನ್ನು ತೊರೆದು ತಾನು ಮೊಲೆಯುಣಿಸಿದ ಮಗನಲ್ಲಿ ಕೂಡಬೇಕೆಂದಿಚ್ಛಿಸಿದಳು ಆ ಪಾಪಿ ದುಷ್ಟೆ ದುರಾಚಾರಿಣಿ ಕಾಂಚನಮಾಲೆ. ಅಂತು ಸತ್ಯ ಸದಾಚಾರನಿಷ್ಠನಾದ

ಮನ್ಮಥನಲ್ಲಿ ಮನವಿಟ್ಟು ಅತ್ತ ಕಾಂಚನಮಾಲೆಯು ದಿನದಿನಕ್ಕೆ ವಿರಹಾಗ್ನಿಯಿಂದ ಬಳಲಿ ಬೆಂದು ಬೆಂಡಾಗುತ್ತಿದ್ದಳು.

ಇತ್ತ ಕಾಳಶಂಬರನು ಪ್ರದ್ಯುಮ್ನನಿಗೆ ಯುವರಾಜಪಟ್ಟವನ್ನು ಕಟ್ಟಿ ಬಹು ಸಂತೋಷದಿಂದಿದ್ದನು. ಒಂದುದಿನ ಚಿತ್ರಜನು ಅಗ್ನಿರಾಜನ ಬಂಧನವನ್ನು ಬಿಡಿಸಿ ಅವನನ್ನು ಅವನ ಊರಿಗೆ ಕಳುಹಿಸಿಕೊಟ್ಟು ಬಳಿಕ ತನ್ನ ತಂದೆಗೆ ಶತ್ರುಗಳಾಗಿದ್ದ ರಾಜರುಗಳನ್ನೆಲ್ಲ ಸೋಲಿಸಿ ತಂದೆಗೆರಗಿಸಿ ಸುಖದಿಂದಿರುವಾಗ ಅವನ ಕೀರ್ತಿಯನ್ನೂ ತೇಜಸ್ಸನ್ನೂ ನೀತಿಯನ್ನೂ ಲಾವಣ್ಯವನ್ನೂ ಚೆಲ್ವಿಕೆಯನ್ನೂ ಚಾತುರ್ಯವನ್ನೂ ನೋಡಿ ಸೈರಿಸದೆ ಕಾಳಶಂಬರನ ವಜ್ರದಾಡ ಮೊದಲಾದ ಐದು ಮಂದಿ ಮಕ್ಕಳು ಸ್ಮರನಲ್ಲಿ ಕಪಟಸ್ನೇಹವನ್ನು ಮಾಡಿ ಹೇಗಾದರೂ ಅವನನ್ನು ಕೊಲ್ಲಬೇಕೆಂದು ಹೊಂಚುಕಾಯುತ್ತಿದ್ದರು. ಇತ್ತ ಆ ಪಾತಕಿತಿ ಕಾಂಚನಮಾಲೆಯು ಮನ್ಮಥನಲ್ಲಿ ಭೋಗಕಾಂಕ್ಷೆಯಿಂದ ಗುಪ್ತವಾಗಿ ಕೊರಗುತ್ತಿದ್ದಳು.

---

## ೧೯. ಕಾಂಚನಮಾಲೆಯ ವಿರಹವರ್ಣನ ಸಂಧಿ.

ಕಾಂಚನಮಾಲೆಯು ತನಗೆ ವಿರಹವೇದನೆಯಿಂದಾದ ಜ್ವರವನ್ನು ರೋಗದಿಂದಾದ ಜ್ವರವೆಂದು ಪ್ರಕಟಮಾಡುತ್ತಿರಲು ಆ ಸಮಾಚಾರವನ್ನು ಮನ್ಮಥನು ಓರ್ವ ಸ್ತ್ರೀಯ ಮುಖದಿಂದ ಕೇಳಿ ಮರುಕದಿಂದ ತಾಯಿಯ ಬಳಿಗೆ ಹೋಗಿ "ಎಲೈ ತಾಯೆ! ನಿನಗೇಕೀದಾಹಜ್ವರವುಂಟಾಯ್ತು? ಹೇಳು" ಎಂದು ಕೇಳಿದನು. ಆ ಮಾತನ್ನು ಕೇಳಿ ಆಕೆಯು "ಹಿತವಲ್ಲದ ಭೋಜನದಿಂದ ನನಗೆ ಪ್ರಾಣತ್ಯಾಗವಾಗುವಂತಹ ದಾಹಜ್ವರವುಂಟಾಯ್ತು" ಎಂದು ಸುಳ್ಳುಹೇಳಿ "ಇತ್ತ ಬಂದು ನನ್ನ ಮೈಯನ್ನು ಮುಟ್ಟಿನೋಡು" ಎನಲು ಆತನು ಹತ್ತಿರಕ್ಕೆ ಹೋಗಿ ನಿಂತನು. ಆಗ ಆಕೆಯು ಆತನ ಕೈಯನ್ನು ಹಿಡಿದು ತನ್ನ ಘನಕುಚಗಳ ಮಧ್ಯದಲ್ಲಿರಿಸಿ "ಮದನ! ಕೇಳು, ನಿನ್ನಿಂದ ದೊರಕಿತು ನನಗೆ ಪರಿತಾಪ. ನಿನ್ನ ಸುರತಕ್ರೀಡೆಯಿಂದಲ್ಲದೆ ನಾನು ಬದುಕೆನು. ಇನ್ನು ಸಂದೇಹಪಡಬೇಡ" ಎಂದಳು. ಆ ಮಾತನ್ನು ಕೇಳಿ ಉನ್ನತಗುಣಭೂಷಣನಾದ ಮದನನು, ವಿಷವನ್ನು ಕಾರುವ ಸರ್ಪದ ಘಟದಲ್ಲಿ ಕೈಯನ್ನಿರಿಸಿ ಬೆದರಿ ತೆಗೆಯುವಂತೆ, ಆ ದುಷ್ಟೆಳ ಕುಚಗಳ ಮಧ್ಯದಿಂದ ಕೈಯನ್ನು ತೆಗೆದು ಭಯಕಂಪಿತನಾಗಿ ಆಕೆಯನ್ನು ಕುರಿತು

" ತಾಯೆ ! ಕೇಳು, ಮಗನೊಡನೆ ಹೀಗೆ ಅನ್ಯಾಯದ ನುಡಿಯನ್ನು ನ್ನುಡಿಯುಬ ಹುದೇ ? ತಾಯನ್ನು ಮೋಹಿಸಿದರೆ ಲೋಕದಲ್ಲಿ ಅನ್ಯಾಯವಾಗದೇ ? ಕಂಡವರು ಚೀ ಎನ್ನಲಿಕ್ಕಿಲ್ಲವೇ ? ಆ ಪಾಪಕಾರ್ಯಕ್ಕೆ ಸಮ್ಮತಿಸಿದವರನ್ನು ಭೂಮಿಯು ಬಾಯ್ದೆರೆದು ನುಂಗದಿರುವುದೇ ? ಅಪವಾದಕ್ಕಂಜದೆ ಕೊಕ್ಕರಿಸದೆ ಪಾಪಾಚಾರಿಗ ಳಾಗಿರುವವರನ್ನು ಮಾತನಾಡಿಸುವವರ ಬಾಯಲ್ಲಿ ಹುಳುಸೇಳದಿರುವುದೇ ? ಎತ್ತಿ ಆಡಿಸಿದ ಶರೀರವನ್ನು ಆಲಿಂಗಿಸಿ ತಾನುಂಡ ಮೊಲೆಯನ್ನು ಹಿಡಿದು ಹೆಂಡತಿಯಂತೆ ತಾಯನ್ನು ಭಾವಿಸಿದರೆ ಭೂಮಂಡಲವು ಬಹಿಷ್ಕರಿಸದಿರುವುದೇ ? " ಈ ಮೊದ ಲಾದ ನುಡಿಗಳಿಂದ ಬೋಧಿಸಿದರೂ ಕೇಳದೆ ಆಕೆಯು " ಎಲೈ ಮದನನೆ ! ಕೇಳು, ನಾನು ನಿನಗೆ ತಾಯಲ್ಲ. ನಿನ್ನನ್ನು ವನದ ತಸ್ಕರಶಿಲೆಯಲ್ಲಿ ಕಾಳಶಂಬರನು ಕಂಡು ಕರುಣದಿಂದ ತಂದು ನನಗೆ ಕೊಡಲು ನಾನು ನಿನ್ನನ್ನು ಮರುಕದಿಂದ ಸಾಕಿದೆನು. ನೀನು ನನಗೆ ಮಗನಲ್ಲವೆಂಬುದಕ್ಕೆ ದೃಷ್ಟಾಂತವನ್ನು ಹೇಳುವೆನು,—ಈ ಕಾಳಶಂ ಬರಖೇಚರನ ಸಂತತಿಯವರಿಗೆ ಪ್ರಜ್ಞಪ್ತಿಯೆಂಬ ವಿದ್ಯೆಯು ಸಿದ್ಧಿಸುವುದಿಲ್ಲ. ಅವರು ಅದನ್ನು ತಮ್ಮ ಪ್ರಿಯಪತ್ನಿಯರ ವಶಮಾಡಿ ಇರಿಸುವರು. ಅದು ನನ್ನ ಕೈ ವಶವಾಗಿದೆ. ಅದನ್ನು ನಿನಗೆ ಕೊಡುವೆನು. ನೀನು ಬೇರೆಯವನಾದರೆ ನಿನಗಾ ವಿದ್ಯೆಯು ಸಾಧ್ಯವಾಗುವುದು. ನೀನು ನನ್ನ ಮಗನಾದರೆ ಅದು ನಿನ್ನನ್ನು ಸೇ ರದು. ನೀನು ನನ್ನ ಮಗನಲ್ಲವೆಂಬುದಕ್ಕೆ ಇದು ಪ್ರತ್ಯಕ್ಷನಿದರ್ಶನವು " ಎಂ ದಳು. ಆ ಮಾತನ್ನು ಕೇಳಿ ಮದನನು ಆ ವಿದ್ಯೆಯನ್ನು ಕಲಿಯಬೇಕೆಂಬ ಅಭಿಲಾ ಷೆಯಿಂದ " ಎಲೈ ತಾಯೆ ! ಉತ್ತಮವಾದ ಆ ವಿದ್ಯೆಯನ್ನು ನನಗೆ ಕೊಡು ' ಎನಲು ಆಕೆಯು ತನ್ನ ಮಾತಿಗೆ ಮೀನಕೇತನನು ಒಡಂಪಟ್ಟನೆಂದು ಸಂತೋಷ ದಿಂದ ಆ ವಿದ್ಯಾಮಂತ್ರವನ್ನುಪದೇಶಮಾಡಿ ವಿಜಯಾರ್ಧಗಿರಿಯ ಪೂರ್ವದಿಕ್ಕಿ ನಲ್ಲಿರುವ ಸಿದ್ಧಕೂಟಕ್ಕೆ ಹೋಗಿ ಅದನ್ನು ಸಾಧಿಸುವಂತೆ ಹೇಳಿದಳು. ಪಂಚಶರನು ಅಲ್ಲಿಗೆ ಹೋಗಿ ಆ ಮಂತ್ರದಿಂದ ವಿದ್ಯೆಯನ್ನು ಸಾಧಿಸುತ್ತಿ ರಲು ಇತ್ತ ಕಾಂಚನಮಾಲೆಯು ಉಡಿಗೆ ಊಟಗಳನ್ನೂ ಮರೆತು ಚಿತ್ತಜನು ಎದುರಿಗೆ ಬರುವನೆಂದು ಚಿಂತಿಸುತ್ತಿದ್ದಳು, ಆಕೆಗೆ ಹಿತವನ್ನು ಬೋಧಿಸುವುದ ಕ್ಕಾಗಿ ಸ್ಮರನು ಅವಲೋಕಿನಿಯೆಂಬ ವಿದ್ಯಾದೇವತೆಯನ್ನು ಕಳುಹಲು ಅದು ಕಾಂಚನಮಾಲೆಯ ಸಖಿಯ ರೂಪವನ್ನು ಧರಿಸಿಕೊಂಡು ಆಕೆಯ ಸಮೀಪಕ್ಕೆ ಬಂದು ಆಕೆಯ ಕಂದಿ ಕುಂದಿದ ಅವಯವಗಳನ್ನು ನೋಡಿ ಕೆಲವು ಪರೀಕ್ಷೆಗಳಿಂದ ಅದು ವಿರಹಜ್ವರವಲ್ಲದೆ ದಾಹಜ್ವರವಲ್ಲವೆಂದು ನಿಶ್ಚಯಿಸಿ ಆ ರಹಸ್ಯವನ್ನು ತನ್ನಲ್ಲಿ

ಹೇಳಬೇಕೆಂದು ಕಾಂಚನಮಾಲೆಯನ್ನು ಕಾಡಿ ಬೇಡಲು ಆಕೆಯು ಆ ಸಖಿಯಿಂದ ಭಾಷೆಯನ್ನು ತೆಗೆದುಕೊಂಡು ಮನ್ಮಥನ ಮನೋಹರಾಕಾರವನ್ನು ನೋಡಿದುದ ರಿಂದ ತನ್ನ ಶರೀರದಲ್ಲಿ ವಿರಹಾಗ್ನಿಯುಂಟಾದುದೆಂದಳು. ಆ ಮಾತನ್ನು ಕೇಳಿ ಸಖಿಯು ಚಕಿತಳಾಗಿ ಕಾಂಚನಮಾಲೆಯನ್ನು ಕುರಿತು "ಸಖಿಯೆ! ರಾಜನ ಪತ್ನಿ ಯರಲ್ಲಿ ನೀನೇ ಸಲಿಗೆಯುವಳು. ಕುಲ ಜಾತಿ ರೂಪ ಯೌವನ ಸರ್ವವಿದ್ಯಾಕಲೆಗಳ ಲ್ಲಿ ನಿನಗಿಂತ ಹೆಚ್ಚಿನ ಸ್ತ್ರೀಯರು ಈ ಮನೆಯಲ್ಲಿ ನಿನ್ನ ಗಂಡನಿಗೆ ಹಲವರಿದ್ದಾರೆ. ಆದ ರೂ ಅವನು ತನ್ನ ತನುಮನಗಳನ್ನು ನಿನ್ನಲ್ಲಿಟ್ಟು ನಿನಗೆ ಯಜಮಾನಪಟ್ಟವನ್ನು ಕೊಟ್ಟಿ ರುವನು. ಗಂಡನು ಯಾವ ಮಡದಿಯನ್ನು ಹೆಚ್ಚಾಗಿ ಪ್ರೀತಿಸುತ್ತಾನೋ ಅದು ಆಕೆಯ ಪೂರ್ವಪುಣ್ಯವೆಂದು ಬಗೆಯದೆ ಸವತಿಯರು ಆಕೆಯು ಗಂಡನಿಗೆ ಮದ್ದು ಹಾಕಿದ್ದಾಳೆಂದು ಹೇಳುತ್ತಾರೆ. ಅವಳು ದೋಷಿಯಾಗುವುದನ್ನೇ ಕಾದಿದ್ದು ಸ್ವಲ್ಪ ದೋಷವು ಸಿಕ್ಕಿದರೆ ಅದನ್ನು ಜನಜನಿತಮಾಡುತ್ತಾರೆ." ಎಂದು ಮೊದ ಲಾಗಿ ಹಲವು ವಿಧಗಳಿಂದ ಬೋಧಿಸಿದರೂ ಕಾಂಚನಮಾಲೆಯು ಕೇಳದಿರಲು ಕೊನೆಗೆ ತಾನು ಅನಲೋಕಿನಿಯೆಂಬ ದೇವತೆಯೆಂದೂ ಆಕೆಗೆ ಹಿತಬೋಧೆಯನ್ನು ಮಾಡುವುದಕ್ಕಾಗಿ ಸ್ಮರನು ತನ್ನನ್ನು ಕಳುಹಿದನೆಂದೂ ಆ ಬೋಧೆಯನ್ನು ಕೇಳ ದಿರುವುದರಿಂದ ಕಾಂಚನಮಾಲೆಗೆ ಕೇಡಾಗುವುದೆಂದೂ ಹೇಳಿ ಅದೃಶ್ಯವಾದಳು.

ಅತ್ತ ಮದನನು ವಿದ್ಯೆಯನ್ನು ಸಾಧಿಸಿಕೊಂಡು ಜಿನಭವನಕ್ಕೆ ಹೋಗಿ ತ್ರಿಪ್ರದಕ್ಷಿಣೆಯನ್ನು ಮಾಡಿ ಕೈಮುಗಿದು ವಂದಿಸಿ ಅಲ್ಲಿದ್ದ ಜ್ಞಾನಾಂಬುಧಿಚಂದ್ರ ರೆಂಬ ಮುನಿವರ್ಯರನ್ನು ಕಂಡು ಅವರಿಗೆ ನಮಸ್ಕಾರಮಾಡಿ ಆ ದಿವ್ಯಜ್ಞಾನಿಗ ಳಿಂದ ತನ್ನ ತಂದೆತಾಯಿಗಳಾರೆಂಬ ವಿವರವನ್ನು ಕೇಳಿ ತಿಳಿದು ಮತ್ತೆ ನಗರಕ್ಕೆ ಬಂದನು. ಅದನ್ನು ತಿಳಿದು ಕಾಂಚನಮಾಲೆಯು ಸರ್ವಾಭರಣಭೂಷಿತೆಯಾಗಿ ಮದನನ ಸದನಕ್ಕೆ ಹೋಗಿ "ನೀನು ಬೇಡಿದ ಇಚ್ಛೆಯನ್ನಿತ್ತೆನು. ನೀನೆನ್ನ ಜೀವವನ್ನುಳಿಸು. ನನ್ನಲ್ಲಿ ಕೂಡು" ಎಂದಳು. ಆ ಮಾತನ್ನು ಕೇಳಿ ತನ್ನ ಕಿವಿಗ ಳಿಗೆ ಎರಡು ಕೈಗಳನ್ನಿಟ್ಟು ಪರಿಪರಿಯಾಗಿ ಹಿತವಚನಗಳನ್ನು ಹೇಳಿದರೂ ಕೇಳ ದಿರಲು ಅವನು ತಾನು ಅಲ್ಲಿರುವುದುಚಿತವಲ್ಲವೆಂದು ಬಗೆದು ಏಳ್ವಾಗ "ಪ್ರಾಣ ವನ್ನುಳಿಸು" ಎಂದು ಆಕೆಯು ಬಂದು ಪಂಚಬಾಣನ ಪಂಚೆಯ ಸೆರಗನ್ನು ಹಿಡಿ ದಳು. ಆಗ ಮನ್ಮಥನು "ಬಿಡು ಬಿಡು ಸೆರಗನ್ನು" ಎಂದು ಸೆರಗನ್ನು ಎಳೆದು ಬಿಡಿಸಿಕೊಂಡು ಹೊರಡಲು ಹಜ್ಜೆಯಿಡುವಾಗ ಆತನ ಕಾಲುಗಳನ್ನು ಹಿಡಿದು ಕೊಂಡಳು. ಮಾರನು ಕಾಲುಗಳನ್ನು ಒದರಿ ಬಿಡಿಸಿಕೊಂಡನು. ಆಗ ಆಕೆಯು

ತುರುಬು ಬಿಚ್ಚಿ ಹೋದುದು. ಬಳೆಗಳು ಒಡೆದುವು. ಮುತ್ತು ರತ್ನಗಳ ಹಾರಗಳು ಕಿತ್ತುಹೋದುವು. ಕಂಕಣಗಳ ಕೀಲುಗಳು ಸಡಿಲಿ ಕಳಚಿದುವು. ಆಗ ಕಾಂಚನ ಮಾಲೆಯು ರೇಗಿ ಎದೆಯನ್ನು ತಟ್ಟಿಕೊಂಡು "ನಿನಗೆ ತಕ್ಕುದನ್ನು ಮಾಡುವೆನು. ಎಲವೋ ನಿನ್ನ ಪ್ರಾಣವನ್ನು ತೆಗೆದುಕೊಳ್ಳದಿದ್ದರೆ ನಾನು ಹೊತ್ತವು ಮೊಲೆಗಳೇ? ಎಕ್ಕೆಯ ಕಾಯಿಗಳು" ಎಂದು ನುಡಿಯಲು "ಹಾಗೆಯೇ ಮಾಡಿ" ಎಂದು ಹೇಳಿ ಮನ್ಮಥನು ಹೊರಟುಹೋದನು.

ಇತ್ತ ಆ ಕಾಂಚನಮಾಲೆಯು ವಿರಹಾಗ್ನಿಯಲ್ಲಿ ಕೋಪಾಗ್ನಿಯೂ ಬೆರೆತು ಇಮ್ಮಡಿಯಾಗಲು ಆಕೆಯು ಸ್ಮರನಿಗೆ ಕೇಡನ್ನೆಣಿಸಿ ಹಾರವನ್ನು ಹರಿದು ಕೂದಲುಗಳನ್ನು ಕೆದರಿ ಸೀರೆಯನ್ನು ಹರಿದು ಬಳೆಯೊಡೆದು ಮೈಯನ್ನು ಗೀರಿಕೊಂಡು ಪ್ರದ್ಯುಮ್ನನನ್ನು ಕೊಲ್ಲಿಸದಿದ್ದರೆ ತನಗೇತರ ಬಾಳೆಂದು ಮನೆಯೊಳಗಿರುವಾಗ ಅಲ್ಲಿಗೆ ಕಾಳಶಂಬರನು ಬಂದು "ನಿನ್ನ ಕೋಮಲಶರೀರವು ಕೊರಗಿದ ಕಾರಣವೇನು? ಹೇಳು" ಎನಲು ಆ ಮಾತನ್ನು ಕೇಳಿ ಆಕೆಯು ಗದ್ಗದಕಂಠೆಯಾಗಿ ಇಂತೆಂದಳು:—

"ಆ ಕಾಡಿನ ತಸ್ಕರಶಿಲೆಯಲ್ಲಿ ಬಿದ್ದು ನರಿ ನಾಯಿಗಳ ಪಾಲಾಗುವವನನ್ನು ತಂದು ನನಗೀಯಲು ನಾನು ನನ್ನ ಮಗನಂತೆ ರಕ್ಷಿಸಿದೆನು. ಆತನು ಹೆಚ್ಚಿ ಬೆಳೆದು ನನ್ನ ರೂಪವನ್ನು ನೋಡಿ, ಹಸುವಿನ ಬಸಿರಿಂ ಬಂದ ಕರುವು ಬಲಿತು ಆ ಹಸುವಿನ ಮೇಲ್ವಾಯ್ವಂತೆ, ನನ್ನ ಮೇಲ್ವಾಯುವುದಕ್ಕೆ ಬರಲು ನಾನೊಪ್ಪದೆ ಅವನನ್ನು ಕುರಿತು ಹೀಗಂದೆನು—'ಮಗನೆ! ಬೇಡ, ಹೆತ್ತತಾಯಿಯ ಮೇಲೆ ಕಣ್ಣಿಟ್ಟು ನೋಡಿ ಮೋಹಿಸಿ ಇಹಪರಗಳನ್ನು ಕೆಡಿಸಿ ನನ್ನನ್ನು ಅಪವಾದಕ್ಕೆ ಗುರಿಮಾಡಬೇಡ. ಪಟ್ಟಕ್ಕೆ ಬರತಕ್ಕ ಮಕ್ಕಳನ್ನು ಕೈಬಿಟ್ಟು ನಿನಗೆ ಯುವರಾಜ ಪಟ್ಟವನ್ನು ಕಟ್ಟಿಸಿದೆನು. ತಂದೆಯ ಗೌರವವನ್ನು ಕಾಪಾಡುವ ಪುತ್ರರು ಈ ಕಾರ್ಯವನ್ನೆಣಿಸಿದರೆ ತಾಯಿಯು ರಕ್ಕಸಿಯಾದಂತಲ್ಲವೆ? ಹೆತ್ತಮಗನೇ! ನೀನೆನ್ನ ಮೋಹಿಸುವುದುಚಿತವೇ?' ಎನಲು ಅವನು ನನ್ನನ್ನು ಒತ್ತಿಹಿಡಿದು ಸೀರೆಯನ್ನು ಹರಿದು ತಲೆಗೂದಲುಗಳನ್ನು ಕಿತ್ತು ಕೆಡವಿ ಮೈಯನ್ನು ಪರಚಿ ಹಾರವನ್ನು ಕಿತ್ತು ಮೊಲೆಗಳ ಮೇಲಿನ ಸೆರಗನ್ನು ತೆಗೆದು ಉಟ್ಟಸೀರೆಯ ನಿರಿಯನ್ನು ಬಿಚ್ಚುವಾಗ ನಾನು 'ಅಯ್ಯಯ್ಯೋ' ಎಂದು ಕಿರಿಚಿಕೊಳ್ಳಲು ಆ ದುಷ್ಟನು ಓಡಿಹೋದನು. ಈ ಅಪಮಾನವನ್ನು ಹೊತ್ತುಕೊಂಡು ಯಾವ ಮೋರೆಯಿಂದ ನಾನು ಈ ಮನೆಯಲ್ಲಿ ಸವತಿಯರ ಮುಂದೆ ಮೊದಲಿನಂತೆ ನಿನ್ನೊಡನೆ ಮನ್ನಣೆಯಿಂದ ಬಾಳುವುದು?"

ಕಾಳಶಂಬರನು ಕಾಂಚನಮಾಲೆಯ ಮಾತನ್ನು ಕೇಳಿ ಬಹುಕೋಪವನ್ನು ತಾಳಿ ಮಾರನನ್ನು ಈಗಲೇ ಕೊಲ್ಲಿಸುವೆನೆಂದು ಅರಮನೆಯಿಂದ ಹೊರಟು ವಜ್ರ

ದಾಡಾದಿ ಪುತ್ರರನ್ನು ಕರೆಯಿಸಿ ಪ್ರದ್ಯುಮ್ನನನ್ನು ಶೀಘ್ರವಾಗಿ ಕೊಂಡುಬರುವಂತೆ ಹೇಳಲು ಅವರು ಹೋಗಿ ಮಾರನಲ್ಲಿ ಹೆಚ್ಚಾದ ಕಪಟಸ್ನೇಹವನ್ನು ಬೆಳೆಯಿಸಿ ವಿದ್ಯಾ ಸಾಧನೆಗೆಂದು ಅವನನ್ನು ಹೊರಡಿಸಿ ಅವನೊಡನೆ ವಿಮಾನವನ್ನೇರಿ ವಿಜಯಾರ್ಧಗಿರಿ ಯ ಸಿದ್ಧಕೂಟಕ್ಕೆ ಹೋಗಿ ದೇವರ ದರ್ಶನವನ್ನು ಮಾಡಿ ಭಜಿಸಿ ಮನ್ಮಥನನ್ನು ಕುರಿ ತು " ಈ ಸಿದ್ಧಕೂಟದ ತುತ್ತತುದಿಯಲ್ಲಿ ಉತ್ತಮವಸ್ತುಗಳನ್ನು ಒಂದು ಸರ್ಪವು ರಕ್ಷಿಸುತ್ತಿರುವುದು. ಅಲ್ಲಿಗೆ ಹೋಗಿ ಅದನ್ನು ಹೊಡೆದು ಆ ವಸ್ತುಗಳನ್ನು ತರಬೇ ಕು" ಎಂದು ಹೇಳಿ ವಜ್ರದಾಡನು ತಾನು ಅದನ್ನು ತರಲು ಹೋಗುವುದಾಗಿ ಹೇಳಲು ಮಾರನು ನಗುತ್ತ ತಾನು ಹೋಗಿ ತನ್ನ ಮೇಲಟ್ಟಾಯ್ದು ಬಂದ ಆ ಸರ್ಪವನ್ನು ಹೊಡೆ ದನು. ಆಗ ಅದು ತನ್ನ ದಿವ್ಯರೂಪವನ್ನು ತೋರಿ ಕಾಮಚಂಡಾಳಿನಿ ಸಮವಿದ್ಯೆ ಅತಿವಿದ್ಯೆ ಸಿಹ್ಮಪೀಠ ಚಾಮರ ಛತ್ರಿ ಇವುಗಳನ್ನಿತ್ತು " ಮೊದಲೋರ್ವ ಖೇಚ ರನು ಈ ವಸ್ತುಗಳನ್ನು ನನ್ನಲ್ಲಿ ಕೊಟ್ಟು ತಪಸ್ಸಿಗೆ ಹೋಗುವಾಗ ನನ್ನನ್ನು ಕುರಿ ತು ' ಸರ್ಪರೂಪವನ್ನು ಧರಿಸಿ ನೀನಿಲ್ಲಿರುವಾಗ ನಿನ್ನ ಬಳಿಗೆ ಬಂದು ನಿನ್ನನ್ನು ಹೊಡೆದ ವನಿಗೆ ಈ ವಸ್ತುಗಳನ್ನು ಕೊಡು ' ಎಂದು ಹೇಳಿರುವುದರಿಂದ ನಾನೀರೂಪವನ್ನು ಹೊಂದಿದ್ದೆನು. " ಎಂದನು. ಅದಕ್ಕೆ ಸ್ಮರನು ತಾನು ಸ್ಮರಿಸಿದಾಗ ಆ ವಸ್ತುಗ ಗಳನ್ನು ತನಗೆ ಕೊಡಬೇಕೆಂದು ಆ ದೇವನಿಗೆ ಹೇಳಿ ಹೊರಟುಬಂದನು. ಅವನನ್ನು ಕಂಡು ವಜ್ರದಾಡಾದಿಗಳು ಚೋದ್ಯವಟ್ಟು ಮುಂದೆ ಒಂದು ಉರಿವ ಅಗ್ನಿಕುಂಡ ವನ್ನು ತೋರಿದರು. ಮಾರನು ಅದನ್ನು ಹೊಕ್ಕಲು ಬೆಂಕಿಯು ತಣ್ಣಗಾಗಿ ಅಲ್ಲಿಂದ ಅಗ್ನಿಕುಮಾರನು ಹೊರಟುಬಂದು ದಿವ್ಯವಸ್ತ್ರವನ್ನೂ ರತ್ನಾಭರಣವನ್ನೂ ಕೊಟ್ಟುಹೋದನು. ಮತ್ತೊಂದೆಡೆಯಲ್ಲಿ ಎರಡು ಮೇಷಪಾಷಾಣಗಳು ಬಹು ಭಯಂಕರವಾಗಿ ತಾಕುಬಡಿಯುತ್ತಿದ್ದುವು. ಮಾರಕುಮಾರನನ್ನು ಅಲ್ಲಿಗೆ ಕರೆ ದೊಯ್ಯಲು ಅವನು ಆ ಕಲ್ಲುಗಳನ್ನು ಒತ್ತಿ ಹಿಡಿದನು. ಆಗ ಮೇಷಾಸುರನು ಅವನಿಗೆ ಮಕರಕುಂಡಲವನ್ನಿತ್ತನು. ಮುಂದೆ ಸೂಕರಗಿರಿಯ ಗುಹೆಗೆ ಕರೆದೊ ಯ್ಯಲು ಅಲ್ಲಿ ಸೂಕರಾಸುರನು ಲೋಕಪೂರಣವೆಂಬ ಶಂಖವನ್ನಿತ್ತನು. ಕಾಳಗು ಹೆಯಲ್ಲಿ ಕಾಳಾಸುರನು ಕಾಳದಂಡವೆಂಬ ಗದೆಯನ್ನಿತ್ತನು. ಬಲಿಮುಖಗಿರಿಯಲ್ಲಿ ಬಲಿಮುಖದೇವನು ರತ್ನಕಿರೀಟವನ್ನಿತ್ತನು. ಮಲ್ಲಗಿರಿಯ ಗುಹೆಯಲ್ಲಿ ಮಲ್ಲಾ ಸುರನು ಗುರಾಣಿಯನ್ನಿತ್ತನು. ಉರಗಗುಹೆಯಲ್ಲಿ ಉರಗರಾಕ್ಷಸನು ಕಾಮ ವಿಮಾನವನ್ನಿತ್ತನು. ಕಚ್ಛವೆಂಬ ಹೊಂಡದಲ್ಲಿ ತುರಗಾಸುರನು ಅಶ್ವರತ್ನವನ್ನಿತ್ತನು. ಗಜಮುಖಗುಹೆಯಲ್ಲಿ ಗಜರಾಕ್ಷಸನು ತ್ರಿಜಗದ್ಭೂಷಣವೆಂಬ ಗಜರತ್ನವನ್ನಿತ್ತನು.

ಒಂದು ಸರೋವರದಲ್ಲಿ ಜಲಾಸುರನು ಕಾಮುಚಕ್ರವನ್ನಿತ್ತನು. ಅಕ್ಷುವೆಂಬ ಗುಹೆ ಯಲ್ಲಿ ಭೀಮಾಸುರನು ಕಾಮಧೇನುವನ್ನಿತ್ತನು. ರಥಪರಿವೃಢವೆಂಬ ಗಿರಿಯಲ್ಲಿ ರಥರಾಕ್ಷಸನು ಮಕರಧ್ವಜಯುಕ್ತವಾದ ಪುಷ್ಪರಥವನ್ನಿತ್ತನು. ಬಲಾಹಕಗುಹೆ ಯಲ್ಲಿ ಹೆಬ್ಬುಲಿಯು ಪುಷ್ಪಬಾಣವನ್ನೂ ಇಕ್ಷುಧನುಸ್ಸನ್ನೂ ಕೊಟ್ಟಿತು. ಕದಂಬಕ ದ ಸವೆಂಬ ಬಾವಿಯಲ್ಲಿ ಕದನವಿಜಯನೆಂಬ ನಾಗಪಾಶವನ್ನು ದೊರಕಿಸಿದನು. ವೈಜ ಯಂತಗಿರಿಯನ್ನು ಹತ್ತಿ ಅಲ್ಲೋರ್ವ ರಾಕ್ಷಸನ ಗದೆಯನ್ನು ಕಿತ್ತುಕೊಂಡು ಅವನನ್ನು ಸದೆಬಡಿಯಲು ಆವನು ಮನುಷ್ಯರೂಪವನ್ನು ಧರಿಸಿ " ಈ ವಿಜಯಾರ್ಧ ಗಿರಿಯ ವಿಜಯನಗರದ ಅಜಿತಂಜಯನೆಂಬ ಖೇಚರನಿಗೂ ಆತನ ಸತಿ ಶಚಿಯೆಂಬ ವಳಿಗೂ ಹುಟ್ಟಿದ ಹೇಮಾಂಗದನೆಂಬ ಮಗನು ನಾನು. ಅನುಪಮ ರೂಪವತಿ ಯಾದ ರತಿಯು ನನ್ನ ತಂಗಿ. ಆಕೆಯ ಅವಯವ ಸೌಂದರ್ಯವನ್ನು ನೋಡಲು ಶತಸಹಸ್ರನೇತ್ರಗಳಾಗಬೇಕು. ಈಕೆಗೆ ಯೌವನವು ಪ್ರಾಪ್ತವಾಗಲು ' ಈಕೆಗೆ ಅನುರೂಪನಾದ ಪುರುಷನಿದ್ದಾನೆಯೇ? ' ಎಂದು ನಮ್ಮ ತಂದೆಯು ಓರ್ವ ಶಕುನಿಗ ನನ್ನು ಕೇಳಲು ಅವನು ' ವೈಜಯಂತಪರ್ವತದ ತುದಿಯ ಕೋಡುಗಲ್ಲಿನಲ್ಲಿ ನಿನ್ನ ಮಗನು ರಾಕ್ಷಸರೂಪವನ್ನು ಧರಿಸಿರಲು ಅವನನ್ನು ಬೆದರಿಸುವ ಪುರುಷನು ನಿನ್ನ ಮಗಳಿಗೆ ಪತಿಯಾಗುವನು ' ಎನಲು ಆ ಮಾತನ್ನು ಕೇಳಿ ನಮ್ಮ ತಂದೆಯು ಈ ತಂಗಿ ಸಹಿತ ನನ್ನನ್ನೀಪರ್ವತಕ್ಕೆ ಕಳುಹಲು ನಾನೀರೂಪವನ್ನು ಧರಿಸಿ ಇಲ್ಲಿದ್ದೆನು. ಆ ಶಕುನಿಗನು ಹೇಳಿದಂತೆ ನೀನೀಗ ಬಂದು ನನ್ನನ್ನು ಗೆದ್ದುದರಿಂದ ನನ್ನ ತಂಗಿಯಾದ ರತಿಯನ್ನು ಪರಿಗ್ರಹಿಸು " ಎಂದು ತನ್ನ ಹಿಂದೆ ನಿಂತಿದ್ದ ರತಿಯನ್ನು ಮನ್ಮಥನಿಗೆ ತೋರಿದನು ಸಮರೂಪ ಸಮಯೌವನ ಸಮಲಾವಣ್ಯಾದಿಗಳುಳ್ಳ ರತಿಮನ್ಮಥ ರು ಆಗ ಒಬ್ಬರಿಗೊಬ್ಬರು ಅನುರಾಗದಿಂದ ನೋಡಿದರು. ಬಳಿಕ ಅಂಗಜನು ತಾನು ಕರೆಯಲು ಕಳುಹುವವರೆಗೂ ರತಿಯು ತಂದೆಯ ಬಳಿಯಲ್ಲಿರಲೆಂದು ಹೇಳಿ ಮುಂದೆ ನಡೆದು ಸಹಸ್ರಮುಖದ ಹುತ್ತವನ್ನು ಹೊಕ್ಕು ಕಾಮಮುದ್ರಿಕೆಯನ್ನು ತೆಗೆದು ಕೊಂಡು ಬಂದನು. ಈ ರೀತಿಯಾಗಿ ಬಂದ ಮದನನನ್ನು ಕಂಡು ವಜ್ರದಾಡಾದಿ ಗಳು " ನಾವೊಂದು ಮಾಡಲು ತಾನೊಂದಾಗುವುದು. ಇವನಿಗೆ ಪುಣ್ಯದ ಬಲ ವುಂಟು ' ಎಂದು ಮನಸ್ಸಿನಲ್ಲಿ ಯೋಚಿಸಿ ಮನ್ಮಥನನ್ನು ಕುರಿತು " ಎಲೈ ವೀರನೆ! ಪೂರ್ವಭವದಲ್ಲಿ ಮಾಡಿದ ಪುಣ್ಯದಿಂದ ಇವು ನಿನಗೆ ಸೇರಿದುವು " ಎಂದು ಕಪಟ ವಿನಯದ ಮಾತನ್ನಾಡಿ ತಮ್ಮ ಪಟ್ಟಣದ ಮುಂದಣ ವನದ ಹಳೆಯ ಬಾವಿಯ ಬಳಿಗೆ ಅವನನ್ನು ಕರೆದೊಯ್ದು " ಈಬಾವಿಯಲ್ಲಿ ಉತ್ತಮವಾದ ವಸ್ತುಗಳಿರುತ್ತವೆ.

ಇದಕ್ಕಿಳಿದರೆ ಅವು ಸಾಧ್ಯವಾಗುವುವು. ಇದುನಿಶ್ಚಯ'' ಎನಲು ಅವರ ಕಾಪಟ್ಯವನ್ನು ಮದನನು ತಿಳಿದು ರೂಪಪರಾವರ್ತನವೆಂಬ ವಿದ್ಯೆಯಿಂದ ತನ್ನ ರೂಪವನ್ನು ನಿರ್ಮಿಸಿ ಅದನ್ನು ಬಾವಿಗಿಳಿಸಿ ತಾನು ಅದೃಶ್ಯನಾಗಿ ನೋಡುತ್ತಿರಲು ಅವರು ಇದೇ ಸಮಯವೆಂದು ಅನೇಕ ಕಲ್ಲುಗಳನ್ನು ಆ ಬಾವಿಯೊಳಕ್ಕೆ ಬಿಸುಟು " ಶತ್ರುವು ಸತ್ತನು, ನಮಗಿನ್ನು ಲೇಸಾಯಿತು '' ಎನ್ನುವ ಸಮಯದಲ್ಲಿ ಮದನನು ಪ್ರತ್ಯಕ್ಷನಾಗಿ ಕೋಪದಿಂದ ಅವರನ್ನು ಹಿಡಿದು ನಾಗಪಾಶದಿಂದ ಬಂಧಿಸಲು ಅದನ್ನು ತಿಳಿದು ಕಾಳಶಂಬರನು ತನ್ನ ಸೈನ್ಯಸಮೇತನಾಗಿ ಬರುವುದನ್ನು ಕಂಡು ಮಾರನು ಅದಕ್ಕಿಮ್ಮಡಿಯಾದ ಬಲವನ್ನು ವಿದ್ಯೆಯಿಂದ ನಿರ್ಮಿಸಿ ಯುದ್ಧಸನ್ನದ್ಧನಾಗಿ ನಿಂತಿರಲು ಆಗ ಆಕಾಶದಿಂದ ನಾರದನು ಇಳಿದು ಬಂದು ಅವರೀರ್ವರ ಮಧ್ಯದಲ್ಲಿ ನಿಂತು ' ಎಲೈ ಖೇಚರರಾಜನೆ ! ಪರೀಕ್ಷಿಸದೆ ಸ್ತ್ರೀಯರ ಮಾತನ್ನು ನಂಬಿ ನೀವು ಪರಸ್ಪರವಾಗಿ ಹೋರಾಡಿದರೆ ಅಪಕೀರ್ತಿಯು ಬಾರದಿರುವುದೇ ? '' ಎನಲು ಆ ಮಾತನ್ನು ಕೇಳಿ ಕಾಳಶಂಬರನು ಯುದ್ಧವನ್ನು ನಿಲ್ಲಿಸಿದನು. ಆಗ ನಾರದನು ಕಾಳಶಂಬರನಿಗೆ ಮನ್ಮಥನ ಪರಿಚಯವನ್ನೆಲ್ಲ ಹೇಳಿ ಪುತ್ರನನ್ನು ಹುಡುಕುವುದಕ್ಕಾಗಿ ಕೃಷ್ಣರುಗ್ಮಿಣಿಯರು ಕಳುಹಲು ತಾನು ಶ್ರೀಮಂದರ ತೀರ್ಥಂಕರರ ಸಮವಸರಣಕ್ಕೆ ಹೋಗಿ ಗಣಧರರಿಂದ ಎಲ್ಲಾ ವಿಷಯವನ್ನು ಮತ್ತು ಕಾಂಚನಮಾಲೆಯು ಮಾಯೆಯನ್ನು ನಿಜವೆಂದು ನಂಬಿ ಕಾಳಶಂಬರನು ಮಾಡುತ್ತಿರುವ ಯುದ್ಧಸಮಾಚಾರವನ್ನು ಕೇಳಿ ಬಂದೆನೆಂದೂ ಮನ್ಮಥನನ್ನು ತಂದೆತಾಯಿಗಳ ಬಳಿಗೆ ಈಗಲೇ ಕಳುಹೆಂದೂ ಹೇಳಿದನು. ಆ ಮಾತನ್ನು ಕೇಳಿ ಕಾಂಚನಮಾಲೆಯು ಲಜ್ಜಿತೆಯಾಗಿ ವೈರಾಗ್ಯದಿಂದ ಜಿನದೀಕ್ಷೆಯನ್ನು ಧರಿಸಿದಳು. ಕಾಮನು ವಜ್ರದಾಡ ಮೊದಲಾದವರ ಬಂಧನವನ್ನು ಬಿಡಿಸಿದನು. ನಾರದನು ಕಾಳಶಂಬರನಿಗೆ ಸಮಾಧಾನವನ್ನು ಹೇಳಿ ಒಡಂಬಡಿಸಿ ಮನ್ಮಥನೊಡನೆ ಕಾಮವಿಮಾನವನ್ನೇರಿ ಆಕಾಶಮಾರ್ಗದಲ್ಲಿ ಬರುತ್ತ ಕೆಳಗೆ ತಳಿರು ತೋರಣಾದಿಗಳಿಂದ ಅಲಂಕೃತವಾದ ಒಂದು ನಗರವನ್ನು ನೋಡಿ ಮಾರನು ಅದಾವನಗರವೆಂದು ಕೇಳಿದನು. ಅದಕ್ಕೆ ನಾರದನು ' ಎಲೆ ಸುಕುಮಾರ ! ಇದು ನಿನ್ನ ಮಾವನಾದ ಕೌರವಭೂಪಾಲನ ಹಸ್ತಿನಪುರವೆಂಬ ರಾಜಧಾನಿ. ಕೌರವನಿಗೆ ಆತನ ಹೆಂಡತಿ ಜಲಧಿಯೆಂಬವಳಲ್ಲಿ ಉದಧಿಕುಮಾರಿಯೆಂಬ ಮಗಳು ಹುಟ್ಟಿ ಯೌವನವತಿಯಾಗಿರುತ್ತಾಳೆ. ಹದಿನಾರನೆಯ ವರುಷಕ್ಕೆ ನೀನು ಬಂದಾಗ ಆಕೆಯನ್ನು ನಾರಾಯಣನು ನಿನಗೆ ತರಬೇಕೆಂದಿದ್ದನು. ನೀನು ಬರುವುದು ಸಾವಕಾಶವಾದುದರಿಂದ ಈಕೆಯನ್ನು ಪುರುಷೋತ್ತಮನ ಹಿರಿಯ ಹೆಂಡತಿಯಾದ ಸತ್ಯಭಾ

ಮೆಯು ಮಗ ಭಾನುಕುಮಾರನಿಗೆ ತರುವುದಕ್ಕಾಗಿ ಒಸಗೆಯ ವಾದ್ಯಧ್ವನಿಯಾಗು ತ್ತಿದೆ. ಈ ಮದುವೆಯಲ್ಲಿ ನಿನ್ನ ತಾಯಿ ರುಗ್ಮಿಣಿದೇವಿಯು ಕುರುಳುಗಳನ್ನು ಸತ್ಯ ಭಾಮೆಯು ಮೆಟ್ಟಿ ವಿಹಾರಿಸುವಳು " ಎಂದನು. ಆ ಮಾತನ್ನು ಕೇಳಿ ಮನ್ಮಥನು ರೇಗಿ ನಾರದನನ್ನು ವಿಮಾನದಲ್ಲೇ ಇರುವಂತೆ ಹೇಳಿ ತಾನು ಆ ಕನ್ಯೆಯನ್ನು ನೋಡಿಬರುತ್ತೇನೆಂದು ಆ ಪುರಕ್ಕಿಳಿದು ಒಬ್ಬ ಮುದುಕನಾದ ಕ್ಷೌರಿಕನ ವೇಷ ವನ್ನು ಧರಿಸಿಕೊಂಡು ಕೌರವನ ಅರಮನೆಯ ಬಾಗಿಲಿಗೆ ಹೋಗಿ ದ್ವಾರಪಾಲಕ ರನ್ನು ಕುರಿತು " ನಾನು ಪುರುಷೋತ್ತಮನ ಮನೆಯ ನಾಪಿತನು. ಕೌರವನ ಪುತ್ರಿಯನ್ನು ಸಿಂಗರಿಸುವುದಕ್ಕಾಗಿ ನನ್ನನ್ನು ಕಳುಹಿದನು. ಈ ವಿಷಯವನ್ನು ರಾಜನಿಗೆ ತಿಳಿಸಿ " ಎಂದನು. ಆ ಮಾತನ್ನು ಕೇಳಿ ದ್ವಾರಪಾಲಕರು ರಾಜನಿಗೆ ತಿಳುಹಲು ಅವನು ಅನುಮತಿಸಿ ಮಾರನನ್ನು ಒಳಕ್ಕೆ ಕಳುಹಲು ಅವನು ಹೋಗಿ ಆ ಸುಂದರಕನ್ಯೆಯ ಅವಯವಗಳಿಗೆ ಮಿಂಚಿಕ್ಕಿ ಆಕೆಯ ಸೌಂದರ್ಯವನ್ನು ನೋಡಿ ಮುಗ್ಧನಾಗಿ ಆಕೆಯನ್ನೆತ್ತಿಕೊಂಡು ಆಕಾಶಕ್ಕೆ ಹಾರಿ ನಾರದನಿದ್ದ ವಿಮಾನಕ್ಕೆ ಕರೆತರಲು ಆಕೆಯು ನಾರದನ ಅಡಿದಾವರೆಗೆರಗಿದಳು. ಆಗ ನಾರದನು " ರುಗ್ಮಿ ಣಿಯ ಕುಮಾರನಿಗೆ ಮದುವೆಯಾಗು " ಎಂದು ಹರಸಲು ಆಕೆಯು " ಮೊದಲು ನನ್ನನ್ನು ಆತನಿಗೆ ಕೊಡುವೆವೆಂದು ಈವರೆಗೆ ನನ್ನ ತಾಯಿತಂದೆಗಳು ಹೇಳುತ್ತಿದ್ದು ಈಗ ಅವನ ಬರುವಿಕೆಯನ್ನು ಕಾಣದೆ ನನ್ನ ಪೂರ್ವಭವದ ಪಾಪದ ಫಲದಿಂದ ಸತ್ಯ ಭಾಮೆಯ ಮಗನಾದ ಭಾನುಕುಮಾರನಿಗೆ ಕೊಡಬೇಕೆಂದಿರುವರು. ಸುಂದರನಾದ ಮನ್ಮಥನನ್ನಲ್ಲದೆ ಬೇರೆಯವರನ್ನು ನಾನು ಹೇಗೆ ಒಪ್ಪುವೆನು? ಇನ್ನೀ ಅದೃಷ್ಟಕ್ಕೆ ಏನು ಚಿಂತಿಸಲಿ? ಈ ಮುದುಕನಾದ ನಾವಿದನು ನನ್ನನ್ನು ತೆಗೆದುಕೊಂಡು ಬಂದು ದು ಒಳ್ಳೆಯದಾಯ್ತು. ಕಾಮನಲ್ಲದೆ ನನಗೆ ಬೇರೆಯವರು ಬೇಕಿಲ್ಲ " ಎಂದು ಆಕೆಯು ವಿಮಾನದಿಂದ ಭೂಮಿಗೆ ಉರುಳಿದಳು. ಆಗ ಮಾರನು ಆಂತುಕೊಂಡು ಬಂದು ತನ್ನ ರೂಪವನ್ನು ತೋರಿದನು. ಆಗ ನಾರದನು " ಉದಧಿಕುಮಾರಿಯೆ! ನೋಡು, ನೀನು ಮೊದಲು ಮದುವೆಯಾಗುವೆನೆಂದಿದ್ದ ಮದನಕುಮಾರನು ಇವ ನು " ಎನಲು ಆಕೆಯು ಬಹು ಸಂತೋಷದಿಂದ ಮನ್ಮಥನನ್ನು ನೋಡಿದಳು.



## ೨೦. ಮನ್ಮಥನ ವಿವಾಹವರ್ಣನ ಸಂಧಿ



ಮನ್ಮಥನು ಉದಧಿಕುಮಾರಿಯನ್ನು ನಾರದನೊಡನೆ ಕಳುಹಲು ಅವನು ಆಕೆಯನ್ನು ಕರೆದುಕೊಂಡು ಕೌರವನಲ್ಲಿಗೆ ಇಳಿದು ಬಂದು "ರಾಜನೆ! ಈಕೆಯನ್ನು ಓರ್ವ ಖೇಚರನು ಎತ್ತಿಕೊಂಡು ಆಕಾಶದಲ್ಲಿ ಹೋಗುತ್ತಿರಲು ನಾನಾ ವಿಧದಿಂದ ಆತನನ್ನು ಒಡಂಬಡಿಸಿ ಬಿಡಿಸಿಕೊಂಡು ಬಂದೆನು" ಎಂದು ನುಡಿದು ಆಕೆಯನ್ನು ಅಲ್ಲಿ ಬಿಟ್ಟುಹೋಗಿ ಕಂದರ್ಪನೊಡನೆ ಬರುತ್ತಿರಲು ಇತ್ತ ಕೌರವನು ತನ್ನ ಪುತ್ರಿಯನ್ನು ಮದುವೆಗೆಂದು ವೈಭವದಿಂದ ದ್ವಾರಾವತಿಗೆ ಕರೆತರುತ್ತಿರುವುದನ್ನು ಕಂಡು ಮದನನು ಅದು ಯಾವರಾಜನ ಸೇನೆಯೆಂದು ಕೇಳಲು ನಾರದನು ಅದು ಕೌರವನ ಬಲವೆಂದೂ ಅದರಲ್ಲಿ ವೀರರಾದ ಪಾಂಡವರಿರುವರೆಂದೂ ಉದಧಿ ಕುಮಾರಿಯನ್ನು ಉತ್ಸವದಿಂದ ನಾರಾಯಣನಲ್ಲಿಗೆ ಕರೆದೊಯ್ಯುತ್ತಿರುವರೆಂದೂ ಹೇಳಿದನು. ಆ ಮಾತನ್ನು ಕೇಳಿ ಮಾರನು ನಾರದನನ್ನು ಅಲ್ಲಿ ಬಿಟ್ಟು ತಾನು ವೃದ್ಧ ವೇಷವನ್ನು ಧರಿಸಿ ಬೇಡರವನಂತೆ ಬಿಲ್ಲುಬಾಣಗಳನ್ನು ಹಿಡಿದು ಹೆಗಲಲ್ಲಿ ಬಲೆಯನ್ನು ಹಾಕಿಕೊಂಡು ಬಂದು "ನೀವು ನನಗೆ ಸುಂಕವನ್ನು ಕೊಡದೆ ಮುಂದಕ್ಕೆ ಹೋಗ ಕೂಡದು. ನಾರಾಯಣನು ನನ್ನನ್ನಿಲ್ಲಿರಿಸಿದ್ದಾನೆ. ನೀವೆಲ್ಲರು ನಿಲ್ಲಿ" ಎಂದು ಕೌರವನ ಕಡೆಯವರನ್ನೆಲ್ಲ ತಡೆಯಲು ಅವರು ನಗುತ್ತ ಮುಂದುವರಿದರು. ಆಗ ಆ ಮುದುಕನು ತನ್ನ ಬಿಲ್ಲನ್ನು ಅಡ್ಡಹಿಡಿದು ನಿಲಿಸಿದನು. ಯಾರು ಶಕ್ತರು ಬಂದು ನೂಕಿದರೂ ದಾರಿಯನ್ನು ಬಿಡದೆ ಅಡ್ಡಕಟ್ಟಿ ಹೋರಾಡುತ್ತಿರುವುದನ್ನು ಕಂಡು ವೀರರಾದ ಭೀಮಾರ್ಜುನರು ಬಂದು ನೂಕಿದೊಡನೆ ಅವರ ಕೈಕಾಲುಗಳನ್ನು ಸ್ತಂಭಿಸಿದನು. ಆಗ ಕುರುಬಲದ ನಾಯಕರು "ಇರಿಯಿರಿ ಕೊಲ್ಲು ಕೊಲ್ಲು" ಎಂದು ಬಂದು ಇದಿರಾಗಲು ಆ ಮುದುಕನು ಅವರ ಸೈನ್ಯಕ್ಕೆ ಎರಡರಷ್ಟು ಮಾಯಾಸೈನ್ಯವನ್ನು ನಿರ್ಮಿಸಿ ನಿಲಲು ಕಂಡು ಭೀಷ್ಮರು ತಾವು ಅದನ್ನು ಗೆಲ್ಲುವುದು ಸಾಧ್ಯವಲ್ಲವೆಂದು ಆ ವೃದ್ಧನ ಬಳಿಗೆ ಬಂದು "ಎಲೆ ಬೇಡನೆ! ನೀನೇಕೆ ನಮ್ಮನ್ನು ತಡೆವೆ? ನಿನಗೇನು ಬೇಕು? ಹೇಳು" ಎನಲು ಅವನು "ಈ ನಿಮ್ಮ ದೊರೆಯ ಮಗಳನ್ನು ನೀವು ಸುಂಕಕೊಡಿ" ಎಂದನು. ಆದಕ್ಕೆ ಭೀಷ್ಮರು ಆ ಸುಂಕವನ್ನು ಕೃಷ್ಣನ ಮುಂದೆ ಕೊಡುವೆವೆಂದೊಡಂಬಡಿಸಲು ಅದಕ್ಕೊಪ್ಪಿ ತನ್ನ

ಮಾಯಾಬಲವನ್ನು ಹಿಂದೆಗೆದು ಭೀಮಾರ್ಜುನರ ಬಂಧನವನ್ನು ಬಿಡಿಸಿ ಆಕಾಶಕ್ಕೆ ಹಾರಿ ನಾರದನೊಡನೆ ಹೋಗಿ ದ್ವಾರಾವತಿಯ ವನದ ಮೇಲ್ಗಡೆಯಲ್ಲಿ ನಾರದನನ್ನಿರಿಸಿ ತಾನು ಇಳಿದು ದೊಡ್ಡ ಸೇನೆಯನ್ನು ನಿರ್ಮಿಸಿ, ಕೌರವನು ತನ್ನ ಮಗಳೊಡನೆ ಬರುತ್ತ ಮುಂದೆ ಭೀಷ್ಮನನ್ನು ಕಳುಹಲು ತಾನು ಅವನ ರೂಪವನ್ನು ಧರಿಸಿ, ಸೈನ್ಯ ಸಮೇತನಾಗಿ ಸತ್ಯಭಾಮೆಯ ಉದ್ಯಾನಕ್ಕೆ ನುಗ್ಗಿ ಅದನ್ನು ಹಾಳುಮಾಡಿ ಆ ರೂಪವನ್ನು ಬಿಟ್ಟು ಮುನಿರೂಪವನ್ನು ಧರಿಸಿ ಆಕೆಯ ಮನೆಗೆ ಹೋಗಿ ಅಲ್ಲಿಯ ಕೊಳದ ನೀರನ್ನೆಲ್ಲ ತನ್ನ ಕಮಂಡಲಕ್ಕೆ ತುಂಬಲು ಅಲ್ಲಿಯವರು ಅವನು ಭೂತವಾಗಿರಬೇಕೆಂದರು. ಆಗ ನಡುಬೀದಿಗೆ ಬಂದು "ನಿಮ್ಮ ನೀರನ್ನು ನೀವು ತಡೆಯಿರಿ" ಎಂದು ಕಮಂಡಲವನ್ನು ಅಡಿ ಮೇಲುಮಾಡಲು ಆ ನೀರು ಹೊಳೆಯಂತೆ ಹರಿಯಿತು. ಆಗ ಪುರಜನರು ಓಡಿ ತಂತಮ್ಮ ಮನೆಗಳೊಳಕ್ಕೆ ಹೊಕ್ಕರು. ಬಳಿಕ ಆ ರೂಪವನ್ನು ಬಿಟ್ಟು ಕುಳ್ಳನಾದ ಮನುಷ್ಯನ ಆಕಾರವನ್ನು ಧರಿಸಿ ಬೀದಿಯಲ್ಲಿ ಬರುತ್ತಿರಲು ಪಟ್ಟಣದ ಸ್ತ್ರೀಯರು ಆ ರೂಪವನ್ನು ಕಂಡು ನಕ್ಕರು. ಅವರಲ್ಲಿ ಕೆಲವರ ಮುಖದಲ್ಲಿ ಗಡ್ಡಮೀಸೆಗಳನ್ನು, ಕೆಲವರ ಮೂಗುಗಳನ್ನು ಆನೆಯ ಸೊಂಡಲಿನಂತೆ, ಕೆಲವರ ಕುಚಗಳನ್ನು ಮೂರು ಮಾರುದ್ದ ಮಾಡಿ ಕುಣಿಯುತ್ತ ಬಂದು ಆ ರೂಪವನ್ನು ಬಿಸುಟು ಓರ್ವ ಬ್ರಾಹ್ಮಣನ ರೂಪವನ್ನು ಧರಿಸಿ ಸತ್ಯಭಾಮೆಯ ಬಳಿಗೆ ಹೋಗಿ ಆಕೆಗೆ ಆಶೀರ್ವಾದಮಾಡಿ "ದೇಶಾಂತರದಿಂದ ನಾನು ಹಸಿದುಬಂದೆನು. ಮೃಷ್ಟಾನ್ನ ಭೋಜನವಾಗಬೇಕು" ಎನಲು ಆಕೆಯು ಒಪ್ಪಿ ಮುಂದೆ ಕುಳ್ಳಿರಿಸಿ ಉತ್ತಮವಾದ ಪಂಚಭಕ್ಷ್ಯಗಳನ್ನು ತರಿಸಿ ಬಡಿಸಲು ಅವನು ಭುಂಜಿಸಿ ಮತ್ತೆಮತ್ತೆ ಕೇಳುತ್ತಿರಲು ಕಂಡು ಆಕೆಯು "ಇವನು ಮನುಷ್ಯರೂಪದ ರಾಕ್ಷಸನು" ಎಂದಳು. ಆ ಮಾತನ್ನು ಕೇಳಿ ಅವನು "ನೀನು ಕೊಟ್ಟ ಭೋಜನವನ್ನು ನೀನೇ ತೆಗೆದುಕೊ" ಎಂದು ಓಕರಿಸಿ ಕಾರಿದನು. ಅದು ಮನೆಯ ಅಂಗಣವನ್ನೆಲ್ಲ ವ್ಯಾಪಿಸಿತು. ಸತ್ಯಭಾಮೆಯು ಅಲ್ಲಿಂದೆದ್ದು ಮನೆಯೊಳಕ್ಕೆ ಓಡಿದಳು. ಬಳಿಕ ಆ ರೂಪವನ್ನು ಬಿಟ್ಟು ಉದ್ದಿಷ್ಟತ್ಯಾಗಿಯೆಂಬ ಹನ್ನೊಂದನೆಯ ನೆಲೆಯ ಶ್ರಾವಕನ ರೂಪವನ್ನು ಧರಿಸಿ ರುಗ್ಮಿಣಿಯ ಮನೆಗೆ ಹೋದನು. ಆಕೆಯು ಕಂಡು ಉಪ್ಪರಿಗೆಯಿಂದಿಳಿದು ಬಂದು ಭಕ್ತಿಯಿಂದ ಮನೆಗೆ ಕರೆದೊಯ್ದು ವಿರಾಗಾಸನದಲ್ಲಿ ಕುಳ್ಳಿರಿಸಿ ಉತ್ತಮವಾದ ಆಹಾರವನ್ನು ಕೊಟ್ಟಳು. ಅದನ್ನುಂಡು ಪರೀಕ್ಷಾರ್ಥವಾಗಿ ಮುನ್ನಿನಂತೆ ಕಾರಲು ರುಗ್ಮಿಣಿಯು ಥಟ್ಟನೆ ತನ್ನ ಕೈಯಿಂದಾತುಕೊಂಡು ಮರುಗಿ "ಇವರ ದೇಹಕ್ಕೆ ತಕ್ಕ ಲಘುವಾದ ಆಹಾರವನ್ನು ಕೊಡದೆ ನಾನು ಸವಿಯಾದ ಆಹಾರವನ್ನು ಕೊಟ್ಟೆನು"

ಎಂದು ಅಳುತ್ತಿರಲು ಆ ತನ್ನ ತಾಯಿಯ ಉತ್ತಮಗುಣಕ್ಕೆ ಮೆಚ್ಚಿ ನಾರದನನ್ನು ತನ್ನ ವಿದ್ಯೆಯಿಂದ ಅಲ್ಲಿಗೆ ಕರೆಯಿಸಿದನು. ಅವನನ್ನು ಕಂಡು ರುಗ್ಮಿಣಿಯು ಎದ್ದು ನಮಸ್ಕಾರಮಾಡಿ ಆಸನವನ್ನು ಕೊಟ್ಟು ಬಳಿಕ “ ನನ್ನ ಮಗನನ್ನು ಹುಡುಕಿ ತರುವೆನೆಂದು ಹೇಳಿಹೋಗಿ ಸುಮ್ಮನೆ ಬಂದಿರಿ ’ ಎಂದು ಗದ್ಗದಕಂಠೆಯಾಗಿ ಅಳುವುದನ್ನು ಕಂಡು ಮನ್ಮಥನು ಆ ರೂಪವನ್ನು ತೊರೆದು ನಿಜರೂಪವನ್ನು ತೋರಿದನು. ಆಗ ನಾರದನು “ ಎಲೆ ದೇವಿ ! ನೀನಿಚ್ಛಿಸುವ ನಿನ್ನ ಕುಮಾರನಾದ ಮನ್ಮಥನು ಇವನೇ ನೋಡು ” ಎನಲು ರುಗ್ಮಿಣಿಯು, ಚಂದ್ರನನ್ನು ಕಂಡ ಸಮುದ್ರದಂತೆ, ಸಂತೋಷದಿಂದ ಉಕ್ಕಿದಳು. ಮದನನು ಉತ್ತಮವಾದ ರತ್ನದ ಜಿಸಬಿಂಬವನ್ನು ಕಾಣ್ಕೆಯಿತ್ತು ಭಕ್ತಿಯಿಂದ ತಾಯಿಯ ಪಾದಕ್ಕೆ ನಮಸ್ಕಾರಮಾಡಿದನು. ರುಗ್ಮಿಣಿಯು ಮಗನ ತಲೆಯನ್ನೆತ್ತಿ ಹರಸಿ ಆನಂದಬಾಷ್ಪದಿಂದ ಮಜ್ಜನಮಾಡಿಸಿ ಅಮರ್ದಪ್ಪಿಕೊಂಡು ತನ್ನ ತೊಡೆಯಮೇಲೆ ಕುಳ್ಳಿರಿಸಿ ಗಲ್ಲವನ್ನು ಹಿಡಿದು ಮುದ್ದಾಡಿ ನೋಡಿ ಆನಂದಪರವಶಳಾದಳು. ಬಳಿಕ ಸ್ಮರನು ಬೇರೆ ಆಸನದಲ್ಲಿ ಕುಳ್ಳಿರಲು ನಾರದನು ಮನ್ಮಥನನ್ನು ಕರೆತಂದ ವಿವರವನ್ನೆಲ್ಲ ರುಗ್ಮಿಣಿಗೆ ತಿಳುಹಿದನು. ಬಳಿಕ ರುಗ್ಮಿಣಿಯು “ ಎಲೈ ಮಗನೆ ! ನಿನ್ನ ಬಾಲ್ಯದ ಮುದ್ದಾಟವನ್ನು ಬಯಸಿ ನೋಡುವ ಭಾಗ್ಯವು ನನಗಿಲ್ಲವಾಯ್ತು ” ಎಂದು ಅಳುತ್ತಿರಲು ಕಂಡು ಕುಸುಮಾಸ್ತ್ರನು ತನ್ನ ವಿದ್ಯಾಸಾಮರ್ಥ್ಯದಿಂದ ಬಾಲಕನಾಗಿ ತರುಣನಾಗುವವರೆಗಿನ ಬಾಲಲೀಲೆಯನ್ನೆಲ್ಲ ತೋರಲು ರುಗ್ಮಿಣಿಯು ಬಹು ಸಂತೋಷವನ್ನು ಹೊಂದಿ ಸುಖವಾಗಿರುವಾಗ ಸತ್ಯಭಾಮೆಯ ದಾಸಿಯರು ಬರುತ್ತಿರುವುದನ್ನು ಕಂಡು ಮನಸಿಜನು ಇವರಾರೆಂದು ಕೇಳಲು ರುಗ್ಮಿಣಿಯು ಅವರು ತನ್ನ ಸೋಲದ ತಲೆಯ ಕುರುಳುಗಳನ್ನು ಕೇಳಲು ಬಂದವರೆಂದಳು. ಆ ಮಾತನ್ನು ಕೇಳಿ ಮಾರನು ಅವರು ಬರುವುದರೊಳಗಾಗಿ ತಾನು ಕೃಷ್ಣನ ರೂಪವನ್ನು ಧರಿಸಿರಲು ಅವರು ಬಂದು ಆ ಕೃತಕ ಕೃಷ್ಣನಿಗೆ ಕೈಮುಗಿದು ರುಗ್ಮಿಣಿಯನ್ನು ಕುರಿತು ‘ ನಿನ್ನ ವಾಗ್ದಾನದಂತೆ ನಮ್ಮ ಒಡತಿಯು ಸೋಲವನ್ನು ತರಲು ಕಳುಹಿಸಿರುತ್ತಾಳೆ ” ಎಂದರು. ಆ ನುಡಿಯನ್ನು ಕೇಳಿ ಕೃತಕ ಹರಿಯು ಕಡುಮುನಿಸಿಂದೆದ್ದು ಬಂದು ಆ ದಾಸಿಯರ ಕೂದಲುಗಳನ್ನು ಕೊಯ್ದು ಅವರ ಕೈಯಲ್ಲಿ ಕೊಟ್ಟು ಕಳುಹಲು ಅವರು ಹೋಗಿ ಆ ವಿವರವನ್ನೆಲ್ಲ ಸತ್ಯಭಾಮೆಗೆ ತಿಳುಹಿದರು. ಆಕೆಯು ಬಹುಕೋಪದಿಂದ ಹರಿಯ ಬಳಿಗೆ ಹೋಗಿ “ ಚೆನ್ನಾಗಿ ಮಾಡಿದಿರಿ ಕಾರ್ಯವನ್ನು. ಮೊದಲು ನಿಮ್ಮ ಮುಂದೆ ನುಡಿದ ಭಾಷೆಯಂತೆ ರುಗ್ಮಿಣಿಯ ಕುರುಳನ್ನು ಕೇಳಿದರೆ ನನ್ನ ದಾಸಿಯರ ಕುರುಳನ್ನೇ ಕೊಯ್ದು ನೀವು

ನನ್ನ ಬಳಿಗೆ ಕಳುಹುವುದು ನ್ಯಾಯವೇ?" ಎನಲು ಕೃಷ್ಣನು ತಾನು ಅಲ್ಲಿರಲಿಲ್ಲ ವೆಂದು ಹೇಳಿ ವಿಸ್ಮಿತನಾಗಿ ರುಗ್ಮಿಣಿಯ ಮನೆಗೆ ತನ್ನ ಭೃತ್ಯರನ್ನು ಕಳುಹಿದನು. ಅವರು ಹೋಗಿ ರುಗ್ಮಿಣಿಗೆ ವಿನಯದಿಂದ ಕೈಮುಗಿದು ಸತ್ಯಭಾಮೆಗೆ ಕುರುಳನ್ನು ಕೊಡಬೇಕೆಂದು ಕೇಳಲು ಮನ್ಮಥನು ಅವರನ್ನು ತಲೆಕೆಳಗಾಗಿ ತೂಗುಹಾಕಿದನು. ಅದನ್ನು ಕೇಳಿ ಕೃಷ್ಣನು ಬಹುಕೋಪದಿಂದ ಬಲರಾಮನನ್ನು ಕಳುಹಲು ಮನ್ಮಥನು ಅವನನ್ನು ಕಂಡು "ಇವನಾರು?" ಎಂದು ತಾಯನ್ನು ಕೇಳಿದನು. ಆಕೆಯು ಬಲರಾಮನ ಪರಿಚಯವನ್ನು ಹೇಳಿದಳು. ಆ ಮಾತನ್ನು ಕೇಳಿ ಮನ್ಮಥನು "ಎಲೈ ತಾಯೆ! ನಿನ್ನ ಮಗನ ಶೌರ್ಯವನ್ನು ಮನವಿಟ್ಟು ನೋಡು" ಎಂದು ಸಿಹ್ಮದರೂಪ ವನ್ನು ಧರಿಸಿ ಹೋಗಿ ಬಲರಾಮನನ್ನು ನುಂಗಿ ರುಗ್ಮಿಣಿಯ ಮನೆಯ ಕರುಮಾಡದ ಮೇಲೆ ಹಾರಿ ಕುಳಿತನು. ಪುರಪರಿಜನರು ಅಚ್ಚರಿವಟ್ಟು ನೋಡುತ್ತಿರಲು ಅಲ್ಲಿಂದ ಬಲರಾಮನನ್ನು ಉಗುಳಿ ಸಿಹ್ಮರೂಪವನ್ನು ಬಿಟ್ಟು ಮೊದಲಿನ ನಿಜರೂಪವನ್ನು ಧರಿಸಿ ತಾಯಬಳಿಗೆ ಬಂದನು. ಆ ವಿಷಯವನ್ನು ಕೃಷ್ಣನು ಕೇಳಿ ಅತ್ಯಂತ ಕೋಪವನ್ನು ತಾಳಿ ತಾನು ಬರುತ್ತಿರಲು ಆಗ ಆತನ ಮಂತ್ರಿಗಳು ಬಂದು ಕೈಮುಗಿದು ಆ ಮಾಯದವನು ಸಾಮಾನ್ಯನಲ್ಲವೆಂದೂ ಬಲರಾಮನನ್ನು ನುಂಗಿ ಉಗುಳಿದ ಭಯಂ ಕರಸಿಹ್ಮಾಕಾರವನ್ನು ಧರಿಸಿದ ಮಹಾಶಕ್ತಿಸಂಪನ್ನನೆಂದೂ ಆದುದರಿಂದ ಎಲ್ಲಾ ಸೈನ್ಯವನ್ನು ತೆಗೆದುಕೊಂಡು ಹೋಗಿ ಅವನನ್ನು ಬೆದರಿಸಿ ಆ ಮನೆಯಿಂದ ಹೊರಡಿಸ ಬೇಕೆಂದೂ ಹೇಳಲು ಕೇಶವನು ಆ ಮಾತಿಗೊಪ್ಪಿ ಸೈನ್ಯವನ್ನೆಲ್ಲ ಬರಿಸಿ ಕೌರವ ಭೀಮ ರಾರ್ಥ ಭೀಷ್ಮ ಮೊದಲಾದವರನ್ನು ಬರಮಾಡಿ ಅಲ್ಲಲ್ಲಿ ಪೌಜನ್ನಿರಿಸಿ ದೂತರನ್ನು ಕರೆ ದು "ರುಗ್ಮಿಣಿಯ ಮನೆಯಲ್ಲಿರುವವನನ್ನು ಕರೆಯಿರಿ" ಎನಲು ಅವರು ಬಂದು ಮದ ನನ್ನು ಕರೆದರು. ಆಗ ಅವನು ತಾಯಬಳಿಯಿಂದ ಬಂದು ಕೃಷ್ಣನ ಸೇನೆಗೆ ಎರಡ ಷ್ಟು ಸೇನೆಯನ್ನು ತನ್ನ ವಿದ್ಯಾಬಲದಿಂದ ನಿರ್ಮಿಸಿದನು. ಅದನ್ನು ಕಂಡು ಹರಿಯು ನ್ನ ಸೈನ್ಯಕ್ಕೆ ಕೈವೀಸಲು ಆ ಯಾದವಸೇನೆಯು, ನೆರಳಿನೊಡನೆ ಯುದ್ಧಮಾ ುವಂತೆ, ಸ್ಮರನ ಸೇನೆಯೊಡನೆ ಯುದ್ಧಮಾಡಿ ಬಳಲುತ್ತಿರಲು ಆಗ ವಿಷ್ಣುವು ತಿಕೋಪದಿಂದ ತನ್ನ ಬೆಂಗಡೆಯಲ್ಲಿದ್ದ ಅತಿರಥರುಗಳನ್ನು ಕಳುಹಿದನು. ಅವರನ್ನು ್ರರನು ನಾಗಪಾಶದಿಂದ ಕಟ್ಟಿದನು. ಅದನ್ನು ಕಂಡು ಹರಿಯು ಕೌರವ ಪಾಂಡ ರನ್ನು ಕಳುಹಿದನು. ಅವರು ಬಹು ಕೋಪಾವೇಶದಿಂದ ಬರುತ್ತಿರಲು ಇಕ್ಷು ಾಪನು ಅವರನ್ನು, ಮರದಂತೆ, ಸ್ತಂಭಿಸಿ ನಿಲಿಸಿದನು. ಅದನ್ನು ಕಂಡು ಗೋವಿಂ ನು ಅತ್ಯಂತ ಕೋಪಪರವಶನಾಗಿ ಮಾರನಿಗೆ ಇದಿರಾಗಿ ಯುದ್ಧಕ್ಕೆ ಬರುತ್ತಿರು

ಎಂದು ಅಳುತ್ತಿರಲು ಆ ತನ್ನ ತಾಯಿಯ ಉತ್ತಮಗುಣಕ್ಕೆ ಮೆಚ್ಚಿ ನಾರದನನ್ನು ತನ್ನ ವಿದ್ಯೆಯಿಂದ ಅಲ್ಲಿಗೆ ಕರೆಯಿಸಿದನು. ಅವನನ್ನು ಕಂಡು ರುಗ್ಮಿಣಿಯು ಎದ್ದು ನಮಸ್ಕಾರಮಾಡಿ ಆಸನವನ್ನು ಕೊಟ್ಟು ಬಳಿಕ "ನನ್ನ ಮಗನನ್ನು ಹುಡುಕಿ ತರುವೆನೆಂದು ಹೇಳಿಹೋಗಿ ಸುಮ್ಮನೆ ಬಂದಿರಿ' ಎಂದು ಗದ್ಗದಕಂಠೆಯಾಗಿ ಅಳುವುದನ್ನು ಕಂಡು ಮನ್ಮಥನು ಆ ರೂಪವನ್ನು ತೊರೆದು ನಿಜರೂಪವನ್ನು ತೋರಿದನು. ಆಗ ನಾರದನು "ಎಲೆ ದೇವಿ! ನೀನಿಚ್ಛಿಸುವ ನಿನ್ನ ಕುಮಾರನಾದ ಮನ್ಮಥನು ಇವನೇ ನೋಡು" ಎನಲು ರುಗ್ಮಿಣಿಯು, ಚಂದ್ರನನ್ನು ಕಂಡ ಸಮುದ್ರದಂತೆ, ಸಂತೋಷದಿಂದ ಉಕ್ಕಿದಳು. ಮದನನು ಉತ್ತಮವಾದ ತನ್ನದ ಜನಬಿಂಬವನ್ನು ಕಾಣ್ಕೆಯಿತ್ತು ಭಕ್ತಿಯಿಂದ ತಾಯಿಯ ಪಾದಕ್ಕೆ ನಮಸ್ಕಾರಮಾಡಿದನು. ರುಗ್ಮಿಣಿಯು ಮಗನ ತಲೆಯನ್ನೆತ್ತಿ ಹರಸಿ ಆನಂದಬಾಷ್ಪದಿಂದ ಮಜ್ಜನಮಾಡಿಸಿ ಆಮುರ್ದಪ್ಪಿಕೊಂಡು ತನ್ನ ತೊಡೆಯಮೇಲೆ ಕುಳ್ಳಿರಿಸಿ ಗಲ್ಲವನ್ನು ಹಿಡಿದು ಮುದ್ದಾಡಿ ನೋಡಿ ಆನಂದಪರವಶಳಾದಳು. ಬಳಿಕ ಸ್ಮರನು ಬೇರೆ ಆಸನದಲ್ಲಿ ಕುಳ್ಳಿರಲು ನಾರದನು ಮನ್ಮಥನನ್ನು ಕರೆತಂದ ವಿವರವನ್ನೆಲ್ಲ ರುಗ್ಮಿಣಿಗೆ ತಿಳುಹಿದನು. ಬಳಿಕ ರುಗ್ಮಿಣಿಯು "ಎಲೈ ಮಗನೆ! ನಿನ್ನ ಬಾಲ್ಯದ ಮುದ್ದಾಟವನ್ನು ಬಯಸಿ ನೋಡುವ ಭಾಗ್ಯವು ನನಗಿಲ್ಲವಾಯ್ತು" ಎಂದು ಅಳುತ್ತಿರಲು ಕಂಡು ಕುಸುಮಾಸ್ತ್ರನು ತನ್ನ ವಿದ್ಯಾಸಾಮರ್ಥ್ಯದಿಂದ ಬಾಲಕನಾಗಿ ತರುಣನಾಗುವವರೆಗಿನ ಬಾಲಲೀಲೆಯನ್ನೆಲ್ಲ ತೋರಲು ರುಗ್ಮಿಣಿಯು ಬಹು ಸಂತೋಷವನ್ನು ಹೊಂದಿ ಸುಖವಾಗಿರುವಾಗ ಸತ್ಯಭಾಮೆಯ ದಾಸಿಯರು ಬರುತ್ತಿರುವುದನ್ನು ಕಂಡು ಮನಸಿಜನು ಇವರಾರೆಂದು ಕೇಳಲು ರುಗ್ಮಿಣಿಯು ಅವರು ತನ್ನ ಸೋಲದ ತಲೆಯ ಕುರುಳುಗಳನ್ನು ಕೇಳಲು ಬಂದವರೆಂದಳು. ಆ ಮಾತನ್ನು ಕೇಳಿ ಮಾರನು ಅವರು ಬರುವುದರೊಳಗಾಗಿ ತಾನು ಕೃಷ್ಣನ ರೂಪವನ್ನು ಧರಿಸಿರಲು ಅವರು ಬಂದು ಆ ಕೃತಕ ಕೃಷ್ಣನಿಗೆ ಕೈಮುಗಿದು ರುಗ್ಮಿಣಿಯನ್ನು ಕುರಿತು 'ನಿನ್ನ ವಾಗ್ದಾನದಂತೆ ನಮ್ಮ ಒಡತಿಯು ಸೋಲವನ್ನು ತರಲು ಕಳುಹಿಸಿರುತ್ತಾಳೆ" ಎಂದರು. ಆ ನುಡಿಯನ್ನು ಕೇಳಿ ಕೃತಕ ಹರಿಯು ಕಡುಮುನಿಸಿಂದೆದ್ದು ಬಂದು ಆ ದಾಸಿಯರ ಕೂದಲುಗಳನ್ನು ಕೊಯ್ದು ಅವರ ಕೈಯಲ್ಲಿ ಕೊಟ್ಟು ಕಳುಹಲು ಅವರು ಹೋಗಿ ಆ ವಿವರವನ್ನೆಲ್ಲ ಸತ್ಯಭಾಮೆಗೆ ತಿಳುಹಿದರು. ಆಕೆಯು ಬಹುಕೋಪದಿಂದ ಹರಿಯ ಬಳಿಗೆ ಹೋಗಿ "ಚೆನ್ನಾಗಿ ಮಾಡಿದಿರಿ ಕಾರ್ಯವನ್ನು. ಮೊದಲು ನಿಮ್ಮ ಮುಂದೆ ನುಡಿದ ಭಾಷೆಯಂತೆ ರುಗ್ಮಿಣಿಯ ಕುರುಳನ್ನು ಕೇಳಿದರೆ ನನ್ನ ದಾಸಿಯರ ಕುರುಳನ್ನೇ ಕೊಯ್ದು ನೀವು

ನನ್ನ ಬಳಿಗೆ ಕಳುಹುವುದು ನ್ಯಾಯುವೇ ?" ಎನಲು ಕೃಷ್ಣನು ತಾನು ಅಲ್ಲಿರಲಿಲ್ಲ ವೆಂದು ಹೇಳಿ ವಿಸ್ಮಿತನಾಗಿ ರುಗ್ಮಿಣಿಯು ಮನೆಗೆ ತನ್ನ ಭೃತ್ಯರನ್ನು ಕಳುಹಿದನು. ಅವರು ಹೋಗಿ ರುಗ್ಮಿಣಿಗೆ ವಿನಯದಿಂದ ಕೈಮುಗಿದು ಸತ್ಯಭಾಮೆಗೆ ಕುರುಳನ್ನು ಕೊಡಬೇಕೆಂದು ಕೇಳಲು ಮನ್ಮಥನು ಅವರನ್ನು ತಲೆಕೆಳಗಾಗಿ ತೂಗುಹಾಕಿದನು. ಅದನ್ನು ಕೇಳಿ ಕೃಷ್ಣನು ಬಹುಕೋಪದಿಂದ ಬಲರಾಮನನ್ನು ಕಳುಹಲು ಮನ್ಮಥನು ಅವನನ್ನು ಕಂಡು "ಇವನಾರು ?" ಎಂದು ತಾಯುನ್ನು ಕೇಳಿದನು. ಆಕೆಯು ಬಲರಾಮನ ಪರಿಚಯುವನ್ನು ಹೇಳಿದಳು. ಆ ಮಾತನ್ನು ಕೇಳಿ ಮನ್ಮಥನು "ಎಲೈ ತಾಯೆ ! ನಿನ್ನ ಮಗನ ಶೌರ್ಯವನ್ನು ಮನವಿಟ್ಟು ನೋಡು" ಎಂದು ಸಿಹ್ಮದರೂಪ ವನ್ನು ಧರಿಸಿ ಹೋಗಿ ಬಲರಾಮನನ್ನು ನುಂಗಿ ರುಗ್ಮಿಣಿಯು ಮನೆಯ ಕರುಮಾಡದ ಮೇಲೆ ಹಾರಿ ಕುಳಿತನು. ಪುರಪರಿಜನರು ಅಚ್ಚರಿವಟ್ಟು ನೋಡುತ್ತಿರಲು ಅಲ್ಲಿಂದ ಬಲರಾಮನನ್ನು ಉಗುಳಿ ಸಿಹ್ಮರೂಪವನ್ನು ಬಿಟ್ಟು ಮೊದಲಿನ ನಿಜರೂಪವನ್ನು ಧರಿಸಿ ತಾಯುಬಳಿಗೆ ಬಂದನು. ಆ ವಿಷಯುವನ್ನು ಕೃಷ್ಣನು ಕೇಳಿ ಅತ್ಯಂತ ಕೋಪವನ್ನು ತಾಳಿ ತಾನು ಬರುತ್ತಿರಲು ಆಗ ಆತನ ಮಂತ್ರಿಗಳು ಬಂದು ಕೈಮುಗಿದು ಆ ಮಾಯುದವನು ಸಾಮಾನ್ಯನಲ್ಲವೆಂದೂ ಬಲರಾಮನನ್ನು ನುಂಗಿ ಉಗುಳಿದ ಭಯಂ ಕರಸಿಹ್ಮಾಕಾರವನ್ನು ಧರಿಸಿದ ಮಹಾಶಕ್ತಿಸಂಪನ್ನನೆಂದೂ ಆದುದರಿಂದ ಎಲ್ಲಾ ಸೈನ್ಯವನ್ನು ತೆಗೆದುಕೊಂಡು ಹೋಗಿ ಅವನನ್ನು ಬೆದರಿಸಿ ಆ ಮನೆಯಿಂದ ಹೊರಡಿಸ ಬೇಕೆಂದೂ ಹೇಳಲು ಕೇಶವನು ಆ ಮಾತಿಗೊಪ್ಪಿ ಸೈನ್ಯವನ್ನೆಲ್ಲ ಬರಿಸಿ ಕೌರವ ಭೀಮ ಪಾರ್ಥ ಭೀಷ್ಮ ಮೊದಲಾದವರನ್ನು ಬರಮಾಡಿ ಅಲ್ಲಲ್ಲಿ ಪೌಜನ್ನಿರಿಸಿ ದೂತರನ್ನು ಕರೆ ದು "ರುಗ್ಮಿಣಿಯು ಮನೆಯುಲ್ಲಿರುವವನನ್ನು ಕರೆಯಿರಿ" ಎನಲು ಅವರು ಬಂದು ಮದ ನನ್ನು ಕರೆದರು. ಆಗ ಅವನು ತಾಯಬಳಿಯಿಂದ ಬಂದು ಕೃಷ್ಣನ ಸೇನೆಗೆ ಎರಡ ರಷ್ಟು ಸೇನೆಯುನ್ನು ತನ್ನ ವಿದ್ಯಾಬಲದಿಂದ ನಿರ್ಮಿಸಿದನು. ಅದನ್ನು ಕಂಡು ಹರಿಯು ತನ್ನ ಸೈನ್ಯಕ್ಕೆ ಕೈವೀಸಲು ಆ ಯಾದವಸೇನೆಯು, ನೆರಳಿನೊಡನೆ ಯುದ್ಧಮಾ ಡುವಂತೆ, ಸ್ಮರನ ಸೇನೆಯೊಡನೆ ಯುದ್ಧಮಾಡಿ ಬಳಲುತ್ತಿರಲು ಆಗ ವಿಷ್ಣುವು ಅತಿಕೋಪದಿಂದ ತನ್ನ ಬೆಂಗಡೆಯುಲ್ಲಿದ್ದ ಅತಿರಥರುಗಳನ್ನು ಕಳುಹಿದನು. ಅವರನ್ನು ಸ್ಮರನು ನಾಗಪಾಶದಿಂದ ಕಟ್ಟಿದನು. ಅದನ್ನು ಕಂಡು ಹರಿಯು ಕೌರವ ಪಾಂಡ ವರನ್ನು ಕಳುಹಿದನು. ಅವರು ಬಹು ಕೋಪಾವೇಶದಿಂದ ಬರುತ್ತಿರಲು ಇಕ್ಷು ಚಾಪನು ಅವರನ್ನು, ಮರದಂತೆ, ಸ್ತಂಭಿಸಿ ನಿಲಿಸಿದನು. ಅದನ್ನು ಕಂಡು ಗೋವಿಂ ದನು ಅತ್ಯಂತ ಕೋಪಪರವಶನಾಗಿ ಮಾರನಿಗೆ ಇದಿರಾಗಿ ಯುದ್ಧಕ್ಕೆ ಬರುತ್ತಿರು

ವಷ್ಟರಲ್ಲಿ ಆಕಾಶದಿಂದ ನಾರದನು ಇಳಿದು ಬಂದು ಕೃಷ್ಣನನ್ನು ಕುರಿತು "ನಿನ್ನ ಮಗನಾದ ಮನ್ಮಥನನ್ನು ನಾನು ತಂದೆನು" ಎಂದನು. ಆ ಮಾತನ್ನು ಕೇಳಿ ಹರಿಯು ಬಹುಸಂತುಷ್ಟನಾಗಿ ಆತನನ್ನು ತಂದ ವಿವರವನ್ನೆಲ್ಲ ನಾರದನಿಂದ ತಿಳಿದು ಬಳಿಕ ತಾನೇರಿದ ರಥದಿಂದಿಳಿದು ಬರುತ್ತಿರಲು ಕಂಡು ಸ್ಮರನು ಇದಿರಾಗಿ ಹೋಗಿ ಭಕ್ತಿ ಯಿಂದ ಕೇಶವನ ಕಾಲಿಗೆರಗಿದನು. ಹರಿಯು ಮಗನ ತಲೆಯನ್ನು ಹಿಡಿದೆತ್ತಿ ಹರಸಿ ಬಿಗಿದಪ್ಪಿ ಆನಂದಾಶ್ರುಗಳನ್ನು ಸುರಿದನು. ಆಗ ಮನ್ಮಥನು ತನ್ನ ಮಾಯಾಸೇನೆಯನ್ನು ಪರಿಹರಿಸಿ ಮೊದಲು ಬಂಧಿಸಿದ ವೀರರ ಬಂಧನಗಳನ್ನು ಬಿಡಿಸಿ ನಾರದನ ಹೇಳಿಕೆಯಂತೆ ಸಮುದ್ರವಿಜಯ ಮೊದಲಾದವರಿಗೆ ನಮಸ್ಕಾರಮಾಡಿ ಅವರುಗಳ ಆಶೀರ್ವಾದಗಳನ್ನು ಪಡೆದನಂತರ ಕೇಶವನು ಮಾರನನ್ನು ವೈಭವದಿಂದ ಮನೆಗೆ ಕರೆದೊಯ್ದು ಸಿಹ್ಮಾಸನದಲ್ಲಿ ಕುಳ್ಳಿರಿಸಿ ಯುವರಾಜಪಟ್ಟವನ್ನು ಕಟ್ಟಿದನು. ಆ ಲಗ್ನದಲ್ಲಿ ಉದಧಿಕುಮಾರಿಯನ್ನು ಮಾರನಿಗೆ ಮದುವೆಮಾಡಬೇಕೆಂದು ಕೃಷ್ಣನು ಉಜ್ಜುಗಿಸಲು ಕಂಡು ಮನ್ಮಥನು ವಿನಯದಿಂದ ಕೈಮುಗಿದು ತಾನು ವಿಜಯಾರ್ಧಗಿರಿಯಲ್ಲಿ ಬಹುವಸ್ತುಗಳನ್ನು ಸಾಧಿಸುವ ಸಮಯದಲ್ಲಿ ವಶವಾದ ರತಿಯನ್ನು ಮೊದಲು ಮದುವೆಯಾಗಬೇಕೆಂದನು. ಅದಕ್ಕೆ ವಿಷ್ಣುವು ಸಮ್ಮತಿಸಿ ಕರೆಸೆನಲು ಸ್ಮರನು ವಿದ್ಯೆಯಿಂದ ಕಾಳಶಂಬರ ವಜ್ರದಾಡ ಮೊದಲಾದವರನ್ನೂ ಆ ವಸ್ತುಗಳನ್ನೂ ರತಿಯನ್ನೂ ಬರಮಾಡಿದನು. ಅವರನ್ನು ಇದಿರ್ಗೊಂಡು ಕರೆತಂದು ಅನುಪಮ ವೈಭವದಿಂದ ಗೋವಿಂದನು ರತಿ ಮನ್ಮಥರ ವಿವಾಹವನ್ನು ಮಾಡಿ ತದನಂತರ ಉದಧಿಕುಮಾರಿಯನ್ನು ಮನ್ಮಥನಿಗೆ ಮದುವೆಮಾಡಿದನು. ಹೀಗೆ ಬೇರೆ ನೂರೆಂಟು ಮಂದಿ ರಾಜಪುತ್ರಿಯರನ್ನೂ ಮಾರನು ಮದುವೆಯಾಗಿ ಆ ಲಲನಾಮಣಿಯರಲ್ಲಿ ವಿನೋದದಿಂದಿದ್ದನು.

ಇತ್ತ ರುಗ್ಮಿಣಿಯು ತನಗೆ ಗೆಲುವಾದುದರಿಂದ ಸತ್ಯಭಾಮೆಯ ಕುರುಳು ಕೂದಲುಗಳನ್ನು ಕೇಳುವುದಕ್ಕೆ ತನ್ನ ಭೃತ್ಯರನ್ನು ಕಳುಹಿದಳು. ಅವರು ಹೋಗಿ ಕೇಳಲು ಸತ್ಯಭಾಮೆಯು ಬಹಳವಾಗಿ ರೇಗಿ "ಯಾವನೋ ಖೇಚರನ ಮಗನನ್ನು ತಂದು ತನ್ನ ಮಗನೆಂದು ಮೆರೆದರೆ ನನ್ನ ತಲೆಗೂದಲನ್ನು ಕೊಡುವೆನೇ? ' ಎಂದಳು. ಆ ಮಾತನ್ನು ಅವರು ಹೋಗಿ ಹೇಳಲು ಕೃಷ್ಣನು ಮನ್ಮಥನ ವಿಷಯವನ್ನೆಲ್ಲ ಸತ್ಯಭಾಮೆಗೆ ಹೇಳುವುದಕ್ಕಾಗಿ ನಾರದನನ್ನು ಆಕೆಯಬಳಿಗೆ ಕಳುಹಿದನು. ಅವನು ಹೋಗಿ ತಾನು ಪೂರ್ವವಿದೇಹವೆಂಬ ಕ್ಷೇತ್ರದಲ್ಲಿ ಶ್ರೀಮಂದರತೀರ್ಥಂಕರರ ಗಣಧರರಿಂದ

ಮನ್ಮಥನಿರುವಸ್ಥಾನವನ್ನೂ ಅವನ ಜನ್ಮಾಂತರವಿಷಯವನ್ನೂ ವಿಸ್ತಾರವಾಗಿ ತಿಳಿದೆನೆಂದು ಸತ್ಯಭಾಮೆಗೆ ಹೇಳಿ ಆ ವಿಷಯವನ್ನು ಹೀಗೆ ವಿವರಿಸುತ್ತಾನೆ—

ಈ ಭರತಕ್ಷೇತ್ರದ ಆರ್ಯಖಂಡದ ಮಗಧದೇಶದಲ್ಲಿರುವ ಶಾಲಿಗ್ರಾಮ ವೆಂಬ ಊರಿನಲ್ಲಿ ಸೋಮಶರ್ಮನೆಂಬ ಬ್ರಾಹ್ಮಣನಿಗೂ ಆತನ ಸತಿ ಅಗ್ನಿಲೆಗೂ ಅಗ್ನಿಭೂತಿ ಮಾರುತಭೂತಿಗಳೆಂಬ ಇಬ್ಬರು ಮಕ್ಕಳು ಹುಟ್ಟಿದರು. ಅವರು ಪ್ರಾಯ ಭರಿತರಾಗಿ ಒಂದು ದಿನ ಆ ನಗರದ ನಂದನವನಕ್ಕೆ ಬಂದಿದ್ದ ಓರ್ವ ಮುನಿಯ ಬಳಿಗೆ ಹೋಗಿ ಅವನೊಡನೆ ವಿದ್ಯಾಮದದಿಂದ ವಾದಮಾಡಿ ಸೋತು ಲಜ್ಜೆಯಿಂದ ಹೊರ ಟುಹೋಗಿ ಆ ದಿನ ರಾತ್ರಿಯಲ್ಲಿ ಆ ಮುನಿಯನ್ನು ಕೊಲ್ಲಬೇಕೆಂದು ಕತ್ತಿಯನ್ನು ತೆಗೆದುಕೊಂಡು ಹೋದರು. ಆಗ ಆ ವನವನ್ನು ರಕ್ಷಿಸುವ ಕನಕಯಕ್ಷನೆಂಬ ದೇವನು ಕೋಪದಿಂದ ಆ ಅಗ್ನಿಭೂತಿ ವಾಯುಭೂತಿಗಳಿಗೆ ಹಲವು ಬಾಧೆಗಳನ್ನುಂ ಟುಮಾಡಿದನು. ಆಗ ಅವರು ಬೆದರಿ ಪ್ರಾಣದಾನವನ್ನು ಮಾಡಬೇಕೆಂದು ಮುನಿ ಯ ಅಡಿದಾವರೆಗೆ ಅವನತರಾಗಿ ಬಿದ್ದಿರಲು ಆ ಯಕ್ಷನು ' ನಿಮ್ಮ ದುರ್ಮಾರ್ಗವನ್ನು ಬಿಟ್ಟು ಸನ್ಮಾರ್ಗವನ್ನು ಹೊಂದಿದಲ್ಲದೆ ನಾನು ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ ' ಎಂದನು. ಆಗ ಅವರು ಗರ್ವವನ್ನು ಬಿಟ್ಟು ಆ ಯಕ್ಷನು ಹೇಳಿದಂತೆ ಆ ಮುನಿ ಯಿಂದ ಉತ್ತಮವ್ರತವನ್ನು ಕೈಕೊಂಡು ತಮ್ಮ ಮನೆಗೆ ಹೋದರು. ಅಲ್ಲಿ ಅವರ ತಂದೆತಾಯಿಗಳು ಆ ವಿಷಯವನ್ನು ತಿಳಿದು " ಮಕ್ಕಳಿರಾ! ನೀವು ಉತ್ತಮವಾದ ವೈದಿಕಪದ್ಧತಿಯನ್ನು ಬಿಟ್ಟು ಸವಣರ ಧರ್ಮವನ್ನವಲಂಬಿಸುವುದು ಉಚಿತವಲ್ಲ " ಎಂದು ನಿರ್ಬಂಧಪಡಿಸಿದರೂ ಕೇಳದೆ ಆ ಸಹೋದರರಿಬ್ಬರೂ ತಾವು ಕೈಕೊಂಡ ವ್ರತವನ್ನು ಬಿಡದೆ ಪಾಲಿಸಿ ಆಯುಷ್ಯವು ತೀರಿದಮೇಲೆ ಸತ್ತು ಆ ವ್ರತದ ಫಲದಿಂದ ಸೌಧರ್ಮವೆಂಬ ಪ್ರಥಮಸ್ವರ್ಗದಲ್ಲಿ ಹುಟ್ಟಿ ದಿವ್ಯಸುಖವನ್ನುಂಡು ಅಲ್ಲಿಂದ ಬಂದು ಇಲ್ಲಿಯ ಕೌಶಲದೇಶದ ಸಾಕೇತನಗರದ ಅರಿಂಜಯರಾಜನ ರಾಜಶ್ರೇಷ್ಠಿ ಜಿನದಾ ಸನಿಗೂ ಆತನ ಸತಿ ಶ್ರೀನಪ್ಪೆಗೂ ಪೂರ್ಣಭದ್ರ ವಾಣಿಭದ್ರರೆಂಬ ಮಕ್ಕಳಾಗಿ ಹುಟ್ಟಿ ಬೆಳೆದು ಯೌವನವನ್ನು ಹೊಂದಿದರು. ಒಂದು ದಿನ ಆ ನಗರದ ನಂದನವ ನಕ್ಕೆ ಓರ್ವ ಮುನಿಶ್ರೇಷ್ಠನು ಬರಲು ಅಲ್ಲಿಯ ರಾಜನೂ ಜಿನದಾಸಶ್ರೇಷ್ಠಿಯೂ ಆ ಸಹೋದರರೂ ಆ ಮುನಿಯ ಬಳಿಗೆ ಹೋಗಿ ಅವನಿಂದ ಧರ್ಮಾಧರ್ಮಸ್ವರೂಪ ವನ್ನು ತಿಳಿದು ಅವರೆಲ್ಲರೂ ದೀಕ್ಷೆಯನ್ನು ಪಡೆದರು. . ಪೂರ್ಣಭದ್ರ ವಾಣಿಭದ್ರರು ತಪಸ್ಸನ್ನು ಮಾಡಿ ಮಡಿದು ಸೌಧರ್ಮಸ್ವರ್ಗದಲ್ಲಿ ಹುಟ್ಟಿ ಸುಖವನ್ನುಂಡು ಬಂದು ಈ ಕುರುಭೂಮಿಯಲ್ಲಿ ಹಸ್ತಿನಾಪುರದ ವಿಶ್ವಭೂಪತಿಗೂ ಆತನ ಪತ್ನಿಯಾದ ರೂಪ

ವತಿಗೂ ಮಧು ಕೈಟಭರೆಂಬ ಮಕ್ಕಳಾಗಿ ಹುಟ್ಟಿ ಬಹುಲಾವಣ್ಯಯುತರಾಗಿ ಬೆಳೆದು ತಾರುಣ್ಯವನ್ನು ಹೊಂದಲು ವಿಶ್ವಭೂಪತಿಯು ತನ್ನ ರಾಜ್ಯವನ್ನು ಮಕ್ಕಳಿಗೆ ಕೊಟ್ಟು ತಾನು ಜಿನದೀಕ್ಷೆಯನ್ನು ಪಡೆದನು.

ಇತ್ತ ಮಧುವು ರಾಜನಾಗಿಯೂ ಕೈಟಭನು ಯುವರಾಜನಾಗಿಯೂ ಸುಖ ದಿಂದ ರಾಜ್ಯವಾಳುತ್ತಿದ್ದರು. ಆಗ ಮಧುರಾನಗರದಲ್ಲಿ ದೊರೆಯಾಗಿದ್ದ ವೀರಸೇನ ರಾಜನು ಮಧುರಾಜನಲ್ಲಿ ಬಹು ಸ್ನೇಹವುಳ್ಳವನಾಗಿದ್ದು ಒಂದುದಿನ ತನ್ನ ಚಂದ್ರಾ ಭೆಯೆಂಬ ಪತ್ನಿಯ ಕೈಯಲ್ಲಿ ಉತ್ತಮವಸ್ತುಗಳನ್ನು ಕೈಗಾಣಿಕೆಯಾಗಿ ಕೊಟ್ಟು ಮಧುರಾಜನ ಬಳಿಗೆ ಕಳುಹಲು ಆತನು ಆಕೆಯ ರೂಪಲಾವಣ್ಯವನ್ನು ನೋಡಿ ಮೋಹಿಸಿ ಆಕೆಯನ್ನು ಹೋಗಗೊಡದೆ ಅವಳಲ್ಲಿ ಕೂಡಿದ್ದನು. ಆ ವಿಷಯವನ್ನು ವೀರಸೇನನು ತಿಳಿದು ಆತನಿಂದ ತನ್ನ ವಲ್ಲಭೆಯನ್ನು ತರಿಸಲು ಶಕ್ತಿಯಿಲ್ಲದೆ ಹುಚ್ಚ ನಾಗಿ ಹಸ್ತಿನಾಪುರಕ್ಕೆ ಹೋದನು. ಅಲ್ಲಿಯ ಜನರು ಮಧುರಾಜನ ಕೃತ್ಯಕ್ಕೆ ಬಹಳ ವಾಗಿ ಪರಿಹಾಸ್ಯಮಾಡುವುದನ್ನು ಕೇಳಿ ಆ ಮಧುರಾಜನು ಪರಸ್ತ್ರೀಹರಣದ ದುರ್ಯಶಸ್ಸಿಗೆ ಕೊಕ್ಕರಿಸಿ ಒಂದು ದಿನ ಆ ನಗರದ ಉದ್ಯಾನದಲ್ಲಿ ಬಂದು ನೆಲ ಸಿದ್ದ ವಿಮಲವಾಹನರೆಂಬ ಕೇವಲಿಗಳ ಬಳಿಗೆ ಹೋಗಿ ಧರ್ಮೋಪದೇಶವನ್ನು ಕೇಳಿ ವೈರಾಗ್ಯದಿಂದ ತನ್ನ ಮಗನಿಗೆ ರಾಜ್ಯಭಾರವನ್ನು ವಹಿಸಿ ತಾನು ತನ್ನ ತಮ್ಮನಾದ ಕೈಟಭನೊಡನೆ ದೀಕ್ಷೆಯನ್ನು ಧರಿಸಿ ತಪಸ್ಸುಮಾಡಿ ಸತ್ತು ಮಹಾಶುಕ್ರವೆಂಬ ಹತ್ತ ನೆಯ ಸ್ವರ್ಗದಲ್ಲಿ ಇಂದ್ರನಾಗಿ ಹುಟ್ಟಿದನು. ಆತನ ತಮ್ಮ ಕೈಟಭನೂ ಅದೇ ಸ್ವರ್ಗದಲ್ಲಿ ಪ್ರತೀಂದ್ರನಾಗಿ ಹುಟ್ಟಿದನು. ಅವರೀರ್ವರೂ ಹದಿನಾರು ಸಾಗರೋ ಪಮಕಾಲದವರೆಗೆ ದಿವ್ಯಸುಖವನ್ನನುಭವಿಸಿ ಅಲ್ಲಿಂದ ಮಧುರಾಜನಾಗಿದ್ದ ದೇವನು ಬಂದು ಮನ್ಮಥನಾಗಿ ಹುಟ್ಟಿದನು. ಅತ್ತ ವೀರಸೇನನು ತನ್ನ ಪತ್ನಿಯಲ್ಲಿ ಮನ ವಿಟ್ಟು ಮರುಳಾಗಿ ಸತ್ತು ಭವಸಾಗರದಲ್ಲಿ ತೊಳಲುತ್ತಿದ್ದು ಕರ್ಮೋಪಶಮ ದಿಂದ ಮನುಷ್ಯಜನ್ಮವನ್ನು ಪಡೆದು ಪಂಚಾಗ್ನಿ ತಪಸ್ಸನ್ನು ಮಾಡಿ ಮಡಿದು ಧೂಮ ಕೇತುವೆಂಬ ಜ್ಯೋತಿಷ್ಕದೇವನಾಗಿ ಹುಟ್ಟಿ ಒಂದು ದಿನ ಆಕಾಶಮಾರ್ಗದಲ್ಲಿ ಬರು ತ್ತ ತನ್ನ ವಿಮಾನವು ನಿಂತುಹೋಗಲು ಆ ದೇವನು ಕೆಳಕ್ಕಿಳಿದು ಬಂದು ರುಗ್ಮಿಣಿಯ ಪಕ್ಕದಲ್ಲಿ ಮಗನಿರುವುದನ್ನು ಕಂಡು ಪೂರ್ವದ ಶತ್ರುವೆಂದು ಎತ್ತಿಕೊಂಡುಹೋಗಿ ದೊಡ್ಡಕಾಡಿನಲ್ಲಿ ಹಾಕಿಹೋದನು. ಆ ಮಗುವನ್ನು ಕಾಳಶಂಬರನು ಕೊಂಡೊ ಯ್ದು ಸಾಕಿದನು. ಮನ್ಮಥನು ಯೌವನಾವಸ್ಥೆಯನ್ನು ಹೊಂದಿರಲು, ಪೂರ್ವದ ಆ ಚಂದ್ರಾಭೆಯು ಅನೇಕ ಭವಗಳಲ್ಲಿ ತೊಳಲಿ ಕಾಳಶಂಬರನಿಗೆ ಕಾಂಚನಮಾಲೆ

ಯೆಂಬ ಹೆಂಡತಿಯಾಗಿ ಹಿಂದಿನ ಭವಬದ್ಧವಾದ ಮೋಹದಿಂದ ಮದನನಲ್ಲಿ ಮರುಳಾದಳು. ಅತ್ತ ಕೈಟಭನಾಗಿದ್ದ ಪ್ರತೀಂದ್ರನು ಸ್ವರ್ಗದಿಂದ ಬಂದು ಇಂದಿಗೆ ಆರನೆಯ ತಿಂಗಳಲ್ಲಿ ಕೃಷ್ಣನಿಗೆ ಪುತ್ರನಾಗಿ ಹುಟ್ಟುವನು" ಎಂದು ಹೇಳಿ ನಾರದನು ಹೊರಟುಹೋದನು. ಸತ್ಯಭಾಮೆಯು ನಾರದನ ಮಾತನ್ನು ಕೇಳಿ ರುಗ್ಮಿಣಿಯ ಭೃತ್ಯರನ್ನು ಕರೆದು ತನ್ನ ತಲೆಗೂದಲುಗಳನ್ನು ತೆಗೆದುಕೊಳ್ಳುವಂತೆ ಹೇಳಲು ಅವರು "ಕುರುಳನ್ನು ಕೇಳಿದಾಗ ಸತ್ಯಭಾಮೆಯು ಕೊಡುವುದಕ್ಕೆ ಬಂದರೆ ತೆಗೆದುಕೊಳ್ಳದೆ ಹಿಂದಿರುಗಿರೆಂದು ನಮಗೆ ರುಗ್ಮಿಣಿಯು ಆಜ್ಞಾಪಿಸಿರುವುದರಿಂದ ನಾವು ಇವನ್ನು ತೆಗೆದುಕೊಳ್ಳುವುದಿಲ್ಲ" ಎಂದು ಹೇಳಿ ಹಿಂದಿರುಗಿಹೋಗಿ ಆ ವಿವರವನ್ನು ರುಗ್ಮಿಣಿಗೆ ತಿಳುಹಲು ಆಕೆಯು ಕೇಳಿ ಮಗನ ಪುಣ್ಯೋದಯವನ್ನು ನೋಡಿ ಅತಿ ಸಂತೋಷವನ್ನು ಹೊಂದಿ ಸುಖವಾಗಿದ್ದಳು.



## ೨೧. ಮದನವಿದರ್ಭೆಯರ ವಿವಾಹವರ್ಣನ ಸಂಧಿ



ಇಂದಿಗೆ ಆರನೆಯ ತಿಂಗಳ ರಾತ್ರಿಯಲ್ಲಿ ಸ್ವರ್ಗದಿಂದ ಬಂದು ಮನ್ಮಥನ ಪೂರ್ವಭವದ ತಮ್ಮನು ಕೃಷ್ಣನಿಗೆ ಮಗನಾಗುವನೆಂಬ ನಾರದನ ಮಾತನ್ನು ಕೇಳಿ ಸತ್ಯಭಾಮೆಯು ಕೃಷ್ಣನ ಬಳಿಗೆ ಹೋಗಿ ಆದಿನದ ಸರ್ತಿಯನ್ನು ಬೇಡಿ ಪಡೆದು ತನ್ನ ಮನೆಗೆ ಬರಲು ಸ್ಮರನು ಆ ವಿಷಯವನ್ನು ತಿಳಿದು ತನ್ನ ಕೈಯಲ್ಲಿ ಶೋಭಿಸುವ ಕಾಮಮುದ್ರಿಕೆಯನ್ನು ಜಂಬಾವತಿಗಿತ್ತನು. ಆಕೆಯು ಅದನ್ನು ತನ್ನ ಕೈಬೆರಳಿಗಿಟ್ಟುಕೊಂಡಿದ್ದು ಆ ದಿನ ಸತ್ಯಭಾಮೆಯ ರೂಪವನ್ನು ಕೈಕೊಂಡು ಆಕೆಗಿಂತ ಮೊದಲೇ ತಾನು ಕೃಷ್ಣನ ಶಯ್ಯಾಗೃಹಕ್ಕೆ ಹೋಗಲು ಸತ್ಯಭಾಮೆಯೆಂದು ತಿಳಿದು ಕೃಷ್ಣನು ಆಕೆಯಲ್ಲಿ ರತಿಕ್ರೀಡೆಯನ್ನಾಡುತ್ತಿದ್ದನು. ಆಗ ಸತ್ಯಭಾಮೆಯು ಬಹಳವಾಗಿ ಶೃಂಗಾರಮಾಡಿಕೊಂಡು ಗಂಡನ ಬಳಿಗೆ ಬರುತ್ತ ಆತನು ಮತ್ತೋರ್ವಸತಿಯಲ್ಲಿ ಕೂಡಿರುತ್ತಾನೆಂಬುದನ್ನು ಕೇಳಿ ಹಿಂದಿರುಗಿ ಮನೆಗೆಹೋಗಿ ಬಹುಕೋಪದಿಂದಿದ್ದು ಮರುದಿನ ಬೆಳಿಗ್ಗೆ ಎದ್ದು ಪತಿಯ ಬಳಿಗೆ ಬಂದು "ನೀನು ಪುರುಷೋತ್ತಮನೆಂಬುದನ್ನು ಸುಳ್ಳುಮಾಡಿ ದನಕಾಯುವವನೆಂಬ ಮಾತನ್ನು ನಿಜಮಾಡಿದೆ" ಎನಲು ಕಮಲ

ನಾಭನು ನಸುನಗುತ "ಎಲೈ ಕಮಲವದನೆ! ಕೇಳು, ಸ್ಮರಸ ಕೃತ್ಯದಿಂದ ಜಂಬಾವತಿಯು ಕಾಮಮುದ್ರಿಕೆಯನ್ನು ಕೈಗಿಟ್ಟುಕೊಂಡು ನಿನ್ನರೂಪವನ್ನು ಧರಿಸಿಕೊಂಡುಬರಲು ನೀನೆಂದು ತಿಳಿದು ನಾನು ಅವಳಲ್ಲಿ ಕೂಡಿದೆನು. ನನ್ನಲ್ಲಿ ತಪ್ಪಿಲ್ಲ" ಎಂದು ಒಳ್ಳೆಯ ಮಾತನ್ನಾಡಿ ಸಂತೈಸಿ ಕಳುಹಿದನು. ಇತ್ತ ಜಂಬಾವತಿಗೆ ಗರ್ಭವು ನಿಂತು ಒಂಬತ್ತನೆಯ ತಿಂಗಳಲ್ಲಿ ಶುಭಲಗ್ನದಲ್ಲಿ ಶಿಶುವು ಜನಿಸಲು ಕೃಷ್ಣನು ಉತ್ಸವವನ್ನು ಮಾಡಿಸಿ ಆ ಶಿಶುವಿಗೆ ಶಂಭುಕುಮಾರನೆಂದು ಹೆಸರನ್ನಿಟ್ಟನು. ಅದು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತ ವಿದ್ಯಾವಿನಯ ರೂಪ ಮೊದಲಾದ ಗುಣಗಳಲ್ಲಿ ಮನ್ಮಥನನ್ನು ಹೋಲುತ್ತಿದ್ದಿತು. ಪೂರ್ವಭವದ ಸಂಸ್ಕಾರದಿಂದ ಅವರೀರ್ವರೂ ಪರಸ್ಪರ ಅನುರಾಗವುಳ್ಳವರಾಗಿದ್ದರು. ಮದನನು ವಿದ್ಯಾಧರಲೋಕದಲ್ಲಿ ಕಲಿತ ವಿದ್ಯೆಗಳನ್ನೆಲ್ಲ ಶಂಭುಕುಮಾರನಿಗೆ ಕಲಿಸಿದನು.

ಒಂದು ದಿನ ರುಗ್ಮಿಣಿಯು ಸಚಿವರ ಕೈಯಲ್ಲಿ ಕೈಗಾಣಿಕೆಗಳನ್ನು ಕೊಟ್ಟು ತನ್ನ ಅಣ್ಣನಾದ ರುಗ್ಮಿಣನ ಬಳಿಗೆ ಕಳುಹಲು ಅವರು ಹೋಗಿ ಆ ಕೈಗಾಣಿಕೆಗಳನ್ನಿತ್ತು "ಎಲೈ ರಾಜನೆ! ರುಗ್ಮಿಣಿದೇವಿಯು ತನ್ನ ಮಗನಾದ ಮದನನಿಗೆ ನಿಮ್ಮ ಮಗಳಾದ ವೈದರ್ಭೆಯನ್ನು ಕೇಳಲು ನಮ್ಮನ್ನು ನಿಮ್ಮಬಳಿಗೆ ಕಳುಹಿಸಿದ್ದಾಳೆ" ಎಂದರು. ಆ ಮಾತನ್ನು ಕೇಳಿ ರುಗ್ಮಿಣರಾಜನು "ಮೊದಲು ನಿಮ್ಮ ಒಡೆಯನು ಬಂದು ನಮ್ಮ ತಂದೆಯನ್ನು ಕೊಂದು ನನ್ನ ತಂಗಿಯನ್ನು ಒಯ್ದನು. ಅವನ ಮಗನಿಗೆ ನನ್ನ ಮಗಳನ್ನು ಹೇಗೆ ಕೊಡಲಿ? ಅವನಿಗೆ ಕೊಡುವುದಕ್ಕೆ ಬದಲಾಗಿ ಚಂಡಾಲರಿಗೆ ಕೊಡುವೆನು" ಎನಲು ಆ ಮಾತನ್ನು ಮಂತ್ರಿಗಳು ಹೋಗಿ ರುಗ್ಮಿಣಿಗೆ ತಿಳಿಸಿದರು. ಆ ಮಾತನ್ನು ಮನ್ಮಥನು ಕೇಳಿ "ಜನನಿಯೆ! ಕೇಳು, ರುಗ್ಮಿಣ ಮಾವನು ತನ್ನ ಮಗಳನ್ನು ಚಂಡಾಲರಿಗೆ ಕೊಡುತ್ತೇನೆಂದನಲ್ಲವೆ? ನಾನು ಆ ರೂಪವನ್ನೇ ಅನುಕರಣಮಾಡುತ್ತೇನೆ" ಎಂದು ತಾಯಿಯ ಚರಣಗಳಿಗೆ ನಮಸ್ಕರಿಸಿ ಬೀಳ್ಕೊಂಡು ಶಂಭುಕುಮಾರನೊಡನೆ ವಿಮಾನವನ್ನೇರಿ ಆಕಾಶಮಾರ್ಗದಿಂದ ಆ ಕುಂಡಿನಪುರಕ್ಕೆ ಹೋಗಿ ಅದರ ಮೇಲ್ಗಡೆಯಲ್ಲಿ ನಿಂತು ಮನ್ಮಥನು ತನ್ನ ವಿದ್ಯೆಯಿಂದ ವೃದ್ಧಚಾಂಡಾಲಿಯ ರೂಪವನ್ನು ರಚಿಸಲು ಆ ಚಾಂಡಾಲಿಯು ಆ ನಗರಕ್ಕಿಳಿದು ರುಗ್ಮಿಣನ ಅರಮನೆಗೆ ಹೋಗಿ ಒಂದು ಬುಟ್ಟಿಯಲ್ಲಿ ಸುವರ್ಣರತ್ನಾಭರಣಗಳನ್ನು ತುಂಬಿಕೊಂಡು ರುಗ್ಮಿಣನ ಓಲಗಕ್ಕೆ ಹೋಗಿ "ನಿನ್ನಮಗಳನ್ನು ನನ್ನ ಮಗನಿಗೆ ಕೊಡು" ಎನಲು ದೊರೆಯು ಆಶ್ಚರ್ಯಪಡುತ್ತ "ಚಾಂಡಾಲಿಯೆ! ಕೇಳು, ನಿನ್ನ ಆ ಮಗನನ್ನು ತಂದು ತೋರಿಸು" ಎಂದನು. ಆ ಮಾತನ್ನು ಕೇಳಿ ಆಕೆಯು

ಮನ್ಮಥನೆಡೆಗೆ ಹೋಗಿ ದೊರೆಯು ಹೇಳಿದ ಮಾತನ್ನು ಹೇಳಲು ಅವನು ಶಂಭು ಕುಮಾರನೊಡನೆ ಚಾಂಡಾಲವೇಷದಿಂದ, ಪ್ರೇಕ್ಷಕರು ಆಶ್ಚರ್ಯಪಡುವಂತೆ, ಓಲಗ ಶಾಲೆಗೆ ಹೋಗಿ ದೊರೆಗೆ ವಂದಿಸಿ ದೂರದಲ್ಲಿನಿಂದಿರಲು ನೋಡಿ ದೊರೆಯು "ನಿಮ್ಮ ಪಟ್ಟಣವಾವುದು ? ನಿಮ್ಮ ಕೆಲಸವೇನು ? ಹೇಳಿ " ಎನಲು ಆ ಮಾತನ್ನು ಕೇಳಿ ಕಾಮನು " ನಾವಿರುವ ನಗರಿಯು ದ್ವಾರಾವತಿ. ನಿಮ್ಮ ಮಗಳನ್ನು ಮಾತಂಗರಿಗೆ ಕೊಡುತ್ತೇವೆಂದು ಹೇಳಿದಿರಿ. ಆ ವಾರ್ತೆಯನ್ನು ಕೇಳಿ ಆ ಸುಕುಮಾರಿಯನ್ನು ಕೇಳುವುದಕ್ಕಾಗಿ ಬಂದೆವು ' ಎನಲು ದೊರೆಯು " ತನಗೆ ಬೇಡವಾದವರಿಗೆ ಮಗ ಳನ್ನು ಕೊಡುವುದಕ್ಕಿಂತಲೂ ನಿಮಗೆ ಕೊಡುವುದೊಳ್ಳೆಯದು. ನಿಮ್ಮ ರೂಪುಲಾವ ಣ್ಯವು ಚಂಡಾಲರಿಗಿರುವುದಿಲ್ಲ. ಇದು ನಮಗೆ ಆಶ್ಚರ್ಯಕರವಾಗಿದೆ " ಎಂದನು. ಆ ಮಾತನ್ನು ಕೇಳಿ ಮದನ ಶಂಭುಕುಮಾರರು " ಹರಿಯ ಕೃಪೆಯಿಂದ ನಮಗೆ ಈ ರೂಪವೂ ಸಿರಿಯೂ ದೊರಕಿರುತ್ತವೆ. ರಾಜರು ನುಡಿದ ಮಾತಿಗೆ ತಪ್ಪುವವ ರಲ್ಲವಾದುದರಿಂದ ನಿಮ್ಮ ಮಗಳನ್ನು ಕೊಡಬೇಕು " ಎನಲು ರಾಜನು ದ್ವಾರಾವ ತಿಯ ನಿವಾಸಿಗಳಿಗೆ ಕೊಡುವುದಿಲ್ಲವೆಂದೂ ಬೇರೆಯವರಿಗೆ ಕೊಡುವೆನೆಂದೂ ಹೇಳಿ ದನು. ಆ ನುಡಿಯನ್ನು ಕೇಳಿ ಅವರು ಹೊರಟು ನಡುಬೀದಿಗೆ ಬಂದು ನಿಂತರು. ಆಗ ವಿದರ್ಭೆಯು ಅವರನ್ನು ನೋಡುವ ಇಚ್ಛೆಯಿಂದ ಉಪ್ಪರಿಗೆಯನ್ನೇರಿ ಜಗದಾಶ್ಚರ್ಯಕರವಾದ ಅವರ ರೂಪವನ್ನೂ ಹೆಚ್ಚಾಗಿ ಮನ್ಮಥನ ರೂಪ ವನ್ನೂ ನೋಡಿ ಬಹಳವಾಗಿ ಮೋಹಿತಳಾದಳು. ಮದನನೂ ಆಕೆಯ ರೂಪವನ್ನು ನೋಡಿ ಮೋಹಿತನಾದನು. ಬಳಿಕ ಅವರು ಆ ರೂಪವನ್ನು ಬಿಟ್ಟು ಗೊರವಿಯರ– ತಪಸ್ವಿನಿಯರ ರೂಪವನ್ನು ಧರಿಸಿಕೊಂಡು ತ್ರಿಕಾಲವಿಷಯಗಳ ನಿಮಿತ್ತವನ್ನು ಹೇಳುತ್ತೇವೆಂದು ಬೀದಿಯಲ್ಲಿ ಬರುತ್ತಿರುವಾಗ ವಿದರ್ಭೆಯ ದಾಸಿಯರು ಅವ ರನ್ನು ಕನ್ಯಾಮಾಡಕ್ಕೆ ಕರೆದೊಯ್ದರು. ಅಲ್ಲಿ ವಿದರ್ಭೆಯನ್ನು ನೋಡಿ " ಕೈ ತೋರು, ನೀನು ಕಂಡ ಕನಸನ್ನೂ ಉಂಡೂಟವನ್ನೂ ಹೇಳುವೆನು " ಎನಲು ಆಕೆ ಯು ತನ್ನ ಕೈಯನ್ನು ಕೊಟ್ಟು ತಾನುಂಡ ಊಟದ ಮತ್ತು ಕನಸಿನ ವಿವರವನ್ನು ಕೇಳಿದಳು. ಆಗ ಕಾಮನು ಪ್ರಜ್ಞಪ್ತಿಯೆಂಬ ವಿದ್ಯೆಯಿಂದ " ವನಿತೆಯೆ ! ಇಂದಿನ ರಾತ್ರಿ ನೀನು ಮನ್ಮಥನ ಕೈಹಿಡಿದಿರುವುದನ್ನೂ ಆತನ ಪುಷ್ಪಬಾಣಗಳನ್ನೂ ಕನಸಿನಲ್ಲಿ ಕಂಡಿರುವುದು ಸುಳ್ಳಲ್ಲವು " ಎಂದು ಹೇಳಿ ಆಕೆಯು ಊಟಮಾಡಿದ್ದ ವಸ್ತುಗಳ ವಿವರ ವನ್ನೂ ಹೇಳಿದನು. ಅದನ್ನು ಕೇಳಿ ವಿದರ್ಭೆಯು ಅಚ್ಚರಿಪಟ್ಟು ಸಂತೋಷದಿಂದ ಆ ಗೊರವಿಯರನ್ನು ಏಕಾಂತಸ್ಥಾನಕ್ಕೆ ಕರೆದೊಯ್ದು " ಗೊರವಿಯರಿರಾ ! ನನ್ನ

ಮನಸ್ಸಿನಲ್ಲಿರುವ ಅಭೀಷ್ಟವನ್ನು ಹೇಳಬೇಕು '' ಎನಲು ಕಾಮನು ಆಕೆಯ ಕೈಯನ್ನು ಹಿಡಿದು ನೋಡಿ " ವನಿತೆಯೆ ! ನೀನೋರ್ವ ಮಾದಿಗನಲ್ಲಿ ಮನಸನ್ನಿಟ್ಟಿರುವೆ; ಏನು ಹೇಳುವೆ ? '' ಎಂದನು. ಅದಕ್ಕವಳು " ಇದು ಸುಳ್ಳು '' ಎಂದು ನಸುನಕ್ಕಳು. ಆಗ ಮನ್ಮಥನು " ಇದೇಕೆ ಮುಚ್ಚುಮರೆ ? ಮೊದಲು ನೀನು ಇಚ್ಛಿಸಿದವನು ನಿನ್ನಬಳಿಗೆ ಮೆಚ್ಚಿ ಬಂದಿರುವನು, ಎನ್ನಮಾಕಾಳಿಯಾಣೆ, ನೀನು ಸಂದೇಹಪಡಬೇಡ '' ಎಂದು ಹೇಳಿ ಆಕೆಯಿಂದ ಬಹುಮಾನವನ್ನು ಪಡೆದು ಬಂದು ಆ ರೂಪವನ್ನು ಬಿಸುಟು ಮೊದಲಿನ ಮಾತಂಗರೂಪವನ್ನು ಕೈಕೊಂಡು ಬಂದು ಕಾಮನು ವಿದರ್ಭೆಯ ಮುಂದೆ ನಿಂತನು. ಆತನ ಅಸದೃಶವಾದ ರೂಪವನ್ನು ನೋಡಿ ವಿದರ್ಭೆಯು ಪರವಶಳಾದಳು. ಮನ್ಮಥನು ಆಕೆಯನ್ನೆತ್ತಿಕೊಂಡು ಆಕಾಶಮಾರ್ಗವಾಗಿ ದ್ವಾರಾವತಿಯ ಉದ್ಯಾನಕ್ಕೆ ಹೋಗಿ ವಿದ್ಯಾದೇವತೆಗಳಿಂದ ವಸ್ತ್ರಾಭರಣಾದಿಗಳನ್ನು ತರಿಸಿ ಆಕೆಗೆ ತೊಡಿಸಿ ತನ್ನ ಹಾರವನ್ನು ಆಕೆಯ ಕೈಗಿತ್ತು ಅದನ್ನು ಆ ಊರಲ್ಲಿ ಪುಷ್ಪಬಾಣಕ್ಕೆ ಮಾರಿ ಬರುವಂತೆ ಹೇಳಿ ವಿದ್ಯಾದೇವತೆಗಳನ್ನು ಪರಿವಾರ ಸ್ತ್ರೀಯರನ್ನಾಗಿ ಮಾಡಿ ಆಕೆಯನ್ನು ಕಳುಹಿದನು. ಆ ನಗರದ ಜನರು ವಿದರ್ಭೆಯ ರೂಪ ಸೌಂದರ್ಯವನ್ನು ನೋಡುತ್ತಿರಲು ಆಕೆಯು " ಪುಷ್ಪಬಾಣಗಳು ಯಾವನ ಕೈಯಲ್ಲಿರುವುವೋ ಅವನು ಅವುಗಳನ್ನು ಕೊಟ್ಟು ಈ ಮಣಿಮಾಲೆಯನ್ನು ನನ್ನ ಕೈಯಿಂದ ಬದಲಾಗಿ ತೆಗೆದುಕೊಳ್ಳಲಿ '' ಎಂದು ಹೇಳುತ್ತ ಬೀದಿಯಲ್ಲಿ ಬರುತ್ತಿರುವಾಗ ಆ ವಿಷಯವನ್ನು ಓರ್ವಸ್ತ್ರೀಯು ರತಿದೇವಿಗೆ ತಿಳಿಸಿದಳು. ಆ ಮಾತನ್ನು ಕೇಳಿ ರತಿದೇವಿಯು ಉದಧಿಕುಮಾರಿಯೊಡನೆ ಬರಲು ಆಕೆಯನ್ನು ಕಂಡು ವಿದರ್ಭೆಯು ಪುಷ್ಪಬಾಣವನ್ನು ಬದಲಾಗಿ ಕೊಟ್ಟು ತನ್ನ ಆ ಮಣಿಮಾಲೆಯನ್ನು ತೆಗೆದುಕೊಳ್ಳುವಂತೆ ಹೇಳಿದಳು. ಅದಕ್ಕೆ ರತಿಯು ನಸುನಕ್ಕು " ಎಲೈ ಮಾಯದ ಮಾತಂಗಿ ! ಈ ಮಣಿಮಾಲೆಯನ್ನು ಕೊಟ್ಟು ಪುಷ್ಪಬಾಣಗಳನ್ನು ಪಡೆಯುವೆನೆಂಬ ಮರುಳುಮಾತೇಕೆ ? ಮನ್ಮಥನ ರೂಪವನ್ನು ನೋಡಿದರೆ ನಿನ್ನ ಮನಸಿನೊಳಗೇ ಪುಷ್ಪಬಾಣಗಳು ನಟಿಸುವುವು '' ಎಂದಳು. ಆ ಮಾತನ್ನು ಕೇಳಿ ವಿದರ್ಭೆಯು " ಎಲೈ ದೇವಿಯೆ ! ನೀನು ನನ್ನ ಮನಸಿಗೆ ಹಿತವಲ್ಲದ ಮಾತನ್ನಾಡಬಹುದೇ ? ನನಗೆ ನನ್ನನ್ನು ತಂದ ಮಾತಂಗನಿಗಿಂತಲೂ ಮನ್ಮಥನು ಹೆಚ್ಚಿನವನೋ ? ಆ ಮಾತಂಗನ ನೋಟವೇ ಪುಷ್ಪಬಾಣಗಳ ಸಮೂಹವಲ್ಲವೆ ? ಅವನನ್ನು ನೋಡಿದ ಕಣ್ಣುಗಳು, ಕೂಪಕಂಭವನ್ನಾಶ್ರಯಿಸಿದ ಕಾಗೆಯಂತೆ, ಚಲಿಸವು '' ಎನಲು ಉದಧಿಕುಮಾರಿಯು ರತಿದೇವಿಯನ್ನು ಕುರಿತು " ಈಕೆಯು ಕುಲೀನಳಲ್ಲದೆ ದುಷ್ಕುಲದವಳಲ್ಲ. ಈ

ಸೌಂದರ್ಯ, ಈ ಭಾಗ್ಯ, ಈ ಚಾತುರ್ಯ ದುಷ್ಕುಲದವರಿಗೆಲ್ಲಿಬರುವುವು? ಇದು ನಿಮ್ಮ ಯಜಮಾನರ ಗೊಡ್ಡಾಟವಲ್ಲದೆ ಬೇರೊಂದಲ್ಲವು" ಎಂದಳು. ಆ ಸಮಾಚಾರವನ್ನು ರುಗ್ಮಿಣಿಯು ಕೇಳಿ ಆ ಮಾತಂಗಿಯನ್ನು ತನ್ನಲ್ಲಿಗೆ ಕರೆಸಿ ಆಕೆಯ ರೂಪಲಾವಣ್ಯವನ್ನು ನೋಡಿ ಮನ್ಮಥನು ತನ್ನಲ್ಲಿ ಹೇಳಿಹೋಗಿದ್ದ ಮಾತನ್ನು ಸ್ಮರಿಸಿಕೊಂಡು ತನ್ನಲ್ಲಿ ನಿಜಸ್ಥಿತಿಯನ್ನು ಹೇಳಬೇಕೆಂದು ಆಕೆಯನ್ನು ಕುರಿತು ಹೇಳಿದಳು. ಆಗ ಆ ಮಾತಂಗಿಯು ಲಜ್ಜೆಯಿಂದ ತಲೆಬಾಗಿಸಿ ಸ್ವಲ್ಪಹೊತ್ತು ಮಾತನಾಡದೆ ಬಳಿಕ ಕೈಮುಗಿದು "ವಿದರ್ಭದೇಶದ ಕುಂಡಿನಪುರದರಸು ರುಗ್ಮಿಣನಿಗೂ ಆತನ ಸತಿ ಲಕ್ಷ್ಮೀಮತಿಗೂ ಹುಟ್ಟಿದ ವಿದರ್ಭೆಯೆಂಬವಳು ನಾನು. ನಾನಿದ್ದಸ್ಥಾನಕ್ಕೆ ಈರ್ವರು ಮಾದಿಗರು ಬಂದು ಅವರಲ್ಲಿ ಮಹಾಸುಂದರನಾದ ಹಿರಿಯನು ನನ್ನನ್ನಿಲ್ಲಿಗೆ ಕರೆತಂದನು" ಎನಲು ಕೇಳಿ ರುಗ್ಮಿಣಿದೇವಿಯು ಎದ್ದು ಹೋಗಿ ಆಕೆಯನ್ನು ಬಿಗಿದಪ್ಪಿ ಕಣ್ಣೀರನ್ನು ಸುರಿಸುತ್ತ "ಎಲೆ ಕೋಮಲೆ! ಮೊದಲು ಹರಿಯು ಮುಳಿದುಬಂದು ನನ್ನತಂದೆಯನ್ನು ಯುದ್ಧದಲ್ಲಿ ಕೊಂದು ನನ್ನನ್ನು ತಂದನು. ಇಂದು ಅವನ ಮಗ ಅಂಗಜನು ನಿನ್ನನ್ನು ಈರೀತಿಯಾಗಿ ತಂದನು" ಎಂದು ಆಕೆಯನ್ನು ತನ್ನಹತ್ತಿರದಲ್ಲಿ ಕುಳ್ಳಿರಿಸಿಕೊಂಡಳು. ಆಗ ಮನ್ಮಥನೂ ಶಂಭುಕುಮಾರನೂ ಬಂದು ರುಗ್ಮಿಣಿಯ ಕಾಲಿಗೆ ನಮಸ್ಕಾರಮಾಡಲು ಆಕೆಯು ಹರಸಿ ಕುಳ್ಳಿರಿಸಿ ಕಣ್ಣೀರನ್ನು ಸುರಿಸುತ್ತ ಮನ್ಮಥನನ್ನು ಕುರಿತು "ಮಗನೆ! ನೀನು ನನ್ನ ಅಣ್ಣನನ್ನು ಲೆಕ್ಕಿಸದೆ ಹೆಣ್ಣನ್ನು ತಂದೆಯಲ್ಲ. ನಮ್ಮಿಂದ ನಮ್ಮ ತವರುಮನೆಗೆ ಬಹುದುಃಖವುಂಟಾಯಿತು. ಮಗನೆ! ಈದಿನ ನೀನು ನನ್ನ ಅಣ್ಣನನ್ನೂ ಲಕ್ಷ್ಮೀಮತಿಯನ್ನೂ ಕರೆಸು" ಎನಲು ಅಂಗಜನು ಒಪ್ಪಿ ತನ್ನವಿದ್ಯೆಯಿಂದ ನಾರದನನ್ನು ಬರುಮಾಡಿ ಕುಂಡಿನಪುರಕ್ಕೆ ಕಳುಹಿದನು. ಅವನು ಹೋಗಿ ಚತುರತೆಯಿಂದ ರುಗ್ಮಿಣರಾಜನನ್ನೂ ಲಕ್ಷ್ಮೀಮತಿಯನ್ನೂ ಒಡಂಬಡಿಸಿ ದ್ವಾರಾವತಿಗೆ ಕರೆತಂದನು. ಆ ವಿಷಯವನ್ನು ಕೃಷ್ಣನು ತಿಳಿದು ರುಗ್ಮಿಣರಾಜನನ್ನು ಇದಿರ್ಗೊಂಡು ಅರಮನೆಗೆ ಕರೆದೊಯ್ದು ಬಹು ವೈಭವದಿಂದ ಮದನವಿದರ್ಭೆಯರ ಮದುವೆಯನ್ನುಮಾಡಿ ರುಗ್ಮಿಣನಿಗೆ ಉಡುಗೊರೆಯನ್ನಿತ್ತು ಕಳುಹಿಸಿಕೊಟ್ಟನು. ಇತ್ತ ಅಂಗಜನು ಆ ಲಲನಾಮಣಿಗಳಲ್ಲಿ ಅನುರಾಗದಿಂದ ಸುಖವಾಗಿದ್ದನು.



## ೨೨. ನೇಮಿಾಶ್ವರೋದಯಸಂಧಿ



ದ್ವಾರಾವತಿಯಲ್ಲಿ ಹರಿವಂಶತಿಲಕನೂ ಮಹಾಗುಣವಂತನೂ ಆದ ಸಮು ದ್ರವಿಜಯಮಹಾರಾಜನು ವಸುದೇವ, ಬಲರಾಮ, ಕೃಷ್ಣ, ಮನ್ಮಥ ಈ ಕಾರಣ ಪುರುಷರಿಂದ ಓಲೈಸಲ್ಪಟ್ಟವನಾಗಿ ಸುಖದಿಂದ ರಾಜ್ಯಭಾರವನ್ನು ಮಾಡುತ್ತಿದ್ದನು. ಹಿಂದೆ ಸುಪ್ರತಿಷ್ಠನಾಗಿದ್ದ ಅಹಮಿಂದ್ರದೇವನು ಸರ್ವಾರ್ಥಸಿದ್ಧಿಯೆಂಬ ಸ್ವರ್ಗ ದಿಂದ ಚ್ಯುತನಾಗಿ ಬಂದು ಆ ಸಮುದ್ರವಿಜಯಮಹಾರಾಜನ ಪತ್ನಿ ಮಹಾ ರೂಪವತಿಯಾದ ಶಿವದೇವಿಯ ಗರ್ಭದಲ್ಲಿ ಅವತರಿಸುವನೆಂಬುದನ್ನು ಆರುತಿಂಗಳಿಗೆ ಮೊದಲು ಸೌಧರ್ಮಸ್ವರ್ಗದ ದೇವೇಂದ್ರನು ಅವಧಿಜ್ಞಾನದಿಂದ ತಿಳಿದು ಭವನ ವ್ಯಂತರ, ಜ್ಯೋತಿಷ್ಕ, ಕಲ್ಪವಾಸಿಗಳೆಂಬ ನಾಲ್ಕುವಿಧವಾದ ದೇವತೆಗಳೊಡನೆ ದ್ವಾರಾವತಿಗೆ ಬಂದು ಆ ದಂಪತಿಗಳನ್ನು ಮಣಿಮಯವಾದ ಆಸನದಲ್ಲಿ ಕುಳ್ಳಿರಿಸಿ ಗಂಗಾಸಿಂಧುಮೊದಲಾದನದಿಗಳ ತೀರ್ಥೋದಕಗಳಿಂದ ಮಜ್ಜನಮಾಡಿಸಿ ದಿವ್ಯವಸ್ತ್ರಾ ಭರಣಗಳಿಂದಲೂ ಗಂಧ ಪುಷ್ಪಾನುಲೇಪನಗಳಿಂದಲೂ ಸತ್ಕರಿಸಿ ಇಂದ್ರನು ಸಮು ದ್ರವಿಜಯಮಹಾರಾಜನನ್ನೂ ರಂಭೆ ಶಚಿ ಮೊದಲಾದ ದೇವಾಂಗನೆಯರು ಶಿವದೇ ವಿಯನ್ನೂ ವಿವಿಧವಸ್ತ್ರಾಭರಣಗಳಿಂದ ಶೃಂಗರಿಸಿದರು. ಬಳಿಕ ದೇವೇಂದ್ರನು ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ ಮೊದಲಾದ ದೇವಸ್ತ್ರೀಯರನ್ನು ಕರೆಯಿಸಿ ಶಿವದೇವಿಯ ಸೇವೆಯನ್ನೂ ಗರ್ಭಶೋಧನೆಯನ್ನೂ ಮಾಡುವಂತೆ ಆಜ್ಞಾಪಿಸಿ ದೇವಲೋಕಕ್ಕೆ ಹೋದನು.

ಇತ್ತ ಆ ದೇವಕನ್ಯೆಯರು ದೇವಲೋಕದ ವಸ್ತ್ರಾಭರಣಗಳಿಂದಲೂ ಭೋ ಜನ ಗಂಧ ತಾಂಬೂಲ ಮೊದಲಾದ ವಸ್ತುಗಳಿಂದಲೂ ಶಿವದೇವಿಯ ಸೇವೆಯನ್ನು ಮಾಡುತ್ತಿದ್ದರು. ತಮ್ಮ ಪಾಪಪರಿಹಾರವಾಗಲೆಂದು ಆ ಜಿನಮಾತೃವಿನ ಗರ್ಭ ಶೋಧನೆಯನ್ನು ಮಾಡಿದರು. ಕುಬೇರನು ದೇವೇಂದ್ರನ ಅಪ್ಪಣೆಯಿಂದ ದಿನಕ್ಕೆ ಮೂರು ಹೊತ್ತು ಸಮುದ್ರವಿಜಯರಾಜನ ಅಂಗಣದಲ್ಲಿ ರತ್ನವೃಷ್ಟಿಯನ್ನು ಮಾಡಿ ದನು. ಹೀಗೆ ಆರು ತಿಂಗಳವರೆಗೆ ಆ ದೇವಾಂಗನೆಯರು ಜಿನಜನನಿಯ ಸೇವೆ ಯನ್ನೂ ಕುಬೇರನು ರತ್ನವೃಷ್ಟಿಯನ್ನೂ ಮಾಡುತ್ತಿದ್ದರು. ಬಳಿಕ ಶಿವದೇವಿಯು ಋತುಮತಿಯಾಗಲು ನಾಲ್ಕನೆಯದಿವಸ ಆಕೆಗೆ ದೇವಸ್ತ್ರೀಯರು ತೀರ್ಥೋದಕ

ಗಳಿಂದ ನಾಲ್ನೀರನ್ನು ಎರೆದು ವಿವಿಧ ವಸ್ತ್ರಾಭರಣಗಳಿಂದ ಶೃಂಗರಿಸಿದರು. ಆ ದಿನ ರಾತ್ರಿ ಶಿವದೇವಮ್ಮನು ಪತಿಯ ಶಯ್ಯೆಗೆ ಹೋಗಿ ಪತಿಯೊಡನೆ ರತಿಸುಖದೊಳೋಲಾಡಿ ಒರಗಿರ್ದು ಬೆಳಗಿನ ಜಾವದಲ್ಲಿ ಹದಿನಾರು ಕನಸುಗಳನ್ನು ಕಂಡು ಬೆಳಿಗ್ಗೆ ಎದ್ದು ಮುಖವನ್ನು ತೊಳೆದು ಶೃಂಗರಿಸಿಕೊಂಡು ಪತಿಯ ಬಳಿಗೆ ಹೋಗಿ ತಾನು ಕಂಡ ಕನಸುಗಳನ್ನು ಆತನಿಗೆ ತಿಳಿಸಿದಳು. ಸಮುದ್ರವಿಜಯಮಹಾರಾಜನು ಆ ಸ್ವಪ್ನಗಳ ಫಲಗಳನ್ನು ಈ ರೀತಿಯಾಗಿ ತಿಳಿಸಿದನು:—

"ದೇವಿಯೆ! ನೀನು ಕನಸಿನಲ್ಲಿ ಆನೆಯನ್ನು ಕಂಡುದರಿಂದ ಅಂಗಜನನ್ನು ಮರ್ದಿಸುವ ತ್ರಿಲೋಕಪೂಜ್ಯನಾದ ಪುತ್ರನನ್ನು ಪಡೆಯುವೆ; ವೃಷಭನನ್ನು ಕಂಡುದರಿಂದ ಮೋಕ್ಷಲಕ್ಷ್ಮಿಗೊಡೆಯನಾಗುವ ಶ್ರೇಷ್ಠಪುತ್ರನನ್ನು ಪಡೆಯುವೆ; ಸಿಹ್ಮವನ್ನು ಕಂಡುದರಿಂದ ಪಾಪವನ್ನು ನಾಶಮಾಡಿ ಸಿಹ್ಮಾಸನಾಲಂಕೃತನಾಗುವ ಬಲಿಷ್ಠಪುತ್ರನನ್ನು ಪಡೆಯುವೆ; ಲಕ್ಷ್ಮಿಯನ್ನು ಕಂಡುದರಿಂದ ಸುರಗಿರಿಯಲ್ಲಿ ಜನ್ಮಾಭಿಷೇಕವನ್ನು ಹೊಂದಿ ಮುಕ್ತಿಗಧಿಪತಿಯಾಗುವ ಮಗನನ್ನು ಪಡೆಯುವೆ; ಪುಷ್ಪಮಾಲೆಯನ್ನು ಕಂಡುದರಿಂದ ಇಂದ್ರವಂದಿತನೂ ಸದ್ಧರ್ಮತೀರ್ಥಪ್ರವರ್ತಕನೂ ಆದ ಪುತ್ರನನ್ನು ಪಡೆಯುವೆ; ಚಂದ್ರನನ್ನು ಕಂಡುದರಿಂದ ತ್ರಿಲೋಕಕ್ಕೆ ಆನಂದದಾಯಕನಾದ ಪುತ್ರನನ್ನು ಪಡೆಯುವೆ; ಸೂರ್ಯನನ್ನು ಕಂಡುದರಿಂದ ಕೋಟಿಸೂರ್ಯಪ್ರಕಾಶದೇಹವುಳ್ಳ ಮಗನನ್ನು ಪಡೆಯುವೆ; ಸುವರ್ಣಕುಂಭವನ್ನು ಕಂಡುದರಿಂದ ಕಾಮಾಂತಕನೂ ಸಮಸ್ತಸಿದ್ಧೀಶ್ವರನೂ ಆದ ಮಗನನ್ನು ಪಡೆಯುವೆ. ಮೀನಿನ ಮರಿಯನ್ನು ನೋಡಿದುದರಿಂದ ಆನಂದದಿಂದ ವೃದ್ಧಿಹೊಂದುವ ಜಿನಬಾಲಕನನ್ನು ಪಡೆಯುವೆ; ಕಮಲಸರೋವರವನ್ನು ನೋಡಿದುದರಿಂದ ಸಾವಿರದೆಂಟು ಶುಭಲಕ್ಷಣಗಳುಳ್ಳವನೂ ಸುವರ್ಣಕಮಲಪೀಠಾಲಂಕೃತನೂ ಆದ ಮಗನನ್ನು ಪಡೆಯುವೆ; ಸಮುದ್ರವನ್ನು ನೋಡಿದುದರಿಂದ ಕೇವಲಜ್ಞಾನಾಧಿಪತಿಯಾದ ಮಗನನ್ನು ಪಡೆಯುವೆ; ಸಿಹ್ಮಪೀಠವನ್ನು ನೋಡಿದುದರಿಂದ ತ್ರಿಲೋಕಾಧಿಪತಿಯಾದ ಪುತ್ರನನ್ನು ಪಡೆಯುವೆ; ದೇವವಿಮಾನವನ್ನು ನೋಡಿದುದರಿಂದ ಸ್ವರ್ಗದಿಂದವತರಿಸುವ ಪುತ್ರನನ್ನು ಪಡೆಯುವೆ; ನಾಗದೇವತೆಗಳ ನಿಲಯವನ್ನು ನೋಡಿದುದರಿಂದ ಅವಧಿಜ್ಞಾನಸಂಪನ್ನನೂ ನಾಗನರಾಮರವಂದ್ಯನೂ ಆದ ಮಗನನ್ನು ಪಡೆಯುವೆ; ರತ್ನರಾಶಿಯನ್ನು ನೋಡಿದುದರಿಂದ ಜ್ಞಾನ ಮೊದಲಾದ ಅನಂತಗುಣರಾಶಿಯೂ ನವಕೋಟಿ ಮುನಿವಂದ್ಯನೂ ಆದ ಮಗನನ್ನು ಪಡೆಯುವೆ; ಉರಿಯುವ ಬೆಂಕಿಯನ್ನು ಕಂಡುದರಿಂದ ಪಾಪ

ರಾಶಿಗೆ ಕಾಡ್ಗಿಚ್ಚಿನಂತಿರುವ ಪುತ್ರನನ್ನು ಪಡೆಯುವೆ" ಎಂದು ಹೇಳಿದನು. ಪತಿಯಿಂದ ಸ್ವಪ್ನಫಲವನ್ನು ತಿಳಿದು ಶಿವದೇವಿಯು ಸಂತುಷ್ಟಳಾಗಿ ಸುಖದಿಂದಿದ್ದಳು.

ಮೇಲೆ ಹೇಳಿದ ಅಹಮಿಂದ್ರದೇವನು ಸರ್ವಾರ್ಥಸಿದ್ಧಿಸ್ವರ್ಗದಿಂದ ಬಂದು ಶಿವದೇವಿಯ ಗರ್ಭದಲ್ಲಿ ಅವತರಿಸಿದನು. ಆ ಪುಣ್ಯಪುರುಷನ ಮಹಿಮೆಯಿಂದ ಶಿವದೇವಿಗೆ ಗರ್ಭಚಿಹ್ನೆಯೂ ಆಲಸ್ಯವೂ ತೋರಲಿಲ್ಲ. ಆ ಮಹಾಮಹಿಮನು ಒಂಬತ್ತುತಿಂಗಳು ಬಸಿರಲ್ಲಿ ಬೆಳೆದು ವೈಶಾಖ ಶುದ್ಧ ತ್ರಯೋದಶಿಯ ದಿವಸ ಶುಭಲಗ್ನದಲ್ಲಿ ಜನಿಸಿದನು. ಆಗ ಇಂದ್ರನ ಆಸನವು ಕಂಪಿಸಲು ಅವನು ಅವಧಿಜ್ಞಾನದಿಂದ ಆ ವಿಷಯವನ್ನು ತಿಳಿದು ಜಯಜಯವೆನುತ ನಾಲ್ಕು ತೆರೆದ ದೇವದೇವಸ್ತ್ರೀಯರೊಡನೆ ಬಂದು ಸಮುದ್ರವಿಜಯಮಹಾರಾಜನ ಅರಮನೆಯ ಮೇಲ್ಗಡೆಯಲ್ಲಿದ್ದು ಆ ಜಿನಶಿಶುವನ್ನು ತರುವಂತೆ ಶಚೀದೇವಿಗೆ ಅಪ್ಪಣೆಮಾಡಿದನು. ಆಕೆಯು ಪ್ರಸೂತಿಗೃಹಕ್ಕೆ ಬಂದು ದೇದೀಪ್ಯಮಾನವಾದ ಆ ಶಿಶುವನ್ನು ನೋಡಿ ಮೂರು ಸುತ್ತು ಬಲವಂದು ಭಕ್ತಿಯಿಂದ ವಂದಿಸಿ ಜಿನಮಾತೃವಿಗೆ ಮಾಯಾನಿದ್ರೆಯನ್ನು ಬರಿಸಿ ಪಕ್ಕದಲ್ಲಿ ಮಾಯಾಶಿಶುವನ್ನಿರಿಸಿ ಆ ಜಿನಬಾಲಕನನ್ನು ಎತ್ತಿಕೊಂಡು ಹೋಗಿ ಇಂದ್ರನ ಕೈಗಿತ್ತಳು. ಆತನು ತನ್ನ ಎರಡು ಕೈಗಳಿಂದಲೂ ತೆಗೆದುಕೊಂಡು ಬಹು ಸಂತುಷ್ಟನಾಗಿ ಸ್ತುತಿಸಿ ತನ್ನ ಐರಾವತಗಜವನ್ನೇರಿ ಶಿಶುವನ್ನು ತೊಡೆಯಮೇಲಿಸಿಕೊಂಡು ದೇವತಾಸಮೂಹದೊಡನೆ ಮೇರುಗಿರಿಗೆ ಹೊರಟನು. ಈಶಾನೇಂದ್ರನು ಕೊಡೆಯನ್ನು ಹಿಡಿದನು. ಉಳಿದ ಇಂದ್ರರು ಚಾಮರಗಳನ್ನು ಬೀಸಿದರು. ಐರಾವಣನೆಂಬ ದೇವನು ಐರಾವತಗಜದ ರೂಪವನ್ನು ಧರಿಸಿ ಮೂವತ್ತೆರಡು ಮುಖಗಳನ್ನೂ ಒಂದೊಂದು ಮುಖಕ್ಕೆ ಎಂಟೆಂಟು ದಂತಗಳನ್ನೂ ಒಂದೊಂದು ದಂತಕ್ಕೆ ಒಂದೊಂದು ಸರೋವರವನ್ನೂ ಒಂದೊಂದು ಸರೋವರಕ್ಕೆ ಮೂವತ್ತೆರಡು ತಾವರೆಗಳನ್ನೂ ಒಂದೊಂದು ತಾವರೆಗೆ ಮೂವತ್ತೆರಡು ಎಸಳುಗಳನ್ನೂ ನಿರ್ಮಿಸಿದನು. ಆ ಒಂದೊಂದು ಎಸಳಿನ ಮೇಲೆ ಮೂವತ್ತೆರಡು ಮಂದಿ ದೇವಸ್ತ್ರೀಯರು ಹಾವಭಾವವಿಲಾಸವಿಭ್ರಮಗೀತಗಳಿಂದ ನರ್ತನಮಾಡುತ್ತ ನಡೆದರು. ಈ ರೀತಿಯಾಗಿ ಬಹು ವೈಭವದಿಂದ ದೇವಸಮೂಹದೊಡನೆ ದೇವೇಂದ್ರನು ಮೇರುಗಿರಿಯ ಈಶಾನ್ಯದಿಕ್ಕಿನಲ್ಲಿರುವ ಪಾಂಡುಕಶಿಲೆಗೆ ಆ ಜಿನಬಾಲಕನನ್ನು ಕರೆತಂದು ಸಿಂಹಪೀಠದ ಮೇಲೆ ಕುಳ್ಳಿರಿಸಿ ಕಲಶಾರ್ಚನೆಯನ್ನು ಮಾಡಿ ಸ್ವಾಮಿಯ ಬಲಗಡೆಯಲ್ಲಿ ಸೌಧರ್ಮೇಂದ್ರನೂ ಎಡಗಡೆಯಲ್ಲಿ ಈಶಾನೇಂದ್ರನೂ ನಿಂತು ಸಾವಿರ ತೋಳುಗಳನ್ನು ನಿರ್ಮಿಸಿಕೊಂಡು,

ದೇವತೆಗಳು ಸಾಲಾಗಿ ನಿಂತು ಕ್ಷೀರಸಮುದ್ರದಿಂದ ಸುವರ್ಣಕಲಶಗಳಲ್ಲಿ ತಂದಿತ್ತ ಜಲವನ್ನು, ಆ ಜಿನಬಾಲಕನಿಗೆ ಬಹು ಭಕ್ತಿಯಿಂದ ಅಭಿಷೇಕವನ್ನು ಮಾಡಿ ಬಳಿಕ ಗಂಧೋದಕವನ್ನು ಅಭಿಷೇಕ ಮಾಡಿದರು. ತದನಂತರ ಅಷ್ಟವಿಧಾರ್ಚನೆಯನ್ನು ಮಾಡಿ ಜಿನಬಾಲಕನನ್ನು ಎತ್ತಿಕೊಂಡು ಐರಾವತವನ್ನೇರಿ ಸಮಸ್ತ ದೇವಸಮೂಹದೊಡನೆ ದ್ವಾರಾವತಿಗೆ ಕರೆತಂದು ಶಿವದೇವಿಗೆ ನಮಸ್ಕಾರಮಾಡಿ ಸಮುದ್ರವಿಜಯಮಹಾರಾಜನನ್ನು ಪೂಜಿಸಿ ಜಿನಬಾಲಕನ ಮುಂದೆ ಆನಂದನರ್ತನವನ್ನು ಮಾಡಿ ಸಾಸಿರ ಕಣ್ಣುಗಳನ್ನು ನಿರ್ಮಿಸಿಕೊಂಡು ಆ ಶಿಶುವಿನ ಅನುಪಮಸೌಂದರ್ಯವನ್ನು ನೋಡಿ ತಣಿದನು. ದೇವಲೋಕದ ನೃತ್ಯ ಗೀತ ವಾದ್ಯಗಳಾಗುತ್ತಿರಲು ದೇವೇಂದ್ರನು ಆ ಜಿನಬಾಲಕನನ್ನು ಶೃಂಗರಿಸಿ ನೇಮಿನಾಥನೆಂದು ನಾಮಕರಣವನ್ನು ಮಾಡಿ ದೇವಸ್ತ್ರೀಯರನ್ನು ದಾದಿಯರನ್ನಾಗಿಯೂ ಕೆಲವು ದೇವತೆಗಳನ್ನು ಜಿನಬಾಲಕನ ಓರಗೆಯ ರೂಪಧಾರಿಗಳನ್ನಾಗಿಯೂ ನೇಮಿಸಿ ತನ್ನ ಪರಿವಾರದೊಡನೆ ಸ್ವರ್ಗಕ್ಕೆ ಹೊರಟುಹೋದನು.

ಇತ್ತ ನೇಮಿನಾಥನು ತನ್ನ ಓರಗೆಯ ಮಕ್ಕಳೊಡನೆ ಸುರಲೋಕದ ಆಹಾರವನ್ನುಂಡು ದೇವಸ್ತ್ರೀಯರಿಂದ ಸಾಕಲ್ಪಡುತ್ತ ಬೆಳೆಯುತ್ತಿದ್ದನು. ದಿನಕ್ರಮದಿಂದ ಬಾಲಲೀಲೆಯನ್ನೂ ತೊದಲುನುಡಿಯನ್ನೂ ಬಿಟ್ಟು ತಾರುಣ್ಯವನ್ನು ಹೊಂದಿ ಲೋಕಾತಿಶಯವಾದ ಸೌಂದರ್ಯದಿಂದಲೂ ನಂದ್ಯಾವರ್ತ ಸ್ವಸ್ತಿಕ ಮೊದಲಾದ ಸಾವಿರದೆಂಟು ಲಕ್ಷಣಗಳಿಂದಲೂ ನೀಲಶ್ಯಾಮಲ ಕೋಮಲದೇಹದಿಂದಲೂ ಮೃದು ಮಧುರ ಗಂಭೀರವಚನದಿಂದಲೂ ವಜ್ರವೃಷಭನಾರಾಚಸಂಹನನದಿಂದಲೂ ಸಮಚತುರಸ್ರಸಂಸ್ಥಾನದಿಂದಲೂ ಮತಿ ಶ್ರುತಾವಧಿಗಳೆಂಬ ತ್ರಿಜ್ಞಾನಸಂಪನ್ನನೂ ಸಹಸ್ರವರ್ಷ ಆಯುಷ್ಯವುಳ್ಳವನೂ ಆದ ನೇಮೀಶ್ವರನು ರಾರಾಜಿಸುತ್ತಿದ್ದನು.

## ೨೩. ದ್ರೌಪದೀ ಸ್ವಯಂವರಸಂಧಿ

ಹಸ್ತಿನಾಪುರದಲ್ಲಿ ಪಾಂಡುರಾಜನು ಕುರು-ಜಾಂಗಣದೇಶವನ್ನಾಳುತ್ತಿರುವಾಗ ಒಂದುದಿನ ಆ ನಗರದ ನಂದನವನಕ್ಕೆ ಸುವ್ರತರೆಂಬ ಮುನೀಶ್ವರರು ಬಂದಿದ್ದಾರೆಂದು ಕೇಳಿ ಅಲ್ಲಿಗೆ ಹೋಗಿ ಅವರಿಗೆ ಭಕ್ತಿಯಿಂದೆರಗಿ ಧರ್ಮೋಪದೇಶವನ್ನು ಕೇಳಿದನು. ಆಗ ಅವನ ಮನಸ್ಸಿನಲ್ಲಿ ವೈರಾಗ್ಯವು ಅಂಕುರಿಸಿ ತನಗೆ ದೀಕ್ಷೆಯನ್ನು

ಕೊಡಬೇಕೆಂದು ಆ ಮುನೀಶ್ವರರನ್ನು ಪ್ರಾರ್ಥಿಸಲು ಅವರು ಅವಧಿಜ್ಞಾನದಿಂದ ನೋಡಿ ಪಾಂಡುರಾಜನನ್ನು ಕುರಿತು "ಇನ್ನು ನಿನಗೆ ಹದಿಮೂರು ದಿನಗಳ ಆಯುಷ್ಯವಿರುವುದು" ಎಂದರು. ಆ ಮಾತನ್ನು ಕೇಳಿ ಪಾಂಡುರಾಜನು ತನ್ನ ಮನೆಗೆ ಹೋಗಿ ಧರ್ಮರಾಜನಿಗೆ ರಾಜ್ಯಭಾರವನ್ನಿತ್ತು ತಾನು ಮಾದ್ರಿಯೊಡನೆ ತಪಸ್ಸಿಗೆ ಹೋಗಿ ಹದಿಮೂರು ದಿವಸ ತಪಸ್ಸನ್ನು ಮಾಡಿ ಸತ್ತು ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು.

ಇತ್ತ ಕೌರವ ಪಾಂಡವರನ್ನು ಭೀಷ್ಮನು ಸಾಕುತ್ತಿರಲು ಒಂದುದಿನ ಧನುರ್ವಿದ್ಯೆಯನ್ನು ತಿಳಿದ ದ್ರೋಣನೆಂಬ ಬ್ರಾಹ್ಮಣನು ಆ ಅರಸುಮನೆತನದ ಪುರೋಹಿತನಾದ ಕೃಪನ ಮುಖಾಂತರ ಬಂದು ಭೀಷ್ಮನನ್ನು ಕಂಡನು. ಅವನು ಕೌರವ ಪಾಂಡವರನ್ನು ಕರೆದು ಧನುರ್ವಿದ್ಯೆಯನ್ನು ಕಲಿಯುವುದಕ್ಕಾಗಿ ಆ ದ್ರೋಣನ ವಶಪಡಿಸಿದನು. ಅವನು ಅವರಿಗೆ ನಾನಾವಿದ್ಯೆಗಳನ್ನು ಕಲಿಸಿದನು. ಕೃಪನು ತನ್ನ ತಂಗಿಯಾದ ಸುಂದರಿಯೆಂಬವಳನ್ನು ಆ ದ್ರೋಣನಿಗೆ ಕೊಟ್ಟು ಮದುವೆ ಮಾಡಿದನು. ಆ ದಂಪತಿಗಳಿಗೆ ಅಶ್ವತ್ಥಾಮನೆಂಬ ಮಗನು ಹುಟ್ಟಿ ಬೆಳೆದು ಬಹು ಪರಾಕ್ರಮಿಯಾದನು.

ಅತ್ತ ಚಂಪಾಪುರದಲ್ಲಿ ಭಾನುರಾಜನು ತನ್ನ ಕೆನ್ನೆಯಲ್ಲಿ ನರೆಗೂದಲನ್ನು ಕಂಡು ವಿರಕ್ತನಾಗಿ ಕರ್ಣನಿಗೆ ರಾಜ್ಯಭಾರವನ್ನಿತ್ತು ತಾನು ಜಿನದೀಕ್ಷೆಯನ್ನು ಪಡೆದನು. ಕರ್ಣನು ಬಹು ದಾನಶೀಲನಾಗಿ ರಾಜ್ಯವನ್ನಾಳುತ್ತ ಒಂದು ದಿನ ತನ್ನ ಕುಲಪರಂಪರೆಯ ವಿವರವನ್ನು ತಿಳಿಯಬೇಕೆಂದು ಕೈಲಾಸಪರ್ವತಕ್ಕೆ ಹೋಗಿ 'ಅರಹಂತ ಸಿದ್ಧ ಆಇರಿಯ ಉವಜ್ಝಾಯ ಸಾಹು" ಈ ಷೋಡಶಾಕ್ಷರಮಂತ್ರಗಳನ್ನು ಶುದ್ಧವಾಗಿ ಜಪಿಸಿದನು. ಆಗ ಜ್ವಾಲಾಮಾಲಿನೀದೇವಿಯು ಪ್ರತ್ಯಕ್ಷಳಾಗಿ ವಜ್ರಕವಚವನ್ನೂ ದಿವ್ಯಾಸ್ತ್ರಗಳನ್ನೂ ಕೊಟ್ಟು ಮತ್ತೆ ಬೇಕಾದುದನ್ನು ಕೇಳಿಕೊಳ್ಳುವಂತೆ ಹೇಳಿದಳು. ಆಗ ಕರ್ಣನು ತನ್ನ ತಾಯಿಯಾರೆಂಬುದನ್ನು ತಿಳಿಸಬೇಕೆಂದು ಕೇಳಲು ದೇವಿಯು ಉರಿಮಾಲೆಯೆಂಬ ಒಂದು ವಸ್ತ್ರವನ್ನು ಅವನಿಗೆ ಕೊಟ್ಟು "ಇದನ್ನು ಧರಿಸಿ ಯಾವಳು ನಿರಾತಂಕವಾಗಿರುವಳೋ ಅವಳೇ ನಿನ್ನ ತಾಯಿಯು" ಎಂದು ಹೇಳಿ ಕಳುಹಲು ಅವನು ಊರಿಗೆ ಬಂದು ಸುಖವಾಗಿದ್ದು ಒಂದು ದಿನ ಕೌರವ ಪಾಂಡವರ ಧನುರ್ವಿದ್ಯೆಯ ಪ್ರಖ್ಯಾತಿಯನ್ನು ಕೇಳಿ ಅವರನ್ನು ನೋಡಬೇಕೆಂದು ಪಟ್ಟಣದಿಂದ ಹೊರಟು ಹಸ್ತಿನಾಪುರಕ್ಕೆ ಹೋಗಿ ಅವರ ಗುರುಗಳ ಮನೆಗೆ ಪ್ರವೇಶಿಸಿ "ಇವರೇ ಧನುರ್ವಿದ್ಯಾಪ್ರವೀಣರು? ಇವುತಾನೆ

ವಿದ್ಯೆಗಳು?" ಎಂದನು. ಅವನ ತಾತ್ಸಾರದ ಮಾತನ್ನು ಕೇಳಿ ಪಾಂಡವರು ಮನಸ್ಸಿನಲ್ಲಿ ಖೇದಪಟ್ಟು ಅತಿಶಯವಾದ ತಮ್ಮ ವಿದ್ಯೆಯನ್ನು ಹೊಗಳದೆ ಹೀಯಾಳಿಸಿದ ಈತನು ಎಂತಹ ಬಲಿಷ್ಠನೋ ಎಂದು ಮಾತನಾಡುತ್ತಿದ್ದರು. ಆಗ ಕೌರವನು ಕರ್ಣನ ಸುಂದರಾಕಾರವನ್ನು ನೋಡಿ ಅವನು ಸಾಮಾನ್ಯನಲ್ಲವೆಂದು ತಿಳಿದು ಅವನ ಹತ್ತಿರಕ್ಕೆ ಹೋಗಿ ಕೈಹಿಡಿದು ತನ್ನ ಆಸನಕ್ಕೆ ಕರೆಯಲು ಅವನು ಕೌರವನನ್ನು ಕುರಿತು "ಎಲೈ ರಾಜನೆ! ನಾನಾರೆಂದು ತಿಳಿಯದೆ ಈ ಕಾರ್ಯವನ್ನು ಮಾಡಬಹುದೇ?" ಎಂದನು. ಅದಕ್ಕೆ ಕೌರವನು "ಎಲೈ ಬಲವಂತನೆ! ಸಾಮಾನ್ಯಮನುಷ್ಯರಿಗೆ ಈ ರೂಪವೂ ವೀರತ್ವವೂ ಬಾರವು" ಎಂದು ತನ್ನ ಧರ್ಮಾಸನಕ್ಕೆ ಕರೆತಂದು ಕುಳ್ಳಿರಿಸಿಕೊಂಡನು. ಆಗ ಒಬ್ಬನು ' ಇವನು ಚಂಪೆಯ ಸೂರ್ಯರಾಜನ ಮಗನು " ಎಂದನು. ಆ ಮಾತನ್ನು ಕೇಳಿ ಕೌರವನು ಬಹು ಸಂತುಷ್ಟನಾಗಿ ಕರ್ಣನೊಡನೆ ಮಾತನಾಡುತ್ತಿದ್ದನು. ಆಗ ಭೀಮನು ನೋಡಿ ಕೋಪಗೊಂಡು ಕಿಸುಗಣ್ಣಿನಿಂದ ನೋಡುತ್ತಿರಲು ಅವನ ಭಾವವನ್ನು ತಿಳಿದು ಕರ್ಣನು "ಪಶುಳೆಯೇ! ಕೇಳು, ಆನೆಮರಿಯ ನೋಟಕ್ಕೆ ಸಿಂಹವು ಅಂಜುವುದೇ?" ಎನಲು ಭೀಮನು "ನೀನು ಯಾರೆಂದು ತಿಳಿಯದೆ ಕೌರವನು ಸರಿಗದ್ದುಗೆಯಲ್ಲಿ ಕುಳ್ಳಿರಿಸಬಹುದೇ?" ಎಂದು ಬಿರುನುಡಿಯನ್ನು ನುಡಿದನು. ಆ ಮಾತನ್ನು ಕೇಳಿ ಕೌರವನು ಕೋಪದಿಂದ ಭೀಮಸೇನನನ್ನು ನೋಡುತ್ತಿರಲು ಆ ವಾರ್ತೆಯನ್ನು ಕೇಳಿ ಭೀಷ್ಮನು ಬಂದು ಅವರನ್ನು ಸಮಾಧಾನಪಡಿಸಿ ಅವರವರ ಮನೆಗಳಿಗೆ ಕಳುಹಿದನು. ಕುರುಪತಿಯು ಕರ್ಣನನ್ನು ತನ್ನ ಮನೆಗೆ ಕರೆದೊಯ್ದು ಒಡನುಂಡು ಒಡನಾಡುತ್ತ ಅವನಿಗೆ ಅನೇಕ ದೇಶಕೋಶಗಳನ್ನು ಕೊಟ್ಟು ಅವನೊಡನೆ ಅಭೇದಭಾವದಿಂದಿದ್ದನು. ಭೀಮ ಕೌರವರು ಗದಾವಿದ್ಯೆಯಲ್ಲಿ ನಿಪುಣರಾಗಿ ಒಬ್ಬರನ್ನೊಬ್ಬರು ಲೆಕ್ಕಿಸದೆ ಸೊಕ್ಕಾನೆಯಂತೆ ಮೆರೆಯುತ್ತಿದ್ದರು. ಅರ್ಜುನ ಮೊದಲಾದವರು ಧನುರ್ವಿದ್ಯೆ ಮೊದಲಾದುವುಗಳಲ್ಲಿ ನಿಪುಣರಾದರು. ಕೌರವ ಪಾಂಡವರು ದಾಯಾದಮಾತ್ಸರ್ಯದಿಂದ ಆಗಾಗ ಹೋರಾಡಲಾರಂಭಿಸಿದರು. ಭೀಮಾರ್ಜುನರ ಭುಜಬಲವನ್ನು ನೋಡಿ ಕೌರವನು ಹೊಟ್ಟೆಕಿಚ್ಚು ಮಾಡುತ್ತಿದ್ದನು. ಒಂದುದಿನ ದ್ರೋಣನು ತನ್ನ ಹಳೆಯ ಗೆಳೆಯನಾದ ದ್ರುಪದರಾಜನನ್ನು ನೋಡಬೇಕೆಂದು ಹೋದಾಗ ಅವನು ಇವನನ್ನು ಮನ್ನಿಸದಿರಲು ನಾಚಿಕೆಯಿಂದ ಹಿಂದಿರುಗಿ ಬಂದು ಧರ್ಮರಾಜನಲ್ಲಿ ಆ ವಿಷಯವನ್ನು ಹೇಳಿದನು. ಅವನು ಅರ್ಜುನನನ್ನು ಕರೆದು "ನಮ್ಮ ಗುರುವನ್ನು ಮನ್ನಿಸದ ಆ ದ್ರುಪದನ ಸೊಕ್ಕನ್ನಡಗಿಸು" ಎಂದು ಹೇಳಲು ಅವನು

ಹೋಗಿ ದ್ರುಪದನೊಡನೆ ಯುದ್ಧಮಾಡಿ ಅವನ ಹೆಡಗೈಗಟ್ಟಿ ತಂದು ಧರ್ಮರಾಜನ ಮುಂದೆ ನಿಲಿಸಿದನು. ಅವನು ದ್ರೋಣನನ್ನು ಕರೆಸಲು ಅವನು ಬಂದು ದ್ರುಪದನನ್ನು ಹೀಯಾಳಿಸಿ ಅವನ ಪಟ್ಟಣಕ್ಕೆ ಕಳುಹಿದನು. ಅರ್ಜುನನ ಭುಜಬಲವನ್ನು ಹಸ್ತಿನಾಪುರನಿವಾಸಿಗಳೆಲ್ಲ ಹೊಗಳುತ್ತಿರಲು ಕೌರವನು ಆ ನುಡಿಯನ್ನು ಕೇಳಿ ಮತ್ತಷ್ಟು ಮಾತ್ಸರ್ಯಪಟ್ಟು ಆ ಪಾಂಡವರನ್ನು ಕೃತಕದಿಂದ ಕೊಂದಲ್ಲದೆ ತನಗೆ ಕ್ಷೇಮವಿಲ್ಲವೆಂದು ಬಗೆದು ಮೊದಲು ತನಗೆ ವಶವಾಗಿದ್ದ ವಾರಾಣಸಿಯಲ್ಲಿ ಗುಟ್ಟಾಗಿ ಅರಗಿನ ಮನೆಯನ್ನು ಕಟ್ಟಿಸಿ ಧೃತರಾಷ್ಟ್ರನ ಬಳಿಗೆ ಹೋಗಿ ತನಗೂ ಪಾಂಡವರಿಗೂ ಸರಿಹೋಗುವುದಿಲ್ಲವೆಂದೂ ಪಾಂಡವರನ್ನು ವಾರಾಣಸಿಯಲ್ಲಿರಿಸಬೇಕೆಂದೂ ಹೇಳಿದನು. ಧೃತರಾಷ್ಟ್ರನು ಹಾಗೆಯೇ ಆಗಲೆಂದು ಒಪ್ಪಿ ಧರ್ಮರಾಜನನ್ನು ಕರೆಯಿಸಿ ಕೌರವರೂ ಪಾಂಡವರೂ ಬೇರೆಬೇರೆ ದೇಶಗಳಲ್ಲಿರುವಂತೆಯೂ ಒಂದು ಕಡೆಯವರು ಸ್ವದೇಶದಲ್ಲಿಯೂ ಮತ್ತೊಂದು ಕಡೆಯವರು ಪರದೇಶದಲ್ಲಿಯೂ ಇರುವಂತೆಯೂ ಹೇಳಿ ಧರ್ಮರಾಜನಿಗೆ ಯಾವುದು ಇಷ್ಟವೆಂದು ಕೇಳಿದನು. ಅದಕ್ಕೆ ಧರ್ಮರಾಜನು ತಾನು ವಾರಾಣಸಿಯಲ್ಲಿರುತ್ತೇನೆಂದು ಹೇಳಿ ಶುಭದಿನದಲ್ಲಿ ಭೀಷ್ಮರಿಗೆ ವಂದಿಸಿ ಬಂಧುಗಳಿಗೆ ಹೇಳಿ ಅನುಜರೊಡನೆ ವೈಭವದಿಂದ ಹೊರಟು ವಾರಾಣಸಿಗೆ ಹೋದನು. ಅಲ್ಲಿ ಕೌರವನ ಕಡೆಯ ಸುಲೋಚನನೆಂಬವನು ಇದಿರ್ಗೊಂಡು ಅರಗಿನ ಮನೆಗೆ ಹೊಗಿಸಿದನು. ಅಲ್ಲಿ ಪಾಂಡವರು ಸುಖದಿಂದಿರುವಾಗ ಒಂದು ದಿನ ವಿದುರನು ಮರುಕದಿಂದ ಆ ಅರಗಿನಮನೆಯ ವಿಷಯವನ್ನೂ ದೀಪಾವಳಿಯ ನೆವದಿಂದ ಅದನ್ನು ಸುಟ್ಟು ಕೌರವನು ಪಾಂಡವರನ್ನು ಕೊಲಿಸಲೆಳಸಿರುವನೆಂಬ ವಿಷಯವನ್ನೂ ಗೂಢಚಾರರ ಮೂಲಕ ಪಾಂಡವರಿಗೆ ಹೇಳಿಕಳುಹಿದನು. ಆ ಮಾತನ್ನು ಕೇಳಿ ಪಾಂಡವರು ಒಂದು ಸುರಂಗವನ್ನು ಮಾಡಿಸಿದರು. ದೀಪಾವಳಿಯ ದಿವಸ ಆ ಸಂಕೇತದವರು ದೀಪಗಳನ್ನು ಹಚ್ಚಲು ಆ ಉರಿಯು ವ್ಯಾಪಿಸಿ ಮನೆಯು ಸುಟ್ಟುಹೋಯಿತು. ಆಗ ಪಾಂಡವರು ಕೊಂತಿದೇವಿಸಹಿತ ಆ ಸುರಂಗದ ಮೂಲಕವಾಗಿ ಹೊರಟು ಒಂದು ದೊಡ್ಡಕಾಡಿಗೆ ಹೋದರು. ಅಲ್ಲಿ ಕಿಮ್ಮೀರನೆಂಬೊರ್ವ ದಾನವನು ತನ್ನೆಡೆಗೆ ಬಂದವರಾರೆಂದು ಕೋಪದಿಂದ ಒಂದು ಮರವನ್ನು ಕಿತ್ತು ಹೊಡೆಯುವುದಕ್ಕೆಬರಲು ಭೀಮನು ತನ್ನ ಗದೆಯಿಂದ ಅವನನ್ನು ಹೊಡೆದು ಕೊಂದನು.

ಇತ್ತ ಕೌರವನು ವಾರಾಣಸಿಯ ಅರಗಿನ ಮನೆಯಲ್ಲಿ ಪಾಂಡವರು ಸತ್ತರೆಂಬ ವಾರ್ತೆಯನ್ನು ಕೇಳಿ ಸಂತೋಷದಿಂದ ನಿಶ್ಚಿಂತನಾಗಿದ್ದನು. ಹರಿವಂಶದರಸುಗಳೆಲ್ಲ ಪಾಂಡವರ ಮರಣವಾರ್ತೆಯನ್ನು ಕೇಳಿ ಬಹು ದುಃಖಿತರಾದರು.

ಇತ್ತ ಪಾಂಡವರು ಕಿಮ್ಮೀರನನ್ನು ಕೊಂದು ಆ ಪ್ರಾತಃಕಾಲದಲ್ಲಿ ಕಾಸಾರವೆಂಬ ಪಟ್ಟಣದ ಉದ್ಯಾನಕ್ಕೆ ಹೋಗಿ ಅಲ್ಲಿದ್ದರು. ಅಲ್ಲಿಯ ದೊರೆಯಾದ ಧಾನ್ಯರಾಜನಿಗೂ ಆತನ ಸತಿ ಧರಾಸುಂದರಿಗೂ ಹುಟ್ಟಿದ ಕುಸುಮಮಾಲೆಯೆಂಬ ಸುಂದರಳಾದ ಕನ್ಯೆಯನ್ನು ಆ ದಂಪತಿಗಳು ಧರ್ಮರಾಜನಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದರು. ಪಾಂಡವರು ಅರಗಿನಮನೆಯಲ್ಲಿ ಸತ್ತರೆಂಬ ವಾರ್ತೆಯನ್ನು ಕೇಳಿ ಧಾನ್ಯರಾಜನು ದುಃಖಿತನಾಗಿ ಓರ್ವ ದಿವ್ಯಜ್ಞಾನಸಂಪನ್ನನಾದ ಮುನಿಯ ಬಳಿಗೆ ಹೋಗಿ ತನ್ನ ಉದ್ದೇಶವನ್ನು ತಿಳಿಸಿ ಪಾಂಡವರು ಜತುಗೃಹದಲ್ಲಿ ಮಡಿದುದು ದಿಟವೇ ಎಂದು ಕೇಳಿದನು. ಅವಧಿಜ್ಞಾನಿಯಾದ ಆ ಮುನಿಯು "ತದ್ಭವಮೋಕ್ಷಗಾಮಿಗಳಾದ ಪಾಂಡವರು ಸತ್ತುದು ಸುಳ್ಳು, ಅವರು ಈದಿನ ಬೆಳಿಗ್ಗೆ ನಿನ್ನ ರಾಜಧಾನಿಯ ವನಕ್ಕೆ ಬಂದಿದ್ದಾರೆ ಹೋಗು" ಎಂದು ಹೇಳಿಕಳುಹಲು ಅವನು ಆ ವನಕ್ಕೆ ಬಂದು ಪಾಂಡವರನ್ನು ಕಂಡು ಸಂತೋಷದಿಂದ ಅವರನ್ನು ಮನೆಗೆ ಕರೆದೊಯ್ದು ಆ ದಿನ ರಾತ್ರಿ ಕುಸುಮಮಾಲೆಯನ್ನು ಧರ್ಮರಾಜನಿಗೆ ಕೊಟ್ಟು ಮದುವೆಮಾಡಿದನು. ಧರ್ಮರಾಜನು ಆಕೆಯಲ್ಲಿ ಕೆಲವು ದಿನಗಳವರೆಗೆ ಸುಖಪಡುತ್ತಿದ್ದು ಒಂದುದಿನ ತನ್ನ ಮುಂದಿನ ಕಾರ್ಯವನ್ನು ಧಾನ್ಯರಾಜನಿಗೆ ತಿಳಿಸಿ ಆ ರಾತ್ರಿಯಲ್ಲಿ ತಾಯಿ ಮತ್ತು ತಮ್ಮಂದಿರೊಡನೆ ಅಲ್ಲಿಂದ ಹೊರಟು ಹೋಗಿ ಒಂದು ಅರಣ್ಯವನ್ನು ಹೊಕ್ಕು ಅಲ್ಲಿ ಒಂದು ತಾಪಸಾಶ್ರಮದಲ್ಲಿ ಜಡೆಯನ್ನು ಬಿಟ್ಟು ಮರದ ತೊಗಟೆಯನ್ನುಟ್ಟು ಭಸ್ಮಧಾರಣಮಾಡಿ ತಪಸ್ಸುಮಾಡುತ್ತಿದ್ದ ಓರ್ವ ಸ್ತ್ರೀಯನ್ನು ನೋಡಿ ಕೊಂತಿಯು ಆಕೆಯ ಬಳಿಗೆ ಹೋಗಿ 'ಎಲೈ ತರುಣಿಯೆ! ಈ ಚಿಕ್ಕ ಪ್ರಾಯದಲ್ಲಿ ನಿನಗೇಕೀ ದೊಡ್ಡತಪಸ್ಸು? ನನಗೆ ಹೇಳು" ಎನಲು ಆಕೆಯು ಕಣ್ಣುಬಿಟ್ಟು ಧರ್ಮನಂದನನನ್ನು ಕಣ್ಮನವಿಟ್ಟು ನೋಡಿ ತಪಸ್ಸನ್ನು ಬಿಟ್ಟು ಆನಂದಬಾಷ್ಪವನ್ನು ಸುರಿದು ಕೊಂತಿಯಲ್ಲಿ ಇಂತೆಂದಳು—

"ನನ್ನ ತಂದೆ ವಿಂಧ್ಯಕನು. ತಾಯಿ ಸುರಕ್ಷಣೆ. ಅವರ ವಸಂತಸುಂದರಿಯೆಂಬ ಮಗಳು ನಾನು. ನನ್ನ ತಂದೆತಾಯಿಗಳು ನನ್ನನ್ನು ಯುಧಿಷ್ಠಿರನಿಗೆ ಕೊಡಬೇಕೆಂದಿದ್ದು ಅರಗಿನ ಮನೆಯಲ್ಲಿ ಪಾಂಡವರು ಸತ್ತರೆಂದು ಕೇಳಿ ನನ್ನ ತಂದೆಯು ನನ್ನನ್ನು ಬೇರೊಬ್ಬನಿಗೆ ಕೊಡಬೇಕೆಂದು ಯೋಚಿಸಲು ಆ ಸಮಾಚಾರವನ್ನು ನಾನು ತಿಳಿದು ಮರುಗಿ ಆ ಊರಿಂದ ಹೊರಟು ಯಾರಿಗೂ ತಿಳಿಯದಂತೆ ಈ ವನದ ಮಧ್ಯಕ್ಕೆ ಬಂದು ಮುಂದಿನ ಭವದಲ್ಲಾದರೂ ಆ ಧರ್ಮರಾಜನೊಡನೆ ಸೇರಿ ಸುಖವನ್ನು ಹೊಂದುವೆನೆಂದು ಈ ತಾಪಸರೂಪವನ್ನು ಧರಿಸಿದೆನು" ಎನಲು ಆ ಮಾತನ್ನು

ಕೇಳಿ ಕೊಂತಿಯು "ಮಾನಿನಿಯೆ! ದುಃಖವನ್ನು ಬಿಡು. ನೀನಿಚ್ಛಿಸಿದ ಪತಿಯು ಇವನೆ" ಎಂದು ಧರ್ಮರಾಜನನ್ನು ತೋರಿಸಿ ತಾವು ಹೊರಟುಬಂದ ವಾರ್ತೆಯನ್ನು ಆಕೆಗುಸುರಿ ಆಕೆಯನ್ನು ಆಕೆಯ ಊರಿಗೆ ಕಳುಹಿ ಅವರು ಅಲ್ಲಿಂದ ಹೊರಟು ತ್ರಿಸ್ಥಂಗವೆಂಬ ನಗರದ ಬಾಹ್ಯೋದ್ಯಾನಕ್ಕೆ ಹೋಗಿ ಅಲ್ಲಿಯ ಚಂದ್ರನಾಥದೇವಾಲಯವನ್ನು ಹೊಕ್ಕು ದೇವರಿಗೆ ವಂದಿಸಿ ಅಲ್ಲಿರ್ದ ವೀರಾಚಾರ್ಯರೆಂಬ ಮುನೀಶ್ವರರಿಗೆ ನಮಸ್ಕರಿಸಿ ಅವರಿಂದ ಧರ್ಮೋಪದೇಶವನ್ನು ಕೇಳುತ್ತಿರುವಾಗ ಅಲ್ಲಿಗೆ ಆ ನಗರದ ಚಂಡವಾಹನನೆಂಬ ದೊರೆಯು ಹನ್ನೆರಡು ಮಂದಿ ತನ್ನ ಹೆಣ್ಣುಮಕ್ಕಳೊಡನೆ ಬಂದು ದೇವರಿಗೂ ಗುರುಗಳಿಗೂ ಭಕ್ತಿಯಿಂದೆರಗಿ ಬಳಿಕ "ಎಲೈ ಮುನೀಶ್ವರರೆ! ನನ್ನ ಈ ಹನ್ನೆರಡು ಮಂದಿ ಹೆಣ್ಣುಮಕ್ಕಳನ್ನು ಧರ್ಮರಾಜನಿಗೆ ಕೊಡಬೇಕೆಂದಿದ್ದೆನು. ಅವನು ತಮ್ಮಂದಿರೊಡನೆ ಲಾಕ್ಷಾಗೃಹದಲ್ಲಿ ಮಡಿದನೆಂದು ಕೇಳಿ ಈ ಬಾಲೆಯರು ದುಃಖದಿಂದ ತಪಸ್ವಿನಿಯರಾಗಬೇಕೆಂದಿರುವರು" ಎನಲು ಆ ಮುನಿಪತಿಯು ಕೇಳಿ ದೊರೆಯನ್ನು ಕುರಿತು "ಎಲೈ ರಾಜನೆ! ಪಾಂಡವರು ಮಹಾಮಹಿಮೆಯುಳ್ಳವರು ಮತ್ತು ಚರಮದೇಹಿಗಳು. ಅವರಿಗೆ ಕೇಡುಂಟಾಗುವುದಿಲ್ಲ" ಎಂದನು. ಆ ಮಾತನ್ನು ಕೇಳಿ ದೊರೆಯು ಸಂತುಷ್ಟನಾಗಿ ಮುನಿಗೆರಗಿ ತನ್ನ ಹೆಮ್ಮಕ್ಕಳೊಡನೆ ಹೊರಟು ಹೋದನು.

ಧರ್ಮರಾಜನು ಮುನಿಯ ಆ ಮಾತನ್ನು ಕೇಳಿ ತಾಯಿ ತಮ್ಮಂದಿರೊಡನೆ ಮುನಿಪತಿಗೆ ವಂದಿಸಿ ಅಲ್ಲಿಂದ ಹೊರಟು ಮತ್ತೊಂದು ನಗರಕ್ಕೆ ಹೋಗಿ ಜಿನಾಲಯವನ್ನು ಹೊಕ್ಕು ದೇವರಿಗೆ ವಂದಿಸಿ ಆ ರಾತ್ರಿ ಮಲಗಿದ್ದು ಬೆಳಗ್ಗೆ ಅಲ್ಲಿಂದ ಹೊರಟು ಒಂದು ಅಗ್ರಹಾರಕ್ಕೆ ಹೋಗಿರಲು ಅಲ್ಲೊರ್ವ ಬ್ರಾಹ್ಮಣಬಾಲಕನು ಒಂದು ಬಂಡಿಯಲ್ಲಿ ಭಕ್ಷ್ಯಗಳನ್ನು ತುಂಬಿಕೊಂಡು ಅದನ್ನು ಹೊಡೆದುಕೊಂಡು ಹೋಗುತ್ತಿರುವುದನ್ನೂ ಬಂಡಿಯ ಹಿಂದೊರ್ವಳು ಅಳುತ್ತ ಹೋಗುತ್ತಿರುವುದನ್ನೂ ಕಂಡು ಪಾಂಡವರು "ಇದೇನು?" ಎಂದು ಕೇಳಿದರು. ಅದಕ್ಕವಳಿಂತೆಂದಳು.—

"ಹರಿಪುರನಗರದಲ್ಲಿ ಅಷ್ಟಮದಯುಕ್ತನಾದ ಬಾಣನೆಂಬ ರಾಜನು ಮಾಂಸಾಹಾರಲೋಲುಪನಾಗಿ ರಾಜ್ಯವಾಳುತ್ತಿರುವಾಗ ಒಂದು ದಿನ ಮಾಂಸವು ಸಿಕ್ಕದಿರಲು ಅವನ ಅಡಿಗೆಯವನು ಸತ್ತುಬಿದ್ದಿದ್ದ ಒಬ್ಬ ಮನುಷ್ಯನ ಹೆಣವನ್ನು ಕೊಯ್ದು ಬೇಯಿಸಿ ದೊರೆಗೆ ಒಡಿಸಿದನು. ಅವನು ಆ ನರಮಾಂಸದ ಸವಿಯನ್ನು ನೋಡಿ ಅದು ಯಾವುದರ ಮಾಂಸವೆಂದು ಹಟಮಾಡಿ ಕೇಳಿದನು. ಬಾಣಸಿಗನು ಭೀತಿಯಿಂದ ಅದು ನರಮಾಂಸವೆಂದು ಹೇಳಲು ಅವನಿಗೆ ಅಭಯವನ್ನು ಹೇಳಿ ಇನ್ನು

ಮೇಲೆ ನರಮಾಂಸವನ್ನೇ ಅಡಿಗೆಮಾಡೆಂದು ನುಡಿದು ಅಂದಿನಿಂದ ಮನುಷ್ಯರನ್ನು ತರಿಸಿ ಕೊಂದು ತಿಂದು ತೃಪ್ತನಾಗಿರುತ್ತಿದ್ದನು. ಈ ಅನಾಚಾರವನ್ನು ಕಂಡು ಪ್ರಜೆಗಳು ಅವನನ್ನು ಓಡಿಸಿ ಅವನ ಮಗನಿಗೆ ಪಟ್ಟವನ್ನು ಕಟ್ಟಿದರು. ನರಮಾಂಸದ ಸವಿಗಂಡ ಆ ಬಾಣನು ಭ್ರಷ್ಟನಾಗಿ ರಾಕ್ಷಸವಿದ್ಯೆಯನ್ನು ಕಲಿತು ಅದರಿಂದ ರಾಕ್ಷಸರೂಪವನ್ನು ಪಡೆದು ಹಳ್ಳಿಗಳಲ್ಲಿ ಮನುಷ್ಯರನ್ನು ಕೊಂದು ತಿನ್ನುತ್ತ ಈ ಅಗ್ರಹಾರಕ್ಕೆ ಬಂದು ಇಲ್ಲಿರುವ ಅನೇಕ ಹಾರುವರನ್ನು ಕೊಂದು ತಿನ್ನುತ್ತಿರಲು ಈ ಊರಿನವರೆಲ್ಲ ಸೇರಿ ಆ ರಾಕ್ಷಸನ ಬಳಿಗೆ ಹೋಗಿ ಅವನನ್ನು ಪ್ರಾರ್ಥಿಸಿಕೊಂಡು ದಿನಕ್ಕೊಬ್ಬನನ್ನು ತಂದೊಪ್ಪಿಸುವುದಾಗಿ ಹೇಳಲು ಅದಕ್ಕವನು ಒಪ್ಪಿದನು. ಊರಿನವರ ವಾಗ್ದಾನಪ್ರಕಾರ ದಿನಕ್ಕೊಬ್ಬನು ಬಂಡಿಯಲ್ಲಿ ಭಕ್ಷ್ಯವನ್ನು ತುಂಬಿಕೊಂಡು ಹೋಗುತ್ತಿದ್ದು ಈ ದಿನ ನನ್ನ ಮಗನ ಬಾರಿಯು ಬಂದಿದೆ. ಈ ದಿನವೇ ಮಗನಿಗೆ ಮದುವೆಮಾಡಬೇಕೆಂದು ನಿಶ್ಚಯಿಸಿದ್ದೆನು." ಎಂದು ಹೇಳಿದಳು. ಆ ಮಾತನ್ನು ಕೇಳಿ ಕೊಂತಿಯು ತನಗೆ ಐದು ಮಂದಿ ಮಕ್ಕಳಿರುವರೆಂದೂ ಅವರಲ್ಲಿ ಭೀಮನೆಂಬವನಿಗೆ ತಾನು ಕೂಳನ್ನೊದಗಿಸಲಾರೆನೆಂದೂ ಆತನನ್ನು ಆ ರಾಕ್ಷಸನಿಗೆ ಬಲಿಯಾಗಿ ಕಳುಹುವೆನೆಂದೂ ಹೇಳಿ ಆಕೆಯ ದುಃಖವನ್ನು ಸಮಾಧಾನಗೊಳಿಸಿ ಭೀಮನನ್ನು ಕರೆದು ಆ ಬಂಡಿಯನ್ನು ತೋರಿ " ಈ ಬಂಡಿಯ ಭಕ್ಷ್ಯವನ್ನು ತಿಂದು ಬಾಣನನ್ನು ಕೊಂದು ಬಾ " ಎಂದು ಹರಸಿ ಕಳುಹಿದಳು. ಭೀಮನು ಆ ಬ್ರಾಹ್ಮಣಯುವಕನನ್ನು ಬಂಡಿಯಿಂದಿಳಿಸಿ ತಾನು ಆ ಬಂಡಿಯನ್ನೇರಿ ಭಕ್ಷ್ಯಭೋಜ್ಯಗಳನ್ನು ತಿನ್ನುತ್ತ ಹೋಗಿ ಹಸಿದು ಕೋಪದಲ್ಲಿದ್ದ ಬಾಣನನ್ನು ಯುದ್ಧಗೊಳ್ಳೆಂದು ಅಣಕಿಸಿದನು. ಅದನ್ನು ಕಂಡು ಬಾಣನು ಕೋಪದಿಂದ ಭೀಮನ ಮೇಲೆ ಹಾಯ್ದು ಬರಲು ಭೀಮನು ಅವನನ್ನು ಕೆಡಹಿ ತನ್ನ ಕಾಲಿನಿಂದ ಹೊಸೆದು ಕೊಂದನು. ಅದನ್ನು ಕಂಡು ಆ ಗ್ರಾಮದ ಜನರೆಲ್ಲ ಭೀಮಸೇನನನ್ನು ಕೊಂಡಾಡಿ ಕೊಂತಿಗೆ ನಮಸ್ಕರಿಸಿ ತಮ್ಮೂರಿಗೆ ಕರೆದೊಯ್ದು ಉಪಚರಿಸಿದರು. ಅಲ್ಲಿ ಕೆಲದಿನವಿದ್ದು ಅಲ್ಲಿಂದ ಮುಂದಕ್ಕೆ ತೆರಳಿ ಒಂದು ದೊಡ್ಡ ಅರಣ್ಯವನ್ನು ಹೊಕ್ಕು ಒಂದು ಆಲದಮರದ ಬುಡದಲ್ಲಿ ಆ ರಾತ್ರಿ ಪಾಂಡವರು ಮಲಗಿದರು. ಭೀಮನು ಅವರಿಗೆ ಕಾವಲಾಗಿರಲು ಆಗ ಪರಿಮಳವಾದ ಗಾಳಿಯು ಬೀಸಿತು. ಎಲ್ಲಿಯದೀ ಗಾಳಿಯೆಂದು ಭೀಮನು ಆ ಕಡೆಗೆ ಹೋಗಿ ಅಲ್ಲೊಂದು ದೊಡ್ಡ ಪೊದರಿನಲ್ಲಿ ಭಯಂಕರವಾದ ಗದೆಯನ್ನು ಕಂಡು ಅದಕ್ಕೆ ಕೈನೀಡಿದನು. ಅದು ಅವನ ಪುಣ್ಯಪ್ರಭಾವದಿಂದ ಕೈಗೆ ಬರಲು ಅದನ್ನು ತೆಗೆದುಕೊಂಡು ಪಾಂಡವರು ಮಲಗಿದ್ದ ಸ್ಥಳಕ್ಕೆ ಬಂದು ಕುಳಿ

ತನು. ಆಗ ಓರ್ವ ಕನ್ಯೆಯು ಬಂದು ಭೀಮನ ತೊಡೆಯನ್ನು ಸೋಂಕಿ ಕುಳಿತಳು. ಭೀಮನು ಆಕೆಯನ್ನು ಕುರಿತು " ನೀನು ಯಾವಕಾರಣದಿಂದ ಬಂದು ಕುಳಿತೆ ? ನೀನು ಯಾರ ಮಗಳು ? ನಿನ್ನ ಸಮಾಚಾರವನ್ನು ತಿಳುಹು " ಎನಲು ಆಕೆಯು " ನಾನು ಸಿಹ್ಮಘೋಷಣನೆಂಬ ಖೇಚರನಿಗೂ ಆತನ ಸತಿ ಸುದರ್ಶನೆಗೂ ಹುಟ್ಟಿದ ಸುಕೇಶಿಯೆಂಬ ಮಗಳು. ನನ್ನ ತಂದೆಯು ಈರ್ವರು ಚಾರಣಮುನಿಗಳಿಗೆ ನಮಸ್ಕರಿಸಿ ತನ್ನ ಮಗಳಿಗೆ—ನನಗೆ ಪತಿಯಾರಾಗುವನೆಂದು ಕೇಳಿದನು. ಅವರು ಈ ರುಧಿರೋದ್ಗಾರಿಯೆಂಬ ಗದೆಯನ್ನು ಸಾಧಿಸುವವನು ಪತಿಯಾಗುವನೆಂದು ಹೇಳಿದರು. ಆ ಮಾತನ್ನು ಕೇಳಿ ನನ್ನ ತಂದೆಯು ಸಂತೋಷದಿಂದಿರಲು ಒಂದು ದಿನ ಈ ಸಮುದ್ರಮಧ್ಯದ ಲಂಕಾದ್ವೀಪದ ದೊರೆಯಾದ ಘನಗತಿಯೆಂಬ ಖೇಚರನು ಹಿಡಿಂಬನೆಂಬ ತನ್ನ ಮಗನಿಗೆ ನನ್ನನ್ನು ಕೇಳಲು ತನ್ನ ಭೃತ್ಯರನ್ನು ಕಳುಹಿದನು. ಅದಕ್ಕೆ ನನ್ನ ತಂದೆಯು ಮುನೀಶ್ವರರು ಹೇಳಿದ ವೃತ್ತಾಂತನ್ನು ಹೇಳಿಕಳುಹಲು ಆ ಮಾತನ್ನು ಕೇಳಿ ಹಿಡಿಂಬನು ಈ ಗದೆಯನ್ನು ಅರ್ಚಿಸಿ ಸಾಧಿಸುತ್ತಿರುವನು. ಅದರಿಂದ ಈ ವನಕ್ಕೆ ಹಿಡಿಂಬವನವೆಂದು ಹೆಸರಾಯಿತು. ಆ ಮಾನ್ವೇಷಣಕ್ಕಾಗಿ ನಾನು ಈ ವನದಲ್ಲಿ ಸಂಚರಿಸುತ್ತಿರುವುದರಿಂದ ನನ್ನ ಹೆಸರು ಹಿಡಿಂಬೆಯೆಂದಾಯಿತು. ಆ ದುರುಳನ ದೆಸೆಯಿಂದ ಈ ಇಚ್ಛಾಪುರವೂ ಈ ನಾಡೂ ಹಾಳಾದುವು. ನನ್ನ ಪುಣ್ಯದಿಂದ ನಿನ್ನ ದರ್ಶನವಾಯಿತು " ಎಂದಳು. ಅತ್ತ ಹಿಡಿಂಬನು ಮಂತ್ರವನ್ನು ಜಪಿಸುತ್ತಿದ್ದು ಅದು ಪೂರ್ತಿಯಾದಮೇಲೆ ಕಣ್ಣುತೆರೆದು ನೋಡಿ ಆ ಗದೆಯನ್ನು ಕಾಣದೆ ಬಹುದಿನಗಳಿಂದ ತಾನು ಸಾಧಿಸುತ್ತಿದ್ದ ದಿವ್ಯಗದೆಯನ್ನು ತೆಗೆದುಕೊಂಡು ಹೋದವನ ತಲೆಯನ್ನು ಚೆಂಡಾಡದೆ ಬಿಡೆನೆಂದು ಹುಡುಕುತ್ತ ಭೀಮನ ಬಳಿಗೆ ಬಂದು ಅವನು ಸುಕೇಶಿಯೊಡನೆ ಕುಳಿತಿರುವುದನ್ನು ಕಂಡು ಬಹು ಕೋಪದಿಂದ ಭೀಮನ ಮೇಲೆ ಬೀಳಲು ಅವನು ಆ ರಕ್ಕಸನ ಕಾಲ್ಪಿಡಿದು ನೆಲಕ್ಕಪ್ಪಳಿಸಿ ಕೊಂದನು. ಆ ರಭಸಕ್ಕೆ ಆ ಮರದಡಿಯಲ್ಲಿ ಮಲಗಿರ್ದ ಪಾಂಡವರೆದ್ದು ಕಣ್ದೆರೆದು ನೋಡಿ ಧರ್ಮರಾಜನು ಏನಿದಾಶ್ಚರ್ಯವೆಂದು ಭೀಮನನ್ನು ಕೇಳಿದನು. ಅದಕ್ಕವನು ಆ ಸಮಾಚಾರವನ್ನೆಲ್ಲ ಹೇಳಲು ಕೇಳಿ ಧರ್ಮಸುತನು ತಮ್ಮನ ಸಾಹಸಕ್ಕೆ ಬಲುಮೆಚ್ಚಿದನು. ಆ ದಿನ ಬೆಳಿಗ್ಗೆ ಪಾಂಡವರು ಎದ್ದು ಮುಂದಕ್ಕೆ ಹೊರಡುವಷ್ಟರಲ್ಲಿ ಹಿಡಿಂಬೆಯು ಕೈಮುಗಿದು ಹಿಡಿಂಬನಿಂದ ಹಾಳಾದ ತನ್ನ ಇಚ್ಛಾಪುರವನ್ನು ನೋಡಿ ಹೋಗಬೇಕೆಂದು ಪ್ರಾರ್ಥಿಸಿ ಅಲ್ಲಿಗೆ ಕರೆದೊಯ್ಯುವಾಗ ಆಕೆಯ ತಂದೆಯು ಆಕಾಶಮಾರ್ಗದಲ್ಲಿ ವಿಮಾನಾರೂಢನಾಗಿ ಬಂದು ಇವರನ್ನು ಇದಿ

ಗೊಂಡು ಕರೆದೊಯ್ದು ತನ್ನ ಮಗಳನ್ನು ವಾಯುತನಯನಿಗೆ ಕೊಟ್ಟು ಮದುವೆ ಮಾಡಿದನು. ಆಕೆಯಲ್ಲಿ ಭೀಮನು ಕೂಡಿರಲು ಗರ್ಭವು ತಲೆದೋರಿ ಪುತ್ರನನ್ನು ಹಡೆದಳು. ಆ ಮಗುವಿಗೆ ಧರ್ಮತನಯನು ಘಟೋದ್ಗಜನೆಂದು ಹೆಸರನ್ನಿಟ್ಟನು. ಬಳಿಕ ಒಂದು ದಿನ ಆ ಸಿಹ್ಮಘೋಷನನ್ನೂ ಸುಕೇಶಿ—ಹಿಡಿಂಬೆಯನ್ನೂ ಸಂತೈಸಿ ಪಾಂಡವರು ಆ ನಗರದಿಂದ ಹೊರಟು ಅಂಗದೇಶಕ್ಕೆ ಹೋದರು. ಅಲ್ಲಿ ಕರ್ಣನ ಪ್ರಶಂಸೆಯನ್ನು ಕೇಳುತ್ತ ಮುಂದೆ ನಡೆವಾಗ ದಾರಿಯಲ್ಲಿ ಓರ್ವ ಬ್ರಾಹ್ಮಣನನ್ನು ಕಂಡು ಧರ್ಮನಂದನನು " ಪೃಥ್ವಿಯಲ್ಲಿ ಸಮಾಚಾರವೇನು ? " ಎಂದು ಕೇಳಿದನು. ಅದಕ್ಕವನು ಪಾಂಚಾಲದೇಶದ ಮಹೇಂದ್ರನಗರಿಯ ದೊರೆಯಾದ ದ್ರುಪದರಾಜನಿಗೆ ಅನುಪಮಕಲಾವಿಲಾಸ ರೂಪಾನ್ವಿತೆಯಾದ ದ್ರೌಪದಿಯೆಂಬ ಮಗಳಿರುವಳೆಂದೂ ದ್ರುಪದನ ಆಯುಧಶಾಲೆಯಲ್ಲಿ ಒಂದು ದಿವ್ಯಧನುವುದಯಿಸಿರಲು ಅದನ್ನು ಅವನು ಪೂಜಿಸುತ್ತಿದ್ದು ಒಂದು ದಿನ ಅವಧಿಜ್ಞಾನಿಗಳಾದ ಮುನೀಶ್ವರರು ಬರಲು ಅವರಿಗೆ ವಂದಿಸಿ ತನ್ನ ಮಗಳಿಗೆ ವರನಾರಾಗುವನೆಂದು ಕೇಳಿದನು. ಆ ಮುನಿಪತಿಯು ದೊರೆಯನ್ನು ಕುರಿತು " ನಿನ್ನ ಮನೆಯಲ್ಲಿ ಉದ್ಭವಿಸಿರುವ ಧನುಸ್ಸನ್ನು ಹೆದೆಯೇರಿಸಿ ಮೇಲೆ ತಿರುಗುವ ಯಂತ್ರದ ಮೀನನ್ನು ಮಂತ್ರಾಸ್ತ್ರದಿಂದ ಭೇದಿಸುವವನು ಪತಿಯಾಗುವನು " ಎಂದು ನುಡಿದನು. ಈ ಕೆಲಸವು ಅರ್ಜುನನಿಂದಲ್ಲದೆ ಬೇರೆಯವರಿಂದಾಗದೆಂದೂ ಅರ್ಜುನನಿಗೆ ತನ್ನ ಮಗಳು ಪತ್ನಿಯಾಗುವಳೆಂದೂ ಬಗೆದು ದ್ರುಪದನು ಸಂತೋಷದಿಂದಿರುವಾಗ ಪಾಂಡವರು ಲಾಕ್ಷಾಗೃಹದಲ್ಲಿ ಸತ್ತರೆಂದು ಕೇಳಿ ದುಃಖಿತನಾಗಿ ಓರ್ವ ಮುನಿವರ್ಯನ ಬಳಿಗೆ ಹೋಗಿ ಪಾಂಡವರು ಮಡಿದುದು ನಿಜವೇ ಎಂದು ಕೇಳಿದನು. ಅದಕ್ಕಾ ಮುನಿಯು ತದ್ಭವಮೋಕ್ಷಗಾಮಿಗಳಾದ ಪಾಂಡವರಿಗೆ ಅಪಮೃತ್ಯುವಿಲ್ಲವೆಂದೂ ಸ್ವಯಂವರಮಂಟಪಕ್ಕೆ ಬಂದು ಅರ್ಜುನನು ಲಕ್ಷ್ಯಭೇದವನ್ನು ಮಾಡಿ ದ್ರೌಪದಿಗೆ ಪತಿಯಾಗುವನೆಂದೂ ಹೇಳಲು ದ್ರುಪದನು ಕೇಳಿ ಸಂತುಷ್ಟನಾಗಿ ಸ್ವಯಂವರವನ್ನು ಮಾಡಿಸಿ ರಾಜರನ್ನೆಲ್ಲ ಕರೆಸಿರುತ್ತಾನೆ ' ಎಂದನು. ಆ ವಾರ್ತೆಯನ್ನು ಕೇಳಿ ಪಾಂಡವರು ದ್ರುಪದನ ಪಟ್ಟಣಕ್ಕೆ ಹೋಗಿ ಆ ಮರುದಿನ ಪ್ರಾತಃಕಾಲದಲ್ಲಿ ನಡೆದ ಸ್ವಯಂವರಮಂಟಪವನ್ನು ಹೊಕ್ಕರು. ಅಲ್ಲಿ ದ್ರುಪದನು ಅನೇಕ ರಾಜರುಗಳನ್ನು ಮಣಿಮಯಾಸನಗಳಲ್ಲಿ ಕುಳ್ಳಿರಿಸಿ ತನ್ನ ಪತ್ನಿಯಾದ ದೃಢರಥೆಯನ್ನು ಕುರಿತು ದ್ರೌಪದಿಯನ್ನು ಶೃಂಗರಿಸಿ ಸ್ವಯಂವರಮಂಟಪಕ್ಕೆ ಕಳುಹುವಂತೆ ಹೇಳಿದನು. ಆಕೆಯು ಬಲುಸೊಗಸಾಗಿ ಶೃಂಗಾರವಮಾಡಿಸಿ ದ್ರೌಪದಿಯನ್ನು ಆಕೆಯ ಸಖಿಯರೊಡನೆ ಸ್ವಯಂವರಮಂಟ

ಪಕ್ಕೆ ಕಳುಹಿದಳು. ಆಗ ದ್ರೌಪದಿಯು ಸೊಗಸುಗಾತಿಯರಾದ ತನ್ನ ಬಹು ಮಂದಿ ಸಖಿಯರೊಡನೆ ಸ್ವಯಂವರಮಂಟಪಕ್ಕೆ ನಡೆತಂದಳು. ಆಕೆಯ ರೂಪ ಸೌಂದರ್ಯವನ್ನು ನೋಡಿ ರಾಜಕುಮಾರರೆಲ್ಲ ಮೋಹಿತರಾದರು.

ಆ ಸಮಯದಲ್ಲಿ ಪಾಂಡವರು ವೇಷಾಂತರದಿಂದ ಬ್ರಾಹ್ಮಣರ ಗುಂಪಿನಲ್ಲಿ ಸೇರಿದ್ದರು. ಅವರ ರೂಪಲಕ್ಷಣಗಳನ್ನು ನೋಡಿ ಸಭಿಕರೆಲ್ಲ ಆಶ್ಚರ್ಯಪಟ್ಟರು. ಸ್ವಯಂವರ ಶಾಲೆಯಲ್ಲಿ ಆ ದಿವ್ಯ ಧನುಸ್ಸೂ ಅದರ ಮೇಲ್ಗಡೆಯಲ್ಲಿ ಯಂತ್ರದ ಮೀನೂ ಕಂಗೊಳಿಸುತ್ತಿದ್ದುವು. ಆಗ ದ್ರೌಪದಿಯ ಸುಂದರಿಯೆಂಬ ಗೆಳತಿಯು ಕೈಬೆರಳನ್ನೆತ್ತಿ ಕರ್ಣ ಕೌರವ ಮೊದಲಾದ ರಾಜರುಗಳನ್ನು ದ್ರೌಪದಿಗೆ ತೋರಿಸಿ ಅವರುಗಳ ಚೆಲ್ವಿಕೆಯನ್ನು ವರ್ಣಿಸಿದಳು. ಆಕೆಯ ಆ ಮಾತು ದ್ರೌಪದಿಗೆ ಸಮ್ಮತವಾಗಲಿಲ್ಲ. ಆಕೆಯ ಮನಸ್ಸು ಅರ್ಜುನನಲ್ಲಿ ಆಸಕ್ತವಾಗಿದ್ದುದರಿಂದ ಉಳಿದ ರಾಜರುಗಳನ್ನು ತಲೆಯೆತ್ತಿ ನೋಡಲಿಲ್ಲ. ಆಗ ದ್ವಾರಪಾಲಕರು ರಾಜರುಗಳನ್ನು ಕುರಿತು "ನಿಮಗೆ ಕನ್ಯಾರತ್ನವು ಬೇಕಾದರೆ ಈ ನೀರಿನ ನೆರಳನ್ನು ನೋಡಿ ಮೇಲೆ ತಿರುಗುವ ಯಂತ್ರದ ಮೀನಿನ ಎಡಗಣ್ಣನ್ನು ಈ ಧನುಸ್ಸಿನಿಂದ ಭೇದಿಸಬೇಕು" ಎನಲು ಆ ಮಾತನ್ನು ಕೇಳಿ ಕೆಲವರು ರಾಜರುಗಳು ಪ್ರಯತ್ನಿಸಿ ನೋಡಿ ಸಾಧ್ಯವಾಗದಿರಲು ಹಿಂದಿರುಗಿದರು. ಕೆಲವರು ಧನುಸ್ಸನ್ನು ಮುಟ್ಟಿ ಕೆಲವರು ಹಿಡಿದು ಹಿಂದಿರುಗಿದರು ಕೌರವನು ಎದ್ದುಹೋಗಿ ಎತ್ತಿ ಬಳಿಕ ಹೆದೆಯೇರಿಸಲಾರದೆ ಬಲು ನಾಚಿಕೆಯಿಂದ ಬಂದು ಕುಳಿತನು. ಅದನ್ನು ನೋಡಿ ಕರ್ಣನು ಆ ಧನುಸ್ಸನ್ನು ಎತ್ತಿ ಹೆದೆಯೇರಿಸಿ ನಿಂತು ಬಳಿಕ ಲಕ್ಷ್ಯಭೇದವನ್ನು ಮಾಡಲಾರದೆ ಹಿಂದಿರುಗಿದನು. ಆ ರಾಜರೆಲ್ಲ ಸಾಧಾರಣರೆಂದು ಬಗೆದು ದ್ರುಪದನು "ಬ್ರಾಹ್ಮಣರ ಸಭೆಯಲ್ಲಿ ಈ ಧನುಸ್ಸನ್ನೆತ್ತುವ ಸಾಹಸಿಗಳಿದ್ದರೆ ಏಳಿ' ಎಂದು ಸಾರಿಸಿದನು. ಅದನ್ನು ಕೇಳಿ ಬ್ರಾಹ್ಮಣರು "ಸತ್ರದಲ್ಲಿ ಕುಳಿತು ವಿಸ್ತಾರವಾದ ಎಲೆಯಲ್ಲಿ ಊಟಕ್ಕೆ ಪಾತ್ರರಲ್ಲದೆ ಬಡಬ್ರಾಹ್ಮಣರು ಈ ರಾಜಪುತ್ರಿಗೆ ಪಾತ್ರರೇ? ಸಣ್ಣಕ್ಕಿಯ ಅನ್ನವನ್ನೂ ತೊಗರಿಯ ತೊಗೆಯನ್ನೂ ಬೆಣ್ಣೆಕಾಯಿಸಿದ ತುಪ್ಪವನ್ನೂ ಬಡಿಸಿ ಅಣ್ಣಂದಿರಾ! ಊಟಮಾಡಿ ಬನ್ನಿಯೆನಬೇಕಲ್ಲದೆ ಹೆಣ್ಣಿಗೆಂದು ನಮ್ಮನ್ನು ಕರೆಯುತ್ತಾರೆಯೇ? ಸುವಾಸನೆಯಾದ ತುಪ್ಪವನ್ನು ಬಡಿಸಿ ನಮ್ಮ ಕೈಯ ಪರಿಯನ್ನು ನೋಡದೆ ಅಯ್ಯೋ ಬಲಿಷ್ಠರಿಂದಾಗದ ಕೆಲಸವನ್ನು ನಮಗೆ ಹೇಳುವುದುಂಟೆ?" ಈ ರೀತಿಯಾಗಿ ಹೇಳುವ ಬ್ರಾಹ್ಮಣರ ಮಾತುಗಳನ್ನು ಕೇಳಿ ನಸುನಗುತ ಧರ್ಮರಾಜನು ಪ್ರೀತಿಯಿಂದ ಅರ್ಜುನನಿಗೆ ಕಣ್ಣುಸನ್ನೆಮಾಡಿದನು. ಆಗ ಫಲ್ಗುನನು ಬ್ರಾಹ್ಮಣರ

ಸಭೆಯಿಂದೆದ್ದು ಬರುತ್ತಿರಲು ಸಭಿಕರೆಲ್ಲ ಅವನನ್ನು ನೋಡಿ ಪರಿಪರಿಯಾಗಿ ಪರಿಹಾಸ್ಯಮಾಡಿದರು. ಅರ್ಜುನನು ಧನುಸ್ಸನ್ನು ಹಿಡಿದು ಹರಳುಗಿಡವನ್ನು ಎತ್ತುವಂತೆ ಎತ್ತಿ ಹೆದೆಯೇರಿಸಿ ಲಕ್ಷ್ಯವನ್ನು ಭೇದಿಸಿ ಬಂದು ಧರ್ಮರಾಜನ ಕಾಲಿಗೆ ನಮಸ್ಕಾರಮಾಡಿ ಕುಳಿತನು. ಸಭಿಕರೆಲ್ಲ ಅಚ್ಚರಿಪಟ್ಟರು. ದ್ರೌಪದಿಯು ಅರ್ಜುನನ ಅಂಗಸೌಂದರ್ಯವನ್ನು ನೋಡಿ ಮುಗ್ಧಳಾಗಿ ಆತನಿಗೆ ಸ್ವಯಂವರ ಮಾಲಿಕೆಯನ್ನು ಹಾಕಿದಳು. ಆಗ ದ್ರುಪದನು ಅರ್ಜುನನ ಬಳಿಗೆ ಬಂದು ಅವನನ್ನು ನೋಡಿ ಬಹು ಸಂತೋಷಪಟ್ಟು ಬಳಿಕ ಪಾಂಡವರನ್ನು ಗುರುತಿಸಿ ಅವರಿಗೆ ತಕ್ಕ ಸನ್ಮಾನವನ್ನು ಮಾಡಿ ಅವರನ್ನೂ ಕೊಂತಿಯನ್ನೂ ದ್ರೌಪದಿಯನ್ನೂ ರಥದಲ್ಲಿ ಕುಳ್ಳಿರಿಸಿ ತನ್ನ ಪಟ್ಟಣಕ್ಕೆ ಕರೆದೊಯ್ದನು. ಆಗ ಕೌರವನು ತಾನೂ ಇತರ ರಾಜರುಗಳೂ ಇರುವಾಗ ದ್ರುಪದನು ದ್ರೌಪದಿಯನ್ನು ಓರ್ವ ಬಡಬ್ರಾಹ್ಮಣನಿಗೆ ಕೊಡಬಹುದೇ ? ಎಂದು ಬಹುಕೋಪಗೊಂಡು ತನ್ನ ಅಪರಿಮಿತ ಸೇನೆಯೊಡನೆ ರಣಸನ್ನದ್ಧನಾಗಿ ರಣಭೇರಿಯನ್ನು ಹೊಯ್ಸಿದನು. ಅವನಿಗೆ ಸಹಾಯಕರಾಗಿ ಇತರ ರಾಜರುಗಳೂ ಸೇರಿದರು. ಆ ಬಹುಸೈನ್ಯವನ್ನು ಕಂಡು ಪಾಂಡವರೂ ದ್ರುಪದನೂ ಪಟ್ಟಣಕ್ಕೆ ಹೋಗದೆ ಹಿಂದಿರುಗಿದರು. ಭೀಮಾರ್ಜುನರು ರಥವನ್ನೇರಿ ಅರ್ಜುನನು ಗಾಂಡೀವಧನುಸ್ಸನ್ನೂ ಭೀಮನು ರುಧಿರೋದ್ಗಾರಿಗದೆಯನ್ನೂ ಹಿಡಿದು ಕೌರವನ ಸೇನೆಯನ್ನು ಹೊಕ್ಕು ಹೆಸರು ಕುರುಹಿಲ್ಲದಂತೆ ಕೊಲುತ್ತಿರುವುದನ್ನು ಕಂಡು ಅಳಿದುಳಿದ ಸೇನೆಯು ಓಡುತ್ತಿರಲು ಆ ಕುರುಸೇನೆಯ ನಾಯಕರು ಭೀಮಾರ್ಜುನರ ಮುಖವನ್ನು ನೋಡಿ ಅವರು ಭೀಮಾರ್ಜುನರೆಂದು ನಿಶ್ಚಯಿಸಿ ಬಂದು ಕೌರವ ಭೀಷ್ಮ ಕೃಪ ವಿದುರರಿಗೆ ತಿಳಿಸಿದರು. ಅವರು ಭೃತ್ಯರನ್ನು ಕಳುಹಿ ನಿಜಾಂಶವನ್ನು ತಿಳಿದು ಬಂದು ಪಾಂಡವರನ್ನು ಕಂಡರು. ಅವರು ಕಾಲಿಗೆ ನಮಸ್ಕಾರಮಾಡಲು ಮರಳಿ ಮರಳಿ ಹರಸಿ ಭೀಷ್ಮರು ಧರ್ಮರಾಜನನ್ನು ಕುರಿತು "ನೀವು ಅರಗಿನ ಮನೆಯಿಂದ ಹೇಗೆ ಬದುಕಿ ಬಂದಿರಿ ?" ಎಂದು ಕೇಳಿದರು. ತಾವು ಅದೃಷ್ಟದಿಂದ ಬದುಕಿಬಂದೆವೆಂದು ಧರ್ಮರಾಜನು ಹೇಳಿದನು. ಭೀಷ್ಮರು "ದೈವಬಲವುಳ್ಳವರನ್ನು ನಾಗನರಾಮರರು ಕೆಡಿಸಬಲ್ಲರೇ ?" ಎನಲು ಯುಧಿಷ್ಠಿರನು ಕೇಳಿ ಕೈಮುಗಿದು "ಯೋಚಿಸಿ ನೋಡಿದರೆ ನಮಗೆ ನಮ್ಮ ಕರ್ಮದಿಂದ ಅಪಾಯವು ಸಂಭವಿಸಿತಲ್ಲದೆ ಕೌರವನಿಂದಲ್ಲ" ಎಂದನು. ಆ ಮಾತನ್ನು ಕೇಳಿ ಭೀಷ್ಮರು ಅವನ ಸಮತಾಭಾವವನ್ನು ಕೊಂಡಾಡಿ "ನೀವು ನಿಮ್ಮ ರಾಜ್ಯದಲ್ಲಿರಿ" ಎಂದು ಹೇಳಿ ಒಡಂಬಡಿಸಿ ಬಂದು ಅವರ

ಸಮಾಚಾರವನ್ನು ಕೌರವನಿಗೆ ಹೇಳಿದರು. ಆಗ ಕರ್ಣನು ಪಾಂಡವರ ಏಳ್ಗೆಯ ಮಾತನ್ನು ಕೇಳಿ ಕೌರವನನ್ನು ಪುರಸ್ಕರಿಸಿಯೂ ಪಾಂಡವರನ್ನು ತಿರಸ್ಕರಿಸಿಯೂ ಮಾತನಾಡಿದನು. ಆ ಮಾತನ್ನು ಕೇಳಿ ಭೀಷ್ಮರು ಸೋದರರಲ್ಲಿ ಬಲವನ್ನು ತೋರುವುದು ಅರಸುತನದ ನೀತಿಯಲ್ಲವೆಂದೂ ಅರ್ಧರಾಜ್ಯವನ್ನು ಪಾಂಡವರಿಗಿತ್ತು ಬಾಳುವುದು ಕ್ಷೇಮಕರವೆಂದೂ ಹೇಳಿ ನಾನಾತೆರದ ಒಡಂಬಡಿಕೆಗಳಿಂದ ಒಡಂಬಡಿಸಿ ಕೌರವನನ್ನು ಹಸ್ತಿನಾಪುರಕ್ಕೆ ಕಳುಹಿ ತಾವು ಪಾಂಡವರೊಡನೆ ದ್ರುಪದನ ಪಟ್ಟಣಕ್ಕೆ ಹೋದರು. ಬಳಿಕ ದ್ರುಪದನು ಅರ್ಜುನನಿಗೆ ದ್ರೌಪದಿಯನ್ನು ಕೊಟ್ಟು ಬಹು ವೈಭವದಿಂದ ಮದುವೆಮಾಡಿ ಬಳುವಳಿಯನ್ನು ಕೊಟ್ಟನು. ತರುವಾಯ ಭೀಷ್ಮರು ಪಾಂಡವರು ಸಮೇತ ಪಾಂಚಾಲಪುರದಿಂದ ಹೊರಟು ಬಂದು ಶುಭಲಗ್ನದಲ್ಲಿ ಪಾಂಡವರನ್ನು ಇಂದ್ರಪ್ರಸ್ಥವೆಂಬ ಪಟ್ಟಣಕ್ಕೆ ಹೊಗಿಸಿ ಅಲ್ಲಿಗೆ ಕೌರವನನ್ನು ಬರುಮಾಡಿ ಧರ್ಮರಾಜನಿಗೆ ಆ ರಾಜ್ಯದ ಪಟ್ಟವನ್ನು ಕಟ್ಟಿ ಬಳಿಕ ಹಸ್ತಿನಾಪುರಕ್ಕೆ ಹೊರಟುಹೋದರು.

ಧರ್ಮರಾಜನು ಆ ರಾಜ್ಯವನ್ನು ಪಾಲಿಸುತ್ತ ಮೊದಲು ತಾನು ಮದುವೆಯಾಗಿದ್ದ ಕುಸುಮಮಾಲೆಯನ್ನೂ ಆಕೆಯ ತಂದೆ ಧಾನ್ಯರಾಜನನ್ನೂ ಕರೆಸಿದನು. ಬಳಿಕ ಆ ವಿಂಧ್ಯಕನೂ ಚಂಡವಾಹನನೂ ತಂತಮ್ಮ ಹೆಣ್ಣುಮಕ್ಕಳನ್ನು ಕರೆತಂದು ಉತ್ತಮಲಗ್ನದಲ್ಲಿ ಧರ್ಮರಾಜನಿಗೆ ಮದುವೆಮಾಡಿಕೊಟ್ಟು ತಮ್ಮ ಪಟ್ಟಣಕ್ಕೆ ಹೊರಟುಹೋದರು. ಧರ್ಮರಾಜನು ಕುಸುಮಮಾಲೆಗೆ ಅಗ್ರಮಹಿಷಿಯ ಪಟ್ಟವನ್ನು ಕಟ್ಟಿ ಸುಖದಿಂದಿರುತ್ತಿರಲು ಆ ಸಿಹ್ಮಘೋಷನು ಹಿಡಿಂಬೆಯನ್ನು ಕರೆತಂದು ವೀರಮಾರುತಿಗಿತ್ತು ಹೋದನು. ಬಳಿಕ ಕೆಲವು ರಾಜರುಗಳು ನಕುಲ ಸಹದೇವರಿಗೆ ತಂತಮ್ಮ ಪುತ್ರಿಯರನ್ನು ಕೊಟ್ಟು ಮದುವೆಮಾಡಿದರು. ಧರ್ಮರಾಜನು ಭೀಮನಿಗೆ ತಿಲಕಪ್ರಸ್ಥವೆಂಬ ನಗರವನ್ನೂ ಅರ್ಜುನನಿಗೆ ಕಣೆಯಪ್ರಸ್ಥವೆಂಬ ನಗರವನ್ನೂ ನಕುಲನಿಗೆ ನಾಗಪ್ರಸ್ಥವೆಂಬ ನಗರವನ್ನೂ ಸಹದೇವನಿಗೆ ಕನಕಪ್ರಸ್ಥವೆಂಬ ನಗರವನ್ನೂ ಕೊಟ್ಟನು. ಅವರು ನಾಲ್ವರೂ ತಂತಮ್ಮ ನಗರವನ್ನು ಪ್ರವೇಶಿಸಿ ಸಂತೋಷದಿಂದ ತಂತಮ್ಮ ರಾಜ್ಯವನ್ನಾಳುತ್ತಿರಲು ಅನೇಕ ರಾಜರುಗಳು ತಮ್ಮಲ್ಲಿರುವ ಉತ್ತಮ ವಸ್ತುಗಳನ್ನೂ ತಮ್ಮ ಪುತ್ರಿಯರನ್ನೂ ತಂದು ಕಾಣ್ಕೆಯನ್ನಿತ್ತು ಸುಖದಿಂದಿದ್ದರು. ಪಾಂಡವರ ಕೀರ್ತಿಯು ದಶದಿಕ್ಕುಗಳಲ್ಲಿ ಹರಡಿತು. ಧರ್ಮರಾಜನು ತಮ್ಮಂದಿರನ್ನು ತನ್ನಾಜ್ಞೆಯೊಳಗಿಟ್ಟುಕೊಂಡಿದ್ದು ಕೀರ್ತಿವಡೆದನು.

## ೨೪. ಪಾಂಡವರ ವನವಾಸ ಸಂಧಿ



ಒಂದು ದಿನ ಧರ್ಮರಾಜನು ಓರ್ವ ಮಂತ್ರಿಯನ್ನು ಕರೆದು ತಮ್ಮ ಕ್ಷೇಮ ಸಮಾಚಾರವನ್ನು ದ್ವಾರಾವತಿಗೆ ಹೋಗಿ ಕೃಷ್ಣ ಬಲರಾಮ ಮೊದಲಾದವರಿಗೆ ತಿಳಿಸಿಬರುವಂತೆ ಹೇಳಿಕಳುಹಿದನು. ಅವನು ಹೋಗಿ ತಿಳುಹಲು ಅವನಿಗೆ ಕೃಷ್ಣಾದಿಗಳು ರತ್ನಾಭರಣಗಳನ್ನು ಬಹುಮಾನ ಕೊಟ್ಟು ಕಳುಹಿದರು. ಇಂದ್ರಪ್ರಸ್ಥದಲ್ಲಿ ಅರ್ಜುನನು ದ್ರೌಪದಿಯೊಡನೆ ಎಡೆಬಿಡದೆ ಸುಖದಿಂದಿರುವಾಗ ದ್ವಾರಾವತಿಯಲ್ಲಿ ವಸುದೇವನಿಗೆ ನೀಲಾಂಜನೆಯೆಂಬ ಪತ್ನಿಯಲ್ಲಿ ಜನಿಸಿದ ಅತ್ಯಂತ ರೂಪವತಿಯಾದ ಸುಭದ್ರೆಯನ್ನು ಕೌರವನು ತನಗೆ ಕೊಡಬೇಕೆಂದು ಕೇಳಿದನು. ಅವರು ಆತನಿಗೆ ಕೊಡಲೊಪ್ಪದಿರಲು ಆ ವಾರ್ತೆಯನ್ನು ಕೇಳಿ ಅರ್ಜುನನು ತನಗೆ ಕೊಡಬೇಕೆಂದು ಸಚಿವರೊಡನೆ ಹೇಳಿಕಳುಹಿದನು. ಅದಕ್ಕೊಪ್ಪಿ ವಸುದೇವ ವಾಸುದೇವಾದಿಗಳು ಸುಭದ್ರೆಯನ್ನು ಫಲ್ಗುನನಿಗೆ ಕೊಟ್ಟು ಮದುವೆಮಾಡಿದರು. ದಂಪತಿಗಳು ಇಂದ್ರಪ್ರಸ್ಥಕ್ಕೆ ಹೋಗಿ ಸುಖಾನುಭವದಲ್ಲಿರುತ್ತಿರಲು ಅವರಿಗೆ ಅಭಿಮನ್ಯುವೆಂಬ ಮಗನು ಹುಟ್ಟಿ ಸಕಲಕಲಾಪ್ರವೀಣನಾಗಿ ಬೆಳೆದನು. ಮನ್ಮಥಸಮರೂಪನಾದ ಆ ಅಭಿಮನ್ಯುವಿಗೆ ಕೃಷ್ಣನು ಸುಂದರಿಯೆಂಬ ತನ್ನ ಮಗಳನ್ನು ಮದುವೆಮಾಡಿಕೊಟ್ಟು ಅವರೊಡನೆ ಇಂದ್ರಪ್ರಸ್ಥಕ್ಕೆ ಹೋಗಿ ಅರ್ಜುನನೊಡನೆ ಕೆಲವುದಿನ ಸ್ನೇಹದಿಂದಿದ್ದನು. ಆ ವಿಷಯವನ್ನು ಕೌರವನು ತಿಳಿದು ತನ್ನ ಆಪ್ತಸಚಿವರನ್ನು ಬರುಮಾಡಿ ಅವರಲ್ಲಿ ಪಾಂಡವರ ವೈಭವವು ಹೆಚ್ಚಿದುದರಿಂದ ತನ್ನ ಅರಸುತನವು ಉಳಿಯುವಂತಿಲ್ಲವೆಂದು ಹೇಳಿದನು. ಆ ಮಾತನ್ನು ಕೇಳಿ ಶಕುನಿಯು ಕೈಮುಗಿದು "ಯೋಚನೆಯೇಕೆ? ಧರ್ಮರಾಜನು ಜೂಜಾಟದಲ್ಲಿ ಪ್ರೀತಿಯುಳ್ಳವನು. ಅವನನ್ನು ಒಂದು ಹಬ್ಬದ ನೆವದಿಂದ ಬರುಮಾಡಿ ಅವನೊಡನೆ ಜೂಜಾಡಿ ಅವನ ನಾಡುಬೀಡುಗಳೆಲ್ಲವನ್ನೂ ಗೆದ್ದು ಕಾಡಿಗೆ ಕಳುಹುವೆವು. ಸಂದೇಹಬೇಡ" ಎಂದನು. ಆ ಮಾತನ್ನು ಕೇಳಿ ಕೌರವನು ಕೃತ್ರಿಮವಾದ ದಾಳಗಳನ್ನು ಮಾಡಿಸಿ ಭೀಷ್ಮರಿಗೆ ತಿಳಿಯದಂತೆ ಒಂದುದಿನ ಹಬ್ಬದ ನೆವದಿಂದ ಧರ್ಮರಾಜನನ್ನು ಕರೆಯುವುದಕ್ಕೆ ಕಳುಹಿದನು. ಅವನು ತಮ್ಮಂದಿರೊಡನೆ ವೈಭವದಿಂದ ಬರಲು ಕೌರವನು ಇದಿರ್ಗೊಂಡು ಪಟ್ಟಣಕ್ಕೆ ಹೊಗಿಸಿ ವಿನಯೋಪಚಾರಗಳಿಂದಿರಿಸಿಕೊಂಡಿರ್ದು

ಚೆನ್ನಾಗಿ ಹಬ್ಬವನ್ನು ಮಾಡಿಸಿ ಬಳಿಕ ಒಂದುದಿನ ಓಲಗಶಾಲೆಯಲ್ಲಿ ಸೇರಿ ರ್ದ ಸಭೆಯಲ್ಲಿ ಕೌರವನೂ ಧರ್ಮರಾಜನೂ ಉನ್ನತಾಸನಗಳಲ್ಲಿ ಕುಳಿತಿರಲು ಅವರ ಮುಂದೆ ಈರ್ವರು ಪಗಡೆಯನ್ನಾಡಲಾರಂಭಿಸಿದರು. ಒಬ್ಬನಿಗೆ ಕೌರ ವನೂ ಇನ್ನೊಬ್ಬನಿಗೆ ಧರ್ಮರಾಜನೂ ಆಟದ ಆಯ ವನ್ನು ಹೇಳುತ್ತಿರಲು ಪಕ್ಕದ ಲ್ಲಿದ್ದ ಶಕುನಿಯು " ದೊರೆಗಳಿರಾ ! ಹೊತ್ತುಹೋಗುವುದಕ್ಕೆ ನೀವು ಕೆಲವಾಟಗ ಳನ್ನು ಆಡಿ " ಎನಲು ಕೌರವನು ಧರ್ಮರಾಜನ ಮುಖವನ್ನು ನೋಡಿ " ಹಾಗಾ ದರೆ ಆಡುವ ಬನ್ನಿ " ಎಂದನು. ಅದಕ್ಕೆ ಧರ್ಮರಾಜನು ಒಡಂಬಡಲು ಶಕುನಿಯು ಆ ನೆತ್ತದ ಹಲಗೆಯನ್ನು ತಂದಿರಿಸಿ ದಾಳವನ್ನು ಕೈಗಿತ್ತನು. ಅವರು ಎರಡುಮೂರಾಟಗಳನ್ನಾಡಿದ ಮೇಲೆ ಶಕುನಿಯು ' ಈ ಆಟಕ್ಕೆ ಹತ್ತುಸಾವಿರರೂ ಪಾಯಿ ಜೂಜು " ಎಂದನು. ಅದಕ್ಕವರು ಒಡಂಬಟ್ಟರು. ಬಳಿಕ ಒಂದೆರಡಾ ಟಗಳನ್ನು ಗೆದ್ದು ಧರ್ಮರಾಜನ ಮನಸ್ಸಿನಲ್ಲಿ ಹಟವನ್ನು ಹುಟ್ಟಿಸಿ ತರುವಾಯ ಅವನ ಆನೆ ಕುದುರೆ ಪದಾತಿಗಳನ್ನು ಒಂದೊಂದಾಗಿ ಗೆಲ್ಲುತ್ತಿರಲು ಅದನ್ನು ಕಂಡು ಭೀಮಸೇನನು " ಸಂಚಿನ ದಾಳಗಳನ್ನು ಮಾಡಿ ಅಣ್ಣನನ್ನು ವಂಚಿಸಿ ಪಗಡೆಯಾಡಿ ಮೊದಲು ಗೆಲವನ್ನು ಕೊಟ್ಟು ಬಳಿಕ ಹೀಗೆ ಆಡುವ ವಂಚನೆಯು ಲೇಸು ಲೇಸು. ಯುದ್ಧಭೂಮಿಯನ್ನು ಹಲಗೆಯನ್ನಾಗಿಯೂ ನಿನ್ನ ವಂಶಿಕರನ್ನು ಪಗಡೆಕಾಯಿಗ ಳನ್ನಾಗಿಯೂ ಮಾಡಿ ಈ ನನ್ನ ಗದೆಯೆಂಬ ದಾಳದಿಂದ ನೆಲಕ್ಕುರುಳಿಸದೆ ಬಿಡು ವೆನೇ ? ' ಎಂದನು. ಕೌರವನು ಕಾರ್ಯವಶದಿಂದ ಭೀಮನ ಮಾತಿಗೆ ಕಿವಿಗೊ ಡಲಿಲ್ಲ. ಭೀಮನು ಧರ್ಮರಾಜನಿಗೆ ಕಣ್ಣುಸನ್ನೆ ಮಾಡಿದನು. ಭೀಷ್ಮ ವಿದು ರರು ಬೆದರಿ " ಹೀನರಂತೆ ಉತ್ತಮರು ಜೂಜಾಡುವರೇ " ಎನಲು ಧರ್ಮರಾ ಜನು " ನನ್ನ ಈ ಸೋಲವನ್ನು ಇನ್ನೊಂದು ರೀತಿಯಾಗಿ ತಿರುಗಿಸುವೆನು. ನೀವು ಅಡ್ಡಬರಬೇಡಿ " ಎಂದು ಕೈಮುಗಿದನು. ಅವರು ಮರುಮಾತಿಗವಕಾಶವಿಲ್ಲದೆ ಧೃತರಾಷ್ಟ್ರನಲ್ಲಿಗೆ ಹೋಗಿ ಕೌರವನಾಡುವ ಜೂಜಿನ ರೀತಿಯನ್ನು ತಿಳುಹಿ "ಯುದ್ಧ ದಲ್ಲಿ ಭೀಮನು ಗದೆಯನ್ನೂ ಫಲ್ಗುನನು ಗಾಂಡೀವಧನುಸ್ಸನ್ನೂ ಹಿಡಿದರೆ ಬ್ರಹ್ಮ ವಿಷ್ಣು ಮಹೇಶ್ವರರೂ ತಡೆಯಬಲ್ಲರೇ ? " ಎಂದು ಕೌರವನಿಗೆ ಮುಂದಾಗುವ ಕೇಡನ್ನು ತಿಳುಹಿ " ನೀನೀಗಲೇ ಹೋಗಿ ನಿನ್ನ ಮಗನಿಗೆ ಬುದ್ಧಿಹೇಳಿ ಜೂಜಿನಲ್ಲಿ ಅವನು ಗೆದ್ದುದೆಲ್ಲವನ್ನೂ ಧರ್ಮರಾಜನಿಗೆ ಕೊಡಿಸಿ ಬರಬೇಕು " ಎಂದು ಧೃತರಾ ಷ್ಟ್ರನನ್ನು ಕೌರವನ ಬಳಿಗೆ ಕಳುಹಿದರು. ಅವನು ಹೋಗಿ ಮಗನಿಗೆ ಬುದ್ಧಿಹೇ ಳಿದರೂ ಅವನು ಕೇಳದಿರಲು ಧೃತರಾಷ್ಟ್ರನು ಹಿಂದಿರುಗಿದನು. ಧರ್ಮ

ಸೋತನು ವಸ್ತುವಾಹನ ದೇಶಕೋಶಗಳನ್ನೆಲ್ಲ ಒಂದೊಂದಾಗಿ ಸೋತನು. ಆಗ ಭೀಮಾರ್ಜುನರು ಕೋಪಗೊಂಡು ಕೌರವನನ್ನು ಕುರಿತು ಅವಧಿಯನ್ನು ಸೂರೆಂದರು. ಅದಕ್ಕೆ ಶಕುನಿಯು ದುರ್ಯೋಧನನ ಅನುಮತಿಯಿಂದ ಹನ್ನೆರಡು ವರುಷ ವನವಾಸವನ್ನೂ ಒಂದು ವರುಷ ಅಜ್ಞಾತವಾಸವನ್ನೂ ಮಾಡಬೇಕೆಂದನು. ಆ ನುಡಿಗೊಡಂಬಟ್ಟು ಧರ್ಮರಾಜನು ಎದ್ದು ಮನೆಗೆ ಹೋದನು. ದುರ್ಯೋಧನನು ಸಂತೋಷದಿಂದ ತಾನು ಗೆದ್ದ ಸಪ್ತಾಂಗವನ್ನು ಕೇಳಲು ಧರ್ಮರಾಜನ ಬಳಿಗೆ ಭೃತ್ಯರನ್ನು ಕಳುಹಲು ಅವನು ಅವೆಲ್ಲವನ್ನೂ ಒಪ್ಪಿಸಿದನು. ಆಗ ಭೀಮಾರ್ಜುನರು ಬಹುಕೋಪದಿಂದ ತಮ್ಮ ಆಯುಧಗಳಿಗೆ ಕೈನೀಡಲು ಧರ್ಮರಾಜನು ಅವರನ್ನು ದೃಷ್ಟಿಸಿ ನೋಡಿದನು. ಆಗ ಅವರು ಅಣ್ಣನಿಗೆ ಹೆದರಿ ಅವನ ಆಜ್ಞೆಯನ್ನು ಮನ್ನಿಸಿ ಸುಮ್ಮನಾದರು.

ಬಳಿಕ ಸರ್ವಸ್ವವನ್ನೂ ಕೌರವನಿಗೊಪ್ಪಿಸಿ ಆ ವೀರಪಾಂಡವರು ಪಟ್ಟಣದಿಂದ ಹೊರಟರು. ಆಗ ಭೀಷ್ಮ ಕೃಪ ಮೊದಲಾದವರು ಕೌರವನ ಬಳಿಗೆ ಹೋಗಿ "ಬೇಡ, ನೀನು ಮೊದಲು ಗೆದ್ದಿರುವ ದೇಶವನ್ನು ಅವರಿಗೊಪ್ಪಿಸು" ಎನಲು ಅವನು ಕಿವುಡನಂತೆ ಅವರ ಮಾತಿಗೆ ಕಿವಿಗೊಡಲಿಲ್ಲ. ಅವರು ಕಡುನೊಂದು ಪಾಂಡವರ ಬಳಿಗೆ ಹೋಗಲು ಅವರು ಇವರುಗಳ ಕಾಲುಗಳಿಗೆರಗಿ ಕಡೆಗಣ್ಣಿಂದ ಕಣ್ಣೀರನ್ನು ಸುರಿದರು. ಆಗ ಭೀಷ್ಮ ಮೊದಲಾದವರು "ಮಕ್ಕಳಿರಾ! ಕಾಡಿನಲ್ಲಿರುವವರಿಗೆ ನಾವೇನು ಆಶೀರ್ವಾದ ಮಾಡುವೆವು?" ಎಂದು ದುಃಖಿಸಿದರು. ಆಗ ಪಾಂಡವರು "ನಿಮ್ಮ ಆಶೀರ್ವಾದವೇ ನಮ್ಮನ್ನು ರಕ್ಷಿಸುವುದು" ಎನಲು ಅವರ ಸಾಹಸಕ್ಕೆ ಮನಸ್ಸಿನಲ್ಲಿ ಮೆಚ್ಚಿ ಬೀಳ್ಕೊಂಡು ದುಃಖದಿಂದ ಹಿಂದಿರುಗಿದರು.

ಇತ್ತ ಪಾಂಡವರು ಇಂದ್ರಪ್ರಸ್ಥನಗರಕ್ಕೆ ಹೋಗಿ ಅಲ್ಲಿಂದ ಹೊರಟು ಗಂಗಾನದಿಯನ್ನು ದಾಂಟಿ ಒಂದು ದೊಡ್ಡ ಆಲದಮರದ ಬುಡದಲ್ಲಿ ಬೀಡನ್ನು ಬಿಡಿಸಿ ತಮ್ಮನ್ನು ಹಿಂಬಾಲಿಸಿ ಬಂದ ಬಂಧುಗಳನ್ನೂ ಸಾಮಂತರಾಜರುಗಳನ್ನೂ ಮಂಡಳಿಕರನ್ನೂ ದುರ್ಗಾಧಿಪತಿಗಳನ್ನೂ ಬಹು ವಿನಯವಚನಗಳಿಂದ ಸಂತೈಸಿ ಬೀಳ್ಕೊಟ್ಟು ಆದಿನ ಅಲ್ಲಿದ್ದು ಮರುದಿನ ತಮ್ಮ ಪತ್ನಿಯರನ್ನು ಅವರವರ ತಂದೆತಾಯಿಗಳ ಬಳಿಗೆ ಕಳುಹಿದರು. ದ್ರೌಪದಿಯೊಬ್ಬಳು ಹಿಂಬಾಲಿಸಿ ಬರಲು ಆಕೆಯನ್ನೂ ಕೊಂತಿಯನ್ನೂ ಕರೆದುಕೊಂಡು ನಡೆದು ಒಂದು ದೊಡ್ಡ ಅರಣ್ಯಕ್ಕೆ ಹೋಗಿ ಶತಶೃಂಗವೆಂಬ ಬೆಟ್ಟದಲ್ಲಿರುವ ಬದರೀವನವನ್ನು ಹೊಕ್ಕು ಅಲ್ಲಿ ಸಂತೋಷದಿಂದಿರುವಾಗ ಪಾಂಡವರು ಕೌರವನೊಡನೆ ಜೂಜಾಡಿ

ದೇಶಕೋಶವೆಲ್ಲವನ್ನೂ ಸೋತು ಅರಣ್ಯವಾಸಿಗಳಾಗಿರುತ್ತಾರೆಂಬ ವಾರ್ತೆಯನ್ನು ಕೃಷ್ಣಬಲರಾಮರು ಕೇಳಿ ಧೀರನೂ ಚತುರಕಲಾಪರಿಪೂರ್ಣನೂ ಮಹಾ ಶಕ್ತಿಸಂಪನ್ನನೂ ಆದ ಕೃಷ್ಣನೆಂಬೋರ್ವ ರಾಜಪುತ್ರನನ್ನು ಕರೆದು ಪಾಂಡವರ ಬಳಿಗೆ ಹೋಗಿ ಆ ವನದಲ್ಲಿ ಅವರಿಗೆ ಶತ್ರುಬಾಧೆಯಿಲ್ಲದಂತೆ ನೋಡಿಕೊಳ್ಳೆಂದು ಹೇಳಿಕಳುಹಿದರು. ಅವನು ಹೋಗಿ ಧರ್ಮರಾಜನಿಗೆರಗಿ ತಾನು ಬಂದ ಕೆಲಸವನ್ನು ತಿಳುಹಿ ಆ ಕಾನನದಲ್ಲಿ ಪಾಂಡವರಿಗೆ ಕಾವಲಾಗಿದ್ದನು. ಒಂದಾನೊಂದು ದಿವಸ ಪ್ರಾತಃಕಾಲದಲ್ಲಿ ಅರ್ಜುನನು ವನವಿಹಾರಾರ್ಥವಾಗಿ ಕೆಲವುದೂರ ಬರುತ್ತ ಇಂದ್ರಕೀಲವೆಂಬ ಬಹು ರಮಣೀಯವಾದ ಬೆಟ್ಟವನ್ನು ಕಂಡು ಅದರ ತುದಿಯನ್ನು ನೋಡುವೆನೆಂದು ಬರುವಾಗ ಒಂದು ಬಿದಿರಿನ ತುದಿಯಲ್ಲಿ ಪೆಡಗೈಗಟ್ಟಿ ಜೋಲುತ್ತಿರುವ ಮನುಷ್ಯನನ್ನು ಕಂಡು ಆ ಖೇಚರನನ್ನು ಯಾರೋ ಅವನ ಶತ್ರುಗಳು ಕಟ್ಟಿರುವರೆಂದು ಬಗೆದು ತನ್ನ ಗಾಂಡೀವಕ್ಕೆ ಬಾಣವನ್ನು ಸೇರಿಸಿ ಆ ಬಿದಿರ ಹಿಂಡಲಿಗೆ ಪ್ರಯೋಗಿಸಿದನು. ಅದು ಭೂಮಿಗೆ ಉರುಳುವಾಗ ಆ ಖೇಚರನನ್ನು ತನ್ನ ಭುಜಗಳಿಂದ ಅಂತುಕೊಂಡು ಪೆಡಗಟ್ಟನ್ನು ಬಿಡಿಸಿದನು. ಆಗ ಆ ಖೇಚರನು ಅರ್ಜುನನ ಕಾಲುಗಳಿಗೆ ನಮಸ್ಕಾರಮಾಡಿ "ಗುಣಮಣಿಯೆ! ನೀನು ನನ್ನ ಪ್ರಾಣಗಳನ್ನುಳಿಸಿದೆ' ಎಂದು ಹೇಳಲು ಅರ್ಜುನನು "ನಿನಗೆ ಈ ಅವಸ್ಥೆಯನ್ನುಂಟುಮಾಡಿದವರಾರು?" ಎಂದು ಕೇಳಿದನು ಅದಕ್ಕಾ ಖೇಚರನು ಕೈಮುಗಿದು "ಬಲಶಾಲಿಯೆ! ಕೇಳು, ಈ ವಿಜಯಾರ್ಧಪರ್ವತದ ಅಂಬರತಿಲಕವೆಂಬ ಪಟ್ಟಣದ ಇಂದ್ರರಥನೆಂಬ ದೊರೆ ನಾನು. ಈ ಪರ್ವತದಲ್ಲಿ ಅನೇಕ ವಿದ್ಯೆಗಳನ್ನು ಸಾಧಿಸುವುದಕ್ಕಾಗಿ ಈದಿನ ಬರಲು ನನ್ನ ಓರ್ವ ಮೇಘರಥನೆಂಬ ಶತ್ರುವು ನನ್ನನ್ನು ಹಿಂಬಾಲಿಸಿಕೊಂಡು ಬಂದು ಮೋಸದಿಂದ ನನ್ನನ್ನು ಕಟ್ಟಿಹೋದನು. ನಿನ್ನಿಂದ ನನ್ನ ಸಾವು ತಪ್ಪಿತು. ನಾನು ಸಾಧಿಸುವುದಕ್ಕಾಗಿ ಬಂದ ವಿದ್ಯೆಗಳನ್ನು ನೀನೇ ಸಾಧಿಸು" ಎಂದು ಹೇಳಿ ಅರ್ಜುನನಿಗೆ ಆ ವಿದ್ಯಾಮಂತ್ರಗಳನ್ನು ಕೊಟ್ಟು ಅವುಗಳನ್ನು ಆ ಗಿರಿಯ ಶಿಖರದ ಮೇಲಿರುವ ಅಭಿತೀರ್ಥಂಕರರ ದೇವಾಲಯದ ಮುಂದಿರುವ ಯಕ್ಷಿಮಂದಿರಕ್ಕೆ ಹೋಗಿ ಕುಳಿತು ಉಚ್ಚರಿಸಿದರೆ ಆ ವಿದ್ಯಾದೇವತೆಗಳೊದಗುವವು" ವೆಂದು ಹೇಳಿದನು ಆ ಮಾತನ್ನು ಕೇಳಿ ಅರ್ಜುನನು ಅವನೊಡನೆ ಆ ಸ್ಥಳಕ್ಕೆ ಹೋಗಿ ದೇವರಿಗೆ ವಂದಿಸಿ ಆ ಯಕ್ಷಿದೇವಿಯ ಮಂದಿರಕ್ಕೆ ಹೊಕ್ಕು ಕುಳಿತು ಆ ಪವಿತ್ರಮಂತ್ರಗಳನ್ನು ಜಪಿಸಿದನು. ಆಗ ವೈರಿಭಂಜನಿ, ಲೋಕಮದವಿಧ್ವಂಶಿನಿ, ಮನೋರಥಸಿದ್ಧಿ ಮೊದಲಾದ ಮೂವತ್ತು ವಿದ್ಯಾದೇವತೆಗಳು ಬಂದು

ಅರ್ಜುನನ ಮುಂದೆ ನಿಂದು "ಏನಪ್ಪಣೆ? ಹೇಳು" ಎನಲು ಅವುಗಳನ್ನು ಅಂಗೀಕರಿಸಿ ಪೂಜಿಸುತ್ತಿರುವಾಗ ಅಲ್ಲಿಗೆ ಇಂದ್ರರಥನನ್ನು ಮೊದಲು ಕಟ್ಟಿಹಾಕಿ ಹೋಗಿದ್ದ ಅವನ ವೈರಿಯಾದ ಮೇಘರಥನು ತನ್ನ ಸೈನ್ಯಸಮೇತನಾಗಿ ಬರುತ್ತಿರುವುದನ್ನು ಕಂಡು ಅರ್ಜುನನು "ಇವನಾರು?" ಎಂದು ಕೇಳಿದನು. ಅದಕ್ಕೆ ಇಂದ್ರರಥನು "ಮೊದಲು ನನ್ನನ್ನು ಇಲ್ಲಿ ಬಂಧಿಸಿ ಹೋಗಿ ಬಳಿಕ ನನಗೊದಗಿರುವ ಅವಸ್ಥೆಯನ್ನು ತನ್ನ ಹೆಂಡತಿಯರಿಗೆ ತೋರುವೆನೆಂದು ಅವರೊಡನೆ ಮೇಘರಥನು ಸೈನ್ಯಸಮೇತನಾಗಿ ಬರುತ್ತಿದ್ದಾನೆ" ಎಂದನು. ಆಗ ಮೇಘರಥನು ಆಕಾಶಮಾರ್ಗದಿಂದ ಇಳಿದುಬಂದು ಅಲ್ಲಿ ಬಿದ್ದಿದ್ದ ಬಿದಿರಹಿಂಡಲನ್ನೂ ತಾನು ಕಟ್ಟಿದ್ದ ನಾಗಪಾಶವನ್ನು ಬಿಡಿಸಿಕೊಂಡು ಸಂತೋಷದಿಂದಿದ್ದ ಇಂದ್ರರಥನನ್ನೂ ಬಾಲಸೂರ್ಯನಂತೆ ನಿಂದಿರ್ದ ಪಾರ್ಥನನ್ನೂ ನೋಡಿ ಆಶ್ಚರ್ಯಪಟ್ಟು ನಿಂದಿರಲು ಅರ್ಜುನನು ಅವನನ್ನು ನೋಡಿ "ಎಲೆ ಮೇಘರಥನೆ! ಮೋಸದಿಂದ ಈ ಖೇಚರನನ್ನು ನೀನು ಈ ಸ್ಥಳದಲ್ಲಿ ಕಟ್ಟಿಹಾಕಿ ಹೋಗಿ ತನ್ನ ಹೆಂಡತಿಯರಿಗೆ ತೋರುವೆನೆಂದು ಬರುವುದು ಕುಲಹೀನರ ಯೋಚನೆಯಲ್ಲವೇ?" ಎನಲು ಮೇಘರಥನು ರೇಗಿ ಧನುಸ್ಸನ್ನು ಹಿಡಿದು ಅರ್ಜುನನಿಗಿದಿರಾದನು. ಆಗ ಅವನ ಸೇನೆಯು ಅವನನ್ನು ಹಿಂದಿಕ್ಕಿ ಬಹು ಕೋಪದಿಂದ ಇದಿರಾಗಲು ಕಂಡು ವೀರಪಾರ್ಥನು ಆ ಸೈನ್ಯವನ್ನು ಯಮಪುರಕ್ಕೆ ಕಳುಹಿದನು. ಅದನ್ನು ಕಂಡು ಮೇಘರಥನು ತನ್ನ ಖಡ್ಗವನ್ನು ಝಳಪಿಸಿ ಅರ್ಜುನನಿಗಿದಿರಾಗಲು ಅವನು ಒಂದು ಬಾಣದಿಂದ ಆ ಖೇಚರನ ಕೈಯ ಖಡ್ಗವನ್ನು ಕಡಿದುಹಾಕಿದನು. ಬಳಿಕ ಆ ಖೇಚರನು ವಿದ್ಯಾಬಲವನ್ನು ನಿರ್ಮಿಸಿ ಇದಿರಾಗಲು ಪಾರ್ಥನು ಒಂದೇ ಬಾಣದಿಂದ ಆ ಬಲವನ್ನು ಓಡಿಸಿದನು. ಅದನ್ನು ಕಂಡು ಮೇಘರಥನು ಬೆದರಿ ಆಕಾಶಕ್ಕೆ ನೆಗೆದು ಓಡಿಹೋಗುತ್ತಿರಲು ಕಂಡು ಇಂದ್ರರಥನು ತನಗಿದೇ ಸಮಯವೆಂದು ಬಗೆದು ಅವನನ್ನು ಹಿಂಬಾಲಿಸಿ ಅಟ್ಟಿಕೊಂಡು ಹೋಗಿ ಹಿಡಿದು ಪೆಡಗಟ್ಟಿ ಬಿಗಿದುತಂದು ಅರ್ಜುನನಿಗೊಪ್ಪಿಸಿದನು. ಅವನು ನೋಡಿ ವ್ಯಸನಪಟ್ಟು ಇಂದ್ರರಥನಿಂದ ಕಟ್ಟನ್ನು ಬಿಡಿಸಿ "ಮೇಘರಥನೆ! ಕೇಳು, ಈದಿನ ಮೊದಲುಗೊಂಡು ನೀನು ಇಂದ್ರರಥನಿಗೆ ಅಧೀನನಾಗಿರಬೇಕು" ಎಂದು ಹೇಳಿ ಕಳುಹಿದನು.

ಇತ್ತ ಇಂದ್ರರಥನು ಅರ್ಜುನನ್ನು ಕುರಿತು "ವೀರಪಾರ್ಥನೆ! ನನ್ನ ಪಟ್ಟಣಕ್ಕೆ ಬಿಜಯಂಗೈಯುವುದು" ಎಂದು ಪ್ರಾರ್ಥಿಸಿ ಪುಷ್ಪಕವಿಮಾನವನ್ನೇರಿಸಿ ಸಂತೋಷದಿಂದ ಕರೆದೊಯ್ದು ವಿನಯದಿಂದ ಉಪಚರಿಸಿ ತನ್ನ ನೂರುಮಂದಿ ಮಕ್ಕ

ಳನ್ನು ಕರೆದು "ನೀವು ಈತನಿಗೆ ಸೇವಕರಾಗಿರಿ" ಎಂದು ನಿಯಮಿಸಲು ಅವರು ಪ್ರೀತಿಯಿಂದ ಅರ್ಜುನನಿಗೆ ಅನೇಕ ವಿದ್ಯೆಗಳನ್ನು ಸಾಧ್ಯಮಾಡಿಕೊಟ್ಟರು. ಅರ್ಜುನನು ಮೂರು ತಿಂಗಳವರೆಗೆ ಅಲ್ಲಿದ್ದು ಬಳಿಕ ಧರ್ಮರಾಜನ ಬಳಿಗೆ ಹೋಗಬೇಕೆಂದೆಳಸಿ ಆ ವಿಷಯವನ್ನು ಇಂದ್ರರಥನಿಗೆ ತಿಳುಹಲು ಅವನು ಉತ್ತಮವಸ್ತ್ರಾಭರಣಗಳಿಂದ ಪೂಜಿಸಿ ವಿಮಾನವನ್ನೇರಿಸಿ ತನ್ನ ಮಕ್ಕಳು ಸಮೇತನಾಗಿ ಆಕಾಶಮಾರ್ಗದಿಂದ ಅರ್ಜುನನನ್ನು ಬದರೀವನಕ್ಕೆ ಕರೆತಂದನು. ಅರ್ಜುನನು ಕೊಂತಿ ಧರ್ಮರಾಜ ಭೀಮರ ಕಾಲಿಗೆ ನಮಸ್ಕರಮಾಡಿ ತನ್ನ ಕಾಲಿಗೆ ನಮಸ್ಕಾರಮಾಡಿದ ನಕುಲ ಸಹದೇವರುಗಳಿಗೆ ಹರಸಿ ಕುಳಿತನು. ಬಳಿಕ ಇಂದ್ರರಥನು ಧರ್ಮರಾಜ ಭೀಮ ಮೊದಲಾದವರಿಗೆ ನಮಸ್ಕಾರಮಾಡಿ ಉಚಿತಾಸನದಲ್ಲಿ ಕುಳಿತು ತನಗೆ ಪಾರ್ಥನು ಮಾಡಿದ ಉಪಕಾರವನ್ನು ಹೇಳಿ ಬಳಿಕ ತನ್ನ ನೂರು ಮಂದಿ ಮಕ್ಕಳಿಂದ ಸೇವೆಮಾಡಿಸಿಕೊಂಡಿರಬೇಕೆಂದು ಪ್ರಾರ್ಥಿಸಿ ಮಕ್ಕಳನ್ನು ಅಲ್ಲಿರಿಸಿ ಆಕಾಶಮಾರ್ಗವಾಗಿ ಹೊರಟುಹೋಗುವಾಗ ಕೌರವನು ವನದಲ್ಲಿ ಕಂದಮೂಲಗಳನ್ನು ತಿಂದು ಜೀವಿಸಿಕೊಂಡಿರುವ ಪಾಂಡವರಿಗೆ ತನ್ನ ವೈಭವವನ್ನು ತೋರಿಸಬೇಕೆಂದು ಯೋಚಿಸಿ ಸೈನ್ಯಸಮೇತನಾಗಿ ಆ ಬದರೀವನಕ್ಕೆ ಬಂದು ಬೀಡಬಿಟ್ಟಿರಲು ಅದನ್ನು ಪ್ರಜ್ಞಪ್ತಿಯೆಂಬ ವಿದ್ಯೆಯಿಂದ ತಿಳಿದು ಇಂದ್ರರಥನು ರೇಗಿ ಇಳಿದುಬಂದು ಕೌರವನ ಸಭೆಯನ್ನು ಹೊಕ್ಕು ಅವನನ್ನೂ ದುಶ್ಶಾಸನನನ್ನೂ ಹಿಡಿದು ಕಟ್ಟಿದನು. ಆಗ ಕೌರವನ ಕಡೆಯ ವೀರರು ಆಯುಧಪಾಣಿಗಳಾಗಿ ಬರಲು ಅವರನ್ನು ವಿದ್ಯೆಯಿಂದ ಸ್ತಂಭಿಸಿ ಉಬ್ಬಸವಾಗುವಂತೆ ಕಟ್ಟಿ ಆಕಾಶಕ್ಕೆ ನೆಗೆದು ಕೌರವ ದುಶ್ಶಾಸನರನ್ನು ವಿಮಾನದಲ್ಲಿ ಹಾಕಿಕೊಂಡು ನಡೆದನು. ಆಗ ಕೌರವನ ಬೀಡಿನಲ್ಲಿ ಗಲಭೆಯೆದ್ದು ಅವನ ಪಟ್ಟಮಹಿಷಿಯರು ತಾವು ಕೆಟ್ಟೆವೆಂದು ಕೃಪ ಕರ್ಣ ವಿಕರ್ಣ ಶಕುನಿ ಶಲ್ಯ ಭೀಷ್ಮ ಸೈಂಧವ ಅಶ್ವತ್ಥಾಮ ಮೊದಲಾದ ವೀರಭಟರ ಮುಂದೆ ಹೊರಳಾಡುತ್ತಿರಲು ಅವರು "ಸತ್ಯನಿಧಿಗಳಾದ ಪಾಂಡವರನ್ನು ಅಣಕಿಸಲು ಬಂದುದರಿಂದ ಕೌರವನಿಗೆ ಈ ಅದ್ಭುತವಾದ ಆಪತ್ತುಂಟಾಯ್ತು. ಇದನ್ನು ನಾವು ಹೋಗಲಾಡಿಸಲಾರೆವು' ಎಂದು ಹೇಳಲು ಭಾನುಮತಿಯು ಕೇಳಿ ಇತರ ರಾಜಪತ್ನಿಯರೊಡನೆ ಧರ್ಮರಾಜನ ಬಳಿಗೆ ಹೋಗಿ ಆತನ ಮುಂದೆ ಬಿದ್ದು ಪುರುಷಭಿಕ್ಷೆಯನ್ನು ಕೊಡಬೇಕೆಂದು ಆತನ ಕಾಲನ್ನು ಹಿಡಿದು ಹೊರಳಾಡಿದಳು. ಧರ್ಮರಾಜನು "ಇದೇನು ?" ಎಂದು ಕೇಳಿದನು. ಅದಕ್ಕೆ ಭಾನುಮತಿಯು "ಆಕಾಶದಿಂದೋರ್ವನು ಯಮನಂತೆ ಇಳಿದುಬಂದು 'ಪಾಂಡವರ ವೈರಿಯು ನೀನಲ್ಲವೆ'

ಎಂದು ಕೋಪದಿಂದ ನನ್ನ ಪತಿಯನ್ನು ಆಕಾಶಕ್ಕೆ ತೆಗೆದುಕೊಂಡು ಹೋದನು. ಸಾವಕಾಶವಾಗದೆ ತರಿಸು ' ಎಂದು ಬಿನ್ನವಿಸಲು ಧರ್ಮರಾಜನು ದಯೆಯಿಂದ ಅರ್ಜುನನ ಮುಖವನ್ನು ನೋಡಿ " ನಿನ್ನಿಂತಸಿಂದ ಈರೀತಿಯಾಯ್ತು. ಇದನ್ನು ನೀನೇ ಪರಿಹರಿಸಬೇಕು " ಎಂದನು. ಆಗ ಭೀಮನು ಅಣ್ಣನನ್ನು ಕುರಿತು " ನಾವು ಕೊಲ್ಲಬೇಕೆಂಬ ವೈರಿಯು ಬೇರೆಯವರಿಂದ ಹತನಾದರೆ ಒಳ್ಳೆಯದಲ್ಲವೆ ?" ಎನಲು ಧರ್ಮರಾಜನು ಕೇಳಿ " ಹೆಂಗುಸರ ಮೊರೆಯನ್ನು ಕೇಳಿ ಸುಮ್ಮನಿರುವುದು ರಾಜರ ಧರ್ಮವಲ್ಲವಾದುದರಿಂದ ಅವನ ಕಷ್ಟವನ್ನು ಹೋಗಲಾಡಿಸಬೇಕು. ಯುದ್ಧದಲ್ಲಿ ಅವರು ನೂರುಮಂದಿಗಳು ; ನಾವು ಐದುಮಂದಿಗಳು. ಪರಬಾಧೆಯು ನಮಗೆ ಯಾರಿಗೆ ಬಂದರೂ ನಾವು ನೂರ್ವೈದು ಮಂದಿಗಳು. ಆದುದರಿಂದ ಇದನ್ನು ಪರಿಹರಿಸುವುದು ಯುಕ್ತವಾಗಿದೆ " ಎಂದನು. ಆ ಮಾತನ್ನು ಕೇಳಿ ಅರ್ಜುನನು ಒಂದು ಬಾಣದಿಂದ ಪತ್ರವನ್ನು ಬರೆದು ಮತ್ತೊಂದು ಬಾಣಪ್ರಯೋಗದಿಂದ ಅದನ್ನು ಆ ಖೇಚರನ ಪುಷ್ಪಕವಿಮಾನಕ್ಕೆ ಕಳುಹಿದನು. ಆ ಬಾಣವು ತಾಗಿದೊಡನೆಯೇ ಆ ಪತ್ರವನ್ನು ನೋಡಿ ಇಂದ್ರರಥನು ಆಕಾಶದಿಂದ ಇಳಿದು ಪಾಂಡವರಿದ್ದ ಸ್ಥಳಕ್ಕೆ ಬಂದು ಧರ್ಮರಾಜನ ಕಾಲಿನ ಬುಡದಲ್ಲಿ ಬಂಧನಸಹಿತವಾಗಿ ಆ ಕೌರವ ದುಶ್ಶಾಸನರನ್ನು ಬಿಟ್ಟು ಆಕಾಶಮಾರ್ಗವಾಗಿ ಹೊರಟುಹೋದನು. ಇತ್ತ ಅರ್ಜುನನು ಕರುಣೆಯಿಂದ ಆ ಕಟ್ಟನ್ನು ಬಿಡಿಸಲು ಕೌರವನು ನಾಚಿಕೆಯಿಂದ ತಲೆಬಾಗಿಸಿದನು. ಆಗ ಅರ್ಜುನನು ಕಂಡು " ಎಲೈ ಕುರುಪತಿಯೆ ! ತಮ್ಮ ಪಟ್ಟಣಕ್ಕೆ ಬಿಜಯಂಗೈಯಿರಿ. ನಿಮಗೇಕೆ ಮನೋವ್ಯಥೆ ?" ಎನಲು ಹಲ್ಲುಮುರಿದ ಆನೆಯಂತೆ ಕೌರವನು ಎದ್ದು ಹೋದನು. ಇತ್ತ ಪಾಂಡವರು ವನವಾಸದಲ್ಲಿರುತ್ತಿರಲು ಆಗ ಧರ್ಮರಾಜನ ಸತ್ಯಕ್ಕೆ ಮೆಚ್ಚಿಬಂದು ವನದೇವತೆಗಳು ಸಂತೋಷದಿಂದ ರತ್ನಾಭರಣ ವಸ್ತ್ರಗಳಿಂ ದರ್ಶಿಸಿ ಹರಸಿ ಸೇಸೆಯನ್ನಿಟ್ಟರು.



# ೨೫. ದ್ರೌಪದಿಯಂ ಕಳ್ದೊಯ್ದ ಸಂಧಿ



ಪಾಂಡವರು ಆ ವನದಲ್ಲಿ ಸುಖವಾಗಿರುತ್ತಿರಲು ಅರ್ಜುನನ ಪತ್ನಿಯಾದ ದ್ರೌಪದಿಗೆ ಗರ್ಭೋತ್ಪತ್ತಿಯಾಗಿ ಆಗ ಆಕೆಗೆ ಹೊಂದಾವರೆಗಳನ್ನು ನೋಡಬೇಕೆಂಬ ಇಚ್ಛೆಯುಂಟಾಯಿತು. ಅದನ್ನು ಪತಿಗೆ ತಿಳಿಸಲು ಅವನು ಆಕೆಯನ್ನು ಪುಷ್ಪಕ ವಿಮಾನವನ್ನೇರಿಸಿ ಆಕಾಶಮಾರ್ಗದಲ್ಲಿ ಕನಕದ್ವೀಪಕ್ಕೆ ಕರೆದೊಯ್ದು ಫಲಭಾರದಿಂದ ಭೂಮಿಗೆ ಬಗ್ಗಿರ್ದ ಮಾವಿನಮರದ ನೆರಳಿನಲ್ಲಿ ಆಕೆಯನ್ನು ಬಿಟ್ಟು ತಾನು ಹೊಂದಾವರೆಯ ಕೊಳದಕಡೆಗೆ ಹೋದನು. ಇತ್ತ ಧಾತಕೀಖಂಡದ್ವೀಪದ ಪೂರ್ವಮೇರುವಿನ ಭರತಕ್ಷೇತ್ರದ ತ್ರಿಖಂಡಾಧಿಪತಿಯಾದ ಶಂಖನೆಂಬವನ ಭಾವಮೈದುನನೂ ವಿಜಯಾರ್ಧಪರ್ವತದ ರಥನೂಪುರಚಕ್ರವಾಳವೆಂಬ ಪಟ್ಟಣದ ದೊರೆಯೂ ಆದ ಪದ್ಮರಥನೆಂಬವನು ಸಂತೋಷದಿಂದ ವಿಮಾನಾರೂಢನಾಗಿ ಬರುತ್ತಿರಲು ದ್ರೌಪದಿಯು ಕುಳಿತಿರ್ದ ಸ್ಥಳಕ್ಕೆ ನೇರವಾಗಿ ಆಕಾಶದಲ್ಲಿ ಆತನ ವಿಮಾನವು ಕೀಲಿಸಿ ನಿಂತಿತು. ತನ್ನ ವಿಮಾನವೇಕೆ ನಿಂತಿತೆಂದು ಕೆಳಕ್ಕಿಳಿದುಬಂದು ಬಹುಸುಂದರಿಯಾದ ಆಕೆಯನ್ನು ನೋಡಿ ಕಾಮಾತುರನಾಗಿ ತನ್ನ ಅವಲೋಕಿನಿಯೆಂಬ ವಿದ್ಯಾದೇವತೆಯನ್ನು ಕರೆದು ದ್ರೌಪದಿಯನ್ನು ಕೊಂಡೊಯ್ವ ಉಪಾಯವನ್ನು ಹೇಳೆನಲು ಆ ದೇವತೆಯು "ಈಕೆಯು ಸಾಮಾನ್ಯನ ಸತಿಯಲ್ಲ, ಭರತತ್ರಿಖಂಡಾಧಿಪತಿಯಾದ ಕೃಷ್ಣನ ಮೈದುನನೂ ಧರ್ಮರಾಜ ಭೀಮಸೇನರ ತಮ್ಮನೂ ಚರಮದೇಹಿಯೂ ಮಹಾ ಬಲಶಾಲಿಯೂ ಆದ ಅರ್ಜುನನ ಹೆಂಡತಿ. ಈಕೆಯು ನಿನಗೆ ಸಾಧ್ಯಳಲ್ಲ. ಅಂದು ಅವಿಚಾರದಿಂದ ಸೀತೆಯನ್ನೊಯ್ದು ರಾವಣನು ನರಕಗಾಮಿಯಾದನೆಂಬುದನ್ನು ತಿಳಿದು ಪರಮಪತಿವ್ರತೆಯಾದ ಈಕೆಯನ್ನು ನೀನೊಯ್ವುದು ಉಚಿತವೇ? ಬೇಡ" ಎನಲು ಕೇಳಿ ಪದ್ಮರಥನು "ನನಗೆ ಭಯವನ್ನು ತೋರಿಸಬೇಡ. ಶೀಘ್ರವಾಗಿ ಕೊಂಡೊಯ್ವ ಉಪಾಯವನ್ನು ಸುರು" ಎಂದನು. ಆ ಮಾತನ್ನು ಕೇಳಿ ದೇವತೆಯು "ಹೊಂದಾವರೆಯನ್ನು ತರಲು ಹೋದ ಪಾರ್ಥನ ರೂಪವನ್ನು ಧರಿಸಿ ಈಕೆಯನ್ನು ಕೊಂಡೊಯ್ವುದು" ಎನಲು ಶೀಘ್ರವಾಗಿ ಆ ರೂಪವನ್ನು ಧರಿಸಿ ಪದ್ಮರಥನು ಭೂತಲಕ್ಕಿಳಿದುಬಂದು ಕೃತ್ರಿಮಕಮಲವನ್ನು ಆಕೆಯ ಕೈಗಿತ್ತು ಕೈಹಿಡಿದು ಎತ್ತಿಕೊಂಡು ಆಕಾಶಕ್ಕೆ ಲಂಘಿಸಿ ತನ್ನ ವಿಮಾನದಲ್ಲಿ ಕುಳ್ಳಿರಿಸಿ

ಕೊಂಡೊಯ್ವಾಗ ಆತನ ಚೇಷ್ಟೆಯನ್ನು ನೋಡಿ ಸಂದೇಹಪಟ್ಟು ದ್ರೌಪದಿಯು ಪರ ವಿದ್ಯಾಭೇದಿನಿಯೆಂಬ ತನ್ನ ಉಂಗುರವನ್ನು ಆತನಿಗೆ ಮುಟ್ಟಿಸಿದಳು. ಆಗ ಆತನ ಕೃತ್ರಿಮರೂಪವು ಅಳಿದು ನಿಜರೂಪವು ಪ್ರಕಟವಾದುದು. ಅದನ್ನು ನೋಡಿ ಆಕೆಯು ತನ್ನ ಕಣ್ಣುಗಳನ್ನು ಮುಚ್ಚಿದಳು. ಪದ್ಮರಥನು ಆಕೆಗೆ ಕಣ್ಣು ತೆರೆದು ತನ್ನನ್ನು ನೋಡುವಂತೆ ಹೇಳಲು ಆಕೆಯು "ಎಲವೊ, ಪಾಳ್ಮನೆಗೆ ಪೊಗುವ ನಾಯಂತೆ ನಾನಿರ್ಪ್ಪೆಡೆಗೆ ಸ್ಥಳಕ್ಕೆ ಬಂದು ನನ್ನನ್ನು ಕದ್ದೊಯ್ಯುವುದು ಧೀರತನ ವೇ ? " ಎಂದು ಆತನನ್ನು ಜರಿದು ಯಾರಾದರು ತನ್ನನ್ನು ಬಿಡಿಸುವ ವೀರರುಂಟೇ ಯೆಂದು ಗೋಳಾಡಿದಳು. ಅದನ್ನು ಕೇಳಿ ಆಕಾಶಮಾರ್ಗದಲ್ಲಿ ಸಂಚರಿಸುತ್ತಿದ್ದ ಕೆಲವು ಮಂದಿ ಖೇಚರರು ಆ ಪದ್ಮರಥನೊಡನೆ ಯುದ್ಧಮಾಡಿ ಸೋತುಹೋಗಲು ಕಂಡು ದ್ರೌಪದಿಯು ತನಗಿನ್ನಾರೂ ಶರಣಿಲ್ಲವೆಂದು ಬಗೆದು "ಶರಣಾಗು ವೀರಫಲ್ಗುನದೇವ " ಎಂದುಸುರಿ ಭೂತಳಕ್ಕುರುಳಿದಳು. ಆಗ ಪದ್ಮರಥನು ಪರ್ಣಲಘುವೆಂಬ ವಿದ್ಯೆಯಿಂದ ಅಂತರಿಕ್ಷದಲ್ಲೇ ಆಕೆಯನ್ನು ಹಿಡಿಸಿ ತರಿಸಿ ವಿಮಾನ ದಲ್ಲಿರಿಸಿ "ನೀನು ಸಮ್ಮತಿಸದೆ ನಾನು ನಿನ್ನ ಮೈ ಮುಟ್ಟುವುದಿಲ್ಲ, ಇನ್ನು ನೀನು ಹೀಗೆ ಮಾಡಬೇಡ" ಎನಲು ಕೇಳಿ ಆಕೆಯು ' ನೀನೇನಾದರು ನನ್ನನ್ನು ಮುಟ್ಟಿ ದರೆ ನಾನು ನನ್ನ ನಾಲಗೆಯನ್ನು ಕಿತ್ತುಕೊಳ್ಳುವೆನು. ಆ ಮೇಲೆ ನನ್ನ ಗಂಡನು ನಿನ್ನ ಜೀವವನ್ನು ಹಿಂಡದೆ ಬಿಡನು " ಎಂದಳು. ಆ ಬಿರುನುಡಿಯನ್ನು ಕೇಳಿ ಆ ದುಷ್ಟನು ಆಕೆಯ ಮೈ ಮುಟ್ಟದೆ ವಾಯುವೇಗದಿಂದ ತನ್ನ ನಗರಿಗೆ ಕರೆದೊಯ್ದು ಮನೆಯಲ್ಲಿರಿಸಿ ತನ್ನ ಪಟ್ಟಣಕ್ಕೆ ಯಾರೂ ಬಾರದಂತೆ ವಿದ್ಯೆಯಿಂದ ವಜ್ರದ ಆವರಣ ವನ್ನು ಮಾಡಿಸಿ ಅನೇಕ ದೇವತೆಗಳನ್ನು ಕಾವಲಿರಿಸಿ ಆ ದಿನ ತನ್ನ ಭಾವನಾದ ಶಂಖಚಕ್ರವರ್ತಿಯೊಡನೆ ಅಲ್ಲಿಯ ತೀರ್ಥಂಕರರ ಸಮವಸರಣಕ್ಕೆ ಹೋಗಲು ಇತ್ತ ದ್ರೌಪದಿಯು " ಪತಿಯ ಮುಖವನ್ನು ಕಾಣುವವರೆಗೆ ನನಗೆ ಉಪವಾಸ ' ವೆಂದು ಪ್ರತಿಜ್ಞೆಯನ್ನು ಮಾಡಿದಳು. ಆಗ ಆ ಮನೆಯ ದೇವತೆಗಳು ಅತ್ತವು. ಹಗಲಿನಲ್ಲಿ ಉಳ್ಕಾಪಾತವಾಯ್ತು. ಅದನ್ನು ಕಂಡು ಆ ದುಷ್ಟ ಪದ್ಮರಥನ ತಂದೆತಾಯಿ ಗಳು ಹೆದರಿ ದ್ರೌಪದಿಯ ಒಳಿಗೆ ಬಂದು "ಶ್ರೇಷ್ಠವಾದ ನಡತೆಯುಳ್ಳ ಪತಿವ್ರ ತೆಯೇ ! ನೀನು ಮನಸ್ಸಿನಲ್ಲಿ ಚಿಂತಿಸಬೇಡ. ನಿನ್ನ ಪತಿಯ ಬಳಿಗೆ ನಿನ್ನನ್ನು ಕರೆದೊ ಯ್ಯುವೆವು. ಈ ಮಾತನ್ನು ನಂಬು " ಎಂದು ಕೈಮುಗಿದು ಪ್ರಾರ್ಥಿಸುವಾಗ ಅತ್ತ ಕನಕದ್ವೀಪದಲ್ಲಿ ಪಾರ್ಥನು ಹೊಂದಾವರೆಯನ್ನು ತಂದು ದ್ರೌಪದಿಯನ್ನು ಕಾಣದೆ ಚಿಂತಾಕ್ರಾಂತನಾಗಿ ಲತಾಮಂಟಪ ತಾವರೆಗೊಳ ಮೊದಲಾದ ಸ್ಥಳಗ

ಳಲ್ಲಿ ಹುಡುಕಿ ಕಾಣದೆ ಕಳವಳಿಸಿ ಸ್ವಲ್ಪ ಮೂರ್ಛೆಗೊಂಡು ತಾನೇ ಎದ್ದು " ನನ್ನ ಪ್ರಿಯಕಾಂತೆಯನ್ನು ಕೊಂಡೊಯ್ದವನು ಎಂಥವನಾಗಿದ್ದರೂ ಎಲ್ಲಿದ್ದರೂ ಅವನ ತಲೆಯನ್ನು ಚೆಂಡಾಡಿ ನನ್ನ ಪ್ರಾಣೇಶ್ವರಿಯನ್ನು ತರದೆ ಬಿಡುವೆನೇ ". ಎನುತ ಬಹುಕೋಪಾರೂಢನಾಗಿರುವಷ್ಟರಲ್ಲಿ ಹಿಂದೆ ಪದ್ಮರಥನು ದ್ರೌಪದಿಯನ್ನು ಕರೆದೊಯ್ವಾಗ ಆತನೊಡನೆ ಯುದ್ಧಮಾಡಿ ಸೋತಿದ್ದ ಓರ್ವ ಖೇಚರನು ವೀರಪಾರ್ಥನ ಬಳಿಗೆ ಹೋಗಿ ದ್ರೌಪದಿಯನ್ನು ಪದ್ಮರಥನು ಕೊಂಡೊಯ್ದನೆಂದುಸುರಿದನು. ಅದನ್ನು ಕೇಳಿ ಪಾರ್ಥನು ತನ್ನ ವಿದ್ಯೆಯಿಂದ ದ್ರೌಪದಿಯಿರುವ ಸ್ಥಳವನ್ನು ತಿಳಿದು ಧರ್ಮರಾಜನ ಬಳಿಗೆ ಹೋಗಿ ಆ ಸಮಾಚಾರವನ್ನು ತಿಳುಹಲು ಭೀಮನು ರೇಗಿದನು. ಬಳಿಕ ಭೀಮ ಪಾರ್ಥರೀರ್ವರೂ ಅಣ್ಣನ ಕಾಲಿಗೆ ನಮಸ್ಕಾರಮಾಡಿ ಬೀಳ್ಕೊಂಡು ವಿಮಾನವನ್ನೇರಿ ದ್ವಾರಾವತಿಗೆ ಹೋಗಿ ದ್ರೌಪದಿಯನ್ನು ಆ ದುಷ್ಟನು ಕಳ್ದೊಯ್ದ ವಾರ್ತೆಯನ್ನು ಕೃಷ್ಣಬಲರಾಮರಿಗುಸರಲು ಕೇಳಿ ಕಡುಮುಳಿದು ಅವರು ಭೀಮ ಪಾರ್ಥರೊಡನೆ ವಿಮಾನವನ್ನೇರಿ ಆಕಾಶಮಾರ್ಗವಾಗಿ ಹೋಗಿ ಲವಣಸಮುದ್ರವನ್ನು ದಾಂಟಿ ಆ ರಥನೂಪುರಚಕ್ರವಾಳಕ್ಕೆ ಹೋಗಿ ಕೃಷ್ಣಬಲರಾಮಪಾರ್ಥರು ಪಟ್ಟಣದ ಹೊರಗಿದ್ದು ಭೀಮನನ್ನು ಪಟ್ಟಣದೊಳಕ್ಕೆ ಕಳುಹಿದರು. ಅವನು ಗದೆಯನ್ನು ಹಿಡಿದು ಅತಿಕೋಪದಿಂದ ಹೋಗಿ ಆ ಪಟ್ಟಣಕ್ಕೆ ಹೊದಿಸಿರ್ದ ವಜ್ರದ ಆವರಣವನ್ನು ಗದೆಯಿಂದ ಹೊಡೆದುರುಳಿಸಿದನು. ಗದೆಯ ಶಬ್ದವು ಸಿಡಿಲಿನಂತೆ ದಶದಿಕ್ಕುಗಳನ್ನು ವ್ಯಾಪಿಸಿತು. ಆ ವಜ್ರದ ಆವರಣವನ್ನು ಕಾಯುತ್ತಿದ್ದ ದೇವತೆಗಳು ಬೆದರಿ ಓಡಿದುವು, ಭೀಮನು ಅಗಳಮುಂಡಿಗೆಗಳನ್ನು ಕಿತ್ತು ತನಗೆ ತಡೆಯಲು ಬಂದ ದ್ವಾರಪಾಲಕರಿಗೆ ಹೊಡೆದು ಕಾಲಯಮನಂತೆ ನಗರವನ್ನು ಹೊಕ್ಕು " ಯಾರೂ ತಿಳಿಯದಂತೆ ನಿಮ್ಮ ರಾಜಭವನವನ್ನು ಹೊಗುವವನು ನಾನಲ್ಲ. ಯಾರಾದರು ಶೂರರಿದ್ದರೆ ಮುಂದೆಬನ್ನಿ " ಎನುತ ಭೀಮನು ನಡೆವಾಗ " ರಾಜನಿಲ್ಲದಿರುವಾಗ ಇವನು ಹೊಕ್ಕು ಹೊರಟರೆ ತಮಗೆ ಕೊರತೆಯಾಗುವುದು " ಎಂದು ಪುರಪರಿಜನರು ಭೀಮಸೇನನನ್ನು ಮುತ್ತಿದರು. ಅವರು ಹತ್ತಿರಕ್ಕೆ ಬರುವವರೆಗೆ ಸುಮ್ಮನಿರ್ದು ಬಳಿಕ ತನ್ನ ಗದೆಯಿಂದ ಹೊಡೆದು ಕೆಲವರನ್ನೂ ಹಿಸಿಕಿ ಕೆಲವರನ್ನೂ ಈಡಾಡಿ ಕೆಲವರನ್ನೂ ಅಪ್ಪಳಿಸಿ ಕೆಲವರನ್ನೂ ಕೊಂದನು. ಬಳಿಕ ಆನೆ ಕುದುರೆ ರಥ ಮೊದಲಾದ ಸೇನೆಯೆಲ್ಲ ಬಂದು ಮುಸುಕಲು ಅದನ್ನು ಲಕ್ಷಿಸದೆ ರಥದಿಂದ ರಥವನ್ನೂ ಕುದುರೆಯಿಂದ ಕುದುರೆಯನ್ನೂ ಆನೆಯಿಂದ ಆನೆಯನ್ನೂ ಕ್ರೂರ ಪದಾತಿಯಿಂದ ಪದಾತಿಯನ್ನೂ ಹೊಡೆಯುತ್ತಾ ಆ

ಸೇನೆಯನ್ನು ನಾಶಮಾಡಿ, ಜಿಂಕೆಗಳ ಹಿಂಡಿಗೆ ಹೆಬ್ಬುಲಿಯು ಹೊಗುವಂತೆ, ಉಲ್ಲಾಸದಿಂದ ರಾಜಭವನವನ್ನು ಹೊಕ್ಕನು. ಆಗ ಬಾಗಿಲನ್ನು ಕಾಯುತ್ತಿದ್ದ ಆಳುಗಳು ಬಾಗಿಲನ್ನು ಹಾಕಲು ವಾಯುಪುತ್ರನು ಅವರನ್ನು ನೆಲಕ್ಕಿಕ್ಕಿ ಬಾಗಿಲನ್ನು ಒದ್ದು ಕೆಡಹಿ ಅರಮನೆಯೊಳಕ್ಕೆ ಹೊಕ್ಕು "ದ್ರೌಪದಿಯೆಲ್ಲಿರುವಳು ತೋರಿಸಿ, ತೋರಿಸದಿದ್ದರೆ ಕೊಂದುಬಿಡುತ್ತೇನೆ" ಎಂದು ಎಲ್ಲರನ್ನೂ ಅಂಜಿಸುತ್ತ ಹೋಗಿ ದ್ರೌಪದಿಯನ್ನು ಕಂಡು "ಅಕ್ಕ ಬೇಗ ಏಳು ಏಳು" ಎನಲು ಆಕೆಯು ತ್ವರೆಯಾಗಿ ಹೊರಟು ಸಂಶಯದಿಂದ ಪರವಿದ್ಯಾಭೇದಿನಿಯೆಂಬ ತನ್ನ ಕೈಯುಂಗುರವನ್ನು ಆತನಿಗೆ ಮುಟ್ಟಿಸಿದಳು. ಆಗ ಆತನ ರೂಪವು ಬದಲಾಗದಿರಲು ಮಾಯೆಯಲ್ಲವೆಂದು ಒಗೆದು ಆತನ ಹಿಂದೆ ಬಂದಳು. ಬಾಗಿಲ ಕಾಯುವ ಭಟರು ಹೋರಾಡಲಾರದೆ ಪಕ್ಕಕ್ಕೆ ತೊಲಗಿದರು. ಭೀಮನು ರಾಜಬೀದಿಗೆ ಬಂದು ತನಗಿದಿರಾದ ವೀರರನ್ನೆಲ್ಲ ಗದೆಯಿಂದ ಹೊಡೆದುರುಳಿಸಲು ಕಂಡು ಭೀತಿಯಿಂದ ಪಟ್ಟಣಿಗರು "ಇವನೇನು ಕಡೆಗಾಲದ ರುದ್ರನೋ, ಭೈರವನೋ, ದಂಡಧರನೋ, ನಾವು ಇಂತಹ ವೀರನನ್ನು ಕಂಡಿಲ್ಲ" ಎನುತ್ತಿದ್ದರು. ಆಗ ಭೀಮನು "ಎಲೈ ಪಟ್ಟಣಿಗರೆ! ಪರಸ್ತ್ರೀಯನ್ನು ಕದ್ದ ಆ ದುಷ್ಟನನ್ನು ತೋರಿಸಿದರೆ ಅವನನ್ನು ನೆಲಕ್ಕಿಕ್ಕುವೆನು" ಎಂದು ಗದೆಯನ್ನು ತೂಗುತ್ತ ನಾರದುನಿಯನ್ನು ಮುಂದೆ ನಡೆಯಿಸಿಕೊಂಡು ಕೃಷ್ಣಬಲರಾಮಫಲ್ಗುನರಿದ್ದಲ್ಲಿಗೆ ಹೋಗಿ ಸೇರಿದನು. ದ್ರೌಪದಿಯು ಬಲಗೋವಿಂದರ ಕಾಲುಗಳಿಗೆರಗಿ ಆಶೀರ್ವಾದವನ್ನು ಪಡೆದು ತನ್ನ ಪತಿಯ ಎಡದ ಭಾಗದಲ್ಲಿ ನಿಂತಳು.

ಜಂಬೂದ್ವೀಪದಿಂದ ತಾವು ಬಂದ ವಾರ್ತೆಯನ್ನು ತಿಳುಹಬೇಕೆಂದು ಕೃಷ್ಣನು ತನ್ನ ಶಂಖವನ್ನೂದಲು ಆಕಾಶಭೂಮಿಗಳದುರಿದುವು. ಆಗ ಸಮವಸರಣ ಮಂಟಪದಲ್ಲಿದ್ದ ಶಂಖಚಕ್ರಿಯು ಇದೇನೆಂದು ಗಣಧರಮಹಾಮುನಿಗಳನ್ನು ಕೇಳಲು ಅವರು ಅವಧಿಜ್ಞಾನದಿಂದ ದ್ರೌಪದಿಯನ್ನು ಅವನ ಮೈದುನನಾದ ಪದ್ಮರಥನು ತಂದಿದ್ದ ವಿವರವನ್ನೂ ಆಕೆಯನ್ನು ಕರೆದುಕೊಂಡುಹೋಗುವುದಕ್ಕೆ ಕೃಷ್ಣಬಲರಾಮ ಭೀಮಾರ್ಜುನರು ಬಂದು ಆಕೆಯನ್ನು ತಂದು ಕೃಷ್ಣನು ಶಂಖನಾದವನ್ನು ಮಾಡಿದನೆಂಬ ವಿಷಯವನ್ನೂ ತಿಳುಹಿದರು. ಆ ಮಾತನ್ನು ಕೇಳಿ ಶಂಖಚಕ್ರಿಯು ತೀರ್ಥಂಕರರಿಗೆ ವಂದಿಸಿ ಅಲ್ಲಿಂದ ಹೊರಟುಬಂದು ಕೋಪದಿಂದ ತನ್ನ ದೊಡ್ಡ ಸೈನ್ಯವನ್ನು ಅನುಗೊಳಿಸಿ ಯುದ್ಧಕ್ಕೆ ನಡೆವ ಸಮಯದಲ್ಲಿ ಅವನ ಮಂತ್ರಿಗಳು ಅವನಿಗೆ ವಿವೇಕವನ್ನು ಹೇಳಿ ಯುದ್ಧಸನ್ನಾಹವನ್ನು ನಿಲ್ಲಿಸಿ ತಾವು ಊರಮುಂದಿರ್ದ ಆ ರಾಮಕೇಶವ ಭೀಮಪಾರ್ಥರ ಬಳಿಗೆ ಬಂದು ಅವರುಗಳಿಗೆ ನಮಸ್ಕರಿಸಿ ಕೈಮುಗಿದು

ಸಮಾಧಾನಕರವಾದ ಮಾತನ್ನಾಡಲು ಆಗ ಅವರು ತಮ್ಮ ಪುಷ್ಪಕವಿಮಾನವನ್ನೇರಿ ದ್ರೌಪದಿಯನ್ನು ಕರೆದುಕೊಂಡು ಹಿಂದಿರುಗಿ ಬದರೀವನಕ್ಕೆ ಹೋಗಿ ಭೀಮಾರ್ಜುನರನ್ನೂ ಪಾಂಚಾಲಿಯನ್ನೂ ಅಲ್ಲಿ ಬಿಟ್ಟು ಕೃಷ್ಣಬಲರಾಮರು ಕೊಂತಿಯನ್ನು ಕರೆದುಕೊಂಡು ದ್ವಾರಾವತಿಗೆ ಹೋದರು.

ಇತ್ತ ಪಾಂಡವರು, ತಮ್ಮ ರಾಜಧಾನಿಯಲ್ಲಿ ಬಂಧುಗಳ ಮಧ್ಯದಲ್ಲಿ ಸುಖದಿಂದಿರುವಂತೆ, ಆ ವನದಲ್ಲಿ ಹನ್ನೆರಡು ವರ್ಷ ಸುಖವಾಗಿದ್ದು ಬಳಿಕ ದ್ರೌಪದಿಯನ್ನು ದ್ರುಪದರಾಜನ ಬಳಿಗೆ ಕಳುಹಿ ತಾವು ಅಲ್ಲಿಂದ ಹೊರಟು ಶ್ರೀಪರ್ವತಕ್ಕೆ ಹೋಗಿ ಅಲ್ಲಿ ಕೆಲವು ದಿನಗಳವರೆಗಿದ್ದು ಅಲ್ಲಿಂದ ಕಾಂಚೀಪುರಕ್ಕೆ ಹೋಗಿ ಕೆಲವು ದಿನವಿದ್ದು ಅಲ್ಲಿಂದ ಕರ್ಣಾಟಕದೇಶಕ್ಕೆ ಬಂದು ವಿರಾಟನಗರದ ಬಳಿಯಲ್ಲಿರುವ ದೊಡ್ಡ ಕಾಡಿನ ಮಧ್ಯದಲ್ಲಿದ್ದೊಂದು ದೊಡ್ಡ ಬನ್ನಿಯ ಮರದಲ್ಲಿ ತಮ್ಮ ದಿವ್ಯಾಸ್ತ್ರಗಳನ್ನಿಟ್ಟು ದೇವತೆಗಳನ್ನು ಕಾವಲಿರಿಸಿ ರೂಪಪರಾವರ್ತನವೆಂಬ ವಿದ್ಯೆಯಿಂದ ತಮ್ಮ ರೂಪವನ್ನು ಬದಲಾಯಿಸಿ ಧರ್ಮರಾಜನು ಬ್ರಾಹ್ಮಣರೂಪವನ್ನೂ ಭೀಮನು ಅಡಿಗೆಯವನ ಮತ್ತು ಜಟ್ಟಿಯ ರೂಪವನ್ನೂ ಅರ್ಜುನನು ನಟುವನ ರೂಪವನ್ನೂ ನಕುಲನು ಕುದುರೆಯ ಶಿಕ್ಷಕನ ರೂಪವನ್ನೂ ಸಹದೇವನು ಗೋವುಗಳ ಹಟ್ಟಿಯ ಅಧ್ಯಕ್ಷನ ರೂಪವನ್ನೂ ಧರಿಸಿ ವಿರಾಟನ ಬಳಿಗೆ ಹೋಗಿ ತಂತಮ್ಮ ವಿಷಯವನ್ನು ಹೇಳಲು ಅವನು ಮೆಚ್ಚಿ ಅವರನ್ನು ಆಯಾ ಕೆಲಸಕ್ಕೆ ನೇಮಿಸಿದನು. ಒಂದುದಿನ ವಿಷಮುಖರ್ಪರನೆಂಬೋರ್ವ ದೊಡ್ಡ ಜಟ್ಟಿಯು ಬಂದು ಕೀಚಕನ ಮೂಲಕವಾಗಿ ವಿರಾಟನನ್ನು ಕಂಡು ಮಲ್ಲಯುದ್ಧದಲ್ಲಿ ತನಗಿದಿರಾಗತಕ್ಕ ಜಟ್ಟಿಯನ್ನು ತಂದು ನಿಲಿಸೆಂದನು. ಆಗ ಬಾಣಸಿಗನ ವೇಷದಲ್ಲಿದ್ದ ಭೀಮಸೇನನು "ಎಲವೋ ವಿಷಮುಖರ್ಪರನೆ! ನಿನ್ನ ಶಕ್ತಿಯನ್ನು ನನ್ನಲ್ಲಿ ತೋರು" ಎನಲು ಕೇಳಿ ದೊರೆಯು ಸಂತೋಷದಿಂದ ಮಲ್ಲರಂಗವನ್ನು ಮಾಡಿಸಿ ಕುಳ್ಳಿರಲು ಭೀಮಸೇನನು ತನಗಿದಿರಾದ ಜಗಜಟ್ಟಿಯನ್ನು ಕಂಡು ಕೋಪದಿಂದ ಹಿಡಿದು ನೆಲಕ್ಕಪ್ಪಳಿಸಿದನು. ಅದನ್ನು ಕಂಡು ವಿರಾಟನ ಮೈದುನನಾದ ಕೀಚಕನು ಕೋಪಾಹಂಕಾರಗಳಿಂದ ಭೀಮನಿಗಿದಿರಾಗಿ ಖಡ್ಗವನ್ನು ಒದರುತ್ತ ಬರಲು ಭೀಮನು ಅವನ ಖಡ್ಗವನ್ನು ಎಳೆದು ಕಾಲನ್ನು ಹಿಡಿದು ನೆಲಕ್ಕಪ್ಪಳಿಸಿ ಕೊಂದನು. ಅದನ್ನು ಕಂಡು ರಾಜನ ಸಭಿಕರು ಆಶ್ಚರ್ಯಪಟ್ಟರು. ಆಗ ವಿರಾಟನು "ಎಲೈ ಬಾಣಸಿಗನೆ! ಕೀಚಕನು ಜಟ್ಟಿಯ ಸಲುವಾಗಿ ತನ್ನಿಂದತಾನೇ ಅಳಿದುದಕ್ಕೆ ನೀನು ಚಿಂತಿಸಬೇಡ" ಎಂದು ಮನ್ನಿಸಿ ಕಳುಹಿದನು.

ಇತ್ತ ಕೌರವನಿಗೆ ಶಕುನಿಯು "ರಾಜನೆ! ಪಾಂಡವರಿಗೆ ಹನ್ನೆರಡು ವರುಷ ವನವಾಸದ ಅವಧಿಯು ತೀರಿತು. ಅವರ ಅಜ್ಞಾತವಾಸದ ಸ್ಥಾನವನ್ನು ತಿಳಿಯದೆ ಹೀಗೆ ಅಲಕ್ಷ್ಯವಾಗಿರುವುದುಂಟೇ?" ಎನಲು ಆ ಮಾತನ್ನು ಕೇಳಿ ಭೀಷ್ಮರು ಕೌರವನನ್ನು ಕುರಿತು "ಎಲೈ ಮಗನೆ! ಕೇಳು, ಪಾಂಡವರ ವನವಾಸದ ಅವಧಿಯು ತೀರಿತು. ಅವರನ್ನು ಕರೆಸಿ ಅವರ ನಾಡುಬೀಡುಗಳನ್ನು ಅವರಿಗೆ ಕೊಡುವುದು ನಿನಗೆ ಉಚಿತವಾಗಿದೆ. ಹಾಗೆ ಮಾಡದಿದ್ದರೆ ಕೆಲಸವು ಕೆಡುವುದು" ಎನಲು ಕೇಳಿ ಕೌರವನು ಕೋಪಗೊಂಡು ಭೀಷ್ಮರನ್ನು ಕುರಿತು "ನೀವು ಯಾರ ಗೆಲುವನ್ನು ಹಾರೈಸುತ್ತಿರುವಿರಿ? ನನ್ನ ಈ ಕರ್ಣನಿಗೆ ಯುದ್ಧದಲ್ಲಿ ದೇವದಾನವಪನ್ನಗರು ಇದಿರಾಗಬಲ್ಲರೇ? ನನ್ನ ದೊಡ್ಡ ಸೈನ್ಯದಲ್ಲಿ ತ್ರಿಮೂರ್ತಿಗಳು ಬಂದರೂ ಇದಿರಾಗಬಲ್ಲ ಅತಿರಥ ಮಹಾರಥರಿರುವಾಗ ನನಗೇಕೆ ಯೋಚನೆ?" ಎಂದು ತನ್ನ ಗರ್ವವನ್ನು ಮಾತನಾಡಲು ಭೀಷ್ಮರು "ಮುಂದಿನ ಕಾರ್ಯವನ್ನು ನೀನೇ ನೋಡಿಕೊಳ್ಳು" ಎಂದು ಹೇಳಿ ಹೊರಟುಹೋದರು.

ತರುವಾಯ ಕೌರವನು ಗೂಢಚಾರರನ್ನು ಕರೆಸಿ ಪಾಂಡವರು ಎಲ್ಲಿ ಅಜ್ಞಾತವಾಸದಲ್ಲಿರುತ್ತಾರೆಂಬುದನ್ನು ತಿಳಿದುಕೊಂಡು ಬರುವಂತೆ ಹೇಳಿಕಳುಹಲು ಅವರು ಹುಡುಕಿಕೊಂಡು ವಿರಾಟನಗರಕ್ಕೆ ಹೋಗಿ ಅಲ್ಲಿ ಪಾಂಡವರಿರುವುದನ್ನು ತಿಳಿದುಕೊಂಡು ಹೋಗಿ ಕೌರವನಿಗೆ ಹೇಳಿದರು. ಆಗ ಅವನು ಶಕುನಿಯನ್ನು ಕರೆಸಿ ಪಾಂಡವರು ವಿರಾಟನಗರದಲ್ಲಿರುತ್ತಾರೆಂಬ ಸಂಶಯವನ್ನು ನಿವೃತ್ತಿಮಾಡಿಕೊಳ್ಳುವ ಉಪಾಯವಾವುದೆಂದು ಕೇಳಲು ಅವನು "ಉಪಾಯವು ಬೇರೆಯಿಲ್ಲ. ವಿರಾಟನಗರದ ಹೊರಗೆ ಮೇಯುತ್ತಿರ್ಪ ಗೋವುಗಳನ್ನು ನಾವು ಹಿಡಿದರೆ ಪಾಂಡವರು ಸೈರಿಸುವುದಿಲ್ಲ. ಈ ರೀತಿಯಿಂದಲ್ಲದೆ ಅವರನ್ನು ಕಾಣಲಾಗುವುದಿಲ್ಲ" ಎಂದನು. ಆ ಮಾತನ್ನು ಕೇಳಿ ಕೌರವನು ತನ್ನ ಸೈನ್ಯವನ್ನೆಲ್ಲ ಒರಿಸಿ ಅದನ್ನೂ ತ್ರಿಗರ್ತದೇಶದ ಸುಶರ್ಮನ ಹದಿನಾಲ್ಕು ಸಾವಿರ ರಥಿಕರನ್ನು ಬಸಮಾಡಿ ಅವರನ್ನೂ ಕಳುಹಲು ಆ ಸೈನ್ಯವೆಲ್ಲ ಹೋಗಿ ವಿರಾಟನಗರದ ದಕ್ಷಿಣದಿಕ್ಕಿನಲ್ಲಿ ಮೇಯುತ್ತಿದ್ದ ಗೋವುಗಳನ್ನೆಲ್ಲ ಅಪಹರಿಸಿತು. ಆ ವಾರ್ತೆಯನ್ನು ಕೇಳಿ ವಿರಾಟನು ರೇಗಿ ಉತ್ತರಕುಮಾರನನ್ನು ಪಟ್ಟಣಕ್ಕೆ ಕಾವಲಿಕ್ಕಿ ತಾನು ಚತುರಂಗಸೈನ್ಯಸಮೇತನಾಗಿ ಗೋವುಗಳನ್ನು ಬಿಡಿಸಿಕೊಂಡು ಬರಬು ಹೊರಟನು. ಆಗ ಧರ್ಮರಾಜನು ತಮ್ಮಂದಿರ ಬಳಿಗೆ ಹೋಗಿ "ಕೌರವನು ಕೊಟ್ಟ ಅವಧಿಯು ಇಂದಿಗೆ ತೀರಿತು. ನಾವಿರುವುದನ್ನು ಕಾಣಬೇಕೆಂದು ಅವನ ಸೈನಿಕರು ಈ ಊರಿನ ಗೋವುಗಳನ್ನೆಲ್ಲ ಅಪಹರಿ

ಸಿದರು. ನಾವು ತಿಳಿದೂ ಸುಮ್ಮನಿದ್ದರೆ ದೋಷಬರುವುದು " ಎಂದು ಹೇಳಿ ಪಾರ್ಥನನ್ನು ಅಲ್ಲಿ ಬಿಟ್ಟು ಭೀಮನೊಡನೆ ತಾನು ವಿರಾಟನ ಬಳಿಗೆ ಬಂದು ಅವನ ಸೈನ್ಯವನ್ನು ಹಿಂದೆಮಾಡಿ ಅನಿಲಸುತನು ಗದೆಯನ್ನಾಂತು ಕುರುಸೈನ್ಯವನ್ನು ಹೊಕ್ಕು ಅನೇಕರನ್ನು ಕೊಂದು ಸುಶರ್ಮನನ್ನು ಪೆಡಗಟ್ಟಿ ತಂದು ಧರ್ಮರಾಜನಿಗೊಪ್ಪಿಸಿದನು. ಅಳಿದುಳಿದ ಕುರುಸೇನೆಯೆಲ್ಲ ಹೆದರಿ ಓಡಿತು. ಧರ್ಮರಾಜನು ಸುಶರ್ಮನ ಬಂಧನವನ್ನು ಬಿಡಿಸಿ ಕಳುಹಲು ವಿರಾಟನು ಸಂತುಷ್ಟನಾಗಿ ಹಿಂದಿರುಗಿದನು.

ಇತ್ತ ಕುರುಸೇನೆಯು ಪುನಃ ಅಪರಿಮಿತವಾಗಿ ಸೇರಿ ಮರುದಿನ ಆ ಮತ್ಸ್ಯಪುರದ ಎಡಗಡೆಯಲ್ಲಿ ಮೇಯುತ್ತಿರ್ದ ಗೋವುಗಳನ್ನಪಹರಿಸಲು ಆ ವಾರ್ತೆಯನ್ನು ಓರ್ವ ಗೋಪಾಲಕನು ಬಂದು ವಿರಾಟನಿಗೆ ತಿಳುಹಿದನು. ಅದನ್ನು ಕೇಳಿ ವಿರಾಟನು ಬಹು ಕೋಪದಿಂದ ಗದ್ದುಗೆಯನ್ನು ಹುಯ್ದು ಏಳುವ ಸಮಯದಲ್ಲಿ ಉತ್ತರನು ಎದ್ದು ಕೈಮುಗಿದು ತಾನು ಹೋಗಿ ಗೋವುಗಳನ್ನು ಬಿಡಿಸಿಕೊಂಡು ಬರುವುದಾಗಿ ಹೇಳಿ ಪೌರುಷದಿಂದ ಶಪಥವನ್ನು ಮಾಡಿ ಯುದ್ಧಸನ್ನದ್ಧನಾಗಿ ಪಟ್ಟಣದಿಂದ ಹೊರಟನು. ಆಗ ಪಾಂಡವರು ತಮ್ಮ ಆಯುಧಗಳನ್ನು ಆ ಬನ್ನಿಯಮರದಿಂದ ತಂದು ಉತ್ತರಕುಮಾರನೊಡನೆ ಹೋದರು. ಉತ್ತರಕುಮಾರನು ಸಮುದ್ರದಂತೆ ಘೂರ್ಣಿಸುತ್ತಿದ್ದ ಆ ಕುರುಸೇನೆಯನ್ನು ನೋಡಿ ತಲೆಯನ್ನಲ್ಲಾಡಿಸಿ ದಿಗಿಲುಬಿದ್ದು ನಿಂದಿರಲು ಕಂಡು ಭೀಮಾರ್ಜುನರು ಒಂದೊಂದು ರಥವನ್ನೇರಿ ಕುರುಬಲಕ್ಕಿದಿರಾಗಿ, ಆ ಕಲಿಪಾರ್ಥನು ಬರಸಿಡಿಲಂತೆ ಧನುಷ್ಟಂಕಾರವನ್ನು ಮಾಡಿ ಒಂದೊಂದು ಬಾಣದಿಂದ ಅನೇಕಾನೇಕ ಗಜ ರಥ ತುರಗ ಪದಾತಿಗಳನ್ನು ಸಂಹರಿಸಿದನು. ಭೀಮನು ಪ್ರಳಯಕಾಲದ ಬರಸಿಡಿಲಂತೆ ತನ್ನ ಗದೆಯನ್ನು ಘುಡುಘುಡಿಸುತ ಹೊಡೆದು ಅನೇಕ ಸೈನ್ಯವನ್ನು ಭೂಮಿಗುರುಳಿಸಿದನು. ಭೀಮಾರ್ಜುನರ ಹೊಡೆತಕ್ಕಿದಿರಾಗಲಾರದೆ ಅಳಿದುಳಿದ ಕುರುಸೈನ್ಯವೆಲ್ಲ ಗುಂಪುಗುಂಪಾಗಿ ಓಡಿಹೋಯ್ತು. ಆಗ ಆ ವೀರಾಗ್ರಣಿಗಳು ಗೋವುಗಳನ್ನು ಹಿಂದಿರುಗಿಸಿದರು. ಆ ಹಿಮ್ಮೆಟ್ಟಿದ ಕುರುಸೈನಿಕರು ಪಾಂಡವರು ವಿರಾಟನಗರದಲ್ಲಿರುವುದನ್ನು ನಿರ್ಧರಿಸಿ ಆ ವಿಷಯವನ್ನು ತಮ್ಮ ನಗರಕ್ಕೆ ಹೋಗಿ ಕೌರವನಿಗೆ ತಿಳಿಸಿದರು.

ಇತ್ತ ವಿರಾಟನು ಕುರುಸೈನ್ಯವನ್ನು ಓಡಿಸಿದವರು ಲೋಕೈಕವೀರರಾದ ಪಾಂಡವರೆಂಬುದನ್ನು ತಿಳಿದು ಸಂತುಷ್ಟನಾಗಿ ಬಂದು ಧರ್ಮರಾಜ ಮೊದಲಾದ ಪಾಂಡವರಿಗೆ ವಂದಿಸಿ ಕೈಮುಗಿದು " ಗುಣವಂತರೂ ಸತ್ಯನಿಧಿಗಳೂ ಆದ ನೀವುಗಳು ಆಳಿಗೆ ಆಳಾಗಿ ಹೀನವೇಷವನ್ನು ಧರಿಸಿ ನನ್ನಲ್ಲಿ ಜೀವಿಸಿದುದು ಕಾಲಮಹಿಮೆ

ಯಿಂದ" ಎಂದು ಬಹಳವಾಗಿ ನೊಂದುಕೊಂಡು ನುಡಿದು ತನ್ನ ಪಟ್ಟಣಶೃಂಗಾರವನ್ನು ಮಾಡಿಸಿ ಆನೆಯಮೇಲೆ ಅವರನ್ನು ಕುಳ್ಳಿರಿಸಿ ಇಂದ್ರವೈಭವದಿಂದ ತನ್ನ ಅರಮನೆಗೆ ಕರೆದೊಯ್ದು ಧರ್ಮರಾಜನನ್ನು ಸಿಹ್ಮಾಸನದಲ್ಲಿ ಕುಳ್ಳಿರಿಸಿ ಮಂಡಳಿಕರು ಸಾಮಂತರು ಮೊದಲಾದವರೊಡನೆ ಪಾಂಡವರನ್ನು ಓಲೈಸಿದನು. ಪಾಂಡವರು ವಿರಾಟನಗರದಲ್ಲಿರುವ ವಾರ್ತೆಯನ್ನು ಕೇಳಿ ಧಾನ್ಯರಾಜ, ವಿಂಧ್ಯಕರಾಜ, ಚಂಡವಾಹನರಾಜ, ಸಿಹ್ಮಘೋಷಣ, ಪಾಂಚಾಲರಾಜ ಮೊದಲಾದ ರಾಜರುಗಳು ತಂತಮ್ಮ ಪುತ್ರಿಯರನ್ನು ಕರೆದುಕೊಂಡು ತಮ್ಮ ಅಪರಿಮಿತ ಸೈನ್ಯದೊಡನೆ ವಿರಾಟನಗರಕ್ಕೆ ಬಂದು ಪಾಂಡವರನ್ನು ಕಂಡು ಅನುಪಮಾನಂದಪರವಶರಾದರು. ಬಳಿಕ ಆ ಇಂದ್ರರಥಖೇಚರನು ತನ್ನ ನೂರುಮಂದಿ ಮಕ್ಕಳೊಡನೆಯೂ ಸೈನ್ಯದೊಡನೆಯೂ ಬಂದನು. ವಿರಾಟನ ಮಿತ್ರನಾದ ಪಾಂಡ್ಯರಾಜನು ತನ್ನ ಲಲಿತಾಂಗಿಯೆಂಬ ಮಗಳನ್ನು ಅರ್ಜುನನಿಗೆ ಮದುವೆಮಾಡಿಕೊಟ್ಟು ಅನೇಕಸೈನ್ಯವನ್ನು ಬಳುವಳಿಯಿತ್ತು ತಾನೂ ಬಂದು ಓಲೈಸುತ್ತ ಸುಖವಾಗಿದ್ದನು. ಇನ್ನೂ ಕೆಲವು ರಾಜರು ತಮ್ಮ ಪುತ್ರಿಯರನ್ನಿತ್ತು ಓಲೈಸುತ್ತಿದ್ದರು.

ಇತ್ತ ದ್ವಾರಾವತಿಯಿಂದ ಸತ್ಯಕನೆಂಬ ರಾಜನು ಬಂದು ಕಾಲಿಗೆರಗಿ "ಎಲೈ ಧರ್ಮರಾಜನೆ! ಹರಿಯು ತನ್ನ ಪಟ್ಟಣಕ್ಕೆ ತಮ್ಮನ್ನು ಕರೆತರುವಂತೆ ನನ್ನನ್ನು ಪ್ರೇಮದಿಂದ ಕಳುಹಿದನು" ಎನಲು ಧರ್ಮಸುತನು ಯಾದವರ ಕುಶಲವಾರ್ತೆಯನ್ನು ಕೇಳಿ ಬಳಿಕ ವರ್ಷಾಕಾಲವು ಕಳೆದನಂತರ ಬಂದು ದುರಿತಹರನಾದ ನೇಮಿಜಿನಗೆ ವಂದಿಪೆನೆಂದು ಹೇಳಿ ಸತ್ಯಕನನ್ನು ಕಳುಹಿ ಸುಖದಲ್ಲಿದ್ದನು.

ಒಂದಾನೊಂದುದಿನ ಕೊಂತಿಯು ದ್ವಾರಾವತಿಯಿಂದ ವಿದುರನನ್ನು ನೋಡಬೇಕೆಂದು ಹೊರಟು ಬರುತ್ತೊಂದು ಅರಣ್ಯದಲ್ಲಿ ಓರ್ವ ಮುನೀಶನನ್ನು ಕಂಡು ನಮಸ್ಕರಿಸಿ 'ಎಲೈ ಮುನಿಪತಿಯೆ! ನನ್ನ ಯೌವನದಲ್ಲಿ ಪಡೆದ ಮಗುವನ್ನು ಮಂದಾಸಿನಲ್ಲಿಟ್ಟು ಯಮುನಾನದಿಯಲ್ಲಿ ಬಿಡಿಸಿದೆನು. ಅವನ ಬಾಳುವೆಯನ್ನು ದಯವಿಟ್ಟು ತಿಳಿಸಬೇಕು" ಎನಲು ಮುನಿಪತಿಯು ಕೊಂತಿಯನ್ನು ಕುರಿತು "ನೀನು ಮೊದಲು ಹಡೆದ ಮಗನು ಬಲಿಷ್ಠನಾಗಿ ಕೌರವೇಶ್ವರನ ಪ್ರೀತಿಗೆ ಪಾತ್ರನಾಗಿ ಅವನೊಡನೆ ಎಡೆಬಿಡದೆ ಬೆಳೆದು ನಿಸ್ಸೀಮನಾಗಿರುವನು. ಅವನೇ ಕರ್ಣನು" ಎಂದನು. ಆ ಮಾತನ್ನು ಕೇಳಿ ಕೊಂತಿಯು ಸಂತುಷ್ಟಳಾಗಿ ಮುನಿಪತಿಗೆ ವಂದಿಸಿ ಬೀಳ್ಕೊಂಡು ಹಸ್ತಿನಾಪುರಕ್ಕೆ ಹೋಗಿ ವಿದುರನ ಮನೆಯಲ್ಲಿ ಸಂತೋಷದಿಂದ ಇರುತ್ತಿದ್ದು ಒಂದುದಿನ ಆಕೆಯು ಕರ್ಣನಬಳಿಗೆ ಹೋಗಲು ಆತನು ಎದ್ದು ಆಕೆಗೆ

ನಮಸ್ಕಾರವನ್ನು ಮಾಡಿ ಉನ್ನತಾಸನವನ್ನಿತ್ತು ಕೈಮುಗಿದು "ಏನಪ್ಪಣೆ, ಹೇಳಿ" ಎಂದನು. ಕೊಂತಿಯು "ನಾನು ಯೌವನದಲ್ಲಿ ಮೊದಲು ಹಡೆದ ಚೊಚ್ಚಲ ಶಿಶುವಾದ ನಿನ್ನನ್ನು ಯಮುನಾನದಿಯಲ್ಲಿ ಬಿಟ್ಟೆನು. ಈಗ ನಿನ್ನನ್ನು ನೋಡಬೇಕೆಂಬ ಕೌತುಕದಿಂದ ಬಂದೆನು. ಎನಲು ಕರ್ಣನು ಜ್ವಾಲಾಮಾಲಿನೀ ದೇವಿಯು ತನಗೆ ಹಿಂದೆ ಕೊಟ್ಟಿದ್ದ ಉರಿಯ ವಸ್ತ್ರವನ್ನು ಆಕೆಗೆ ಹೊದಿಸಲು ಅದು ವಿಕಾರವನ್ನು ಹೊಂದದೆ ಎಳೆದಳಿರಂತೆ ಶೋಭಿಸುತ್ತಿರುವುದನ್ನು ಕಂಡು ಕರ್ಣನು ಆಕೆಯ ಚರಣಕಮಲಕ್ಕೆರಗಿ ಕೈಮುಗಿದು ನಿಂದಿರಲು, ಆಗ ಕೊಂತಿಯು ಸ್ತನಗಳಲ್ಲಿ ಸ್ತನ್ಯವೂ ನೇತ್ರಗಳಲ್ಲಿ ಆನಂದಬಾಷ್ಪವೂ ಸುರಿದುವು. ಬಳಿಕ ಆಕೆಯು ಕರ್ಣನನ್ನು ಬಿಗಿದಪ್ಪಿ "ಮಗನೆ! ನಿನ್ನ ತಮ್ಮಂದಿರಿಂದ ಒಲ್ಮೆಸಿಕೊಂಡಿರು" ಎನಲು, ಕರ್ಣನು "ತಾಯೆ! ಬಿನ್ನಪವು. ಕೌರವೇಶ್ವರನನ್ನು ಕನಸುಮನಸಿನಲ್ಲಿಯೂ ನಾನು ಬಿಡುವಂತಿಲ್ಲ. ಆದುದರಿಂದ ಆ ಮಾತು ಬೇಡ" ಎಂದನು. ಆಗ ಕೊಂತಿಯು "ಮಗನೆ! ನೀನು ಪಡೆದಿರುವ ದಿವ್ಯಾಸ್ತ್ರಗಳನ್ನು ನಿನ್ನ ಅನುಜರಮೇಲೆ ಪ್ರಯೋಗಿಸಬೇಡ" ಎನಲು ಕರ್ಣನು ಹಾಗೆಯೇ ಮಾಡುವೆನೆಂದೂ ಈ ವಿಚಾರವನ್ನು ಅವರಲ್ಲಿ ಹೇಳಬಾರದೆಂದೂ ನುಡಿದು ದಿವ್ಯ ವಸ್ತ್ರಾಭರಣಗಳಿಂದ ಪೂಜಿಸಿ ವಂದಿಸಿದನು. ಬಳಿಕ ಕೊಂತಿಯು ಅಲ್ಲಿಂದ ಹೊರಟು ದ್ವಾರಾವತಿಗೆ ಬಂದು ಸುಖದಿಂದಿರಲು ಇತ್ತ ಧರ್ಮರಾಜನು ವರ್ಷಾಕಾಲವು ಕಳೆದನಂತರ ವಿರಾಟನಗರದಿಂದ ದ್ವಾರಾವತಿಗೆ ಹೊರಟನು. ಆಗ ವಿರಾಟನು ಪಾಂಡವರೊಡನೆ ಬಹುದೂರ ಬರಲು ಆತನನ್ನು ಪ್ರೇಮದಿಂದ ಬೀಳ್ಕೊಟ್ಟು ಮುಂದೆ ನಡೆದುಬರುತ್ತಿರುವ ವಾರ್ತೆಯನ್ನು ಕೇಳಿ ಕೃಷ್ಣನು ದ್ವಾರಾವತಿಯಲ್ಲಿ ನಗರಶೃಂಗಾರವನ್ನು ಮಾಡಿಸಿ ತನ್ನ ಅಧೀನರಾಜರುಗಳೊಡನೆ ಪಾಂಡವರನ್ನು ಇದಿರ್ಗೊಂಡು ಪುರಪ್ರವೇಶವನ್ನು ಮಾಡಿಸಿದನು. ಪಾಂಡವರು ನೇಮಿತೀರ್ಥೇಶ್ವರನಿಗೆ ನಮಸ್ಕಾರವನ್ನು ಮಾಡಿ ಕೃಷ್ಣಬಲರಾಮಾದಿಗಳೊಡನೆ ಅಲ್ಲಿ ಕೆಲವುಕಾಲ ಸುಖದಿಂದಿದ್ದರು.



# ೨೬. ಜರಾಸಂಧನು ಕೃಷ್ಣನಮೇಲೆ ದಂಡೆತ್ತಿ ನಡೆದ ಸಂಧಿ



ಕೃಷ್ಣನು ಪಾಂಡವರೊಡನೆ ಸುಖದಿಂದ ರಾಜ್ಯಪರಿಪಾಲನಮಾಡುತ್ತಿರಲು ಒಂದುದಿನ ದ್ವಾರಾವತಿಗೆ ಓರ್ವ ಹಡಗಿನ ವ್ಯಾಪಾರಿಯು ಬಂದು ಆ ನಗರವನ್ನು ನೋಡಿ "ಅಮರಾವತಿಗೆ ಸದೃಶವಾದ ಇಂತಹ ಪಟ್ಟಣವು ಈ ಭೂಲೋಕದಲ್ಲಿಲ್ಲ" ಎಂದು ಬಹಳವಾಗಿ ಹೊಗಳುತ್ತ ಅರಮನೆಯ ಬಾಗಿಲಿಗೆ ಬಂದು ಸಮಯವನ್ನು ನೋಡಿ ಒಳಕ್ಕೆ ಪ್ರವೇಶಿಸಿ ದ್ವಾರಪಾಲಕರ ಮೂಲಕ ಕೃಷ್ಣನ ಆಸ್ಥಾನಕ್ಕೆ ಹೋಗಿ ಕೃಷ್ಣನನ್ನು ಕಂಡು ಭಯಭಕ್ತಿಯಿಂದ ನಮಸ್ಕರಿಸಿ ತಾನು ತಂದಿದ್ದ ಉತ್ತಮ ವಸ್ತುಗಳನ್ನು ಕೈಗಾಣಿಕೆಯಿತ್ತನು. ಕೃಷ್ಣನು ಅತನಿಗೆ ಉಚಿತಾಸನವನ್ನು ಕೊಡಿಸಿ ಪ್ರೇಮದಿಂದ ಮಾತನಾಡಿಸಿ ಅವನಿಗೆ ಅನರ್ಘ್ಯವಾದ ರತ್ನಗಳನ್ನು ಬಹುಮಾನ ಕೊಟ್ಟನು. ಅದರಿಂದ ಆ ವೈಶ್ಯನು ಬಹು ಸಂತುಷ್ಟನಾಗಿ ಬೀಳ್ಕೊಂಡು ಆ ನಗರ ದಲ್ಲಿ ಕೆಲವು ದಿನವಿದ್ದು ಬಳಿಕ ಅಲ್ಲಿಂದ ಹೊರಟು ಮಗಧೇಶ್ವರನ ಪಟ್ಟಣಕ್ಕೆ ಬಂದು ಅರಮನೆಯ ಶೋಭೆಯನ್ನು ನೋಡುತ್ತ ದ್ವಾರಪಾಲಕರ ಮೂಲಕ ಜರಾಸಂಧ ಚಕ್ರೇಶ್ವರನ ಆಸ್ಥಾನಕ್ಕೆ ಹೋಗಿ ಅವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಕೃಷ್ಣನು ತನಗೆ ಉಡುಗೊರೆಯಿತ್ತ ಅನರ್ಘ್ಯರತ್ನಗಳನ್ನು ಕಾಣಿಕೆಯಿತ್ತನು. ಜರಾಸಂಧನು ಆ ರತ್ನಗಳನ್ನು ನೋಡಿ ಅಚ್ಚರಿವಟ್ಟು ತಲೆದೂಗಿ ಬಳಿಕ "ಈ ರತ್ನ ಗಳು ನಿನಗೆಲ್ಲಿ ದೊರೆತುವು?" ಎಂದು ಆ ವೈಶ್ಯನನ್ನು ಕೇಳಲು ಅವನು "ಸಮು ದ್ರದ ಮಧ್ಯದಲ್ಲಿ ಶೋಭಿಸುವ ದ್ವಾರಾವತಿಯಲ್ಲಿ ಮಹಾಬಲಶಾಲಿಗಳೂ ಸುಂದ ರರೂ ಉತ್ತಮರೂ ಧೀರೋದಾತ್ತರೂ ಆದ ನೇಮಿಶ್ವರ, ಸಮುದ್ರವಿಜಯ, ವಸುದೇವ, ಬಲರಾಮ, ವಾಸುದೇವ ಮೊದಲಾದ ರಾಜಕುಮಾರರು ಇರುತ್ತಾರೆ. ಅವರು ನನಗೆ ಈ ರತ್ನಗಳನ್ನು ಪ್ರೀತಿಯಿಂದಿತ್ತರು" ಎಂದನು. ಆ ಮಾತನ್ನು ಕೇಳಿ ಕೃಷ್ಣಾದಿಗಳ ಮೇಲೆ ಬಹುಕೋಪಾವಿಷ್ಟನಾಗಿ ಮೊದಲು ತನಗೆ ಹೆದರಿ ಅಗ್ನಿಕುಂಡ ದಲ್ಲಿ ಬಿದ್ದು ಸತ್ತರೆಂಬ ಮಾತು ಸುಳ್ಳಾಯಿತೆಂದು ಬಗೆದು "ನನಗೆ ಇದಿರಾಗಲಾರದೆ ಸಮುದ್ರವನ್ನು ಹೊಕ್ಕಿರುತ್ತಾರೆ. ಆ ಸಮುದ್ರವನ್ನು ತುಳುಕಿ ಅವರ ತಲೆಗಳನ್ನು ಚೆಂಡಾಡದಿದ್ದರೆ ನನಗಿದು ಮಿಾಸೆಯಲ್ಲ" ಎನುತ ಆ ವೈಶ್ಯನಿಗೆ ಬಹಳವಾಗಿ

ಯಲ್ಲಲ್ಲದೆ ಸಾಧ್ಯವಾಗದು" ಎನಲು ಧರ್ಮರಾಜನು "ಯುದ್ಧಮಾಡದೆ ರಾಜ್ಯವನ್ನು ಕೊಡೆನೆಂಬುದು ಕೌರವನ ಸಂಕಲ್ಪ. ಆದರೆ ಸಹೋದರರನ್ನು ಕಾದಿ ಕೊಂದು ಧರ್ಮರಾಜನು ರಾಜ್ಯವನ್ನು ಬೆಳೆಸಿದನೆಂಬ ಅಪವಾದವನ್ನು ಹೇಗೆ ಕಳೆವೆನು?" ಎನಲು ಭೀಮಾರ್ಜುನ ನಕುಲಸಹದೇವರು ಕ್ರುದ್ಧರಾಗಿ 'ಅಣ್ಣನೆ! ನೀನು ಹೀಗಿರು. ಆ ದುರ್ಯಶಸ್ಸನ್ನು ನಾವು ಹೊಂದುವೆವು. ನಿನ್ನ ಉತ್ತಮವಾದ ಸತ್ಯವನ್ನು ಕಾಪಾಡಲು ಇದುವರೆಗೂ ನಾವು ಸೈರಿಸಿದೆವಲ್ಲದೆ ಕೌರವನೊಡನೆ ಯುದ್ಧಮಾಡಲು ಸೈರಿಸುವೆವೇ? ಕೃತ್ರಿಮೋಪಾಯದಿಂದ ನಮ್ಮನ್ನು ಕೊಲ್ಲುವುದಕ್ಕಾಗಲಿಲ್ಲ. ಆ ಕಪಟಿ ಕೌರವನು ದುರ್ಧರವಾದ ಯುದ್ಧರಂಗದಲ್ಲಿ ನಮ್ಮನ್ನು ಗೆಲುವುದು ನಿಜವೇ?" ಎಂದರು. ಆಗ ಬಲರಾಮನು ಕೃಷ್ಣನನ್ನು ಕುರಿತು "ಈ ಪಾಂಡವರ ನಿಮಿತ್ತದಿಂದ ನಮಗೆ ಆ ಜರಾಸಂಧನೊಡನೆ ಯುದ್ಧವು ನಡೆಯುದಿರದು" ಎಂದು ನುಡಿದು ಅವರು ಯುದ್ಧಸನ್ನಾಹವನ್ನು ಮಾಡತೊಡಗಿದರು. ಅತ್ತ ಜರಾಸಂಧಚಕ್ರವರ್ತಿಯು ಕನಲಿ ಯುದ್ಧಭೇರಿಯನ್ನು ಹೊಯ್ಸಲು ಆಗ ಅವನ ಅಪರಿಮಿತವಾದ ಸೈನ್ಯವು ನೇರಿತು. ಆಗ ಜರಾಸಂಧನು ಯಾದವರೊಡನೆ ಯುದ್ಧಕ್ಕಾಗಿ ಹೊರಡಲು ವಾಚಸ್ಪತಿಯೆಂಬ ಓರ್ವ ಮಂತ್ರಿಯು ಬಂದು "ಎಲೈ ರಾಜನೆ! ಯಾದವರು ನಿನಗಿದಿರಾಗಲಾರದೆ ಹೋಗಿ ಸಮುದ್ರದಲ್ಲಿ ಮನೆಮಾಡಿಕೊಂಡು ತಲೆಮರೆಸಿಕೊಂಡಿರುವರು. ಅಂತಹವರಲ್ಲಿ ನೀನು ಕೋಪಮಾಡುವುದೇ?' ಎಂದನು. ಆ ಮಂತ್ರಿಯನ್ನು ಕುರಿತು ಜರಾಸಂಧನು "ಅವರಿಗೆ ಸಮುದ್ರವು ಹೇಗೆ ಅವಕಾಶಕೊಟ್ಟಿತು?" ಎನಲು, ಮಂತ್ರಿಯು "ದೇವೇಂದ್ರನು ದಯೆಯಿಂದ ಅವರ ಬಳಿಗೆ ಬಂದು ಸಮುದ್ರದ ನೀರನ್ನು ಬಗಿದು ದ್ವಾರಾವತಿಯೆಂಬ ಪಟ್ಟಣವನ್ನು ನಿರ್ಮಿಸಿ ಯಾದವರಿಗಿತ್ತನು" ಎಂದನು. ಅದಕ್ಕೆ ಜರಾಸಂಧನು "ದೇವೇಂದ್ರನು ಆ ಪಟ್ಟಣವನ್ನು ರಚಿಸಿ ಕೊಡುವುದಕ್ಕೆ ಅವರ ಮಹಿಮೆಯೇನು?' ಎನಲು ಆ ಮಂತ್ರಿಯು "ಹರಿಯ ಪುಣ್ಯವನ್ನೇನೆಂದು ಹೇಳಲಿ? ನಿನ್ನ ಅಳಿಯನು ಅವನ ಆರುಮಂದಿ ಸಹೋದರರನ್ನು ಕೊಂದು ಮತ್ತೆ ಅವನನ್ನೂ ಕೊಲ್ಲಲು ದೇವತೆಗಳನ್ನು ಕಳುಹಿದನು. ಅವುಗಳನ್ನೆಲ್ಲ ನಾಶಮಾಡಿ ಏಳುದಿನಗಳವರೆಗೆ ಗೋವರ್ಧನಗಿರಿಯನ್ನೆತ್ತಿ ಕಾಳಿಂಗಸರ್ಪವನ್ನು ಕೊಂದು ಸಹಸ್ರದಳಕಮಲವನ್ನು ತಂದು ಉರಗಶಯ್ಯೆಯನ್ನೇರಿ, ಶಾರ್ಙ್ಗಧನುಸ್ಸನ್ನೇರಿಸಿ ಪಾಂಚಜನ್ಯವನ್ನು ಊದಿ ಚಾಣೂರಮಲ್ಲನನ್ನು ಮಲ್ಲಯುದ್ಧದಲ್ಲಿ ಕೊಂದು ನಿನಗೆ ಅಂಜಿ ಹೋಗುವಾಗ ನಿನ್ನ ಮಹಾಸೈನ್ಯವು ಅವರನ್ನು ಹಿಂಬಾಲಿಸಲು ಅವರ ಸುಕೃತ

ದೇವತೆಯು ಅಗ್ನಿಕುಂಡದಲ್ಲಿ ಅವರು ಕಳೆದಂತೆ ನಿನ್ನವರಿಗೆ ತೋರಿಸಿ ಅಲ್ಲಿಂದ ಅವರನ್ನು ಕಳುಹಿಸಿಕೊಟ್ಟಿತು. ಆಗ ದೇವೇಂದ್ರನು ಬಂದು ಸಮುದ್ರವಿಜಯರಿಗೆ ನೇಮಿತೀರ್ಥಂಕರರು ಉದಯಿಸುವುದರಿಂದ ದ್ವಾರಾವತಿಯನ್ನು ನಿರ್ಮಿಸಿ ಆ ಯಾದವರನ್ನು ಅಲ್ಲಿರಿಸಿದನು. ಕೃಷ್ಣನು ದ್ವಾರಾವತಿಯಲ್ಲಿದ್ದು ಶಿಶುಪಾಲನನ್ನು ಸಂಹರಿಸಿ ವಿಜಯಾರ್ಧಗಿರಿಗೆ ಹೋಗಿ ಜಾಂಬವರಾಜನನ್ನು ಕೊಂದು ಆತನ ಪುತ್ರಿ ಜಂಬಾವತಿಯನ್ನು ವಿವಾಹಮಾಡಿಕೊಂಡು ಧಾತಕೀಖಂಡದ್ವೀಪಕ್ಕೆ ಹೋಗಿ ಶಂಖನಾದವನ್ನು ಮಾಡಿ, ಶಂಖಚಕ್ರಿಗೆ ಕದನೇಚ್ಛೆಯನ್ನುಂಟುಮಾಡಿ ಸುಪ್ರಸಿದ್ಧನಾಗಿರುವನು. ಮಹಾಪರಾಕ್ರಮಿಯೂ ತದ್ಭವಮೋಕ್ಷಗಾಮಿಯೂ ಆದ ಈ ಕಾಲದ ಮನ್ಮಥನು ಅವನ ಪುತ್ರನು. ಸಮುದ್ರವಿಜಯಮಹಾರಾಜನ ಪುತ್ರನು ನೇಮಿಕುಮಾರ. ವಸುದೇವ, ಬಲರಾಮ, ಪಾಂಡವರು ಮೊದಲಾದ ವೀರರು ಆ ಹರಿಯ ಜೊತೆಯಲ್ಲಿ ಸೇರಿರುತ್ತಾರೆ. ಇಂತಹ ಸಹಾಯ ಸಂಪತ್ತಿಯನ್ನು ಹೊಂದಿರುವ ಕೃಷ್ಣನು ನಿನಗಿದಿರಾಗಲಾರದೆ ಸಮುದ್ರವನ್ನು ಹೊಕ್ಕು ನಿಶ್ಚಿಂತೆಯಾಗಿ ಬಾಳುತ್ತಿದ್ದಾನೆ" ಎಂದನು. ಆ ಮಾತನ್ನು ಕೇಳಿ ಜರಾಸಂಧನು ಕೋಪದಿಂದ ಗದ್ದುಗೆಯನ್ನು ಹೊಯ್ದೆದ್ದು ಆನೆಯನ್ನೇರಿ ಪುರದ್ವಾರಕ್ಕೆ ಬಂದು ನಿಂತನು. ಆಗ ಅವನ ಅಧೀನರಾಜರು ಕೈಮುಗಿದು ತಮ್ಮ ಪೌರುಷವನ್ನು ಹೇಳಿಕೊಂಡು ತಾವು ಹೋಗಿ ಓರ್ದೋರ್ವರೇ ಗೆದ್ದುಬರುವೆವೆಂದೂ ತಮಗೆ ಅನುಜ್ಞೆಯನ್ನೀಯಬೇಕೆಂದೂ ಹೇಳಲು, ಮಗಧೇಶ್ವರನು ಅವರ ಮುಖವನ್ನು ನೋಡಿ ನಸುನಕ್ಕು ತನ್ನ ಇಪ್ಪತ್ತುನಾಲ್ಕು ಸಾವಿರ ಅಕ್ಷೋಹಿಣೀಬಲದೊಡನೆಯೂ ಹದಿನಾರುಸಾವಿರ ಮಕುಟಬದ್ಧರಾದ ಅಧೀನರಾಜರೊಡನೆಯೂ ಷಡಂಗಸೈನ್ಯಸಮೇತನಾಗಿ ಹೊರಟು ಕುರುಜಾಂಗಣದೇಶಕ್ಕೆ ಬಂದು ಬೀಡಬಿಡಿಸಿದನು. ಆ ಸಮಾಚಾರವನ್ನು ಕೇಳಿ ಕೌರವೇಶ್ವರನು "ನನ್ನ ವೈರಿಗಳಾದ ಪಾಂಡವರೊಡನೆ ಕೂಡಿಕೊಂಡಿರುವ ಯಾದವರಿಗೆ ಜರಾಸಂಧಚಕ್ರವರ್ತಿಯಿಂದ ಈಗ ಕೇಡು ಸಂಭವಿಸಿರುವುದು. ಇದು ನನ್ನ ಪುಣ್ಯದ ಫಲ. ಇದೇ ನನಗೆ ಸಮಯ" ಎಂದು ತನ್ನ ಸೈನ್ಯಸಮೇತನಾಗಿ ಜರಾಸಂಧನಿಗಿದಿರಾಗಿ ಬಂದು ಅವನನ್ನು ಕುರಿತು "ಎಲೈ ಪ್ರಭುವೆ! ಈ ಸ್ವಲ್ಪ ಕಾರ್ಯಕ್ಕಾಗಿ ನೀನು ದಂಡೆತ್ತಿ ಹೋಗಬೇಕೇ? ನನ್ನನ್ನು ಕರೆಸಿ ಆಜ್ಞೆಮಾಡಿದ್ದರೆ ನಿನ್ನ ಇಷ್ಟಾರ್ಥವನ್ನು ನೆರವೇರಿಸುತ್ತಿದ್ದೆನು" ಎನಲು, ಜರಾಸಂಧನು "ಎಲೈ ಕುರುಪತಿಯೆ! ಸೈನ್ಯದಲ್ಲಿಯೂ ಬಾಹುಬಲದಲ್ಲಿಯೂ ಬಂಧುಸಂಪತ್ತಿಯಲ್ಲಿಯೂ ನಿನಗೆ ಸಮನಾದವರು ಯಾರಿರುವರು? ಅದರಿಂದಲೇ

ನಿನ್ನ ಈ ಮಾತು ಸಹಜವಾಗಿದೆ'' ಎಂದು ಅವನನ್ನು ಹೊಗಳಿದನು. ಮರುದಿನ ಸೈನ್ಯವೆಲ್ಲವೂ ಮುಂದೆ ಹೊರಡಲನುವಾಯಿತು. ಆಗ ನಾರದರು ಆಕಾಶದಿಂದಿಳಿದು ಬರಲು ಜರಾಸಂಧನು ಎದ್ದು ಅವರಿಗೆ ನಮಸ್ಕರಿಸಿ "ನಾರದಮುನಿಗಳೆ! ತಮ್ಮಿಂದ ಒಂದು ಕಾರ್ಯವಾಗಬೇಕು. ತಾವೀಗಲೇ ದ್ವಾರಾವತಿಗೆ ಹೋಗಿ ಆ ಕೃಷ್ಣಬಲರಾಮರು ನನ್ನೊಡನೆ ಯುದ್ಧಮಾಡಲು ಶಕ್ತಿಯಿದ್ದರೆ ಯುದ್ಧಮಾಡಲಿ; ಇಲ್ಲವಾದರೆ ಬಂದು ನನಗೆ ಶರಣಾಗತರಾಗಲಿ. ಈ ವಿಚಾರವನ್ನು ಅವರಿಗೆ ತಿಳಿಸಬೇಕು'' ಎಂದನು. ಅದಕ್ಕೆ ನಾರದರು ಸಮ್ಮನಕ್ಕು ಹಾಗೆಯೇ ಮಾಡುವೆನೆಂದು ಹೇಳಿ ಆಕಾಶಮಾರ್ಗದಿಂದ ದ್ವಾರಾವತಿಗೆ ಬಂದು ಕೃಷ್ಣಬಲರಾಮರನ್ನು ಕಾಣಲು ಅವರು ಎದ್ದು ಅವರ ಪಾದಗಳಿಗೆ ನಮಸ್ಕಾರಮಾಡಿದರು. ನಾರದರು ಅವರನ್ನು ಆಶೀರ್ವದಿಸಿ "ಎಲೈ ಕೃಷ್ಣನೆ! ಜರಾಸಂಧಚಕ್ರವರ್ತಿಯು ತನ್ನ ಜಯಶ್ರೀಯನ್ನು ನಿನಗೆ ಕೊಡಬೇಕೆಂದು ದಂಡೆತ್ತಿಬಂದು ಕುರುಭೂಪತಿಯ ರಾಜ್ಯದಲ್ಲಿ ಬೀಡುಬಿಟ್ಟುಕೊಂಡಿರುವನು. ಇದಕ್ಕೆ ತಕ್ಕುದನ್ನು ನೀವೇಬಲ್ಲಿರಿ' ಎಂದು ಹೇಳಿ ಅವರನ್ನು ಬೀಳ್ಕೊಂಡು ಹೊರಟುಹೋದರು. ಇತ್ತ ಕೃಷ್ಣನು "ಕಾರಣವಿಲ್ಲದೆ ದಂಡೆತ್ತಿಬಂದಿರುವ ಜರಾಸಂಧನ ತಲೆಯನ್ನು ಕತ್ತರಿಸುವೆನು'' ಎಂದು ಕೋಪದಿಂದ ನುಡಿಯಲು ಅದಕ್ಕೆ ಬಲರಾಮನು ಕೃಷ್ಣನನ್ನು ಕುರಿತು "ಎಲೈ ಕೃಷ್ಣನೆ! ಚಕ್ರದ ಸಹಾಯದಿಂದ ಭೂಚಕ್ರವನ್ನು ಜಯಿಸಿದಮಾತ್ರಕ್ಕೆ ಜರಾಸಂಧನ ಸಾಹಸವು, ಬೆರಳಿನಿಂದ ಬೆಟ್ಟವನ್ನೆತ್ತಿದ ನಿನ್ನ ಸಾಹಸಕ್ಕೆ ಸಮನಾಗುವುದೇ?'' ಎಂದನು. ಅನಂತರ ಎಲ್ಲರೂ ತಮ್ಮ ಇಷ್ಟಾರ್ಥವನ್ನು ನೆರವೇರಿಸಲೆಂದು ಶ್ರೀ ನೇಮೀಶ್ವರನಿಗೆರಗಿ ಬೀಳ್ಕೊಂಡರು.

ಕೃಷ್ಣಬಲರಾಮರು ಸಮುದ್ರವಿಜಯರಿಗೆ ನಮಸ್ಕಾರಮಾಡಲು ಅವರು ಅವರನ್ನು ಹರಸಿ "ಎಲೆ ಮಕ್ಕಳಿರಾ! ನೀವಿರ್ವರು ಈಕಾಲದ ಬಲದೇವ ವಾಸುದೇವರುಗಳು. ಆ ಪ್ರತಿವಾಸುದೇವನಾದ ಜರಾಸಂಧನ ಚಕ್ರವು ನಿಮ್ಮ ಕೈಸೇರಿ, ಅದರಿಂದಲೇ ಅವನ ತಲೆಯನ್ನು ತರಿದು ನೀವು ಅತ್ಯಂತ ಖ್ಯಾತಿಯಿಂದ ರಾಜ್ಯಭಾರ ಮಾಡುವಿರಿ. ಇದು ಶಾಸ್ತ್ರಸಿದ್ಧವಾದ ಮಾತು'' ಎಂದು ಹೇಳಲು ಬಲಾಚ್ಯುತರು ಮತ್ತೊಮ್ಮೆ ಅವರಿಗೆ ನಮಸ್ಕಾರಮಾಡಿ, ನೇಮಿಕುಮಾರನ ಬಳಿಯಲ್ಲಿರುವಂತೆ ಹೇಳಿ ಬಳಿಕ ಶ್ರೀ ನೇಮೀಶ್ವರರಿಗೂ, ಹಿರಿಯರಿಗೂ ನಮಸ್ಕಾರಮಾಡಿ, ಅವರ ಅಪ್ಪಣೆಯನ್ನು ಹೊಂದಿ, ಯುದ್ಧಭೇರಿಯನ್ನು ಹೊಯ್ಸಿ ಯುದ್ಧಸನ್ನದ್ಧರಾಗಿ ಹೊರಟರು. ಧರ್ಮರಾಜನೂ ಅವನ ಸಹೋದರರೂ ತಮ್ಮ ಸಮಸ್ತ

ಸೈನ್ಯದೊಡನೆ ಹೊರಟರು. ಹೀಗೆ ಪಾಂಡವರು, ಮನ್ಮಥ, ಸಮಸ್ತ ಹರಿವಂಶದ ರಾಜರುಗಳು ಇವರುಗಳೊಡನೆ ಕೂಡಿಕೊಂಡು ಕೃಷ್ಣಬಲರಾಮರು ಆನೆಗಳನ್ನೇರಿ ಶುಭಶಕುನಗಳುಂಟಾಗುತ್ತಿರಲು ದ್ವಾರಾವತಿಯಿಂದ ಹೊರಟುಹೋಗಿ ಜರಾಸಂಧ ಚಕ್ರವರ್ತಿಯ ಬೀಡಿಗೆ ಸ್ವಲ್ಪದೂರದಲ್ಲಿ ಸೈನ್ಯವನ್ನುಬಿಟ್ಟರು. ಆಗ ವಿಜಯಾರ್ಧಗಿರಿ ಯಿಂದ ಬಂದ ದೂತನೊಬ್ಬನು ಕೃಷ್ಣನನ್ನುಕಂಡು ನಮಸ್ಕರಿಸಿ "ಎಲೈ ರಾಜನೆ! ನಿಮಗೊದಗಿರುವೀಯುದ್ಧದಲ್ಲಿ ನಿಮಗೆ ಸಹಾಯಕರಾಗಿ ಬಂದು ಸೇರಬೇಕೆಂದು ಹೊರಟಿದ್ದ ಕಾಳಶಂಬರ ಮೊದಲಾದ ಖೇಚರರಾಜರನ್ನು ಜರಾಸಂಧನ ಸಾಮಂತರಾ ದರಾದ ಕೆಲವರು ಖೇಚರರು ತಡೆದು ನಿಲ್ಲಿಸಿರುತ್ತಾರೆ" ಎನಲು, ಆ ವಿಷಯವನ್ನು ಕೃಷ್ಣನು ಬಲರಾಮನೊಡನೆ ಆಲೋಚಿಸಿ ವಸುದೇವ ಮನ್ಮಥ ಶಂಭುಕುಮಾರ ಇವರುಗಳನ್ನು ವಿಜಯಾರ್ಧಗಿರಿಗೆ ಕಳುಹಿಸಿಕೊಟ್ಟನು. ಅಷ್ಟು ಹೊತ್ತಿಗೆ ಮಗಧ ಚಕ್ರೇಶ್ವರನು ಅಳಿಯುವನೆಂಬುದನ್ನು ತೋರಿಸುತ್ತಾನೋ ಎನ್ನುವ ಹಾಗೆ ಸೂರ್ಯನು ಅಸ್ತಮಿತನಾದನು. ಉಭಯಪಕ್ಷದವರೂ ತಂತಮ್ಮ ಬೀಡಿನಲ್ಲಿ ರಾತ್ರಿಯನ್ನುಕಳೆದರು.



## ೨೭. ಪ್ರಥಮಕಾಳಗ ಸಂಧಿ



ಮಗಧೇಶ್ವರನಾದ ಜರಾಸಂಧ ಮತ್ತು ಮಧುಮಥನನಾದ ಕೃಷ್ಣ ಇವರು ಗಳ ಯುದ್ಧವನ್ನು ನೋಡಬೇಕೆಂಬ ಅಪೇಕ್ಷೆಯಿಂದಲೋ ಎಂಬಂತೆ ಸೂರ್ಯನು ಉದಯಿಸಲು ಜರಾಸಂಧಚಕ್ರವರ್ತಿಯು ನಿತ್ಯಕರ್ಮಗಳನ್ನು ತೀರಿಸಿಕೊಂಡು ಕೌರವೇಶ್ವರನ ಅನುಮತಿಯಿಂದ ಶೂರನಾದ ಕರ್ಣನಿಗೆ ವೀರಪಟ್ಟವನ್ನು ಕಟ್ಟಿದನು. ಇತ್ತ ಕೃಷ್ಣನು ಅರ್ಜುನನಿಗೆ ವೀರಪಟ್ಟವನ್ನು ಕಟ್ಟಿದನು. ಉತ್ತಮವಾಗಿ ಶೃಂಗ ರಿಸಿದ ಆನೆಯನ್ನೇರಿ ಜರಾಸಂಧನು ತನ್ನ ಸಮಸ್ತ ರಾಜಚಿಹ್ನೆಗಳೊಡನೆ ಯುದ್ಧ ಭೂಮಿಗೆ ಹೊರಟನು. ಆಗ ಅಶುಭಸೂಚನೆಗಳಾಗುತ್ತಿದ್ದರೂ ಗಮನಿಸದೆ ಯುದ್ಧ ರಂಗಕ್ಕೆ ಬಂದು ಕರ್ಣನನ್ನು ಕರೆಸಿ, ಸೈನ್ಯವನ್ನು ಸಾವಿರ ಎಸಳುಗಳುಳ್ಳ ತಾವರೆ

ಯಂತೆ ರಚಿಸೆಂದು ಹೇಳಿದನು. ಆಗ ಕರ್ಣನು ಶಲ್ಯ, ಶಕುನಿ, ದ್ರೋಣ, ಭೂರಿಸ್ರವ, ಕೃಪ, ಕೃತವರ್ಮ, ವೀರಧ್ವಜ, ಸೋಮದತ್ತ, ಸುಶರ್ಮ, ಕೌರವ, ಜಯದತ್ತ, ಬಾಣಾಸುರ, ವೃಷಭಧ್ವಜ, ವಿಂಧ್ಯ, ವಿಕರ್ಣ, ತಾರಕ, ಪುರಂದರ, ದುರ್ದರ್ಶನ, ದುಶ್ಶಾಸನ, ದುಂದುಭಿ, ಕನಕಧ್ವಜ ಮೊದಲಾದ ರಾಜರನ್ನು ಕಮಲದ ಕರ್ಣಿಕೆಯಂತೆ ನಿಲಿಸಿದನು. ಅಜಿತಂಜಯ, ಅಪರಾಜಿತ, ಸಿಹ್ಮಧ್ವಜ ಮೊದಲಾದರಸುಗಳನ್ನು ಸುತ್ತಲೂ ನಿಲ್ಲಿಸಿ ಮಧ್ಯದಲ್ಲಿ ಗಜಾರೂಢನಾದ ಚಕ್ರವರ್ತಿಯನ್ನು ಇರಿಸಿ, ಅವನ ತಲೆಯ ಮೇಲುಗಡೆಯಲ್ಲಿ ಚಕ್ರರತ್ನವನ್ನಿರಿಸಿ ಸುತ್ತಲೂ ಖೇಚರರಾಜರನ್ನು ಅವನಿಗೆ ಕಾವಲಿಟ್ಟು ಭೇದಿಸುವುದಕ್ಕಾಗದಂತೆ ಸಮಸ್ತಸೈನ್ಯವನ್ನು ಜೋಡಿಸಿದನು.

ಇತ್ತ ಅಚ್ಯುತನು, ಶೂರನಾದ ಕೃಷ್ಣನೆಂಬವನನ್ನು ಅರ್ಜುನನಿಗೆ ಸಾರಥಿಯನ್ನಾಗಿ ನಿಯಮಿಸಿ ಸೈನ್ಯದಿಂದ ಗರುಡಾಕಾರವಾದ ವ್ಯೂಹವನ್ನು ರಚಿಸುವಂತೆ ಹೇಳಿದನು. ಅರ್ಜುನನು ಜಯ, ವಿಜಯ, ಪಾಂಚಾಲ ಮೊದಲಾದ ರಾಜರನ್ನು ಅವರವರ ಸೇನೆಯೊಡನೆ ಗರುಡನ ಎಡದ ರೆಕ್ಕೆಯಂತೆಯೂ, ಧರ್ಮರಾಜ, ಭೀಮ, ನಕುಲ, ಸಹದೇವ, ಮತ್ಸ್ಯರಾಜ, ಅಭಿಮನ್ಯು, ವಿಂಧ್ಯಕ, ಘಟೋದ್ಗಜ ಮೊದಲಾದವರನ್ನು ಅವರ ಸೇನೆಯೊಡನೆ ಬಲದ ರೆಕ್ಕೆಯಂತೆಯೂ, ನೇಮಿರಥ, ಸಾಗರಚಂದ್ರ, ದೃಢರಥ, ಚಿತ್ರಭಾನು ಮೊದಲಾದರಸುಗಳನ್ನು ಕೊಕ್ಕಿನಂತೆಯೂ, ಸೋಮದೇವ ಮೊದಲಾದ ರಾಜರನ್ನು ಕೊರಳಿನಂತೆಯೂ, ದೇವಸೇನ, ದೀಪಾಯನ ಮೊದಲಾದ ಅರಸರನ್ನು ಬಾಲದಂತೆಯೂ ನಿಲಿಸಿ, ಮಧ್ಯದಲ್ಲಿ ಗಜಾರೂಢನಾದ ಕೃಷ್ಣನನ್ನೂ ಅದರ ಉದರ ಮಧ್ಯದಲ್ಲಿ ಗಜಾರೂಢನಾದ ಬಲರಾಮನನ್ನೂ ನಿಲ್ಲಿಸಿ ಉಳಿದ ಖೇಚರ ಭೂಚರ ರಾಜರನ್ನೆಲ್ಲ ಅವರವರ ಸೇನೆಯೊಡನೆ ಆ ಬಲಕೇಶವರ ಉಭಯಪಾರ್ಶ್ವಗಳಲ್ಲಿ ಸ್ಥಾಪಿಸಿದನು. ಆ ಯುದ್ಧವನ್ನು ನೋಡಲಿಚ್ಛೆಯಿಂದ ವ್ಯಂತರರು ಮೊದಲಾದ ದೇವತೆಗಳು ನಭೋಭಾಗದಲ್ಲಿ ಸೇರಿದರು. ಅಸಮಸಾಹಸಿಗಳಾದ ಕರ್ಣಾರ್ಜುನರು ಯುದ್ಧಸನ್ನದ್ಧರಾಗಿ ಸೈನ್ಯಕ್ಕೆ ಅಪ್ಪಣೆಯನ್ನು ಕೊಟ್ಟೊಡನೆಯೇ ಯುದ್ಧವು ಪ್ರಾರಂಭವಾಯಿತು. ಪ್ರಳಯಕಾಲದಲ್ಲಿ ಪೂರ್ವ ಪಶ್ಚಿಮ ಸಮುದ್ರಗಳು ಒಂದನ್ನೊಂದು ತಾಗುವಂತೆ ಉಭಯ ಪಕ್ಷದ ಸೇನೆಗಳು ಒಂದರಮೇಲೊಂದು ಬಿದ್ದುವು. ಆನೆಯವರು ಆನೆಯವರೊಡನೆಯೂ, ಕುದುರೆಯವರು ಕುದುರೆಯವರೊಡನೆಯೂ, ಭಟರು ಭಟರೊಡನೆಯೂ ಹೋರಾಡಲಾರಂಭಿಸಿದರು. ಉಭಯಪಕ್ಷದ ಬಿಲ್ಲಿಗಾರರಿಂದ ಬಿಡಲ್ಪಟ್ಟ ಬಿಲ್ಲುಗಳು

ಮಧ್ಯಮಾರ್ಗದಲ್ಲಿ ಒಂದಕ್ಕೊಂದು ತಗಲಿ, ಯುದ್ಧರಂಗದ ಮೇಲ್ಭಾಗದಲ್ಲಿ ಚಪ್ಪರ ಗಟ್ಟಿದಂತೆ, ತೋರುತ್ತಿದ್ದಿತು. ಇರ್ಕಡೆಗಳಲ್ಲಿಯೂ ಮಡಿದ ಸೈನಿಕರ ಮತ್ತು ವಾಹನಗಳ ಭಿನ್ನಭಿನ್ನವಾದ ಅಂಗಗಳಿಂದ ಯುದ್ಧರಂಗವು ತುಂಬಿಹೋಗಿ ಭಯಂಕರವಾಗಿ ಕಾಣುತ್ತಿದ್ದಿತು. ಹೀಗೆ ಅತಿಭಯಂಕರವಾಗಿ ಆ ಸಾಯಂಕಾಲದವರೆಗೂ ಯುದ್ಧನಡೆದು, ಜರಾಸಂಧನಕಡೆಯ ಎರಡು ಅಕ್ಷೋಹಿಣೀ ಸೇನೆಯೂ ಕೃಷ್ಣನ ಕಡೆಯ ಒಂದು ಅಕ್ಷೋಹಿಣೀ ಸೇನೆಯೂ ನಾಶವಾದುವು. ಆಗ ಸೂರ್ಯಾಸ್ತವು ಯುವಾಗಲು ಯುದ್ಧವನ್ನು ನಿಲ್ಲಿಸಿ ಎಲ್ಲರೂ ತಂತಮ್ಮ ಪಾಳೆಯಕ್ಕೆ ಹೊರಟು ಹೋದರು.

ಮರುದಿನ ಬೆಳಗಾದೊಡನೆಯೇ ಉಭಯಪಕ್ಷದವರೂ ಯುದ್ಧರಂಗಕ್ಕೆ ಬಂದರು. ಕೃಷ್ಣನು ಅಂದಿನ ಯುದ್ಧಕ್ಕೆ ಉಗ್ರಸೇನರಾಜನಿಗೆ ವೀರಪಟ್ಟಗಟ್ಟಿ, ಅವನ ಸಹಾಯಕ್ಕೆ ಧರ್ಮರಾಜನನ್ನೂ ಶ್ವೇತರಾಜನನ್ನೂ ಕಳುಹಿಸಿದನು. ಜರಾಸಂಧನು, ಶತ್ರುಕ್ಷಯರಾಜನಿಗೆ ವೀರಪಟ್ಟವನ್ನು ಕಟ್ಟಿ ಅವನ ಸಹಾಯಕ್ಕೆ ಕೌರವೇಶ್ವರನನ್ನು ನೇಮಿಸಿದನು. ಕೃಷ್ಣ ಜರಾಸಂಧರು ತಂತಮ್ಮ ಸೈನ್ಯಗಳ ಮಧ್ಯದಲ್ಲಿ ಗಜಾರೂಢರಾಗಿ ಬಂದು ನಿಂತರು. ಯುದ್ಧವು ಪ್ರಾರಂಭವಾಯಿತು. ಶ್ವೇತರಾಜನು ಮಹಾ ಕೋಪದಿಂದ ಭೀಷ್ಮನಮೇಲೆ ಬಿದ್ದು ಅವನನ್ನು ಬಾಣಗಳಿಂದ ಮುಚ್ಚಿದನು. ಅದನ್ನು ಕಂಡು ಭೀಷ್ಮರು ರೇಗಿ ಒಂದೇಬಾಣದಿಂದ ಆ ಶ್ವೇತರಾಜನನ್ನು ಸಂಹರಿಸಿದರು. ಆಗ ಉಗ್ರಸೇನರಾಜನು ತನ್ನ ಸೈನ್ಯದೊಡನೆ ಬಂದು ಭೀಷ್ಮರಮೇಲೆ ಬಿದ್ದನು. ಅಷ್ಟರಲ್ಲಿ ಸಾಯಂಕಾಲವಾಗಲು ಯುದ್ಧವನ್ನು ನಿಲ್ಲಿಸಿ ತಂತಮ್ಮ ಬೀಡಿಗೆ ಹೋಗಿ ಸೇರಿದರು.

ಆ ಮರುದಿನ ಬೆಳಗಾದ ಕೂಡಲೆ ಸೈನ್ಯಗಳು ಯುದ್ಧರಂಗಕ್ಕೆ ಬಂದು ಸೇರಿದುವು. ಜರಾಸಂಧನ ಪಕ್ಷದಲ್ಲಿ ಆತನ ಮಗ ಕಾಮದಂತನು ಮುಂದಾಗಿ ಬಂದನು. ಅವನಿಗಿದಿರಾಗಿ ಕೃಷ್ಣನ ಪಕ್ಷದಲ್ಲಿ ಬಲರಾಮನು ನಿಂತು ಹೋರಾಡುತ್ತಿರಲು, ಬಲರಾಮನಿಗಿದಿರಾಗಿ ಭೀಷ್ಮನು ಬಂದು ನಿಂತನು. ಅವನನ್ನು ಹಿಂದಿಕ್ಕಿ ಪರಂತಪನೆಂಬವನು ಮುಂದೆ ಬಂದನು. ಅವನನ್ನು ನೋಡಿ ದ್ರುಪದನು ಒಂದು ಅವನ ಮೇಲೆ ಬಿದ್ದನು. ಪರಂತಪನ ಕೈ ಮೇಲಾದುದನ್ನು ಕಂಡು ಅರ್ಜುನನು ಅವನ ಮೇಲೆ ಬಿದ್ದನು. ಅರ್ಜುನನಿಗಿದಿರಾಗಿ ಶಲ್ಯನು ಬಂದನು. ಅವರೀರ್ವರ ಶರಸಂಧಾನದಿಂದ ಯುದ್ಧಭೂಮಿಯಲ್ಲಿ ಅಂಬುಗಳೇ ತುಂಬಿಹೋಗಿ ಸೂರ್ಯರಶ್ಮಿಯು ಕಾಣದಂತಾಯಿತು. ಬಲರಾಮನೊಡನೆ ಯುದ್ಧಮಾಡುತ್ತಿದ್ದ ಕಾಮದಂ

ತನಿಗೆ ಸಹಾಯಕನಾಗಿ ಅಶನಿಘೋಷರಾಜನು ಬಂದನು. ಅವನನ್ನು ಬಲರಾಮನ ಕಡೆಯ ಅನುಚಾರಣನೆಂಬವನು ಕೊಂದನು. ಅಷ್ಟುಹೊತ್ತಿಗೆ ಸಾಯಂಕಾಲ ವಾಯಿತು. ಯುದ್ಧವನ್ನು ನಿಲ್ಲಿಸಿ ಸೈನ್ಯವೆಲ್ಲವೂ ಪಾಳೆಯಕ್ಕೆ ಹೋಯಿತು.

ಆ ಮರುದಿನ ಪುನಃ ಸೈನ್ಯಗಳೆರಡೂ ಯುದ್ಧಭೂಮಿಗೆ ಬಂದು ಸೇರಿದುವು. ಕದನವು ಪ್ರಾರಂಭವಾಯಿತು. ಸತ್ಯಕನೆಂಬವನು ವಜ್ರಬಾಹುವನ್ನು ಕೊಂದನು. ಜಯದ್ರಥನು ಉತ್ತರನನ್ನು ಸಂಹರಿಸಿದನು. ಮಹಾಪರಾಕ್ರಮಿಯಾದ ವಸು ಪಾಲನು ನಕುಲನೊಡನೆ ಯುದ್ಧಮಾಡಿ ವಿರಥನಾದನು. ದೃಷ್ಟದ್ಯುಮ್ನನೂ ಕೃಪನೂ ಅತ್ಯಂತ ಕೋಪದಿಂದ ಹೋರಾಡಿದರು. ಅಷ್ಟುಹೊತ್ತಿಗೆ ಸಾಯಂ ಕಾಲವಾಯಿತು. ಎಲ್ಲರೂ ಪಾಳೆಯಕ್ಕೆ ಹೋದರು.



## ೨೮. ಅಭಿಮನ್ಯುಕಾಳಗ ಸಂಧಿ



ಆ ಐದನೆಯ ದಿವಸ ಸೂರ್ಯೋದಯಾನಂತರ ಸೈನ್ಯಗಳೆರಡೂ ಯುದ್ಧ ಭೂಮಿಗೆ ಬಂದು ಸೇರಿದುವು. ಕೌರವನು ಅಸುರರಾಜರಾದ ಸಂಸಪ್ತಕರನ್ನು ಕರೆಸಿ ಅಂದಿನ ಯುದ್ಧದಲ್ಲಿ ಅರ್ಜುನನನ್ನು ಕೊಲ್ಲಬೇಕೆಂದು ನಿಯಮಿಸಿದನು. ಅವರು ಮಾಯಾಬಲವನ್ನು ನಿರ್ಮಿಸಿ ತಂದೊಡ್ಡಿದರು. ಆನೆ ಕುದುರೆಗಳಿಗೆ ಬದಲಾಗಿ ಸಿಹ್ಮ, ಶಾರ್ದೂಲ, ಹುಲಿ, ಕರಡಿ ಮೊದಲಾದ ಕ್ರೂರಮೃಗಗಳಿಂದ ಕೂಡಿದ ರಥಗಳನ್ನು ನಿರ್ಮಿಸಿದರು. ಅತ್ಯುನ್ನತಗಳಾದ ಆನೆ ಕುದುರೆಗಳಿಂದಲೂ ಅವುಗಳ ಮೇಲೆ ಅತಿಭಯಂಕರರಾದ ಭಟರುಗಳಿಂದಲೂ ಕೂಡಿರುವ ಸೇನಾಸಮೂಹವು ಬಂದು ನಿಂತಿತು. ಹೀಗೆ ಬಂದುನಿಂತ ಮಾಯಾಬಲವನ್ನು ನೋಡಿ ಅರ್ಜುನನು ಒಂದು ದಿವ್ಯಾಸ್ತ್ರದಿಂದದು ದಿಕ್ಕೆಟ್ಟು ಓಡಿಹೋಗುವಂತೆ ಮಾಡುತ್ತಿರಲು ಇತ್ತ ದ್ರೋಣನು ಚಕ್ರವ್ಯೂಹರೂಪದಲ್ಲಿ ಸೇನಾರಚನೆಯನ್ನು ಮಾಡಿ ಯುದ್ಧಕ್ಕೆ ಅನುಗೊಳಿಸಿದನು. ಅದನ್ನು ಕಂಡು ಧರ್ಮರಾಜನು ಕೃಷ್ಣನೊಡನೆ "ಈ ಚಕ್ರವ್ಯೂಹ ವನ್ನು ಭೇದಿಸಬಲ್ಲ ಅರ್ಜುನನು ರಾಕ್ಷಸಸೇನೆಗೆ ಇದಿರಾದನು. ಬೇರೆ ಯಾರೂ ಇಲ್ಲ' ಎಂದು ಹೇಳುತ್ತಿರುವ ಸಮಯದಲ್ಲಿ ಅಭಿಮನ್ಯುವು ಅಲ್ಲಿಗೆ ಬಂದು ಕೃಷ್ಣ ನಿಗೂ, ಧರ್ಮರಾಜನಿಗೂ ನಮಸ್ಕರಿಸಿ "ಅರ್ಜುನನಲ್ಲದೆ ಮತ್ತಾರೂ ಈ ಚಕ್ರ ವ್ಯೂಹವನ್ನು ಭೇದಿಸಲಾರರೆಂದು ತಾವು ಹೇಳಬಹುದೇ? ನನಗೆ ಅಪ್ಪಣೆಯಾಗಲಿ"

ಎಂದನು. ಆಗ ಧರ್ಮರಾಜನು ಅಭಿಮನ್ಯುವನ್ನು ಕುರಿತು " ಮಗನೆ! ನೀನಿನ್ನೂ ಬಾಲಕನು. ನಿನ್ನನ್ನು ಯಮಪುರಿಯಂತೆ ಗರ್ಜಿಸುತ್ತಿರುವ ಚಕ್ರವ್ಯೂಹಕ್ಕೆ ಕಳು ಹಿಸುವುದು ಯುಕ್ತವೇ? ಇದಕ್ಕೆ ಹೇಗಾದರು ಪ್ರವೇಶಿಸಬಹುದು. ಆದರೆ ಹಿಂದಿರುಗಿ ಬರಲಾಗುವುದಿಲ್ಲ. ಅದರಿಂದ ಈ ಮಾತನ್ನು ಬಿಡು " ಎಂದನು. ಅದಕ್ಕವನು ತಂದೆಯೆ! ಸಿಹ್ಮದ ಮರಿಯು ಆನೆಗಳ ಗುಂಪಿಗೆ ನುಗ್ಗಲು ಹೆದರುವುದೇ ? ಅಗಸ್ತ್ಯಮುನಿಯು ಸಮುದ್ರದ ನೀರನ್ನೆಲ್ಲಾ ಕುಡಿಯಲಿಲ್ಲವೇ ! ನಾನು ಸಣ್ಣವಯಸ್ಸಿನವನಾದರೂ ಇದುವರೆಗೆ ನಾಶವಾಗಿರುವ ಶತ್ರುಸೈನಿಕರಿಗಿಂತ ನೂರರಷ್ಟು ಸೈನಿಕರನ್ನು ನಾನಿಂ ದೊಂದು ದಿನದಲ್ಲಿ ನಾಶಮಾಡಿ ಶತ್ರುರಾಜರನ್ನೆಲ್ಲಾ ಕೊಂದು ಜಯಶೀಲನಾಗಿ ಬರುವೆನು " ಎಂದನು. ಅದನ್ನು ಕೇಳಿ ಧರ್ಮರಾಜನು " ಮಗನೆ! ನಿನ್ನನ್ನು ಯುದ್ಧಕ್ಕೆ ಕಳುಹಿದರೆ ನಿಮ್ಮ ತಂದೆಯು ಮನಸ್ಸು ನೋಯುವದಿಲ್ಲವೇ ? " ಎಂದು ಹೇಳಿದುದಕ್ಕೆ ಅಭಿಮನ್ಯುವು " ತಂದೆಯೆ ! ಇದೇನೀ ಭಿನ್ನವಾದ ಮಾತನಾಡುವಿರಿ ? ನಾನು ಅರ್ಜುನನಿಗೆ ಮಾತ್ರ ಮಗನು. ನಿಮಗೆ ಮಗನಲ್ಲವೇ ? ನೀವು ಅಪ್ಪಣೆ ಯಿತ್ತರೆ ತಂದೆಯು ಅನ್ಯಥಾ ಭಾವಿಸುವನೇ ? ಇಷ್ಟೆಲ್ಲಾ ಪೌರುಷವನ್ನು ಹೇಳಿ ಕೊಂಡು ಹಿಮ್ಮೆಟ್ಟಿದರೆ ನಾನು ಚಂದ್ರವಂಶಜನೇ ? ನಾನು ಕೃಷ್ಣನ ತಂಗಿಯು ಮಗನಲ್ಲವೇ ? ನನ್ನನ್ನು ತಡೆಯಬೇಡಿ. ನೀವು ಅಪ್ಪಣೆ ಕೊಟ್ಟು ಕಳುಹಿ ಅಥವಾ ಕಳುಹದಿರಿ. ನಾನು ನಿಮ್ಮಾಣೆಗೂ ಚಕ್ರವ್ಯೂಹವನ್ನು ಪ್ರವೇಶಮಾಡಿ ಶತ್ರುಗಳ ನ್ನೆಲ್ಲಾ ತುಂಡುತುಂಡು ಮಾಡದೆ ಬಿಡೆನು " ಎಂದು ಹೇಳಿ ನಮಸ್ಕರಿಸಿದ ಅಭಿಮ ನ್ಯುವಿಗೆ ಮನಸ್ಸಿಲ್ಲದಿದ್ದರೂ ಧರ್ಮರಾಜನು ಒಪ್ಪಿಗೆಯಿತ್ತು ಕಳುಹಿದನು. ಯುದ್ಧ ಸನ್ನದ್ಧನಾಗಿ ಹೊರಟಿರುವ ಮಗನನ್ನು ನೋಡಿ ಸುಭದ್ರೆಯು ಕಂಬನಿಗೂಡಿದ ಕಣ್ಣುಗಳುಳ್ಳವಳಾಗಿ ಮಗನನ್ನು ಕುರಿತು " ಮಗನೆ ! ಓರಗೆಯ ಬಾಲಕರ ಜೊತೆ ಯಲ್ಲಿ ಆಟವಾಡುವುದನ್ನು ಬಿಟ್ಟು ಇಂತಹ ಮಹತ್ಕಾರ್ಯಕ್ಕೆ ಮನಸ್ಸುಮಾಡಿ ದೆಯಾ ? ನೀನಿನ್ನೂ ಹಸುಳೆ. ನಿನಗೆ ಯುದ್ಧಕಾರ್ಯವೆಂದರೇನು ? ಯುದ್ಧಮಾಡಲು ಯೋಗ್ಯರಾದ ಪಟುಭಟರೆಷ್ಟೋ ಮಂದಿಗಳಿರುವಾಗ ನೀನೇತಕ್ಕೆ ಈ ಕಾಳಗಕ್ಕೆ ಹೋಗಬೇಕು ? ಹೆತ್ತಹೊಟ್ಟೆಗೆ ದುಃಖವನ್ನು ತಂದು ಹೋಗಬೇಡ " ಎಂದು ಬಹುವಿಧವಾಗಿ ತಡೆದಳು. ಆ ಮಾತನ್ನು ಕೇಳಿ ಅಭಿಮನ್ಯುವು " ಅಮ್ಮಾ ! ನೀವೇ ತಕ್ಕೆ ಯೋಚಿಸುವಿರಿ ? ಕೆಂಡವು ಸಣ್ಣದಾದರೂ ಅರಣ್ಯವನ್ನೆಲ್ಲಾ ಸುಡಲಾರದೇ ? ನಾನು ಸಣ್ಣವಯಸ್ಸಿನವನಾದರೂ ಶತ್ರುಸೈನ್ಯವನ್ನೆಲ್ಲಾ ನಾಶಮಾಡಲಾರನೇ ? ನಾನು ಯುದ್ಧೋತ್ಸಾಹಿಯಾಗಿ ಹೊರಟು ಹಿಮ್ಮೆಟ್ಟಿದರೆ ನಮ್ಮ ಕುಲಕ್ಕೆ ಕುಂದು

ಬರುವುದಿಲ್ಲವೇ ? ತಾಯೀ ! ತಾವೇನೂ ವ್ಯಸನಪಡಬೇಕಾದುದಿಲ್ಲ. ನಾನು ಹೋಗಿ ಶತ್ರುಗಳನ್ನೆಲ್ಲಾ ಜಯಿಸಿ ಆ ಕೌರವನ ಮಕ್ಕಳನ್ನೆಲ್ಲಾ ಯಮನ ಬಾಯಿಗಿಕ್ಕಿ ಹಿಂದಿರುಗುವೆನು " ಎಂದು ಹೇಳಿ ತನ್ನೋರಗೆಯರಸುಮಕ್ಕಳನ್ನು ಸೇರಿಸಿಕೊಂಡು, ದಿವ್ಯವಾದ ರಥವನ್ನೇರಿ ಯುದ್ಧರಂಗಕ್ಕೆ ಹೊರಟನು. ಹೀಗೆ ಧೈರ್ಯದಿಂದ ಯುದ್ಧಕ್ಕೆ ಬರುತ್ತಿರುವ ಅಭಿಮನ್ಯುವನ್ನು ನೋಡಿ ದ್ರೋಣನು ತನ್ನ ರಥವನ್ನು ಅಭಿಮನ್ಯುವಿಗಿದಿರಾಗಿ ನೂಂಕಿ ಅವನನ್ನು ಕುರಿತು " ಎಲೆ ಮಗು ! ಅಸಹಾಯಶೂರರಾದ ಅನೇಕ ಸುಭಟರಿದ್ದರೂ ನಿನ್ನನ್ನು ಈ ಯುದ್ಧಕ್ಕೆ ಕಳುಹಿಸಿದರೇ ? ಈ ಚಕ್ರವ್ಯೂಹವನ್ನು ಪ್ರವೇಶಿಸುವುದೇ ಕಷ್ಟವು. ಒಂದುವೇಳೆ ಪ್ರವೇಶಿಸಿದರೆ ಹಿಂದಿರುಗುವುದಸಾಧ್ಯವು. ಆದುದರಿಂದ ಈ ಕಾರ್ಯವನ್ನು ಬಿಡು " ಎಂದನು. ಅದಕ್ಕೆ ಅಭಿಮನ್ಯುವು " ಗುರುಗಳೇ ! ಸಣ್ಣವ-ರಿಯಾದರೂ ಆನೆಯು ಬಾಳೆಯ ದೊಡ್ಡವನವನ್ನು ನಾಶ ಮಾಡುವಂತೆ ನಾನು ಹುಡುಗನಾದರೂ ಈ ದೊಡ್ಡಸೈನ್ಯವನ್ನೆಲ್ಲಾ ನಾಶಮಾಡುವೆನು. ಆನೆಗಳ ದೊಡ್ಡಸಮೂಹವು ಸಿಹ್ಮದಮರಿಗಿದಿರೇ " ? ಎಂದು ಹೇಳಿ ಅವನ ಪಾದಕ್ಕೆ ಪುಷ್ಪಾರ್ಚನೆಮಾಡುವಂತೆ ತನ್ನ ಬಾಣದಿಂದ ರಥವನ್ನೂ ಕುದುರೆಗಳನ್ನೂ ಖಂಡಿಸಿ ಮುಂದಕ್ಕೆ ನಡೆದು ಚಕ್ರವ್ಯೂಹದ ಸಮೀಪಕ್ಕೆ ಹೋಗಿ ಅಲ್ಲಿದ್ದ ಕೃಪ, ಕೃತವರ್ಮ ಮೊದಲಾದವರನ್ನು ವಿರಥರನ್ನಾಗಿಮಾಡಿ ಮುಂದೆ ನುಗ್ಗಿ ಕೊಡಲಿಯಿಂದ ಅರಣ್ಯವನ್ನು ಕತ್ತರಿಸುವಂತೆ ಅಪರಿಮಿತಸೈನ್ಯವನ್ನು ನಾಶಮಾಡಿ ಚಕ್ರವ್ಯೂಹವನ್ನು ಪ್ರವೇಶಿಸಿದನು. ಆ ವಿಷಯುವನ್ನು ಕೇಳಿ ಅವನನ್ನು ಬಿಡಿಸಿಕೊಂಡು ಬರಬೇಕೆಂದು ಭೀಮ, ನಕುಲ, ಸಹದೇವ ಮೊದಲಾದವರು ಬರುತ್ತಿರಲು ಅವರಿಗಿದಿರಾಗಿ ಕರ್ಣ, ದ್ರೋಣ ಮೊದಲಾದವರು ಬಂದು ತಡೆದರು.

ಇತ್ತ ಅಭಿಮನ್ಯುವು ತನಗಿದಿರಾದ ಶತ್ರುಗಳನ್ನು ಕತ್ತರಿಸುತ್ತಾ ಮುಂದಕ್ಕೆ ಹೋಗುತ್ತಿರಲು, ಅದನ್ನು ಕಂಡು ಭೀಷ್ಮರು ನುನನೊಂದು ಅಭಿಮನ್ಯುವನ್ನು ಕುರಿತು " ಅಣ್ಣಾ ಅಭಿಮನ್ಯು ! ಏನಿದು ? ಸಂತಾನಕ್ಕೆ ಒಬ್ಬನೇ ಮಗನಾಗಿರುವ ನಿನ್ನನ್ನು ಹಿಂದುಮುಂದು ಯೋಚಿಸದೆ ಚಕ್ರವ್ಯೂಹವನ್ನು ಭೇದಿಸುವುದಕ್ಕೆ ಕಳುಹಿಸಿದರೇ ? ನೀನೇನೋ ಒಳಕ್ಕೆ ಬಂದೆ, ಆದರೆ ಹಿಂದಿರುಗುವುದು ಸಾಧ್ಯವಲ್ಲ. ಮಗುವೆ ! ನನ್ನ ಮಾತನ್ನು ಕೇಳು. ನನ್ನೊಡನೆ ಬಾ. ನಾನು ನಿನ್ನನ್ನು ಹೊರಕ್ಕೆ ಕಳುಹಿಸಿಕೊಡುವೆನು. " ಎಂದರು. ಆ ಮಾತನ್ನು ಕೇಳಿ ಅಭಿಮನ್ಯುವು " ತಾತನೆ ! ನಾನೀ ಶತ್ರುಸೈನ್ಯಕ್ಕಳುಕಿ ಈಗ ಹಿಂದಿರುಗಿದರೆ ಚಂದ್ರವಂಶಕ್ಕೆ ಅವಮಾನವಲ್ಲವೇ ? " ಎಂದನು. ಆ ಮಾತನ್ನು ಕೇಳಿ ಭೀಷ್ಮರು ಕಣ್ಣೀರು ತುಂಬಿದವರಾಗಿ

ರಲು, ಅಭಿಮನ್ಯುವು ಅವರ ರಥಕ್ಕೂ ಕುದುರೆಗಳಿಗೂ ಬಾಣಪ್ರಯೋಗಮಾಡಿ ಮುಂದಕ್ಕೆ ನುಗ್ಗಿ ಅನೇಕ ಕುದುರೆ, ಆನೆ, ರಥ, ಭಟರುಗಳನ್ನು ಒಂದೇಸಮನಾಗಿ ಕತ್ತರಿಸಿದನು. ಅದನ್ನು ನೋಡಿ ಕೌರವನ ಮಗನಾದ ಲಕ್ಷ್ಮಣನು ಬಂದು ಇದಿರಾದನು. ಅಭಿಮನ್ಯುವು ಒಂದೇ ದಿವ್ಯಶರದಿಂದ ಅವನ ತಲೆಯನ್ನು ಹಾರಿಸಿದನು. ಅದನ್ನು ನೋಡಿ ಅವನ ತಮ್ಮಂದಿರು ಸೂರ್ವರು ಬಂದು ಇದಿರಾದರು. ಆ ಶೂರಾಗ್ರಣಿಯು ಅವರೆಲ್ಲರನ್ನೂ ಕೊಂದುರುಳಿಸಿದನು ಆ ದಿನ ತಾನೊಬ್ಬನೇ ಒಂದು ಅಕ್ಷೋಹಿಣೀ ಶತ್ರುಸೈನ್ಯವನ್ನು ನಾಶಮಾಡಿದನು. ಆ ಬಾಲಕನ ಶೌರ್ಯವನ್ನು ಅಂತರಿಕ್ಷದಲ್ಲಿ ನೋಡುತ್ತಿದ್ದ ಕಿನ್ನರಾದಿ ದೇವತೆಗಳು ಕೊಂಡಾಡಿದರು. ಕೌರವನು ತನ್ನ ಮಕ್ಕಳೆಲ್ಲರೂ ಸತ್ತುಹೋದುದಕ್ಕಾಗಿ ಅತ್ಯಂತ ಚಿಂತಾಕ್ರಾಂತನಾದನು. ಆಗ ಸಿಂಧುರಾಜನು ಕೌರವನ ಅನುಜ್ಞೆಯನ್ನು ಪಡೆದು ಬಂದು ಅಭಿಮನ್ಯುವಿನ ಮೇಲೆ ಬಿದ್ದನು. ಸೈಂಧವನೊಡನೆ ಅಭಿಮನ್ಯುವು ಬಹಳ ಕೌಶಲದಿಂದ ಯುದ್ಧಮಾಡುತ್ತ ಬಾಣಗಳಿಂದವನನ್ನು ಮುಚ್ಚಿದನು. ಅಷ್ಟು ಹೊತ್ತಿಗೆ ಅಭಿಮನ್ಯುವಿನಲ್ಲಿದ್ದ ಅಂಬುಗಳೆಲ್ಲಾ ಮುಗಿದುಹೋದುವು. ಕೊಂಬುಮುರಿದ ಆನೆಯಂತೆ ನಿರಾಯುಧನಾಗಿ ಅಭಿಮನ್ಯುವು ನಿಂತಿರಲು, ಸೈಂಧವನು ಇದೇ ಸಮಯವೆಂದು ಬಗೆದು ತನ್ನ ಬಾಣದಿಂದವನ ತಲೆಯನ್ನು ಕತ್ತರಿಸಿದನು. ವೀರಶ್ರೀಯು ಕರುಮಾಡದ ಕಲಶವೋ ಎಂಬಂತೆ ಲೋಕೈಕವೀರನಾದ ಅಭಿಮನ್ಯುವಿನ ತಲೆಯು ಆಕಾಶಕ್ಕೆ ಹಾರಿ ನೆಲಕ್ಕೆ ಬಿದ್ದಿತು. ಅದನ್ನು ಕಂಡ ದೇವತೆಗಳೆಲ್ಲರೂ ಬಹಳವಾಗಿ ಮರುಗಿದರು. ಸೂರ್ಯನು ಅಸ್ತಂಗತನಾದನು. ಸೈನ್ಯವೆಲ್ಲವೂ ಪಾಳೆಯಕ್ಕೆ ಹಿಂದಿರುಗಿತು. ಅತ್ತ ಅರ್ಜುನನು ಸಂಸಪ್ತಕರನ್ನು ಸೋಲಿಸಿ ಹಿಂದಿರುಗಿ ಬೀಡಿಗೆ ಬಂದು ಬೀಡಿನಲ್ಲಿ ಬಂಧುಬಳಗದವರೂ ಹೆಚ್ಚಾಗಿ ಸುಭದ್ರೆಯೂ ಅಭಿಮನ್ಯುವಿನ ಮರಣಕ್ಕಾಗಿ ರೋದಿಸುತ್ತಿರುವುದನ್ನು ಕೇಳಿ ಸಿಡಿಲಶಬ್ದವನ್ನು ಕೇಳಿದ ನವಿಲಿನಂತೆ ಬೆದರಿ ಒಳಕ್ಕೆ ಹೋಗಿ ಪುತ್ರನ ಮರಣವಾರ್ತೆಯನ್ನು ಕೇಳಿ ಅತಿಯಾಗಿ ದುಃಖಿಸಿ ಹಂಬಲಿಸಿ ರೋದಿಸುತ್ತಾ "ನನ್ನ ಪುತ್ರನು ಚಕ್ರವ್ಯೂಹ ಭೇದನಕ್ಕೆ ಹೋದ ತೆರನೇನು?" ಎಂದು ಕೇಳಲು, ಧರ್ಮರಾಜನು "ಅರ್ಜುನ! ಕೇಳು, ಚಕ್ರವ್ಯೂಹವನ್ನು ಪ್ರವೇಶಿಸಲು ಎಂತಹ ಬಿಲ್ಲೋಜನೂ ಅನುಮಾನಿಸುವನೆಂದು ಮಾತನಾಡುತ್ತಿರುವ ಸಮಯದಲ್ಲಿ ಅಭಿಮನ್ಯುವು ಬಂದು ತಾನು ಆ ವ್ಯೂಹವನ್ನು ಭೇದಿಸುವೆನೆಂದು ಹೇಳಿದನು ನಾವೆಷ್ಟು ವಿಧವಾಗಿ ಬೇಡವೆಂದು ಸಮಾಧಾನಗೊಳಿಸಿದರೂ ಕೇಳದೆ ತಾನೇ ಹೊರಟುಹೋದನು" ಎನಲು ಆಗ ಪಕ್ಕದ

ಲ್ಲಿದ್ದ ಕೆಲವರು ಅರ್ಜುನನನ್ನು ಕುರಿತು "ಅರ್ಜುನನೆ! ನಿನ್ನ ಪುತ್ರನು ಲೋಕೈಕ ವೀರನು. ಅವನಿಗೆ ಸಮಾನರಾರು? ಧೈರ್ಯದಿಂದ ವ್ಯೂಹವನ್ನು ಹೊಕ್ಕು, ಕುರಿಯ ಹಿಂಡಿಗೆ ತೋಳನುಗ್ಗಿದಂತೆ ಶತ್ರುಗಳನ್ನೆಲ್ಲಾ ನಾಶಮಾಡಿದನು. ಅವನೆಂತಹ ಶೂರನೊ! ಹಸುಳೆಯಾದ ತಾನೊಬ್ಬನೇ ಇಂದು ಒಂದಕ್ಷೋಹಿಣೀ ಸೈನ್ಯವನ್ನು ನಾಶಮಾಡಿರುವನು. ಅವನನ್ನು ಕೊಲ್ಲಲು ಸಾಧ್ಯವಾಗುತ್ತಿದ್ದಿತೇ? ನಖದಂತ ಹೀನವಾದ ಸಿಹ್ಮವನ್ನು ಆನೆಯು ಕೊಲ್ಲುವಂತೆ ಅಂಬುಗಳೆಲ್ಲವೂ ತೀರಿಹೋಗಿ ಬರಿಗೈಯಲ್ಲಿ ನಿಂತಿದ್ದಾ ಕುಮಾರನನ್ನು ಆ ನಿಷ್ಕರುಣೆಯಾದ ಸೈಂಧವನು ಮೋಸದಿಂದ ಕೊಂದನು" ಎಂದರು. ಅದನ್ನು ಕೇಳಿ ಅರ್ಜುನನು ಅತ್ಯಂತ ಕೋಪಾವಿಷ್ಟನಾಗಿ "ಬರಿಗೈಯಲ್ಲಿ ನಿಂತಿದ್ದ ನನ್ನಾ ಮಗುವನ್ನು ಸಂಹರಿಸಿದ ನೀಚನಾದ ಸೈಂಧವನನ್ನು ನಾಳೆ ಸಾಯುಂಕಾಲದೊಳಗೆ ಕೊಲ್ಲಲಾರದಿದ್ದರೆ ಅಗ್ನಿಪ್ರವೇಶಮಾಡುವೆನು' ಎಂದು ಪ್ರತಿಜ್ಞೆಮಾಡಿದನು.

ಬೆಳಗಾಯಿತು. ಸೈನ್ಯಗಳೆಲ್ಲವೂ ಬಂದು ಕೂಡಿದುವು. ಅಂದು ಸಾಯಂಕಾಲದೊಳಗಾಗಿ ಸೈಂಧವನನ್ನು ಕೊಲ್ಲದಿದ್ದರೆ ಅಗ್ನಿಪ್ರವೇಶಮಾಡುವನೆಂಬ ಅರ್ಜುನನ ಪ್ರತಿಜ್ಞೆಯನ್ನು ಕೇಳಿ, ಕೌರವನು, ಉಪಾಯದಿಂದ ಸೈಂಧವನನ್ನು ಸಾಯಂಕಾಲದವರೆಗೆ ರಕ್ಷಿಸಿಕೊಂಡರೆ, ಅರ್ಜುನನು ಅಗ್ನಿಪ್ರವೇಶಮಾಡುವನೆಂದೂ ಅವನು ಸತ್ತರೆ ತನ್ನ ಕಾರ್ಯವು ಅನುಕೂಲವಾಗುವುದೆಂದೂ ಯೋಚಿಸಿ ಆ ದಿನ ಸೈನ್ಯವನ್ನು ಬಹಳ ಭಯಂಕರವಾದ ರೀತಿಯಲ್ಲಿ ಜೋಡಿಸಿ, ಹೊರಸುತ್ತಿನಲ್ಲಿ ಭಟರೂ, ಅದರಿಂದೊಳಗೆ ಬಿಲ್ಲುಗಾರರೂ, ಅದರೊಳಗೆ ತುರಗಸೈನ್ಯವೂ, ಅನಂತರ ರಥಗಳೂ, ಅದರೊಳಗೆ ಗಜಸೈನ್ಯವೂ, ನಿಲ್ಲುವಂತೆ ನಿಯಮಿಸಿದನು. ಎಲ್ಲಾ ಸೈನ್ಯದ ಹಿಂದೆ ಸೈಂಧವನನ್ನು ಬಹು ಜೋಪಾನವಾಗಿರಿಸಿ ಅವನ ಮುಂದೆ ಕರ್ಣ, ಭಗದತ್ತ, ಭೂರಿಸ್ರವ ಮೊದಲಾದ ವೀರರನ್ನೂ ಆತನ ಬಲಗಡೆಯಲ್ಲಿ ಕೃಪ, ಕೃತವರ್ಮ ಮೊದಲಾದವರನ್ನೂ ಎಡಗಡೆಯಲ್ಲಿ ದ್ರೋಣ, ಭೀಷ್ಮ, ದುಶ್ಶಾಸನ ಮೊದಲಾದವರನ್ನೂ ಕಾಪಿಟ್ಟನು. ಇತ್ತ ಅರ್ಜುನನು ಭೀಮ, ನಕುಲ, ಘಟೋದ್ಗಜ ಮೊದಲಾದವರನ್ನು ಧರ್ಮರಾಜನಿಗೆ ಕಾವಲಾಗಿರಿಸಿ, ಉಳಿದ ವೀರರೊಡನೆ ಯುದ್ಧಭೂಮಿಗೆ ಬಂದು, ಪ್ರಳಯಕಾಲದ ರುದ್ರನಂತೆ, ಮೃತ್ಯುದೇವತೆಯಂತೆ, ಮಹಾಕೋಪದಿಂದ ಶತ್ರುಸೈನ್ಯದ ಮೇಲೆ ಬಿದ್ದು ಉಲ್ಲೋಲಕಲ್ಲೋಲ ಮಾಡಲುಪಕ್ರಮಿಸಿದನು. ಆಗ ಬಹುಸೈನ್ಯವು ಚೆಲ್ಲಾಪಿಲ್ಲಿಯಾಯಿತು ಹೀಗೆ ಸೈನ್ಯವನ್ನು ನಾಶಮಾಡುತ್ತಿರುವ ಅರ್ಜುನನಿಗಿದಿರಾಗಿ ಶಲ್ಯನು ಬಂದುಬಿದ್ದು

ಸತ್ತನು. ಅನಂತರ ಮಾದ್ರೀಶ್ವರನೂ ಭಗದತ್ತನೂ ಇದಿರಾದರು. ಆಗ ಧರ್ಮ ರಾಜನ ಅಪ್ಪಣೆಯನ್ನು ಹೊಂದಿ ಅರ್ಜುನನ ಸಹಾಯಕ್ಕೆ ಭೀಮನು ಬಂದು ಭಗದ ತ್ತನನ್ನು ಕೊಂದನು. ಸತ್ಯಕನ ಮೇಲೆ ಬಿದ್ದ ಭೂರಿಸ್ರವನನ್ನು ಅರ್ಜುನನು ಕೊಂದು ಮುಂದೆ ನುಗ್ಗುತ್ತಿರಲು ದ್ರೋಣನು ಬಂದು ಅವನನ್ನು ಮುತ್ತಿದನು. ಅವ ನೊಡನೆ ಅರ್ಜುನನು ಎರಡು ಜಾವದವರೆಗೆ ಕಾದಿ ಅವನನ್ನು ಹಿಂದಕ್ಕಟ್ಟಿ ಮುಂದೆ ನುಗ್ಗಿ ಹೋಗುವಾಗ ಇದಿರಾದ ಭೀಷ್ಮನ ರಥವನ್ನೂ ಬಿಲ್ಲನ್ನೂ ಕತ್ತರಿಸಿ, ಮುಂದೆಹೋಗಿ ಕೌರವನ ತಮ್ಮಂದಿರನ್ನೂ ಕೃಪ ಕರ್ಣ ಮೊದಲಾದವರನ್ನೂ ಹೊಡೆದು ಅವಮಾನಪಡಿಸಿ ಹಿಂದಿರುಗಿಸಿ ನುಗ್ಗಿ ಹೋಗಿ ಸೈಂಧವನ ಸೈನ್ಯ ವನ್ನು ಕಂಡು ಅತ್ಯಂತ ಕೋಪದಿಂದವನಮೇಲೆ ಬಿದ್ದನು. ಅರ್ಜುನನ ಕೈಗೆ ಸಿಕ್ಕಿ ದಮೇಲೆ ತನಗೆ ಉಳಿವಿಲ್ಲವೆಂದು ತಿಳಿದು ಸೈಂಧವನೂ ಬಹಳ ಹೊಡೆದಾಡಿದನು. ಆದರೆ ಲೋಕೈಕವೀರನಾದ ಅರ್ಜುನನ ಮುಂದೆ ನಿಲ್ಲುವರಾರು ? ಸ್ವಲ್ಪಹೊತ್ತಿ ನಲ್ಲೇ ವೀರಪಾರ್ಥನು ಸೈಂಧವನ ತಲೆಯನ್ನು ಕತ್ತರಿಸಿದನು. ಸೂರ್ಯನು ಅಸ್ತ ನಾದನು. ಎಲ್ಲರೂ ಬೀಡಿಗೆ ಹೋದರು.

## ೨೯. ಭೀಷ್ಮನಿರ್ಯಾಗ ಸಂಧಿ

ಆ ಮರುದಿನ ಬೆಳಿಗ್ಗೆ ಎರಡುಪಕ್ಷದ ಸೈನ್ಯಗಳೂ ಯುದ್ಧಭೂಮಿಗೆ ಬಂದು ಸೇರಿ ಯುದ್ಧವು ಪ್ರಾರಂಭವಾಯಿತು. ಉಭಯಪಕ್ಷದ ಸೈನ್ಯಗಳ ಅತಿರಥ ಮಹಾರಥರು ಶತ್ರುಸೈನ್ಯವನ್ನು ನಾಶಮಾಡುತ್ತ ಬಹು ಕ್ರೂರತನದಿಂದ ಕಾದಾ ಡುತ್ತಿದ್ದರು. ಆ ದಿನ ಭೀಮನು ಧರ್ಮರಾಜನ ಅಪ್ಪಣೆಯನ್ನು ಹೊಂದಿ ಯುದ್ಧಕ್ಕೆ ಬಂದು ಪ್ರಳಯಕಾಲದ ರುದ್ರನಂತೆ ಅತ್ಯಂತಕೋಪದಿಂದ ಸೈನ್ಯವನ್ನು ನಾಶಮಾಡುತ್ತಿರಲು ಅವನಮೇಲೆ ಕೌರವನ ನೂರುಮಂದಿ ತಮ್ಮಂದಿರು ಬಂದು ಬಿದ್ದು ಅತ್ಯಂತಕೋಪದಿಂದ ಅವನನ್ನು ಹೊಡೆಯಲುಪಕ್ರಮಿಸಿದರು. ಆಗ ಭೀಮ ನು ಕೆಲವರನ್ನು ತನ್ನ ಗದೆಯಿಂದ ಹೊಡೆದೂ, ಕೆಲವರನ್ನು ಕೈಯಿಂದ ಗುದ್ದಿಯೂ, ಕೆಲವರನ್ನು ಕಾಲಿನಿಂದ ಒದೆದೂ, ಕೆಲವರನ್ನು ಆಕಾಶಕ್ಕೆ ಎಸೆದೂ, ಕೆಲವರನ್ನು ಒಬ್ಬರಮೇಲೊಬ್ಬರನ್ನು ಎತ್ತಿಹಾಕಿಯೂ ಎಲ್ಲರನ್ನೂ ಕೊಂದನು. ಅಷ್ಟುಹೊ ತ್ತಿಗೆ ಸಾಯಂಕಾಲವಾಗಲು ಸೈನ್ಯಗಳು ಪಾಳೆಯಕ್ಕೆ ತೆರಳಿದುವು. ಕೌರವನು

ತನ್ನ ತಮ್ಮಂದಿರ ಮರಣಕ್ಕಾಗಿ ವ್ಯಸನಪಡುತ್ತ, ಭೀಷ್ಮರನ್ನು ಕರೆಸಿ ' ನಿಮ್ಮಂತಹ ಜಗದೇಕಸಾಹಸಿಗಳಿದ್ದೂ ನನ್ನ ತಮ್ಮಂದಿರನ್ನು ಪಾಂಡವರಿಗೆ ಒಲಿಗೊಟ್ಟೆನು ' ಎಂದು ಶೋಕದಿಂದ ಹೇಳಲು ಅದಕ್ಕೆ ಅವರು " ಎಲೈ ಕೌರವನೆ! ನಾಳೆ ನನ್ನ ಪೌರುಷವನ್ನು ನೋಡು " ಎಂದು ಹೇಳಿ ಸಮಾಧಾನಮಾಡಿದರು. ಮರುದಿನ ಪ್ರಾತಃಕಾಲದಲ್ಲಿ ಎಂದಿನಂತೆ ಸೈನ್ಯಗಳು ಒಂದು ಸೇರಿದುವು. ಭೀಷ್ಮನು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ದೇವರಿಗೆ ವಂದಿಸಿ ಅಭೇದ್ಯವಾದ ವಜ್ರಕವಚವನ್ನು ತೊಟ್ಟು ಇಪ್ಪತ್ತುವಿಧವಾದ ಆಯುಧಗಳಿಂದ ಕೂಡಿದ ದಿವ್ಯರಥವನ್ನೇರಿ ಒಂದು ಅಕ್ಷೋಹಿಣೀ ಸೈನ್ಯಸಮೇತನಾಗಿ ಯುದ್ಧರಂಗಕ್ಕೆ ಬಂದು ಕಡೆಗಾಲದ ರುದ್ರನಂತೆ ಪಾಂಡವರ ಸೇನೆಗಿದಿರಾಗಿ ಬಂದು ಅರ್ಜುನನ ಮೇಲೆ ಬಿದ್ದನು. ಭೀಷ್ಮನು ಪ್ರಯೋಗಿಸಿದ ದಿವ್ಯಾಸ್ತ್ರಗಳನ್ನೆಲ್ಲ ಅರ್ಜುನನು ಪ್ರತಿಶರಗಳಿಂದ ಖಂಡಿಸಿದನು. ಅತ್ಯಂತಕೋಪಾವಿಷ್ಟನಾಗಿದ್ದ ಭೀಷ್ಮನ ಹೊಡೆತದಿಂದ ಧರ್ಮರಾಜನ ಬಹು ಸೈನ್ಯವು ನಾಶವಾಯಿತು. ಅಷ್ಟು ಹೊತ್ತಿಗೆ ಸಾಯಂಕಾಲವಾಗಲು ಎಲ್ಲರೂ ಬೀಡಿಗೆ ಹೋದರು. ಅಂದು ರಾತ್ರಿ ಧರ್ಮರಾಜನು ತನ್ನ ತಮ್ಮಂದಿರೊಡನೆ " ಅನುಜರೆ! ಇಂದಿನ ಯುದ್ಧದಲ್ಲಿ ಭೀಷ್ಮರು ತೋರಿದ ಸಾಹಸವನ್ನು ನೋಡಿದಿರಲ್ಲವೇ? ಇಂತಹ ಸಾಹಸವನ್ನು ನಾನು ಎಲ್ಲಿಯೂ ನೋಡಿಯೂ ಕೇಳಿಯೂ ಇಲ್ಲ. ಜಯಲಕ್ಷ್ಮಿಯು ಅವರ ಕೈಸೇರುವಳು. ನಮ್ಮನ್ನು ಬಾಲ್ಯದಿಂದಲೂ ಸಾಕಿದವರೇ ನಮ್ಮ ಮೇಲೆ ಕೈಮಾಡಿದರೆ ರಕ್ಷಿಸುವರಾರು? ಬೇಲಿಯೇ ಹೊಲವನ್ನು ಮೇದಂತೆಯೂ ತಾಯ ಹಾಲೇ ಮಕ್ಕಳಿಗೆ ವಿಷವಾದಂತೆಯೂ ಆಯಿತಲ್ಲ? ಇದಕ್ಕುಪಾಯವೇನು? " ಎನಲು ಅದಕ್ಕೆ ಅರ್ಜುನನು " ಅಣ್ಣಾ! ಇದಕ್ಕೆ ಚಿಂತೆಯೇಕೆ? ಭೀಷ್ಮರು ವಯೋವೃದ್ಧರು ಮತ್ತು ಗುಣವಂತರು. ಅವರಿಗೆ ವೈರಾಗ್ಯಹುಟ್ಟುವಂತೆ ನಿರ್ವೇಗನೀತಿಯನ್ನು ಬೋಧಿಸಿದರೆ ನಮ್ಮ ಕಾರ್ಯವು ಕೈಗೂಡುವುದು ಎಂದು ಹೇಳಿದನು. ಧರ್ಮರಾಜನು ಆ ಮಾತನ್ನು ಅನುಮೋದಿಸಿ ತಕ್ಕ ಜನಗಳನ್ನು ಕಳುಹಿಸಿ ಭೀಷ್ಮರಿಗೆ ವೈರಾಗ್ಯನೀತಿಯನ್ನು ಹೇಳಿಸಿದನು. ಅದರಿಂದ ಭೀಷ್ಮರಿಗೆ ವೈರಾಗ್ಯವುಂಟಾದುದೆಂದು ಆ ಬೋಧಕರಿಂದ ತಿಳಿದು ಧರ್ಮರಾಜನು ತುಷ್ಟನಾದನು. ಅತ್ತ ಭೀಷ್ಮನು ತಾನು ಸಲಹಿದ ಬಾಲಕರಮೇಲೆ ತಾನೇ ಕೈಮಾಡುವುದು ನ್ಯಾಯವಲ್ಲವೆಂದೂ ಮನುಷ್ಯನು ತುಚ್ಛವಾದ ಆಶೆಗೊಳಗಾಗಿ ಅನಿತ್ಯವಾದೀ ಸಂಸಾರದಲ್ಲಿ ಬಿದ್ದು ನರಳುವನೆಂದೂ ಭಾವಿಸಿ ನಿರ್ವೇಗವನ್ನು ಹೊಂದಿ ಅಂದಿನ ರಾತ್ರಿಯನ್ನು ಕಳೆದು ಮರುದಿನ ಪ್ರಾತಃಕಾಲ ಸೈನ್ಯಮಧ್ಯದಲ್ಲಿ ಬಂದುನಿಂತರೂ " ಈ ಸಂಸಾರ

ಸುಖವು ಹಿಂಸಾದಿದೋಷಗಳಿಂದುಂಟಾದುದು " ಎಂದು ಭಾವಿಸಿ ಸಂಪೂರ್ಣವಾಗಿ ಆಶೆಯನ್ನು ಬಿಟ್ಟು ಮನಸ್ಸಿನಲ್ಲಿ ಉಪಶಾಂತತೆಯನ್ನು ಹೊಂದಿದನು. ಹೊರಗೆ ಮಾತ್ರ ರೌದ್ರಭಾವವನ್ನು ತೋರ್ಪಡಿಸುತ್ತ ಧನುರ್ಧಾರಿಯಾಗಿ ರಥವನ್ನೇರಿ ಶತ್ರುಸೈನ್ಯಕ್ಕಿದಿರಾದನು. ಆಗ ಮೋಕ್ಷಗಾಮಿಗಳ ಮೂರ್ತಿಯನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಲೂ ತನು ಬೇರೆ ಆತ್ಮನು ಬೇರೆ ಎಂದು ಭಾವಿಸುತ್ತಲೂ ದೀಕ್ಷಾಕಾಂಕ್ಷಿಯಾಗಿದ್ದ ಆ ಭೀಷ್ಮನು ಪಾದರಸದಿಂದ ಮುಚ್ಚಲ್ಪಟ್ಟ ಚಿನ್ನದಂತೆ ಪ್ರಕಾಶಿಸಿದನು. ನೋಡುವವರ ಕಣ್ಣಿಗೆ ಬಿಲ್ಲಿನಲ್ಲಿ ಬಾಣಗಳನ್ನು ಸೇರಿಸಿ ಹೊಡೆಯುವವನಂತೆ ತೋರಿಸುತ್ತ ನಿಂತಿದ್ದ ಭೀಷ್ಮನಿಗೆ ಅರ್ಜುನನು ಪ್ರಯೋಗಿಸಿದ ಅನೇಕ ಬಾಣಗಳು ದೇಹದಲ್ಲಿ ನಾಟಿದುವು. ಗರಿಮಾತ್ರ ಹೊರಗೆ ಕಾಣಿಸುತ್ತ ದೇಹದಲ್ಲಿ ನಾಟಿದ್ದ ಆ ಬಾಣಗಳಿಂದ ಕೂಡಿದ ಭೀಷ್ಮನು ಹೂವುಗಳಿಂದ ಕೂಡಿದ ಮಂದಾರವೃಕ್ಷದಂತೆಯೂ ಆಕಾಶಕ್ಕೆ ಹಾರಿಹೋಗಲೆತ್ನಿಸುತ್ತಿರುವ ಮನುಷ್ಯಪಕ್ಷಿಯೋ ಎಂಬಂತೆಯೂ ಶೋಭಿಸಿದನು. ದೇಹದಿಂದ ಹೊರಕ್ಕೆಬಂದು ರಕ್ತದಿಂದ ಕೂಡಿದ ಅಂಬುಗಳ ಕೊನೆಗಳು ಭೀಷ್ಮನ ತೇಜಸ್ಸೆಂಬ ವೃಕ್ಷದ ಮೊಳಕೆಗಳಂತೆ ತೋರುತ್ತಿದ್ದುವು. ಆ ಬಾಣಗಳ ಭಾರದಿಂದ ಭೀಷ್ಮನು ನಿಲ್ಲಲಾರದೆ ರಥದ ಕಂಭವನ್ನೊರಗಿ ನಿಂತನು. ಅದನ್ನು ನೋಡಿದ ಧರ್ಮರಾಜನ ಸೈನಿಕರು ಸಂತೋಷದಿಂದ ಬೊಬ್ಬಿರಿದರು. ಅಷ್ಟುಹೊತ್ತಿಗೆ ಇನನು ಅಸ್ತಂಗತನಾದನು. ಸೈನ್ಯಗಳು ಬೀಡಿಗೆ ತೆರಳಿದುವು. ಎಡೆಬಿಡದೆ ನಾಟಿದ್ದ ಅಂಬುಗಳಿಂದಾದ ನೋವನ್ನು ಸ್ವಲ್ಪವೂ ಲೆಕ್ಕಿಸದೆ, ಆತ್ಮನನ್ನು ದೇಹದಿಂದ ಬೇರೆಯಾಗೆಣಿಸಿ, ಅಕ್ಷಯವಾದ ಸುಖವನ್ನು ಕೊಡುವ ಪವಿತ್ರರಾದ ಪಂಚಪರಮೇಷ್ಠಿಗಳನ್ನು ಧ್ಯಾನಿಸುತ್ತ ಭೀಷ್ಮನು ದೇಹಭಾರವನ್ನಿಳುಹಿ ಮೊದಲನೆಯ ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು.

ಇತ್ತ ಆ ಮರುದಿನ ಎಂದಿನಂತೆ ಸೈನ್ಯಗಳು ಯುದ್ಧರಂಗಕ್ಕೆ ಬಂದು ಸೇರುತ್ತಿರಲು, ಕೌರವನು ಕರ್ಣನನ್ನು ಕರೆಸಿ " ಭೀಷ್ಮರಂತಹ ಸಾಹಸಿಯನ್ನು ಕೊಂದ ಅರ್ಜುನನಿಗೆ ಸಮನಾರು ? ತನ್ನ ಪ್ರತಿಜ್ಞೆಯಂತೆ ಚಕ್ರವ್ಯೂಹವನ್ನೊಡೆದು ಸೈಂಧವನನ್ನು ಕೊಂದ ವೀರನಾದ ಕಿರೀಟಿಗೆ ಪ್ರತಿಯಾರುಂಟು ? ನನ್ನ ನೂರುಜನ ಮಕ್ಕಳನ್ನು ಲೆಕ್ಕವಿಲ್ಲದೆ ಕೊಂದ ಅಭಿಮನ್ಯುವಿಗೆ ಸಮನಾದ ಶೂರನಾರುಂಟು ? ಒಂದು ಗಳಿಗೆಯಲ್ಲಿ ನನ್ನ ತಮ್ಮಂದಿರು ನೂರ್ವರನ್ನೂ ಕೊಂದ ಭೀಮನಿಗೆ ಸಮನಾರು ? ಹೇಳು ' ಎನಲು ಕೇಳಿ ಕರ್ಣನು " ಇಂದು ನನ್ನ ಸಾಹಸವನ್ನು ನೋಡು' ಎಂದು ಹೇಳಿ ಧನುರ್ಧಾರಿಯಾಗಿ ರಥವನ್ನೇರಿ ವಜ್ರಕವಚವನ್ನು ಧರಿಸಿ ಕೌರವನ

ಒಂದು ಅಕ್ಷೋಹಿಣೀ ಸೈನ್ಯವನ್ನೂ ತನ್ನ ಸೈನ್ಯವನ್ನೂ ಸೇರಿಸಿಕೊಂಡು ಯುದ್ಧ ರಂಗಕ್ಕೆ ಬಂದನು. ಕರ್ಣನ ಏಟನ್ನು ತಡೆಯಲಾರದೆ ಪಾಂಡವರ ಸೈನ್ಯವೆಲ್ಲವೂ ಚೆಲ್ಲಾಪಿಲ್ಲಿಯಾದುದು. ಅದನ್ನು ನೋಡಿ ಭೀಮನು ಅತ್ಯಂತಕೋಪದಿಂದ ಕರ್ಣನಿಗಿದಿರಾದನು. ಅವನನ್ನು ಕರ್ಣನು ಒಂದೇ ಬಾಣದಿಂದ ಮೂರ್ಛೆಗೊಳಿಸಿದನು ಆಗ ಘಟೋದ್ಗಜನು ಕರ್ಣನಿಗಿದಿರಾಗಿ ಅನೇಕ ಬಲವನ್ನು ಸಂಹರಿಸಿದನು. ಕರ್ಣನು ಅವನನ್ನು ಸಂಹರಿಸಿದನು; ಘಟೋದ್ಗಜನ ಮರಣವನ್ನು ನೋಡಿ ಕುಪಿತನಾದ ಧರ್ಮರಾಜನು ಮುಂದೆ ಬಂದನು. ಕರ್ಣನು ಅವನನ್ನು ವಿರಥನನ್ನಾಗಿ ಮಾಡಿದನು; ಬಳಿಕ ನಕುಲಸಹದೇವರು ಬಂದರು; ಅವರನ್ನೂ ಕರ್ಣನು ಹಿಮ್ಮೆಟ್ಟಿಸಿದನು.

ಮತ್ತೊಂದು ಕಡೆ ಅರ್ಜುನನು ತನಗಿದಿರಾದ ಶತ್ರುರಾಜರೊಡನೆ ಯುದ್ಧ ಮಾಡುತ್ತಿದ್ದನು. ಬಲರಾಮನೊಂದು ಕಡೆ ಜರಾಸಂಧನ ಮಗ ಕಾಲಯನೊಡನೆ ಯುದ್ಧಮಾಡಿ ಅವನನ್ನೂ ಅವನಕಡೆಯ ನಾಲ್ಕುಸಾವಿರ ಮುಕುಟಬದ್ಧರನ್ನೂ ಕೊಂದನು. ಆಗ ಸಾಯಂಕಾಲವಾಯಿತು. ಯುದ್ಧವನ್ನು ನಿಲಿಸಿ ಎಲ್ಲರೂ ತಮ್ಮ ಪಾಳೆಯಕ್ಕೆ ಹೋದರು.

ಮರುದಿನ ಕೌರವನು ದ್ರೋಣನಿಗೆ ವೀರಪಟ್ಟವನ್ನು ಕಟ್ಟಿ ಕಳುಹಿದನು. ಬಿಲ್ಲುವಿದ್ಯೆಯಲ್ಲಿ ಶ್ರೇಷ್ಠನಾದ ದ್ರೋಣನ ಏಟಿನಿಂದ ಪಾಂಡವರ ಸೈನ್ಯವು ಬಹಳವಾಗಿ ನಾಶವಾಯಿತು. ಅದನ್ನು ನೋಡಿ ದ್ರುಪದನು ದ್ರೋಣನಿಗಿದಿರಾಗಲು ದ್ರೋಣನು "ಸಾಯುವುದಕ್ಕೆ ನನ್ನೊಡನೆ ಯುದ್ಧಕ್ಕೆ ಬಂದೆಯಾ? ಬೇಡ. ನಾನು ಸಾಮಾನ್ಯನಲ್ಲ. ನನ್ನ ಕೈಯನ್ನು ನೋಡು" ಎಂದನು. ಅದಕ್ಕೆ ದ್ರುಪದನು "ಎಲವೋ ಬ್ರಾಹ್ಮಣ! ದೊಡ್ಡ ಬಾಳೆಯೆಲೆಯನ್ನು ಹಾಕಿ ರಾಜಾನ್ನವನ್ನೂ, ದೋಸೆ, ಕಡುಬು, ಹಾಲು, ತುಪ್ಪ ಮೊದಲಾದ ಭಕ್ಷ್ಯಭೋಜ್ಯಗಳನ್ನೂ ಬಡಿಸಿದರೆ ಆಗ ನಿನ್ನ ಕೈಯನ್ನು ನೋಡಬಹುದು" ಎಂದು ಮೂದಲಿಸಲು ದ್ರೋಣನು ಒಂದೇ ದಿವ್ಯಾಸ್ತ್ರದಿಂದವನನ್ನು ಸಂಹರಿಸಿದನು. ಬಳಿಕ ಅವನ ಮಗನಾದ ದೃಷ್ಟದ್ಯುಮ್ನನು ತಂದೆಯ ಮರಣದಿಂದ ಕಡುಗೋಪವನ್ನು ತಾಳಿ ದ್ರೋಣನಮೇಲೆ ಬಿದ್ದನು. ಅವನಮೇಲೆಯೂ ದ್ರೋಣನೊಂದು ದಿವ್ಯಾಸ್ತ್ರವನ್ನು ಪ್ರಯೋಗಿಸಿದನು. ಆದರೆ ಅದು ಬಲಹೀನವಾದುದನ್ನು ನೋಡಿ ದ್ರೋಣನು ಆಶ್ಚರ್ಯದಿಂದ ನಿಂತನು. ಆಗ ದೃಷ್ಟದ್ಯುಮ್ನನು ಬಿಟ್ಟ ಬಾಣವು ದ್ರೋಣನ ತಲೆಯನ್ನು ಹಾರಿಸಿತು.

ಮತ್ತೊಂದೆಡೆಯಲ್ಲಿ ಜರಾಸಂಧನ ತಮ್ಮನಾದ ಶಂಕುಕರ್ಣಿಯು ಎರಡು ಸಾವಿರ ಮಕುಟವರ್ಧನರೊಡನೆ ಬಂದು ಕೃಷ್ಣನಕಡೆಯ ನಂದನೆಂಬ ರಾಜನೊಡನೆ ಯುದ್ಧಮಾಡುತ್ತಿದ್ದನು.

ಕೌರವನು ದ್ರೋಣನ ಮರಣಕ್ಕಾಗಿ ದುಃಖಿಸುತ್ತಿರಲು ಆಗ ಕರ್ಣನು "ಎಲೈ ಕೌರವನೆ! ಏಕೆ ದುಃಖಿಸುವೆ? ನಿನ್ನ ಸೈನ್ಯದಲ್ಲಿನ್ನೂ ಅನೇಕಮಂದಿ ಸುಭಟರಿರುವರು. ಉಭಯಪಕ್ಷದಲ್ಲಿಯೂ ಮರುಕವುಳ್ಳವರಾಗಿದ್ದ ಭೀಷ್ಮ, ದ್ರೋಣರ ಮರಣಕ್ಕಾಗಿ ವ್ಯಸನವೇಕೆ? ನಾನಿನ್ನೂ ಬದುಕಿರುವೆನು. ಯುದ್ಧದಲ್ಲಿ ಅವರಿವರೆಂದು ನೋಡದೆ ಎಲ್ಲರನ್ನೂ ನಾಶಮಾಡಿಬಿಡುವೆನು. ಕೌಂತೇಯರೋ, ಗಿವುಂತೇಯರೋ, ಯಾರುತಾನೆ ನನ್ನ ಅಸ್ತ್ರಕ್ಕೆ ಇದಿರಾಗಬಲ್ಲರು? ಯೋಚನೆಯನ್ನು ಬಿಡು" ಎಂದು ಸಮಾಧಾನಮಾಡಲು, ಕೌರವನು ಅವನಿಗೆ ಆ ದಿನದ ವೀರಪಟ್ಟವನ್ನು ಕಟ್ಟಿ ಶಲ್ಯನನ್ನು ಕರೆಯಿಸಿ "ನೀನೂ ಕರ್ಣನೂ ಕೈತೆಗೆದುದರಿಂದ ನನ್ನ ಸಹೋದರರೂ ಪುತ್ರರೂ ನಾಶವಾಗಿ ನಾನೊಬ್ಬನೇ ಉಳಿದಿರುವೆನು. ನೀವೀರ್ವರೂ ನನ್ನೆರಡು ತೋಳುಗಳಂತೆಯೂ ಎರಡು ಕಣ್ಣುಗಳಂತೆಯೂ ಇರುವಿರಿ. ಈ ಪರಾಭವವು ನಿಮಗಲ್ಲದೆ ನನಗಲ್ಲ." ಎಂದು ಕಣ್ಣಿನಲ್ಲಿ ಕಂಬನಿಯನ್ನು ತಂದು ಹೇಳಲು ಆ ಮಾತಿಗೆ ಶಲ್ಯನು "ಎಲೈ ಕುರುರಾಜನೆ! ಸತ್ತವರಿಗೆ ದುಃಖಪಟ್ಟರೆ ಅವರು ಜೀವಿಸುವರೇ? ಇದನ್ನು ತಿಳಿದ ನೀನು ಹೀಗೆ ದುಃಖಿಸಬಹುದೇ? ನಿನ್ನ ಮಕ್ಕಳನ್ನೂ ಸಹೋದರರನ್ನೂ ಕೊಂದ ಆ ಪಾಂಡವರನ್ನು ನಿಜವಾಗಿಯೂ ಯುದ್ಧದಲ್ಲಿ ಕೊಲ್ಲುವೆನು. ನೀನು ಚಿಂತೆಯನ್ನು ಬಿಡು" ಎಂದು ಅವನನ್ನು ಸಮಾಧಾನಪಡಿಸಿದನು. ಆ ಮಾತನ್ನು ಕೇಳಿ ಕೌರವನು ತುಷ್ಟನಾಗಿ "ನೀನು ಹಾಗೆ ನನಗೆ ಸಹಾಯಮಾಡುವೆಯಾದರೆ ನಾನಾಡಿದ ಮಾತನ್ನು ಮನಸ್ಸಿನಲ್ಲಿಡದೆ ಮನ್ನಿಸು" ಎಂದು ಹೇಳಿ ಶಲ್ಯನಿಂದ ಭರವಸೆಯನ್ನು ಹೊಂದಿ "ಈ ದಿನ ಕರ್ಣನು ಪಾಂಡವರನ್ನು ನಿಜವಾಗಿಯೂ ಕೊಲ್ಲುವನು, ಸಂದೇಹವಿಲ್ಲ. ಆದುದರಿಂದ ನೀನು ಅವನಿಗೆ ಸಾರಥಿಯಾಗಬೇಕು" ಎಂದು ಆತನನ್ನೊಡಂಬಡಿಸಿ ಕಳುಹಿದನು. ಆ ವರ್ತಮಾನವನ್ನು ಕೇಳಿ ಅರ್ಜುನನು ಚೆನ್ನಾಗಿ ಮಾತಾಡಬಲ್ಲ ಕೆಲವರನ್ನು ಕರ್ಣನಬಳಿಗೆ ಕಳುಹಿದನು. ಅವರು ಬಂದು ಕರ್ಣನನ್ನು ಕಂಡು ಅವನನ್ನು ಬಹಳವಾಗಿ ಹೊಗಳಿ ಮರುದಿನ ಯುದ್ಧದಲ್ಲಿ ಅರ್ಜುನನೇ ಬರುವುದರಿಂದ ಧೈರ್ಯಸಾಹಸಗಳಿಂದ ಯುದ್ಧಮಾಡಬೇಕೆಂದು ಹೇಳಲು ಆ ಮಾತಿಗೆ ಕರ್ಣನು ನಕ್ಕು "ರೋಗಿ ಬಯಸಿದುದನ್ನೇ ವೈದ್ಯನು ಹೇಳಿದಂತಾಯಿತು. ಬರಹೇಳು" ಎಂದು

ಹೇಳಿ ಕಳುಹಿ ತಾನು ಮನಸ್ಸಿನಲ್ಲಿ “ ಶೂರರಾದ ಪಾಂಡವರು ನನಗೆ ಸಹೋದರರು. ಅವರನ್ನು ಕೊಂದರೆ ಪಾಪಸಂಘಟನೆಯಾಗುತ್ತದೆ. ಆದರೆ ಕೌರವನು ನನ್ನನ್ನು ನಂಬಿ ನನ್ನಬಲದಿಂದಲೇ ಅವರಿಗೆ ರಾಜ್ಯವನ್ನು ಕೊಡಲೊಪ್ಪದಿರುವನು. ಆದುದ ರಿಂದ ಯುದ್ಧಮಾಡುವುದೇ ನ್ಯಾಯವು. ಆಗಲಿ, ಅನ್ನವಿತ್ತು ಸಾಕಿ ನನ್ನನ್ನೇ ನಂಬಿರುವ ಕೌರವನಿಗಾಗಿ ಈ ಪ್ರಾಣವನ್ನೊಪ್ಪಿಸುವೆನು ” ಎಂದು ಮರುದಿನ ಜಿನಪೂಜನಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಯುದ್ಧರಂಗಕ್ಕೆ ಬರಲನುವಾ ದನು. ಅಷ್ಟರಲ್ಲಿ ಜರಾಸಂಧನು ಜಯದ್ರಥನೆಂಬವನನ್ನು ಮುಂದಟ್ಟಿದನು. ಕೃಷ್ಣ ನು ಅವನಿಗಿದಿರಾಗಲು ಪದ್ಮನೆಂಬ ರಾಜನನ್ನು ಕಳುಹಿದನು. ಆ ದಿನದ ಯುದ್ಧಕ್ಕೆ ಬಂದು ನಿಲ್ಲುವ ಕರ್ಣಾರ್ಜುನರನ್ನು ಅವರ ಸೈನ್ಯದವರು ಅವರ ಬಿರುದುಗಳನ್ನೆತ್ತಿ ಕೊಂಡಾಡುತ್ತಿದ್ದರು.

## ೩೦. ಕರ್ಣಾರ್ಜುನರ ಕಾಳಗ ಸಂಧಿ

ಆ ದಿನ ನಡೆಯಲಿದ್ದ ಕರ್ಣಾರ್ಜುನರ ಯುದ್ಧವನ್ನು ನೋಡಲು ಸಮಸ್ತದೇವತೆ ಗಳೂ ಆಕಾಶದಲ್ಲಿ ಬಂದು ನಿಂತರು. ಯುದ್ಧವು ಮೊದಲಾಯಿತು. ಉಭಯ ಪಕ್ಷದ ಸೈನ್ಯಗಳೂ ಅತ್ಯಂತ ಭಯಂಕರವಾಗಿ ಯುದ್ಧಮಾಡಲಾರಂಭಿಸಿದುವು. ಮುಂದೆ ಬರುತ್ತಿದ್ದ ಶಕುನಿಗೆ ಭೀಮನು ಇದಿರಾಗಿ ತನ್ನ ಗದೆಯಿಂದವನ ಸೈನ್ಯ ವನ್ನೆಲ್ಲ ನಾಶಮಾಡಿದನು. ಅದನ್ನು ನೋಡಿ ಶಕುನಿಯು ಕೋಪದಿಂದ ಮುಂದೆ ನುಗ್ಗಿದನು; ಅವನನ್ನು ಸಾಳುವನು ಕೊಂದನು. ಅನಂತರ ಭೀಮ ನನ್ನು ಹಿಂದಿಕ್ಕಿ ಅರ್ಜುನನು ಮುಂದೆ ಬಂದು ಕರ್ಣನಿಗಿದಿರಾದನು. ಇಬ್ಬರೂ ಧನುಷ್ಟಂಕಾರಮಾಡಿ ಬಾಣಗಳನ್ನು ಹೂಡಿ ಪ್ರಯೋಗಿಸಲು ಆ ಬಾಣಗಳು ಆಕಾ ಶವನ್ನು ವ್ಯಾಪಿಸಿದುವು. ಕೆಲವು ಹೊತ್ತು ಸಾಮಾನ್ಯಶರಗಳಿಂದ ಯುದ್ಧಮಾಡಿ ಅನಂತರ ಮಂತ್ರಾಸ್ತ್ರಗಳಿಗೆ ಕೈನೀಡಿ ಕರ್ಣನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿ ದನು. ಅರ್ಜುನನು ಅದನ್ನು ವಾರುಣಾಸ್ತ್ರದಿಂದ ಖಂಡಿಸಿದನು. ಕರ್ಣನು ಶೈಲಾ ಸ್ತ್ರವನ್ನುಬಿಟ್ಟನು. ಅದನ್ನು ಅರ್ಜುನನು ವಜ್ರಾಸ್ತ್ರದಿಂದ ಕತ್ತರಿಸಿದನು. ಸರ್ಪಾಸ್ತ್ರವ ನ್ನು ಗರುಡಾಸ್ತ್ರದಿಂದ ಖಂಡಿಸಿದನು. ಹೀಗೆ ಕರ್ಣನು ಪ್ರಯೋಗಿಸಿದ ಮಂ ತ್ರಾಸ್ತ್ರಗಳನ್ನು ಅರ್ಜುನನು ಪ್ರತಿಶರಗಳಿಂದ ಖಂಡಿಸಿದನು. ಅದನ್ನು

ನೋಡಿ ಕರ್ಣನು ಅತ್ಯಂತ ಕೋಪಾವಿಷ್ಟನಾಗಿ ದಿವ್ಯಾಸ್ತ್ರಗಳಿಗೆ ಕೈನೀಡಿ ಕಾಲಾಗ್ನಿ ಶರವನ್ನು ಹೂಡಿ ಪ್ರಯೋಗಮಾಡಲನುವಾದನು. ಆಗ ತಾನು ತನ್ನ ತಮ್ಮಂದಿರಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸುವುದಿಲ್ಲವೆಂದು ತನ್ನ ತಾಯಿಯಾದ ಕೊಂತಿಗೆ ಮಾಡಿದ ಭಾಷೆಯು ನೆನಪಿಗೆ ಬಂದು " ಸಮುದ್ರವು ಮೇರೆದಪ್ಪಿದರೂ ನಾನು ಕೊಟ್ಟಭಾಷೆಗೆ ತಪ್ಪಲಾರೆನು " ಎಂದು ನಿರ್ಧರಿಸಿ ಬಾಣಪ್ರಯೋಗಮಾಡದೆ ನಿಶ್ಚೇಷ್ಟನಾಗಿ ನಿಂತನು. ಆಗ ಅರ್ಜುನನು " ಎಲವೊ ಕರ್ಣ ! ಕೌರವನು ನಿನ್ನನ್ನೇ ನಂಬಿಕೊಂಡಿರುವನು. ಅವನಿಗೆ ದ್ರೋಹಮಾಡಿ ಯುದ್ಧಮಾಡದೆ ಸುಮ್ಮನೆ ಏಕೆ ನಿಂತಿರುವೆ ? " ಎಂದು ಮೂದಲಿಸಿದನು. ಆಗ ಶಲ್ಯನು ತನ್ನ ವಿದ್ಯೆಯ ಬಲದಿಂದ ತಮ್ಮ ರಥದಂತಹ ಅನೇಕ ರಥಗಳನ್ನು ನಿರ್ಮಿಸಿದನು. ಎತ್ತ ನೋಡಿದರೂ ಕರ್ಣನ ರಥಗಳೇ ಕಣ್ಣಿಗೆ ಕಾಣಿಸುವಂತಾದುವು. ಆಗ ಅರ್ಜುನನು ಆಶ್ಚರ್ಯಹೊಂದಿದನು. ಅದನ್ನು ನೋಡಿ ಅರ್ಜುನನ ಸಾರಥಿಯಾದ ಕೃಷ್ಣನು ಶಲ್ಯನ ಬಹುರೂಪಿಣೀ ವಿದ್ಯೆಯಿಂದ ಹಾಗಾಗಿರುವುದೆಂದೂ ಅವನನ್ನು ಮೊದಲು ಕೊಂದರೆ ಬಳಿಕ ಕರ್ಣನನ್ನು ಸೋಲಿಸಬಹುದೆಂದೂ ಅರ್ಜುನನಿಗೆ ಹೇಳಿದನು. ಕೂಡಲೆ ಅರ್ಜುನನು ಪರವಿದ್ಯಾಭೇದಿನಿಯೆಂಬ ದಿವ್ಯಾಸ್ತ್ರದಿಂದಾ ಬಹುರೂಪಿಣೀ ವಿದ್ಯೆಯನ್ನು ಪರಿಹರಿಸಿ ರಥವನ್ನು ಮುಂದಕ್ಕೆ ನೂಂಕಿ ಅಮೋಘವಾದ ಬಾಣದಿಂದ ಶಲ್ಯನ ತಲೆಯನ್ನು ಹಾರಿಸಿದನು. ಸಾರಥಿಯಾದ ಶಲ್ಯನ ಮರಣದಿಂದ ಬಹುಕೋಪಗೊಂಡು ಕರ್ಣನು ದಿವ್ಯಾಸ್ತ್ರಪ್ರಯೋಗಮಾಡಲುದ್ಯುಕ್ತನಾಗುವಷ್ಟರಲ್ಲಿ ಅರ್ಜುನನು ಒಂದು ದಿವ್ಯಾಸ್ತ್ರದಿಂದ ಅವನ ಕಿರೀಟವನ್ನು ಹಾರಿಸಿದನು. ಕುರುಭೂಪತಿಯ ಜಯಲಕ್ಷ್ಮೀಮಂಟಪದ ಮಣಿಕಲಶವು ಉರುಳಿತೋ, ಕೌರವನ ಪುಣ್ಯಪುಂಜದ ಧರಣಿಯು ಮುಚ್ಚಳವು ಕಳಚಿಬಿದ್ದಿತೋ ಎಂಬಂತೆ ಆ ಕರ್ಣನ ಮಣಿಕಿರೀಟವು ಕೆಳಕ್ಕೆ ಬಿದ್ದಿತು. ಸೂರ್ಯನು ಅಸ್ತೋನ್ಮುಖನಾದನು. ಎಲ್ಲರೂ ಪಾಳೆಯಕ್ಕೆ ಹೋದರು. ಆರಾತ್ರಿ ಕರ್ಣನು ಯುದ್ಧರಂಗದಲ್ಲೆಲ್ಲರೆದುರಿನಲ್ಲಿ ತನ್ನ ಮಕುಟಭಂಗವಾದುದನ್ನು ನೆನಸಿಕೊಂಡು ತನ್ನಂತಹ ಸಾಹಸಿಯಾದ ಯೋಧನಿಗೆ ಮಕುಟಭಂಗವು ಮರಣಕ್ಕೆ ಸಮಾನವೆಂದು ಭಾವಿಸಿ, ಇನ್ನು ಮುಂದೆ ಸಂಸಾರದಲ್ಲಿ ತಾನು ಪರಿಗ್ರಹಬಂಧನದಲ್ಲಿರುವುದು ಅನುಚಿತವೆಂದು ನಿರ್ಧರಿಸಿ ಸುದರ್ಶನವೆಂಬೊಂದು ವನಕ್ಕೆ ಹೋಗಿ ದಮವರರೆಂಬ ಮುನೀಶರಲ್ಲಿ ದೀಕ್ಷೆಯನ್ನು ಬೇಡಿದನು. ಅವರು ಕರ್ಣನಿಗುಳಿದಿರುವುದು ಒಂದೇ ತಿಂಗಳಾಯುಷ್ಯವೆಂದು ತಿಳಿಸಿ ದೀಕ್ಷೆಯನ್ನಿತ್ತರು. ಅವನು ಆಯುಷ್ಯಾವಸಾನದವರೆಗೆ ತಪವನ್ನಾಚರಿಸಿ ಸತ್ತು ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು.

ಇತ್ತ ಕರ್ಣನು ಹೊರಟುಹೋದನೆಂದು ತಿಳಿದು ಬಹಳವಾಗಿ ಚಿಂತಿಸಿ, ಕೌರವನು ಬೆಳಗಿನ ಜಾವದಲ್ಲಿ ಯಾರಿಗೂ ತಿಳಿಯದಂತೆ ಕೃಪಾಚಾರ್ಯನೊಡನೆ ಬೀಡಿನಿಂದ ಹೊರಟು ಬಹುರೂಪಿಣಿಯೆಂಬ ವಿದ್ಯೆಯನ್ನು ಸಾಧಿಸುವುದಕ್ಕಾಗಿ ವೈಶಂಪಾಯನಸರೋವರಕ್ಕೆ ಹೋಗಿ ನೀರಿನಲ್ಲಿ ಮುಳುಗಿ ವಿದ್ಯಾಸಾಧನಮಾಡುತ್ತಿರಲು, ಸೂರ್ಯನು ಉದಯಿಸಿದನು.

ಇತ್ತ ಉಭಯಸೈನ್ಯಗಳು ಯುದ್ಧಭೂಮಿಗೆ ಬಂದುವು. ಶತ್ರುಸೈನ್ಯದ ಮಧ್ಯದಲ್ಲಿ ಕೌರವನಿಲ್ಲದಿರುವುದನ್ನು ನೋಡಿ ಪಾಂಡವರು ಅವನಿರುವ ಸ್ಥಾನವನ್ನರಿಯಲು ಚಾರರನ್ನಟ್ಟಿದರು. ಅಷ್ಟರಲ್ಲಿ ಭಟನೊಬ್ಬನು ಬಂದು ಸೂರ್ಯೋದಯಕ್ಕೆ ಮುಂಚೆಯೇ ಕೌರವನು ವೈಶಂಪಾಯನಸರೋವರಕ್ಕೆ ಹೋಗಿ ಅದಕ್ಕಿಳಿದಿರುವನೆಂದು ತಿಳಿಸಿದನು. ಆಗ ಭೀಮನು ಅತಿಕೋಪದಿಂದ ಆ ಸರೋವರಕ್ಕೆ ಹೊರಟನು. ಧರ್ಮರಾಜನೂ ಅವನ ತಮ್ಮಂದಿರೂ ಅವನೊಡನೆ ಹೊರಟರು. ಭೀಮನು ಕೌರವನಿದ್ದ ಕೊಳದ ಬಳಿಗೆ ಹೋಗಿ ನೀರಿಗಿಳಿದು ಶತ್ರುವನ್ನು ಕೊಲ್ಲುವೆನೆಂದು ಆರ್ಭಟಿಸುತ್ತಿರುವುದನ್ನು ನೋಡಿ ಧರ್ಮರಾಜನು "ಭೀಮನೆ ! ನೀರೊಳಡಗಿರುವ ಶತ್ರುವನ್ನು ಕೊಲ್ಲುವುದು ಧರ್ಮವಲ್ಲ." ಎನಲು ಅದಕ್ಕವನ ತಮ್ಮಂದಿರು "ಪ್ರಬಲನಾದ ಶತ್ರುವನ್ನು ಯಾವ ಮಾರ್ಗದಿಂದಲಾದರೂ ಕೊಲ್ಲುವುದೇ ನ್ಯಾಯವು" ಎಂದರು. ಆಗ ಧರ್ಮರಾಜನು "ಸಹೋದರರೆ! ಇದುವರೆಗೂ ನನ್ನ ಸತ್ಯವನ್ನು ಪರಿಪಾಲಿಸಿ ನನ್ನ ಸುಮತಿಯಂತೆ ನಡೆದು ಈಗ ಹೀಗೆ ಮಾಡುವುದು ಯೋಗ್ಯವಲ್ಲ' ಎನಲು ಅವರು ಅಣ್ಣನ ಮಾತಿಗೊಡಂಬಟ್ಟರು. ಭೀಮನು ಸರೋವರದ ದಡದಲ್ಲಿ ನಿಂತು ಗಟ್ಟಿಯಾಗಿ "ಎಲವೋ ಕೌರವ ! ಹಟಸಾಧನೆಗಾಗಿ ಮಕ್ಕಳು, ತಮ್ಮಂದಿರು, ಬಾಂಧವರು ಎಲ್ಲರನ್ನೂ ಬಲಿಗೊಟ್ಟು ನೀನೊಬ್ಬನು ಮಾತ್ರ ಬದುಕಬೇಕೆಂದು ನೀರಿನಲ್ಲಿ ಕಳ್ಳನಂತೆ ಅಡಗಿರುವೆಯಾ? ಬೇಗ ಹೊರಕ್ಕೆ ಬಾ. ಎಲ್ಲರೆದುರಿನಲ್ಲಿ ಗರ್ವದ ಮಾತನಾಡಿ ಮೀಸೆತಿರುಹಿ ಈಗ ಓಡಿಬಂದು ಅವಿತುಕೊಂಡರೆ ಜನರು ಹಾಸ್ಯಮಾಡರೇ ? ಬಹುಮಂದಿ ಅತಿರಥಮಹಾರಥರಿದ್ದರೂ ಗೆಲಲಾರೆನೆಂದು ತಿಳಿದು ನೀರಿನಲ್ಲಿರುವ ನಳ್ಳಿಗುಳ್ಳೆಗಳನ್ನು ಸಹಾಯಕ್ಕೆ ಕರೆದುಕೊಂಡು ಹೋಗುವುದಕ್ಕಿಲ್ಲಿಗೆ ಬಂದೆಯಾ ? ಹೊರಗೆ ಬಾ" ಎಂದು ಗರ್ಜಿಸಿದನು. ಭೀಮನ ಗರ್ಜನೆಯಿಂದಾ ಕೊಳದ ನೀರು ಉಲ್ಲೋಲಕಲ್ಲೋಲವಾಯ್ತು. ಆ ಕೂಗಿನಿಂದ ಮಂತ್ರೋಚ್ಚಾರಮಾಡಲಾರದೆ ಮಾನಸಿಧಿಯಾದ ಕೌರವನು ಅಲ್ಲಿಂದೆದ್ದು ಗದೆಯನ್ನು ಹಿಡಿದು "ಭೀಮನೆಲ್ಲಿ, ಭೀಮನೆಲ್ಲಿ" ಎಂದು ಕೂಗುತ್ತ ಸರೋವರದಿಂದ ಕೃತಾಂತನಂತೆ

ಮೇಲಕ್ಕೆಬಂದು ಭೀಮನಿಗೆ ದಿರಾದನು. ಅವನನ್ನು ನೋಡಿ ಭೀಮನು ರುಧಿರೋದ್ಗಾರಿಗದೆಯನ್ನು ತೂಗುತ್ತ "ಎಲೈ ಕುರುಪತಿಯೆ! ನಿನ್ನನ್ನು ನಂಬಿದ್ದ ಸೈನ್ಯವೆಲ್ಲವನ್ನೂ ಕೊಲ್ಲಿಸಿದೆ. ಈಗಲಾದರೂ ಹಟವನ್ನು ಬಿಡು. ಧರ್ಮರಾಜನೊಂದಿಗೆ ಸೇರಿ ಸುಖವಾಗಿರು.' ಎನಲು ಆ ಮಾತನ್ನು ಕೇಳಿ ದುರ್ಯೋಧನನು "ಎಲವೋ ಭೀಮ! ನನ್ನ ಸೈನ್ಯವೆಲ್ಲ ಹೋದಮಾತ್ರಕ್ಕೆ ನನ್ನೀ ಬಾಹುಬಲವು ಕಡಮೆಯಾಗುವುದೇ? ನಿನಗೆ ಹೆದರಿ ರಾಜ್ಯವನ್ನು ಕೊಡುವೆನೇ?" ಎಂದನು. ಆ ಮಾತನ್ನು ಕೇಳಿ ಧರ್ಮರಾಜನು ಕೈಮುಗಿದು "ಎಲೈ ಕೌರವನೆ! ಐಶ್ವರ್ಯವು ಯಾರಿಗೆ ಸ್ಥಿರವಾಗಿರುವುದು? ಮೊದಲಿನಂತೆ ನಮ್ಮ ರಾಜ್ಯವನ್ನು ನಮಗೆ ಕೊಡು" ಎಂದನು. ಅದಕ್ಕೆ ಕುರುಪತಿಯು "ನನ್ನ ಅನುಜರನ್ನೂ ಮಕ್ಕಳನ್ನೂ ಬಲಿಗೊಟ್ಟು ಈಗ ನಿಮ್ಮೊಡನೆ ಕೂಡುವೆನೇ? ನೀವೆಲ್ಲರೂ ನನ್ನೊಡನೆ ಯುದ್ಧಮಾಡಿ. ನಿಮ್ಮೆಲ್ಲರನ್ನೂ ಜಯಿಸಿ ನಾನು ನನ್ನ ರಾಜ್ಯವನ್ನಾಳುವೆನು." ಎಂದನು. ಆಗ ಧರ್ಮರಾಜನು ಒಬ್ಬನೊಡನೆ ಹೆಚ್ಚು ಜನಗಳು ಒಂದೇ ಸಮಯದಲ್ಲಿ ಯುದ್ಧಮಾಡುವುದು ನ್ಯಾಯವಲ್ಲವೆಂದೂ ಆದರಿಂದ ಒಬ್ಬೊಬ್ಬರೇ ಯುದ್ಧಮಾಡಬೇಕೆಂದೂ ಹೇಳಿದನು. ಆ ಮಾತನ್ನು ಕೇಳಿ ಭೀಮನು ತಾನು ಮೊದಲು ಕೌರವನೊಡನೆ ಯುದ್ಧಮಾಡುವೆನೆಂದು ಮುಂದಾದನು. ಕೌರವನು ಭೀಮನನ್ನು ನೋಡಿ "ಎಲೇ ಭೀಮ! ಹುಡುಕಿ ಕೊಲ್ಲುವ ವ್ಯಾಧನಮುಂದೆ ತಾನಾಗಿ ಬಂದ ಜಿಂಕೆಯಂತಾಯ್ತು. ಬಾ" ಎಂದು ಹೇಳಿ ಭುಜವನ್ನೂ ತೊಡೆಯನ್ನೂ ತಟ್ಟುತ್ತ ಎಡಗಾಲನ್ನು ಮುಂದಕ್ಕಿಟ್ಟು ಗದೆಯನ್ನು ಮೇಲಕ್ಕೆತ್ತಿ "ಹಿಡಿಹಿಡಿ ತೆಗೆದುಕೊಳ್ಳು" ಎಂದು ಕೂಗುತ್ತ ಭೀಮಸೇನನಿಗೆ ಹೊಡೆದನು. ಭೀಮಸೇನನು ಆ ಪೆಟ್ಟನ್ನು ತಪ್ಪಿಸಿಕೊಂಡು ತಾನೊಮ್ಮೆ ಹೊಡೆದನು. ಒಬ್ಬರಿಗೊಬ್ಬರು ಹೊಡೆಯುವ ಏಟನ್ನು ತಪ್ಪಿಸಿಕೊಳ್ಳುತ್ತಲೂ ಮತ್ತೆ ಹೊಡೆಯುತ್ತಲೂ ಅನೇಕವಿಧವಾದ ಚಮತ್ಕಾರದಿಂದ ಇಬ್ಬರೂ ಯುದ್ಧಮಾಡಿದರು. ಭೀಮಸೇನನು "ಇದು ಅರಗಿನಮನೆಯ ಬೆಂಕಿಯ ಪೆಟ್ಟು, ಇದು ಕೃತಕದ್ಯೂತದ ಪೆಟ್ಟು" ಎಂದು ಹೇಳಿ ಹೊಡೆದನು. ಆಗ ಕೌರವನು "ಇದು ನನ್ನ ಪುತ್ರರ ಕೊಂದುದಕ್ಕೆ, ಇದು ನನ್ನನುಜರ ಕೊಂದುದಕ್ಕೆ" ಎಂದು ಹೇಳುತ್ತ ಭೀಮಸೇನನ್ನು ಹೊಡೆದನು. ಹೀಗೆ ಭೀಮಕೌರವರು ತಲೆ, ಬೆನ್ನು, ತೋಳು, ಎದೆ, ಭುಜ, ಹಣೆ, ಕೆನ್ನೆ ಮೊದಲಾದ ಸ್ಥಳಗಳಿಗೆ ಸಮಯ ಮತ್ತು ಅಯವರಿತು ಗದೆಯಿಂದ ಹೊಡೆಯುತ್ತಲೂ ಇದಿರಾಳಿಯ ಪೆಟ್ಟುಗಳನ್ನು ತಪ್ಪಿಸಿಕೊಳ್ಳುತ್ತಲೂ ಬಹಳಹೊತ್ತಿನವರೆಗೆ ಯುದ್ಧಮಾಡಿದರು.

ಕೊನೆಗೆ ಕಡುಕೋಪದಿಂದ ಕೌರವನು ಮೇಲಕ್ಕೆ ಹಾರಿ ಭೀಮನ ತಲೆಯ ಮೇಲೆ ಹೊಡೆಯಬೇಕೆಂದು ನೆಗೆದನು. ಆಗ ಭೀಮನು ಗದೆಯನ್ನೆತ್ತಿ ಕೌರವನ ತೊಡೆಗೆ ಹೊಡೆದನು. ಆ ಬಲವಾದ ಪೆಟ್ಟಿನಿಂದ ತೊಡೆಮುರಿದು ಕೌರವನು ನೆಲಕ್ಕೆ ಬಿದ್ದನು; ತೊಡೆಯಿಂದ ರಕ್ತವು ಹರಿಯಿತು. ಆದನ್ನು ನೋಡಿ ಭೀಮನು ಕೋಪವನ್ನು ಬಿಟ್ಟು 'ಭಾಪು ಕೌರವನೆ! ಭಾಪು! ಲೋಕದಲ್ಲಿ ನಿನ್ನಂತಹ ಹಟಗಾರರುಂಟೇ?" ಎಂದು ಕೊಂಡಾಡಿದನು. ಒಳಿಕ ಪಾಂಡವರು ಪಾಳೆಯಕ್ಕೆ ಹಿಂದಿರುಗಿ ಬಂದು ಕೌರವನ ಸ್ಥಿತಿಯನ್ನು ಕೃಷ್ಣನಿಗೆ ಹೇಳಲು ಅವನು ಬಹಳ ಸಂತುಷ್ಟನಾದನು. ಅತ್ತ ಕೌರವನ ತೊಡೆಗಳು ಮುರಿದವಾರ್ತೆಯನ್ನು ಕೇಳಿ ಜರಾಸಂಧನು ಅತ್ಯಂತ ಖಿನ್ನನಾದನು. ಸಾಯಂಕಾಲವಾಗಲು ಸೈನ್ಯಗಳೆರಡೂ ಪಾಳೆಯಕ್ಕೆ ತೆರಳಿದುವು. ಕೌರವನಿಗಾದವಸ್ಥೆಯನ್ನು ಕೇಳಿ ಅಶ್ವತ್ಥಾಮನು ಪಾಂಡವರ ಪಾಳೆಯಕ್ಕೆ ಬಂದು ಸೈನ್ಯವನ್ನೆಲ್ಲ ಕತ್ತರಿಸುತ್ತಿರುವುದನ್ನು ಕಂಡು ದೃಷ್ಟದ್ಯುಮ್ನನು ಅವನಮೇಲೆ ಬೀಳಲು ಅಶ್ವತ್ಥಾಮನು ಅವನನ್ನು ಸಂಹರಿಸಿ ಮುಂದೆಸಾಗಿ ತನಗಿದಿರಾದ ಪಂಚಪಾಂಡವರೆಂಬ ರಾಜಕುಮಾರರನ್ನು ಕೊಂದು ಅವರೇ ಪಾಂಡವರೆಂದು ತಿಳಿದು ಅವರ ತಲೆಗಳನ್ನು ತಂದು ಕೌರವನಿಗೆ ತೋರಿಸಿದನು. ಆ ತಲೆಗಳನ್ನು ನೋಡಿ ಕೌರವನು ಅವು ಪಾಂಡವರ ತಲೆಗಳಲ್ಲವೆಂದೂ ಪಂಚಪಾಂಡುಕುಮಾರರ ತಲೆಗಳೆಂದೂ ಹೇಳಿ "ಆ ಪಾಂಡವರು ವಜ್ರಶರೀರಿಗಳು. ಅವರು ಒಳ್ಳೆಯ ಗುಣಶಾಲಿಗಳು. ಅವರಲ್ಲಿ ಇದುವರೆಗೂ ಹಟಸಾಧನೆಮಾಡಿದೆನು. ಕೋಪತಾಪಗಳಿನ್ನೇಕೆ? ಈಗ ನನಗೆ ಪರಲೋಕಸುಖವಲ್ಲದೆ ಮತ್ತೇನೂ ಬೇಕಿಲ್ಲ" ಎಂದು ಉಪಶಮಭಾವದಿಂದ ನುಡಿದು ಅಶ್ವತ್ಥಾಮನನ್ನು ಬೀಳ್ಕೊಟ್ಟು ವಿದುರನೆಂಬೋರ್ವ ಮುನೀಶರಲ್ಲಿ ದೀಕ್ಷೆಯನ್ನು ಕೈಕೊಂಡು ಮರುದಿನ ಹಗಲಿನಲ್ಲಿ ಶುಭಭಾವನೆಯಿಂದ ಇಹಲೋಕವನ್ನು ಬಿಟ್ಟು ಸ್ವರ್ಗವನ್ನೈದಿದನು.



## ೩೧. ಕೃಷ್ಣ ಜರಾಸಂಧ ಕಾಳಗ ಸಂಧಿ

ಆ ಮರುದಿನ ಜರಾಸಂಧನು ಯುದ್ಧಕ್ಕೆ ಅನುವಾಗಿ ಯುದ್ಧರಂಗಕ್ಕೆ ಹೊರಟುಬಂದು ತನ್ನ ಕಡೆಯವರಾದ ವಿದ್ಯುಚ್ಚರ, ಅಂಗಾರದೇವ, ವಿದ್ಯುತ್ಪ್ರಭ, ನೀಲಕಂಠ, ವಿದ್ಯುದ್ವೇಗ, ನಳಿನಕೇತುಗಳೆಂಬ ವಿದ್ಯಾಧರರನ್ನು ತಂತಮ್ಮ ಸೈನ್ಯಗಳೊಡನೆ ಬರಮಾಡಿಕೊಂಡನು. ಇತ್ತ ಕೃಷ್ಣನೂ ತನ್ನ ಕಡೆಯ ಮರುತವೇಗ, ಸಿಹ್ಮದಾಡ, ಅಕಂಪನ, ಹರಿಕೇತು, ವಜ್ರಬಾಹು, ಅರುಣಚಂದ್ರ, ದಧಿಮುಖ, ಮಾನಸವೇಗ, ಧ್ರುವಕುಮಾರರೆಂಬ ವಿದ್ಯಾಧರರನ್ನು ಅನುಗೊಳಿಸಿದನು. ವಿದ್ಯಾಧರರು ಅಂತರಿಕ್ಷದಲ್ಲಿ ತಂತಮ್ಮ ಸೈನ್ಯಗಳೊಡನೆ ಯುದ್ಧಸನ್ನದ್ಧರಾದರು. ಭೂಮಿಯಮೇಲೆ ಕೃಷ್ಣಜರಾಸಂಧರ ಭೂಚರ ಸೈನ್ಯಗಳಿಗೂ ಆಕಾಶದಲ್ಲಿ ಖೇಚರಸೈನ್ಯಗಳಿಗೂ ಯುದ್ಧವು ಮೊದಲಾಯಿತು. ವಿದ್ಯಾಧರರು ಬಹು ಸಾಹಸದಿಂದ ಭಯಂಕರವಾಗಿ ಕಾದುತ್ತಿದ್ದರು. ಭೂಮಿಯಮೇಲೆ ಜರಾಸಂಧನ ಪಕ್ಷದ ವೃಷಭಸೇನನೆಂಬ ರಾಜನು ಅತ್ಯಂತ ಸಾಹಸದಿಂದ ಯಾದವರ ಸೈನ್ಯವನ್ನು ಹೊಡೆದು ತತ್ತರಗೊಳಿಸಿದನು. ಅದನ್ನು ನೋಡಿ ಬಲರಾಮನು ಕಡುಕೋಪದಿಂದವನ ಮೇಲೆಬಿದ್ದು ಅವನನ್ನು ಸಂಹರಿಸಿದನು. ಬಲರಾಮನ ಪೆಟ್ಟಿಗೆ ಶತ್ರುಸೈನ್ಯವು ಹೆದರಿ ನಿಂತಿತು. ಇನ್ನೊಂದುಕಡೆ ಯಾದವರಕಡೆಯ ವಸುಪಾಲನೆಂಬ ರಾಜನು ಘೋರವಾಗಿ ಕಾದುತ್ತಿರಲು ಅವನಿಗೆ ಜರಾಸಂಧನ ಮಗನಾದ ಕಾಲಯವನು ಇದಿರಾದನು. ಅವನನ್ನು ದಾರಣ, ಪೂರಣ, ಜರತ್ಕುಮಾರ ಮೊದಲಾದ ರಾಜರು ಇದಿರಿಸಿ ಹಿಮ್ಮೆಟ್ಟಿಸಿದರು. ಅತ್ತ ಅಂತರಿಕ್ಷದಲ್ಲಿ ಕೃಷ್ಣನಕಡೆಯ ವಿದ್ಯಾಧರರ ಕೈಮೇಲಾಯಿತು. ಅದನ್ನು ಕಂಡು ಜರಾಸಂಧನು ತನ್ನ ಭೂಚರ ಸೇನೆಯನ್ನು ಮುಂದಕ್ಕೆ ನೂಕಿ ತಾನು ದಿವ್ಯರಥವನ್ನೇರಿ ಸಿಡಿಲಿನಂತೆ ಗರ್ಜಿಸುತ್ತ ಬಂದನು. ಕೃಷ್ಣನೂ ತನ್ನ ರಥವನ್ನೇರಿ ಮುಂದೆ ಬಂದನು. ಪೂರ್ವಭವದ ವೈರದಿಂದ ಕೃಷ್ಣಜರಾಸಂಧರ ಕೋಪವು ಒಬ್ಬರನ್ನೊಬ್ಬರು ನೋಡಿನೋಡಿದನೆಯೇ ಹೆಚ್ಚಿತು. ಆಗ ಜರಾಸಂಧನು ಕೃಷ್ಣನನ್ನು ಕುರಿತು "ಎಲೆ ಕೃಷ್ಣ! ನಕಾಯುವವನೆ! ನಾನು ನಿನ್ನನ್ನು ಕೊಲ್ಲುವುದನ್ನು ತಪ್ಪಿಸುವ ಶಕ್ತಿಯಿದ್ದರೆ ನಿನ್ನ ಕುಲದೇವತೆಯನ್ನು ಬರಹೇಳು. ನೀರೊಳ್ಳೆಯ—ಹಾವಿನ ತಲೆಯಮೇಲೆ

ಹತ್ತಿ, ಕೈಕಡ್ಡಿಯನ್ನು ಬಗ್ಗಿಸಿ, ನೀರಿನಗುಳ್ಳೆ--ಶಂಖವನ್ನೂದಿ, ಒಂದು ಸಣ್ಣ ಮಣ್ಣಿನ ದಿಣ್ಣೆಯನ್ನೆತ್ತಿ, ಸಾಹಸವನ್ನು ಹೇಳಿಕೊಳ್ಳುವುದು ಬಹಳ ಚೆನ್ನಾಗಿದೆ. ನನಗೆ ಹೆದರಿ ದೇಶಕೋಶಗಳನ್ನು ಬಿಟ್ಟು ಸಮುದ್ರಮಧ್ಯದಲ್ಲಿ ಮನೆಮಾಡಿಕೊಂಡು ಜೀವಿಸುತ್ತಿರುವ ನಿನಗೆ ನನ್ನಂತಹ ಚಕ್ರವರ್ತಿಯೊಡನೆ ಯುದ್ಧವೇ? " ಎಂದು ಮೂದಲಿಸಿದನು. ಅದಕ್ಕೆ ಕೃಷ್ಣನು "ಎಲವೊ ಜರಾಸಂಧ! ನಿನ್ನ ಪುಣ್ಯದಿಂದ ಹುಟ್ಟಿ ನಿನ್ನ ವಶದಲ್ಲಿರುವ ಆ ಚಕ್ರದಿಂದ ನಿನ್ನನ್ನು ಎಲ್ಲರೂ ಚಕ್ರಿ ಎನ್ನುವರು. ಸಾಹಸವಿಲ್ಲದಿದ್ದರೇನು? ಕುಂಬಾರನನ್ನೂ "ಚಕ್ರಿ" ಎನ್ನುವರು. ಅವನಂತೆಯೇ ನೀನೊಬ್ಬ ಚಕ್ರಿಯಾಗಿರುವೆ. ಯಾರು ಸಾಹಸಿಗಳೆಂಬುದು ಯುದ್ಧದಲ್ಲಿ ತಿಳಿಯುವುದು" ಎಂದನು. ಈರ್ವರೂ ಬಿಲ್ಲಿಗೆ ಅಂಬನ್ನು ಜೋಡಿಸಿ ಯುದ್ಧಕ್ಕೆ ಆರಂಭಿಸಿದರು. ಜರಾಸಂಧನು ಪುಂಖಾನುಪುಂಖವಾಗಿ ಬಾಣಗಳನ್ನು ಬಿಡುತ್ತ ಕೃಷ್ಣನನ್ನು ಮುತ್ತಿದನು. ಕೃಷ್ಣನು ಅವನ ಬಾಣಗಳನ್ನೆಲ್ಲ ಖಂಡಿಸಿ ತನ್ನ ದಿವ್ಯಾಸ್ತ್ರಗಳಿಗೆ ಕೈಯಿಟ್ಟನು. ಜರಾಸಂಧನು ಅಗ್ನಿಬಾಣವನ್ನು ಬಿಟ್ಟನು; ಕೃಷ್ಣನದನ್ನು ಜಲಬಾಣದಿಂದ ಪರಿಹರಿಸಿದನು. ಜರಾಸಂಧನ ಸರ್ಪಾಸ್ತ್ರವನ್ನು ಗರುಡಾಸ್ತ್ರದಿಂದಲೂ ಭೂಧರಾಸ್ತ್ರವನ್ನು ವಜ್ರಾಸ್ತ್ರದಿಂದಲೂ ಗಜಬಾಣವನ್ನು ಸಿಹ್ಮಬಾಣದಿಂದಲೂ ಶರಭಬಾಣವನ್ನು ಗಂಡಭೇರುಂಡಬಾಣದಿಂದಲೂ ಕೃಷ್ಣನು ಖಂಡಿಸಿದನು. ತನ್ನ ಎಲ್ಲಾ ದಿವ್ಯಾಸ್ತ್ರಗಳನ್ನೂ ಕೃಷ್ಣನು ಖಂಡಿಸಿದುದನ್ನು ನೋಡಿ ಜರಾಸಂಧನು ಅತ್ಯಂತ ಕೋಪದಿಂದ ಸುಪ್ರಭವೆಂಬ ತನ್ನ ಚಕ್ರಕ್ಕೆ ಕೈ ನೀಡಿದನು. ಅದನ್ನು ನೋಡಿ ಯಾದವಸೈನಿಕರೆಲ್ಲ ಭಯದಿಂದ ನಡುಗಿ ಚಕ್ರವನ್ನು ಖಂಡಿಸುವುದಕ್ಕೆ ಕೃಷ್ಣನಿಂದಾಗುವುದೋ ಇಲ್ಲವೋ ಎಂದು ಯೋಚಿಸುತ್ತಿದ್ದರು. ಅಕ್ಕಪಕ್ಕದಲ್ಲಿದ್ದ ಬಲರಾಮ, ಧರ್ಮರಾಜ, ಭೀಮ, ಅರ್ಜುನ, ನಕುಲ, ಸಹದೇವ, ವಸುಪಾಲ ಮೊದಲಾದ ಯಾದವಪಕ್ಷದ ರಾಜರೆಲ್ಲರೂ ಚಕ್ರವನ್ನು ತಡೆಯುವುದಕ್ಕೆಂದು ಬಿಲ್ಲಿನಲ್ಲಿ ಶರಸಂಧಾನವನ್ನು ಮಾಡಿ ನಿಂತಿದ್ದರು. ಜರಾಸಂಧನು "ಎಲೆ ಕೃಷ್ಣ! ನನಗೆ ಶರಣಾಗು. ಇಲ್ಲವಾದರೆ ಇಗೋ ನೋಡು" ಎಂದು ಹೇಳಿ ಚಕ್ರವನ್ನು ಬಿಟ್ಟನು. ಅದು ಬಂದು ಕೃಷ್ಣನನ್ನು ಮೂರುಸುತ್ತು ಪ್ರದಕ್ಷಿಣೆ ಮಾಡಿ ಅವನ ಬಲದ ಭಾಗದಲ್ಲಿ ಬಂದು ನಿಂತಿತು. ಅದನ್ನು ನೋಡಿ ಕೃಷ್ಣನು "ಎಲವೋ ಜರಾಸಂಧ! ನೀನು ಮಾಡಿದ್ದ ಪುಣ್ಯವು ತೀರಿಹೋಯಿತು. ಈಗ ನಿನಗೆ ಜಯವೆಲ್ಲಿ ಬಂದೀತು? ಈಗಲಾದರೂ ನಿನ್ನಾ ಗರ್ವವನ್ನಳಿದು ಬಂದು ಶರಣಾಗತನಾಗು" ಎನಲು, ಜರಾಸಂಧನು "ನನ್ನ ಚಕ್ರವು ಹೋದ ಮಾತ್ರಕ್ಕೆ ನನ್ನ

ಶೌರ್ಯವು ಹೋಗುವುದೇ ? ನೋಡು " ಎಂದು ಹೇಳುತ್ತ ಕೈಯಲ್ಲಿ ಚಂದ್ರಾಯುಧವನ್ನು ಹಿಡಿದು ರಥದಿಂದಿಳಿದು ಕೃಷ್ಣನಮೇಲೆ ಬಿದ್ದನು. ಆಗ ಕೃಷ್ಣನು ತನಗೆ ವಶವಾದ ಆ ಚಕ್ರವನ್ನೇ ತಿರುಗಿಸಿ ಬಿಟ್ಟನು. ಅದು ಜರಾಸಂಧನ ತಲೆಯನ್ನು ಕತ್ತರಿಸಿತು. ಆಗ ಜಯಭೇರಿಯಾಯಿತು. ಅಂತರಿಕ್ಷದಲ್ಲಿ ದೇವತೆಗಳು ಪುಷ್ಪ ವೃಷ್ಟಿಯನ್ನು ಸುರಿದರು. ಕೃಷ್ಣನು ಅಭಯಘೋಷವನ್ನು ಮಾಡಲು ಎಲ್ಲರೂ ಬೀಡಿಗೆ ಹೋದರು. ಅತ್ತ ವಿಜಯಾರ್ಧಪರ್ವತಕ್ಕೆ ಹೋಗಿದ್ದ ವಸುದೇವ, ಮನ್ಮಥ, ಶಂಭುಕುಮಾರ ಇವರೂ ಖೇಚರರನ್ನು ಜಯಿಸಿ ಬೀಡಿಗೆ ಬಂದು ಸೇರಿದರು. ಕೃಷ್ಣನು ಜರಾಸಂಧನ ಅನುಜರನ್ನೂ ಮಕ್ಕಳನ್ನೂ ಕರೆಸಿ ಅವರನ್ನು ಸಮಾಧಾನಮಾಡಿ ಕಳುಹಿದನು.

ಪಾಂಡವರು ಧೃತರಾಷ್ಟ್ರ ಗಾಂಧಾರಿಯರ ಬಳಿಗೆ ಹೋಗಿ ಅವರಿಗೆ ನಮಸ್ಕರಿಸಿ ಅವರನ್ನೂ ಕೌರವನ ಪತ್ನಿ ಮೊದಲಾದ ಬಂಧುಗಳನ್ನೂ ಸಮಾಧಾನಪಡಿಸಿದರು. ಕರ್ಣನ ವಿಯೋಗಕ್ಕಾಗಿ ದುಃಖಪಡುತ್ತಿದ್ದ ಕೊಂತಿಯನ್ನು ನೋಡಿ ಪಾಂಡವರು ಆಕೆಯನ್ನು ಪ್ರಶ್ನೆಮಾಡಿ ಕರ್ಣನು ತಮ್ಮ ಹಿರಿಯಣ್ಣನೆಂದು ತಿಳಿದು ತಾವೂ ದುಃಖಪಟ್ಟರು. ಹೀಗೆ ದುಃಖಪಡುತ್ತಿರುವ ಪಾಂಡವರನ್ನು ಸಮಾಧಾನಪಡಿಸಿ ಎಲ್ಲರೊಡನೆ ಕೃಷ್ಣನು ದ್ವಾರಾವತಿಗೆ ಹೊರಟನು. ಜಯಶೀಲರಾಗಿ ಬರುತ್ತಿರುವ ಕೃಷ್ಣಬಲರಾಮರನ್ನು ಇದಿರ್ಗೊಳ್ಳಲು, ಸಮುದ್ರವಿಜಯನು ಪಟ್ಟಣವನ್ನು ಶೃಂಗರಿಸಿ ಅತ್ಯಂತ ವೈಭವದಿಂದ ಆ ಮಕ್ಕಳನ್ನು ಇದಿರ್ಗೊಂಡು ಪಟ್ಟಣಪ್ರವೇಶಮಾಡಿಸಿ ಮೆರೆವಣಿಗೆಯಿಂದ ಅರಮನೆಗೆ ಕರೆದುಕೊಂಡು ಹೋದನು. ಕೃಷ್ಣನು ಅರಮನೆಗೆ ಬಂದು ಶ್ರೀ ನೇಮಿನಾಥರಿಗೆ ವಂದಿಸಿ " ಸ್ವಾಮಿ ! ನಿಮ್ಮ ಸೇವೆಯಿಂದ ಉತ್ತಮವಾದ ಮೋಕ್ಷಸುಖವೂ ಚಕ್ರವರ್ತಿ ಸಂಪತ್ತೂ ಉಂಟಾಗುವುದಾಶ್ಚರ್ಯವೇ ? " ಎಂದು ಮತ್ತೊಮ್ಮೆ ನಮಸ್ಕರಿಸಿ ಅನಂತರ ಯುದ್ಧದಲ್ಲಿ ಸಹಾಯಕರಾಗಿ ಬಂದಿದ್ದ ಸಮಸ್ತ ರಾಜರುಗಳನ್ನೂ ಮನ್ನಿಸಿ ಕಳುಹಿದನು. ಕೆಲವು ದಿನಗಳ ಬಳಿಕ ಕೃಷ್ಣನು ಧರ್ಮರಾಜಾದಿಗಳನ್ನು ಹಸ್ತಿನಾಪುರಕ್ಕೆ ಕಳುಹಿಸಿಕೊಟ್ಟನು.

ಇತ್ತ ಹಸ್ತಿನಾಪುರಿಗೆ ಬಂದು ಧರ್ಮರಾಜನು ಧೃತರಾಷ್ಟ್ರನಿಗೂ ವಿದುರನಿಗೂ ಬೇರೆಬೇರೆ ದೇಶವನ್ನಿತ್ತು, ಹಸ್ತಿನಾಪುರವನ್ನು ತನ್ನ ತಮ್ಮಂದಿರಿಗಿತ್ತು ತಾನು ದಕ್ಷಿಣ ಮಧುರಾಪುರಕ್ಕೆ ಬಂದು ಅಲ್ಲಿ ರಾಜ್ಯವನ್ನಾಳುತ್ತ ಸುಖದಿಂದಿದ್ದನು.

ಇತ್ತ ಕೃಷ್ಣ ಬಲರಾಮರು ದ್ವಾರಾವತಿಯ್ಲಿ ಅತ್ಯಂತ ಸುಖದಲ್ಲಿರುತ್ತಿದ್ದು ಒಂದುದಿನ ಕೃಷ್ಣನು ದಿಗ್ವಿಜಯಕ್ಕೆ ಹೋಗಲೆಳಸಿ ಮಾರ್ಗಶಿರ ಶುದ್ಧದಶಮಿಯ ದಿನ ಭೇರಿಯನ್ನು ಹೊಡೆಸಿ ಶ್ರೀ ನೇಮಿಜಿನೇಶ್ವರರನ್ನು ಪೂಜಿಸಿ, ಸ್ತುತಿಸಿ, ನಮಸ್ಕರಿಸಿ ಬೀಳ್ಕೊಂಡು, ಚಕ್ರಾದಿ ರತ್ನಗಳನ್ನು ಪೂಜಿಸಿ ಅಪರಿಮಿತ ಸೈನ್ಯಸಮೇತನಾಗಿ ಬಲರಾಮನೊಡನೆ ಪ್ರಯಾಣಬೆಳಸಿ ಆರ್ಯಖಂಡದ ಸಮಸ್ತರಾಜರಿಂದಲೂ ಕಪ್ಪ ಕಾಣಿಕೆಗಳನ್ನು ತೆಗೆದುಕೊಳ್ಳುತ್ತಲೂ ರಾಜಕನ್ಯಾರತ್ನಗಳನ್ನು ವಿವಾಹಮಾಡಿಕೊಳ್ಳುತ್ತಲೂ ವಿಜಯಾರ್ಧಗಿರಿಯ ಬಳಿಗೆ ಹೋಗಿ ವಿದ್ಯಾಧರರಾಜರನ್ನು ಜಯಿಸಿ ಕೈಲಾಸಗಿರಿಗೆ ಬಂದು ಭರತೇಶ್ವರರಚಿತವಾದ ಎಪ್ಪತ್ತೆರಡು ತೀರ್ಥಂಕರರ ಚೈತ್ಯಾಲಯಗಳಲ್ಲಿರುವ ಜಿನಬಿಂಬಗಳನ್ನು ಪೂಜಿಸಿ, ಅಲ್ಲಿಂದ ಹೊರಟು ಗಂಗಾನದಿಯ ಪೂರ್ವ ದಿಕ್ಕಿನ ಮ್ಲೇಚ್ಛಖಂಡದ ರಾಜರನ್ನೂ ದಕ್ಷಿಣಸಮುದ್ರದ ತಡಿಯ ಮಾಗಧ ಪ್ರಭಾಸಾಗರರೆಂಬ ಅತಿಶೂರರಾದ ಅಸುರರನ್ನೂ ಸಿಂಧುನದಿಗೂ ಸಮುದ್ರಕ್ಕೂ ಮಧ್ಯದಲ್ಲಿರುವ ಮ್ಲೇಚ್ಛದೇಶದ ರಾಜರನ್ನೂ ಜಯಿಸಿ ಉತ್ತಮವಸ್ತು ವಾಹನಾದಿಗಳನ್ನೂ ಅವರ ಕನ್ಯಾರತ್ನಗಳನ್ನೂ ಕಪ್ಪ ತೆಗೆದುಕೊಂಡು ಭರತತ್ರಿಖಂಡವನ್ನೆಲ್ಲ ಗೆದ್ದು ದ್ವಾರಾವತಿಗೆ ಹಿಂದಿರುಗಿ ಬಂದು ಸೇರಿದನು.

ಆಗ ಅಧೀನರಾಜರೂ ಹಸ್ತಿನಾಪುರದಿಂದ ಪಾಂಡವರೂ ಬಂದು, ತ್ರಿಖಂಡ ಚಕ್ರವರ್ತಿಯೂ ಸಾವಿರ ಯಕ್ಷರಿಂದ ಕಾಪಿಡಲ್ಪಟ್ಟ ಚಕ್ರ, ಗದೆ, ಶಕ್ತಿ, ಶಂಖ, ಶಾರ್ಙ್ಗ, ಕೌಸ್ತುಭ, ನಂದಕಗಳೆಂಬ ದಿವ್ಯರತ್ನಗಳುಳ್ಳವನೂ ನೀಲವರ್ಣನೂ ಹತ್ತು ಬಿಲ್ಲು ಉನ್ನತವಾದ ದೇಹವುಳ್ಳವನೂ ಹದಿನಾರು ಸಾವಿರ ಮುಕುಟಾಧೀಶ್ವರರ್ಗೊಡೆಯನೂ ಹದಿನಾರುಸಾವಿರ ಸತಿಯರ ಪತಿಯೂ ಆದ ಕೃಷ್ಣನನ್ನೂ ಬಲರಾಮನನ್ನೂ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ, ಸಾಸಿರದೆಂಟು ಕಲಶತೀರ್ಥೋದಕಗಳಿಂದಭಿಷೇಕಮಾಡಿ ದಿವ್ಯವಸ್ತ್ರಾಭರಣಗಳಿಂದಲಂಕರಿಸಿ ಮುತ್ತಿನ ಸೇಸೆಯನ್ನಿಟ್ಟು ಹರಸಿದರು. ಹಲ, ಮುಸಲ, ಗದೆ, ಪರಿಘವೆಂಬ ನಾಲ್ಕು ಆಯುಧಗಳುಳ್ಳವನೂ ಸಾವಿರದ ಇನ್ನೂರು ವರ್ಷ ಆಯುಃಪ್ರಮಾಣವುಳ್ಳವನೂ ಶುಭ್ರವರ್ಣನೂ ಹತ್ತು ಬಿಲ್ಲಿನಷ್ಟು ಎತ್ತರವಾದ ದೇಹವುಳ್ಳವನೂ ಎಂಟುಸಾವಿರ ಮಂದಿ ಪತ್ನಿಯರುಳ್ಳವನೂ ಆದ ಬಲರಾಮನೊಡನೆ ಕೃಷ್ಣನು ರಾಜ್ಯಭಾರಮಾಡಿಕೊಂಡಿದ್ದನು.

# ೩೨. ನೇಮಿನಾಥ್ವರ ನಿರ್ವೇಗಸಂಧಿ



ಒಂದುದಿನ ಕೃಷ್ಣ ಬಲರಾಮ ಮೊದಲಾದ ಸಮಸ್ತರೂ ತನಗೆ ನಮಸ್ಕರಿಸು ತ್ತಿರಲು ಶ್ರೀ ನೇಮಿನಾಥನು ಇಂದ್ರನಿಂದ ಕಳುಹಲ್ಪಟ್ಟ ದಿವ್ಯವಸ್ತ್ರಾಭರಣಗಳಿಂದಲಂ ಕೃತನಾಗಿ ಅಮರಸ್ತ್ರೀಯರಿಂದ ಚಾಮರವನ್ನು ಬೀಸಿಸಿಕೊಳ್ಳುತ್ತ ಯಕ್ಷ, ನಾಗ, ಕಿನ್ನರ, ಕಿಂಪುರುಷಾದಿ ದೇವತೆಗಳಿಂದ ಓಲೈಸಿಕೊಳ್ಳುತ್ತ. ಒಡ್ಡೋಲಗದಲ್ಲಿರುವ ಸಮಯದಲ್ಲಿ ಕೆಲರು ಎದ್ದು ಕೈಮುಗಿದು "ದೇವ! ತಮ್ಮ ಬಾಹುವಿನ ಶಕ್ತಿಯನ್ನು ನಾವು ನೋಡಬೇಕು" ಎಂದು ಬೇಡಿಕೊಳ್ಳಲು, ಸ್ವಾಮಿಯು ಸಂತೋಷದಿಂದ ಕೈಯನ್ನು ಚಾಚಿ ಕಿರುಬೆರಳನ್ನು ನೀಡಿದನು. ಆಗ ಕೃಷ್ಣನೆದ್ದು ಆ ಬೆರಳನ್ನು ಬಗ್ಗಿ ಸಲು ಪ್ರಯತ್ನಿಸಿದನು. ಅದು ವಜ್ರದಂಡದಂತೆ ಗಟ್ಟಿಯಾಗಿದ್ದುದರಿಂದ ಅದನ್ನು ಬಗ್ಗಿಸಲಾಗಲಿಲ್ಲ. ಸ್ವಾಮಿಯು ಕೈಯನ್ನು ಮೇಲಕ್ಕೆತ್ತಲು ಕೃಷ್ಣನು ಬೆಂಡಿನ ಬೊಂಬೆಯಂತೆ ತೂಗಾಡಿದನು. ಆಗ ಕೃಷ್ಣನು ಚಂದನವೃಕ್ಷದ ಕೊಂಬೆಯಲ್ಲಿ ನೇತಾಡುವ ತುಂಬಿಯಂತೆ ಕಾಣುತ್ತಿದ್ದನು. ಸುರರು ಪುಷ್ಪವೃಷ್ಟಿಯನ್ನು ಸುರಿದರು. ದೇವದುಂದುಭಿಯು ಮೊಳಗಿತು. ಕೃಷ್ಣನಿಗೆ ಮನಸ್ಸಿನಲ್ಲಿ ಸ್ವಲ್ಪ ಲಜ್ಜೆಯುಂಟಾಯಿತು.

ಹೀಗೆ ಕೆಲವುಕಾಲ ಕಳೆಯಲು ವಸಂತರ್ತುವು ಪ್ರಾಪ್ತವಾಯಿತು ಎಲ್ಲೆ ಲ್ಲೂ ಮಲ್ಲಿಗೆ ಮೊದಲಾದ ಹೂಗಳು ಅರಳಿ ಅವುಗಳ ಗಂಧದಿಂದ ಕೂಡಿದ ತಂಗಾ ಳಿಯು ಬೀಸಿತು. ಮಾವಿನ ಮರಗಳು ಚಿಗುರಿದುವು. ಕೋಗಿಲೆಗಳು ಪಂಚಮ ರಾಗವನ್ನು ಹಾಡಿದುವು. ಕೊಳಗಳ ನೀರು ತಿಳಿಯಾಯಿತು. ಆಗ ಕೃಷ್ಣನು ಶ್ರೀ ನೇಮಿನಾಥರಲ್ಲಿಗೆ ಬಂದು ಕೈಮುಗಿದು, "ದೇವ! ವಸಂತಕಾಲವು ಪ್ರಾಪ್ತವಾಗಿದೆ. ಜಲಕೇಳಿ ವನಕೇಳಿಗಳಿಗೆ ಉದ್ಯಾನಕ್ಕೆ ದಯಮಾಡಿಸಬೇಕು" ಎಂದು ಬಿನ್ನವಿಸಿ ದನು. ಸ್ವಾಮಿಯು ಒಪ್ಪಿ ಎಲ್ಲರೊಡನೆ ಹೊರಟು ನಂದನವನಕ್ಕೆ ಹೋಗಿ ವನಕೇಳಿ ಜಲಕೇಳಿಯನ್ನಾಡಿ, ಸರೋವರದಿಂದ ಹೊರಕ್ಕೆ ಬಂದು ತಮ್ಮ ಒದ್ದೆಯಾದ ವಸ್ತ್ರ ಗಳನ್ನು ಬಿಚ್ಚುವಾಗ ಕೃಷ್ಣನು ಅವರಿಗೆ ಸನ್ನೆಮಾಡಲು ಅವರು ಸತ್ಯಭಾಮೆಗೆ ಆ ಬಟ್ಟೆಗಳನ್ನು ಹಿಡಿದುಕೊಳ್ಳುವಂತೆ ಹೇಳಿ ಕೊಡುವಾಗ "ಅಕೆಯು ಭರತ ತ್ರಿಖಂಡಾಧೀಶ್ವರನ ಪಟ್ಟದರಸಿಯಾದ ನಾನು ಸೇವಕರಂತೆ ಉಟ್ಟು ತೆಗೆದ ಬಟ್ಟೆ

ಯನ್ನು ಹಿಡಿವೆನೇ ? '' ಎಂದು ಗರ್ವದಿಂದ ಹೇಳಿದುದನ್ನು ಕೇಳಿ ರುಗ್ಮಿಣಿಯು ಕೋಪದಿಂದ "ಅಕ್ಕ ! ಈತನು ಸ್ನಾನಮಾಡಿದ ನೀರನ್ನು ದೇವಾಧಿದೇವತೆಗಳೆಲ್ಲರೂ ತಲೆಯಮೇಲೆ ತಳಿದುಕೊಳ್ಳುವರು. ಇದು ನಿನಗೆ ತಿಳಿಯದೇ ? '' ಎಂದಳು. ಆಗ ಸತ್ಯಭಾಮೆಯು '' ಸಣ್ಣವಯಸ್ಸಿನಲ್ಲೇ ರಾಕ್ಷಸಿಯರನ್ನು ಕೊಂದು, ಗೋವರ್ಧನ ಪರ್ವತವನ್ನೆತ್ತಿ, ಉರಗಶಯ್ಯೆಯನ್ನೇರಿ, ಶಾರ್ಙ್ಗಧನುಸ್ಸನ್ನೇರಿಸಿ, ಪಾಂಚಜನ್ಯವನ್ನೂದಿ, ಜರಾಸಂಧನನ್ನು ಸಂಹರಿಸಿದವನಿಗೆ ಲೋಕದಲ್ಲಿ ಸಮಾನರಾರು ? ನನಗೆ ಊಳಿಗವನ್ನು ಹೇಳಬಹುದೇ ? ' ಎಂದುತ್ತರವಿತ್ತಳು. ಮತ್ತೆ ರುಗ್ಮಿಣಿಯು ' ಈ ನೇಮೀಶ್ವರನು ಹುಟ್ಟುವುದಕ್ಕೆ ಮುಂಚೆ ಮನುಷ್ಯರ ರೂಪವನ್ನು ನೋಡಿ ಹೇಸಿ ಸುತ್ತಿದ್ದ ದೇವತೆಗಳೆಲ್ಲ ದೇವೇಂದ್ರ, ಯಕ್ಷೇಂದ್ರ, ಪನ್ನಗೇಂದ್ರರೊಡಗೂಡಿಬಂದು ಇಂದ್ರನು ಆರುತಿಂಗಳ ವರೆಗೆ ರತ್ನದ ಮಳೆಯನ್ನು ಸುರಿಸಿ ದೇವಸ್ತ್ರೀಯರಿಂದ ಇವನ ಮಾತೆಯಾದ ಶಿವದೇವಿಯ ಗರ್ಭಶೋಧನೆಮಾಡಿಸಿ, ದೇವಸ್ತ್ರೀಯರನ್ನು ಅವರಿಗೆ ಸೇವಕಿಯರನ್ನಾಗಿ ನಿಯಮಿಸಿದ್ದು ಮಗು ಹುಟ್ಟಿದೊಡನೆ ಅದನ್ನು ಮೇರುಗಿರಿಗೆ ತೆಗೆದುಕೊಂಡು ಹೋಗಿ ಪಾಲ್ಗಡಲ ನೀರಿಂದಭಿಷೇಕಮಾಡಿ, ಈತನ ಸೇವೆ ಮಾಡಿ ಹೋದುದು ಲೋಕಕ್ಕೆ ಗೊತ್ತಿಲ್ಲವೇ ? ಇವನ ಪಾದಗಳನ್ನು ತೊಳೆದ ನೀರಿನಲ್ಲಿ ಸ್ನಾನಮಾಡುವ ದೇವತೆಗಳ ಎಡಗಾಲಿನ ಬೆರಳನ್ನು ನೀನು ನೋಕಿದರೆ ನೀನು ಲೋಕದಲ್ಲೆಲ್ಲ ದೊಡ್ಡವಳೇ ಸರಿ '' ಎಂದು ಹೇಳಲು ಕೇಳಿ ಸತ್ಯಭಾಮೆಯು ನಾಚಿ ಹೊರಟುಹೋದಳು. ಬಳಿಕ ರುಗ್ಮಿಣಿಯು ಅತ್ಯಂತ ಚಿತ್ತಶುದ್ಧಿಯಿಂದ ನಿತ್ಯಸುಖವನ್ನು ಬಯಸಿ ಆ ಸ್ವಾಮಿಯು ವಿಸರ್ಜಿಸಿದ್ದ ಬಟ್ಟೆಯನ್ನು ಸೇವಕಳಂತೆ ತೆಗೆದುಕೊಂಡಳು. ಬಳಿಕ ಕೃಷ್ಣ ಬಲರಾಮರು ದಿವ್ಯವಸ್ತ್ರಾಭರಣಗಳಿಂದ ನೇಮೀಶ್ವರನನ್ನು ಪೂಜಿಸಿ ಪಟ್ಟಣಪ್ರವೇಶಮಾಡಿ ತಮ್ಮ ಅರಮನೆಗೆ ಹೋದರು.

ಇತ್ತ ಆ ನೇಮಿಕುಮಾರನಿಗೆ ಸತ್ಯಭಾಮೆಯಾಡಿದ ಹೆಮ್ಮೆಯ ಮಾತಿನಿಂದ ಮನಸ್ಸಿನಲ್ಲಿ ಕೋಪವುಂಟಾಯಿತು. ಆನೆಯನ್ನೇರಿ ದೇವತೆಗಳಿಂದ ಪರಿವೃತನಾಗಿ ವನದಿಂದ ಅರಮನೆಗೆ ಬರುತ್ತಾ ನೇಮಿನಾಥನು ಅಸ್ತ್ರಶಾಲೆಗೆ ಹೋಗಿ, ಉರಗಶಯ್ಯೆಯನ್ನೇರಿ ಶಾರ್ಙ್ಗಧನುಸ್ಸನ್ನು ಎಡಗೈಯಲ್ಲೇರಿಸಿ ಪಾಂಚಜನ್ಯವನ್ನು ತೆಗೆದುಕೊಂಡು ಎಡದ ಮೂಗಿನಹೊಳ್ಳೆಯಿಂದ ಊದಲು ಭೂಮಿಯು ನಡುಗಿತು, ದಿಕ್ತಟಗಳು ಅದುರಿದುವು ಆ ಶಬ್ದದಿಂದ ಬೆದರಿದ ಮದಗಜಗಳೂ ಕುದುರೆಗಳೂ ಕಟ್ಟಿದ್ದ ಕಂಭಗಳನ್ನು ಮುರಿದು ನಗರದಲ್ಲೆಲ್ಲ ಓಡಾಡಿದುವು. ಈ ಶಬ್ದವನ್ನು ಕೇಳಿ ಇದೇನದ್ಭುತವೆಂದು ಬಲರಾಮನು ಗದೆಯನ್ನು ಹಿಡಿದನು. ಕೃಷ್ಣನು ಚಂದ್ರಾಯುಧ

ವನ್ನು ಝುಳಪಿಸಿದನು. ಅಷ್ಟರಲ್ಲಿ ನೇಮಿಶ್ವರನು ತನ್ನ ಅರಮನೆಗೆ ಬಂದು ಸೇರಿದನು. ಇತ್ತ ಆಯುಧಶಾಲೆಯಲ್ಲಿ ಆ ದಿವ್ಯರತ್ನಗಳನ್ನು ಕಾಯುತ್ತಿದ್ದ ದೇವತೆಗಳು ಕೃಷ್ಣನಲ್ಲಿಗೆ ಹೋಗಿ ನಡೆದ ವಾರ್ತೆಯನ್ನೆಲ್ಲ ತಿಳಿಸಿದುವು. ಅದೆಲ್ಲವನ್ನೂ ಕೇಳಿ ಕೃಷ್ಣನು " ಸುರನರೋರಗಕಿನ್ನರಾದಿಗಳಿಂದ ಸೇವಿತನಾಗಿರುವ ಈ ನೇಮಿಶನು ನನ್ನ ರಾಜ್ಯವನ್ನು ಸೆಳೆದುಕೊಂಡರೆ ತಡೆಯುವರುಂಟೇ ? ' ಎಂದು ಯೋಚಿಸಿ ಆ ವಿಷಯವನ್ನು ತನ್ನ ಅಣ್ಣನಾದ ಬಲರಾಮನಿಗೆ ತಿಳಿಸಿದನು. ಅದಕ್ಕೆ ಅವನು "ದಿವ್ಯಜ್ಞಾನಿಗಳು ಮೋಹೋದ್ರೇಕದ ರಾಜ್ಯಲಂಪಟಕ್ಕೆ ಸಿಕ್ಕುವವರಲ್ಲ. ಅವರು ಅನಂತವಾದ ಮೋಕ್ಷಸುಖವನ್ನು ಇಚ್ಛಿಸುವರು " ಎನಲು ಅದಕ್ಕೆ ಕೃಷ್ಣನು " ಹಿಂದಿನ ತೀರ್ಥಂಕರರು ಚಕ್ರವರ್ತಿಸಂಪತ್ತನ್ನನುಭವಿಸಿ, ಕೊನೆಗೆ ಮೋಕ್ಷಸುಖವನ್ನು ಹೊಂದಿರುವರೆಂಬುದನ್ನು ನೀವು ತಿಳಿದಿಲ್ಲವೇ ? " ಎಂದನು. ಆಗ ಏಕಕುಂಡಲನು " ಉಪಾಯಾಂತರದಿಂದ ಶ್ರೀ ನೇಮಿಕುಮಾರನಿಗೆ ವೈರಾಗ್ಯವುಂಟಾಗುವಂತೆ ಮಾಡೋಣ " ಎನಲು ಕೇಳಿ ಕೃಷ್ಣನು ಸಂತುಷ್ಟನಾಗಿ ಒಪ್ಪಿಕೊಂಡನು.

ಕೆಲವುದಿನಗಳನಂತರ ಒಂದುದಿನ ಕೃಷ್ಣನು ಸಮುದ್ರವಿಜಯರನ್ನು ಕಂಡು ನೇಮಿಶರಿಗೆ ಯೌವನವು ಬಂದಿರುವುದೆಂದೂ ವಿವಾಹವನ್ನು ನೆರವೇರಿಸಬೇಕೆಂದೂ ಹೇಳಿದನು. ಅದಕ್ಕೆ ಅವರು ಒಡಂಬಡಲು ಎಲ್ಲರೂ ಬಂದು ನೇಮಿಶ್ವರರಿಗೆ ನಮಸ್ಕರಿಸಿ ಆ ಶುಭಕಾರ್ಯಕ್ಕೆ ಅವರನ್ನೊಪ್ಪಿಸಿದರು. ಬಳಿಕ ಕೃಷ್ಣನು ಉಗ್ರಕುಲದ ಉಗ್ರಸೇನರಾಜನ ಮಗಳು ರಾಜೀಮತಿ ಮೊದಲಾದ ಐನೂರುಮಂದಿ ರಾಜಪುತ್ರಿಯರನ್ನು ಕರೆಸಿದನು. ತಳಿರು, ತೋರಣ, ಮೇಲುಕಟ್ಟು, ಮುತ್ತಿನ ರಂಗವಲಿಗಳಿಂದ ಆ ರಾಜಭವನವು ಶೋಭಿಸಿತು. ಅತ್ಯಂತ ಮನೋಹರವಾಗಿ ದಿವ್ಯರತ್ನಖಚಿತವಾದ ವಿವಾಹಮಂಟಪವು ರಚಿಸಲ್ಪಟ್ಟಿತು. ಸರ್ವಾಭರಣಭೂಷಿತೆಯರಾದ ಆ ರಾಜಪುತ್ರಿಯರು ರತಿದೇವಿಯೇ ಅನೇಕ ರೂಪುಗಳಿಂದ ಬಂದಿರುವಳೋ ಎಂಬಂತೆ ಕಣ್ಗೊಳಿಸಿದರು. ನೇಮಿಕುಮಾರರಿಗೆ ಮಂಗಳಸ್ನಾನವನ್ನು ಮಾಡಿಸಿ ದಿವ್ಯರತ್ನಾಭರಣಗಳಿಂದಲಂಕರಿಸಿ ಆನೆಯಮೇಲೆ ಕುಳ್ಳಿರಿಸಿ ಮೆರೆವಣಿಗೆ ಹೊರಟರು. ದೇವಸ್ತ್ರೀಯರು ಇಕ್ಕೆಲದಲ್ಲಿ ಚಾಮರವನ್ನು ಬೀಸುತ್ತಿದ್ದರು. ರನ್ನಗನ್ನಡಿಯನ್ನೂ ಸುವರ್ಣಕುಂಭಗಳನ್ನೂ ಹಿಡಿದರು. ಕಿನ್ನರಸ್ತ್ರೀಯರು ಹಾಡುತ್ತಿದ್ದರು. ಹೀಗೆ ವೈಭವದಿಂದ ಬರುತ್ತಿರುವಾಗ ಇದಿರ್ಗಡೆಯಲ್ಲಿ ಅನೇಕ ಮೃಗಪಶುಗಳನ್ನು ಕಟ್ಟಿದ್ದರು. ಅವು ಹಸಿವುತೃಷೆಗಳಿಂದ ಗೋಳಿಡುತ್ತಿದ್ದುವು. ಅದನ್ನು ನೋಡಿ ನೇಮಿಕುಮಾರರು ಮನಕರಗಿ ಆನೆಯನ್ನು ನಿಲ್ಲಿಸಿ "ಅವಿವೇಕದಿಂದ ಇಲ್ಲಿ ಈ

ಮೃಗಗಳನ್ನಿರಿಸಿದವರಾರು ?" ಎಂದು ಕೇಳಲು ಅಲ್ಲಿ ಕಾವಲಿದ್ದ ಸೇವಕರು "ಸ್ವಾಮಿ ! ತಮ್ಮ ಮದುವೆಗೆ ಬರುವ ಮಾಂಸಾಹಾರಿಜನರ ಭೋಜನಕ್ಕಾಗಿ ಈ ಪ್ರಾಣಿಗಳನ್ನು ತಂದಿರುತ್ತೇವೆ" ಎಂದು ಕೃಷ್ಣನು ಹೇಳಿಕೊಟ್ಟಿದ್ದಂತೆ ಉತ್ತರ ವಿತ್ತರು. ಅದನ್ನು ಕೇಳಿ ನೇಮಿನಾಥರು "ಇಷ್ಟು ಮೃಗಗಳನ್ನು ಕೊಂದು ನಾನು ಮದುವೆಮಾಡಿಕೊಳ್ಳುವುದು, ಪ್ರಥಮಚುಂಬನದಲ್ಲಿ ಹಲ್ಲುಮುರಿದಂತಾದುದು. ನನ್ನ ಈ ಅಲ್ಪವಾದ ಸುಖಕ್ಕಾಗಿ ಅನ್ಯಾಯದಿಂದ ಪಶುಗಳನ್ನು ಕೊಲ್ಲಿಸಿ ಹೆಂಗಳನ್ನು ಮದುವೆಯಾಗುವುದು ಚೆನ್ನಾಯ್ತು" ಎಂದು ಯೋಚಿಸಿ ಮುಕ್ತಿಲಕ್ಷ್ಮಿ ಯೊಡನೆ ಮದುವೆಯಾಗುವೆನೆಂದು ಮನಸ್ಸಿನಲ್ಲಿ ವೈರಾಗ್ಯವನ್ನು ಹೊಂದಿದರು. ಆಗ "ಶುಭಲಗ್ನವು ಬಂದಿದೆ, ದಯಮಾಡಿಸಬೇಕು" ಎನಲು ಕೇಳಿ ನೇಮಿನಾಥರು "ಈ ಮದುವೆಯು ಅನೇಕ ಪಾಪವನ್ನುಂಟುಮಾಡುವುದು. ಅನಂತಸುಖವನ್ನೀ ಯುವ ಮುಕ್ತಿಶ್ರೀಯೊಡನೆ ನಾನು ಮದುವೆಯಾಗುವೆನು. ಹಿಂಸೆಗೆ ಕಾರಣ ವಾದ ಈ ಸಂಸಾರದಿಂದ ಹೊರಡುವೆನು" ಎಂದು ಸಂಸಾರಕ್ಕೆ ಕೊಕ್ಕರಿಸಿ ಅಲ್ಲಿಂದ ಹಿಂದಿರುಗಿ ಅರಮನೆಗೆ ಬಂದರು. ಆ ವರ್ತಮಾನವನ್ನು ಕೇಳಿ ಸಮು ದ್ರವಿಜಯನು ಆಶ್ಚರ್ಯಪಟ್ಟನು. ಶಿವದೇವಿಯು ಮೂರ್ಛೆಹೊಂದಿದಳು. ಆಗ ನೇಮಿನಾಥರು ತಂದೆತಾಯಿಗಳಿದ್ದಲ್ಲಿಗೆ ಬಂದು ಅವರನ್ನು ಎಚ್ಚರಿಸಿ "ಮಂಜಿನ ಬಳ ಕಿನಂತೆ ಕ್ಷಣಭಂಗುರವಾದ ಐಶ್ವರ್ಯ, ಯೌವನ, ಬಂಧುಬಾಂಧವರು ಇವರಲ್ಲಿ ಆಸಕ್ತನಾಗಿರುವವನು ಮೂಢನು" ಎಂದು ಮುಂತಾಗಿ ಅನೇಕ ವಿಧವಾದ ಬೋಧನೆಗಳಿಂದೊಡಂಬಡಿಸಿ ದೀಕ್ಷೋನ್ಮುಖರಾದರು. ಆಗ ದೇವತೆಗಳು ಪುಷ್ಪ ವೃಷ್ಟಿಗರೆದರು. ಲೌಕಾಂತಿಕಾಮರರು ಬಂದು ನೇಮಿನಾಥರಿಗೆರಗಿ "ಎಲೈ ಸ್ವಾ ಮಿಯೆ ! ತಾವು ಲೋಕದಲ್ಲಿ ಧರ್ಮಾಮೃತವರ್ಷಣಕಾರ್ಯವನ್ನು ಆತುರ ದಿಂದ ಮಾಡಬೇಕು' ಎಂದು ಹೇಳಿ ಹೊರಟುಹೋದರು. ಆಗ ಇಂದ್ರನು ಚತುರ್ನಿಕಾಯದೇವತೆಗಳೊಡನೆ ಬಂದು ವಂದಿಸಿ ಸ್ವಾಮಿಯನ್ನು ರತ್ನಪೀಠದಲ್ಲಿ ಕುಳ್ಳಿರಿಸಿ ಇಂಗಡಲ ಜಲದಿಂದಭಿಷೇಕಮಾಡಿ ದಿವ್ಯರತ್ನಭೂಷಣಗಳಿಂದಲಂಕರಿಸಿ ಪೂಜಿಸಿ ದೀಕ್ಷಾ—ಪರಿನಿಷ್ಕ್ರಮಣ ಕಲ್ಯಾಣವನ್ನು ಮಾಡಿದನು. ಅನಂತರ ನೇಮಿಜಿನನು ಮಾತಾಪಿತೃಮೊದಲಾದವರಿಂದ ಬೀಳ್ಕೊಂಡು ಮಣಿಮಯ ಶಿಬಿಕೆ ಯನ್ನೇರಲು ಏಳುಹೆಜ್ಜೆ ರಾಜರೂ, ಅಲ್ಲಿಂದ ಏಳುಹೆಜ್ಜೆ ವಿದ್ಯಾಧರರೂ, ಮುಂದೆ ದೇವತೆಗಳೂ ಆ ಪಲ್ಲಕ್ಕಿಯನ್ನು ಹೊತ್ತುಕೊಂಡು ಕಿನ್ನರಾದಿ ದೇವತೆಗಳ ಗೀತನೃತ್ಯ ವಾದ್ಯಗಳೊಡನೆ ಪರಮೋತ್ಸಾಹದಿಂದ ಹೋಗಿ ದ್ವಾರಾವತಿಯ ಹೊರಗಣ

ಉದ್ಯಾನದ ಮಧ್ಯದಲ್ಲಿ ದೇವನಿರ್ಮಿತವಾದ ಹಸೆಯ ಮಂಟಪದಲ್ಲಿಳಿಸಿದರು. ಆಗ ಸ್ವಾಮಿಯು ಪೂರ್ವಾಭಿಮುಖನಾಗಿ ಕುಳಿತು ಬಾಹ್ಯಾಭ್ಯಂತರ ಪರಿಗ್ರಹಗಳನ್ನು ಬಿಟ್ಟು, ಕತ್ತಿಯಿಂದ ಒರೆಯನ್ನು ಬೇರೆಮಾಡುವಂತೆ, ತನ್ನ ದೇಹದಲ್ಲಿದ್ದ ಆಭರಣಾದಿಗಳನ್ನೆಲ್ಲ ಕಳೆದು, ಕರ್ಮವೆಂಬ ಲತೆಯ ಬೇರುಗಳನ್ನು ಕೀಳುವಂತೆ, ತಲೆಯ ಕೂದಲನ್ನು ಕಿತ್ತನು. ಆ ಕೂದಲನ್ನು ದೇವೇಂದ್ರನು ಅಂತುಕೊಂಡು ಹೋಗಿ ಸಮುದ್ರದಲ್ಲಿ ಬಿಟ್ಟನು. ಬಳಿಕ ದೇವೇಂದ್ರಾದಿ ಸಕಲ ದೇವತೆಗಳೂ ಜಿನೇಶನನ್ನು ಸ್ತೋತ್ರಮಾಡಿ ಸ್ವರ್ಗವನ್ನೈದಿದರು. ರಥನೇಮಿ ಮೊದಲಾದ ಸಾವಿರಮಂದಿ ರಾಜಕುಮಾರರೂ, ಮದುವೆಗೆ ಸಿದ್ಧರಾಗಿ ಬಂದಿದ್ದ ರಾಜೀಮತಿ ಮೊದಲಾದ ರಾಜಕನ್ಯೆಯರೂ ತಮ್ಮ ಆರುಸಾವಿರಮಂದಿ ಸಖಿಯರೊಡನೆ ದೀಕ್ಷೆಯನ್ನು ಹೊಂದಿದರು. ಶ್ರಾವಣ ಶುದ್ಧ ಚತುರ್ಥಿಯ ದಿನ ನೇಮಿಜಿನೇಶನು ದೀಕ್ಷೆಯನ್ನು ಸ್ವೀಕರಿಸಿ ಸಪ್ತರ್ಧಿಸಮೇತನೂ ಮನಃಪರ್ಯಯಜ್ಞಾನವನ್ನು ಹೊಂದಿದವನೂ ಆಗಿ ಆರುದಿನಗಳವರೆಗೆ ಉಪವಾಸವನ್ನು ಮಾಡಿ ಪಾರಣೆಗೆ ಗಿರಿನಗರವೆಂಬ ಪಟ್ಟಣಕ್ಕೆ ಬರಲು ವರದತ್ತನೆಂಬ ರಾಜನು ಯಥಾವಿಧಿಯಿಂದಾಯತೀಶ್ವರನನ್ನು ಇದಿರ್ಗೊಂಡು ನಿಲಿಸಿ ಪ್ರತಿಗ್ರಹ, ಉಚ್ಚಸ್ಥಾನ, ಪಾದೋದಕ, ವಂದನಾ, ಪೂಜಾ, ಮನಶ್ಶುದ್ಧಿ, ವಚನಶುದ್ಧಿ, ಕಾಯಶುದ್ಧಿ, ಆಹಾರಶುದ್ಧಿಗಳೆಂಬ ನವವಿಧಪುಣ್ಯಸಮೇತನಾಗಿ ಅವರಿಗೆ ಆಹಾರದಾನವನ್ನು ಮಾಡಲು ನೇಮೀಶ್ವರರು ಅದನ್ನು ಸ್ವೀಕರಿಸಿ ಆಕ್ಷಯದಾನವೆಂದು ಹರಸಿದರು. ಆಗ ಸುರದುಂದುಭಿ, ಪುಷ್ಪವೃಷ್ಟಿ, ಸುವರ್ಣವೃಷ್ಟಿ, ಸುಗಂಧವಾಯು, ದೇವತೆಗಳ ಜಯಘೋಷಗಳೆಂಬ ಪಂಚಾಶ್ಚರ್ಯಗಳಾದುವು. ಅನಂತರ ಸ್ವಾಮಿಯು ಅಲ್ಲಿಂದ ಹೊರಟು ಊರ್ಜಯಂತಗಿರಿಗೆ ಹೋಗಿ ನಿರ್ಜನವಾದೊಂದೆಡೆಯಲ್ಲಿ ಒಂದು ಚಂದ್ರಕಾಂತಶಿಲೆಯಮೇಲೆ ನಿಂತು ಪ್ರತಿಜ್ಞಾಪೂರ್ವಕವಾಗಿ ನಾಲ್ಕು ತಿಂಗಳವರೆಗೆ ಕಾಯೋತ್ಸರ್ಗತಪಸ್ಸನ್ನು ಮಾಡಿದರು ಅವರ ತಪಃಪ್ರಭಾವದಿಂದ ಆ ಬೆಟ್ಟದಲ್ಲಿದ್ದ ಸಿಹ್ಮ, ಆನೆ, ಹದ್ದು, ಸರ್ಪ, ಹೆಬ್ಬುಲಿ, ಹುಲ್ಲೆ, ಶರಭ, ಭೇರುಂಡಾದಿ ಮೃಗಪಕ್ಷಿಗಳೆಲ್ಲವೂ ಕ್ರೂರಭಾವವನ್ನು ಬಿಟ್ಟು ಉಪಶಾಂತತೆಯಿಂದಿದ್ದುವು ಗಿರಿನಗರದ ರಾಜನಾದ ವರದತ್ತನೂ ವೈರಾಗ್ಯವನ್ನು ಹೊಂದಿ ನೇಮಿಜಿನೇಶರ ಸನ್ನಿಧಿಯಲ್ಲಿ ದೀಕ್ಷೆಯನ್ನು ಹೊಂದಿದನು.

ಮತ್ತೆ ನೇಮೀಶ್ವರರು ಐವತ್ತಾರು ದಿನಗಳವರೆಗೆ ಛದ್ಮಸ್ಥಕಾಲದಲ್ಲಿದ್ದು ಅಂದರೆ ಮೋಹನೀಯಕರ್ಮಾವಶಿಷ್ಟರಾಗಿದ್ದು ಬಳಿಕ ಒಂದುದಿನ ಬಿದಿರಮೂಲದಲ್ಲಿ ಏಕಾಗ್ರದೃಷ್ಟಿಯಿಂದ ಧ್ಯಾನಾರೂಢರಾಗಿ ಕರ್ಮವೆಂಬ ಕಾನನವನ್ನು ಧ್ಯಾನ

ವೆಂಬ ಅಗ್ನಿಯಿಂದ ಸುಡಲು ಕೇವಲಜ್ಞಾನೋದಯವಾಯ್ತು. ಅಂದರೆ ಸರ್ವಜ್ಞತ್ವವುಂಟಾಯ್ತು. ಆಗ ಸ್ವಾಮಿಯು ಭೂಮಿಯಿಂದೈದುಸಾವಿರ ಬಿಲ್ಲು ಎತ್ತರದ ಮೇಲೆ ವಿರಾಜಮಾನರಾದರು. ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು. ದೇವದುಂದುಭಿಯು ಮೊಳಗಿತು. ದೇವೇಂದ್ರನು ತನ್ನ ಆಸನಕಂಪದಿಂದ ಸ್ವಾಮಿಗೆ ಕೇವಲಜ್ಞಾನೋತ್ಪತ್ತಿಯಾದ ವಿಷಯವನ್ನು ತಿಳಿದು ಸ್ವಾಮಿಗೆ ಸಮವಸರಣವೆಂಬ ಮಣಿಮಯಮಂಡಪವನ್ನು ನಿರ್ಮಿಸುವಂತೆ ಕುಬೇರನಿಗೆ ಅಪ್ಪಣೆ ಮಾಡಿ ತಾನು ಸಮಸ್ತದೇವತೆಗಳೊಡನೆ ಸ್ವಾಮಿಯಬಳಿಗೆ ಬಂದು ಮೂರು ಸೂಳು ಬಲವಂದು ಅಶೋಕವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಸಿಹ್ಮಾಸನ, ಭಾಮಂಡಲ, ದುಂದುಭಿ, ಛತ್ರಗಳೆಂಬ ಅಷ್ಟಮಹಾಪ್ರಾತಿಹಾರ್ಯಗಳಿಂದ ಶೋಭಿತನೂ ಅನಂತಜ್ಞಾನ, ಅನಂತದರ್ಶನ, ಅನಂತಶಕ್ತಿ, ಅನಂತಸುಖಗಳೆಂಬ ಅನಂತಚತುಷ್ಟಯೋಪೇತನೂ ಜ್ಞಾನಾವರಣ, ದರ್ಶನಾವರಣ, ಮೋಹನೀಯ, ಅಂತರಾಯಗಳೆಂಬ ದುಷ್ಟದುರಿತದೂರೀಕೃತನೂ ಆದ ಆ ನೇಮೀಶ್ವರನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಉತ್ತಮವಾದ ಜಲ, ಗಂಧ, ಅಕ್ಷತ, ಪುಷ್ಪ, ಚರು, ದೀಪ, ಧೂಪ, ಫಲಗಳಿಂದರ್ಚಿಸಿ ಅರ್ಘ್ಯವನ್ನೆತ್ತಿ ಸ್ತುತಿಸಿ ಉಚಿತಾಸನದಲ್ಲಿ ಕುಳಿತುಕೊಂಡನು. ಇತರ ಎಲ್ಲಾ ದೇವತೆಗಳೂ ಬಹುಭಕ್ತಿಯಿಂದ ಸ್ವಾಮಿಯನ್ನು ಓಲೈಸಿದರು. ದ್ವಾರಾವತಿಯಿಂದ ಕೃಷ್ಣಬಲರಾಮರು ಸಮಸ್ತಯಾದವರ ಮತ್ತು ಖೇಚರ ಭೂಚರ ರಾಜಕುಮಾರರ ಸಮೂಹದೊಡನೆ ಸಮವಸರಣಕ್ಕೆ ಬಂದು ನೇಮಿಜಿನೇಶ್ವರರನ್ನು ಕಂಡು ತ್ರಿಃಪ್ರದಕ್ಷಿಣೆಯನ್ನೂ ಸಾಷ್ಟಾಂಗನಮಸ್ಕಾರವನ್ನೂ ಮಾಡಿ ಮನುಷ್ಯಕೋಷ್ಠದಲ್ಲಿ ಕುಳಿತು ಸ್ವಾಮಿಯ ದಿವ್ಯಾಕೃತಿಯನ್ನು ನೋಡಿ ತಣಿದು ಧರ್ಮಶ್ರವಣಮಾಡಿ ಹಿಂದಿರುಗಿ ಹೋದರು. ಇತ್ತ ವರದತ್ತಮುನಿಪತಿಯು ಸಮವಸರಣಕ್ಕೆ ಬಂದು ಸ್ವಾಮಿಗೆ ನಮಸ್ಕಾರಮಾಡಿದೊಡನೆಯೇ ದಿವ್ಯಜ್ಞಾನೋದಯವಾಗಿ ಅವರು ಗಣಧರಪದವಿಯನ್ನು ಹೊಂದಿದರು. ಬಳಿಕ ದೇವೇಂದ್ರನು ಕೈಮುಗಿದು "ಎಲೈ ದೇವಾ! ಭೂಮಿಯಲ್ಲಿ ಧರ್ಮಾಮೃತದ ಮಳೆಗರೆಯಬೇಕು' ಎನಲು ಅದಕ್ಕೆ ಸ್ವಾಮಿಯು ಒಡಂಬಟ್ಟು ಧರ್ಮಚಕ್ರಸಮನ್ವಿತರಾಗಿ ಭರತಾರ್ಯಖಂಡದ ನಾನಾದೇಶಗಳಲ್ಲಿ ಸಂಚರಿಸಿ ಧರ್ಮಾಮೃತವರ್ಷಣವನ್ನು ಮಾಡಿ ಭವ್ಯಜನಸಮೂಹವನ್ನು ತಣಿಸುತ್ತಿದ್ದರು.



*

# ೩೩. ಕೃಷ್ಣನ ಸ್ತ್ರೀಯರ ಭವಾವಳಿಸಂಧಿ



ತ್ರಿಖಂಡಾಧಿಪತಿಯಾದ ಕೃಷ್ಣನು ಬಲರಾಮನೊಡನೆ ಅನೇಕ ವರ್ಷಗಳ ವರೆಗೆ ಸುಖವಾಗಿ ರಾಜ್ಯಭಾರಮಾಡಿಕೊಂಡಿರಲೊಂದು ದಿನ ಶ್ರೀ ನೇಮಿಜಿನೇಶ್ವರರ ಸಮವಸರಣವು ದ್ವಾರಾವತಿಯ ಸಮೀಪದ ರೇವತಿಯೆಂಬ ವನದ ಮೇಲ್ಗಡೆ ಬಂದು ನೆಲಸಿರುವುದನ್ನು ದೇವದುಂದುಭಿಯ ಸ್ವರದಿಂದ ತಿಳಿದು ಕೃಷ್ಣನು ತನ್ನ ಸಮಸ್ತ ಬಂಧು ಪರಿವಾರದೊಡನೆ ಅಲ್ಲಿಗೆ ಹೋಗಿ ಸ್ವಾಮಿಯನ್ನು ಪೂಜಿಸಿ ಮನುಷ್ಯಕೋಷ್ಠದಲ್ಲಿ ಕುಳ್ಳಿರ್ದು ಧರ್ಮಶ್ರವಣಮಾಡಿದ ಬಳಿಕ ದೇವಕೀದೇವಿಯು ವರದತ್ತಗಣಧರರನ್ನು ಕುರಿತು ತನ್ನ ಮನೆಗೆ ಆಹಾರನಿಮಿತ್ತವಾಗಿ ಬಂದ ಆರುಜನ ಮುನಿರಾಜರುಗಳಲ್ಲಿ ತನಗೆ ಅತ್ಯಂತಸ್ನೇಹವುಂಟಾಗಲು ಕಾರಣವೇನೆಂದು ಬೆಸಗೊಂಡಳು. ಅದಕ್ಕವರು "ಎಲೆ ದೇವಕೀದೇವಿ! ನೀನು ಮೊದಲು ಮಧುರಾಪುರದಲ್ಲಿ ಹೆತ್ತ ಆರುಜನ ಮಕ್ಕಳೇ ಅವರು. ಅವರು ಚರಮಾಂಗಧಾರಿಗಳು. ಅವರನ್ನು ನೈಗಮದೇವನು ಒಯ್ದನು. ಅವರು ಬೆಳೆದು ನಿರ್ವೇಗದಿಂದ ದೀಕ್ಷೆಯನ್ನು ಹೊಂದಿಬಂದರು. ಅದರಿಂದ ಅವರಲ್ಲಿ ನಿನಗತ್ಯಂತಸ್ನೇಹವುಂಟಾದುದು' ಎಂದು ಹೇಳಲು ದೇವಕೀದೇವಿಯು ಸಂತುಷ್ಟಳಾದಳು. ಬಳಿಕ ಸತ್ಯಭಾಮೆಯು ತನ್ನ ಪೂರ್ವಭವದ ಕಥೆಯನ್ನು ಹೇಳಬೇಕೆಂದು ಗಣಧರರನ್ನು ಕೇಳಿದಳು. ಅದಕ್ಕವರು ಸತ್ಯಭಾಮೆಗೆ ಇಂತೆಂದರು.

"ಶೀತಳಜಿನರ ಕಾಲಾವಸಾನದಲ್ಲಿ ಧರ್ಮವು ಖಿಲವಾಗುತ್ತಿರಲು ಭದ್ರಿಳವೆಂಬ ನಗರದ ಭೂತಿಶರ್ಮನೆಂಬ ಬ್ರಾಹ್ಮಣನಿಗೂ ಆತನ ಸತಿ ಕಮಲೆಯೆಂಬವಳಿಗೂ ಮುಂಡಶಲಾಯನನೆಂಬ ದುಷ್ಟಪುತ್ರನು ಹುಟ್ಟಿ ಕುಶಾಸ್ತ್ರಗಳನ್ನಭ್ಯಸಿಸಿ ಸಪ್ತವ್ಯಸನಗಳಿಂದ ಕೂಡಿದವನಾಗಿದ್ದು ಅಲ್ಲಿಯ ಘನರಥನೆಂಬ ರಾಜನಿಗೂ ದುರುಪದೇಶವನ್ನು ಮಾಡಿ ಸತ್ತು ಕ್ರಮವಾಗಿ ಏಳು ನರಕಗಳಲ್ಲಿಯೂ ಹುಟ್ಟಿಬಂದು ತಿರ್ಯಗ್ಗತಿಯಲ್ಲಿ ಜನಿಸಿ ಸತ್ತು ಬಳಿಕ ಒಂದು ಅರಣ್ಯದಲ್ಲಿ ಕಾಲನೆಂಬ ಬೇಡನಾಗಿ ಹುಟ್ಟಿ ಒಂದುದಿನ ಕಾಲಲಬ್ಧಿವಶದಿಂದ ದೊರೆತ ಓರ್ವ ಮುನೀಶರ ಪಾದಗಳಮೇಲೆ ತಲೆಯಿಟ್ಟು ನಮಸ್ಕರಿಸಿದನು. ಅವರು ಅವನನ್ನು ಆಸನ್ನಭವ್ಯನೆಂದು ತಿಳಿದು ಅವನಿಗೆ ಉತ್ತಮವ್ರತವನ್ನಿತ್ತರು. ಅವನು ಅದನ್ನಾಚರಿಸಿ

ಸತ್ತು ವಿಜಯಾರ್ಧಗಿರಿಯ ದಕ್ಷಿಣದಲ್ಲಿರುವ ಅಳಕಾನಗರದ ವಿದ್ಯಾಬಲರಾಜನಿಗೂ ಆತನ ರಾಣಿ ಜ್ಯೋತಿರ್ಮಾಲೆಗೂ ಹರಿಬಲನೆಂಬ ಮಗನಾಗಿ ಹುಟ್ಟಿ ರಾಜ್ಯವಾಳುತ್ತಿದ್ದು ಒಂದು ದಿನ ಮುನೀಶರೋರ್ವನನ್ನು ಕಂಡು ವೈರಾಗ್ಯದಿಂದ ದೀಕ್ಷೆಯನ್ನು ಹೊಂದಿ ದೇಹಾಂತ್ಯದಲ್ಲಿ ಸೌಧರ್ಮಕಲ್ಪದಲ್ಲಿ ಹುಟ್ಟಿ ಸ್ವರ್ಗಸುಖವನ್ನನುಭವಿಸಿ ಅಲ್ಲಿಂದ ಬಂದು ಆ ವ್ರತದ ಫಲದಿಂದ ಈಗ ಸತ್ಯಭಾಮೆಯಾಗಿ ಹುಟ್ಟಿರುವೆ" ಎನಲು ಆಕೆಯು ಸಂತುಷ್ಟಳಾಗಿ ಕುಳಿತಳು. ಆಗ ರುಗ್ಮಿಣಿಯು ತನ್ನ ಭವಾವಳಿಯನ್ನು ಕೇಳಲು ಗಣಧರರು "ಮಗಧದೇಶದ ಲಕ್ಷ್ಮೀಪುರದಲ್ಲಿ ಸೋಮಶರ್ಮನೆಂಬ ಬ್ರಾಹ್ಮಣನ ಹೆಂಡತಿ ಲಕ್ಷ್ಮೀಮತಿಯೆಂಬವಳು ಒಂದು ದಿನ ಸರ್ವಾಭರಣಭೂಷಿತಳಾಗಿ ಕನ್ನಡಿಯಲ್ಲಿ ತನ್ನ ಮೊಗವನ್ನು ನೋಡುತ್ತಿರುವಾಗ ಅಲ್ಲಿಗೆ ಮಾಸೋಪವಾಸವನ್ನು ಮಾಡಿದ್ದು ಆಹಾರಕ್ಕೆ ಬರುತ್ತಿದ್ದ ಕೃಶಾಂಗರಾದ ಸಮಾಧಿಗುಪ್ತರೆಂಬ ತಪಸ್ವಿಯು ನೆಳಲು ಆ ಕನ್ನಡಿಯಲ್ಲಿ ಬೀಳಲು ಇದೇನೆಂದವಳು ತಿರುಗಿನೋಡಿ ಆ ಮುನೀಶನನ್ನು ಮನಸ್ಸಿಗೆ ಬಂದಹಾಗೆ ಬೈದು ಅಟ್ಟಿದಳು. ಆ ಪಾಪದಿಂದವಳ ದೇಹದಲ್ಲಿ ಔದುಂಬರವೆಂಬ ಕುಷ್ಠರೋಗವುಂಟಾಗಿ ದೇಹವೆಲ್ಲವೂ ಕೊಳೆತು ದುರ್ವಾಸನೆಯಾಗಿ ಸತ್ತು ತನ್ನ ಮನೆಯಲ್ಲಿ ಇಲಿಯಾಗಿ ಹುಟ್ಟಿ ಸತ್ತು ಕ್ರಮವಾಗಿ ಹಾವು, ಹಂದಿ, ಮೂಗಿಲಿ, ಬೆಕ್ಕು, ಹೆಣ್ಣುನಾಯಿ, ಬಿಳಿಯಕತ್ತೆ ಮೊದಲಾದ ಜನ್ಮಗಳನ್ನೆತ್ತಿ ಅತಿ ದುಃಖವನ್ನುಂಡು ಅನಂತರ ಕಾಳಿಂದೀನದೀತೀರದ ಮಂದಿರವೆಂಬ ಗ್ರಾಮದಲ್ಲಿ ಮತ್ಸ್ಯನೆಂಬ ಬೆಸ್ತರವನಿಗೂ ಅವನ ಹೆಂಡತಿ ಮಂಡೂಕಿಯೆಂಬವಳಿಗೂ ಪೂತಿಗಂಧಿನಿಯೆಂಬ ಮಗಳಾಗಿ ಹುಟ್ಟಿದಳು. ಆಕೆಯ ತಂದೆ ತಾಯಿಗಳು ಸತ್ತರು. ಆ ಊರ ಜನರು ಅವಳ ಮೈಯ ದುರ್ಗಂಧಕ್ಕೆ ಹೇಸಿ ಅಲ್ಲಿಂದವಳನ್ನು ಓಡಿಸಲು ಅವಳು ಯಮುನಾನದೀತೀರಕ್ಕೆ ಹೋಗಿ ಅಲ್ಲಿಯ ಅಂಬಿಗರೊಡನೆ ಸೇರಿಕೊಂಡಿದ್ದು ಒಂದುದಿನ ಸಾಯಂಕಾಲಸಮಯದಲ್ಲಿ, ಹಿಂದೆ ಅವಳು ಲಕ್ಷ್ಮೀಮತಿಯಾಗಿದ್ದಾಗ ಕನ್ನಡಿಯ ಹಿಂಗಡೆಯಲ್ಲಿ ಯಾರ ನೆರಳು ಬಿದ್ದದ್ದಿತೋ ಆ ಸಮಾಧಿಗುಪ್ತಮುನಿಗಳೇ ಆ ನದೀತೀರಕ್ಕೆ ಬಂದು ತಪಸ್ಸಿಗೆ ನಿಂತಿರಲು, ಆ ಪೂತಿಗಂಧಿನಿಯು ಕರ್ಮೋಪಶಮದಿಂದಲ್ಲಿಗೆ ಬಂದು ಆ ಮುನೀಶರ ಕಟಂಕಟಿಯಾಗಿದ್ದ ದೇಹವನ್ನು ನೋಡಿ ಕರುಣಹುಟ್ಟಿ ಈತನು ಬಡವರಲ್ಲಿ ಅತ್ಯಂತ ಬಡವನಾಗಿರುವುದರಿಂದ ಬಟ್ಟೆಯಿಲ್ಲದಿರುವನೆಂದು ಭಾವಿಸಿ ಅತಿವೇಗನಾಗಿ ಬೀಸುತ್ತಿದ್ದ ಗಾಳಿಗೆ ಅಡ್ಡವಾಗಿ ತನ್ನ ಹರಿಗೋಲನ್ನು ತಂದಿರಿಸಿ ಶೀತವಾಯುವಿನ ಉಪಸರ್ಗವನ್ನು ತಪ್ಪಿಸಿದಳು. ಬೆಳಗಾದಮೇಲೆ ಆ ಮುನಿಯು ಕಣ್ದೆರೆದು ಪೂತಿಗಂಧಿನಿಯನ್ನು

ನೋಡಿ ಆವಳು ಲಕ್ಷ್ಮೀಮತಿಯಾಗಿದ್ದವಳೆಂದು ದಿವ್ಯಜ್ಞಾನದಿಂದ ತಿಳಿದು " ಎಲೆ ಪೂತಿಗಂಧಿನಿ ! ಅಂದು ಲಕ್ಷ್ಮೀಮತಿಯಾಗಿದ್ದಾಗ ಯೌವನಮದದಿಂದ ನಮ್ಮನ್ನು ದೂಷಿಸಿದುದರಿಂದ ನಿನಗೆ ಇಂತಹ ದುಃಖಪ್ರಾಪ್ತಿಯಾದುದು " ಎಂದು ಹೇಳಿ ಅವಳ ಭವಗಳ ವಿಚಾರವನ್ನೆಲ್ಲ ತಿಳಿಸಲು ಕೇಳಿ ಆಕೆಯು ಆ ಮುನಿಪತಿಗೆರಗಿ ಸುವ್ರತಗಳನ್ನು ಕೈಕೊಂಡು ಪಾಲಿಸುತ್ತಿದ್ದಳು. ಆಗ ವಸುಂಧರೆಯೆಂಬ ಕಂತಿಕೆಯು ಬರಲು ಆಕೆಯನ್ನು ಕಂಡು ಅವಳೊಡನೆ ರಾಜಗೃಹವೆಂಬ ಪುರದ ಸಿದ್ಧಶಿಲೆಯೆಂಬ ಗುಹೆಗೆ ಹೋಗಿ ಅಲ್ಲಿ ಉತ್ತಮವಾದ ನೋಂಪಿಯಂ ಕೈಕೊಂಡು ನಡೆಸುತ್ತಿದ್ದಳು. ಅಲ್ಲಿಗೆ ಸಮಾಧಿಗುಪ್ತರು ಬರಲು ಅವರನ್ನು ಕಂಡು ಆ ಪುರದರಸನ ಮಗಳಾದ ಶ್ರೀಮತಿಯು ಅವರಿಗೆ ನಮಸ್ಕರಿಸಿ ತನ್ನ ಭವವಿಚಾರವನ್ನು ಕೇಳಿ ಆ ಪೂತಿಗಂಧಿನಿಯು ಹಿಂದೆ ಲಕ್ಷ್ಮೀಮತಿಯ ಜನ್ಮದಲ್ಲಿ ತನಗೆ ಪ್ರಿಯಳಾದ ಸಖಿಯಾಗಿದ್ದುದರಿಂದ ಆಕೆಯನ್ನು ತನ್ನಮನೆಗೆ ಕರೆದೊಯ್ದು ಜಿನಗುಣಸಂಪತ್ತಿ ಮೊದಲಾದ ನೋಂಪಿಗಳನ್ನು ಮಾಡಿಸುತ್ತಿರಲೊಂದುದಿನ ಆ ಕಂತಿಕೆಯು ಉತ್ತಮವಾದ ಅನ್ನವನ್ನು ಪೂತಿಗಂಧಿನಿಗೆ ಕೊಡಿಸಲು, ಆಕೆಗೆ ಆ ದಿನ ಉಪವಾಸವ್ರತವಿದ್ದುದರಿಂದ ಅದನ್ನು ಭುಂಜಿಸದೆ ಬಿಸುಟಳು. ಅದರಲ್ಲಿ ಅನೇಕ ಇರುವೆಗಳು ಮುತ್ತಿ ಸಾಯಲು ಆ ಪಾಪವು ಹಿಂಬಾಲಿಸಿತು. ಕೆಲವು ದಿನಗಳ ಮೇಲೆ ಗುರುಸನ್ನಿಧಿಯಲ್ಲಿ ಸನ್ಯಸನವ್ರತವನ್ನು ಕೈಕೊಂಡು ಸತ್ತು ಹದಿನಾರನೆಯ ಸ್ವರ್ಗದ ದೇವೇಂದ್ರನಿಗೆ ಪತ್ನಿಯಾಗಿ ಹುಟ್ಟಿ ಸುಖವನನುಭವಿಸಿ ಬಂದು ಈಗ ರುಗ್ಮಿಣಿಯಾಗಿ ಹುಟ್ಟಿರುವೆ. ಅಂದು ನೀನು ಬಿಸುಟ ಅನ್ನಕ್ಕೆ ಇರುವೆಗಳು ಮುತ್ತಿ ಅಳಿದುದರಿಂದ ಈ ಜನ್ಮದಲ್ಲಿ ನೀನು ಪಿತೃವಿಯೋಗದುಃಖವನ್ನನುಭವಿಸಿದೆ " ಎಂದು ಹೇಳಲು ಕೇಳಿ ರುಗ್ಮಿಣಿಯು ಸಂತೋಷಪಟ್ಟಳು.

ಆಗ ಜಂಬಾವತಿಯು ತನ್ನ ಪೂರ್ವಭವವನ್ನು ಕೇಳಲು ಗಣಧರರು " ವಿಜಯಾರ್ಧಗಿರಿಯ ಸೀತಾನದಿಯ ಪೂರ್ವದಿಕ್ಕಿನ ಪುಷ್ಕಲಾವತೀದೇಶದ ಮಧ್ಯದಲ್ಲಿರುವ ವೀತಶೋಕಪಟ್ಟಣದ ದಮನಕನೆಂಬ ವೈಶ್ಯನಿಗೂ ಆತನ ಪತ್ನಿ ದೇವಮತಿಗೂ ವಿಮಲೆಯೆಂಬ ಮಗಳು ಹುಟ್ಟಿ ಬೆಳೆದು ಸುಮಿತ್ರನೆಂಬವನಿಗೆ ವಿವಾಹಿತಳಾಗಿ ಕೆಲವು ಕಾಲ ಸುಖದಲ್ಲಿರಲು ಆ ಸುಮಿತ್ರನು ಮರಣಹೊಂದಿದನು. ವಿಮಲೆಯು ಸುವ್ರತಾಚರಣೆಯಲ್ಲಿದ್ದು ಸತ್ತು ಅನಿಮಿಷವೆಂಬ ಅರಣ್ಯದಲ್ಲಿ ವನದೇವತೆಯಾಗಿ ಹುಟ್ಟಿ ಎಂಬತ್ತುನಾಲ್ಕು ಸಾವಿರ ವರ್ಷಗಳವರೆಗಿದ್ದು ದೇಹಾಂತ್ಯದಲ್ಲಿ ಆ ಪುಷ್ಕಲಾವತೀ ದೇಶದ ವಿಜಯವೆಂಬ ನಗರದ ಮಧುಸೇನನೆಂಬ ವೈಶ್ಯನಿಗೆ ಬಂಧುಮತಿಯೆಂಬ

ಪತ್ನಿಯಲ್ಲಿ ವಿಜಯಸೇನೆಯೆಂಬ ಮಗಳಾಗಿಹುಟ್ಟಿ ಯೌವನದಲ್ಲಿ ಶ್ರೀಪಂಚಮಿಯ ಉಪವಾಸವಮಾಡಿ ಸತ್ತು ಕುಬೇರದಿಕ್ಪಾಲಕನಿಗೆ ಹೆಂಡತಿಯಾಗಿ ಹುಟ್ಟಿ ಐದು ಪಲ್ಯೋಪಮಕಾಲ ಸುಖವನನುಭವಿಸಿ ಅಲ್ಲಿಂದ ಬಂದು ಪುಂಡರೀಕಿಣೀನಗರದ ವಜ್ರಸೇನನೆಂಬ ವೈಶ್ಯನಿಗೂ ಆತನ ಪತ್ನಿ ಸುಭದ್ರೆಗೂ ಸುಮತಿಯೆಂಬ ಮಗಳಾಗಿ ಹುಟ್ಟಿ ಬೆಳೆದು ಸುವ್ರತೆಯೆಂಬ ಕಂತಿಕೆಗೆ ಭಕ್ತಿಪುರಸ್ಸರವಾಗಿ ಉತ್ತಮವಾದ ಆಹಾರದಾನಮಾಡಿ ರತ್ನಾವಳಿಯೆಂಬ ನೋಂಪಿಯಂ ನೋಂತು ಆಯುಷ್ಯಾವಸಾನದಲ್ಲಿ ಸತ್ತು ಐದನೆಯ ಕಲ್ಪದ ದೇವೇಂದ್ರನ ಪತ್ನಿಯಾಗಿ ಹುಟ್ಟಿ ಹದಿಮೂರು ಪಲ್ಯೋಪಮಕಾಲ ಸುಖವನುಂಡು ಅಲ್ಲಿಂದ ಬಂದು ಈಗ ಜಂಬಾವತಿಯಾಗಿ ಹುಟ್ಟಿರುವೆ ಎಂದು ಹೇಳಿದರು.

ಬಳಿಕ ಸುಸೀಮೆಯು ತನ್ನ ಜನ್ಮದ ಕಥೆಯನ್ನು ಹೇಳಬೇಕೆಂದು ಗಣಧರರನ್ನು ಕೇಳಿಕೊಳ್ಳಲು ಅವರು "ಧಾತಕೀಖಂಡದ ಮೂಡಣ ಮಂದರದ ಸೀತಾನದಿಯ ಬಲಗಡೆಯ ಮಂಗಲಾವತೀದೇಶದ ರತ್ನಸಂಚಯಪುರದರಸನಾದ ವಿಶ್ವಸೇನನನ್ನು ಶತ್ರುರಾಜರು ಯುದ್ಧದಲ್ಲಿ ಕೊಂದರು. ಅವನ ಸುಂದರಿಯೆಂಬ ಪತ್ನಿಯು ಪತಿಶೋಕದಿಂದ ಅಗ್ನಿಪ್ರವೇಶಮಾಡಿ ಸತ್ತು ವಿಜಯಾರ್ಧಗಿರಿಯಲ್ಲಿರುವ ಒಂದು ವನದ ಮಧ್ಯದಲ್ಲಿ ವ್ಯಂತರದೇವತೆಯಾಗಿ ಹುಟ್ಟಿ ಸಂತೋಷದಿಂದಿದ್ದು ಮಡಿದು ಹಿಂದೆ ಅಗ್ನಿಪ್ರವೇಶಮಾಡಿ ಆತ್ಮಹತ್ಯಮಾಡಿಕೊಂಡಿದ್ದ ಪಾಪದ ಫಲದಿಂದ ಅನೇಕ ಜನ್ಮಗಳನ್ನೆತ್ತಿ ಒಂದು ಜಂಬೂದ್ವೀಪದ ಭರತಕ್ಷೇತ್ರದ ಶಾಲಿಗ್ರಾಮದಲ್ಲಿ ಯಕ್ಷಿಲಕನೆಂಬ ವೈಶ್ಯನಿಗೂ ದೇವಸೇನೆಯೆಂಬಾತನ ಸತಿಗೂ ಯಕ್ಷಿಯೆಂಬ ಮಗಳಾಗಿ ಹುಟ್ಟಿ ಜಿನಧರ್ಮವನ್ನು ಕೈಕೊಂಡು ನಡೆಸುತ್ತ ಓರ್ವ ಮುನೀಶರ್ಗೆ ಆಹಾರದಾನಮಾಡಿ ಸುಖದಿಂದಿರ್ದು ಒಂದು ದಿನ ಆ ನಗರದ ವನಕ್ಕೆಹೋಗಿರಲು ಅಲ್ಲಿ ಹಾವು ಕಡಿದು ಸತ್ತು ಈ ದೇಶದ ವಾಸವಗಿರಿಯ ಸೀತಾನದಿಯ ದಕ್ಷಿಣನಾಡಿನ ಪುಷ್ಕಲಾವತೀದೇಶದ ಪುಂಡರೀಕಿಣಿಯ ಅರಸ ಅಶೋಕನಿಗೂ ಆತನ ವಲ್ಲಭೆ ಸೋಮಶ್ರೀಗೂ ಲಕ್ಷ್ಮೀಕಾಂತೆಯೆಂಬ ಮಗಳಾಗಿ ಹುಟ್ಟಿ ಯೌವನದಲ್ಲಿ ದೀಕ್ಷೆಯನ್ನು ಹೊಂದಿ ಸತ್ತು ಅದರ ಫಲದಿಂದ ಮಾಹೇಂದ್ರಕಲ್ಪದ ದೇವನಿಗೆ ವಲ್ಲಭೆಯಾಗಿ ಹುಟ್ಟಿ ಹನ್ನೊಂದು ಪಲ್ಯೋಪಮಕಾಲ ಜೀವಿಸಿ ಅಲ್ಲಿಂದ ಬಂದಿಲ್ಲಿ ಸುಸೀಮೆಯಾಗಿ ಹುಟ್ಟಿದೆ" ಎಂದು ಹೇಳಿದರು.

ಅನಂತರ ಲಕ್ಷ್ಮಣೆಯು ತನ್ನ ಭವದ ಕಥೆಯನ್ನು ಕೇಳಲು ಗಣಧರರು "ಸೀತಾನದಿಯ ದಕ್ಷಿಣತೀರದ ಕಚ್ಛಕಾವತೀದೇಶದಲ್ಲಿ ಅರಿಷ್ಟವೆಂಬ ಪಟ್ಟಣದ

ರಸು ಸುಷೇಣನೆಂಬವನು ಕಠಿನರೋಗದಿಂದ ಸಾಯಲು ಅವನ ತಾಯಿಯು ಅತ್ಯಂತ ಶೋಕಾಕುಲೆಯಾಗಿ ಆರ್ತಧ್ಯಾನದಿಂದ ಸತ್ತು ವಿಂಧ್ಯಾಟವಿಯಲ್ಲಿ ಹುಟ್ಟಿ ಒಬ್ಬ ಬೇಡನ ಹೆಂಡತಿಯಾಗಿದ್ದು ಅಲ್ಲಿಗೆ ಬಂದ ಓರ್ವ ಚಾರಣಮುನಿವರರಿಂದ ವ್ರತವನ್ನು ಕೈಕೊಂಡು ಮುಪ್ಪಿನಲ್ಲಿ ಸತ್ತು ಕಾಪಿಷ್ಠಸ್ವರ್ಗದ ದೇವನಿಗೆ ನರ್ತಕಿಯಾಗಿ ಹುಟ್ಟಿ ಇಪ್ಪತ್ತು ಪಲ್ಯೋಪಮಕಾಲದವರೆಗಿದ್ದು ಅಲ್ಲಿಂದ ಬಂದು ರಜತಾದ್ರಿಯ ದಕ್ಷಿಣಶ್ರೇಣಿಯಲ್ಲಿರುವ ಸುಘೋಷನಗರದ ರಾಜಮಹೇಂದ್ರನಿಗೂ ಆತನ ಭಾರ್ಯೆ ವಸುಂಧರೆಗೂ ಕಾಂಚನಮಾಲೆಯೆಂಬ ಮಗಳಾಗಿ ಹುಟ್ಟಿ ಸ್ವಯಂವರದಲ್ಲಿ ಹರಿವಾಹನನೆಂಬ ರಾಜನನ್ನು ವರಿಸಿ ಸುಖವಾಗಿದ್ದು ಮುಕ್ತಾವಳಿಯೆಂಬ ನೋಂಪಿಯಂ ನೋಂತು ಸತ್ತು ಮೂರನೆಯ ಸ್ವರ್ಗದ ಸುರಪತಿಗೆ ಪತ್ನಿಯಾಗಿ ಹುಟ್ಟಿ ಒಂಬತ್ತು ಪಲ್ಯೋಪಮಕಾಲ ಸ್ವರ್ಗಸುಖವನನುಭವಿಸಿ ಅಲ್ಲಿಂದ ಬಂದು ನೀನೀಗ ಲಕ್ಷ್ಮಣೆಯಾಗಿ ಹುಟ್ಟಿರುವೆ " ಎಂದು ಹೇಳಿದರು.

ಬಳಿಕ ಗಾಂಧಾರಿಯು ತನ್ನ ಭವವನ್ನು ಕೇಳಿದಳು. ಗಣಧರರು " ಸಾಕೇತನಗರದ ರುದ್ರನೆಂಬ ರಾಜನರಸಿ ವನಶ್ರೀಯೆಂಬವಳು ಮುನೀಶರಿಗಾಹಾರದಾನ ಮಾಡುತ್ತಿದ್ದು ಆ ಪುಣ್ಯದಿಂದ ಮರಣಾನಂತರ ಉತ್ತರಕುರುಭೋಗಭೂಮಿಯಲ್ಲಿ ಮೂರು ಪಲ್ಯೋಪಮಕಾಲ ಸುಖದಿಂದಿದ್ದು ಅಲ್ಲಿಂದ ಬಂದು ಜ್ಯೋತಿರ್ದೇವನಾದ ಚಂದ್ರನಿಗೆ ರೋಹಿಣಿಯೆಂಬ ಪತ್ನಿಯಾಗಿದ್ದು ಮತ್ತಲ್ಲಿಂದ ಬಂದು ಈ ಭರತದ ವಿಜಯಾರ್ಧದ ದಕ್ಷಿಣದಲ್ಲಿರುವ ವಲ್ಲಭನಗರದ ವಿದ್ಯುತ್ಪ್ರಭನೆಂಬ ಖೇಚರರಾಜನಿಗೆ ಮಗಳಾಗಿ ಹುಟ್ಟಿ ಅಲೋಕಪುರದ ಮಹೇಂದ್ರವಿಕ್ರಮನನ್ನು ವರಿಸಿ ಸುಖದಿಂದಿದ್ದು ಒಂದು ದಿವಸ ದಂಪತಿಗಳು ಜಿನೇಶ್ವರನ ಪೂಜೆಗೆಂದು ದೇವಗಿರಿಗೆ ಹೋಗಿರಲು ಅಲ್ಲಿಗೆ ಬಂದ ಚಾರಣರಲ್ಲಿ ಧರ್ಮಶ್ರವಣಮಾಡಿ ವೈರಾಗ್ಯವನ್ನು ಹೊಂದಿ ತನ್ನ ಗಂಡನೊಡನೆ ದೀಕ್ಷೆಗೊಂಡು ತಪಶ್ಚರಣಮಾಡಿ ಸತ್ತು ಆಕೆಯು ಸ್ವರ್ಗದಲ್ಲಿ ಹುಟ್ಟಿ ಐದು ಪಲ್ಯೋಪಮಕಾಲ ಸುಖವನುಂಡು ಅಲ್ಲಿಂದ ಬಂದು ಗಾಂಧಾರಿಯಾಗಿ ಹುಟ್ಟಿರುವೆ " ಎಂದು ಹೇಳಿದರು.

ಬಳಿಕ ಗೌರಿಯೆಂಬ ಪಟ್ಟದರಸಿಯು ತನ್ನ ಭವಗಳನ್ನು ಕೇಳಲು ಅವರು " ನಾಗಪುರವೆಂಬ ನಗರದ ಹೇಮಾಭನೆಂಬ ರಾಜನು ತನ್ನ ಹೆಂಡತಿ ಸರಸ್ವತಿಯೆಂಬವಳೊಡನೆ ಸುಖದಿಂದಿದ್ದು ಯಶೋಧರರೆಂಬ ಅವಧಿಜ್ಞಾನಿಗಳಿಂದ ಸರಸ್ವತಿಯು ತನ್ನ ಪೂರ್ವಜನ್ಮದ ಕತೆಯನ್ನು ಕೇಳಿ ಚಿಂತಾಕ್ರಾಂತಳಾಗಿರಲು ಆಕೆಯ ವಲ್ಲಭನು ಅವಳ ವ್ಯಥೆಗೆ ಕಾರಣವನ್ನು ಕೇಳಲು ಅವಳು ' ನಾನು ಭೋಗಪುರವೆಂಬ

ನಗರದ ವಿಜಯಸೇನನೆಂಬ ವೈಶ್ಯನಿಗೆ ಪತ್ನಿಯಾಗಿದ್ದು ಶ್ರೇಷ್ಠರಾದ ಮುನಿಗಳಿಗೆ ಆಹಾರದಾನಮಾಡಿ ಆ ಪುಣ್ಯದಿಂದ ಭೋಗಭೂಮಿಯಲ್ಲಿ ಹುಟ್ಟಿ ಮೂರು ಪಲ್ಯೋಪಮಕಾಲವಿದ್ದು ಅಲ್ಲಿಂದ ಬಂದು ಧರಣೇಂದ್ರನಿಗೆ ವಲ್ಲಭೆಯಾಗಿ ಮೂರು ಪಲ್ಯೋಪಮಕಾಲ ಸುಖವನುಂಡು ಬಂದು ಈಗ ನಿನಗೆ ಪತ್ನಿಯಾಗಿ ಹುಟ್ಟಿದೆನು' ಎಂದು ಹೇಳಲು ಆತನೂ ವೈರಾಗ್ಯವನ್ನು ಹೊಂದಿ ಓರ್ವ ತಪಸ್ವಿಗಳಲ್ಲಿ ಈರ್ವರೂ ಅಹಿಂಸಾಸತ್ಯಾದಿ ಅಣುವ್ರತಗಳನ್ನು ಕೈಕೊಂಡು ನಡೆಸಿ ಸತ್ತು ಸರಸ್ವತಿಯು ಮೊದಲನೆಯ ಸ್ವರ್ಗದಲ್ಲಿ ಹುಟ್ಟಿ ಸುಖವನನುಭವಿಸಿ ಅಲ್ಲಿಂದ ಬಂದು ವತ್ಸದೇಶದ ಕೌಶಂಬೀನಗರದ ಸುಮತಿಯೆಂಬ ವೈಶ್ಯನಿಗೂ ಅವನ ಸುಭದ್ರೆಯೆಂಬ ಸತಿಗೂ ಧರ್ಮಿಣಿಯೆಂಬ ಮಗಳಾಗಿ ಜನಿಸಿ ಬೆಳೆದು ಜಿನಗುಣಸಂಪತ್ತಿಯೆಂಬ ಅಮೋಘ ವಾದ ವ್ರತವನಾಚರಿಸಿ ಮಡಿದು ಅಚ್ಯುತಕಲ್ಪೇಂದ್ರನಿಗೆ ರಾಣಿಯಾಗಿ ಹದಿಮೂರು ಪಲ್ಯೋಪಮಕಾಲ ಸ್ವರ್ಗಸುಖವನಾಸ್ವಾದಿಸಿ ಬಂದು ನೀನೀಗ ಗೌರಿಯಾದೆ'' ಎಂದು ಹೇಳಿದರು.

ಬಳಿಕ ಪದ್ಮಾವತಿಯು ಎದ್ದು ಕೈಮುಗಿದು ತನ್ನ ಭವವೃತ್ತಾಂತವನ್ನು ಬೆಸಗೊಂಡಳು. ಅದಕ್ಕೆ ಗಣಧರರು ''ಭರತಖಂಡದ ಅವಂತೀದೇಶದ ಉಜ್ಜ ಯಿನೀನಗರದ ವಿಜಯಸೇನನೆಂಬ ರಾಜನಿಗೆ ಅಪರಾಜಿತೆಯೆಂಬ ರಾಣಿಯಲ್ಲಿ ನಯಶ್ರೀಯೆಂಬ ಮಗಳು ಹುಟ್ಟಿ ಹಸ್ತಿಶೀರ್ಷವೆಂಬ ನಗರದ ರಾಜ ಹರಿಷೇಣ ನನ್ನು ಮದುವೆಯಾಗಿ ಸುಖದಿಂದಿರುತ್ತ ಒಂದುದಿನ ಓರ್ವ ಮುನಿಪತಿಗೆ ಭಕ್ತಿ ಯಿಂದ ಆಹಾರವನ್ನಿತ್ತು ಆ ದಾನದ ಪುಣ್ಯದಿಂದ ಉತ್ತರಭವದಲ್ಲಿ ಹೈಮವತವೆಂಬ ಭೋಗಭೂಮಿಯಲ್ಲಿ ಹುಟ್ಟಿ ಸುಖವನನುಭವಿಸಿ ಸತ್ತು ಚಂದ್ರನಿಗೆ ರೋಹಿಣಿಯೆಂಬ ಸತಿಯಾಗಿ ಬಹುದಿನ ಸುಖವನ್ನುಂಡು ಬಳಿಕ ಅಲ್ಲಿಂದ ಬಂದು ಮಗಧದೇಶದ ಶಾಲ್ಮ ಲಿಗ್ರಾಮದ ಓರ್ವ ವಿಜಯನೆಂಬ ವರ್ತಕನಿಗೂ ಆತನ ದೇಯಿಲೆಯೆಂಬ ಪತ್ನಿಗೂ ಪದ್ಮೆಯೆಂಬ ಮಗಳಾಗಿ ಹುಟ್ಟಿ ಬೆಳೆದು ಒಂದಾನೊಂದುದಿನ ವರಧರ್ಮಮುನೀಶ ರಲ್ಲಿ ಹೆಸರು ತಿಳಿಯದ ಮರಗಳ ಫಲಗಳನ್ನು ತಿನ್ನುವುದಿಲ್ಲವೆಂಬ ವ್ರತವನ್ನು ಸ್ವೀಕ ರಿಸಿ ಸಂತೋಷದಿಂದಿದ್ದಳು. ಆ ಶಾಲ್ಮಲಿಗ್ರಾಮವನ್ನು ಓರ್ವ ಬೇಡರ ರಾಜನು ನಾಶಮಾಡುತ್ತಿರಲು ಪ್ರಾಣಭಯದಿಂದ ಆ ಊರಿನವರೆಲ್ಲರೂ ಅರಣ್ಯಕ್ಕೆ ಓಡಿಹೋ ದರು. ಹಸಿವಿನಿಂದ ಬಳಲಿದ್ದ ಆ ಜನರು ವನದಲ್ಲಿ ಸಿಕ್ಕಿದ ಹಣ್ಣುಗಳನ್ನು ತಿನ್ನು ತ್ತಿರಲು, ಪದ್ಮೆಯು ತಾನು ಕೈಕೊಂಡಿದ್ದ ವ್ರತವನ್ನು ನೆನಪಿಗೆ ತಂದುಕೊಂಡು ಹೆಸರರಿಯದ ಮರದ ಹಣ್ಣುಗಳನ್ನು ತಿನ್ನದೆ ಹಸಿವಿನಿಂದ ಪ್ರಾಣಬಿಟ್ಟು ಆ ವ್ರತದ

ಫಲದಿಂದ ಭೋಗಭೂಮಿಯಲ್ಲಿ ಹುಟ್ಟಿ ಅಲ್ಲಿ ಅತುಲಸುಖವನುಂಡು ಬಂದು ಸ್ವಯಂಪ್ರಭನೆಂಬ ಅಮರನಿಗೆ ವಲ್ಲಭೆಯಾಗಿ ಹುಟ್ಟಿ ಆಯುಷ್ಯಾವಸಾನದಲ್ಲಿ ಸತ್ತು ಭರತಾರ್ಯಾಖಂಡದ ಜಯಂತೀಪುರದ ಶ್ರೀಧರನೆಂಬ ರಾಜನಿಗೆ ಲಕ್ಷ್ಮೀಮತಿ ಯೆಂಬ ರಾಣಿಯಲ್ಲಿ ವಿಮಲೆಯೆಂಬ ಮಗಳಾಗಿ ಹುಟ್ಟಿ ಭದ್ರಿಳವೆಂಬ ನಗರದರಸು ಮೇಘನಾದನೆಂಬವಗೆ ಪತ್ನಿಯಾಗಿ ಸುಖದಿಂದಿರ್ದು ಒಂದುದಿನ ವರಧರ್ಮರೆಂಬ ಮುನೀಶರಲ್ಲಿ ಧರ್ಮಾಧರ್ಮವನ್ನು ಕೇಳಿ ನಿರ್ವೇಗದಿಂದ ದೀಕ್ಷೆಗೊಂಡು ಆಚಾಮ್ಲ ವರ್ಧನವೆಂಬ ವ್ರತವನಾಚರಿಸಿ ಸತ್ತು ಸ್ವರ್ಗದಲ್ಲಿ ಇಂದ್ರನಿಗೆ ರಾಣಿಯಾಗಿ ಹುಟ್ಟಿ ಅಲ್ಲಿಂದ ಬಂದು ಈಗ ಪದ್ಮಾವತಿಯಾಗಿ ಹುಟ್ಟಿ ಕೃಷ್ಣನಿಗೆ ಪತ್ನಿಯಾಗಿರುವೆ" ಎಂದು ಹೇಳಲು ಕೇಳಿ ಸಂತುಷ್ಟಳಾದಳು. ಹೀಗೆ ಅಚ್ಯುತನ ಎಂಟು ಮಂದಿ ಪಟ್ಟಮಹಿಷಿಯರೂ ತಮ್ಮ ಭವವೃತ್ತಾಂತವನ್ನು ಕೇಳಿ ಅತ್ಯಂತ ಸಂತೋಷವನ್ನು ಹೊಂದಿ ಗಣಧರರಿಗೆ ಸಮಸ್ಕರಿಸಿದರು.



## ೩೪. ಮದನನಿರ್ವೇಗ ದ್ವಾರಾವತೀ ದಹನಸಂಧಿ



ಸುರ, ನರ, ಉರಗ, ಯಕ್ಷ, ರಾಕ್ಷಸ, ವಿದ್ಯಾಧರ, ಕಿನ್ನರ, ಕಿಂಪುರುಷ, ಗರುಡ, ಗಾಂಧರ್ವ ಮೊದಲಾದ ಸಮಸ್ತ ನರಾಮರರಿಂದ ಓಲೈಸಲ್ಪಡುತ್ತಿರುವ ಶ್ರೀ ನೇಮಿಜಿನರಿಗೆ ಬಲರಾಮನೆದ್ದು ಕೈಮುಗಿದು 'ಎಲೈ ಸ್ವಾಮಿಯೆ! ಈ ಸಮುದ್ರಮಧ್ಯದಲ್ಲ ದೇವೇಂದ್ರನಿಂದ ರಚಿಸಲ್ಪಟ್ಟ ದ್ವಾರಾವತೀನಗರವೂ ಆದನಾಳುವ ಕೃಷ್ಣನ ಸಾಮ್ರಾಜ್ಯಸಂಪದವೂ ಇದೇರೀತಿ ಸ್ಥಿರವಾಗಿರುವುವೇ ?" ಎಂದು ವಿನಯದಿಂದ ಪ್ರಾರ್ಥಿಸಿದನು. ಅದಕ್ಕೆ ಸ್ವಾಮಿಯು "ಎಲೈ ರಾಜನೆ! ಹೆಂಡದಿಂದಲೂ ದ್ವೀಪಾಯನನಿಕ್ಕುವ ಬೆಂಕಿಯಿಂದಲೂ ದ್ವಾರಾವತೀನಗರವು ಇನ್ನು ಹನ್ನೆರಡು ವರುಷಕ್ಕೆ ಸುಟ್ಟುಹೋಗುವುದು. ನೀನೂ ಕೃಷ್ಣನೂ ಹೊರತು ಅಲ್ಲಿ ಉಳಿದ ಯಾದವರು ನಾಶವಾಗುವರು. ಜರತ್ಕುಮಾರನ ಬಾಣದಿಂದ ನಾರಾಯಣನಿಗೆ ಮರಣವುಂಟಾಗುವುದು" ಎಂದು ಹೇಳಲು ಕೇಳಿ ಯಾದವರೆಲ್ಲರೂ ವಿಸ್ಮಯಗೊಂಡರು. ಪುನಃ ಬಲರಾಮನು ವಿನಯದಿಂದ ಸ್ವಾಮಿಯನ್ನು ಕುರಿತು "ಭವರಹಿತನೆ! ನನ್ನ ಮತ್ತು ಕೃಷ್ಣನ ಮುಂದಿನ ಭವದವಸ್ಥೆಯನ್ನು ತಿಳಿಸಬೇಕು" ಎಂದು ಬೇಡಿಕೊಂಡನು. ಅದಕ್ಕೆ ಆ ಮಹಾಮುನಿಗಳು " ಈ ಕೃಷ್ಣನು ಸತ್ತು ವಾಲು

ಕಾಪೃಥವೆಂಬ ಮೂರನೆಯ ನರಕದಲ್ಲಿ ಹುಟ್ಟಿ ಏಳುಸಾಗರೋಪಮಕಾಲದವರೆಗ ಲ್ಲಿದ್ದು ಮಡಿದು ಉತ್ಸರ್ಪಣಕಾಲದಲ್ಲಿ ತೀರ್ಥಂಕರನಾಗುವನು ನೀನು ಕೃಷ್ಣನ ಮರಣದ ದುಃಖದಿಂದ ಜಿನದೀಕ್ಷೆಯನ್ನು ಕೈಕೊಂಡು ಆಯುಷ್ಯಾವಸಾನದಲ್ಲಿ ದೇಹಭಾರವನುಳಿದು ಐದನೆಯ ಸ್ವರ್ಗದಲ್ಲಿ ಹುಟ್ಟಿ ಅಲ್ಲಿಂದ ಬಂದು ಕೃಷ್ಣತೀರ್ಥಂ ಕರರ ಅಂತರಕಾಲದಲ್ಲಿ ಈ ಲೋಕದಲ್ಲಿ ಹುಟ್ಟಿ ಕರ್ಮಕ್ಷಯಮಾಡಿ ತೀರ್ಥಂಕರ ಪದವಿಯನ್ನು ಹೊಂದುವೆ" ಎಂದು ಹೇಳಲು ಕೇಳಿ ಬಲಾಚ್ಯುತರೂ ಸಮಸ್ತ ಯಾದವರೂ ಸ್ವಾಮಿಗೆ ವಂದಿಸಿ ಬೀಳ್ಕೊಂಡು ದ್ವಾರಾವತಿಗೆ ಹೋದರು. ದ್ವಾರಾವತಿಯು ತನ್ನಿಂದ ನಾಶವಾಗುವುದೆಂದು ಕೇಳಿ ದೀಪಾಯನನು ನಿರ್ವೇಗ ದಿಂದ ಜಿನದೀಕ್ಷೆಯನ್ನು ಕೈಕೊಂಡು ಹೋದನು. ಇತ್ತ ಜರತ್ಕುಮಾರನು ತನ್ನ ಅಣ್ಣನನ್ನು ಕೊಲ್ಲುವ ಈ ಬಾಣವೇಕೆಂದು ಅದನ್ನು ಸಮುದ್ರದಲ್ಲಿ ಬಿಸುಟು ತನ್ನ ನೆಲೆಯನ್ನು ಬಿಟ್ಟು ಬೇಡರಹಳ್ಳಿಗೆ ಹೋಗಿ ಸೇರಿದನು. ಕೃಷ್ಣನು ದ್ವಾರಾವತೀ ನಗರದಲ್ಲಿದ್ದ ಸುರೆಯನ್ನೆಲ್ಲ ಊರಮುಂದಣ ಕಲ್ಲುಡೊಣೆಯಲ್ಲಿ ಸುರಿಸಿ ನಿಶ್ಚಿಂತ ನಾಗಿದ್ದನು "ಸಮುದ್ರಮಧ್ಯದಲ್ಲಿ ನೇಮೀಂದ್ರನಿಂದ ನಿರ್ಮಿತವಾದೀದ್ವಾರಾವತಿಗೆ ಕೇಡುಬರುವುದೆಂದಮೇಲೆ ಮನುಷ್ಯರ ಬಾಳ್ವೆಯು ಸ್ಥಿರವಾದುದೇ" ಎಂದು ಯೋಚಿಸಿ ಪ್ರದ್ಯುಮ್ನನು ಇನ್ನು ಸಂಸಾರದ ಹಂಬಲು ಬೇಡವೆಂದು ತನ್ನ ಮಾತೆಯಾದ ರುಗ್ಮಿಣಿಯಲ್ಲಿಗೆ ಬರಲು ಆಕೆಯು "ಮಗುವೆ! ಪರಿಚಾರಕರಾರೂ ಇಲ್ಲದೆ ಸಾಮಾ ನ್ಯರಂತೆ ನೀನು ಏಕಾಕಿಯಾಗಿ ಬಂದುದು ಚೆನ್ನಾಯ್ತು" ಎನಲು ಮನ್ಮಥನು "ದೇವಿ! ಬಿನ್ನಪವು; ಅನಾದಿಕಾಲದಿಂದಲೂ ಈ ಜೀವನು ಯಾವಾಗಲೂ ಒಂಟಿಯಾಗಿಯೇ ತಿರುಗುತ್ತಿರುವನೆಂಬುದನ್ನು ತಿಳುಹಲು ಬಂದೆನು" ಎನಲು ಕೇಳಿ ರುಗ್ಮಿಣಿಯು "ಈತನು ಚರಮಾಂಗನು. ವೈರಾಗ್ಯದಿಂದ ಬಂದಿರುವನು" ಎಂದು ತಿಳಿದು ಭೀತಳಾಗಿ ಅವನನ್ನು ಕುರಿತು "ಧೀರಲಲಿತನೆ! ನಿನ್ನ ಯೌವನವು ಕೊನೆಗಾಣುತಕ್ಕುದಲ್ಲ" ಎಂದಳು. ಆ ಮಾತನ್ನು ಕೇಳಿ ಮನ್ಮಥನು "ಸಂಸಾರ ದುಃಖವು ತೀರಿದರೆ ಅದೂ ತೀರುವುದು. ನಾನು ಆ ನೇಮೀಶ್ವರರಂತೆ ಮುಂದು ವರಿದು ವ್ಯವಸಾಯವನ್ನು ಮಾಡುವೆನು. ನಿನಗೆ ನನ್ನಮೇಲಣ ಆಶೆಯು ಬೇಡ" ಎಂದನು. ಅದಕ್ಕವಳು "ಮಗನೆ! ನಿನ್ನನ್ನು ಬಿಟ್ಟು ಇರಲಾರೆನು" ಎನಲು ಮನ್ಮಥನು "ಯಮನು ಮುಂದುವರಿದು ಕೊಂಡು ಹೋಗುವಾಗ ಬಿಡದೆ ನಿಮ್ಮಿಂ ದ ಹಿಡಿಯಕೊಳ್ಳಲಾಗುವುದೇ?" ಎಂದನು. ಆ ಮಾತನ್ನು ಕೇಳಿ ರುಗ್ಮಿಣಿಯು ಮೂರ್ಛೆಹೋದಳು. ಅವಳನ್ನು ಶೈತ್ಯೋಪಚಾರದಿಂದೆಚ್ಚರಿಸಿ "ಎಲೆ ತಾಯೆ!

ಸಂಸಾರವು ಬಹು ದುಃಖಮಯವಾದುದೆಂಬುದು ನೇಮಿಜಿನೇಶ್ವರರಿಂದ ಕೇಳಿಯೂ ನೀನು ಇಂತಹ ದುರ್ವಿಚಾರವನ್ನು ಮಾಡುವುದು ಉಚಿತವಲ್ಲ" ಎಂದು ಯುಕ್ತಿಯಿಂದ ತಾಯನ್ನು ಒಡಂಬಡಿಸಿದನು. ಸಿದ್ಧರಸಸ್ಪರ್ಶದಿಂದ ಲೋಹವು ಬಂಗಾರವಾಗುವಂತೆ ರುಗ್ಮಿಣಿಯು ಶುದ್ಧಚಿತ್ತೆಯಾಗಿ ಪುತ್ರನಿಗನುಜ್ಞೆಯನ್ನು ಕೊಡಲು ಮನ್ಮಥನು ಸಂತುಷ್ಟನಾಗಿ ತಾಯಿಯನ್ನು ಬೀಳ್ಕೊಂಡು ಹೊರಡುವ ಸಮಯದಲ್ಲಿ ಅವನ ಪತ್ನಿಯರಾದ ರತಿ, ವೈದರ್ಭೆ, ಉದಧಿಕುಮಾರಿಯರು ಬಂದು ಸುತ್ತಿಕೊಂಡು "ಅಯ್ಯೋ ಪತಿಯೆ! ನಮ್ಮೊಡನಿದ್ದು ಅತಿಶಯವಾದ ಭೋಗವನ್ನನುಭವಿಸದೆ ನಮ್ಮನ್ನು ಬಿಟ್ಟುಹೋದರೆ ನಿನಗೆ ಪಾಪವು ಸಂಘಟಿಸುವುದಿಲ್ಲವೇ? ಆಕಾಶದಲ್ಲಿರುವ ಮೋಡವನ್ನು ನೋಡಿ ಮನೆಯಲ್ಲಿದ್ದ ನೀರನ್ನು ಚೆಲ್ಲುವ ಹೆಡ್ಡರಂತೆ ನೀನಾ ಕುಲಗೆಟ್ಟ ಸನ್ಯಾಸಿಗಳ ಮಾತನ್ನು ಕೇಳಿ ನಮ್ಮನ್ನು ನಿರಾಕರಿಸಬಹುದೇ?" ಎಂದು ಮುಂತಾಗಿ ಅನೇಕವಿಧದಲ್ಲಿ ಐಹಿಕಸುಖವನ್ನು ಹೊಗಳಿ ತನ್ನಪ್ರಯಾಣಕ್ಕೆ ಅಡ್ಡಿ ಮಾಡುತ್ತಿರುವ ಆ ಸತಿಯರ ಮಾತುಗಳನ್ನು ಕೇಳಿ ಪ್ರದ್ಯುಮ್ನನು "ಎಲೆ ಸತಿಯರೆ! ಕೃಷ್ಣ ಬಲರಾಮರಿಬ್ಬರು ಹೊರತಾಗಿ ಉಳಿದ ಯಾದವರೊಡನೆ ಈ ದ್ವಾರಾವತಿಯು ಉರಿದು ಭಸ್ಮವಾಗಿ ಹೋಗುವುದೆಂದು ಶ್ರೀ ನೇಮಿಜಿನೇಶರು ದಯೆಯಿಂದ ಹೇಳಿದುದನ್ನು ನೀವು ಕೇಳಿಯೂ ಅದನ್ನು ಯೋಚಿಸದೆ ಹೀಗೆ ಹೇಳಬಹುದೇ?" ಎಂದು ಮೊದಲಾದ ಸವಿಮಾತುಗಳಿಂದ ಸಮಾಧಾನಪಡಿಸಿ ಬಳಿಕ ಬಲಾಚ್ಯುತರನ್ನು ಕಂಡು ಅವರನ್ನು ಒಡಂಬಡಿಸಿ ಬೀಳ್ಕೊಂಡು ಶಂಭುಕುಮಾರನೂ, ರತಿ, ಉದಧಿ, ವಿದರ್ಭಾದೇವಿ ಮೊದಲಾದ ತನ್ನ ಸ್ತ್ರೀಯರೂ ರುಗ್ಮಿಣಿ, ಸತ್ಯಭಾಮೆ ಮೊದಲಾದ ಕೃಷ್ಣನ ಸತಿಯರೂ ತನ್ನೊಡನೆ ದೀಕ್ಷೆಗೆ ಬರಲು ಸಮವಸರಣಕ್ಕೆ ಹೋಗಿ ಶ್ರೀ ನೇಮಿಜಿನೇಶರಲ್ಲಿ ಅವರೆಲ್ಲರೊಡನೆ ದೀಕ್ಷಾಗ್ರಹಣಮಾಡಿದನು. ಸಮುದ್ರವಿಜಯನೂ ಅವನ ತಮ್ಮಂದಿರೂ ಕೃಷ್ಣ ಬಲರಾಮರ ಪುತ್ರರುಗಳೂ, ಅನೇಕ ಯಾದವರಾಜರೂ ವೈರಾಗ್ಯಹೊಂದಿ ಬಂದು ದೀಕ್ಷೆಯನ್ನು ಹೊಂದಿದರು. ಶಿವದೇವಿಯೂ ಅನೇಕ ಯಾದವರಾಜರ ಪತ್ನಿಯರೊಡನೆ ಬಂದು ತಪಸ್ಸನ್ನು ಸ್ವೀಕರಿಸಿದಳು. ಹೀಗೆ ಅವರೆಲ್ಲರೂ ದೀಕ್ಷೆಯನ್ನು ಹೊಂದಿ ತಪಸ್ಸನ್ನಾಚರಿಸಿ ಅವರವರ ಪರಿಣಾಮಾನುಸಾರವಾಗಿ ಸ್ವರ್ಗಮೋಕ್ಷಗಳನ್ನು ಹೊಂದಿದರು. ಬಲರಾಮನು ಕೃಷ್ಣನಮೇಲಿನ ಪ್ರೀತಿಯಿಂದ ನಿಂತನು. ಹಿಂದೆ ತಪಸ್ಸಿಗೆ ಹೋಗಿದ್ದ ದ್ವೀಪಾಯನಮುನಿಯು ಮುಂದೆ ಬರುವ ಅಧಿಕಮಾಸವನ್ನು ತಿಳಿಯದೆ ಪಾರಣೆಗೆಂದು ಬಂದು ದ್ವಾರಾವತಿಯ ಸಮೀಪದಲ್ಲಿ ಪ್ರತಿಮಾಯೋಗದಲ್ಲಿ ನಿಂತಿರಲು,

ಆನೆಯು ಬೇಂಟೆಗೆ ಹೋಗಿ ಹಿಂದಿರುಗಿಬಂದ ಆ ನಗರಿಯ ಯಾದವರು ಬಿಸಿಲ ತಾಪದಿಂದ ಬಾಯಾರಿದರು. ಹಿಂದೆ ಕಲ್ಲಡೊಣೆಗಳಲ್ಲಿ ಸುರಿದಿದ್ದ ಸುರೆಯು ಒಣಗಿ ಹೋಗಿದ್ದು ಮಳೆಯ ನೀರಿನಲ್ಲಿ ನೆನೆದಿದ್ದಿತು. ಅದು ನೀರೆಂದೇ ಬಗೆದು ಅದನ್ನು ಅವರು ಕುಡಿದು ಮತ್ತರಾಗಿ ಬರುತ್ತ ಇದಿರಲ್ಲಿ ಪ್ರತಿಮಾಯೋಗದಲ್ಲಿ ನಿಂತಿದ್ದ ದೀಪಾಯನಮುನಿಯನ್ನು ಕಂಡು ಕೋಪಗೊಂಡು "ಈ ಸವಣನನ್ನು ನೋಡಿದ ಶಕುನದಿಂದ ನಮಗೆ ಬೇಂಟೆ ಸಿಕ್ಕಲಿಲ್ಲ" ಎಂದು ಹೇಳುತ್ತ ಕಲ್ಲಗುಂಡುಗಳನ್ನು ತಂದು ಆ ಮುನಿಯ ಕಾಲಿನಿಂದ ತಲೆಯವರೆಗೂ ಸುತ್ತಲೂ ರಾಶಿಮಾಡಿ ಪಟ್ಟಣಕ್ಕೆ ಹೋದರು. ಅದರಿಂದಾ ಯತಿಗೆ ಬಹುಬಾಧೆಯಾಗಿ ಅತ್ಯಂತ ಕೋಪಾವಿಷ್ಟನಾದನು. ಆ ವಿಷಯವನ್ನು ಬಲರಾಚ್ಯುತರು ತಿಳಿದು ಓಡಿಬಂದು ಆ ಮುನಿಗೆ ಮಾಡಿದ್ದ ಉಪಸರ್ಗವನ್ನು ಪರಿಹರಿಸಿ ಕ್ಷಮಿಸಬೇಕೆಂದು ಅವನ ಕಾಲಿಗೆ ನಮಸ್ಕರಿಸಿದರು. ಆಗ ಕಂಠಗತಪ್ರಾಣನಾಗಿದ್ದ ದೀಪಾಯನನು ನೀವಿಬ್ಬರು ಉಳಿಯುವಿರೆಂದು ಎರಡು ಬೆರಳನ್ನೆತ್ತಿ ತೋರಿಸಿ ಪ್ರಾಣಬಿಟ್ಟನು. ಕೃಷ್ಣ ಬಲರಾಮರು ಪಟ್ಟಣಕ್ಕೆ ಬಂದರು. ರೌದ್ರಧ್ಯಾನದಲ್ಲಿ ಸತ್ತ ಆ ದೀಪಾಯನನು ಸೌಧರ್ಮ ಸ್ವರ್ಗದಲ್ಲಿ ಹುಟ್ಟಬೇಕಾಗಿದ್ದುದು ತಪ್ಪಿ ಜ್ಯೋತಿರ್ಲೋಕದಲ್ಲಿ ಅಗ್ನಿಕುಮಾರನಾಗಿ ಜನಿಸಿ ದ್ವಾರಾವತಿಯ ಯಾದವರಿಂದ ತನಗೆ ಈ ರೀತಿಯಾಯಿತೆಂದು ತಿಳಿದು ಅಲ್ಲಿಂದಿಳಿದುಬಂದು ಆ ನಗರಿಗೆ ಬೆಂಕಿಯನ್ನಿಟ್ಟನು.

ದ್ವಾರಾವತಿಯೆಲ್ಲ ಬೆಂಕಿಯಿಂದ ಉರಿಯಲುಪಕ್ರಮವಾಗಿ ಬೆಂಕಿಯು ಎಲ್ಲಾ ಕೇರಿಗಳಿಗೂ ವ್ಯಾಪಿಸಿತು. ಇದ್ದಕ್ಕಿದ್ದಹಾಗೆ ಊರಿಗೆಲ್ಲಾ ಬೆಂಕಿಬಿದ್ದುದನ್ನು ನೋಡಿ ಜನಗಳು ಬಹಳ ಹೆದರಿ ಉರಿಯುತ್ತಿರುವ ಮನೆಗಳಲ್ಲಿದ್ದ ವೃದ್ಧರನ್ನೂ ಮಕ್ಕಳನ್ನೂ ಉತ್ತಮವಸ್ತುಗಳನ್ನೂ ಹೊರಕ್ಕೆ ತೆಗೆಯಲು ಪ್ರಯತ್ನಮಾಡುತ್ತಿದ್ದರು. ಎಲ್ಲೆಲ್ಲೂ ಜನಗಳು ಪ್ರಾಣಭಯದಿಂದ ಅರಚಿಕೊಳ್ಳುತ್ತಿದ್ದರು. ಉರಿಯುವ ಒಂದು ಮನೆಯಿಂದ ಮತ್ತೊಂದು ಮನೆಗೆ ಬೆಂಕಿಯು ವ್ಯಾಪಿಸದಂತೆ ಮಾಡಲು ಮಧ್ಯದಲ್ಲಿರುವ ಮನೆಗಳನ್ನು ಕತ್ತರಿಸಿದರು. ನೀರನ್ನು ಹುಯ್ದರು. ಬೆಂಕಿಯು ಮನೆಯಿಂದ ಮನೆಗೆ ವ್ಯಾಪಿಸುತ್ತ ಮಾಳಿಗೆ ಮನೆ, ಇಟ್ಟಿಗೆಯಮನೆ, ಹೆಂಚಿನಮನೆ, ಕಲ್ಲಿನಮನೆ ಎಲ್ಲವನ್ನೂ ಸುಡುತ್ತಲಿತ್ತು. ಹಟಾತ್ತಾಗಿ ಪುರವೆಲ್ಲವೂ ಬೆಂಕಿಯಿಂದ ಹತ್ತಿಕೊಂಡುದರಿಂದ ಅಲ್ಲಿದ್ದ ಜನರು ಅಲ್ಲಲ್ಲೇ ಸುಟ್ಟುಹೋದರು. ಬಾಣಂತಿಯರು ಮಕ್ಕಳನ್ನು ಬಿಟ್ಟು ಹೋಗಲಾರದೆ "ಕೆಟ್ಟೆವು ಕೆಟ್ಟೆವು" ಎಂದು ಕೂಗಿಕೊಳ್ಳುತ್ತ ಮಕ್ಕಳನ್ನು ಅಪ್ಪಿಕೊಂಡು ಸತ್ತ

ದು. ವೃದ್ಧರೂ, ಗರ್ಭಿಣಿಯರೂ, ಸಣ್ಣಮಕ್ಕಳೂ ಹೊರಗೆ ಬರಲಾರದೆ ಅಲ್ಲಲ್ಲೇ ಬೆಂದುಹೋದರು. ಉರಿಯಲ್ಲಿ ಸಿಕ್ಕಿರುವ ತಮ್ಮ ಪತಿಯರನ್ನು ಆಲಿಂಗಿಸಿ ಎಷ್ಟೋ ಮಂದಿ ಸ್ತ್ರೀಯರು ತಮ್ಮ ಪ್ರಾಣಗಳನ್ನು ಬಿಟ್ಟರು. ದೇವಸ್ಥಾನಗಳಲ್ಲಿ ಜಪತಪಗಳಲ್ಲಿ ನಿರತರಾಗಿದ್ದವರು ಸತ್ತು ಸದ್ಗತಿಗೆ ಹೋದರು. ಪಟ್ಟಣವೆಲ್ಲ ಬೆಂಕಿಯಿಂದ ಉರಿಯುತ್ತಿರುವಾಗ ತಪ್ಪಿಸಿಕೊಂಡು ಹೋಗುವುದೆಲ್ಲಿಗೆ? ಬೆಂಕಿಯನ್ನಾರಿಸಲು ಪಟ್ಟಶ್ರಮವೆಲ್ಲವೂ ವ್ಯರ್ಥವಾಯಿತು. ಜನರು ಇದ್ದಿದ್ದಲ್ಲಿಯೇ ಸತ್ತರು. ಬೆಂಕಿಯಲ್ಲಿ ಸಿಕ್ಕಿರುವವರನ್ನು ಬಿಡಿಸುವರಿಲ್ಲ. ಸತ್ತವರಿಗೆ ಅಳುವರಿಲ್ಲ. ಹೀಗೆ ಬೆಂಕಿಯು ಹತ್ತಿ ಸುಡುತ್ತಿರುವಾಗ ಉರಿಯುತ್ತಿರುವ ಗೋಪುರಗಳು ರೋಹಣಾದ್ರಿಯಂತೆ ಕಾಣಿಸುತ್ತಿದ್ದುವು. ರತ್ನನಿರ್ಮಿತವಾದ ಅರಮನೆಗೆ ಬೆಂಕಿಹತ್ತಿ ರತ್ನಗಳೆಲ್ಲ ಸಿಡಿದು ಪುಡಿಯಾದುವು. ಅವುಗಳಿಂದ ಆಕಾಶವು ಹಲವು ಬಣ್ಣವಾಗಿ ತೋರುತ್ತಿದ್ದಿತು. ಕೋಟೆಯಮೇಲೆ ನಿಲಿಸಿದ್ದ ಕೆಂಪಿನ ಬೊಂಬೆಗಳು ಉರಿದು ಸಿಡಿದುವು ಕೃಷ್ಣನ ಹದಿನಾರುಸಾವಿರಮಂದಿ ಸ್ತ್ರೀಯರು ಅರಮನೆಯಲ್ಲಿ ಬೆಂದುಹೋದರು. ಕೃಷ್ಣನು ಇದು ದೇವಕೃತವಾದುದೆಂದು ಬಗೆದು ಚಕ್ರ ಮೊದಲಾದ ರತ್ನಗಳನ್ನು ಸ್ಮರಿಸಲು ಆಗ ಅವುಗಳನ್ನು ಕಾಯುತ್ತಿದ್ದ ದೇವತೆಗಳು ಅದೃಶ್ಯವಾಗಿದ್ದುವು. ಇದು ನಮ್ಮ ಪೂರ್ವಕೃತ ಪಾಪದಫಲವೆಂದು ಕೃಷ್ಣನು, ದಂತನಖಗಳಿಲ್ಲದ ಸಿಂಹದಂತೆ, ಚಿಂತಾಕ್ರಾಂತನಾದನು. ಅವನ ಪುಣ್ಯವು ತೀರಿತು. ಬಲರಾಮನು ಬೆಂಕಿಯನ್ನಾರಿಸುವುದಕ್ಕಾಗಿ ಹುಯ್ಯುತ್ತಿದ್ದ ನೀರು ಎಣ್ಣೆಯಂತಾದುದು. ಆಗ ಬಲರಾಮನು ನಿರಾಶನಾಗಿ ಕೃಷ್ಣನ ರಕ್ತಕಂಬಲವನ್ನೊಂದನ್ನು ತೆಗೆದುಕೊಂಡು ಅವನೊಡನೆ ಊರಿಂದ ಹೊರಕ್ಕೆ ಬಂದು ಸಮುದ್ರತೀರದಲ್ಲಿ ನಿಂತು ದ್ವಾರಾವತಿಯು ಭಯಂಕರವಾಗಿ ಸುಟ್ಟುಹೋಗುವುದನ್ನು ವಿಸ್ಮಯದಿಂದ ನೋಡುತ್ತಿದ್ದನು. ಹನ್ನೆರಡು ಯೋಜನ ವಿಸ್ತಾರವಾಗಿದ್ದ ದ್ವಾರಾವತಿಯು ನಿಶ್ಶೇಷವಾಗಿ ಸುಟ್ಟು ಆ ಸ್ಥಳದಲ್ಲಿ ಸಮುದ್ರವು ವ್ಯಾಪಿಸಿತು. ಇದು ಪಟ್ಟಣವನ್ನು ಸುಟ್ಟಪಾಪವನ್ನು ಪರಿಹರಿಸಿಕೊಳ್ಳಲು ಅಗ್ನಿದೇವನು ಸ್ನಾನಕ್ಕೆ ಸಮುದ್ರಕ್ಕಿಳಿದಂತೆ ತೋರುತ್ತಿದ್ದಿತು.

ಇತ್ತ ಕೃಷ್ಣ ಬಲರಾಮರು ಆ ಸಮುದ್ರತೀರದಿಂದ ದಕ್ಷಿಣಾಭಿಮುಖವಾಗಿ ಹೊರಟು ಪ್ರಯಾಣಮಾಡಿದರು. ಅನೇಕ ಸೈನ್ಯದಿಂದ ಪರಿವೃತರಾಗಿ ಖೇಚರ ಭೂಚರರಾಜರುಗಳಿಂದ ಓಲೈಸಿಕೊಳ್ಳುತ್ತ ಇಂದ್ರವೈಭವದಿಂದ ಬರುತ್ತಿದ್ದ ಕೃಷ್ಣ ಬಲರಾಮರು ಕರ್ಮವಶದಿಂದ ಇಂದು ಇಬ್ಬರೇ ಪಾದಚಾರಿಗಳಾಗಿ ನಡೆದುಬರುವಂತಾಯ್ತು. ಹದಿನಾರುಸಾವಿರ ಮಕುಟವರ್ಧನರಿಂದ ಓಲೈಸಲ್ಪಟ್ಟು ವೈಭವ

ದಿಂದ ಬರುತ್ತಿದ್ದ ಅವರು ಇಂದು ಪರದೇಶಿಗಳಂತೆ ಬರುತ್ತಿದ್ದರು. ಮಂಡಳಿಕ ರಿಂದ ಸುತ್ತಲ್ಪಟ್ಟು ರನ್ನದ ಸತ್ತಿಗೆಯ ನೆಳಲಲ್ಲಿ ಬರುತ್ತಿದ್ದ ಅವರು ಇಂದು ಬಿಸಿಲಿನಲ್ಲಿ ಬರುವಂತಾಯ್ತು. ರಾಜಭೋಗವನ್ನನುಭವಿಸುತ್ತಿದ್ದ ಅವರು ಇಂದು ಕಲ್ಲಿನಮೇಲೆ ಕಾಲಿಟ್ಟು ನೋವಿನಿಂದ ಕಾಲೆತ್ತುತ್ತ ಬಿಸಿಲಲ್ಲಿ ಬೆಮರ್ತು ಬಳಲಿ ಬೆಂಡಾಗಿ ಬಂದು ಒಂದು ಭಯಂಕರವಾದ ಅರಣ್ಯವನ್ನು ಹೊಕ್ಕರು. ಹಸಿದು ಬಳಲಿದ್ದ ಕೃಷ್ಣನನ್ನು ಅಲ್ಲಿ ಒಂದು ಮಾವಿನಮರದ ಕೆಳಗೆ ಕುಳ್ಳಿರಿಸಿ ಆಹಾರವನ್ನು ತರುತ್ತೇನೆಂದು ಹೇಳಿ ಬಲರಾಮನು ಕುರುಭೂಪತಿಯ ಮೊಮ್ಮಗನಾದ ಕುಯವರನು ಆಳುತ್ತಿದ್ದ ಧನದಕುಕ್ಷಿಯೆಂಬ ಪಟ್ಟಣಕ್ಕೆ ಹೋದನು. ಅಲ್ಲಿ ಆ ಕುಯವರನು ದ್ವಾರಾವತಿಯು ಸುಟ್ಟು ಕೃಷ್ಣ ಬಲರಾಮರಿಬ್ಬರು ಹೊರತು ಉಳಿದ ಯಾದವರೆಲ್ಲ ಸತ್ತುಹೋದರೆಂದು ಕೇಳಿ ಸಂತುಷ್ಟನಾಗಿ ಓಕುಳಿಮಾಡಿಸುತ್ತಿರುವುದನ್ನು ಕಂಡು ದುಃಖಿತನಾಗಿ ತನ್ನ ಪೂರ್ವಜನ್ಮದ ದುಷ್ಕೃತ್ಯದ ಫಲವೆಂದು ಭಾವಿಸಿ ನಾಗದತ್ತನೆಂಬ ವೈಶ್ಯನ ಅಂಗಡಿಗೆ ಹೋಗಿ ತನ್ನ ಕಿವಿಯಲ್ಲಿದ್ದ ರತ್ನಕುಂಡಲವನ್ನು ಮಾರಿ ಕಲಸಿದ ಅನ್ನವನ್ನು ತೆಗದುಕೊಂಡು ಹಿಂದಿರುಗಿದನು. ತ್ರಿಖಂಡಾಧಿಪತಿಯಾದ ಕೃಷ್ಣನ ಅಣ್ಣನೂ ಅತ್ಯಂತ ಪರಾಕ್ರಮಶಾಲಿಯೂ ಆದ ಬಲರಾಮನು ಕಾಲವಶದಿಂದ ಅನ್ನಕ್ಕಾಗಿ ಕಿವಿಯ ಕುಂಡಲವನ್ನು ಮಾರುವಂತಾದುದು. ಬಲರಾಮನ ಸುಂದರಾಕಾರವನ್ನು ನೋಡಿ ಅಚ್ಚರಿಗೊಂಡ ಆ ನಾಗದತ್ತನು ತಾನು ಕ್ರಯಕ್ಕೆ ಪಡೆದ ಆ ಕುಂಡಲವನ್ನು ತಾನು ಧರಿಸುವುದುಚಿತವಲ್ಲವೆಂದು ಬಗೆದು ಅದನ್ನು ದೊರೆಯಾದ ಕುಯವರನಿಗೆ ಕೊಡಲು ಅವನು ನೋಡಿ ಅಚ್ಚರಿವಟ್ಟು ಅದನ್ನು ಕೊಟ್ಟವನಾರೆಂದು ಕೇಳಿದನು ಅದಕ್ಕಾನಾಗದತ್ತನು ತೇಜಸ್ವಿಯೂ ಅತ್ಯಂತ ಸುಂದರನೂ ಆದ ಓರ್ವ ಕಾರಣಪುರುಷನು ಅದನ್ನು ಕೊಟ್ಟು ಕಲಸುಗೂಳನ್ನು ತೆಗೆದುಕೊಂಡು ಪೋದನೆನಲು ಕೇಳಿ, ಅವನು ಬಲರಾಮನೆಂದೇ ಅನುಮಾನದಿಂದ ತಿಳಿದು ಕುಯವರನು ಅತ್ಯಂತ ಕುಪಿತನಾಗಿ ಹಿಂದೆ ಪಾಂಡವರನ್ನು ಎತ್ತಿಕಟ್ಟಿ ತನ್ನ ವಂಶವನ್ನು ನಾಶಮಾಡಿಸಿದ ಶತ್ರುವು ಕೈಗೆ ಸಿಕ್ಕಿದನೆಂದು ತನ್ನ ಅಪರಿಮಿತ ಸೇನೆಯೊಡನೆ ಬಲರಾಮನೆಡೆಗೆ ಬರುತ್ತಿರಲು ಕಂಡು ಬಲರಾಮನು "ಕೃಷ್ಣನ ಪುಣ್ಯದೇವತೆಗಳಿರಾ ! ಈ ಅನ್ನವನ್ನು ಆತುಕೊಳ್ಳಿ" ಎಂದು ಹೇಳಿ ಕೈಯಲ್ಲಿದ್ದ ಆ ಬುತ್ತಿಯನ್ನು ಮೇಲಕ್ಕೆಸೆಯಲು ಅದು ಕೆಳಕ್ಕೆ ಬಿದ್ದಿತು ಅದನ್ನು ನೋಡಿ 'ನನ್ನ ಪುಣ್ಯದೇವತೆಗಳಿರಾ ! ಈ ಅನ್ನವನ್ನು ಆತುಕೊಳ್ಳಿ" ಎಂದು ಮೇಲಕ್ಕೆಸೆಯಲು ಅದು ಮೇಲೆನಿಂತಿತು. ಅಷ್ಟರಲ್ಲಿ ಸಮೀಪಕ್ಕೆ ಬಂದು ಮೇಲೆ ಬಿದ್ದ ಕುಯವರನ

ಸೈನ್ಯವನ್ನು, ಜಿಂಕೆಯು ಹಿಂಡಿಗೆ ನುಗ್ಗಿದ ಹೆಬ್ಬುಲಿಯಂತೆ, ಕೊಂದನು. ಅದನ್ನು ಕಂಡು ಕುಯುವರನು ಓಡಿಹೋದನು. ಬಳಿಕ ಬಲರಾಮನು ಅಸ್ತ್ರವನ್ನು ತೆಗೆದು ಕೊಂಡು ಒಂದು ನೆಲದಮೇಲೆ ಮಲಗಿದ್ದ ತಮ್ಮನನ್ನು ದೂರದಿಂದ ನೋಡಿ ಅತ್ಯಂತ ದುಃಖಿತನಾಗಿ "ಎಲೆ ತಮ್ಮನೆ! ರತ್ನಮಂಚದಮೇಲೆ ಮಣಿದೀಪಗಳ ಬೆಳಕಿನಲ್ಲಿ ಮಲಗುವ ನಿನಗೆ ಈ ವಿಧಿಯಾಯ್ತೋ? ಶ್ವೇತಚ್ಛತ್ರದ ನೆಳಲಿನಲ್ಲಿ ಚಾಮರಗಳಿಂದ ಬೀಸಿಸಿಕೊಳ್ಳುವವನಿಗೆ ಇಂದು ಈ ವಿಧಿಯಾಯ್ತೋ? ಭೂಮಿಯ ಸಮಸ್ತರಾಜ ರಿಂದಲೂ ನಮಸ್ಕರಿಸಿಕೊಳ್ಳುತ್ತಿದ್ದ ಮುರವೈರಿಯು ಕರ್ಮವಶದಿಂದ ಏಕಾಕಿಯಾ ದೆಯಲ್ಲ?" ಎಂದು ಹಂಬಲಿಸಿ ಕಣ್ಣೀರನ್ನು ತಂದುಕೊಂಡು ಸಮೀಪಕ್ಕೆ ಬಂದು ಕುಳಿತು ಕೃಷ್ಣನಿಗೆ ಕುಯುವರನು ಸೇನೆಯೊಡನೆ ಬಂದಿದ್ದುದನ್ನೂ ತಾನು ಅವನನ್ನು ಹೊಡೆದೋಡಿಸಿದುದನ್ನೂ ತಿಳುಹಲು ಕೇಳಿ ಕೃಷ್ಣನು ಹೆದರಿ "ಅಣ್ಣಾ! ನಾವು ಇಲ್ಲಿರುವುದು ಸರಿಯಲ್ಲ" ಎಂದನು. ಆ ಮಾತನ್ನು ಕೇಳಿ ಬಲರಾಮನು "ಅಯ್ಯೋ! ವಿಧಿಯೆ! ಲೋಕೈಕವೀರನೂ ಅಚಲನೂ ಆದ ಈತನು ಪಾಪವಶದಿಂದ ಅಂಜಿದ ನಲ್ಲಾ!' ಎಂದು ಚಿಂತಿಸಿ ತಮ್ಮನೊಡನೆ ಅಲ್ಲಿಂದ ಹೊರಟು ಕೌಶಂಬಿಯೆಂಬ ಅರಣ್ಯವನ್ನು ಹೊಕ್ಕು ಒಂದು ಪರಿದಾರಿಯು ದೂರ ನಡೆದು ಒಂದು ಆಲದಮರದ ಬಳಿಗೆ ಬಂದರು. ಆಗ ಕೃಷ್ಣನು ಬಹಳ ಬಾಯಾರಿರುವನೆಂದು ತಿಳಿದು ಅವನನ್ನು ಆ ಮರದ ಬುಡದಲ್ಲಿ ಮಲಗಿಸಿ ಕೆಂಪುಬಣ್ಣದ ರತ್ನಗಂಬಳಿಯನ್ನು ಹೊದಿಸಿ ತಾನು ನೀರನ್ನು ತರಲು ಹೋದನು.

ಇತ್ತ ನೇಮಿಾಶರು ಹೇಳಿದ ಮಾತನ್ನು ಕೇಳಿ ಹಿಂದೆ ಜರತ್ಕುಮಾರನು ನೀರಿ ನಲ್ಲಿ ಬಿಸುಟಿದ್ದ ಬಾಣವನ್ನು ಮಿಾನೊಂದು ನುಂಗಿರಲು ಅದನ್ನು ಹಿಡಿದ ಬೆಸ್ತನು ಆ ಬಾಣವನ್ನು ತಂದು ಜರತ್ಕುಮಾರನಿಗೆ ಕಾಣಿಕೆಯಾಗಿ ಕೊಟ್ಟಿದ್ದನು. ಅವನು ಸಂತೋಷದಿಂದ ಆ ಬಾಣವನ್ನು ತೆಗೆದುಕೊಂಡು ಆ ಕೌಶಂಬೀವನಕ್ಕೆ ಬಂದು ಮರದಡಿಯಲ್ಲಿ ಕೆಂಪುಬಣ್ಣದ ಕಂಬಳಿಯನ್ನು ಹೊದೆದು ಮಲಗಿದ್ದ ಕೃಷ್ಣನನ್ನು ದೂರದಿಂದ ನೋಡಿ ಹಲವು ಬಣ್ಣದ ಮೃಗವಿದೆಂದು ಭಾವಿಸಿ ಬಾಣಪ್ರಯೋಗ ಮಾಡಿದನು. ಆ ಬಾಣವು ಕೃಷ್ಣನ ಕಾಲಿಗೆ ನಾಟಿ ಮೇಲೆ ಮೂಡಿತು. ಆಗ ಕೃಷ್ಣನೆದ್ದು ಅದನ್ನು ಕಿತ್ತು ಕೋಪದಲ್ಲಿರುವಾಗ ಜರತ್ಕುಮಾರನು ತನ್ನ ಬಾಣದಿಂದ ಮೃಗವು ಸತ್ತಿತೆಂದು ಭಾವಿಸಿ ಅಲ್ಲಿಗೆ ಹೋಗಿ ಕೃಷ್ಣನನ್ನು ಕಂಡು "ಅಯ್ಯೋ ಅಣ್ಣಾ! ಕೆಟ್ಟೆನು, ನಾನು ಮಹಾಪಾಪಿ" ಎಂದು ಹೇಳುತ್ತ ನೆಲದಲ್ಲಿ ಬಿದ್ದು ಹೊರಳಿ ಶೋಕಪಡುತ್ತಿರುವುದನ್ನು ನೋಡಿ ಹರಿಯು ಇದೇನೆಂದು ಕೇಳಿದನು. ಅದಕ್ಕೆ

ಜರತ್ಕುಮಾರನು ಅಳುತ್ತ "ಅರಸ! ನಿನ್ನನ್ನು ಮೃಗವೆಂದು ಊಹಿಸಿ ದುಷ್ಕರ್ಮದಿಂದ ನಾನು ಬಾಣಪ್ರಯೋಗಮಾಡಿದೆನು. ಈ ದ್ರೋಹಿಯಾದ ನನ್ನನ್ನು ದಂಡಿಸು' ಎಂದು ಹೇಳಲು ಕೇಳಿ ಕೃಷ್ಣನು ಕೋಪಿಸಿಕೊಳ್ಳದೆ "ತಮ್ಮ! ಏಕೆ? ನೀನು ಅವಿವೇಕಿಯಲ್ಲ. ಲೋಕೈಕಪತಿಯಾದ ನೇಮಿನಾಥರು ಹೇಳಿದ ಮಾತು ತಪ್ಪುವುದೇ? ದುಃಖವನ್ನು ಬಿಡು. ನೀನಿಲ್ಲಿ ಸಾವಕಾಶಮಾಡಿದರೆ ಬಲರಾಮನು ಬಂದು ನನ್ನ ಗಾಯವನ್ನು ನೋಡಿ ಕೋಪದಿಂದ ನಿನ್ನನ್ನು ಕೊಲ್ಲದೆ ಬಿಡನು. ಆದುದರಿಂದ ನೀನು ಇಲ್ಲಿಂದ ಹೊರಟುಹೋಗು" ಎಂದು ಹೇಳಲು ಅವನು ಹೊರಟುಹೋದನು. ಇತ್ತ ಕೃಷ್ಣನು ಕಂಬಳಿಯನ್ನು ಹೊದೆದುಕೊಂಡು "ನನ್ನನ್ನು ಹೊಡೆದವನು ನನ್ನ ತಮ್ಮನಲ್ಲದೆ ಬೇರೆಯವನಾಗಿದ್ದರೆ ಅವನನ್ನು ಕೊಲ್ಲದೆ ಬಿಡುತ್ತಿರಲಿಲ್ಲ" ಎಂದು ಭಾವಿಸುತ್ತ ರೌದ್ರಧ್ಯಾನದಿಂದ ಸತ್ತು ಮೂರನೆಯ ನರಕದಲ್ಲಿ ಹುಟ್ಟಿದನು.

ಇತ್ತ ಬಲರಾಮನು ನೀರನ್ನು ಹುಡುಕಿಕೊಂಡು ಹೋಗಿ ಒಂದು ಕೊಳವನ್ನು ಕಂಡು ತಾವರೆಯೆಲೆಯ ದೊನ್ನೆಯಲ್ಲಿ ನೀರನ್ನು ತೆಗೆದುಕೊಂಡು ಕೃಷ್ಣನಿದ್ದಲ್ಲಿಗೆ ಬಂದು ಅವನು ನಿದ್ರಿಸುತ್ತಿರುವನೆಂದು ಭಾವಿಸಿ ಕರುಣದಿಂದ ಸ್ವಲ್ಪಹೊತ್ತು ಕುಳಿತಿರಲು, ಆಗ ಕೃಷ್ಣನ ಗಾಯವಾದ ಕಾಲಿಗೆ ನೊಣಗಳು ಮುತ್ತುತ್ತಿರುವುದನ್ನು ಕಂಡು ಎಲ್ಲಿಯದೀನೊಣವೆಂದು ಕಾಲಿನ ಗಾಯವನ್ನು ನೋಡಿ ಹೊದಿಕೆಯನ್ನು ತೆಗೆದು ಅವನ ಮುಖವನ್ನು ಕಂಡು ಕೃಷ್ಣನು ಮಡಿದನೆಂದು ತಿಳಿದು "ಆಹಾ' ಎಂದು ಮೂರ್ಛಿತನಾಗಿ ತಾನೇ ಚೇತರಿಸಿಕೊಂಡೆದ್ದು 'ಅಚ್ಯುತನೆ! ನಿನಗೆ ಈ ವಿಧಿಯಾಯ್ತೋ? ಹಾ ಕೆಟ್ಟೆನ. ಲೋಕೈಕವೀರನಾದ ನಿನ್ನನ್ನು ಕೊಂದವನನ್ನು ಕೊಲ್ಲದೆ ಬಿಡೆನು" ಎಂದು ಒಂದು ದೊಡ್ಡಮರವನ್ನು ಕಿತ್ತುಕೊಂಡು ಆ ಭೀಮಾಟವಿಯಲ್ಲೆಲ್ಲ ಹುಡುಕಿ ನೋಡಿ ಆ ಕೊಲೆಗೇಡಿಯು ಸಿಕ್ಕದಿರಲು ಹಿಂದಿರುಗಿ ಬಂದು ಕೃಷ್ಣನ ಹೆಣವನ್ನಪ್ಪಿಕೊಂಡು "ಹಾ! ಮುರಾಂತಕ! ಮಗಧವಿಧ್ವಂಸಕ! ಕಂತುಜನಕ! ಕಂಸಾರಿಯೇ! ನಿನಗೆ ಈ ಸಾವು ಪ್ರಾಪ್ತವಾಯಿತೇ? ಹಾ! ಹರಿಕುಲಗಗನಭಾಸ್ಕರ! ಹರಿವಂಶತಿಲಕ! ಹರಿವಂಶಾಂಬುಧಿಚಂದ್ರ! ರಾಜಕುಲಚೂಡಾಮಣಿಯೆ! ರಿಪುನೃಪವಿಪಿನಕುಠಾರ! ನಿನಗೀವಿಧಿಯಾಯ್ತೋ? ನೀನು ಸಣ್ಣ ಮಗುವಾಗಿರುವಾಗ ನಿನ್ನನ್ನು ಕೊಲ್ಲಲು ಬಂದ ಪೂತನಿಯ ಪ್ರಾಣವನ್ನು ಹೀರಿದ ನಿನ್ನ ಪುಣ್ಯವು ತೀರಿತಲ್ಲ. ಕಾಕಾಸುರನನ್ನೂ ಕಿಶೋರಾಸುರನನ್ನೂ ಗರ್ದಭಾಸುರನನ್ನೂ ಮರ್ದಿಸಿದ ನಿನ್ನ ಭುಜಬಲವೇನಾಯ್ತು? ವೀರನಾರಾಯಣ! ನಿನ್ನ ಆ ಬಲವನ್ನು ತೋರು. ಮತ್ತಿಯ ಮರವನ್ನೂ ತಾಳವೃಕ್ಷವನ್ನೂ

ಕಿತ್ತು, ಕೈಟಭನನ್ನು ಸಂಹರಿಸಿ, ಕಾಳಿಂಗಸರ್ಪವನ್ನು ಕೊಂದು, ಅಸುರರನ್ನು ಹತಿಸಿ, ಗೋವರ್ಧನಗಿರಿಯನ್ನೆತ್ತಿ, ಸರ್ಪಶಯ್ಯೆಯನ್ನೇರಿ, ಶಾರ್ಙಧನುಸ್ಸನ್ನೆತ್ತಿ, ಪಾಂಚಜನ್ಯವನ್ನೂದಿ, ಜಟ್ಟಿಗಳನ್ನು ಕೊಂದು ತೋರಿದ ಆ ನಿನ್ನ ಅದ್ಭುತಶಕ್ತಿಯೇನಾಯ್ತು? ಆ ದಿನ ಜರಾಸಂಧನು ಬಿಟ್ಟ ಚಕ್ರವು ನಿನಗೆ ಬಲವಂದು ನಿನ್ನನ್ನು ಆಶ್ರಯಿಸಿತು. ಇಂದು ಈ ಹೀನಮನುಷ್ಯನು ಬಿಟ್ಟ ಮುರುಕು ಬಾಣವು ಕರ್ಮವಶದಿಂದ ನಿನ್ನನ್ನು ಕೊಂದಿತಲ್ಲ? ಚಕ್ರವರ್ತಿಗೀವಿಧಿಯಾಯ್ತೇ? ನಾನಾದೇಶದ ರಾಜರುಗಳನ್ನು ಎರಗಿಸಿಕೊಂಬ ನಿನ್ನ ಕಾಲಿಗೆ ಈ ನೊಣಗಳು ಮುತ್ತುವಂತಾಯ್ತೇ? ಅಚ್ಯುತನೆಂಬ ನಿನ್ನ ಹೆಸರು ಅಂತಕನ ದೆಶೆಯಿಂದ ಸುಳ್ಳಾಯಿತಲ್ಲ? ನಿನ್ನ ಮರಣದಿಂದ ನನಗೆ ಈಗ ಈ ಶರೀರವೂ ಮನೆಯೂ ಐಶ್ವರ್ಯವೂ ಸ್ಥಿರವಲ್ಲವೆಂಬ ಶಾಸ್ತ್ರವಚನವು ದೃಷ್ಟಾನುಭೂತವಾಯ್ತು. ಹಂಸತೂಲತಲ್ಪದಲ್ಲಿ ಕೋಮಲಾಂಗಿಯರೊಡನೆ ತಣ್ಣನೆ ತಣಿದು ನಿದ್ರಿಸುತ್ತಿದ್ದ ನಿನಗೆ ಇಂದು ಹುಡಿಮಣ್ಣಿನಲ್ಲಿ ಮಲಗುವಂತಾಯ್ತೇ?" ಎಂದು ಮುಂತಾಗಿ ಹಂಬಲಿಸಿ, ಶೋಕಿಸಿ, ಮತಿಗೆಟ್ಟು ಕೃಷ್ಣನ ಹೆಣವನ್ನು ಹೆಗಲಮೇಲಿಟ್ಟುಕೊಂಡು ಅಲೆಯುತ್ತಲೂ ಅದನ್ನು ರಾಜರುಗಳ ಓಲಗಶಾಲೆಗೊಯ್ದು ಶೃಂಗರಿಸಿ "ನಮಸ್ಕಾರಮಾಡಿ" ಎಂದು ಹೇಳುತ್ತಲೂ "ಅಡವಿಯ ಮೃಗಗಳಿರಾ! ನನ್ನ ಹೆಗಲೇರಿರುವ ನನ್ನ ತಮ್ಮನು ಕೋಪದಿಂದ ನನ್ನೊಡನೆ ಮಾತನಾಡುವುದಿಲ್ಲ. ನೀವು ಈತನ ಕೋಪವನ್ನು ಬಿಡಿಸಿ" ಎಂದು ಹುಚ್ಚನಂತೆ ಮಾತನಾಡುತ್ತಲೂ ಆರುತಿಂಗಳವರೆಗೆ ಆ ಹೆಣವನ್ನು ಹೊತ್ತುಕೊಂಡು ಭೂತಳದಲ್ಲಿ ಅಲೆಯುತ್ತಿದ್ದನು. ಆಗ ಸ್ವರ್ಗದಿಂದ ನೈಗಮದೇವನು ಸಿದ್ಧಾರ್ಥನೆಂಬ ದೇವನೊಡನೆ ಬಂದು ವಿಗುರ್ವಣೆಯಿಂದ ತಮ್ಮ ರೂಪವನ್ನು ಬದಲಾಯಿಸಿ ಬಲರಾಮನು ಬರುತ್ತಿರುವ ದಾರಿಯಲ್ಲಿ ಒಂದು ಕಲ್ಲಿನ ಮೇಲೆ ಬಾಳೆಯ ಗಿಡವನ್ನು ತಲೆಕೆಳಗಾಗಿ ನೆಟ್ಟು ಅದಕ್ಕೆ ಮಣ್ಣಿನ ಮಡಕೆಯಿಂದ ನೀರುಹುಯ್ಯುತ್ತಿರುವುದನ್ನು ಕಂಡು ಬಲರಾಮನು "ಎಲೈ ಹುಚ್ಚರೆ! ನೀವೇಕೆ ಆಗದ ಕೆಲಸವನ್ನು ಮಾಡುತ್ತಿರುವಿರಿ?" ಎಂದು ಕೇಳಲು ಅವರು "ಹೆಗಲಲ್ಲಿ ಹೆಣವನ್ನು ಹೊತ್ತುಕೊಂಡು ತಿರುಗುವುದು ಆಗದ ಕೆಲಸವಲ್ಲವೋ?" ಎಂದರು. ಆ ಮಾತನ್ನು ಕೇಳಿ ಬಲರಾಮನು "ನನ್ನ ತಮ್ಮನು ಸಾರ್ವಭೌಮನು, ಪುರುಷೋತ್ತಮನು. ವಿಚಾರವಿಲ್ಲದೆ ಅವನನ್ನು ಹೆಣವೆಂದು ಹೇಳುವುದನ್ಯಾಯವಲ್ಲವೇ? ಹೇಳಿ" ಎಂದು ನಿರಾಕರಿಸಿದನು. ಆಗ ಅವರು ಅಲ್ಲಿಂದ ಮುಂದೆ ಹೋಗಿ ಇನ್ನೊಂದು ಸ್ಥಳದಲ್ಲಿ ಮಡಿಕೆಯಲ್ಲಿ ನೀರನ್ನು ಹಾಕಿ ಅದನ್ನು ಕಡೆಯುತ್ತಲೂ ಮಳಲನ್ನು ಹಿಂಡುತ್ತಲೂ

ಇರಲು ಅದನ್ನು ನೋಡಿ ಬಲರಾಮನು ಮೊದಲಿನಂತೆ ಅವರನ್ನು ಹೀಯಾಳಿಸಿದನು. ಅದಕ್ಕವರು "ನಿನ್ನನ್ನು ನೀನರಿಯದೆ ಹೆಗಲಮೇಲೆ ಹೆಣವನ್ನು ಹೊತ್ತುಕೊಂಡು ಚೆನ್ನಾಗಿ ಹೇಳಿದೆ" ಎನಲು ಆಗ ಬಲರಾಮನಿಗೆ ಮೋಹಾಂಧಕಾರವು ದೂರವಾಗಿ ಜ್ಞಾನೋದಯವಾಯ್ತು. ಆಗ ಕೃಷ್ಣನು ಸತ್ತುಹೋಗಿದ್ದಾನೆಂದು ತಿಳಿದು ಆ ಹೆಣವನ್ನು ಕೆಳಕ್ಕಿಳಿಸಿ ತನಗುಂಟಾಗಿದ್ದ ಅಜ್ಞಾನಕ್ಕೆ ತಾನೇ ಚಿಂತಿಸುತ್ತಿರಲು ಆ ದೇವತೆಗಳು ತಮ್ಮ ನಿಜರೂಪನ್ನು ತೋರಿಸಿ ಅವನಿಗೆ ಬುದ್ಧಿವಾದವನ್ನು ಹೇಳಿ ಹೋದರು. ಬಳಿಕ ಬಲರಾಮನು ಕೃಷ್ಣನ ಹೆಣವನ್ನು ಸುಡುವುದಕ್ಕಾಗಿ ತುಂಗಿಯೆಂಬ ಬೆಟ್ಟಕ್ಕೆ ಹೋಗಲು ಆಕಾಶದಿಂದ "ಇದು ಸೇರಿ ನೀನು ಮೋಹದಿಂದ ಇಪ್ಪತ್ತುಬಾರಿ ಇವನನ್ನು ಸುಟ್ಟೆಯಲ್ಲ" ಎಂದು ಅಶರೀರವಾಣಿಯಾದುದನ್ನು ಕೇಳಿ ಆಶ್ಚರಿಪಟ್ಟು, ಚಂದನದ ಕಾಷ್ಠಗಳಿಂದ ಶವಸಂಸ್ಕಾರಮಾಡಿ ಅಲ್ಲಿಗೆ ಬಂದ ಈರ್ವರು ಚಾರಣರಿಗೆ ವಂದಿಸಿ, ಅವರಲ್ಲಿ ದೀಕ್ಷೆಯನ್ನು ಹೊಂದಿ ತಪಶ್ಚರಣಮಾಡಿ ಆಯುಷ್ಯಾವಸಾನದಲ್ಲಿ ಸತ್ತು ಐದನೆಯ ಸ್ವರ್ಗದಲ್ಲಿ ದೇವನಾಗಿ ಹುಟ್ಟಿ ದಿವ್ಯಸುಖವನ್ನನುಭವಿಸುತ್ತ ಸಂತೋಷದಿಂದಿದ್ದನು.

---

## ೩೫. ಮೋಕ್ಷಪ್ರಾಪ್ತಿಸಂಧಿ

---

ದ್ವಾರಾವತಿಯು ಬೆಂಕಿಯಿಂದ ನಾಶವಾದುದನ್ನೂ ಕೃಷ್ಣನು ಮೃತಿ ಹೊಂದಿದುದನ್ನೂ ಕೇಳಿ ಕುರುಜಾಂಗಣದೇಶಾಧೀಶರಾದ ಪಾಂಡವರು ಬಹಳವಾಗಿ ಶೋಕಿಸಿ ಅಭಿಮನ್ಯುವಿಗೂ ಅವನ ಪತ್ನಿ ಉತ್ತರೆಗೂ ಹುಟ್ಟಿದ ಪರೀಕ್ಷಿತನಿಗೆ ರಾಜ್ಯವನ್ನು ಕೊಟ್ಟು ತಮ್ಮ ಸತಿಯರು ಮೊದಲಾದ ಬಂಧುಪರಿವಾರದೊಡನೆಯೂ ಅನೇಕ ಅರಸುಗಳೊಡನೆಯೂ ಉತ್ತರದಿಕ್ಕಿನ ಪಲ್ಲವದೇಶದಲ್ಲಿ ವಿಹರಿಸುತ್ತಿದ್ದ ಶ್ರೀ ನೇಮೀಶ್ವರರ ಸಮವಸರಣಕ್ಕೆ ಹೋಗಿ ಆ ಜಿನೇಶ್ವರರಿಗೆ ವಂದಿಸಿ, ಗಣಧರರಿಗೆರಗಿ ಧರ್ಮರಾಜನು ತಮ್ಮ ಪೂರ್ವಭವಗಳನ್ನು ತಿಳಿಸಬೇಕೆಂದು ಬೇಡಿಕೊಂಡನು. ಆದಕ್ಕೆ ಅವರು "ಈ ಭರತಕ್ಷೇತ್ರದ ಅಂಗದೇಶದಲ್ಲಿ ಪ್ರಸಿದ್ಧವಾದ ಶುಂಡಾಲವೆಂಬ ನಗರದ ರಾಜನಾದ ಘನರಥನ ಮಂತ್ರಿ ಸೋಮನೆಂಬವನಿಗೂ ಅವನ ಸತಿ ಸೋಮೆಯೆಂಬವಳಿಗೂ ಸೋಮದತ್ತ, ಸೋಮಿಲ, ಸೋಮಭೂತಿಗಳೆಂಬ ಮೂವರು ಮಕ್ಕಳು ಹುಟ್ಟಿ ಯೌವನಾವಸ್ಥೆಯನ್ನು ಹೊಂದಿರಲು ತಂದೆಯಾದ ಸೋಮನು

ತನ್ನ ಮೈದುನ ಅಗ್ನಿಭೂತಿಯೆಂಬವನಿಗೂ ಅಗ್ನಿಲೆಯೆಂಬವಳಿಗೂ ಹುಟ್ಟಿದ ಹೇಮಶ್ರೀ, ಮಿತ್ರಶ್ರೀ, ನಾಗಶ್ರೀಯೆಂಬ ಮೂವರು ಹೆಣ್ಣುಮಕ್ಕಳನ್ನು ತಂದು ತನ್ನ ಆ ಪುತ್ರರಿಗೆ ವಿವಾಹಮಾಡಿ ಸುಖದಿಂದಿರಲು, ಆ ಊರಿನ ಸಮೀಪದಲ್ಲಿರುವ ವನಕ್ಕೆ ಓರ್ವ ಮುನೀಶರು ಬಂದುದನ್ನು ತಿಳಿದು ಮೇಘರಥಮಹಾರಾಜನು ತನ್ನ ಮಂತ್ರಿ ಸೋಮನೊಡನೆ ಹೋಗಿ ಅವರಲ್ಲಿ ಧರ್ಮಶ್ರವಣಮಾಡಿ ವಿರಕ್ತನಾಗಿ ತನ್ನ ಪುತ್ರ ವಿಮಲವಾಹನನಿಗೆ ರಾಜ್ಯವನ್ನು ಕೊಟ್ಟು ತನ್ನ ಮಂತ್ರಿಯೊಡನೆ ದೀಕ್ಷೆಯನ್ನು ಕೈಕೊಂಡನು. ವಿಮಲವಾಹನನು ಸೋಮನ ಮಕ್ಕಳಾದ ಸೋಮದತ್ತ, ಸೋಮಿಲ, ಸೋಮಭೂತಿಗಳನ್ನು ತನ್ನ ಮಂತ್ರಿಗಳನ್ನಾಗಿ ಮಾಡಿ ಅವರಲ್ಲಿ ವಿಶ್ವಾಸವುಳ್ಳವನಾಗಿದ್ದು ವಸಂತಕಾಲದಲ್ಲೊಂದು ದಿನ ವನಕೇಳಿಗೆಂದು ಹೊರಟನು. ಆಗ ಸೋಮದತ್ತನು ಕಾರ್ಯಾಂತರದಿಂದ ಮನೆಯಲ್ಲಿ ಉಳಿದು, ತನ್ನ ತಮ್ಮಂದಿರಾದ ಸೋಮಿಲ, ಸೋಮಭೂತಿಯರನ್ನೂ ತನ್ನ ಹೆಂಡತಿಯನ್ನೂ ಸೋಮಿಲನ ಹೆಂಡತಿಯನ್ನೂ ವನಕ್ಕೆ ಕಳುಹಿದನು. ಇತ್ತ ಸೋಮಭೂತಿಯ ಹೆಂಡತಿಯಾದ ನಾಗಶ್ರೀಯು ಅಲಂಕಾರಮಾಡಿಕೊಳ್ಳುವುದಕ್ಕಾಗಿ ಹೊರಡಲು ಸಾವಕಾಶಮಾಡಿದಳು. ಆ ಸಮಯಕ್ಕೆ ಸರಿಯಾಗಿ ಮಾಸೋಪವಾಸದ ಪಾರಣೆಗೆಂದು ಬಂದ ಓರ್ವ ಯತಿಪತಿಯನ್ನು ಕಂಡು ಸೋಮಭೂತಿಯು ಅವರನ್ನು ತಡೆದು ಮನೆಗೆ ಕರೆದುಕೊಂಡು ಬಂದು ಉತ್ತಮವಾದ ಪೀಠದಮೇಲೆ ಕುಳ್ಳಿರಿಸಿದನು. ಆಗ ರಾಜನಿಂದ ಕಳುಹಿಸಲ್ಪಟ್ಟ ಸೇವಕರು ಬಂದು ರಾಜನು ಬೇಗ ಕರೆದುಕೊಂಡು ಬರುವಂತೆ ಅಪ್ಪಣೆಮಾಡಿರುವನೆಂದು ಸೋಮಭೂತಿಗೆ ಹೇಳಲು ರಾಜಾಜ್ಞೆಗೆ ಹೆದರಿ ಸಾಧುನಿಯಾದ ನಾಗಶ್ರೀಯನ್ನು ಕುರಿತು ಮುನೀಶರಿಗೆ ಭಿಕ್ಷೆಯನ್ನು ಮಾಡಿಸುವಂತೆ ಹೇಳಿ ಹೊರಟುಹೋದನು. ಇತ್ತ ನಾಗಶ್ರೀಯು ಆ ಮುನಿವರ್ಯನಿಂದ ತಾನು ವನಕ್ಕೆ ಹೋಗುವುದಕ್ಕೆ ಅಡ್ಡಿಯಾಯಿತೆಂದು ಅತ್ಯಂತರೋಷವುಳ್ಳವಳಾಗಿ ವಿಷಮಿಶ್ರವಾದ ಭಕ್ಷ್ಯಗಳನ್ನು ಮಾಡಿ ಬಡಿಸಲು ಆ ತಪೋಧನನು ಅದನ್ನು ಭುಂಜಿಸಿ ಸತ್ತು ಸ್ವರ್ಗದಲ್ಲಿ ಹುಟ್ಟಿದನು. ಇತ್ತ ಸೋಮದತ್ತನು ತನ್ನ ನಾದುನಿಯು ಮಾಡಿದ ಮಹಾಪಾತಕವನ್ನು ತಿಳಿದು ಹೆದರಿ ತನ್ನ ತಮ್ಮಂದಿರೊಡನೆ ದೀಕ್ಷೆಯನ್ನು ಹೊಂದಿದನು. ಧನಶ್ರೀ ಮಿತ್ರಶ್ರೀಯರೂ ತಪಸ್ಸನ್ನು ಹೊಂದಿದರು. ಸೋಮದತ್ತ ಮೊದಲಾದ ಆ ಐವರೂ ಸ್ವರ್ಗದಲ್ಲಿ ಹುಟ್ಟಿ ಸುಖದಿಂದಿದ್ದರು. ಇತ್ತ ಮುನಿಯನ್ನು ಕೊಂದ ಪಾತಗಿತ್ತಿ ನಾಗಶ್ರೀಯನ್ನು ರಾಜನು ಶಿಕ್ಷೆಗೆ ಗುರಿಮಾಡಿದನು. ಅವಳು ಸತ್ತು ನರಕದಲ್ಲಿ ಹುಟ್ಟಿ ಹದಿನೇಳು ಸಾಗರೋಪಮಕಾಲ

ದುಃಖಾನುಭವಮಾಡಿ ಸತ್ತು ತಿರ್ಯಗ್ಗತಿಯಲ್ಲಿ ನಾನಾಜನ್ಮಗಳನ್ನೆತ್ತಿ ಕೊನೆಗೆ ಕರ್ಮೋಪಶಮದಿಂದ ಅಂಗದೇಶದ ಚಂಪಾನಗರದಲ್ಲಿ ಮಾತಂಗಿ– ಚಾಂಡಾಳಿ ಯಾಗಿ ಹುಟ್ಟಿದಳು. ಆಕೆಯ ಪಾಪವಶದಿಂದ ತಂದೆತಾಯಿಗಳು ಮೃತರಾದರು. ಕಾಪಾಡುವವರಿಲ್ಲದೆ ಭಿಕ್ಷೆಬೇಡಿ ಜೀವಿಸುತ್ತಿದ್ದಳು. ಒಂದುದಿನ ಓರ್ವ ಅವಧಿ ಜ್ಞಾನಿಗಳಾದ ಮುನಿಗಳು ಬಂದಿರಲು ಅವರಲ್ಲಿ ರಾಜನು ವ್ರತಗಳನ್ನು ಕೈಕೊಂ ಡನು. ಆ ವಿಷಯವನ್ನು ತಿಳಿದು ಆಕೆಯು ತಾನೂ ಆ ಮುನೀಶರಲ್ಲಿಗೆ ಹೋಗಿ ವಂದಿಸಿ ತನಗೂ ವ್ರತವನ್ನು ದಯಪಾಲಿಸಬೇಕೆಂದು ಬೇಡಿದಳು. ಆಗ ಮುನಿಪತಿ ಯು "ಮಧುಮಾಂಸಗಳನ್ನು ತಿನ್ನಬೇಡ" ಎಂದು ಹೇಳಲು ಮಾತಂಗಿಯು ಅದ ನ್ನು ಕೈಕೊಂಡು ನಡೆಯಿಸಿದೆ ಸತ್ತು ಅದೇ ಪುರದ ಬಂಧುವೆಂಬ ವೈಶ್ಯನಿಗೂ ಧನ ದೆಯೆಂಬವಳಿಗೂ ಸುಕುಮಾರಿಯೆಂಬ ಮಗಳಾಗಿ ಹುಟ್ಟಿ ಮಹಾದುರ್ಗಂಧವಾದ ಶರೀರವುಳ್ಳವಳಾದಳು. ಆ ಪುರದ ಧನದೇವನೆಂಬ ವೈಶ್ಯನಿಗೂ ಯಶೋದತ್ತೆ ಯೆಂಬವಳಿಗೂ ಹುಟ್ಟಿದ ಜಿನದೇವ, ಜಿನದತ್ತರೆಂಬ ಇಬ್ಬರು ಮಕ್ಕಳಲ್ಲಿ ಹಿರಿಯ ನಾದ ಜಿನದೇವನಿಗೆ ಆ ಸುಕುಮಾರಿಯನ್ನು ತಂದು ವಿವಾಹಮಾಡಬೇಕೆಂದಿರಲು ಜಿನದೇವನಾ ಸುಕುಮಾರಿಯ ದೇಹದ ದುರ್ಗಂಧಕ್ಕೆ ಹೇಸಿ ನಿರ್ವೇಗದಿಂದ ತಪ ಸ್ಸಿಗೆ ಹೋದನು. ಬಳಿಕ ಕಿರಿಯನಾದ ಜಿನದತ್ತನಿಗೆ ಆ ಸುಕುಮಾರಿಯನ್ನು ಮದು ವೆಮಾಡಲು ಅವನು ಅವಳ ಶರೀರದ ದುರ್ಗಂಧಕ್ಕೆ ಅಸಹ್ಯಪಟ್ಟು ಅವಳನ್ನು ಮುಟ್ಟ ದಿರಲು, ಆಕೆಯು ಲಜ್ಜಿತೆಯಾಗಿ ಒಂದು ದಿನ ಸುವ್ರತರೆಂಬ ಮುನೀಶರನ್ನು ಕಂಡು ನಮಸ್ಕರಿಸಿ ಕೈಮುಗಿದು ಅವರಿಂದ ತನ್ನ ಭವದ ಕತೆಯೆಲ್ಲವನ್ನೂ ಕೇಳಿ ತನ್ನ ಹಿಂದಿನ ನಾಗಶ್ರೀ ಜನ್ಮದ ಪತಿಯಾದ ಸೋಮಭೂತಿಯು ಅಚ್ಯುತಕಲ್ಪದಲ್ಲಿ ದೇವನಾಗಿರು ವನೆಂದು ತಿಳಿದು, ಅವನನ್ನೇ ಹೊಂದಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿ ಜಿನದೀಕ್ಷೆ ಯನ್ನು ಹೊಂದಿ ತಪಶ್ಚರಣಮಾಡಿ ಸತ್ತು ಆ ದೇವನಿಗೆ ಹೆಂಡತಿಯಾಗಿ ಹುಟ್ಟಿದಳು. ಸೋಮದತ್ತ, ಸೋಮಿಲ, ಸೋಮಭೂತಿ, ಹೇಮಶ್ರೀ, ಮಿತ್ರಶ್ರೀ ಎಂಬ ಆ ಐದು ಜನಗಳೇ ಸ್ವರ್ಗದಿಂದ ಬಂದು ಪಾಂಡವರಾಗಿ ಹುಟ್ಟಿರುವಿರಿ. ಆ ಸುಕುಮಾ ರಿಯೇ ಅರ್ಜುನನ ಹೆಂಡತಿ ಪಾಂಚಾಲಿಯಾಗಿರುವಳು" ಎಂದು ಹೇಳಲು ಕೇಳಿ ಪಾಂಡವರು ವೈರಾಗ್ಯಹೊಂದಿ ಅನೇಕ ರಾಜಕುಮಾರರೊಡನೆ ದೀಕ್ಷೆಗೊಂಡರು. ಕೊಂತಿ, ದ್ರೌಪದಿ, ಸುಭದ್ರೆ ಮೊದಲಾದವರೂ ತಪಸ್ಸನ್ನು ಕೈಕೊಂಡರು. ಹೀಗೆ ದೀಕ್ಷೆಗೊಂಡ ಪಾಂಡವರು ಅಂತರಂಗಶುದ್ಧರಾಗಿ ತಪಸ್ಸನ್ನಾಚರಿಸಿ ಅವಧಿಜ್ಞಾನ ವನ್ನು ಪಡೆದು ಒಂದು ದಿನ ಶತ್ರುಂಜಯವೆಂಬ ಬೆಟ್ಟದಮೇಲೆ ಧ್ಯಾನಮಗ್ನರಾಗಿ

ನಿಂತಿರಲು ಅದನ್ನು ತಿಳಿದು ಕೌರವನ ಮೊಮ್ಮಗನಾದ ಕುಯುವರನೆಂಬವನು ಬಂದು ಮುನಿದು ಆ ತಪಸ್ವಿಗಳಿಗೆ ಕಾಸಿದ ಕಬ್ಬಿಣದ ಆಭರಣಗಳನ್ನು ಆಯಾ ಅವಯವಗಳಿಗೆ ತೊಡಿಸಿ, ಕಾಸಿದ ಕಬ್ಬಿಣದ ಗದ್ದುಗೆಯಮೇಲೆ ಕುಳ್ಳಿರಿಸಿ, ಕಾಸಿದ ಕಬ್ಬಿಣದ ಪಟ್ಟಿಗಳನ್ನು ಹಣೆಗೆ ಕಟ್ಟಿ ಕಬ್ಬಿಣವನ್ನು ಕಾಸಿದ ರಸವನ್ನು ಅವರಮೇಲೆ ಅಭಿಷೇಕ ಮಾಡಿಸಿ ಲೋಕವೆಲ್ಲ ಬೆದರುವಂತೆ ಅನೇಕವಿಧವಾದ ಉಪಸರ್ಗವನ್ನು ಮಾಡಿದನು. ಆ ಉಪಸರ್ಗವನ್ನು ಉಪಶಾಂತತೆಯಿಂದ ಸಹಿಸಿದ ಧರ್ಮರಾಜ, ಭೀಮ, ಅರ್ಜುನ ಇವರುಗಳಿಗೆ ಶುಕ್ಲಧ್ಯಾನೋತ್ಪತ್ತಿಯಾಗಲು ದೇವದುಂದುಭಿಯು ಮೊಳಗಿತು. ಅದನ್ನು ಕೇಳಿ ಕುಯುವರನು ಹೆದರಿ ಓಡಿಹೋದನು. ದೇವತೆಗಳೆಲ್ಲ ಬಂದು ಅವರನ್ನು ಸ್ತುತಿಸಿ ಪೂಜಿಸಿ ವಂದಿಸಿ ಹೋದರು. ಇತ್ತ ಧರ್ಮರಾಜ ಭೀಮಾರ್ಜುನರು ಸಕಲ ಕರ್ಮಕ್ಷಯವನ್ನು ಮಾಡಿ ಮುಕ್ತಿಗೆ ಸಂದರು. ಬಳಿಕ ನಕುಲ ಸಹದೇವರು ದೇಹವಳಿದು ಸರ್ವಾರ್ಥಸಿದ್ಧಿಯನ್ನು ಹೊಂದಿದರು.

ದೇವೇಂದ್ರಾದಿಸಮಸ್ತದೇವತೆಗಳಿಂದ ನಮಸ್ಕಾರಮಾಡಿಸಿಕೊಳ್ಳುವ ಅನೇಕಕೋಟಿಸೂರ್ಯಚಂದ್ರರ ತೇಜಸ್ಸನ್ನು ಮೀರಿಸುವ ತೇಜಸ್ಸಿನಿಂದ ಕೂಡಿದ ಆ ನೇಮಿತೀರ್ಥಂಕರರ ಸಮವಸರಣದಲ್ಲಿ ಅಷ್ಟಮಹಾಪ್ರಾತಿಹಾರ್ಯಗಳೂ ವರದತ್ತರೇ ಮೊದಲಾದ ಹನ್ನೊಂದು ಜನ ಗಣಧರರೂ ನಾಲ್ಕುನೂರುಮಂದಿ ಪೂರ್ವಶಾಸ್ತ್ರಧರರೂ ಎರಡುಸಾವಿರಮಂದಿ ಶಿಕ್ಷಕರೂ ಸಾವಿರದ ಐವತ್ತುಮಂದಿ ಅವಧಿಜ್ಞಾನಿಗಳೂ ಅಷ್ಟೇ ಕೇವಲಿಗಳೂ ಸಾವಿರದ ನೂರುಮಂದಿ ವಿಕ್ರಿಯರ್ಧಿಸಂಪನ್ನರೂ ಒಂಭೈನೂರುಮಂದಿ ಮನಃಪರ್ಯಯಜ್ಞಾನಿಗಳೂ ರಾಜೀಮತಿ ಮೊದಲಾದ ನಲವತ್ತುಸಾವಿರಮಂದಿ ಕಂತಿಕೆಯರೂ ಒಂದು ಲಕ್ಷ ಶ್ರಾವಕರೂ ಮೂರು ಲಕ್ಷ ಶ್ರಾವಕಿಯರೂ ನಾಲ್ಕುತೆರದ ಅಸಂಖ್ಯಾತ ದೇವತೆಗಳೂ ತಿರ್ಯಕ್ಪ್ರಾಣಿಗಳೂ ಇದ್ದರು. ನೇಮಿಜಿನೇಶರು ದ್ವಾದಶಗಣಪರಿವೇಷ್ಟಿತರಾಗಿ ಭವ್ಯಕ್ಷೇತ್ರಗಳಲ್ಲಿ ಧರ್ಮೋಪದೇಶವನ್ನು ಮಾಡುತ್ತಿದ್ದು ಒಂದುತಿಂಗಳಾಯುಷ್ಯವುಳಿದಿರುವಾಗ ಸಮವಸರಣವನ್ನು ಬಿಟ್ಟು, ಊರ್ಜಯಂತಗಿರಿಯ ನಿರ್ಜಂತುಕವಾದ ಪ್ರದೇಶದಲ್ಲಿ ಆಷಾಢ ಶುದ್ಧ ಸಪ್ತಮಿಯ ದಿವಸ ಪೂರ್ವಾಭಿಮುಖರಾಗಿ ಪರ್ಯಂಕಾಸನದಲ್ಲಿ ಕುಳಿತು ದಂಡ, ಕವಾಟ, ಪ್ರತರ, ಲೋಕಪೂರಣಗಳೆಂಬ ಯೋಗಗಳಿಂದ ವೇದನೀಯ, ಆಯುಷ್ಯ, ನಾಮ, ಗೋತ್ರಗಳೆಂಬ ಅಘಾತಿಕರ್ಮಗಳನ್ನು ನಾಶಮಾಡಿ ಕೈವಲ್ಯವನ್ನು ಪಡೆದರು. ಅವರ ದಿವ್ಯದೇಹವು ಮಂಜಿನಂತೆ ವಿಲೀನವಾಯ್ತು. ಆಗ ದೇವೇಂದ್ರನು ಸಮಸ್ತ ದೇವತೆಗಳೊಡನೆ

ಬಂದು ಸ್ವಾಮಿಯ ನಿರ್ವಾಣಕಲ್ಯಾಣಪೂಜೆಯನ್ನು ಮಾಡಿ ಹೋದನು. ವ್ಯುಪರತ ಕ್ರಿಯಾನಿವೃತ್ತಿಯೆಂಬ ಕೊನೆಯ ಶುಕ್ಲಧ್ಯಾನದಿಂದ ಕರ್ಮಸಮೂಹವನ್ನು ನಾಶ ಮಾಡಿ ಅಕ್ಷಯಮೋಕ್ಷವನ್ನು ಪಡೆದ ಶ್ರೀ ನೇಮಿಜಿನೇಶ್ವರರು ಲೋಕದ ಸಮಸ್ತ ಭವ್ಯಪ್ರಾಣಿಗಳಿಗೆ ಸ್ವರ್ಗಸುಖವನ್ನೂ ಶಾಶ್ವತವಾದ ಮೋಕ್ಷಸುಖವನ್ನೂ ದಯ ಪಾಲಿಸಲಿ. ಹೀಗೆ ಈ ಪುರಾಣವನ್ನು ಓದುವವರೂ ಕೇಳುವವರೂ ಬರೆಯು ವವರೂ ಸ್ವರ್ಗಸುಖವನ್ನು ಹೊಂದಿ ಮುಕ್ತಿಗಾಮಿಗಳಾಗುವರು.

ಜಿನೇಶ್ವರನ ಪಾದಕಮಲದಲ್ಲಿ ಮದಿಸಿದ ಭ್ರಮರನೂ ಚತುರನೂ ಆದ
ಮಂಗರಸನು ರಚಿಸಿದ ಕಾಮವಿಜಯಿಯಾದ ನೇಮಿಜಿನೇಶನ ಸಂಗತಿ
ಯಲ್ಲಿ ಮೂವತ್ತೈದನೆಯಾಶ್ವಾಸವು ಪೂರ್ತಿಯಾಯ್ತು.

॥ ಇತಿ ಮಂಗಲಮಹಃ ॥



ಶ್ರೀಮದ್ಯುವರಾಜ ಕಂಠೀರವ ನೃಸಿಂಹರಾಜ
ಒಡೆಯರವರು

*

# ಮಂಗಲಾಚರಣ



ಓಂಕಾರಂ ಬಿಂದುಸಂಯುಕ್ತಂ | ನಿತ್ಯಂ ಧ್ಯಾಯಂತಿ ಯೋಗಿನಃ ||
ಕಾಮದಂ ಮೋಕ್ಷದಂ ಚೈವ | ಓಂಕಾರಾಯ ನಮೋ ನಮಃ ||೧||
ಅವಿರಲಶಬ್ದಘನೌಘಪ್ರಕ್ಷಾಲಿತಭೂತಲಮಲಕಲಂಕಾ ||
ಮುನಿಭಿರುಪಾಸಿತತೀರ್ಥಾ ಸರಸ್ವತೀ ಹರತು ನೋ ದುರಿತಂ ||೨||
ಅಜ್ಞಾನತಿಮಿರಾಂಧಾನಾಂ | ಜ್ಞಾನಾಂಜನಶಲಾಕಯಾ ||
ಚಕ್ಷುರುನ್ಮೀಲಿತಂ ಯೇನ | ತಸ್ಮೈ ಶ್ರೀಗುರವೇ ನಮಃ ||೩||
ಪರಮಗುರವೇ ನಮಃ ಪರಂಪರಾಚಾರ್ಯಗುರವೇ ನಮಃ ||೪||

ಸಕಲಕಲುಷವಿಧ್ವಂಸಕಂ ಶ್ರೇಯಸಾಂ ಪರಿವರ್ಧಕಂ ಧರ್ಮಸಂಬಂಧಕಂ ಭವ್ಯಜೀವಪ್ರತಿಬೋಧಕಾರಕಮಿದಂ ಶಾಸ್ತ್ರಂ ಶ್ರೀನೇಮಿಜಿನೇಶಸಂಗತಿನಾಮಧೇಯಕಂ ಅಸ್ಯ ಮೂಲಕರ್ತಾರಃ ಶ್ರೀಸರ್ವಜ್ಞದೇವಾಃ ತದುತ್ತರಕರ್ತಾರಃ ಶ್ರೀಗಣಧರದೇವಾಃ ತದುತ್ತರೋತ್ತರಕರ್ತಾರಃ ಶ್ರೀಕುಂದಕುದಾದ್ಯಾಸ್ತೇಷಾಂ ವಚೋನುಸೃತ್ಯ ಶ್ರೀಮಂಗರಸಕವಿನಾ ವಿರಚಿತಂ ಸರ್ವೇ ಶ್ರೋತಾರಃ ಸಾವಧಾನತಯಾ ಶೃಣ್ವಂತು ||೫||

---

ಭಾವಾರ್ಥ:—ಬಿಂದುವಿನೊಡನೆ ಕೂಡಿರುವುದೂ ಇಷ್ಟಾರ್ಥವನ್ನೂ ಮೋಕ್ಷವನ್ನೂ ಕೊಡುವುದೂ ಆದ ಯಾವ ಓಂಕಾರವನ್ನು ಯೋಗಿಗಳು ಸದಾ ಧ್ಯಾನಿಸುತ್ತಾರೋ ಅಂತಹ ಓಂಕಾರಕ್ಕೆ ಪುನಃಪುನಃ ನಮಸ್ಕಾರವು ||೧|| ಸಾಂದ್ರವಾದ ಶಬ್ದವೆಂಬ ಮೇಘಸಮೂಹದಿಂದ ಭೂತಳದ ಮಲವೆಂಬ ಕಳಂಕವನ್ನು ತೊಳೆದಿರುವವಳೂ ಮುನಿಗಳಿಂದ ಸೇವಿಸಲ್ಪಟ್ಟ ತೀರ್ಥ (ಆಗಮ) ವುಳ್ಳವಳೂ ಆದ ಸರಸ್ವತಿಯು ನಮ್ಮ ದುಷ್ಕೃತವನ್ನು ನಾಶಮಾಡಲಿ ||೨|| ಅಜ್ಞಾನವೆಂಬ ಕತ್ತಲೆಯಿಂದ ಕಣ್ಣುಗಾಣದವರ ಕಣ್ಣನ್ನು ಜ್ಞಾನವೆಂಬ ಅಂಜನಶಲಾಕೆಯಿಂದ ಯಾವನು ತೆರೆಯಿಸಿದನೋ ಅಂತಹ ಗುರುವಿಗೆ ನಮಸ್ಕಾರವು ||೩|| ಪರಮಗುರುವಿಗೆ ನಮಸ್ಕಾರವು, ಪರಂಪರಾಚಾರ್ಯಗುರುವಿಗೆ ನಮಸ್ಕಾರವು ||೪|| ಸಮಸ್ತದುರಿತನಾ

ಮಂಗಲಂ ಭಗವಾನ್ವೀರೋ | ಮಂಗಲಂ ಗೌತಮೊ ಗಣೀ ||
ಮಂಗಲಂ ಕುಂದಕುಂದಾದ್ಯಾ | ಜೈನಧರ್ಮೋಽಸ್ತು ಮಂಗಲಂ ||೬||

ಶಕವೂ ಶ್ರೀಯುಸ್ಸುಗಳನ್ನು ಹೆಚ್ಚಿಸುವುದೂ ಧರ್ಮಸಂಬಂಧಿಯೂ ಭವ್ಯಪ್ರಾಣಿಗಳಿಗೆ ಎಚ್ಚರಿಕೆಯನ್ನುಂಟುಮಾಡುವುದೂ ಆದ ಶ್ರೀನೇಮಿಜಿನೇಶಸಂಗತಿಯೆಂಬೀ ಶಾಸ್ತ್ರದ ಮೂಲಕರ್ತರು ಶ್ರೀಸರ್ವಜ್ಞದೇವರು, ಉತ್ತರಕರ್ತರು ಶ್ರೀಗಣಧರದೇವರು, ಉತ್ತರೋತ್ತರಕರ್ತರು ಶ್ರೀಕುಂದಕುಂದಾಚಾರ್ಯರು ಮೊದಲಾದವರು. ಅವರುಗಳ ವಚನಪರಂಪರೆಯನ್ನಾಶ್ರಯಿಸಿ ಶ್ರೀಮಂಗರಸಕವಿಯಿಂದ ಈ ಗ್ರಂಥವು ವಿರಚಿತವಾದುದು. ಇದನ್ನು ಶ್ರೋತೃಗಳೆಲ್ಲರೂ ಸಾವಧಾನದಿಂದ ಕೇಳಬೇಕು ||೫|| ಭಗವಾನ್ ಮಹಾವೀರಸ್ವಾಮಿಯೂ ಗೌತಮಗಣಧರರೂ ಕುಂದಕುಂದರೇ ಮೊದಲಾದ ಆಚಾರ್ಯರೂ ಜೈನಧರ್ಮವೂ ಮಂಗಳಗಳಾಗಿರಲಿ ||೬||



ಶ್ರೀಮಜ್ಜಯಚಾಮರಾಜ ಒಡೆಯರವರು

ಔ

|| ಓಂ ||

ಶ್ರೀ ನೇಮಿಜಿನಾಯ ನಮಃ.

ಶ್ರೀ ಮಂಗರಸಕವಿಯ

# ನೇಮಿಜಿನೇಶ ಸಂಗತಿ

## (ಹರಿವಂಶಪುರಾಣ)

### ೧. ಪೀಠಿಕಾಸಂಧಿ.

ಶ್ರೀಮ[1]ತ್ಪಂಚಕಲ್ಯಾಣವೈಭವಯುತ | ರಾಮಕೇಶವನತಚರಣ ||
ಸೋಮಮಾರ್ಕಕೋಟಿಕಿರಣ ನೇಮಿನಾಥನ | ಪ್ರೇಮಮನುಬವಸೇವುದೆಮಗೆ ||೧||

[2]ಹದಿನೆಂಟುದೋಷವ ಗೆಲ್ದು ಲೋಕದ ತುತ್ತ | ತುದಿಯೊಳು ನಿಂದು ತಮ್ಮೆಂದ ||
ಒದವಿದ ಸುಖಮಯರಾಗಿರ್ದ ಸಿದ್ಧರ | ಪದಯುಗಕಾನೆರಗುವೆನು ||೨||

ಸಾರತರಾಮೃತ ಸುಖಲೀನ ಕೈವಲ್ಯ | ನಾರಿ ಮೋಹಿಸಬೇಕೆಂದು ||
ಚಾರುಚರಿತ್ರಾಭರಣ ಭೂಷಿತರಾದ | [3]ಸೂರಿಗಳಡಿಗೆರಗುವೆನು ||೩||

[4]ಎನ್ನದು ಮನೆಯೊಡಲೊಡವೆಯೆನ್ನಲುಬೇಡ | [5]ಮೆನ್ನದು ಮನೆಯೊಡಲೊಡವೆ ||
ಎನ್ನಿಮೆಂದುಪದೇಶಗೆಯ್ವ[6]ಪದೇಶಕ | ರಂ [7]ನಲವಿಂದ ವಂದಿಪೆನು ||೪||

ನಿರ್ವೇಗಪಾರಾಯಣ ನಿಜಹೃದಯರು | [8]ನಿರ್ವಾಣೇಪ್ಸಿತಯುತರು ||
ಸರ್ವಸಾಧುಗಳ ವಂದಿಸಿ ನಾನು ಪಡೆವೆನು | ಸರ್ವಜ್ಞಾಧಿಕಾರವನು ||೫||

ಜಿನಸಿದ್ಧಸೂರಿದೇಶಕಸಾಧು ಸಮಿತಿಯ | ನನುನಯದಿಂ ವಂದಿಸುವೆನು ||
ಘನತರ [9]ಪಂಚಪರಾವರ್ತನವೆಂಬ | [10]ವನನಿಧಿಯನು ದಾಂಟಲೆಂದು ||೬||

---

**ಟಿಪ್ಪಣಿ.**— 1 ಗರ್ಭ, ಜನ್ಮ, ದೀಕ್ಷಾ, ಕೇವಲಜ್ಞಾನ, ಮೋಕ್ಷ. 2 ಹಸಿವೆ, ಬಾಯಾರಿಕೆ ಮೊದಲಾದುವು 3 ಆಚಾರ್ಯರ 4 ನನ್ನದು. 5 ಎನಿಸದು. 6 ಉಪಾಧ್ಯಾಯರನ್ನು. 7 ಸಂತೋಷದಿಂದ. 8 ಮೋಕ್ಷೇಚ್ಛೆ. 9 ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವಗಳೆಂಬೈದು ಸಂಸಾರ. 10 ಸಮುದ್ರ.

ಕೊಲ್ಲದುದೇ ಧರ್ಮ ಪೂರ್ವಾಪರವೈರ | ವಿಲ್ಲದುದೇ ಶಾಸ್ತ್ರವೆಂದು ||
ಸಿಲ್ಲದೆ [1]ನಿರವಿಸಿದಂಗಜವೈರಿಯ | [2]ಮೆಲ್ಲಡಿಗಾನೆರಗುವೆನು ||೭||

ವಾಣಿ [3]ವೃಜಿನಘನತರ [4]ಕಾಂತಾರ [5]ಕೃ | ಪಾಣಿ ಸಂಸಾರವಾರಿಧಿಗೆ ||
[6]ದ್ರೋಣಿ ನಿರ್ಮಲ [7]ನಿಃಶ್ರೇಯೋಮಾರ್ಗ [8]ನಿಃ | ಶ್ರೇಣಿಗೆ ನಾನೆರಗುವೆನು ||೮||

ಸರ್ವಜ್ಞ ಪದಸರಸಿಜವೃಂದಮಧುಕರ | ಸರ್ವಯಕ್ಷಾನ್ವಯತಿಲಕ ||
ಸರ್ವಾಹ್ಣಯಕ್ಷ ವರವಕೊಡು ಕವಿತೆಯ | ನಿರ್ವಹಿಸುವಶಕ್ತಿಯನು ||೯||

ಮದನಮದಾಪಹರಣತೀರ್ಥಕರಮೃದು | ಪದಯುಗನಖಚಂದ್ರಿಕೆಗೆ ||
ಮುದದಿ ಚಕೋರಿಯೆನಿಪ ಯಕ್ಷೇಶ್ವರಿ | ಯೊಡವಿಸೆನಗೆ ಸುಮತಿಯನು ||೧೦||

[9]ಶರಧಿಯ ಜಲವ ಮುಗಿಲು ತೀವಿ ಧರಣಿಗೆ | ಸುರಿವಂತೆ ಜಿನವಾಕ್ಸುಧೆಯ ||
ಧರಿಸಿ ಭವ್ಯರ ಹೃದಯದೊಳು ಕರೆವ ಗಣ | ಧರರ ಪಾದವೆ ಗತಿಯೆನಗೆ ||೧೧||

ಶುದ್ಧವೆನಿಪ ತತ್ತ್ವಾರ್ಥಕೆ ವೃತ್ತಿಯ | ನುದ್ಧರಿಸುತ ಮೈಮೆವಡೆದ ||
ಗೃಧ್ರಪಿಂಛಾಚಾರ್ಯರ ಚಾರುಚರಣಕೆ | ಬದ್ಧಾಂಜಲಿನತನಹೆನು ||೧೨||

ಅವನತನಹೆನು ಚವ್ವೀಶತೀರ್ಥೇಶರ | ನವಕಥನವನಿಡದೊರೆದ ||
ಅವನಿಯೊಳತಿಕೀರ್ತಿವಡೆದು ವಿರಾಜಿಪ | ಕವಿಪರಮೇಷ್ಠಿಯಂಘ್ರಿಯನು ||೧೩||

ಎಣಿಕೆಮಾಡದೆ ಮದನನ ಬಿಲ್ಲನಾ ಪೂ | ಗಣೆಯ ಮುರಿದು [10]ಇಂಪುವಡೆದ ||
ಗುಣಭದ್ರರಡಿಯ [11]ಸೆಣೆಯುಮಾಡುವೆನೆನ್ನ | ಹಣೆಗೆ ತ್ರಿಕರಣಶುದ್ಧಿಯೊಳು ||೧೪||

ಕಲಿಯುಗಗಣಧರರನು ನಮ್ಮಲೋಕದ | ಅಲಘುಗುಣಾಲಂಕೃತರ ||
[12]ಕಲಿಲಹರರ ಮಾಘನಂದಿಮುನೀಶರ | ಬಲವಂದು ಪಾಡಿ ವಂದಿಪೆನು ||೧೫||

ಛಂದೋಲಂಕಾರ ಶಬ್ದಶಾಸ್ತ್ರಗಳೆಲ್ಲ | [13]ಪೊಂದಿಮುರಿದು ಪೂರ್ತಿವಡೆದು ||
ನಿಂದನಿಲವಿಸಂದದಿಂದೊಪ್ಪುವ ದೇವ | ನಂದಿಯ ಪದಕೆರಗುವೆನು ||೧೬||

[14]ಅಂಕದ ಮುಖದೊಳಡಂಗದೆ ಕರ್ಮಕ | ಲಂಕರೆನಿಪ ಬೌದ್ಧರನು ||
ಶಂಕಾಪಹರಣಹೃದಯರಾಗಿ ಗೆಲಿದಕ | ಲಂಕರಿಗೊಲಿದೆರಗುವೆನು ||೧೭||

---

**ಟಿಪ್ಪಣಿ.**— 1 ಅಪ್ಪಣೆ ಮಾಡಿದ. 2 ಮೃದುಪಾದಕ್ಕೆ. 3 ಪಾಪ. 4 ಕಾಡು. 5 ಕತ್ತಿ. 6 ದೋಣಿ 7 ಮೋಕ್ಷ. 8 ಏಣಿ. 9 ಸಮುದ್ರದ. 10 ಪ್ರಸಿದ್ಧಿಹೊಂದಿದ 11 ಸಮಾನ. 12 ಪಾಪ 13 ಒಟ್ಟಾಗಿಸೇರಿ, 14 ಯುದ್ಧದ—ವಾದದ.

ಹಿಂದೆ ನಾನೆಸಗಿದ ಘೋರದ[1]ಘತತಿ | ಯೊಂದಿಸಿಸಿಲ್ಲದೆ ಕೆಡುವ ||
ಅಂದದಿ ಸುವ್ರತವನು ಪಾಲಿಸಿದ ಪ್ರ | ಭೇಂದುಮುನಿಯ ವಂದಿಪೆನು ||೧೮||

ಅವ[2]ರಣಾಗಿಸ ಶಿಷ್ಯರು ಶ್ರುತಮುನಿಗಳ | ಸವಿತಳಗುಣಗಣಯುತರ ||
[3]ಅವಿರತವೆರಗುವೆ ನಾನೆಸಗಿದ ಪಾಪ | [4]ತವಿಸಲೆಂದು ಭಕುತಿಯೊಳು ||೧೯||

ಶ್ರುತಮುನಿವರರ ಸಹೋದರನಾಗಿ [5]ಸಂ | ಸೃತಿಬಂಧನವ [6]ಪರಿಪಡಿಸಿ ||
ಅತಿಕೀರ್ತಿವಡೆದ ವಿಮಲಕೀರ್ತಿವೆಸರ ವಿ | ಶ್ರುತಮುನಿಗಿರದೆರಗುವೆನು ||೨೦||

[7]ಪಾಟಿಗೆಡಿಸುವೆವಘವನೆಂಬಾ ನವ | ಕೋಟಿಮುನಿಗಳ ಮೆಲ್ಲಡಿಗೆ ||
ತಾಟಿಸಿ ಹಣೆಯನೇವಿನಾಶಸಂಗತಿಯ[8]†ಸಂ | ಘಾಟದಿಂದಾನುನುಡುವೆನು||೨೧||

ಇನ್ನು ನಾನೊರೆವೆ ಚವ್ವೀಸತೀರ್ಥೇಶರ | ತ್ಯನ್ನತಮಪ್ಪ ಸಂಗತಿಯ ||
ಕನ್ನಡದೊಳು ಚಂಪೂಕಾವ್ಯವೆನೆ ಪೇಳ್ದ | ಸನ್ನುತಸತ್ಕವೀಶ್ವರರ ||೨೨||

ಪುರುಜಿನಪತಿಯ ಪುರಾಣವನುಸುರಿದ | ವರಕವಿಪಂಪರಾಜನನು ||
ದುರಿತವಿದೂರರಜಿತಚರಿತವಪೇಳ್ದ | ಗರುವ ರನ್ನನ ನುತಿಸುವೆನು ||೨೩||

ದೇವಚಂದ್ರಪ್ರಭರನು ಕೊಂಡಾಡಿದ | ಶ್ರೀವಿಜಯರ ಪುಷ್ಪದಂತ ||
ಭಾವಜಾರಿಯ ಪೊಗಳಿದ ಗುಣವರ್ಮನ | ಭಾವಶುದ್ಧಿಯೊಳು ವಂದಿಪೆನು ||೨೪||

ಪದಿನಾಲ್ಕನೆಯ ತೀರ್ಥಕರಚರಿತ್ರವ | ಒದವಿ ಪೇಳಿದ ಜನ್ನಗನ ||
ಮುದದಿಂ ಧರ್ಮಚರಿತ್ರವನುಸುರಿದ | ಚದುರಮಧುರನ ಸ್ತುತಿಪೆನು ||೨೫||

ಶಾಂತೀಶನ ಪೊಗಳಿದ ಪೊನ್ನನ ರಘು | ಕಾಂತನ ಮಲ್ಲಿತೀರ್ಥಕರ ||
ಸಂತಸದಿಂ ವರ್ಣಿಸಿದ ನಾಗಚಂದ್ರನ | ಸಂತತಮಭಿವಂದಿಸುವೆನು ||೨೬||

ಅಂಗಜರಿಪು ನೇಮಿ ವೀರೇಶಚರಿತವ | [9]ಪೊಂಗಿ ಪೊಗಳ್ದ ಕಣ್ಣಪನ ||
ಶೃಂಗಾರಕಾವ್ಯ ಲೀಲಾವತಿಯನು ಪೇ | [10]ಳ್ದಾಂಗಿಕನೇಮಿಯ ನೆನೆವೆ ||೨೭||

ಬಂಧುರಭರತ ಯಾದವವಂಶವನು ಕೃತಿ | ಬಂಧದೊಳಗೆ ಸೇರಿಸಿದ ||
ಬಂಧುವರ್ಮನನು ನೆನೆದು ನೇಮಿಚರಿತಪ್ರ | ಬಂಧವ ನಾನುಸುರುವೆನು ||೨೮||

---

ಪಾಠಾಂತರ.—† ಸಘಾಟ.

ಟಿಪ್ಪಣಿ:—1 ಪಾಪಸಮೂಹ. 2 ಬಾಲ್ಯದ. 3 ಸದಾ. 4 ನಾಶವಾಡಲು. 5 ಸಂಸಾರ. 6 ಕಿತ್ತುಹಾಕಿ. 7 ರೀತಿ. 8 ಸಮೂಹ-ಸಂಗ್ರಹ. 9 ವಿಸ್ತಾರವಾಗಿ. 10 ವಿಲಾಸಿ-ರಸಿಕ.

ಇವರಾದಿಯಾಗಿ ಇಳೆಯೊಳುಳ್ಳ ಸರಜಿನ | ಕವಿಗಳ ಸನ್ನ ಚಿತ್ತದೊಳು ||
[1]ಅವಿರತವಿರಿಸಿ ನೇಮಿನಾಥನ ಚರಿತೆಯ | ಸವಿನಯದಿಂದುಸುರುವೆನು ||೨೯||

ಕೃತಿಯು ನೆವದಿ ನೇಮಿನಾಥನ ಚರಿತೆಯ | ನುತಿಗೆಯ್ಯಲ್ಕ[2]ಸಂವರಣೆ ||
ಹತನಾಗಲೆಂದು ಬರೆದೆ ನಿಂತಿದಭವ್ಯ | [3]ತತಿಯಿರ[4]ವೊಲಿದು ಲಾಲಿಪುದು ||೩೦||

ಕೇಳಿದೊಡೇನೊ ಕೇಳದೊಡೇನೊ ಮನಗೊಂಡು | [5]ಕೂಳರದರಿನೇನು ಸಿದ್ಧಿ ||
[6]ಕಾಲವಿಜಯನ ಕಥೆಯು ಪುಣ್ಯಕಾರಣ | ಪೇಳಿದೆನೆನ್ನ[7]ಬವಸಿತ ||೩೧||

ಕೋಡಗಗುತ್ತನುಮಾಣಿಕವನು ಕೊಡ | ಲೀಡಾಡುವೊಲು ದುರ್ಜನರು ||
ರೂಢಿವಡೆದ ಪುಣ್ಯಕಥೆಯನು ‡ ಕೇಳುವ | ರೋಡಾಡದೆ ಸುಮ್ಮನಿಹರೆ ||೩೨||

ಹಾವಿಗೆ ಹಾಲನೆರೆಯಲದರೊಡಲೊಳ | ಗಾ ವಿಷ ಪೂರಿಸುವಂತೆ ||
[8]ಶಾವಕರಿಗೆ ಲೇಸನಾಡಲು ಕಷ್ಟಪ | ನೇಪೈಸಿಕೊಂಡು [9]ಕೊನೆವರು ||೩೩||

ತಾನಳಿದುಂಡವರಿಗೆ ಓಕರಿಸಾ | ಶ್ವಾನನೊಣಗಂತೆ ದುರ್ಜನರು ||
ಹಾನಿ ತನಗೆಯಾದೊಡಾಗಲಿ ಸಜ್ಜನ | ಮಾನಾಪಹಾರವಾಡುವರು ||೩೪||

§ ಕಾಸೆಲು ಕಾಂಚನ ಕಡುರಂಗುವಡೆವಂತೆ | ದೂಸಕರಾ ಸಜ್ಜನರಿಗೆ ||
ಏನೇನು ಪರಿಯೊಳು ಕಪಟವನೆಸಗಲು | ಲೇಸನವರಿಗೆಸಗುವರು ||೩೫||

[10]ಪಿಸುಣರ ಸಂಸರ್ಗವನುತಿ ಮಾಡಿದ | ರಸಿಕರ್ಗೆ ಕೇಡಾಗದಿಹುದೆ ||
ಮಿಸುಗುವ ಪೊಸ ಪೊನ್ನಗಟ್ಟಿಯೊ[11]ಳವಲೋಹ | ಮುಸುಕಲಂತದು ಕೆಡುವಂತೆ ||

ಇಂತು ದುರ್ಜನರನು ದೂಷಿಸಿ ಸಜ್ಜನ | ಸಂತಾನವ ತುತಿಗೆಯ್ದು ||
ಕಂತುಮರ್ದನ ನೇಮಿನಾಥನ ಚರಿತೆಯ | ಸಂತಸದಿಂದುಸುರುವೆನು ||೩೭||

† ಹರಿಕುಲತಿಲಕ ಮಹಾಮಂಡಳಿಕಭೂ | ತರುಣೀಶಚಂಗಾಳ್ವನೃಪನ ||
ವರಸಚಿವಾಸ್ಥಯಾಂಬರ ಭಾನು ಜಿನಪದ | ಸರಸಿಜ ಮದಮಧುಕರನು ||೩೮||

---

**ಪಾಠಾಂತರ.**—‡ ಕೇಳ್ವವ § ಈಪದ್ಯವು (ಬ) ಪ್ರತಿಯಲ್ಲಿಲ್ಲ. † ಈಪದ್ಯವು (ಕ. ಗ.) ಪ್ರತಿಗಳಲ್ಲಿಲ್ಲ.

**ಟಿಪ್ಪಣಿ.**—1 ಸದಾ. 2 ತಡೆ. 3 ಸಮೂಹ. 4 ಪ್ರೀತಿಸಿ. 5 ಅಲ್ಪರು. 6 ಯಮವಿಜಯನ 7 ತಿಳಿದಷ್ಟು. 8 ಕೇಡುಕರಿಗೆ. 9 ಹಿಗ್ಗುವರು. 10 ದುಷ್ಟರ. 11 ಕೀಳುಲೋಹ.

ಜನನುತ ಕಲ್ಲಹಳ್ಳಿಯ ನಾಡಿನ ಪ್ರಭು | ವಿನಯ[1]ವನಧಿಚಂದ್ರಮನು ||
ಮನುನಿಭಚರಿತ ಮಾಧವಸುತ ಮಾಧವ | ತನುಜಸದೃಶ ವಿಜಯೇಂದ್ರ ||೩೯||

ವಿತರಣದೊಳಗೆ [2]ವಿಬುಧಮಹೀಜಾತವ | ಸುತವಿಭವದೊಳಿಂದ್ರನನು ||
ವಿತತವಿವೇಕದೊಳಾ ವಿಧಿಯನು ಗೆಲ್ದು | ಸುತನಾದನಾ ವಿಜಯೇಂದ್ರ ||೪೦||

ಆ ಪ್ರಭುವಿನ ತನುಜಾತನು ಸಕಲಕ | ಲಾನುಪ್ರವೀಣನುತ್ತಮನು ||
ಅಪ್ರತಿಮನು ಗುಣಾನ್ವಿತ ಕಾಮಧೇನುವೆ | ಮಪ್ಪುದನೆನೆ ರಾಜಿಸುವನು ||೪೧||

ಜಿನಪದಭಕ್ತ ಮಂಗರಸನಾನೀ ಮುಕ್ತಿ | ವನಿತೇರನೇಮಿತೀರ್ಥಕರ ||
ವಿನುತಮಹಾಕಥನವ ಪಾಡುಗಬ್ಬದೊ | ಳನುಗೆಯ್ದೆ ತಾನದೆಂತೆನಲು ||೪೨||

ಗುರುಕಟಿತಟವಿನ್ಯಸ್ತಹಸ್ತದ್ವಯ | ಧರಣೀತಳಾಂಘ್ರಿಪ್ರಸಾರ ||
‡ ನರನರ್ತಕಾಕಾರನೂಲೋಕವಿಪ್ಪುದು | [3]ಮರುತತ್ರಯಾಧಾರದಿಂದ ||೪೩||

ಆ ರೀತಿವಡೆದ ಭುವನದೊಳು ದಂಡಾ | ಕಾರದ [4]ತ್ರಸನಾಳವಿಹುದು ||
ನಾರಕನರನಾಕಲೋಕಕೆ ತಾನಾ | ಧಾರಮೆನಲು ರಂಜಿಸುತ ||೪೪||

ಆ ನರಲೋಕದ ಮಧ್ಯದೊಳಿಪ್ಪುವು | ನಾನಾದ್ವೀಪ ಸಮುದ್ರ ||
ಆ ನಟ್ಟನಡುವೆ ಮಹಾಲವಣಾಂಬುಧಿ | ತಾನತಿಶೋಭೆವಡೆದುದು ||೪೫||

ಅಸುರನ ಕೊಂದವ * ನೊಯ್ದವನಿಯತಂದು | ಹಸನಮಾಡಿ ಮುಂದದಕಾರೂ ||
ಮುಸುಕದಂದದಿ ಹರಿಗೆಯ್ದು ಪೀರಗಳನ | [5]ಲೆಸೆಕವಸೆದುದಾ ಜಲಧಿ ||೪೬||

ಜಂಬೂದ್ವೀಪವೆಂಬೆಂಬ [6]ಚೈವಾತ್ಮಕ | ಬಿಂಬದ ಪೊರವಳಯದೊಳು ||
ಇಂಬುವಡೆದ ಪಾವೇಷದ ಪೊಲುಲವ | ಣಾಂಬುಧಿಯತಿರಂಜಿಸಿದುದು ||೪೭||

ಕರಮೆಸೆವಾ ಕಡಲೊಳಮೆಯ್ಯೊಳು ಬಿಂ | ಧುರವಾದುದಾ § ಜಂಬೂದ್ವೀಪ ||
ಉರುತರಮಪ್ಪಾ [7]ಕಾಸಾರಮಧ್ಯದ | ಸರಸಿಜಕುಸುಮದಂದದೊಳು ||೪೮||

ಆ ವಸುಧಾಮಂಡಲದ ನಡುವೆ ಶೋ | ಭಾವಹಮಾಗಿರುತಿಹುದು ||
ದೇವಲೋಕದೆ ಪಾತಾಳಲೋಕಂಬರ | ತೀವಿ ಮಹಾಮೇರುಶಿಖರಿ ||೪೯||

---

**ಪಾಠಾಂತರ.**—‡ ಉರುನರ್ತನಾಕಾರ. * ಕಳ್ದುಧರೆಯ § ಜಂಬೂದೀವಿ.

**ಟಿಪ್ಪಣಿ.**- 1 ಸಮುದ್ರ. 2 ಕಲ್ಪವೃಕ್ಷವ 3 ಮೂರುಗಾಳಿಗಳ ಆಧಾರದಿಂದ. 4 ದ್ವೀಂದ್ರಿಯಾದಿ ತ್ರಸಜೀವಗಳುಳ್ಳಪ್ರದೇಶ. 5 ಪ್ರಕಾಶ. 6 ಚಂದ್ರ. 7 ಸರೋವರ

[1]ಅಂಬರವೆಸರ ಸುದತಿಸುರಲೋಕವೆಂ | ದೆಂಬ ಹೆಂಚಿನೊಳಂಜನವನು ||
ಇಂಬಿನೊಳಡಲೆಂದಿಟ್ಟ [2]ಹೆಜ್ಜೊಡರೆಂ | ದೆಂಬಂತೆ ಮೇರುವೊಪ್ಪಿದುದು ||೩೦||

ಜ್ಯೋತಿಷ್ಕರಿಂದೀ ಕಾಲವನೊಕ್ಕಮಿ | ಳಾತಳವೆಂಬ[3]ಕಳದೊಳು ||
[4]ಓತು ವಿಲಯಕರ್ತ್ರು ನಿಲಿಸಿದ[5]ಮೇಟಿಯು | ರೀತಿಯಾಯ್ತಾ ಮೇರುಶಿಖರ ||೩೧||

ಕೀಳಿನೊಳೆಸೆವೇಳು ಲೋಕಂಗಳೆಂಬ | ಏಳು ನೆಲೆಯುಪ್ಪರಗಳೊಳು ||
[6]ಥಾಳಿಪ ಹೊಂಗಳಸದವೊಲೊಪ್ಪಿತು ಮೇರು | ಭೂಲೋಕಕಚ್ಚರಿಯಾಗಿ ||೩೨||

ಆ ಸುರುಚಿರಮಪ್ಪ ಮೇರುಗಿರಿಯ ದಕ್ಷಿ | ಣಾಶೆಯೊಳಾ ನಿಷಧಾದ್ರಿ ||
ಆ ಸಾಗರವ ಪೂರ್ವಾಪರದೊಳು ಮುಟ್ಟಿ | ಭಾಸುರವಾಗಿರುತಿಪುದು ||೩೩||

ಆ ನಿಷಧಾದ್ರಿಯು[7]ಸುಸ್ರುತಮನಿಯು | ತಾನಾಂತಾ ಬಲು ಹೊರೆಗೆ ||
ಆನದೊಗೆದು ಬೀಳ್ಪಬೆಸರಿಸೆ ಸೀತೋ | ದಾನದಿಯೊಗೆದೊಪ್ಪಿದುದು ||೩೪||

ಭೂತರುಣಿಯು ಬೆಸ್ಕೊಳಿಸಿದ[8]ವೇಣಿಯವೊಲು | ಖ್ಯಾತಿವಡೆದು ಪಡುಗಡೆಗೆ ||
ಓತು ಪರಿಪ ಜಂಗಮವಾರ್ಧಿಯೊಳಂ | ತಾ[9]ತರಂಗಿಣಿಯೊಪ್ಪಿದುದು ||೩೫||

ಅದರೆಡಬಲಗಡೆ ಎಂಟೆಂಟು[10]ಜನಪದ | ಪದಿನಾಱುಸಗ್ಗದಂದದೊಳು ||
[11]ಪುದಿದಿಹನದರ ದಕ್ಷಿಣದೆಸೆಯೊಳಗೆಸೆ | ದುದು ವತ್ಸಕಾವತಿವಿಷಯ ||೩೬||

ಧರೆಯೆಂಬ ಲಲಿತಾಂಬುಜದ ಮಧ್ಯದ ಕೋಶ | ದಿರವೆನಲೆಸೆವಾ ದೇಶ ||
ವರಭೋಗಿಗಳು ಭೋಗಿಪ ವಸ್ತುವಿನ ಕೋಶ | ಸಿರಿಸುರವಿಗೆ ಏಕದೇಶ ||೩೭||

ಸುರರುಣಿಸಿಗೆ ಸರಿಮಿಗಿಲೆನಿಸುವ ಭೋಜ್ಯ | ತರವಸ್ತುವಿಂದಾ ರಾಜ್ಯ ||
ಧರೆಯೊಳಗುಳ್ಳ ಚಪ್ಪನ್ನದೇಶಕೆ ಪೂಜ್ಯ | [12]ಸುರಭಿಶರನ ಸಾಮ್ರಾಜ್ಯ ||೩೮||

ಸತತ[13]ಕುಜಾತಿವಿತಾನ ತಟಸ್ಥಮು | ಸ್ವತ[14]ಭಂಗ[15]ಜಡಭಾವಗಳು ||
ಅತಿಭಾವಿಸೆ ನದಿಯೊಳಗಲ್ಲದೆಸೆವಾ | ಕ್ಷಿತಿಯ ಜನದೊಳಿನಿಸಿಲ್ಲ ||೩೯||

---

**ಪಾಠಾಂತರ.**— ೩೦, ೩೧ ಪದ್ಯಗಳು (ಜ) ಪ್ರತಿಯಲ್ಲಿಲ್ಲ. ೩೦, ೩೧, ೩೨ ಪದ್ಯಗಳು (ಘ) ಪ್ರತಿಯಲ್ಲಿಲ್ಲ.

**ಟಿಪ್ಪಣಿ.**— 1 ಆಕಾಶವೆಂಬ ಸ್ತ್ರೀ. 2 ದೊಡ್ಡದೀಪ. 3 ಕಣ, 4 ಕಾಪಾಡಿ. 5 ಕಂಬ. 6 ಪ್ರಕಾಶಿಸುವ 7 ಸ್ರವಿಸುವ. 8 ಜಡೆ. 9 ಹೊಳೆ. 10 ದೇಶ. 11 ಸೇರಿರುವುವು. 12 ಕಾಮನ. 13 ವೃಕ್ಷಸಮೂಹ—ನೀಚಜಾತಿ ಜನಸಮೂಹ 14 ಅಲೆ-ತಿರಸ್ಕಾರ. 15 ಜಲ-ಮಂಕುತನ

[1]ಶ್ರುತಿಶೂನ್ಯವೆಂಬು[2]ದಕ್ರಮವೆಂಬುದು[3]ವಕ್ರ | ಗತಿಯೆಂಬುದು ಭಾವಿಸಲು ||
ನುತವಾಗಿಯಾದೇಶ[4]ದಹಿಯೊಳಲ್ಲದೆ ಜನ | ತತಿಯೊಳಗೊಂದಿನಿಸಿಲ್ಲ ||೬೦||

ಅಲರಶರನ ಬೀಡಪರಂಜಿಪಾಗ[5]ವಾಡು | ವೊಲು ಕಾಮುಪಲು ಮೋವ ಕಾಡು ||
ನೆಲವ ಹಡೆದ ನಾಕಲೋಕದೇಳ್ಗೆಗೆ ಜೋಡು | ಸಲೆಸೊಗಯಿಪುದಾ ನಾಡು ||೬೧||

ಆ ಸಗ್ಗದ ನಾಡಿನ ಗುರುಲಘುವನು | ತ್ರಾಸುವಿಡಿದು ನೋಡಲಜನು ||
ಭಾಸಿಪ ಗುಣದಿ * ನೆಯ್ದಿತು[6]ಉಡುಧರೆಯನು | ಆ ಸಗ್ಗವೆಯ್ದಿತುದ್ಧವನು ||೬೨||

ಆ ಜನಪದದ ನಡುವೆ ಸಿಂಹಪುರವೆಂಬ | ರಾಜಧಾನಿಯು ಇರ್ಪುದದನು ||
ರಾಜಿಸುವಂತೆ ಬಳಸಿ ಉದ್ಯಾನವು | ಸೋಜನಾವಾನದಂತಿಹುದು ||೬೩||

ಹರನೊಳು ಹುಸಿದ ದೋಷಿಗಳೆಮ್ಮ † ಹೊರೆಯೊಳ | ಗಿರಬೇಡವೆಂದು ಕೋಪದೊಳು ||
ವರವನ ಸತಿಸೂಂಕಿದಂತೆ ಬೇಲಿಗಳೊಳು | ಪಿರಿದೊಪ್ಪಿದುವು ಕೇತಕಿಗಳು ||೬೪||

ತೀವಿಹವಲ್ಲಿ ವಕುಳನಾಗಚಂಪಕ | [7]ಬಾವನ್ನಬೇಲ ಬಾಳೆತಿಲಕ ||
ದೇವದಾರು ದಾಡಿಮ ಬಂಬುಕುರವಕ | ಮಾವು ಸುಂದಾಪಶೋಕ ||೬೫||

ಮಿಸುಗುವ ದಶ[8]ದೋಹಲವೃಕ್ಷಗಳಿಂದ | ಮಿಸುನಿದಾವರೆಗೊಳದಿಂದ ||
ಪೊಸರನ್ನ[9]ವೆಸದ ಕೃತ್ರಿಮಶೈಲಗಳಿಂದ | ಹಸನಾದುದಾ ವನದಿಂದ ||೬೬||

ಸುರುಚಿರವಾದ ಸುವರ್ಣವನಲತೊಳು | ಧರಿಸಿದಪೊಸಸಂಪಗೆಯೊಳು ||
‡ ಪೊರೆಯುಲಣ್ಮುವು ಚಂಡಾಳಿಕುಲಂಗಳು | ಕರಮೆಸೆವಾ ನಂದನದೊಳು ||೬೭||

ವ್ಯೋಮಕೇಶಗೆಯಭಿಷೇಕವಮಾಡುವೆವೆಂದು | ಹೇಮಕುಂಭದಿ ಸುಧೆವಿಡಿದು ||
ಪ್ರೇಮದಿನಸಗೆವಂತೆ ತೆಂಗುಕಾಯಿದಳೆದು | ದ್ರಾಕ್ಷುಪತ್ತ್ರವು ಸೊಂಪುವಡೆದು ||೬೮||

ಕರಮೊಪ್ಪಿದುವಲ್ಲಿ ಕರವೀರಮದಿರ್ಗಂತಿ | ಮರುಗಮಲ್ಲಿಗೆ ಇರವಂತಿ ||
ಸುರಗಿ[10]ಸಂದ್ಯಾವರ್ತ[11]ಬಾಧೂಕ[12]ಮಾಲತಿ | [13]ಸಿರಿಸಸಂಪಗೆಸೇವಂತಿ ||೬೯||

---

**ಪಾಠಾಂತರ.**—* ನೆಯ್ದುದು. † ನೆರೆಯೊಳ. ‡ ಪೊರೆಯುಲಮ್ಮುವು.

**ಟಿಪ್ಪಣಿ.**—1 ಕಿವಿಯಿಲ್ಲದಿರುವುದು- ಬಾಡಿಮಾತಿಗೆ ಕಿವಿಗೊಡದಿರುವುದು. 2 ಸೊಟ್ಟಾಗಿ-ಅಕ್ರಮಪ್ರವೃತ್ತಿ. 3 ಡೊಂಕಾಗಿನಡೆಯುವುದು-ಕುಟಿಲತನ. 4 ಸರ್ಪ. 5 ಆಶ್ರಯಸ್ಥಾನ. 6 ಜ್ಯೋತಿರ್ಲೋಕ. 7 ಶ್ರೀಗಂಧ. 8 ಸ್ತ್ರೀಯರ ಗಂಡೂಷ ಪಾದತಾಡನಾದಿಗಳಿಂದ ಚಿಗುರುವ ವೃಕ್ಷಗಳು. 9 ಕೆಲಸದ 10 ನಂದಿಬಟ್ಟಲು. 11 ಗೋರಟೆ. 12 ಜಾಜಿ. 13 ಬಾಗೆ.

ಅತಿ * ಸುಖಿಯಿಸುವುವಂತದರೊಳು ಪಾರಾ | ವತ ಲಾವುಕ ರಾಜಕೀರ ||
ಸುತಚಕ್ರವಾಕ ಮರಾಳ ಸಾರಸ[1]ಪರ | ಭೃತ¶ಭೃಂಗುಸಾರಮಯೂರ ||೨೦||

ಮೊರೆವಳಿ ಕಳಭಗಳಿಗೆ[2]ಜೇವಳಿಗೆಯ್ವ | ಮರುತನ ಮೈಗೆ ಕಂಪಿಡುವ ||
ಅರಲವಲ್ಲರಿ ಹಬ್ಬಿಬಿಡುವಾ[3]ಇಮ್ಮಾವ | ನೊರೆವೆನೇನದರ ವರ್ಣನವ ||೨೧||

ಮುನಿದು ತೊಲಗಿಪ ವಿಟೀವಿಟಸಂಧಾನ | ವನೆ ಮಾಡುವಾ ಉದ್ಯಾನ ||
ವಿನುತ ವಸಂತರಾಜನ ಜನ್ಮಸ್ಥಾನ | ಮನಸಿಜನೃಪನಾಸ್ಥಾನ ||೨೨||

ಸಿರಿಯುರಮನೆ ಗಾಳಿಯ ಗುಣದಾಗಾರ | ಬೆರಕೆಗೆಂಪಿನ ಬಂಡಾರ ||
ವರವನಸತಿಯ ಲಾವಣ್ಯರಸದ ಪೂರ | ದಿರವಾದುವಲ್ಲಿ ಕಾಸಾರ ||೨೩||

ಪಿರಿದು ರಂಜಿಸುವುವಂತದರೊಳು †ಗ್ಗಟಿಸುವ | ಗೊರವ ಬಂದುದ ಬಾಯಿಗರೆವ ||
ಅರಗಿಳಿ ನಲಿದು ಕೆಲೆವ ಪೊಸ ಪಾರಿವ | ಮೊರೆವಳಿ[4]ಕುಳಿರಂಚೆ ಕೊಳನ ||೨೪||

ತೊಳಗಿ ಬೆಳಗುವಂತೊಪ್ಪುವ ವಸದಿಂದ | ಒಳವಲಯದ ಖಾತಿಯಿಂದ ||
ಪೊಳೆವಪರಂಜಿಯೆಸೆವ ಕೋಂಟೆಯಿಂದಾ | ಪೊಳಲೊಪ್ಪಿತತಿಶೋಭೆಯಿಂದ ||೨೫||

ತನ್ನ[5]ಣ್ಣುಗಿನ ಸುತೆಯಾಪಟ್ಟಣದೊಳು | ಚೆನ್ನಾಗಿರೆ ಹರುಷದೊಳು ||
[6]ಮುನ್ನೀರಮರ್ದಪ್ಪಿದಂತೆ ರಂಜನೆಯೊಳು | ಉನ್ನತವಾಯ್ತಲ್ಲಿಯಗಳು ||೨೬||

ಗೆಲೆವಂದವಾ ಕೋಟಿ ತೆನೆಯಿಂ ಬೆಳೆಯಸು | ಪಲವು ಕೊತ್ತಳದಿಹೇರುಗಳ ||
ನೆಲಸಿದಟ್ಟಣೆಯಿಂದಡುಗೆಯ ಮನೆಯಸು | ಪುಳಿಪೊಗದಿಂದ ರಾಶಿಯಸು ||೨೭||

ತರದಿನೊಪ್ಪುವ ಸೋಮಸೂರ್ಯವೀಧಿಗಳಿಂದ | ಅರಸುಮಕ್ಕಳ ಮನೆಯಿಂದ ||
[7]ಬೆರಕೆವರಲ ಶಿಖರದ ದೇಗುಲಗಳಿಂದ | ಪುರವೊಪ್ಪಿತತಿಶೋಭೆಯಿಂದ ||೨೮||

ವೀರಭಟರ ವಿದ್ವಾಂಸರಕ್ಕರಿಗರ | ನೇರಣಿಗರ ಜಟ್ಟಣಿಗರ ||
ವಾರವನಿತೆಯರ ವೈದ್ಯರ § ಒಜ್ಜರ | ಕೇರಿಯಿಂದೆಸೆಯಿತಾ ನಗರ ||೨೯||

ಭೂರಮಣಿಗೆ ಮಾರ್ಮಲೆದಿಪ್ಪ ವೈರಿ | ಭೂರಿಭೂಭುಜರಿಗೆ ಮಾರಿ ||
÷ಈರೆಸೆ ಶತಲಕ್ಷಕೋಟಿಭಟರ ಕೇರಿ | ಕೇರಿಯಿಂದೆಸೆಯಿತಾನಗರಿ ||೩೦||

---

**ಪಾಠಾಂತರ.**— * ಅತಿಸೊಗಯಿಸುವ. ¶ ಭೃಂಗಸಾರ. † ಒಡಸುವ. § ಬಜ್ಜರ ÷ ಊರೆಸೆ.

**ಟಿಪ್ಪಣಿ.**— 1 ಕೋಗಿಲೆ. 2 ಬಿಲ್ಲಿನಧ್ವನಿಮಾಡುವ 3 ಸಿಹಿಮಾವು. 4 ಶೈತ್ಯ. 5 ಪ್ರಿಯ. 6 ಸಮುದ್ರ. 7 ಮಿಶ್ರರತ್ನ—ನವರತ್ನ.

ಎಂತ್ರಿಗಳು ಮಂಡಳಿಕಸಾಮಂತರ | ಪರದೇಶಾಧೀಶ್ವರರ ||
ಕಲಾಭಿಜ್ಞರ ಕೇರಿಯಿಂತರ | ತರದಿನೊಪ್ಪಿದುದಾಸಗರ ||೮೧||

ಪೂಪೀಳಿಯವನು ಲೇಪನ ಬಲು | ವೆಸದ*ತೊಡವು[1]ಪಲಪರಲು ||
ಟುನಿವಸನ[2]ಪರಿಯಣದಂಗಡಿಯು ಸಾ | ಲ್ಕು ಸುಗಲೊಪ್ಪಿದುದಾ ಪೊಳಲು ||

ಗುವ ಬೆರಕೆಗಂಪಿನ ಹೂವಿನಸರ | ಗಳನೀವಸವಯೌವನೆಯುರ ||
†‡ಗಣ್ಗಳ ಬೆಳಗಿಸಬಲೆಗಿರ | ದೊಳಗಾದುದಾ ಏಟನಿಕರ ||೮೩||

ಹಪುರವನಾಳುತ್ತಿರ್ಪನರುಹ | ದ್ಘ್ನಾಸವೆಸರ ಭೂಭುಜನು ||
ಾರವಡೆದಮರಾವತಿಯೊಳಗಾ | [3]ವಾಸವನಿರ್ಪಂತಿಹನು ||೮೪||

ನಿತಾಜನಹೃದಯುಕಮಲವನ | [4]ತರುಣಸಹಸ್ರಕಿರಣನು ||
ಮರೂಪನೊಪ್ಪಿದನು ಸತ್ಕವಿಚಿತ್ತ | ಶರಧಿಸಂಪೂರ್ಣಚಂದ್ರಮನು ೮೫||

ಜಿನಪದಸರಸಿಜ ಮದಮಧುಕರ | ಚದುರವಂಗರಸರಚಿಸಿದ ||
ಾರಿ ನೇಮಿಜಿನೇಶಸಂಗತಿಯೊಳು | ಮೊದಲಾಶ್ವಾಸವೊಪ್ಪಿದುದು ||೮೬||

**ಪೀಠಿಕಾಸಂಧಿ ಸಂಪೂರ್ಣಂ**



**ಪಾಠಾಂತರ.**—* ತೊಡರ. † ಮಿಸುನಿವಾಸದ ‡ ಗಂಗಳ.
**ಟಿಪ್ಪಣಿ.**—1 ನವರತ್ನ. 2 ಹರಿವಾಣ-ಪಾತ್ರ. 3 ದೇವೇಂದ್ರ. 4 ಬಾಲಸೂರ್ಯ.

## ೨. *ಇಭ್ಯಕೇತುಕುಮಾರಾಭ್ಯುದಯ ಸಂಧಿ



ಶ್ರೀಮದಮರಪತಿ[1]ಮೌಳಿಕೀಲಿತಪಾದ | [2]ತಾಮರಸದ್ವಯನಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಅರಿನೃಪಮರ್ದನನರಸಪದ್ಮಾಸಗೆ | ಸರಸಿಜಮುಖಿ ಜಿನದತ್ತೆ ||
†ಅರಸಿಯಾದಳು ಫಣಿಪತಿಗೆ ಪದ್ಮಾವತಿ | ವರಸತಿಯಾದಂದದೊಳು ||೨||

ಆ ನರನಾಥಚಂದ್ರಗೆ ಜಿನದತ್ತೆಯು | ಮಾನಿತಮಪ್ಪ ಗರ್ಭದೊಳು ||
[3]ಮಾನಸಕೇತನನ ¶ಮಾನುಷ ರೂಪನಾಂತೋರ್ವ | ಭೂನುತಸುತನುದಯಿಸಿದ ||೩||

ಜನಿಸಿದ ಸಿಸುಗಪರಾಜಿತನಾಮವ | ನನುರಾಗದಿಂದವರಿಡಲು ||
ವಿನುತಮಪ್ಪೆಲ್ಲಾ ಕಲೆಗೂಡಿ ಬೆಳೆದನಾ | [4]ವನಧಿಕುಮಾರನಂದದೊಳು ||೪||

ಚತುರಕಲಾಭಿಜ್ಞ§ನೆನೆ ರಂಜಿಸಪರಾ | ಜಿತಗೆ ಮದುವೆಯ ಮಾಡಿದನು ||
ಅತಿಮುದದಿಂ ಪ್ರೀತಿಮತಿಯೆಂಬವನಿಪ | ಸುತೆಯನಿಳಾಧೀಶ್ವರನು ||೫||

ಜ್ಯೋತಿರ್ಲೋಕವ [5]ಸೌಮ್ಯವೆರಸಿ ಜೈ | ವಾತೃಕನಾಳುವಂದದೊಳು ||
ಆ ತನುಜಾತಸಹಿತ ಭೂಪಾಲನಿ | ಳಾತಳವನು ಪಾಲಿಸುತ ||೬||

ವಿಮಲವಾಹನರೆಂಬ ತೀರ್ಥಾಧೀಶರ | [6]ಸಮವಸರಣದೆಡೆಗೈದಿ ||
ಕ್ರಮದಿಂ ಧರ್ಮಾಧರ್ಮವೆಲ್ಲವ ಕೇಳ | ಲಮರಿತು ನಿರ್ವೇಗಮವಗೆ ||೭||

ನನ್ನುತನಪರಾಜಿತಗೆ ಭೂಭಾರವ | ನುನ್ನತವಿಭವದೊಳಿತ್ತು ||
ತನ್ನ ಸುದತಿ ಜಿನದತ್ತೆಸಹಿತ ಸಂ | ಪನ್ನನು ದೀಕ್ಷೆದಳೆದನು ||೮||

ಸುರುಚಿರಗುಣಿಯಪರಾಜಿತಸುಕುಮಾರ | ನಿರದಾಶ್ರಾವಕವ್ರತವ ||
ಧರಿಸಿ ಬಳಿಕ ನೀತಿಯ ಮೀರದಿಳೆಯನು | ‡ಪರಿಪಾಲಿಸುತಿರ್ದನತ್ತ ||೯||

---

**ಪಾಠಾಂತರ.**— *ಅಪರಾಜಿತನ ಸಮ್ಯಕ್ತ್ವಸಂಧಿ (ಖ) ಅಪರಾಜಿತಸಂಧಿ (ಗ) ನೇಮೀಶ್ವರರಭವಾವಳಿಸಂಧಿ (ಘ) † ಗರುವೆ ( ಙ ) ಗರಣಿ ( ಚ ) ¶ ಮಿಸುಗುವರೂಪನಾಂತೋರುವ § ನೆಂದೆನಿಪಪರಾ (ಙ) ‡ ಪರಿಪಾಲಿಸಿದನು ಮತ್ತತ್ತ (ಙ) ಪರಿಪಾಲಿಸುತಿರ್ದನತ್ತ (ಗ)

**ಟಿಪ್ಪಣಿ.**—1 ಕಿರೀಟ. 2 ಕಮಲ. 3 ಮನ್ಮಥನ. 4 ಚಂದ್ರ. 5 ಬುಧ. 6 ಆಕಾಶದಲ್ಲಿ ಸಂಚರಿಸುವ ಸಭಾಮಂಟಪ.

ಮುನಿಪತಿಯುರುಹದ್ದಾಸನು ವಿಮಲವಾ | ಹನರೊಡನಘ [1]ಶೃಂಖಲವನು ||
ಘನವಾಗಿ ಪರಿದು ಬಳಿಕ್ಕ[2]ಪವರ್ಗಾ | ವನಿಗೆ ಪೋದನು ಧರೆಪೊಗಳೆ ||೧೦||

ನಿರ್ವಾಣಪೂಜೆಯನೆಸಗುವೆನೆಂದು* [3]ಸು | ಪರ್ವಾಣನಾಥನು ಬಗೆದು ||
ಸರ್ವದಿವಿಜರೊಡಬರಲು ವಾದ್ಯದರವ | ಪರ್ವಿದುದೆ[4]ಣ್ದೆಸೆಗಳನು ||೧೧||

ಆ ವಾದ್ಯದ ರವಗೇಳ್ದಪರಾಜಿತ | ಭೂವಲ್ಲಭನಿಜಜನಕ ||
ಕೈವಲ್ಯಕೆ ಪೋದನೆಂಬುದ†ನರಿಯಲು | [5]ತೀವಿತು ಮೂರ್ಛೆಯಂಗವೊಳು ||೧೨||

ಪರ ಶೈತ್ಯೋಪಚಾರದಿ ಮುಸುಕಿದ ಮೂರ್ಛೆ | ಹರೆಯಲು ಕಣ್ದೆರೆದವನು ||
ಪಿರಿದಾಗಿ [6]ಹಳವಳಿಸಿದನೆನ್ನಯ ನಿಜ | ಗುರುವೆಲ್ಲಿದ್ದನೊಯೆನುತ ||೧೩||

ಸನ್ನುತಮಪ್ಪ ಭೋಗೋಪಭೋಗಂಗಳಿ | ವೆನ್ನ ತಂದೆಯುಪೇಕ್ಷಿಸುವ ||
ಅನ್ನೆವರೆಲ್ಲ [7]ನಿವೃತ್ತಿಯೆಂದಾ ಸಂ | ಪನ್ನ ಮೋಹಿಸಿ ಕೈಕೊಂಡು ||೧೪||

[8]ಸುರಗಿರಿಯನು ಹಬ್ಬಿಯಾತುದಿಮುಟ್ಟಿದ | ಸುರಲೋಕಮನುಳಿದದರಿ ||
ವರಸರ್ವಾರ್ಥಸಿದ್ಧಿಯೊಳು ತಗುಳಿ ಮೇಲೆ | ಭರದಿ ಕೈವಲ್ಯಕೆಯ್ದುವೆನು ||೧೫||

ಎನುತ ಸನ್ನಾಹಭೇರಿಯ ಹೊಯ್ಸಲು ಕೇಳಿ | ಘನತರಪಡೆ ಬಂದೆಲ್ಲ ||
ಇನಿಸು ಬೇಗದಿ ಬರಲುತ್ತರದೆಸೆಗಾಗಿ | ಜನಪತಿದಂಡು ನಡೆಯಲು ||೧೬||

ಆ ಸೇನಾಪದಧೂಳಿಯಾಗಸವನು | [9]ಬಾಸಣಿಸಲು [10]ನಾಕದೊಳು ||
ಆ ಸುದ್ದಿ ಹರೆಯೆ ತದ್ವಿಪರೀತವೃತ್ತಿಗೆ | ವಾಸವ ನಸುನಗೆ ನಗುತ ||೧೭||

ಕರೆದು ಕುಬೇರನ¶ನೀಂಸೀಗವೆ ಪೋಗಿ | ಯರಮಗ ನೆಸೆದಕೃತ್ಯವನು ||
ಪರಿಹರಿಸೆಂದಾಕ್ಷಣದೊಳು ಕಳುಹಲು | ಧರಣೀತಳಕಿಳಿತಂದು ||೧೮||

ಭರದಿಂದ ಬಡಗಣ ದಿಗಧೀಶನಾನೃಪ | ವರನು ನಡೆವ [11]ಸಸಿನದೊಳು ||
ಮುಂತಮಾರ್ಗದೊಳೊಂದು ಸಮವಸರಣವನು | ಕರಮೆಸೆವಂದದಿ ರಚಿಸಿ ||೧೯||

ಆ ಮಧ್ಯದೊಳು ಜಿನವಿಮಲವಾಹನರ ಮ | ತ್ತಾ ಮೋಹದ ಜನಕನನು ||
ಆ ಮೋಹಿಯುಪರಾಜಿತನು ಕಾಣ್ಬಂದದಿ | §ಪ್ರೇಮದಿನೊಡ್ಡಿ ತೋರಿದನು ||೨೦||

---

**ಪಾಠಾಂತರ.**-* ಸುಪರ್ವಾಣನಾಥನಾ ಬಳಿಗೆ (ಘ ಜ) † ನುಸುರಲು ¶ ನೀಸೀಗಲೆ (ಗ) § ಪ್ರೇಮದಿಯೊಡ್ಡಿ (ಗ ಜ)

**ಟಿಪ್ಪಣಿ.**—1 ಸರಪಳಿ. 2 ಮೋಕ್ಷ. 3 ಇಂದ್ರ, 4 ಅಷ್ಟದಿಕ್ಕುಗಳನ್ನು 5 ತುಂಬಿತು 6 ಹಂಬಲಿಸಿದ. 7 ಬಿಡುಗಡೆ. 8 ಮೇರುಪರ್ವತ. 9 ತುಂಬಲು ಅಥವಾ ಮುಚ್ಚಲು. 10 ಸ್ವರ್ಗದೊಳು. 11 ನೇರದಲ್ಲಿ.

ಆಯಿಂದ್ರಜಾಲದ ಸಮವಸರಣದೊಳ | ಗಾಯುತಿ*ವಲ್ಲಭರಿರಲು ||
ಮಾಯಮಿದೆಂದರಿಯದೆ ನಿಜವೆಂದು ಕ | ಟ್ಟಾಯತದಿಂದಭಿನಮಿಸಿ ||೨೧||

ತಂದೆಯು ಪೋಗವ ಕಂಡೆನು ಸನ್ನ ವ್ರತಸಂದಿ | ತೆಂದಪರಾಜಿತನೃಪತಿ ||
ಇಂದುವ ಕಂ[1]ಡಿಂದೀವರದಂತಾ | ನಂದವಡೆದು ತಿರುಗಿದನು ||೨೨||

ಬಂದು ಪೊಳಲ ಹೊಕ್ಕು ಹಲಕಾಲಸತ್ತಾ | ನಂದದಿ ನೆಲನ ಪಾಲಿಸುತ ||
ಒಂದಾನೊಂದು ದಿನದಿ ಚೈತ್ರಮಾಸದೊ | ಳಂದವಡೆವ ವನಕೆಯ್ದಿ ||೨೩||

ತಂದೆ ಮಾಡಿಸಿದಪರಾಜಿಯ ಬಸದಿಯು | ನಂದನದೊಳಗಿರೆ ಕಂಡು ||
ಸಂದ ಬಳುತಿಯೊಳಲ್ಲಿರ್ದಭವಂಗಭಿ | ವಂದಿಸಿದನು ಭೂವರನು ||೨೪||

ಜಿನರಿಗೆರಗಿ ಜಿನಗೃಹಮಣಿಮಂಟಪ | ಕನುರಾಗದಿಂ ಬಂದು ನಿಲಲು ||
ಅನಿತರೊ[2]ಳಿನಶಶಿಗಳವೊಲು ಚಾರಣ | ಮುನಿಗಳೀರ್ವರು ನಭದಿಂದ ||೨೫||

ಧರಣಿಗಿಳಿದು ಬಂದಾ ಪೊನ್ನ ಬಸದಿಯ | ನುರುಮುದದಿಂ ಬಲವಂದು ||
ಸ್ಮರಮರ್ದನನ ವಂದಿಸಿ ಪೊರಮಡಲಾ | ವರಮಣಿಮಯಮಂಟಪಕೆ|| ||೨೬||

ವಿನಮಿತಮೌಲಿ[3] ವಿಶ್ವಂಭರೇಶ್ವರನಾ | ಮುನಿಯುಗಕುನ್ನತಾಸನವ ||
ಅನುರಾಗದಿಂ ತಂದಿರಿಸಿ ಕುಳ್ಳಿರಿಸಿದ | ನನುಪಮಭಕ್ತಿಯೊಳೊಸೆದು ||೨೭||

ಚಿತ್ತಶುದ್ಧಿಯೊಳಭಿವಂದಿಸಿದಾ [4]ಭೂ | ಪೋತ್ತಂಸಗಾ ಮುನಿವರರು ||
ಉತ್ತಮಮಪ್ಪ ಧರ್ಮಾಧರ್ಮದಿರವನು | ಚಿತ್ತರಮಾಗಿ ಪೇಳಿದರು ||೨೮||

ವಿಲಸದ್ಧರ್ಮನಿರೂಪವ ಕೇಳ್ದಾ | [5]ತುಳಿಲಾಳಾ ಮುನಿಯುಗಕೆ ||
ಜಲಜಾತೋಪಮ ಕರಯುಗಲವ ಮುಗಿ | ದೆಳಸಿ ಕೇಳಿದನಿಂತೆಂದು ||೨೯||

ಎಲೆ ಮುನಿಯುಗಲವೆ ನಿಮ್ಮ ಮೇಲತಿಮೋಹ | ನೆಲೆಗೊಂಡಿದೆ †ರಪಿಗಂಡ ||
ನಳಿನದಂದದಿ ನನಗೇನುಕಾರಣಮೆಂ | ದಿಳೆಯಾಧಿಪತಿ ಕೇಳಿದನು ||೩೦||

ಎನಲಾ §ಚಾರಣಯುಗಲದೊಳಗೆ ಮುಖ್ಯ | ಮುನಿ ಮರುಕದಿ ಬಾಯ್ದೆರೆದು ||
ಜನಪತಿ ಕೇಳು ನಿನ್ನಯ ನಮ್ಮಯ ಭವ | ದನುವನು ಭಾವಶುದ್ಧಿಯೊಳು ||೩೧||

ಭೂವರ ಕೇಳ್ಪೂರ್ವವಿದೇಹದ ಪುಷ್ಕ | ಳಾವತಿಯೆಂಬ ವಿಷಯದ ||
ಭೂವಿಶ್ರುತಪುಂಡರೀಕವೆಸರ ಪುರ | ದಾ ವಾಸವದಿಕ್ಕಿನೊಳು ||೩೨||

---

**ಪಾಠಾಂತರ.**—*ಪುಂಗವ † ಹೊತ್ತ ಕಂಡ (ಜ) § ಚಾರಣಮುನಿಯುಗಲದೊಳಗ್ರ

**ಟಿಪ್ಪಣಿ.**-1 ನೈದಿಲೆ. 2 ಸೂರ್ಯಚಂದ್ರ. 3 ಭೂಮಿಗೊಡೆಯ. 4 ರಾಜಶ್ರೇಷ್ಠ. 5 ವೀರಭಟ

[1]ಅಂತಕ*ನೃಪವರನಾಡುಂಬೊಲನೆಂ | ಬಂತೊಂದು ಕಾನನವಿಹುದು ||
ಅಂತದರೊಳು ವಿಂಧ್ಯಕನೆಂಬ ವನಚರ | ಕಾಂತ ಸಂತಸವಿರುತಿಹನು ||೩೩||

ಕಾಲಭೈರವನೊಂದುಗ್ರಾಕಾರವ | †ಸೋಲಿಸಿ[2]ವಿಧಿಯುಕ್ಕಿನಿಂದ ||
[3]ಚೀಲಣಿಸಿದ ಚಿತ್ರವೆಂಬಂತೆ ಭಿಲ್ಲನಾ | [4]ಭೀಳಾಕಾರವೊಪ್ಪಿದುದು ||೩೪||

[5]ಶೂಲಿಯೆರಲೆಯು ಸುಧಾಂಶುವ ಪೋಲನ ಪಾ | ಕಾಳಿಯೇರಿದ ಕೇಸರಿಯ ||
ಕಾಲನ ಹೊತ್ತು ಕೋಣನ ಬೇಂಟೆಗಾ ಜೇಡ | ನಾಳೋಚನೆ§ಮಾಡುತಿರಲು ||

ಆ ಗಂಡುಗಲಿ ವಿಂಧ್ಯಕನ ತೋಳಬಾಳನು | ರಾಗದಿ ಕೈಪಿಡಿದಿಹಳು ||
ವಾಗುರೆಯೆಂಬಬೇಡತಿ ಕೃಷ್ಣಾಹಿಕಾ | ಲಾಗರುಪನು §ಹಿಡಿದಂತೆ ||೩೫||

ಇಂತಿರುತ್ತೊಂದು ಪಗಲು ತದ್ವನಚರ | ಕಾಂತನು ಮೃಗ‡ಬೇಂಟೆಗೆನುತ ||
ಸಂತಸದಿಂ ಪೊರಮಟ್ಟನಿರದೆ ನಿಜ | ಕಾಂತೆ ÷ವಾಗುರೆ ಸಹವಾಗಿ ||೩೬||

ಬಡಿ ಬಲೆ ದಡಿ ಕಾಲ್ಕಣ್ಣೆ .·.ಯುರುಳು ಪಾಡಿ | ಸಿಡಿ ಸೆಳೆ ಗಾಣ ಬೆಳ್ಳಾರ ||
ತಡಿಕೆ ದೀವದ ಖಗಮೃಗಸಂತತಿಗೂಡಿ | ನಡೆತಂದನಾ ವನಚರನು ||೩೭||

ಕಟ್ಟಿದ [6]ಪಾಶ ಪಟ್ಟೊಡೆ[7]ಕೈರವೇಂದ್ರನ | ಹೊಟ್ಟೆಯೇಣನ ಕೊಲ್ವೆನೆಂಬ ||
ಕಟ್ಟುಗ್ರರದ [8]ಜಾಯಿಲದ [9]ಬಂಗುಳಿಗಳ | ತೆಟ್ಟು ನಡೆದು ಬಂದುದಾಗ ||೩೮||

ದಾಡವ ಬಿಸುಟು ಕೋದಂಡವ ನಿರವಾಂತ | ದಂಡಧರನು ಬಹುರೂಪ ||
ಕೊಂಡೈದುವಂತೆ ಪಲವು ಬೇಡರವನೊತ್ತು | ಗೊಂಡೈದಿದ[10]ರೊಗ್ಗಿನಲಿ ||೩೯||

ಈ ರೀತಿಯಿಂದ ನಡೆದುಬಂದು ಬಲೆ ಬೆ | ಳ್ಳಾರವ #ಬೀಸಿಬಿಲ್ಲಾಳ ||
ಕಾರಿರುಳೊಡ್ಡು ¶ನಿಲಿಸುವಂತೆ ನಿಲಿಸಿದ | [11]ಓರಣ..ದಿಂದೊಂದೆಡೆಯೊಳು||೪೧||

ಸಾಹಸ ಬಿಲ್ಲಾಳುಗಳಾ‡ಜಾಂಬಿಲ | [12]ವ್ಯೂಹಮನತಿಜೋಕೆಯೊಳು ||
+ಸೋಹಿಸಿಕೊಂಡುಬಂದರು [13]ಗರಳದ ಗಾಳಿ | [14]ಮೋಹರಿಸಿದ ಮಾರ್ಕೆಯೊಳು||

---

**ಪಾಠಾಂತರ.**-*ರಾಜೇಂದ್ರ † ಪೊಲ್ವಿಸಿಂ (ಕ) ಪೋಲಿಸಿ (ಜ) § ಮಾಡುತಿಹನು (ಖ) § ಹಿಡಿವಂತೆ (ಜ್ಞ) ‡ ಬೇಂಟೆಗೆಂದು (ಜ್ಞ) ÷ ವಾಗುರೆಯೊಡಗೂಡಿ (ಘ) .·. ಯುರುಳುಬಡಿ (ಖ) ಯುರುಳುಪಾಡಿಸಿಡಿ (ಘ) # ಬಿಸುಟುಬೆಳ್ಳಾರ (ಕ) ¶ ನಿಲಿಸಿದಂತೆ (ಜ) .. ದಿಂದೊಡ್ಡಿನೊಳು ‡ ಜಾತಿ + ಸೋಹಿಕೊಂಡು

**ಟಿಪ್ಪಣಿ.**-1 ಯಮ. 2 ಬ್ರಹ್ಮ. 3 ನಿರ್ಮಿಸಿದ. 4 ಭಯಂಕರರೂಪ. 5 ಶಿವನಹುಲ್ಲೆ. 6 ಪಾಶ-ಹಗ್ಗ. 7 ಚಂದ್ರ. 8 ನಾಯಿಯ. 9 ಸಮೂಹಗಳ. 10 ಗುಂಪಿನಲ್ಲಿ. 11 ಸಾಲಿನಿಂದ 12 ಸಮೂಹ, 13 ವಿಷದ, 14 ಮುತ್ತಿದ.

ಕರಿಮರಿ ಶರಭ [1]ಕೇಸರಿ [2]ಖಳ್ಗಿ ಕಾಡೆಮ್ಮೆ | ಕರಡಿ ಕಡವೆ [3]ಚಿತ್ರಕಾಯ ||
ಹರಿ ಹುಲ್ಲೆ ಸಾರಗ ಮೊದಲಾದ ಮಿಗಗಳಂ | ದಿರದೊಳಗಾಯ್ತಾ ಬಲೆಗೆ ||೪೩||

ಆ ಬಲೆ ಬೆಳಕ್ಕಾರಕೊಳಗಾದ ಮಿಗಗಳ | ನಾ ಬೇಂಟೆಗಾರರು ಕಂಡು ||
ಆ ಬಾಣಗಳೆಲ್ಲ ತೀರ್ವನ್ನ ಬರಸೆಚ್ಚ | ರಾ ಬಳಿಯಿಳೆ ಹೇಸುವಂತೆ ||೪೪||

ಕೆಡಹು ಕೆಡಹು ಕೊಲ್ಲು ಕೊಲ್ಲೆಸು ಇರಿಯಿರಿ | ಇಡು ಇಡು ಬಿಡು ಬಿಡು ನಾಯ ||
ಬಡಿ ಬಡಿ ಹೊಡೆ ಹೊಡೆಯೆಂಬಬ್ಬರ ಬಲು | ಸುಡಿ[4]ಯುಣ್ಮೆ*ತ್ತೆಲ್ಲಿನೋಡಿದರು ||
ಬಲೆಯ ಬಳಸಿ ನಿಂದಾ ವನಚರಸಂ | ಕುಲದೊಡ್ಡಣವನೊಡಹಾಯ್ದು ||
ಕೆಲಬಲದೆಸುಗೆಯನೆಣಿಸದೆ ಪಾರಿದ | ಪಲಘುಭೀತಿಯೊಳೆರಲೆಗಳು ||೪೫||

†ನೀಡುಂಗೊರಲು ಸಿಲುಕುಗಾಲ ಡಿದೆವೆ | ಗೂಡು ವಿರಾಜಿಸುತಿರಲು ||
ನೋಡದಮುನ್ನ ನಾಲ್ಕೈದಾರೇಳೆಂಟು | ಜೋಡಿಸಿ §ನೆಗೆಯೆಯೇಣಗಳು ||೪೬||
ಬಲೆಯ ಹರಿದು ಬಿಟ್ಟು ಬೇಕ್ಕಾರವ ಕಿಳ್ತು | [5]ವಲಪಿನ [6]ತೋಹಿನಾಳುಗಳ ||
∴ತಲೆಮೆಟ್ಟಿಯಚ್ಚಂಬಿಗೆ ಮುನ್ನ ನೆಗೆದವು | ಸಲೆ ಭೀತಿವಡೆದು ಹುಲ್ಲೆಗಳು ||೪೭||
ಮರುತಗೆ ಮುಂಚು ಮನಸ ಹಿಂಚುವಾಳ್ಪ ಜೆ | ಬೆಳ್ಕಿರಲೆಗೆ ಬಿಡೆ #ನಿಮಿಷದೊಳು ||
ಹರಿದಡ್ಡವಾಯ್ತು ಹಿಡಿದು ¶ಕೊಂಡವಾಸನ | ಚರರ ಕೈಯ ಬಾಯಿಲಗಳು ||೪೮||
ಕೈವಶವಾದ ಖಳ್ಗಿಯನಸಲೊಲ್ಲದೆ | ‡ಸಮ್ವೈರಗಾಗಿ ವ್ಯೆಮರೆದು ||
ಕೈವಾರಿದೆಯನುತಾ ಬೇಟೆಬೈಗಳ | ಬೈವುತಿದ್ದರು ಕೆಲದಾಗ ||೫೦||
ಎಚ್ಚು ಕೆಲವನೆಡವರಿಯುದೆ ತಲೆಯೆಲು | ಸುಚ್ಚಾಗುವಂತೆ ..ಧೋಣ್ಣೆಯೊಳು ||
ಚಚ್ಚಿ ಕೆಲವು ಮಿಗಗಳ ಕೊಂದರಾ ಬನ | ವ್ರೊಚ್ಚತಬಯಲಾಗುವಂತೆ ||೫೧||
+ಬಿಲ್ಲಿಂದ ಬೀಹಿನ ಹಗರು ಮುರಿವವ್ರೋಲು | ಕಲ್ಲಿಂದ ಕಾಲ್ಮುಂಡಿಸುವ್ರೊಲು ||
ಬಲ್ಲಿತಪ್ಪಾ ಕೊಲೆಯಿಂ ಕೊಂದರಾ ಮಿಗ | ಮುಲ್ಲಿಂ ಸಿಲ್ಲವೆಂಬಂತೆ ||೫೨|| (ಚ)

---

**ಪಾಠಾಂತರ.** .. *ತತ್ತ (ಖ) † ನೀಡುಗೊರಲುಸಿಲುಕುಂಗಾಲುಡಿವೆದೆ (ಗ) § ನೆಗೆದ ವೇಣಗಳು (ಖ ಘ ಜ) ∴ ತಲೆಯ ಮೆಟ್ಟಿಚ್ಚಂಬಿಗೆ (ಖ ಘ) # ನಿಮಿಸ ¶ ಕೊಂದವು ‡ ಸಯ್ವೆರಗಾಗಿ .. ಧಾಳೆಯೊಳು (ಖ) ಧಾಣೆಯೊಳು (ಘ ಜ) + ೫೨ನೆಯ ಪದ್ಯವು (ಚ) ಪ್ರತಿಯಲ್ಲಿಲ್ಲ.

**ಟಿಪ್ಪಣಿ.**— 1 ಸಿಂಹ. 2 ಖಡ್ಗಮೃಗ. 3 ಹುಲಿ. 4 ಉಬ್ಬಿತು. 5 ದಣಿವು. 6 ಗುಂಪಿನ.

*ಜೋಳೆ[1]ಯಂಬಿನ ಗಾಯದ ಬಾಯ್ದೆರೆಯಿಂದ | ಪೇಳುತೆ [2]ಗೋಣ್ಮುರಿಗೊಂಡು ||
ಬೀಳುಗರೆವ ಹಸುಳೆಯು ನೆಕ್ಕುವ ಹುಲ್ಲೆ | [3]ಯೋಳಿಯುಳಿದ†ವವರೊಳಗೆ ||೫೩||

ಕರುಪಿನ ಕಟವಾಯನಾ ನೊರೆವಾಲ್ಗಳ | ಕರೆವ ಕಾಡೆಮ್ಮೆಯ ಮೊಲೆಯ ||
ಅರುಗುಲಿ ವಿಂಧ್ಯಕನೊಂದೇಯಂಬಿನಿಂ | ಹರಿಯೆಚ್ಚು ಕೆಡಹಿದನಾಗ ||೫೪||

ಈತೆರದಿಂ ಬೇಂಟೆಗೊಳಗಾದ ಬಹುವಿಧ | ಜಾತಿಯೆಲ್ಲವ ಸಲೆ ಕೊಂದು ||
ಮಾತೇನು ಪುನ ಪೇಸದೆ ಮುಂದಕೈದಿದ | ನಾತುರದಿಂ ವಿಂಧ್ಯಕನು ||೫೫||

[4]ಎಕ್ಕಲಗಳು ತಮ್ಮ §ತೆಗೆದ ಜಾಯಿಲಗಳ | ಸಿಕ್ಕಡಿಮಾಡಿ ¶ಹಾಯ್ದುದನು ||
+ತಕ್ಕಿನ ಬೇಹರ ಕೆಡಹಿದುದನು ಕಂ | ಡಿಕ್ಕಿದನಾ ವನಚರನು ||೫೬||

[5]ಅಡಲ ಪೊಕ್ಕಡಗಿಯಾಳ್ಗಳ ಕೊಂದು ತಾನೇರು | ವಡೆದ ಹೆಬ್ಬುಲಿಗಿದಿರಾಗಿ ||
ನಡೆದು ಲೀಲಾಮಾತ್ರದಿ ಕೊಂದು ಕೆಡಹಿದ | ಕಡುಗಲಿತನದಿ ವಿಂಧ್ಯಕನು ||೫೭||

ಸುಂಡಿಲ ಬಂಡಿಸುವಂತೆಸಲೊಂದು [6]ನೇ | ತಂಡನಿಳೆಗೆ §ಕೊಂಬೂರಿ ||
[7]ಮಂಡಿಸಲೊಪ್ಪಿದುದಾದಿವರಾಹ ಭೂ | ..ಮಂಡಲಕಿಟ್ಟಾಸ್ಯದಂತೆ ||೫೮||

ಆರ್ಭಟೆಯಿಂದಿದಿರಾದ ಸಿಂಹವ ಕಂಡು | [8]ಕೂರಸಿಯಿಂ ನೆರೆ ತಿವಿದ ||
ವೀರವಿಂಧ್ಯಕನೊಪ್ಪಿದನಾ ಶೂದ್ರಕ | ವೀರನುಪಾಧ್ಯಾಯನಂತೆ ||೫೯||

ಕರಿಯು ಬೇಂಟೆಯನು ಕೇಸರಿಯಿಂದಾ ಕೇ | ಸರಿಯ ಬೇಂಟೆಯು ಶರಭಗಳಿಂ ||
ಶರಭನ ಬೇಂಟೆಯು ಭೇರುಂಡನಿಂದಾಡು | ತುರುಲೀಲೆಯಿಂದೆಯ್ದಿದನು ||೬೦||

ಆ ವಿಂಧ್ಯಕನಾಡುವ ಬೇಂಟೆಯಾರ್ಭಟೆ | ಗಾ ವನಕರಿ ಕೆಲವೋಡಿ ||
ಭೂವಲಯದ ಪುರೆ ಪೊಗಲು ದಿಗ್ಗಜವಂ | ದೋವದಾಡುವುದು ಭೂತಳವು ||

ತಾನೇರಿದ ಗಂಡರಲೆಯನಾ ಬೇಹ | ನಾಸದೆ ಕೊಲ್ವಸಂದಂಜಿ ||
ಮಾನವಡಗಿಯೋಡಾಟವನಾ ವನ | ÷ಮಾನಕಲಿತನಂದಿಂದ ||೬೧||

ಅಂಬು ತಾಗಿದ ಕೇಸರಿ ಹರಿಯಲ್ಕಾ | ನಂಬುಗೆವಿಡಿದು ವಿಂಧ್ಯಕನು ||
ಬೆಂಬಳಿಯೊಳ ಬರುತಿರೆ ಕಟ್ಟಿದಿರೊಳ | ಗಿಂಬಾದ‡ಶೋಕಮೂಲದೊಳು ||೬೨||

---

ಪಾಠಾಂತರ.—* ಬಾಳೆಯಂಬಿನ ಬಾಯ್ದೆರೆಯಿಂ | ಬೀಳುವಗೋಣ್ಮುರಿದು (ಕ)
† ವವರೊಡನೆ [ಕ] § ತಡೆಯ (ಜ) ¶ ಹುಯ್ಯುದನು [ಘ ಜ] + ಟಕ್ಕಿನ § ಕೋಡನೂರಿ
... ಮಂಡಲಕಾಸ್ಯವಿಟ್ಟಂತೆ ÷ ಮಾನನಂದಿಂದಕಲಿತನು ‡ ವೃಕ್ಷಮೂಲದೊಳು

ಟಿಪ್ಪಣಿ.— 1 ಧನುಸ್ಸು. 2 ಕತ್ತು. 3 ಸಾಲು 4 ಕಾಡಹಂದಿ. 5 ಕಾಡು.
6 ಅಲಂಕರಿಸಲು. 7 ಆನೆ. 8 ತೀಕ್ಷ್ಣವಾದಕತ್ತಿ.

ಅಮಲಬುದ್ಧಿಗಳು ವಿಮಲಬುದ್ಧಿಗಳೆಂಬ | ವಿಮಲಗುಣಾಲಂಕೃತರು ||
ಕ್ಷಮೆ ದಮೆಗಳು ಕೂಡಿದಂತೀರ್ವರು ಸಂ | ಯಮಿಗಳಿರಲು ಕಂಡನಾಗ ||೧೪||
[1]ಶಶಿನ್ನೇಸರು ತಮ್ಮ ಶೀತೋಷ್ಣವ ಬಿಟ್ಟು | ವಸುಧೆಗಿಳಿದು ಬಂದಂತೆ ||
ಅಸಮಾನದೋಷಾಪಹರರಿರಲು ಕಂ | ಡುಸುರಿದನವನಿಂತೆಂದು ||೧೫||
ಎಂದು ನಾನರಿಯದ ಮನುಜಮೃಗವನಾ | ನಿಂದು ಕಂಡೆನು ಪೊಸತಾಗಿ ||
ಎಂದಾ ಭಿಲ್ಲನಾ ಬಿಲ್ಗೆ ಬಾಣವನಿಟ್ಟು | ನಿಂದನವರನೆಸಲೆಂದು ||೧೬||
ಎಲೆ ವಾಗುರೆ ನೋಡು ನೋಡೆನ್ನ ಕೈ | ಚಳಕವನಿನಿಸೆವೆಯಿಡದೆ ||
ತಳುವದೊಂದೇ ಶರದಿಂದೀ ಮೃಗಗಳ | ನಿಳೆಗುರುಳ್ವಂದದಿ*ನೆಸುವೆ ||೧೭||
ಎಂದುಬ್ಬೊಬ್ಬಿರಿದಂಬನೆಸುವ ಸಮಯದೊಳು | ಬಂದು ವಾಗುರೆ ಬಿಲ್ಲಿನಿಂದ ||
ಮುಂದಕೆ ಪರಿವಂಬ†ನುಗಿದು ಬೇಡನೊಳಿಂ | ತೆಂದಳು ಮಿಗೆ ಭೀತಿಯೊಳು ||೧೮||
ಇವರು ಮನುಜಮೃಗವಲ್ಲ ವಿಂಧ್ಯಕ ಕೇ | ಳಿವರು ಮಹಾನುಭಾವಿಗಳು ||
ಇವರನೆಸುವುದೆಮಗನುಚಿತವೆಂದಾ | ಯುವತಿ ವಾಗುರೆಯುಸುರಿದಳು ||೧೯||
ಆ ನುಡಿಗೇಳಿ §ವಿಂಧ್ಯಕನೆಂದನಿಂತಿವು | ಮಾನವಮೃಗವಲ್ಲೆಂಬುದನು ||
§ನೀನಾವತೆರದಿನರಿದೆಯೆಂದೆನಲಾ | ಮಾನಿನಿ ನುಡಿದಳಿಂತೆಂದು ||೨೦||
[2]ಎಕ್ಕಟಿಯೊಳು ಪೋಗಿ ಬೇಂಟೆಯಾಡುತ ನೀನು | ಹೊಕ್ಕಲ್ಲಿ ಹೊಕ್ಕೆಚ್ಚು ಕೆಡಹಿ ||
[3]ಹಿಕ್ಕಿದ ಕೇಸರಿಯೊಡಲೊಳು ಸಿಕ್ಕಿರ್ದ | ಸೊಕ್ಕಾನೆದಲೆಯ ಮುತ್ತುಗಳ ||೨೧||
ಮಾನ ಹಿಡಿದು #ಪುಂಬುಲವಕ್ಕಿ ಮುಗಿಲೆಡೆ | ಗಾನದೆ ಹಾರಲಾಂತದನು ||
ನೀನೆಸಲವನಿಗೆ ಬೀಳ್ದ ಮುಗಿಲ ಮುತ್ತು | ಮಾನ ಬಸಿರ ಮುತ್ತುಗಳನು ||೨೨||
ಮಿಕ್ಕಹಾವಿನ ಹೆಡೆಯಿಂ ತಂದ ಮಣಿಗಳ | ನೆಕ್ಕಲಗಳ ದಾಡೆಯಿಂದ ||
ಸಿಕ್ಕಿದ ಮಣಿಮುತ್ತೆಲ್ಲವ ನಾ ನಗ | ರಕ್ಕೆ ಮಾರಲು ಕೊಂಡುಪೋಗಿ ||೨೩||
ಪುರಕಗ್ಗಳನು ವೃಷಭಸೇನನೆಂಬೋರ್ವ | ಹರದನ ಮನೆಗಾನು ಪೋಗಿ ||
ಹರಲಮಾರುವ ವೇಳೆಯೊಳಾಮನೆಯೊಳೀ | ಹಿರಿಯರಿರಲು ಕಂಡೆನಾನು ||೨೪||
ಆಶೆಟ್ಟಿವೃಷಭದತ್ತನು ಬಳಿಕವರ್ಗನ್ನ | ತಾಸನವಿತ್ತು ಕಾಲ್ದೊಳೆದು ||
ಸೇಸೆ ಸುಗಂಧ ಕುಸುಮ ನವಫಲಗಳಿಂ | ದೋಸರಿಸದೆ ಪೂಜಿಸಿದನು ||೨೫||

---

**ಪಾಠಾಂತರ.**— * ನೆಸೆವೆ [ಕ] † ನುಳಿದು [ಖ] § ವಿಂಧ್ಯಕನಿಂತೆಂದನು [ಖ] § ನೀನೇತರದಿ [ಕ ಘ ಗ] # ಮಿಂಗಲಿವಕ್ಕಿ [ಖ]

**ಟಿಪ್ಪಣಿ.**— 1 ಚಂದ್ರಸೂರ್ಯರ. 2 ಏಕಾಂಗಿ. 3 ಬೇರೆಮಾಡಿದ.

ಬಳಿಕಾ ಪೊಳಲಬಲ್ಲಿದರೆಲ್ಲರಿವರಿಪ್ಪ | ನಿಳಯಕಿರದೆ ತಂತಮ್ಮ ||
ಬಳಗಸಹಿತ ಬಂದು ಭಕುತಿಯಿಂದವೆ ಕಾಲ| ತೊಳೆದು ಪೂಜಿಸಿ ಪೊಡಮಟ್ಟು||೭೬||

ಮತ್ತೇನನೆಂದರಿಯೆನು ಕೊಟಿಕೊಡಿ ಯೆಂ | ದೊತ್ತಿ ಬೇಡಿದೊಡಾಗಲವರು ||
ಇತ್ತೆವೆನು ಕೈಕೊಳ್ಳಿಯೆನುತ[1] ಪೀಲಿ | ಯಿತ್ತರವರತಲೆಯೊಳಗೆ ||೭೭||

ಇವರವರಿಂದೆಲ್ಲಕೆ ವೆಗ್ಗಳೆಂಬ | ವಿವರವರಿದೆನೆದರಿಂದ ||
ಇವರನೆಚ್ಚೊಡೆ ಪಾತಕವೆಂದಾ ವ್ಯಾಧ | ಯುವತಿ[2]ಯೊಳ್ನುಡಿಯಾಡಿದಳು||೭೮||

ಆ ನುಡಿಗೇಳಿ ಬೆದರಿ ಬೇಡನಾಯಕ | ತಾನನೆವಂಬುಬಿಲ್ಲುಗಳ ||
ಆನದೆ ಬಿಸುಟು ವಾಗುರೆಗೂಡಿ ಮುನಿಗಳಿ | ಗಾನಂದದೊಳೆರಗಿದನು ||೭೯||

ಎರಗಿದ ಲುಬ್ಧಕದಂಪತಿಯನು ಕ | ಣ್ದೆರೆದಾಮುನಿಪುಂಗವರು ||
ಮರುಕಮಿಗಿಲು ಧರ್ಮವೃದ್ಧಿಯೆನುತ ಮನ | ದೆರಕದಿ ಮಿಗೆ ಹರಸಿದರು ||೮೦||

ಹರಸಲಂತೆಂದನು ತಮ್ಮನೆನುವೆನೆಂದು | ಸರಲಬಿಲ್ಲಿಗೆ ತೊಟ್ಟವನನು ||
ಹರಿದೆಯ್ದಿ ಹರಣವಕಾಯ್ದೊಸತಿಯನು | ಸರಿಗಂಡು ಹರಸಿದರಿವರು ||೮೧||

ಇವರಿಂದಾವವರತ್ಯುತ್ತಮರೆಂದು | ಸವಿನಯದಿಂ ಕೊಂಡಾಡಿ ||
ತವಕದಿಂದಾ ಕಾಡಹೂವ ತಿರಿದುತಂ | ದವರಡಿಗಳ ಪೂಜಿಸಿದನು ||೮೨||

ಹರುಷದಿ ಪೂಜಿಸಿ ಬಳಿಕಿಂತೆಂದನು | ಪುರದೊಳಗಾಸೆಟ್ಟಿಗಳಿಗೆ ||
ವರವನಿತ್ತಿರಿ ಕಂಡಾವರವನು ನನ | ಗಿರದೆ ಪಾಲಿಸಿಯೆಂದವನನು ||೮೩||

ಇಂತೆಂದಾಲುಬ್ಧಕನ ಬಿನ್ನಪವಕೇಳಿ | ಶಾಂತುಮದಾಪಹರಣರು ||
ಪಿಂತಿವನೆಸಗಿದ ದುಷ್ಕರ್ಮಯೋಗ ಸಿ | ಸ್ವಂತಾನನನಾಯಿತೆಂದಱದು ||೮೪||

ಲುಬ್ಧಕನಾಯಕ ಕೇಳುನಿನಗೆ ಕಾಲ | ಲಬ್ಧಿವಶದಿ ಜೀವವಧೆಯು ||
ಲುಬ್ಧತ್ವಹರಹರಿಣಾಯಿತೆನುತ ಬೋ | ಧಾಬ್ಧಿಚಂದ್ರಮುರುಸುರುತವೆ ||೮೫||

ಎಲೆಭವ್ಯಕೇಳು ಕಳವುಹುಸಿಪಾದರ | ಕೊಲೆಕಾಂಕ್ಷೆಯೊಂದಿಪಸುಳಿವು ||
ಹೊಲಸುಕಳ್ಳಿಂಬವಬಿಡಲು ನೀಬಯಸಿದ | ಫಲವು ನಿನಗೆ ದೊರಕುವುದು ||೮೬||

ಈ ನಾವುಕೊಟ್ಟ ವ್ರತಂಗಳನೆಲ್ಲವ | ನೀನಿರದೊಸೆದು ರಕ್ಷಿಸಲು ||
ಭೂಸುತಮಪ್ಪ ಮೂಲೋಕದೊಡೆಯುತನ | ತಾನಿರದೊದಗುವುದೆನಲು ||೮೭||

---

**ಟಿಪ್ಪಣಿ.**— 1 ನವಿಲ್ಗರಿ. 2 ಒಳ್ಳೇನೂತು.

ಇದಡಂತಪ್ಪ ವರವಕೊಡಪೇಕೆಂ | ದಾದರದಿಂದಾಬಯುದ ||
ಆ ದಿವ್ಯಮುನಿಪುಂಗವರ ಕೋಮಲ ತರ | ಪಾದಮೂಲಕೆ ಮುಗ್ಗಿದನು ||೮೮||

ಅಡಿಗೆರಗಿದ ವನಚರಗಾವ್ರತವನು | ಜಡುವಿಲ್ಲದೆ ರಕ್ಷಿಸನುತ ||
ಸಡಗರದಿಂದಾಸಂಯಮಿಗಳು ಕೊಡ | ಲೊಡನವ ಕೈಕೊಂಡನಾಗ ||೮೯||

ಗಂಡಸಿರದೆ ಯಾಚರಿಸಿದ ಚರಿತವೆ | ಪೆಂಡರಿಗೌಚಿತ್ಯವೊಂದು ||
ತೊಂಡೆವಾಯ್ದೆರೆಯ ವಾಗುರ ಯಾವ್ರತವ ಕೈ | ಕೊಂಡಳು ಕಡುಭಕುತಿಯೊಳು ||

ವ್ರತವಧರಿಸಿ ವ್ರತಿಗಳ ಪಾದಯುಗಕವ | ನತರಾಗಿಯವರ ಬೀಳ್ಕೊಂಡು ||
ಸತಿಪತಿಗಳು ತವಮ್ಮಾಜೀಡವಳ್ಳಿಗೆ | ಅತಿಹರುಷಗೊಳ್ಳೈದಿದರು ||೯೦||

ಬೀಡಿಗೆಬಂದು ಬಿಲ್ಲಂಬುಗಳನು ಮುರಿ | ದೀಡಾಡಿ ಹರಿದುಬಲೆಯನು ||
ಕೂಡಣದೀವದ ಖಗಮೃಗವನು ಬಿ | ಟ್ಟೋಡಿಸಿದನು ಭಿಲ್ಲನಂದು ||೯೨||

ಬಡಿಯಬಿಸುಡು ಬಡಿಕೋಲನೆಬಲೆಗೆಹಾಕಿ | ಸುಡು ಕೀಳುಕಾಲಕಣ್ಣಿಯನು ||
ಕಡಿಖಂಡಮಾಡು ಬೆಳ್ಕಾರವನೆಂದಾ | ಪುಡದಿಗೆ ಬಿಯದನಾಡಿದನು ||೯೩||

ನಂಟರಿಷ್ಟರಮನೆ ಹೊಕ್ಕುತಿಂಬುಂಬುದ | ಬೇಂಟೆಯಾಡಿ ಮೃಗತತಿಗೆ ||
ಕಂಟಕವನು ಮಾಳ್ಪುದನೆಲ್ಲವನಂದು | ಗೆಂಟುಮಾಡಿದನಾಬಿಯದ ||೯೪||

ವರಹುಸದಾಡೆಯೊಳಗೆ ಮುತ್ತುಫಣಿಪನ | ಶಿರದೊಳು ಮಣಿಪುಟ್ಟುವಂತೆ ||
ದುರುಳವಿಂಧ್ಯಕನ ಹೃದಯದೊಳು ಸಂಯಮ | ಸಿರುತವೆಸಲು ಜನಿಸಿದುದು ||೯೫||

ಕೊಲೆಯಿಲ್ಲದೆಡೆಯೊಳು ಕಾರಿಲ್ಲದೆಡೆಯೊಳು | ಮೊಲಸಿನಿಸಿಲ್ಲದೆಡೆಯೊಳು ||
ಎಲುನರತೊವಲಿಲ್ಲದೆಡೆಯೊಳು ವನಚರ | ನಿಲಯುವಮಾಡಿಕೊಂಡಿಪ್ಪ ||೯೬||

ಬಿದಿರಕ್ಕಿಯನುತಂದು ಕುಟ್ಟಿಯೋಗರಪಟ್ಟು | ನೆದಮೂಲಫಲಪತ್ರಗಳನು ||
ಕುದಿಸಿಯೋಗರಮಾಡಿ ಯಾದಂಪತಿಗಳು | ಉದರವ ಪೋಷಿಸುತಿಹರು ||೯೭||

ಉಪ್ಪುಮೆಣಸ ಹಾಕಲರಿಯದೆ ಹಸುರಿನ | ಸೊಪ್ಪು ಹಸುರುಕಾಯ್ಗಳನು ||
ನೆಪ್ಪಯತಿಂದು ಜೀವವಹೊರೆವುತ್ತಿರ | ಲಪ್ಪಿತುಬಡವವರೊಡಬ ||೯೮||

ಹಿಡಿದಸುವ್ರತವನಿನಿಸುಬಿಡಲಾರದೆ | ಯಡಗುಂಬುದನು ಪರಿಪಟ್ಟು ||
ಅಡವಿಯಗೆಂಡೆದಿಂಡುಗಳ ತಿಂದಾಬೀಡ | ನೊಡಲು ಕಟಂಕಟಿಯಾಯ್ತು ||೯೯||

ಕಡುಬಡವಾಗಿ ಕಟ್ಟಿಯವ್ರೊಲುತಿರುಗುವ | ದೃಢಶುಚಿಗಳನು ಕಂಡವನ ||
ಮಡದಿಯುಕೂಡಿಂತೆಂದಾಡಿದರವ | ಳೊಡನಾಡುವ ಬೇಡತಿಯರು ||೧೦೦||

ಪಸುರ್ವುಲ್ಲತಿಂದಬೆಳ್ಳಿಗನತಿಂದೊಡೆ ದಿಟ್ಟ | ಪಸುರಪ್ಪುದೆಂದು ಕೋಳ್ಕಿಗದ ||
ಪಸಿಯುಪಡಗುಂಬ ಬಲ್ಲಿದಗೀಪಳುವಿನ | ಪಸುರೆಲೆಯುಸುತಿಂಬುದಾಯ್ತೆ ||೧೦೧||

ಎಂದು ನುಡಿದವಮಾತುಗೇಳಿವಾಗುರೆ ಇಂ | ತೆಂದಳು ತಾನವರೊಡನೆ ||
ಅಂದಾಮುನಿಗಳ ನಾಕಂಡಕಾರಣ | ದಿಂದೀವಿಧಿಯಾಯಿತೆಮಗೆ ||೧೦೨||

ಅಂಬನೆಸುವ ಕೈಯುಸು ಮದ್ಯಮಾಂಸವ | ತಿಂಬುಂಬಜಾಯುಕಟ್ಟಿದರು ||
ಸಂಬಿಸಿಯಾಮುನಿಪತಿಗಳೆಸುತ ಸೀರ | ತುಂಬಿದಳಾದಿಟ್ಟಿಗಳೊಳು ||೧೦೪||

ಬಿಲ್ಲಹಿಡಿಯು ಬೇಂಟೆಯುನಾಡಮಿಗವನು | ಕೊಲ್ಲನಡಗತಿಂಬುದನು ||
ಒಲ್ಲಸಂಕದರಿಂದಿಂತಾಯಿತೆಂಬಳ | ಸೊಲ್ಲಿಗಾತಪರುಸುರಿದರು ||೧೦೪||

ತಾನಡಗುಂಬುದನೊಲ್ಲದೊಡಾಗಲಿ | ಸೀನವ್ಮುನಸೆಗೆಯ್ಯೆಂದು ||
ಸಾನುರಾಗದಿ ತಿಂದುಂಡುಹೋಗೆನಲಾ | ಮಾಸಿನಿಸುಡಿದಳಿಂತೆಂದು ||೧೦೫||

ಮುನ್ನವುಂದರಿಯದೆ ಕೊಂಡಸುವ್ರತವನು | ಇನ್ನುಬಿಟ್ಟೊಡೆ ದೋಷವಹುದು ||
ಇನ್ನೇಕವನಾಚರಿಸಿದಾಚಾರವೆ | ಎನ್ನಾಚರಣಸಿತ್ತಯುದಿ ||೧೦೬||

ಎನುತವರೊಡನೆ ಮಾತಾಡಿವಾಗುರೆ ತನ್ನ | ಇನೆಯುನಡೆದ ನಡೆವಳಿಯು ||
ಮನವುಟ್ಟಿನಡೆದಡವಿಯು ಕಾಯಿಪಣ್ಗಳ | ನನುರಾಗದಿಂ ತಿನ್ನುತಿಹಳು ||೧೦೭||

ಈವಿಧದಾಚಾರದೊಳಾಚರಿಸುತ | ಆವಿಂಧ್ಯಕನೊಂದುಪಗಲು ||
ತೀವಿದಹುಸುಪಂದ ಬರುತಿರಲೊಂದಿ | ಮ್ಮಾವಿನಮರವಿರೆ ಕಂಡು ||೧೦೮||

ಅಲ್ಲಿತೀವಿದ ನವಮಧುರಫಲಂಗಳ | ನೆಲ್ಲಪಸವಿವೆನೆಂದದನು ||
ಮೆಲ್ಲನೆಹತ್ತಿತಿರಿಪ ಹಣ್ಣಕೊಟ್ಟರ | ದಲ್ಲಿಬೀಳ್ವುದು ಕೈಜಳುಪಿ ||೧೦೯||

ಪೋಳಲೊಳಗೆ ಮುನ್ನಕೊಯ್ದ ಮಧುರಫಲ | ಬೀಳಲದನು ತಾನುತೆಗೆವ ||
ವೇಳೆಯೊಳಾಕೈಯುಸು ಕಚ್ಚಿದುದೊಂದು | ಕಾಳೋರಗನುಕೋಪದೊಳು ||೧೧೦||

ಹಾವಿನಹಲ್ಲ ಹಾಲಾಹಲದಿಂದಾ | ಭೂವಲಯುದೊಳು ಬಿದ್ದುರುಳೆ ||
ಆ ವಿಂಧ್ಯಕನೆಂಬವಿಪಿನಚರಂಗದು | ಸಾವಾದುದು ನಿಮುಷದೊಳು ||೧೧೧||

ಪತಿಯುಸಾವನು ಕಾಣ್ಬುದನುಚಿತವೆಂದಾ | ಸತಿವಾಗುರೆ ಮರನೇರಿ ||
ಅತಿವೇಗದಿಂದಕೋಟರದೊಳು ಬೆರಲಿಟ್ಟು | ಹತವಾದಳಹಿಮುಖದಿಂದ ||೧೧೨||

ಸತ್ತಾವಿಂಧ್ಯಕನಾನಗರಿಯು ವೈ | ಶ್ಯೋತ್ತಮುನ್ನಷಭದತ್ತಂಗೆ ||
ಮತ್ತವನಬಲೆ ಪದ್ಮಶ್ರೀಗುದಯಿಸಿ | ಚಿತ್ತಜಸಂತೊಪ್ಪಿದನು ||೧೧೩||

ಸುತಗಿಭ್ಯಕೇತುವೆಸರನಿಟ್ಟಾ ವೈಶ್ಯ | ಪತಿಕಡುಸಂತಸದಿಂದ ||
ಅತಿಮಮತೆಯೊಳು ಜಯಂತನನಾಸುರ | ಪತಿಸಾಕುವೋಲ್ ಸಾಕಿದನು ||೧೧೪||
ಆ ವನಚರಿಯುಳಿದಾಪೊಳಲೊಳಗೋರ್ವ | ಧೀವರನಾಯಕಗೊಗೆದು ||
ಧೀವರವೆಸರಾಂತುತತ್ಕುಲದವರ್ಗೆ ತಾ | ನೇವರನಾಗಿರುತಿಹನು ||೧೧೫||
ಆಪಟ್ಟಣದೊಳ್ ಗಂಡುಗಳೊಳಗೆ ಕ| ಲಾಪಟುತೆಸೆವ ಸತ್ವ ||
ರೂಪವಿಕ್ರಮವಿತರಣದೊಳಿವನೆಯಿಂ | ದಾಪೃಥ್ವಿಪೊಗಳುತಮಿಹುದು ||೧೧೬||
ಈತೆರದಿಂದಿಭ್ಯಕೇತು ಭೂತಳದೊಳು | ಖ್ಯಾತಿಯಿಂದಿರಲಾಪುರದ ||
ಭೂತಳಪತಿ ನಾಗದತ್ತಗೆ ಸುದತಿಪ | ನೂತೆಸುಪ್ರಭೆಯೆಂಬಳಿಹಳು ||೧೧೭||
ಸುಗುಣಿಗಳವರೀರ್ವರ ಬಸಿರೊಳಗೋರ್ವ | ಮಗಳ್ ಸೌಂದರಿಯೆಂದೆಂಬ ||
ಬಗೆಸೆಗಂಗಳಬಾಲೆಮುದುವಿನಿಸಿ ಬಲ್ಲರ | ಬಗೆಯುಬಂಧನಕಿಕ್ಕುವಳು ||೧೧೮||
ಬಿಂಬಾಧರೆಯಾ ಸೌಂದರಿಗರಸ ಸ್ವ | ಯಂಬರ ಮಾಡಿಮುಂಚಿಪನು ||
ಇಂಬಾಗಿರಚಿಸಿಯುಳಿದನಾಡನೃಪರಿಕು | ರುಂಬವಬರಿಸಿದನಂದು ||೧೧೯||
ತರುಣಿಯುವರಿಯಿಪೆನೆಂದಾ ನೃಪಸುತ | ರುರು ಮೋದದಿಂ ಸ್ವಯಂವರಕೆ ||
ಬರಲಾಯೆಡೆಗಿಭ್ಯಕೇತು ವೈಶ್ಯಾತ್ಮ ಜ | ನಿರದೆ ತಾನಲ್ಲಿಗೈದಿದನು ||೧೨೦||
ಲಲನೆಯೆಲ್ಲವರಿರ್ದಂತಿಭ್ಯಕೇತುವಿ | ಗೆಳಸಿ ಮಾಲೆಯನಿಕ್ಕಿದಳು ||
ಉಳಿದಲೋಹವಬಿಟ್ಟು ಪೊನ್ನಾಳದಸಿ ಪ | ಜ್ಜಳಿಸುವ ಪಣವಿಟಿಪಂತೆ ||೧೨೧||
ಶುಭಲಗ್ನದೊಳು ನಾಗದತ್ತನೃಪತಿರತಿ | ನಿಭರೂಪವತಿ ಸೌಂದರಿಯನು ||
ಅಭಿನವಮದನಗೆ ಮದುವೆಮಾಡಿದನತಿ | ವಿಭವದೊಳಿಳೆಪೊಗಳ್ವಂತೆ ||೧೨೨||
ಆ ರಮಣೀಮಣಿಯೊಳಗಿಭ್ಯಕೇತು ಕು | ಮಾರನೊಸೆದುಕೂಡಿಹನು ||
ಗೌರಿಯೊಡನೆ ನೇಹದಿಂ ರಾಜಶೇಖರ | ನೋರಣದಿಂ ಕೂಡಿದಂತೆ ||೧೨೩||
ಅತನುಸದೃಶನಿಂತಿರೆ ನಾಗದತ್ತಭೂ | ಪತಿಕೆನ್ನೆಯನರೆಗಂಡು ||
ಗತಕೆಕಾರಣವಿದಾತನುವೆಂದು ವೈರಾಗ್ಯ | ಯುತನಾದನಿಳೆಪೊಗಳ್ವಂತೆ ||೧೨೪||
ತನಗೆ ನಂದನರಿಲ್ಲದಕಾರಣದಿಂದ | ಜನಪತಿಯಾನಾಗದತ್ತ ||
ತನುಜೆಸೌಂದರಿಯ ವಲ್ಲಭನಿಭ್ಯಕೇತುವಿ | ಗನುನಯದಿಂ ಪಟ್ಟಗಟ್ಟಿ ||೧೨೫||
ಭಾವಶುದ್ಧಿಯೊಳು ದೀಕ್ಷೆಯುಧರಿಯಿಸಲಾ | ಭಾವಜನಿಭನಿಭ್ಯಕೇತು ||
ಮಾವನರಾಜ್ಯಕೆ ತಾನೆಯೊಡೆಯನಾಗಿ | ಭೂವಿನುತನು ಮಾಗಿಹನು ||೧೨೬||
ಇದು ಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
**ಸುದನಾರಿ ನೇಮಿಜಿನೇಶ ಸಂಗತಿಯೊಳ | ಗೊದವಿದ ಸಂಧಿಗಳೆರಡು ||೧೨೭||**

# ೩. ಚಿಂತಾಗತಿಯ ನಿರ್ವೇಗಸಂಧಿ.



ಶ್ರೀಮದಮರಪತಿ ಮಕುಟಕೀಲಿತಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಜನಸುತನಾಗಿಯಚಲನು ಗೆಯ್ಯುತಿರಲೊಂದು | ದಿನದೊಳಗಿಂದ್ರವೈಭವದಿ ||
ಮನುಜಾಧೀಶರ ನಡುವೆ ಓಲಗದೊಳ | ಗನುರಾಗದಿಂದಿರುತಿರಲು ||೨||

ಮತ್ತಗಜದ ಮರಿಯನು ಸಿಂಗಸಿಸುವನು | ಕತ್ತರಿಸಿಗದ ಕರುವನು ||
ಇತ್ತು ಕಂಡನು ಧೀವರಪತಿಯಾ ಭೂ | ಪೋತ್ತಮನಿಷ್ಟಕೇತುವನು ||೩||

ಇಂತು ಕಂಡಾಧೀವರಪತಿಗರಸ ಜ | ನ್ಮಾಂತರಮೋಹಕಾರಣದಿ ||
ಸಂತಸದಿಂ ಸೇನಾಪತಿಪದವಿಯ | ನಂತರಿಸದೆ ಕೊಟ್ಟನಾಗ ||೪||

ತನಗೆ ಪರಮವಿಶ್ವಾಸಿಯಹಾತನೆಯಾಗಿ | ಜನಪದವನು ಪರಿವೃಢನು ||
ಅನುರಾಗದಿಂದಾಳುತಿರ್ದೊಂದಾನೊಂದು | ದಿನದೊಳು ಬನಕೆಯ್ದಿದನು ||೫||

ಆ ನಂದನವೊಳಗತಿನಿರ್ಮಲತೆಂಬ | ಜೈನಮುನಿಗಳಿರೆ ಕಂಡು ||
ಸಾನಂದದಿಂದ ವಂದಿಸಿ ಧರ್ಮವ ಕೇಳಿ | ತಾನಿಂತೆಂದಾಡಿದನು ||೬||

ಭೂವಿಶ್ರುತಬೋಧಸಿಂಧುವೆ ನನಗೀ | ಧೀವರನೊಳಗತಿಮಮತೆ ||
ಆವರಿಸಿದುದೇನುಕಾರಣಮೆನಲಾ | ಭಾವಜ್ಞನಿಧಿಯಿಂತೆಂದ ||೭||

ಪೋದ ಭವದೊಳು ನೀ ವಿಂಧ್ಯಕನಾದಾಗ | ಲೀಧೀವರನು ನಿನ್ನೊಲವಿನ ||
ಕಾದಲೆಯಾಗಿರ್ದಳೆಂದಾ ಜನ್ಮದೊ | ಳಾದ ಪ್ರಪಂಚವೆಲ್ಲವನು ||೮||

ಸಿರಿವಿಸಿಯದರಿಂದೀ ಧೀವರನೊಳು | ಹಿರಿದು ಮಮತೆಯೊದವಿದುದು ||
ಧರಣಿಪ ಕೇಳೆಂದಾಯತಿಪುಂಗವ | ನೊರೆಯಲಂತದನು ಲಾಲಿಸುತ ||೯||

ಆವಾವ ಭವದೊಳಗಾವಾವ ಜೀವವ | ದಾವ ಪರಿಯೊಳವ್ವುದೆಂದು ||
ಭೂವರನಾ ಸಂಸಾರನಾಟಕಕತಿ | ಹೇವವ ತಾಳಿದನಾಗ ||೧೦||

ಇಂತು ನಿರ್ವೇಗಪರಾಯಣನಾಗಿ ಭೂ | ಕಾಂತಸುಕೇತುವೆಂದೆಂಬ ||
ಕಂತುಸದೃಶನಪ್ಪಸುತಗೆ ಪಟ್ಟವ ಕಟ್ಟಿ | ತಾಂ ತಳೆದನು ದೀಕ್ಷೆಯನು ||೧೧||

ಕಾಂತಸುತ್ತ್ರಮದೀಕ್ಷೆಗೊಳಲು ಸೌಂದರಿದೇವಿ | ತಾಂ ತಳೆದಳು ದೀಕ್ಷೆಯನು ||
ಮುಂತೆ ವಸಂತಬಂದೊಡೆ ಮಲ್ಲಿಕಲತೆ | ಪಿಂತೆ ಬಾರದೆ ಸುಮ್ಮನಿಹುದೆ ||೧೨||

ಆ ವ್ರತಪತಿಯ ಕೋಮಲಪದಕಮಲವ | ಧುವ್ರತನಾಗಿ ಧೀವರನು ||
ತೀವ್ರಪಾಪಲೋಪಿತವೆಂದೆನಿಸುವ | ಅಣುವ್ರತವನು ಧರಿಸಿದನು ||೧೩||

ಬೋಧಶರಧಿ ಇಕ್ಷ್ವಾಕೇತುಮುನಿಪನು ಸ | ಮಾಧಿವಡೆದು ನಿಮಿಷದೊಳು ||
ಸಾಧಾರಣವಲ್ಲದ ಸೌಖ್ಯಪದವೀವ | ಸೌಧರ್ಮದೊಳು ಜನಿಸಿದನು ||೧೪||

ಶ್ರೀನಿಲಯಾಖ್ಯದ ನವಮಣಿಖಚಿತವಿ | ಮಾನದನುಳುವಾಸಿಸೊಳು ||
ತಾನಿರದುದಯಿಸಿ ಶ್ರೀದೇವನೆಂಬಾ | ಮಾನಿತನೆಸರವಡೆದನು ||೧೫||

ನಿಃಪ್ರಪಂಚವ್ರತದಿಂದಾ ಸೌಂದರಿ | ಯುಪ್ರತಿವಡೆದಕಲ್ಪದೊಳು ||
ಸುಪ್ರಭವೆಂಬ ವಿಮಾನದೊಳಗೆ ಮನು | ಲಪ್ರಭನಾಗಿ ಪುಟ್ಟಿದಳು ||೧೬||

ಧೀವರನಾಕಲ್ಪದೊಳು ತೊಳತೊಳಗುತಿ | ಪ್ಪಾವಿದ್ಯುತ್ಪ್ರಭವೆಂಬ ||
ಆ ವಿಮಾನದೊಳು ಶ್ರುತಪ್ರಭನೆಂಬಕಾಂತ | ದೇವನಾಗಿ ಜನಿಸಿದನು ||೧೭||

ಆ ವಿದ್ಯುತ್ಪ್ರಭನಾವಿಮಲಪ್ರಭ | ದೇವರೀರ್ವರೊಳನವರತ ||
ತೀವಿದೊಲವಿನಿಂದ ಸುರಲೋಕಸೌಖ್ಯವ | ನೋವದೆ ಭೋಗಿಸುತಿರ್ದರ್ ||೧೮||

ಅಂದವಡೆದ ಪುಷ್ಕರಾರ್ಧದ ಪಡುವಣ | ಮಂದರದಪರವಿದೇಹ ||
ಎಂದೆಂಬ ವಸುಧೆಯ ಸೀತೋದಾನದಿ | ಯಿಂದ ಬಡಗಣ ಭಾಗೆಯೊಳು ||೧೯||

ಭಾಸಿಪ ಗಂಧಿಲವಿಷಯಮಿಹುದು ಮ | ತ್ತಾಸೀಮೆಯೊಳು ವಿಜಯಾದ್ರಿ ||
ಭೂಸುದತಿಯಮುದ್ದುವೊಗದೊಳುರಂಜಿಪ | ನಾಸಿಕದಂತೊಪ್ಪುತಿಹುದು ||೨೦||

ಆದರ ಕುಬೇರದಿಶಾಶ್ರೇಣಿಯೊಳು ಸಂ | ಪದಕೆ ತಾನೇ ತಾಣವೆನಿಸಿ ||
ವಿದಿತವಾಗಿ ಸೂರ್ಯಪ್ರಭವೆಂಬ ನಾ | ಮದ ಪುರವೊಂದು ರಂಜಿಪುದು ||೨೧||

ಆ ಪ್ರಾಚುರ್ಯವಡೆದ ಪುರದೊಳು ಸೂ | ರ್ಯಪ್ರಭನೆಂಬ ಖೇಚರನು ||
ಅಪ್ರತಿಮಪ್ರತಾಪದಿ ಪಾಲಿಪನು ಧ | ರಾಪ್ರಮುದೆಯನನವರತ ||೨೨||

ಆರಾಜೇಂದ್ರಚೂಡಾರತ್ನಕೆ ಗಾಂ | ಧಾರಿವೆಸರ ಸತಿಯಿಹಳು ||
ನೀರಭುಜಾಗಾರದ ಸುಕುಮಾರಿ ಮು | ರಾರಿಗೆ ಮಡದಿಯಾದಂತೆ ||೨೩||

ಆ ಮಿಥುನದ ಗರ್ಭದೊಳಗಿಕ್ಷ್ವಕೇತುಚ | ರಾಮರನಾ ಶ್ರೀದೇವ ||
ಆ ಮೊದಲಮರಾವನಿಯಿಂದಿಳಿದು ಸು | ಪ್ರೇಮದ ಸುಕುಮಾರನಾದ ||೨೪||

ಅವನಿಗೆ ಚಿಂತಾಗತಿಯೆಂಬ ನಾಮವ | ನವಿನಯದಿಂದಾ ಖಚರ ||
ಸುವಿಧಾನದೊಳು ಕೊಡಲೆಲ್ಲಾ ಕಲೆಗೂಡಿ | ಕುವಲಯಪತಿಯೆನೆಬೆಳೆದ ||೨೫||

ಬಳಿಕವರೊಡಲೊಳಗಾ ಸುಪ್ರಭದೇವ | ನಿಳಿದು ಸ್ವರ್ಗದಿನೆಯ್ದಿ ಜನಿಸಿ ||
ತುಳಿಲಾಳಾಗಿಮನೋಗತಿನಾಮವ | ತಳೆದು ಜವ್ವನವೇರಿದನು ||೨೬||

ಮತ್ತಾಧೀವರಚರನು ವಿದ್ಯುತ್ಪ್ರಭ | ನುತ್ತಮದೇವನಲ್ಲಿಂದ ||
ನೆತ್ತಿಚಪಲಗತಿಯೆಂಬೊಂದು ಪೆಸರನು | ಪೊತ್ತು ಸಂಭವಿಸಿಯೊಪ್ಪಿದನು ||೨೭||

ವರದರುಶನಬೋಧಚರಿತದಂತಾಮೂ | ವರುಸೋದರರೊಡಗೂಡಿ ||
ಇರಲಾಪರ್ವತದಾಶ್ರೇಣಿಯೊಳೊಂದು | ಪುರವರಿಂಧರವೆಂಬುದಿಹುದು ||೨೮||

ಅದರೊಳರಿಂಜಯನೆಂಬ ಖೇಚರಪತಿ | ಮದನಸದೃಶನಿರಲವಗೆ ||
ಮುದವತ್ಪ್ರಾಯಿತ ಜಿತಸೇನೆಯೆಂಬೋರ್ವ | ಸುದತಿವಲ್ಲಭೆಯಾಗಿಹಳು ||೨೯||

ಕ್ಷಿತಿಪನರಿಂಜಯಖೇಚರೇಶ್ವರಗಾ | ಜಿತಸೇನೆಗೆ ಜನಿಸಿದಳು ||
ರತಿನಿಭೆ ವಿನುನಿದಾಪರಮೊಗದ ವಿಲಾಸ | ವತಿಯೆಂಬೋರ್ವಕುಮಾರಿ ||೩೦||

ಸಿರಿಯನ್ನೈಸಿರಿಯೊಳು ರತಿಯ ರೂಪಿನೊಳಾ | ಸರಸತಿಯನು ಜಾಣ್ಮೆಯೊಳು ||
ಸರಿತನಗಲ್ಲವೆಂದಾಖೇಚರ ಭೂ | ವರಸುತೆ ನಗುತಿರಲವರ ||೩೧||

ಚತುರತೆ ಚಲ್ವೈಸಿರಿಜವ್ವನದೊಳ | ಪ್ರತಿಪುರನಿಪಖಚರರೊಳು ||
ಗತಿಯುದ್ಧದೊಳು ತನ್ನ ಗೆಲಿದವನೇನಿಜ | ಪತಿಯೆಂದು ಡಂಗುರವ್ಪೊಯಿಸೆ ||೩೨||

ಆ ಡಂಗುರದನಿಗೇಳಿ ಪಿಜಾಸ್ವದರ | ನಾಡ ನರೇಂದ್ರನಂದನರು ||
ಗಾಡಿಕಾತಿಯೊಳೋವಪೆ ಗತಿಯುದ್ಧವ | ಮಾಡುವೆವೆಂದೆಯ್ದಿದರು ||೩೩||

ಆಗ ಚಪಳಗತಿಯಾಗಮನೋಗತಿ | ರಾಗದಿಂ ತನ್ನೊಡಬರಲು ||
ಬೇಗಧಿಂದಾಯೆಡೆಗೆಯ್ತಂದನು ಚಿಂ | ತಾಗತಿ ಖಚರಕುಮಾರ ||೩೪||

ಆಸಮಯದೊಳಾಗರಿಂಜಯಖಚರ ವಿ | ಲಾಸವತಿಯಕೂಡಿಕೊಂಡು ||
ಭಾಸುರವಡೆದಾಗಿರಿಯ ಜಿನೇಂದ್ರನಿ | ವಾಸಮನಿರದೆಯ್ದಿದನು ||೩೫||

ಜಿನಗೃಹವನು ಮೂರು ಸೂಳ್ವರಬಲವಂದು | ಜಿನರನರ್ಚಿಸಿ ಭಕುತಿಯೊಳು ||
ವಿನಯಮತಿಯಾಗಿ ವಿಮಲಮಣಿ ಮಂಟಪ | ಕನುನಯದಿಂದೈದಿದಳು ||೩೬||

ಬಳಿಕಾಬಳಿಯರ್ಚಿಸಿದಗತಿಯುದ್ಧ ನ | ಲ್ಲಲಿತಪೀಠದೊಳಾಸತಿಯ ||
ಕೆಳದಿ ಲಲಿತೆಯೆಂಬಳೊಂದು ಪೂವಿನಮಾಲೆ | ದಳೆದನುರಾಗದಿನಿಂದು ||೩೭||

ಈರಜತಾದ್ರಿಯೊಳೀ ಬಿಟ್ಟಪೂವಮಾಲೆ | ಧಾರಿಣಿಗಿಳಿಯದಮುನ್ನ ||
ಮೇರುಗೆ ಪರಿದು ಬಸದಿಯೊಕ್ಕುಮಗುಳ್ದಿದ | ಭೋರನೆ ಪಿಡಿವವರೆಯ್ದಿ ||೩೮||

ಎಂದಾಸುದತಿಗೇಳೆ ಸಮುಗಿದಶಕ್ಯಮೆ | ಇಂದಿನ ದುರ್ಘರವಾದ ||
ಎಂದುಬಂದಾಸ್ವಪತತಿ ಹೆರಸಾರಲಿಂ | ತೆಂದು ಚಿಂತಾಗತಿನುಡಿದ ||೩೯||

ಈ ಗತಿಯುದ್ಧಮನಾಸೊಮ್ಮೆಮಾಡುವೆ | ಬೇಗದಿ ನೋಡಿಸೀವೆಂದು ||
ರಾಗದಿಂದಾಗತಿಯುದ್ಧಶಿಲಾಪಟ್ಟ | ಕಾಗಂಡುಗಲಿನಡೆತಂದ ||೪೦||

ಕಡುವೇಗದಿಂದಲ್ಲಿನಿಂದ ಬಿಜ್ಜಾದರ | ನೆಡಗಡೆಗೆಯ್ತಂದುನಿಂದ ||
ಬಡನಡುವಿನ ಭಾವೆಗೆ ಸಾತ್ವಿಕಭಾವ | ವಡಸಿದುದತಿವೇಗದೊಳು ||೪೧||

ಅನಿತರೊಳವಧಾನಮೆಂದು ಪೂವಿನಮಾಲೆ | ಯನು ಮುಷ್ಟ್ಯದೊಳುನಿಂದಿರ್ದ ||
ವನಜವದನೆ ಬಿಡುವಾಗ ಪಾರಿದರಾ | ಘನಪಥಕಾ ಈರ್ಷರಂದು ||೪೨||

ಅರಲಮಾಲೆಯು ಬೀಳದಮುನ್ನ ವಿಜಯಾರ್ಧ | ಗಿರಿಯಿಂದ ಮೇರುಗೆಪಂದು ||
ಅರುಹನಗೃಹಕೆಯ್ದಿ ತಿರುಗಿಹಿಡಿದನದ | ನರಮಗನವಳಪಿಂದುಳುಪಿ ||೪೩||

ದಿಟ್ಟಿಗಳಿವೆವೊಯ್ದ್ಯದಮುನ್ನ ಕುರಿತೆಡೆ | ಮುಟ್ಟಿಮಗುಳಿಹಾರಿಬಂದು ||
ಬಿಟ್ಟೆಡೆಯಿಂದಾಪೂವಮಾಲೆ ಪೃಥಿವಿಯ | ಮುಟ್ಟದಮುನ್ನ ಹಿಡಿದನು ||೪೪||

ಗುಮಧಮ್ಮಿಲ್ಲೆ ವಿಶಾಲಲೋಚನೆ ಪೀ | ವರಕುಚೆ ಪೀನನಿತಂಬೆ ||
ಕರಿನಿಭಗಮನೆಯುಸ್ಮತ್ತ್ರಯೌವನೆ ಖೇ | ಚರಗೆ ಹಿಂದುಳಿದೆಯ್ದಿದಳು ||೪೫||

ಮಾಲೆಯಹಿಡಿದ ಮಹಾನುಭಾವನಕಂಡು | ಲೋಲಲೋಚನೆ ಚಿತ್ತದೊಳು ||
ಸೋಲವತಾಳಿಯಾತನಕೊರಲೊಳು ಪೂ | ಮಾಲೆಯನಿಕ್ಕಲೆಯ್ದಿದಳು ||೪೬||

ಅರಲಪಾಶವಬೀಸಿಯಾ ಉರುಳಿಂನೃಪ | ಪರಸ ಕೊರಲಬೀರಲೆಂದು ||
ಸ್ಮರಸತಿನಡೆದು ಒಪ್ಪವೊಲು ಮಾಲೆಯನಾಂತು | ಬರಲವಳನು ಕಂಡನಾಗ ||೪೭||

ಈಸತಿಗೀಬಂದಬಾಂಬಟ್ಟಿಗರೆಲ್ಲ | ರಾಸೆಮಾಡಿದರಲ್ಲದೆಯೂ ||
ನಾಸಿಗರೆನ್ನೀಯನುಜಾತರಿಚ್ವೈಸಿ | ಯೋಪರಿಸದೆತಳರಿದರು ||೪೮||

ಓರ್ವಳೀಬಾಲಕಿ ಬಹುರೂಪುವಡೆದಂತೆ | ಸರ್ವರೆದೆಗೆಬಂದಳದುತಾ ||
ಕರ್ವುವಿಲ್ಲನಗೊಡ್ಡಾಟವಲಾಯೆಂದು | ಉರ್ವೀಶನಚ್ಚರಿವಟ್ಟು ||೪೯||

ಘನತರಮಪ್ಪಭಾವನೆಯ ಭಾವಿಸುತಿರೆ | ಸನೆಯದಂಡೆಯ ಕೊಂಡುಬರ್ಪ ||
ವನಿತೆ ವಿಲಾಸವತಿಯನರಮಗನೊಂ | ದಿನಿಸುನಿಲ್ಲೆಂದಿಂತುನುಡಿದ ||೫೦||

ಎನ್ನನೆಲುವು ಎನ್ನಣುಗಸನುಜನದು | ಕನ್ನೆ ಕೇಳ್ನೀನವರ್ಗೊಳಗೆ ||
ನಿನ್ನ ಮನಕೆ ಬಂದವರಿಗೆ ಮಾಲೆಯ | ಚೆನ್ನಾಗಿ ವರಿಯಿಸೆಂದೆಸಲು ||೫೧||

ಆ ನುಡಿಗೇಳಿ ಹೆಗ್ಗರಹೊಡೆದಂತಾ | ಮಾನಿನಿಸವ್ವೆರಗಾಗಿ ||
ನಾನೊಂದೆಣಿಕೆಮಾಡಿದೊಡಿನ್ನ ದುಷ್ಕೃತ | ತಾನೊಂದೆಣಿಸಿದುದೀಗ ||೫೨||

ಹಸೆಯೊಳು ಹಾವುಹರಿಯಿತೆಂಬ ನಾಣ್ನುಡಿ | ಹಸನಾಯಿತೀಗೆನ್ನೊಳೆಂದು ||
ಮಿಸುನಿಮಾವರೆಮೊಗದಬಲೆ ಚಿಂತಿಸುತಾ | ರಸಿಕನೊಳಿಂತಾಡಿದಳು ||೫೩||

ಗತಿಯುದ್ಧದೊಳಗೆನ್ನ ಸೋಲಿಸಿದವನೇ | ಪತಿ ಈಜನ್ಮಕೆಂದೊರೆದು ||
ಕ್ಷಿತಿಯೆಲ್ಲಮರಿವಂದದೊಳು ಪ್ರತಿಜ್ಞೆಯು | ಮತಿಹೀನೆ ನಾನುಮಾಡಿದೆನು ||೫೪||

ಆದರಿಂದನೀನೇ ಪತಿಯುಸಗಭಿನವ | ಮದನಕೇಳುಳಿದವರೆಲ್ಲ ||
ಮುದದಿಂದೊಡಹುಟ್ಟಿದವರ ಸಮಾನವು | ತಿದಕಿನ್ನು ಸಂದೆಗಮೇಕೆ ||೫೫||

ಇಂತು ಪ್ರತಿಜ್ಞೆಯುಮಾಡಿಯಾಯೆಡೆಯಿಂ | ಕಾಂತಾಮಣಿ ನಡೆತಂದು ||
ಕಂತುಹರಣಜಿನರೇ ಗತಿಯುನುತಾಗ | ತಾಂ ತಪಗೊಳಲೆಣಿಸಿದಳು ||೫೬||

ಆಸಿದ್ಧಕೂಟದ ಚೈತ್ಯಬಿಂಬದನುಂದೆ | ಯಾ ಸತಿತನ್ನೊಡವಂದ ||
ಸಾಸಿರ್ವರಬಲೆಯರೊಡಗೂಡಿ ದೀಕ್ಷೆಯು | ನೋಸರಿಸದೆಕೊಂಡಳಾಗ ||೫೭||

ಮೊದಲು ತನಗಾಸಸುಸಗೆವೆತ್ಯಶಶಿಸಿಭ | ವದನಕೆರಗೆನೆಂಬವನನು ||
ಸುದತೀಮಣಿ ದೀಕ್ಷಾಮುಖದಿಂ ನಿಜ | ಪದಕೆರಗಿಸಿಕೊಂಡಳಾಗ ||೫೮||

ಚದುರೆ ಚಮತ್ಕಾರದೊಳು ದೀಕ್ಷೆಯನಾಂತು | ದದುವೆನಿರ್ವೇಗವುಮಾಗಿ ||
ಸದಮಲಗುಣಿಚಿಂತಾಗತಿ ದೀಕ್ಷೆಯು | ಪಡೆದುಕೈಕೊಳಲೆಣಿಸಿದನು ||೫೯||

ಅಪಗತಮೋಹಿಮನೋಗತಿಮತ್ತಾ | ಚಪಲಗತಿಯುಮೊಡನಂದ ||
ನೃಪರಿಚ್ಛಾಸಿರಗೂಡಿ ಚಿಂತಾಗತಿ | ತಪವಧರಿಸಲೆಣಿಸಿದನು ||೬೦||

ವಿಘುಮುಖಿಯೊಳು ಮದುವೆಯುಸುಳಿದುಪಶಮ | ವಘುವಿನೊಡನೆಮದುವೆಯನು ||
ವಿಧಿಪೂರ್ವಕದಮುವರರೆಂಬ ಮುನಿಯ ಸ | ನ್ನಿಧಿಯೊಳುತಡೆವೊಪ್ಪಿದನು ||೬೧||

ಆ ಉತ್ತಮಮುಪ್ಪತಪದೊಳು ನೆಗಳಿಸಿ | ಜಾಯುಷ್ಯಾವಸಾನದೊಳು ||
ತಾವು ಮಹೇಂದ್ರಕಲ್ಪದೊಳು ಸಾಮಾನಿಕ | ದೇವರಾಗಿ ಜನಿಸಿದರು ||೬೨||

ಅವರು ಮೂವರೊಳು ಚಿಂತಾಗತಿಚರದೇವ | ದಿವಿಜಸುಖಮನನುಭವಿಸಿ ||
ಜವನಾಜ್ಞೆಯಿಂದ ಬಂದಪರಾಜಿತನೆಂ | ಬವನಾದವನೀಸುಕೇಳಾ ||೬೩||

ಜಂಬೂದ್ವೀಪದ ಮೂಡಗಡೆಯ ಸೀತೆ | ಯೆಂಬನದಿಯ ತೆಂಕಗಡೆಯ ||
ಇಂಬಿನ ಪುಷ್ಕಳಾವತಿಯೆಂಬ ವಿಷಯದ | ಬಾಂಬಟ್ಟಿಗರಬೆಟ್ಟದೊಳು ||೬೪||
ಸೊಗಯಿಪಬಡಗಣದೆಸೆಯ ಶ್ರೇಣಿಯೊಳಿಪ್ಪ | ಗಗನವಲ್ಲಭಪುರವರಸು ||
ಗಗನಚಂದ್ರನುಸೆಂಬ ಗಗನಚರನಸತಿ | ಗಗನಸೌಂದರಿಯೆಂಬಳಿಹಳು ||೬೫||
ಅವರೀರ್ವರಿಗೆ ಚಿಂತಾಗತಿಯೊಡಹುಟ್ಟಿ | ದವರಾಸಗ್ಗದಾಯುಷ್ಯ ||
ತವೆಯಲುಮುಂದೆಸವೆಸ್ಗೊಡಲೊಳು ಶಶಿ | ರವಿಗಳುದ್ಭವಿಸುವಂದದೊಳು ||೬೬||
ಮಿಸುಗುವಮಿತಗತಿಯಮಿತರಾಜನುಮೆಂಬ | ಪೆಸರಾಂತುದಯಂಗೆಯ್ದು ||
ಪೊಸಜವ್ವನದೊಳು ವೈರಾಗ್ಯಂಗೆ ಜನಿ | ಯಿಸಿ ಸುಪ್ರಭಜಿನರಲ್ಲಿ ||೬೭||
ದೀಕ್ಷೆವಡೆದು ಚಾರಣತ್ವಮನಾಂತ ಮು | ಮುಕ್ಷುಗಳಾ ನಾವ್ರುಕೇಳ್ವಿಸ್ನ ||
ಈಕ್ಷಿಸಲೆಂದೆಲೆಯಪರಾಜಿತ ನಾ | ಮೀಕ್ಷಿತಿತಳಕೆಯ್ದುದೆವು ||೬೮||
ತಿಂಗಳಂತೆಯಪರಾಜಿತನಿನಗೊಂದು | ತಿಂಗಳಾಯುವದರಿಂದ ||
ಪಿಂಗಿಸಿಸಕಲಪರಿಗ್ರಹವನು ಬೇಗ | ಸಂಗೊಳಿಸಧಿಕಪುಣ್ಯವನು ||೬೯||
ಎಂದುಸುಡಿದು ಧರ್ಮರಾಭಸಿಸಗೆಯಾಗ | ಲೆಂದಾಗಸಕವರೆಯ್ದು ||
ಕಂದರ್ಪನಿಭನಿತ್ಯಲವರನನೆವೃತಿ | ಯ್ದುಂದನು ನಿಜಪುರವರಕೆ ||೭೦||
ಆ ತಪಸ್ವಿಗಳು ಪೇಳಿದವಾಕ್ಯೆಯೊಳು ಧ | ರಾತಳಭಾರವೆಲ್ಲವನು ||
ಪ್ರೀತಿಂಕರನೆಂಬ ಪ್ರಿಯತನುಜಗೆ ಸ | ತ್ಪ್ರೀತಿಯಿಂದವೆಕೊಟ್ಟನಾಗ ||೭೧||
ನಂದೀಶ್ವರದನೋಂಪಿಯನೆಂಟುದಿವಸ ಮಾ | ನಂದದಿಂಗೆ ಮಾಡಿಬಳಿಕ ||
ಒಂದಿದಸಕಲಪರಿಗ್ರಹವನು ಪುಲ್ಲಿ | ನಿಂದಲಿಕಡೆಮಾಡಿ ತೊರೆದು ||೭೨||
ತಳುವದೆಮೊದಲುಬಾಂಧವಬಂಧನವಕಿಳ್ತು | ಒಳಿಕ ಕುಂತಳಸಮಿತಿಯನು ||
ಘಳಿಲನೆಪಡೆದು ಸನಾಧಿವಿಧಿಯನಂದು | ತಳೆದನಿಂತಪರಾಜಿತನು ||೭೩||
ಆ ಪಗಲಿಪ್ಪತ್ತೆರಡರೊಳಾ ಪಾ | ಯೋಪಗಮನಸನ್ಯಸನದಿ ||
ಆ ಪರಮಾಯುಷ್ಯಮಿಪ್ಪತ್ತಿಚಾಭ್ಯಗ | ರೋಪಮಮಾಗಿ ರಂಜಿಸುವ ||೭೪||
ಉರುಸುಖವೀವಚ್ಯುತಕಲ್ಪದಾಶಾಂತ | ಕರಮೆಂಬಮಣಿವಿಮಾನದೊಳು ||
ಇರದೆ ಜನಿಸಿಯಚ್ಯುತೇಂದ್ರಪೆಸರನಾಂತು | ಸುರಸತಿಯರನೊಲಿಸಿದನು ||೭೫||
ಭೋಗವನೀಂಟುವ ಸುರಪನತೃಪ್ಣೆ | ಯೋಗವೆಯಿಪ್ಪತ್ತೆರಡು ||
ಸಾಗರೋಪಮಾಯುಷ್ಯವನೀಂಟಿ | ತ್ಯಾಗೆಯ್ದುಕರ್ಮದ ತೆರನ ||೭೬||

ನಿರುಪಮ ಜಂಬೂದ್ವೀಪದೊಳೊಪ್ಪುವ | ಭರತಾರ್ಯಖಂಡಮಧ್ಯದೊಳು ||
ಕುರುಜಾಂಗಣದೇಶವಿಹುದಲ್ಲಿ ಹಸ್ತಿನ | ಪುರವೆಂಬುದಿಹುದು ಶೋಭೆಯೊಳು ||
ಆ ಪುರವನು ಪಾಲಿಸುವನು ಸಕಲಕ | ಲಾಪನಂತಕನಿಭ ಕೋಪ ||
ರೂಪ ಮಾನವಮನಸಿಜ ನೃಪಕುಲಮಣಿ | ದೀಪ ಶ್ರೀಚಂದ್ರನೆಂಬವನು ||೭೮||
ಆ ಮಹೀಪಾಲಕನಾ ಶ್ರೀಚಂದ್ರಂಗೆ | ಶ್ರೀಮತಿಯೆಂದೆಂಬವಳು ||
ಭಾಮೆಯಾದಳುದಾಸದೊಳು ಶ್ರೀಮತಿಯಿಂ | ಕಾಮಧೇನು ಕಲ್ಪವೃಕ್ಷವೆನಿಸಿ ||
ಆ ಮಹೀಪಾಲ ಶ್ರೀಚಂದ್ರರಾಜೇಂದ್ರನ | ಶ್ರೀಮತಿಯಮಲಗರ್ಭದೊಳು ||
ರಾಮಣೀಯಕಮಸ್ತಸೌಖ್ಯವನುಂಡಚ್ಯು | ತಾಮರಬಂದು ಪುಟ್ಟಿದನು ||೮೦||
ಅನುರಾಗವೆದೆಯೊಳಂಕುರಿಪ ಹಜೆಯಲಾ | ಮನುಜೇಶ ಶುಭಲಗ್ನದೊಳು ||
ತನುಜಾತಗೆ ಸುಪ್ರತಿಷ್ಠವೆಸರನತಿ | ವಿನಯದಿಂದಲಿಮಾಡಿದನು ||೮೧||
ನಂದನಗೇರುಂಜವ್ವನ ನೊಡವೆಯಾ | ನಂದದಿನಾ ಶ್ರೀಚಂದ್ರ ||
ತಂದು ಮದುವೆಮಾಡಿದನರಮಗಳು ಸು | ನಂದಾದೇವಿಯೆಂಬವಳ ||೮೨||
ಆರಿಕೆವಡೆದ ಸುಪ್ರತಿಷ್ಠಕುಮಾರಕ | ನಿರವನೊರೆವ ಪರಿಯವನು ||
ನೆರೆ ತಳೆಯಲು ಶ್ರೀಚಂದ್ರಮಹೀಶಗೆ | ಪರಿದುದು ರಾಜ್ಯವಿಮೋಹ ||೮೩||
ನೆಟ್ಟನೆ ನಿರ್ವೇಗಮನವನಾವರಿಸಲು | ವಿಟ್ಟತನದಿಭೂವರನು ||
ಕಟ್ಟೊಲವಿಂ ಸುಪ್ರತಿಷ್ಠಗೆ ಪಟ್ಟವ | ಕಟ್ಟಿ ದೀಕ್ಷೆಯನಾಂತನಿತ್ತ ||೮೪||
ಆ ಸುಪ್ರತಿಷ್ಠರಾಜೇಂದ್ರಶಶಾಂಕಗೆ | ಯಾ ಸುನಂದಾವಲ್ಲಭೆಗೆ ||
ಭಾಸುರಮೂರ್ತಿಸುದೃಷ್ಟವೆಸರನಾಂ | ತಾ ಸುಕುಮಾರಪುಟ್ಟಿದನು ||೮೫||
ಅಪ್ರತಿಮಪ್ರತಾಪದಿನಾ ಸಾಲಧ | ರಾಪ್ರಮದೆಯನೊಲವಿಂದ ||
ಸುಪ್ರತಿಷ್ಠನು ತನ್ನ ಘನಬಾಹುವಿನೊಳು | ಸುಪ್ರತಿಷ್ಠೆಯಮಾಡಿದನು ||೮೬||
ಇಂತಿಪುತಾನೃಪನೊಂದಾನೊಂದು ದಿ | ನಾಂತದೊಳುಪ್ಪರಿಗೆಯನು ||
ಸಂತಸದಿಂಪೇರಿದನುಸುರಪತಿ ವೈಜ | ಯಂತಮನೇರುವಂದದೊಳು ||೮೭||
ಮುತ್ತಿನೆಗ್ಗದಹಾಸಿನ ಹೊರೆಯೊಳು | ತೃಪ್ತಿಯುಪ್ಪುದತೋರುವಂತೆ ||
ಪೆತ್ತನೆಸೆವ ಹಂಸತೂಳತಲ್ಪದಮೇಲೆ | ಚಿತ್ತಜನಿಭನೊಪ್ಪಿದನು ||೮೮||
ಉದಯಪರ್ವತದೊಳುತ್ಪಲಪತಿತಾರಾ | ಸುದತೀಜನದಮಧ್ಯದೊಳು ||
ಮುದದಿನೋಲಗದೊಳಿಪ್ಪಂತಾನೃಪನಿಂದು | ವದನೆಯರಿಂದಲೊಪ್ಪಿದನು ||೮೯||

ಇಕ್ಕೆಲದೊಳು ಚಾಮರವನುಬೀಸುವ | ಸುಕ್ಕುಗುರುಳಸೀರೆಯರ ||
ಸೊಕ್ಕುಗಂಗಳ ರುಚಿಸೂಸಲು ನೃಪಮುತ್ತ | ನಿಕ್ಕಿದಾದವಿನೊಪ್ಪಿದನು ||೯೦||

ಚಾರುನಕ್ಷತ್ರ ಸಹಸ್ರಲೋಚನನಾ | ಕಾರಕಳ್ತಲೆಯೆಂಬಗಿರಿಯ ||
ಆರಯ್ಯುದಿಟ್ಟಕುಲಿಶವೆಂಬಂದದಿ | ಭೋರೆನೆಬೀಳ್ವುದೊಂದುಳ್ಕ ||೯೧||

ಧರಣೀತಳವನುಡುವೆನೆಂದಂದಾ | ಸುರನೋವದೆತೆಗೆದೆಚ್ಚ ||
ಉರಿಯುಬಾಣದಬಗೆಯಂತೆ ಬೀಳ್ವಾ ಉಳ್ಕ | ನಿರದೆನೃಪತಿಕಂಡನಾಗ ||೯೨||

ಕಾರಿರುಳೆಂಬ ಕಾಂತೆಯ ಕಬರಿಯ ಕಲು | ಹಾರದಮಾಲೆಭೂತಳಕೆ ||
ಆರೈಯದುರುಳ್ವಂದದಿಬೀಳ್ವುದಾ ಉ | ಳ್ಕಾರಾಯನೀಕ್ಷಿಸುತಿರಲು ||೯೩||

ಸೀಳ್ಕರಿಸಿದಕಾಂತಿಯುಕೂಡಿಕೊಂಡುಕ | ಣ್ಣುಕ್ಕದವುನ್ನಬೀಳ್ತಪ್ಪ ||
ಉಳ್ಕಾಪಾತವಕಂಡೆಮ್ಮದೇಹದ | ಬಾಳ್ಕೆಯಿಂತೆಂದೆಣಿಸಿದನು ||೯೪||

ಉರಿಯುಬಾಣದಪರಿಯೊಳುಬೀಳ್ವ ಉಳ್ಕನು | ಅರಸನೀಕ್ಷಿಸುತಿಂತುನುಡಿದ ||
ಉರಿಯಬಾಣದ ಪೊಸೆಗಿದಿರಾದ ಪುಲ್ಮಸೆ | ಯಿರವೆವಿಮ್ಮಾದೇಹವೆನುತ ||೯೫||

ಪಟ್ಟದಸುದತಿ ಸುನಂದಾದೇವಿಯ | ಮುಟ್ಟಿದ ಮೋಹದಮಗನು ||
ದಿಟ್ಟಸುದೃಷ್ಟಗೆ ಮಹದೈಶ್ವರ್ಯವ | ಕೊಟ್ಟನವನಿಪಾಲಕನು ||೯೬||

ಆವೇಳೆಯೊಳಾನಗರಿಯುದ್ಯಾನಕೆ | ದೇವನುಮಂದರರೆಂಬ ||
ಕೇವಲಿಗಳಸಮವಸೃತಿಬರಲಾ | ದೇವದುಂದುಭಿಮೊಳಗಿದುದು ||೯೭||

ಸುಮತಿಯಿಂದದಕೇಳಿ ತಾನಲ್ಲಿಗಿರದೆಯ್ದಿ | ವಿಮಲಬೋಧರಪದಕೆರಗಿ ||
ರಮಣೀಯಮಪ್ಪ ತಪವನಾಧರಣೀ | ರಮಣೀರಮಣತಾಳಿದನು ||೯೮||

ಆ ಸುನಂದಾದೇವಿ ಮೊದಲಾದ ಸತಿಯರಿ | ಚ್ಛಾಸಿರಸ್ನೇಹದಸುತರು ||
ಸಾಸಿರನೃಪವರರೈಸೂರ್ವರೊಡಗೂಡಿ | ಸಾಸಿಗದೀಕ್ಷೆವಡೆದನು ||೯೯||

ದೂರೀಕೃತದುರಿತನು ತನ್ನೊಳೊಡವಂ | ದಾರುಷಿಯರಕೂಡಿಕೊಂಡು ||
ಸಾರಮಪ್ಪಾತಪದೊಳುನೆಗಳ್ದೀಕವಿ | ಹಾರಿಯಾದನುಧರೆಪೊಗಳೆ ||೧೦೦||

ಉರಿಯುಮಡಿಲಕಟ್ಟಿಕೊಂಡೊಡರಿಯುಬಾರ | ದಿರವಾಂತಾವಾಗಿಯೊಳು ||
ವನಮುಸಿ ನದಿಯತಡಿಯೊಳು ನಾಲ್ದಿಂಗಳು | ನಿರುತಮಾಗಿನಿಂದಿಹನು ||೧೦೧||

ಸಿಡಿಲಾಲಿವರಲು ಮೊಳಗುಮಿಂಚು ಬಿರುಗಾಳಿ | ಯೊಡಗೂಡಿ ಕರೆವಮಳೆಯೊಳು ||
ಎಡವರಿಯದೆ ನಾಲ್ಕುತಿಂಗಳಾಲದಮರ | ದಡಿಯಬಿಡನು ಜತಿರಾಯ ||೧೦೨||

ಕಡೆಗಾಲದ ಸೂಲಿತೆರೆದನೊಸಲಕಣ್ಣ | ಕಡುಗಿಚ್ಚಿನಂತೆ ಭೂತಳವ ||
ಸುಡುವಬೇಸಿಗೆಯೊಳು ಕಾದಕಲ್ಲಿನಮೇಲೆ| ಯುಡಿದೆಗೆಯನು ಮುನಿವರನು||೧೦೩||

ಆ ಸಂಯಮವಿಧಾನದಿ ಪಕ್ಷೋಪ | ವಾಸ ಮಾಸೋಪವಾಸವನು ||
ಬಿಸರಿಸದೆ ಮಾಡಿಗಿಡಿಗಿಡಿಜಂತ್ರದ | ಪಾಸಟೆಯಾಯ್ತು ನಿಜಾಂಗ ||೧೦೪||

ಅಂಗದೊಳಸುವ ಭಿನ್ನವಮಾಡಿ ಏಕದ | ಶಾಂಗವನಾಗಿನಿಶ್ಚಯದಿ ||
ಅಂಗಜನಧಟವಮುರಿದು ಮತ್ತಾಮುನಿ | ಪುಂಗವ ತಪಸುಮಾಡಿದನು ||೧೦೫||

ತೀವಿದಸುಜ್ಞಾನದಿಂದ ಮೂಲೋಕವ | ನಾವರಿಸಿದಮಾಳ್ಕೆಯೊಳು ||
ಓಪದೆಸಮ್ಯಕ್ತ್ವನೊಡನಾದ ಷೋಡಶ | ಭಾವನೆಯುಸುಭಾವಿಸಿದನು ||೧೦೬||

ಎನಗಹುದುಮುಂದೃತ್ತ್ವವಕೊಡುನೀನೆಂದು | ಜಿನಗೆಪಾಳುಂಬಹನಂತೆ ||
ಮುನಿ ಮೂರುತಿಂಗಳ ಸನ್ಯಾಸದೊಳಿದ್ದು | ತನುಮಾಡಿತನುವಬಿಸುಟನು||೧೦೭||

ನಿರ್ವಾಣಭೂಮಿಗೆ ನೆರೆಮನೆಯೆನಿಸಿಸು | ಸರ್ವಲೋಕಕಕೆಕಡೆಯೆನಿಸಿ ||
ಸರ್ವಸುಖಕೆನೆಲೆವನೆಯೆಂದೆನಿಸುವ ಸರ್ವಾರ್ಥಸಿದ್ಧಿಗೆಯ್ದಿದನು ||೧೦೮||

ಮೂವತ್ತಮೂರು ಸಮುದ್ರೋಪ ಮಾಯುಷ್ಯ | ಮೂವತ್ತಮೂರುಸಹಸ್ರ ||
ಆ ವತ್ಸರತೀವೆಯಾಹಾರಮುಹುಮುಂಸ | ದೇವಗೆಸಂಭವಿಸಿತುದು ||೧೦೯||

ನಿಃಪ್ರವಿಚಾರರಸೌಖ್ಯನು ತಾನೇಕರ | ತ್ನಿಪ್ರಮಾಣಸಂಯುತನು ||
ಸುಪ್ರವಿಚಾರಸದ್ಗುಣ ಶುದ್ಧಸ್ಫಟಿ | ಕಪ್ರತ್ಯಂಗರಂಜಿತನು ||೧೧೦||

ಭುವನನಾಳಿಕಾಭ್ಯಂತರ ಗತಮಾ | ದವಧಿಸುಬೋಧವಿಭಾಸಿ ||
ವಿವರಿಸೆಸಾರ್ಧಷೋಡಶಮಾಸನಿಃಶ್ವಾಸ | ನವಿರಳಸುಖಸಹಮುಂದ್ರ ||೧೧೧||

ನಿರುಪಮುಶುಕ್ಲಲೇಶ್ಯಾಪರಿಣಾಮಬಂ | ಧುರನಾಗಿಯಾ ಅಹಮಿಂದ್ರ ||
ಸುರುಚಿರಸುರಲೋಕಸುಖವನು ಭೋಗಿಸು | ತಿರಲಿತ್ತ ಭೂತಳದೊಳಗೆ ||೧೧೨||

ಇದು ಜಿನಪದಸರಸಿಜಮದಮಧುಕರ | ಚದುರಮಂಗರಸ ರಚಿಸಿದ ||
ಮದನಾರಿ ನೇಮಿಜಿನೇಶಸಂಗತಿಯೊಳ | ಗೊದವಿದಸಂಧಿಗಳ್ಮೂರು ||೧೧೩||

ಮೂರನೆಯಸಂಧಿ ಸಂಪೂರ್ಣಂ.



# ೪. ಹರಿವಂಶೋದಯ ಸಂಧಿ



ಶ್ರೀಮದಮರಪತಿ ಮೌಳಿಕೀಲಿತಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾವೋಂದವೆಕ್ಕೆರಗುವೆನು ||೧||

ಜಂಬೂದ್ವೀಪದ ಭರತಾರ್ಯಖಂಡ | ವಿಂಬಾಗಿಹುದು ಮತ್ತಲ್ಲಿ ||
ತುಂಬಿದವಕ್ಸ್ರಿಯೆಂಬೊಂದು ನಾಡೊಳು ಕೌ | ಶಾಂಬಿಯೆಸರಪುರವಿಹುದು ||೨||

ಅದರೊಳು ಮಗಧಮಹೀಪಾಲಕನಂ | ಒಧಟಸಿಹನು ಪತ್ತವಗೆ ||
ಸುದತಿಯಿಹಳು ವನಮಾಲೆಯೆಂಬೋರ್ವಳು | ಸದಮಲಸಿಭಶಲಿವಸನೆ ||೩||

ಅವರೀರ್ವರಗರ್ಭದೊಳು ರಘುವೆಂಬೋರ್ವ | ಕುವರನೊಗೆದು ಭೂತಳವ ||
ದಿವಿಜಲೋಕಮನಮರೇಂದ್ರನಾಳುವವೊಲು | ಸೊಸಯಿಂದಾಳುತಿಹನು ||೪||

ಆಶ್ರಿತಜನಸುರತರು ರಘುನೃಪನನ | ಸುಸ್ತ್ರುತಕೆಳೆಗೊಂಡಿಹನು ||
ವೈಶ್ರವಣೋಪಮವಿತ್ತಸಂಯುತಸುರಾ | ಜಶ್ರೇಷ್ಠಿಸುಮುಖನೆಂಬವನು ||೫||

ಆ ರಾಜಶ್ರೇಷ್ಠಿಗೆ ಬಾಂಧವನಾಗಿಸು | ಚಾರುಗುಣಾಲಂಕೃತನು ||
ವೀರದತ್ತನೆಂಬೋರ್ವ ಪರದನು ಮ | ತ್ತಾತಾಜಘಾನಿಯೊಳಿಹನು ||೬||

ಆವೀರದತ್ತವೈಶ್ಯನವಲ್ಲಭಕೆಂ | ದಾವರೆಯುಲರ್ವಜ್ಜೆಗಳ ||
ಭಾವಕಿವನಮಾಲೆಯೆಂಬೊಳ್ವೆಸರಿನ | ಲಾವಣ್ಯಾಂಗಿಯೊಪ್ಪಿದಳು ||೭||

ಆಕೆಯಸಂಗಜವಿಭು ನಿಜವಿಜಯಪ | ತಾಕೆಯ ಪರಿರಂಜಿಸುವ ||
ಆಕಾರವನಾಲೋಕಿಸಿ ವಿರಹೋ | ದ್ರೇಕನಾಯ್ತಾಸುಮುಖಂಗೆ ||೮||

ನೀತಿಪರಾಙ್ಮುಖನಾಸುಮುಖನು ಸ | ತ್ಪ್ರೀತಿಮಾಡಿಪರವಧುಗೆ ||
ಆತುರದಿಂದೊಡಬಡಿಸಿ ಕೂಟಕೆ ನಿ | ರ್ಭೀತಿಯುಪ್ಪಾದನೆಣಿಸಿದನು ||೯||

ಪಿರಿದುವಂಚಿಸಿ ವೀರದತ್ತನಕರೆದಾ | ದರದಿಂದಿಂತುನುಡಿದನು ||
ಪರದುಗೆಯ್ಯದೆಸುಮ್ಮನಾಡಿಕೊಂಡಿರ್ಪುದು | ಪರದರಿಗನುಚಿತವೆನಲು ||೧೦||

ಪರಿಮಿತವಸ್ತುವಿಲ್ಲದೆಯೆನಗತಿವಿತ್ತ | ದೊರಕಲು ಬಲಯಾತ್ರೆಯಿಂದ ||
ಪರದುಗೆಯ್ವೊಡೆನಾಂ ನಿಪುಣನಲ್ಲವೆಯೆಂದು | ಪಿರಿದಾಗಿಮಾತನಾಡಿದನು ||೧೧||

ಅನುದಿಗೇಳಿಸುಮುಖನಾಗಿ ಸುಮುಖನು | ತಾನೆತಿಪಸ್ತ್ವಪನವಗೆ ||
ಅನದೆಜಲಯಾತ್ರೆಗೆ ತಕ್ಕುದನುಕೊಟ್ಟು | ನೇನಂಬೆನವನವಂಚನೆಯು ||೧೨||
ಓರಿದು ಸಂತುಷ್ಟವಾನಸವೀರದತ್ತನು | ವಿರಚಿಸಿಯಾನಪಾತ್ರವನು ||
ವರುಷಹನ್ನೆರಡಕೆ ಸನುನಿಸಿಸವುಕಟ್ಟಿ | ಸುರುತರಬಂಡವತುಂಬಿ ||೧೩||
ಹಡಗೇರಿ ಹರದುಗೆಯ್ಯಲು ವೀರದತ್ತನು | ಪಡೆಯೆಮತ್ತಿತ್ತಾಸುಮುಖ ||
ಕಡುನೇಹದಿಂಪರಸತಿವನಮಾಲೆಯೊ | ಳೊಡಗೂಡಿಸಿತ್ತಿಂತಪಿರಲು ||೧೪||
ವನಯಾತ್ರಾಪರನಾಗಿನಡೆದು ಬಹು | ಧನವಗಳಿಸಿವೀರದತ್ತ ||
ಅನುರಾಗದಿಂದೆಮುಗುಳಿಕೌಶಂಬಿಯು | ವನದಮಧ್ಯದೊಳಿಯುತ್ತವೆ ||೧೫||
ತನ್ನ ವನಿತೆವನಮಾಲೆ ಸುಮುಖನೊಳ | ಗನ್ಯಾಯದಿಂದಾಚರಿಪುದ ||
ಚೆನ್ನಾಗಿನಿಂದಿಪ ಜನವಚನವಕೇಳಿ : ಯುನ್ನತಿಕೆಯುಕೋಪದಿಂದ ||೧೬||
ತನಗಾಸುಮುಖನಬಾರಿಸುವಾಶಕ್ತಿ | ಯಿನಿಸಿಲ್ಲದಾವೀರದತ್ತ ||
ಜನನಾಥಗೆ ಮೊರೆಯಿಡುವವೇಳೆಯುಕಾಣ | ದನುವಮಾಸಿಸಿದನಿಂತೆಂದು ||೧೭||
ಎನ್ನ ಮನೋರಮೆಗೆಂದುಪಿತ್ಸವನಾ | ಸುನ್ನತಿಯಿಂತಂದೆಸವಳು ||
ಅನ್ನಿಗನನು ಮೆಚ್ಚಿದಳೆನುತಾನಂ | ಪನ್ನಿಸಿವೇಗವತಾಳಿ ||೧೮||
ಈಪರಿಯಿಂದ ಚಿಂತಿಸಿಪ್ರೋಷ್ಠಿಲಮುನಿ | ಯಾಪಾದಪದ್ಮಾಂತಿಕದೊಳು ||
ತಾಪಸರೂಪಧರಿಸಿ ವೀರದತ್ತನು | ಪಾಪರಹಿತವೃತ್ತನಾದ ||೧೯||
ಸದಮಲಮಪ್ಪತಪದೊಳು ನೆಗಳಿಯುಳಿ | ದುದಯಿಸಿಸೌಧರ್ಮವೆಂಬ ||
ಮೊದಲನಾಕದೊಳು ಚಿತ್ರಾಂಗದನೆಂಬೋರ್ವ | ವಿದಿತದಿವಿಜನಾದನಿತ್ತ ||೨೦||
ಉತ್ತಮರಘುನೃಪತಿಯುಸಖಸುಮುಖನು | ಮತ್ತಾವನಮಾಲೆಯೊಡನೆ ||
ಚಿತ್ತಜನಾರತಿಯೊಳುಕೂಡಿದಂತೆಯು | ರುತ್ತೊಂದಾನೊಂದುಪಗಲು ||೨೧||
ಸಂಯಮಿಗಳುಚರಿಗೆಗೆ ಬರುತಿರಲಾ | ರ್ಕೈಯುದಿದಿರುಗೊಂಡುಬಳಿಕ ||
ಒಯ್ಯನೆನಿಲಿಸಿ ದಿವ್ಯಾಹಾರವತನ್ನ | ಕೈಯಾಗೆದಾನಮಾಡಿದನು ||೨೨||
ಭಿಕ್ಷಾನ್ನವಕೊಂಡು ಬಳಿಕ ಕೈಯೆತ್ತಿಮು | ಮುಕ್ಷುಗಳತಿಹರುಷದೊಳು ||
ಅಕ್ಷಯದಾನಮಕ್ಕೆಂದು ಹರಸಿಯುಪ | ಲಕ್ಷಿಸಿದರುಧರ್ಮವನು ||೨೩||
ಧರ್ಮಾಧರ್ಮನಿರೂಪಣವನು ಕೇಳಿ | ಕರ್ಮರಹಿತಚಿತ್ತರಾಗಿ ||
ಕೂರ್ಮೆಯಿನಾವನಮಾಲೆಯು ಸುಮುಖನು | ನಿರ್ಮಲಮಪ್ಪ ಸಂಯಮವ ೨೪||

ಹರಿಸದಿಕ್ಕೈಕೊಂಡಾವ್ರತವನು ಪರಿ | ಹರಿಸದೆಸಗಿಸಿ ಸುಮುಖನು ||
ಮರಣವನೆಯ್ದಿ ಭರತದವಿದ್ಯಾಧರ | ಗಿರಿಯುತ್ತಪ್ಪಲೊಳುರಂಜಿಸುವ ||೨೫||

ಹರಿವರುಷಾಖ್ಯವಿಷಯದೊಳು ಶೋಭಾ | ಕರವಾದ ಭೋಗನಗರಿಯ ||
ಅರಸು ಪ್ರಭಂಜನಖಚರಗಾತನಸತಿ | ಗರುವೆಮೃಕಂಡುವೆಂಬವಳ್ಗೆ ||೨೬||

ವರಸುತನಾಗಿ ಜನಿಸಿಹರಿಕೇತುವೆಂ | ಬುರುತರ ನಾಮವನಧರಿಸಿ ||
ಸಿರಿಯಕುಮಾರಸಂದದೊಳು ಬೆಳೆದು ಪೊಸ | ಹರೆಯವಾದನು ಬಳಿಕಿತ್ತ ||೨೭||

ಆ ವನಮಾಲೆ ಸತ್ತಾವಿಷಯದ ವಿ | ಶ್ವಾವಲಯಾಖ್ಯನಗರಿಯ ||
ಭೂವರವಜ್ರಚಾಪಂಗೆ ಸುಭಾಮಾ | ದೇವಿಗೆ ಸಂಭವಿಸಿದಳು ||೨೮||

ಪೊಸಕುಡಿಮಿಂಚುಮಸೆದವೊಲುಮಿಗೆ ರಂ | ಜಿಸುವಂಗಲತಿಕೆಯಕಾಂತಿ ||
ಅಸದೃಶವಿದ್ಯುನ್ಮಾಲೆಗೆಯುಸ್ವರ್ಥ | ವೆಸರಾಯ್ತುತಿಳಿಯಲಿಕೆಯೊಳು ||೨೯||

ಆ ಸುಕುಮಾರಿ ವಿದ್ಯುನ್ಮಾಲೆಯುಸು ಮ | ತ್ತಾಸಿಂಹಕೇತುಕುವರಗೆ ||
ವಾಸವಸದೃಶಪ್ರಭಂಜನ ನೃಪತಿಯು | ತ್ಯಾಸಕ್ತಿಯಿಂಕೈಗೂಡಿಸಿದ ||೩೦||

ಈತೆರದಿಂದ ಮದುವೆಯಾಗಿಯಾಸಿಂಹ | ಕೇತುವಿದ್ಯುನ್ಮಾಲೆಯೊಡನೆ ||
ಮಾತೇನು ಭವಬದ್ಧಮೋಹದನ್ಯೋನ್ಯಸಂ | ಪ್ರೀತಿಯಿಂದೊಡಗೂಡಿದನು ||೩೧||

ಬಂದಬಸಂತರಿತುವಿನೊಳಗತ್ಯಾ | ನಂದದಿನಂದನಕೈದಿ ||
ಕುಂದಲತಾಮಂಟಪದೋಳವರಿವೊಕ್ಕು | ಕಂದರ್ಪಕೇಳಿಯೊಳಿರಲು ||೩೨||

ಆ ಪೇರದತ್ತಚರನು ಚಿತ್ರಾಂಗದ | ದೇವನು ಸಗ್ಗದಿಂದಿಳಿದು ||
ಆ ವನಕೈದಿಯಾಯೆಡೆಯೊಳಗಿರ್ದವ | ಧೂವರರನುಕಂಡನಾಗ ||೩೩||

ಕಂಡತಿಕೋಪಾವೇಶಮಾನಸನತ್ತಿ | ಕೊಂಡುಸುಮುಖಧರ್ಮವಿಮುಖ ||
ಚಂಡಪಾತಕಿವನಮಾಲೆ ನಿಮ್ಮಸುವನು | ಹಿಂಡಿದಲ್ಲದೆ ಸುಮ್ಮನಿಹೆನೆ ||೩೪||

ಎಂದುರೆವುಟ್ಟಿಮೂದಲಿಸಿ ಬೈವುತಕೊಲ್ವೆ | ನೆಂದುಪೋಪಾಸಮಯದೊಳು ||
ಹಿಂದಣಭವದ ಸುಮುಖನಬಾಂಧವರವು | ವೆಂದೆಂಬಾನೃಪವರನು ||೩೫||

ವದನದೊಳೊಗೆದ ಜರೆಯಕಂಡು ವೈರಾಗ್ಯ | ಮೊದವಿದೀಕ್ಷಾವಿಧಿಯಿಂದ ||
ಅದಿರದಳಿದುಮತ್ತಾಸೌಧರ್ಮಕ | ಲ್ಪದೊಳಿರದುದಯಂಗೆಯ್ದು ||೩೬||

ತರಣಿಪ್ರಭನೆಂಬನಾಮವ ತಳೆದಾ | ಹರಿಕೇತುವಿನ ಪುಣ್ಯದೊದವೆ ||
ನಿರುತಮಾಗಬರ್ಪಂತಾಗಸದೊಳು | ಬರುತಕಂಡನುಬಳಿಕವರ ||೩೭||

ಕರುಣಾಹೃದಯನಾಗುತಾ ಚಿತ್ರಾಂಗದ | ಸುರನೊಳಿಂತೆಂದುನುಡಿದನು ||
ಉರುತರಕೋಪದಿನಿವನೇಕಾರಣ | ಭರದಿಂಕೊಂಡೊಯ್ವೆಯೆನಲು ||೩೮||
ಆಸಗ್ಗಿಗನೆಂದನು ಪೋದಭವದೊಳು | ಕೌಶಂಬಿಯೆಂಬಪುರವನು |
ಓಸರಿಸದೆ ನೀನಾಳ್ವಂದಿನಸಟ್ಟಿ | ಯಾಸುಮುಖನುವಂಚನೆಯೊಳು ||೩೯||
ಜಲಯಾತ್ರೆಯಿಂದಪರದುಗೆಯ್ಯೆಂದೆನ್ನ | ಕಳುಹಿ ಎನ್ನೀಹೆಂಡತಿಗೆ ||
ಅಳುಪಿದಪಾತಕಿಯಿವಗಾಜ್ಞೆಯಮಾಡ | ಲಳವಂದೆನಗಾದುದಿಲ್ಲ ||೪೦||
ಅಂದಿನಭವದೊಳಗಾದ ಹಗೆಯನಾ | ನಿಂದಿಂತಪ್ಪಭವದೊಳು ||
ಕೊಂದುಹಾಕುವೆನೆಂದು ಕೊಂಡೊಯ್ದಪೆನೆನ | ಲೆಂದನು ಸೂರ್ಯಪ್ರಭನು ||೪೧||
ಇವು ನರಕೀಟಕನಾವುದಿವ್ಯಾಂಗಿಗ | ಳಿವನು ಕೈಮುಟ್ಟಿಕೊಲ್ಲುವುದು ||
ಅವಿವೇಕವಿಂತಿದರಿಂ ಸಲೆಪಾಪಸಂ | ಭವಿಸುವುದನು ನೀನರಿಯ ||೪೨||
ಸ್ಥಾವರ ಜಂಗಮಜೀವರಾಶಿಗಳೊಳು | ಭಾವಿಸಿನೋಡಿದೊಡೊಂದು ||
ಜೀವಕೆಹಗೆಕೆಳೆಯಾಗಿ ಹುಟ್ಟದರಾರು | ಭಾವಜ್ಞನಿನ್ನರಿಕೆಯೊಳು ||೪೩||
ಪಗೆವರಕೊಲ್ವೆನೆಂಬಾಸೆಯುಂಟಾದೊಡೆ | ಜಗದಜೀವಗಳೆಲ್ಲನಿನಗೆ ||
ಹಗೆಕೆಳೆಯಾಗಿ ಕೆಲವುಸೂಳೊಳೊಗೆವರು | ಸುಗುಣನೀನಾರಾರಕೊಲ್ವೆ ||೪೪||
ಆರಿಗಾರಾರುಪಗೆವರು ಬಂಧುಗಳು ಮ | ತ್ತಾರಿಗಾರಾರುಸತಿಯರು ||
ಆರಿಗಾರಾರರಸುಗಳೆಂಬುದಿದನೋಡು | ಧೀರನೀನೀಸಂಸೃತಿಯೊಳು ||೪೫||
ಅದರಿಂದಾರಾಗದ್ವೇಷಂಗಳ | ಹೃದಯದೊಳಗೆ ನಿಲಿಸುವುದು ||
ಸದಮಲಗುಣಿಗಳಿಗಲ್ಲದ ಕೃತ್ಯವಿಂ | ತಿದನು ನೀನೇಬಲ್ಲೆಯಾಗಿ ||೪೬||
ಜೀವದಯಾನ್ವಿತ ಜಿನಧರ್ಮವಿಡಿದೀ | ದೇವಗತಿಯನುರೆಪಡೆದು ||
ಈವಿಧವನು ಮಾಡುವುದು ನಮಗುಚಿತವೆ | ಕೋವಿದಕೇಳುನೀನೆಂದು ||೪೭||
ಇವುಮೊದಲಾದ ಯುಕ್ತ್ಯಾಯುಕ್ತಿಗಳಿಂದ | ದಿವಿಜನನಾಸೂರ್ಯಪ್ರಭನು ||
ಸವಿನಯದಿಂದೊಡಬಡಿಸಲಂತದನವ | ನವಧರಿಸುತವಿಂತುನುಡಿದ ||೪೮||
ಎಲೆ ಸೂರ್ಯಪ್ರಭ ನಿನ್ನ ಸೂಕ್ತಿಗಳನು | ಗೆಲುವುದು ಪಿರಿದನುಚಿತವು ||
ನೆಲೆಯೆನಗೆಂದಾರಾಜಮಿಥುನವನು | ಕೊಲಲೊಲ್ಲದವಗೆಯೊಪ್ಪಿಸಲು ||೪೯||
ಆ ಸಿಂಹಕೇತುವಿದ್ಯುನ್ಮಾಲೆಯರನಂ | ದಾಪೂರ್ಯಪ್ರಭದೇವ ||
ಆ ಸಗ್ಗಿಗನಕೈಯಿಂದ ತೆಗೆದುಕೊಂಡು | ಲೇಸನವರಿಗೆಮುಂದೆಣಿಸಿ ||೫೦||

ಪೆಂಪುವಡೆದುರಾಜಿಸುವಂಗದೇಶದ | ಚಂಪಾಪುರದವನದೊಳು ||
ದಂಪತಿಗಳಸುತಂದಿಳಿಪಿ ತನ್ನತ್ತಪೆ | ಕಿಂಪನೆಯ್ದಿದನು ಪುತ್ರಿತ್ತ ||೫೧||

ಆ ಚಂಪಾಪುರವರದಧಿನಾಥನು | ಶ್ರೀಚಂದ್ರಕೀರ್ತಿಯೆಂಬವನು ||
ನೀಚಕೃತ್ಯದೊಳಂತಕನೆನೆದೊಯ್ದನು | ಭೂಚಕ್ರವಳಲುವಂದದೊಳು ||೫೨||

ಆ ನರನಾಥಗೆ ತನುಜಾನುಜ ಸಂ | ತಾನವಿಲ್ಲದಕಾರಣದಿ ||
ಮಾನನಿಧಾನಿಗಳಪ್ಪಮಂತ್ರಿಗಳ ವಿ | ತಾನವೆಲ್ಲವು ಕೂಡಿಕೊಂಡು ||೫೩||

ಪೂಜಿಸಿ ಪಟ್ಟದಗಜವನುಬಿಡಲದು | ರಾಜಧಾನಿಯ ನಂದನಕೆ ||
ಓಜೆಯಿಂದೆಯ್ದಂದಲ್ಲಿ ಮುನ್ನಿರ್ದ | ರಾಜಮಿಥುನವನು ಕಂಡು ||೫೪||

ಬರಿಕೈಯೊಳಿರ್ದ ಹೊಂಗಳಸದುದಕವನು | ಸಿರಿದಲೆಗಭಿಷೇಕಮಾಡಿ ||
ಹರಿಸದಿತನ್ನ ಮಸ್ತಕದೊಳಿರಿಸಿ ಪುರ | ವರಕೆ ಬಂದುದು ಭದ್ರಹಸ್ತಿ ||೫೫||

ಸಕಲಾಭರಣಭೂಷಿತರಾಗಿ ಗಜದ ಮ | ಸ್ತಕವನಡರಿಬರುತಿರ್ಪ ||
ಅಕಲಂಕರೂಪಯುತರಕಂಡು ಹರುಷೋ | ತ್ಸುಕರಾದರಾಮಂತ್ರಿಗಳು ||೫೬||

ಪುರದೊಳಗಷ್ಟಶೋಭೆಯಮಾಡಿ ನೃಪನುಂ | ದಿರವ ಹೊಗಿಸಿವಿಭವದೊಳು ||
ಹರಿಕೇತುವಿಗೆ ಪಟ್ಟಾಭಿಷೇಕಮನಾ | ದರದಿಂಮಾಡಿದರವರು ||೫೭||

ಮಂಡಳಿಕರ ಮಂತ್ರಿಗಳ ಸಾಮಂತರ | ದಂಡನಾಥರದುರ್ಗಾಧಿಪರ ||
ಮಂಡಳಿಯೆಲ್ಲನೆರೆದು ಭೂಪತಿ ನಿಮ್ಮ | ಮಂಡಲವನು ಪೇಳ್ವುದೆನಲು ||೫೮||

ಹರಿಕೇತುನೃಪತಿಯವರೊಳಿಂತೆಂದನೀ | ಭರತದವಿಜಯಾರ್ಧಗಿರಿಯ ||
ಸುರುಚಿರಹರಿವರ್ಷಾಖ್ಯದೇಶದ ಭೋಗ | ಪುರದ ಪ್ರಭಂಜನ ನೃಪನ ||೫೯||

ಸರಸಿಜವದನೆ ಮೃಕಂಡುವೆಂಬಬಲೆಯ | ವರನಂದನನು ನಾನೆಂದು ||
ಹರಿಸದಿ ತನ್ನವೃತ್ತಾಂತವನೆಲ್ಲವ | ನೊರೆಯಲು ತಾನವರೊಡನೆ ||೬೦||

ಪ್ರರುತೀರ್ಥಪ್ರವರ್ತನಸುಪ್ರತಿಷ್ಠಿತ | ಹರಿವಂಶದಶಮತೀರ್ಥಕರು ||
ವರಶೀತಳಜಿನಪನಕಾಲದೊಳಾದು | ಚಿರವಾದುದೀಗ ನಿನ್ನಿಂದ ||೬೧||

ಹರಿವರ್ಷಾಖ್ಯದೇಶಾಧೀಶನೆಯಾಗಿ | ಹರಿಕೇತುವೆಂಬಹೆಸರನೆ ||
ಧರಿಸಿದಕಾರಣವಿನ್ನು ನಿನ್ನೀವಂಶ | ಹರಿವಂಶವಾಗಲಿಯೆನುತ ||೬೨||

ಪೆಂಡಿರಕುಲಕೆ ಪೇರ್ಮಣಿಯೆನಲೆಸೆವ ಮೃ | ಕಂಡುವಸುತನಾದುದರಿಂ ||
ಮಂಡಲದೊಳು ಮಹೀಪತಿ ನಿನ್ನಹೆಸರು ಮಾ | ರ್ಕಂಡೇಯನೆಂದಾಗಲೆಂದು |

ಪುರಪರಿಜನಮೆಲ್ಲ ಮೆಲ್ಲನುಲಿವುತಿರೆ | ನರನಾಥನಾಹರಿಕೇತು ||
ಧರೆಯುಭಾರವನೆಲ್ಲವ ತನ್ನ ತೋಳೊಳು | ಧರಿಸಿಯರಸುಗೆಯ್ವುತಿರ್ದ ||೧೪||
ಬೆಸನನುಬೇಡಿ ಭೂತಳದರಸುಗಳೆಲ್ಲ | ಮುಸುಕುತಿರಲು ಸಿಂಹಕೇತು ||
ವಸುಧೆಯೆಲ್ಲವನೇಕಚ್ಛತ್ರದೊಳು ಸಂ | ತಸದಿಂದ ಪರಿರಕ್ಷಿಸಿದನು ||೧೫||
ಈತೆರದಿಂದ ರಾಜ್ಯವನಾಳ್ವ ಸಿಂಹ | ಕೇತುವಿದ್ಯುನ್ಮಾಲೆಯರಿಗೆ ||
ಪ್ರೀತಿಯಿಂದಾಹರಿಯೆಂಬ ಪೆಸರ ತನು | ಜಾತ ಜನಿಸಿಯೊಪ್ಪಿದನು ||೧೬||
ಆ ಹರಿನೃಪಸುತನಹಿತನೃಪಾಲ | ವ್ಯೂಹಮುಶ್ಯಕನತಪದನು ||
ಸಾಹಸಿ ಹಿಮಗಿರಿಯೆಂಬ ಪೆಸರಿನ ಸ | ಮೋಹಿತ ಮತಿಯೊಪ್ಪಿದನು ||೧೭||
ಆವನಬಸಿರಿನೊಳು ವಸುಗಿರಿಯೆಂಬೋರ್ವ | ಕುವರನೊಗೆದು ವಿಕ್ರಮದೊಳು ||
ಅವನಿಯೆಲ್ಲವನಾಳಿ ಕೀರ್ತಿವಲ್ಲರಿಗಾತ | ಭುವನವನಡರುವಮಾಡಿದನು ||೧೮||
ಆ ವಂಶದೊಳಗನೇಕ ನೃಪರು ಧರ | ಣೀಶ್ವರರಾಗಲಲ್ಲಿ ||
ದೇವೇಂದ್ರಾರ್ಚಿತಪದಮುನಿಸುವ್ರತ | ದೇವನು ಸಂಭವಿಸಿದನು ||೧೯||
ಆ ಮುನಿಸುವ್ರತತೀರ್ಥಾಧೀಶನು | ದ್ಭವವಂಶದೊಳಗನೇಕ ||
ಭೂಮಿಪತಿಗಳು ಜನಿಸಲಲ್ಲಿ ವಸುವೆಂಬ | ನಾಮದನೃಪನು ಪುಟ್ಟಿದನು ||೨೦||
ಆ ಮಹೀಪತಿ ವಸುವಿನ ಬಸಿರೊಳಗು | ದ್ಭವಪರಾಕ್ರಮಯುತರು ||
ಸೋಮಾರ್ಕರಂತೆಸುವಸುಬೃಹದ್ವಸು | ನಾಮದ ಸುತರುಪುಟ್ಟಿದರು ||೨೧||
ಅವರೊಳು ಸುವಸುವ ವಂಶಸಮಿತಿಯೊಳು | ದ್ಭವಿಸಿದ ಶತಮನ್ಯುವೆಂಬ ||
ಅವನೀಶ್ವರಗೆ ಬೃಹದ್ರಥನೆಂಬೋರ್ವ | ಕುವರನೊಗೆದು ರಂಜಿಸುತ ||೨೨||
ಮಗಧದೇಶದ ಮಧ್ಯದೊಳು ರಾಜಗೃಹವೆಂಬ | ನಗರಿಯ ಪರಿಪಾಲಿಸುತ ||
ಸೊಗಯಿಸುತಿರಲು ಜರಾಸಂಧನೆಂಬೋರ್ವ | ಮಗನಾದನಾನೃಪವರಗೆ ||೨೩||
ಅವನ ಪುರಾತನ ಪುಣ್ಯಪ್ರಭಾವಸಂ | ಭವದಿಜನಿಸೆ ಚಕ್ರರತ್ನ ||
ಅವನಿಯೊಳುಳ್ಳರಸುಗಳನೆಲ್ಲರ ತನ | ಗವನತರಪು ಮಾಡಿಕೊಂಡು ||೨೪||
ಭರತಾವನಿಯತ್ರಿಖಂಡವನೆಲ್ಲವ | ನುರುತರವಿಕ್ರಮದಿಂದ ||
ನಿರುತಮಾಗಿವೆ ಸಾಧಿಸಿಯರ್ಧಚಕ್ರೇ | ಶ್ವರನಾದ ನಾನೃಪನಿತ್ಯ ||೨೫||
ವಸುಧೀಶ ವಸುವಿನಕಿರಿಯಮಗನು ಬೃಹ | ದ್ವಸುನೃಪತಿಯ ವಂಶದೊಳು ||
ಅಸಮವಿಕ್ರಮಿಗಳನೇಕನೃಪರು ಜನಿ | ಯಿಸಿ ಕೀರ್ತಿಪಡೆದಿರಲಲ್ಲಿ ||೨೬||

ಯದುವೆಂಬ ಜನನಾಥನೋರ್ವನು ದಯುಗೆ | ಯ್ಯುದ್ಭಟನಾಗಿಯುವನಿಯನು ||
ಪಡೆದುಪಾಲಿಸಿಕೀರ್ತಿಯನೆಯ್ದಲಂದಿಂದ | ಯದುವಂಶವಾದುದಾಕುಲಕೆ ||೭೭||
ಜನನೆತ್ತಾಯದುವೆಂಬ ನೃಪಾಲನ | ಬಸಿರೊಳು ನರಪತಿಯೆಂಬ ||
ವಸುಧೀಶನೊಗೆದು ಮಧುರೆಯೆಂಬ ಪುರದೊಳ | ಗಸದೃಶನಾಗಿರಲವಗೆ ||೭೮||
ಶೂರವೀರರೆಂಬ ಹೆಸರಹಡೆದು ಸುಕು | ಮಾರರೀರ್ವರು ಸಂಭವಿಸಿ ||
ಚಾರುಕಲಾನ್ವಿತರಾಗಿ ಜನ್ವನವಾಂತು | ದಾರವಮೂರ್ತಿಗಳಾಗಿರಲು ||೭೯||
ನರಪತಿ ತನ್ನ ಕನ್ನೆಯೊಳು ಸಂಜನಿಸಿದ | ನರೆಗಂಡು ನಿರ್ವೇಗವನು ||
ಧರಿಸಿ ಮಕ್ಕಳಿಗೆಯುರಸುತನವನು ಕೊಟ್ಟು | ವರಜಾತರೂಪತಾಳಿದನು ||೮೦||
ಇತ್ತ ಶೂರನೃಪವರನು ಕೃತಾರ್ಥನೆಂ | ಬುತ್ತಮವಾದದೇಶವನು ||
ಒತ್ತಿಸಾಧಿಸಿ ಶೌರೀಪುರವೆಂಬುದ | ಬಿತ್ತರದಿಂಕಟ್ಟಿಸಿದನು ||೮೧||
ಅದರೊಳುತಾನಿರ್ದು ಮಧುರಾಪುರದೊಳು | ವಿದಿತನನುಜ ವೀರನೃಪನ ||
ಮುದದಿನಿರಿಸಿ ತಾವಿರ್ಾರ್ವರು ಸುಖಸಂ | ಪದದಿ ರಾಜ್ಯವನಾಳುತಿರಲು ||೮೨||
ಸುರಪತಿಸನ್ನಿಭನಾ ಶೂರನೃಪತಿಗೆ | ಗರುವೆಗಾಂಧಾರಿಗುದ್ಭವಿಸಿ ||
ಚರಮಾಂಗನಾಗಿಯಂಧಕವೃಷ್ಟಿಯೆಂಬೋರ್ವ | ನರನಾಥಚಂದ್ರನೊಪ್ಪಿದನು ||
ವೀರನೃಪಗೆ ನರಪತಿವೃಷ್ಟಿಯೆಂಬ ಕು | ಮಾರನೊಗೆದು ರಂಜಿಸಿದನು ||
ಮಾರಗೆಸರಿಮಿಗಿಲೆನಿಸಿ ಮಿಸುಗುವಾ | ಕಾರವನಂಗೀಕರಿಸಿ ||೮೪||
ವಿಷ್ಣುಗೆಸಿರಿಯು ತಪ್ಪಂದದಿಯಂಧಕ | ವೃಷ್ಣಿ ಕುಮಾರನವನದ ||
ತೃಷ್ಣೆಗೆತಕ್ಕ ಸುಭದ್ರೆಯೆಂಬೋರ್ವಳು | ಕೃಷ್ಣವೇಣಿಯುತಂದನೊಸೆದು ||೮೫||
ಕಿರಿಯಕುವರನರಪತಿ ವೃಷ್ಣಿಗೆ ಮನ | ದೆರಕದಿ ಮದುವೆಮಾಡಿದನು ||
ತುರುಗೆವೆಗಣ್ಣಳ ಪದ್ಮಾವತಿಯೆಂ | ಬರಿಕೆಯು ರಾಜನಂದನೆಯು ||೮೬||
ಅಧಟನಂಧಕವೃಷ್ಣಿನೃಪಗೆ ಸುಭದ್ರಾ | ಸುದತಿಗೆ ಸಂಜನಿಸಿದರು ||
ಸದಮಲರಾ ದಶದಿಶೆಯಾಳ್ವರಂದದಿಂ | ದುದಯಿಸಿದರು ದಶಸುತರು ||೮೭||
*ಶರಧಿವಿಜಯುನಕ್ಷೋಭನುಸ್ಥಿಮಿತಸಾ | ಗರಹಿಮವಂತವಿಜಯುಸು ||
ವರಗುಣಿಯುಚಲಧಾರಣ ಪೂರಣಸುರು | ತರಮೂರ್ತಿಯಭಿನಂದನನು ||೮೮||

---

**ಪಾಠಾಂತರ.**—* ವನಧಿವಿಜಯುನಕ್ಷೋಭನು ಸ್ಥಿಮಿತಸು | ವನನಿಧಿಹಿಮವಂತವಿಜಯ|| ವಿನುತಾಚಲಧಾರಣ ಪೂರಣಾಭಿನಂ | ದನವಸುದೇವನೆಂಬವರು ||೮೮|| ಸುರಲೋಕದೊಳು ಜನಿಯಿಸಿ ದಶವಿಧಕಲ್ಪ | ತರುಬೆಳೆದೊಪ್ಪುವತೆರದಿ || ಸ್ಮರನಿಭರಾಹತ್ತುಮಂದಿ ಕುಮಾರ | ಕರು ಣಾನಯುತರು ಬೆಳೆದರು ||೮೯||

ಚಿತ್ತಜನಿಭವಸುದೇವವೆಸರವಡೆ | ದುತ್ತಮರಾಹತ್ತುಮಂದಿ ||
ಹತ್ತುವಿಧದಸುರತರುವೀವರರೂಪು | ವೆತ್ತಂದದಿನೊಪ್ಪಿದರು ||೮೯||
ಇಂತೆಸೆವಾಹತ್ತುಮಂದಿಕುಮಾರಕ | ರಂತರದೊಳು ಜನಿಸಿದರು ||
ಕೊಂತಿಮಾದ್ರಿಯರೆಂಬವರು ಪಾರ್ವತಿಗಂಗೆ | ಯಂತೆ ವಿಲಾಸವಡೆದರು ||೯೦||
ಉಗ್ರವಿಕ್ರಮಿನರಪತಿವೃಷ್ಣಿಯೆಂಬ ನೃ | ಪಾಗ್ರಣಿಗಾಪದ್ಮಾವತಿಗೆ ||
ಉಗ್ರಸೇನ ದೇವಸೇನ ಮಹಾಸೇನ | ರಗ್ರಗಣ್ಯರು ಜನಿಸಿದರು ||೯೧||
ಆ ಮೂವರಿಂನೆರೆಕಿರಿಯಳು ಕೋಮಲ | ತಾಮರಸಾಯತನೇತ್ರೆ ||
ಸೋಮಸದೃಶಮುಖಿಗಾಂಧಾರಿಯೆಂಬೋರ್ವ | ಭಾಮಿನಿಸಂಜನಿಸಿದಳು ||೯೨||
ಇಂತೆಸೆವಾಸುಕುಮಾರರು ಜವ್ವನ | ವಂತಳೆಯಲು ಕಂಡವರಿಗೆ ||
ಸಂತಸದಿಂರಾಜಸುತೆಯರತಂದು ಭೂ | ಕಾಂತನು ಮದುವೆಮಾಡಿದನು ||೯೩||
ವಿಜಿಗೀಷು ಸಾಗರವಿಜಯಗೆ ಧರಣೀ | ಭುಜನಂದನೆಯನೋರ್ವಳನು ||
ತ್ರಿಜಗದೇಕರೂಪವತಿ ಶಿವದೇವಿಯ | ನಿಜಲಗ್ನದೊಳು ತಂದು ಬಳಿಕ ||೯೪||
ಉಳಿದೆಂಟುಮಂದಿ ಕುಮಾರರ್ಗೆ ಭೂವರ | ಲಲನೆಯರುಗಳೇಣ್ಬರನು ||
ಲಲಿತವಿಭವದಿ ಮದುವೆಮಾಡಿದನಾ | ಇಳೆಯಾಣ್ಮನಾಶೂರನೃಪತಿ ||೯೫||
§(ಕ್ರಮದಿಂದೊಸೆದು ಧೃತೀಶ್ವರಿಯೆಂದೆಂಬ | ರಮಣಿಯನಕ್ಷೋಭಂಗೆ ||
ಸ್ತಿಮಿತಸಾಗರಗೆ ಸ್ವಯಂಪ್ರಭೆಯೆಂಬಳ | ಹಿಮವಂತಂಗೆ ಸುಸೀಮೆ ||೯೬||
ಎಂಬವಳನು ವಿಜಯಂಗೆ ಸೀತಾದೇವಿ | ಯೆಂಬವಳನು ಪ್ರಿಯವಚನೆ ||
ಎಂಬಳನಚಲಭೂವರಗೆ ಪ್ರಭಾವತಿ | ಯೆಂಬಳನಾಧಾರಣಗೆ ||೯೭||
ಕಾಳಿಂದಿಯೆಂಬವಳನು ಪೂರಣಗೆ ವಿ | ಲೋಲಾಕ್ಷಿ ಜಿನಮತಿಯೆಂಬ ||
ಬಾಲೆಯನಭಿನಂದನಗೆ ಸುಪ್ರಭೆಯೆಂಬ | ಲೀಲಾಸಿದ್ಧಿಯೋರ್ವಳನು ||೯೮||
ಎಳವಿಯೊಳೆಸಕವಡೆದ ರೂಪಲಾವಣ್ಯ | ದಳಿದಾವಸುದೇವಂಗೆ ||
ವಿಲಸಿತವಿಭವದಿ ಮದುವೆಮಾಡಿದನಾ | ಇಳೆಯರಿಕೆಯೊಳಾನೃಪತಿ) ||೯೯||
ಈತೆರದಿಂ ಪುತ್ರಪೌತ್ರರು ಸಹಿತಧ | ರಾತಳವನು ಪಾಲಿಸುತ ||
ಪ್ರೀತಿಯಿಂದಾ ಶೂರವೀರಭೂವರರು ವಿ | ಖ್ಯಾತಿಯಿಂದಿರಲೊಂದುಪಗಲು ||೧೦೦||
ಭೂವಿಶ್ರುತಮಪ್ಪ ಗಂಧಮಾದನವೆಂ | ಬಾವಸುಧಾಧರದೆಡೆಗೆ ||
ಭಾವಜರಿಪುಸುಪ್ರತಿಷ್ಠಮುನಿಗಳೆಯ್ದ | ಲಾವಾರ್ತೆಯಕೇಳುತವೆ ||೧೦೧||

---

ಪಾಠಾಂತರ.—§೯೬—೯೭—೯೮—೯೯ ಈ ಪದ್ಯಗಳು (ಐ) ಪ್ರತಿಯಲ್ಲಿಲ್ಲ.

ಮತ್ತಲ್ಲಿಗೆಯ್ದಿ ಧರ್ಮಾಧರ್ಮದಿರವನು । ಚಿತ್ತಶುದ್ಧಿಯೊಳು ಕೇಳುತವೆ ||
ಸುತ್ತಿಬಿಗಿದ ಮೋಹಪಾಶವ ಹರಿವೆನೆ । ಸುತ್ತೆಣಿಸಿದರು ಬೇಗದೊಳು ||೧೦೩||

ಇಂತು ನಿರ್ವೇಗನೂನಸರಾಗಿ ಯಾ ಮುನಿ । ಕಾಂತಗೆರಗಿಬೀಳ್ಕೊಂಡು ||
ಸಂತಸದಿಂ ತಮ್ಮ ರಾಜಧಾನಿಗೆ ಭೂ । ಕಾಂತರು ಬಂದೊಂದುಪಗಲು ||೧೦೪||

‡ವರಶೌರೀಪುರದೊಳಗಂಧಕವೃಷ್ಟಿ । ಧರಣಿಪನನು ಮಧುರೆಯೊಳು ||
ನರಪತಿವೃಷ್ಟಿಯನಿರಿಸಿ ದೀಕ್ಷೆಯನಾಂತ । ರಿರದಾಭೂವರರುಗಳು ||೧೦೫||

ಶೂರವೀರರಾಗಿ ಕರ್ಮಭಟರಗೆಲ್ದು । ಶೂರವೀರಮುನಿವರರು ||
ಸಾರಸುಖಮುಸಿರದೀವ ಮುಕುತಿಯೆಂಬ । ನಾರಿಯನೊಡಗೂಡಿದರು ||೧೦೬||

ಇತ್ತಲಂಧಕವೃಷ್ಣಿನರಪತಿವೃಷ್ಣಿಗ । ಳುತ್ತಮಸತ್ವಸಂಯುತರು ||
ಪತ್ತುದೆಸೆಯೊಳು ತಮ್ಮಯಃಕೀರ್ತಿವಲ್ಲಿಯ । ಪತ್ತಿಸಿ ಸುಖದೊಳೊಪ್ಪಿದರು ||೧೦೭||

ಶುಭಗುಣಮಣಿಭೂಷಣ ಸುಮನೋಬಾಣ । ಸಿಭನಿರುಪಮ ವಿಕ್ರಮನು ||
ತ್ರಿಭುವನನುತನತಿಚತುರನೊಪ್ಪಿದ ನಾ । ಪ್ರಭುಕುಲಮಣಿದೀಪಕನು ||೧೦೮||

ಇದು ಜಿನಪದಸರಸಿಜ ಮದಮಧುಕರ । ಚದುರಮಂಗರಸ ರಚಿಸಿದ ||
ಮದನಾರಿ ನೇಮಿಜಿನೇಶ ಸಂಗತಿಯೊಳ । ಗೊದಪಿದ ಸಂಧಿಗಳ್ನಾಲ್ಕ ||೧೦೯||

## ನಾಲ್ಕನೆಯಸಂಧಿ ಸಂಪೂರ್ಣಂ.



ಪಾಠಾಂತರ.—‡ಆ ಮಧುರಾಪುರಿಯನು ತಮ್ಮ ಮೈದುನ । ಸೋಮವಂಶಜನು ಸೇನ || ಭೂಮಿಪಾಲಗೆಕೊಟ್ಟು ಸುತಗೆ ಪಟ್ಟವಕಟ್ಟಿ । ಯಾಮುಹಿಮರು ದೀಕ್ಷೆಗೊಂಡು ||೧೦೫||

# ೫. ಧೃತರಾಷ್ಟ್ರ ಗಾಂಧಾರಿ ವಿವಾಹಸಂಧಿ.



ಶ್ರೀಮದಮರಪತಿಮೌಳಿಕೀಲಿತವಾದ | ತಾಮರಸದ್ವಯುಸಜಗೆ ||
ಕಾಮಸುದೇಹಹರಿಗೆ ನೇಮಿಜಿನಪತಿ | ಗಾವೋದವೆತ್ತೆರಗುವೆನು ||೧||

ಒಂದಾನೊಂದುಪಗಲು ಮಂಡಳಿಕರ | ಸಂದಣಿ ತನ್ನನೋಲೈಸೆ ||
ಅಂದವಡೆದ ವಿಭವದಿನೋಲಗದೊಳು | ಕಂದರ್ಪನಿಭಕುಳ್ಳಿರಲು ||೨||

ಆ ವೇಳೆಯೊಳು ಹಸ್ತಿನಪುರವರದಿಂ | ಭಾವಕರೆನಿಪ ಮಂತ್ರಿಗಳು ||
ಆ ಓಲಗಶಾಲೆಗೆಯ್ದಿಯಂಧಕವೃಷ್ಟಿ | ಭೂವನಿತೇಶನಕಂಡು ||೩||

ವಿನಮಿತರಾಗಿ ವಿನಯದಿಂದುಚಿತಾ | ಸನದೊಳು ಕುಳ್ಳಿರ್ದ ಬಳಿಕ ||
ಜನಪತಿ ವಿನ್ನಪಕುರುಕುಲಮಣಿದೀಪ | ಸನುಪಮಗುಣಿ ಭೀಷ್ಮಭೂಪ ||೪||

ದೇವರಬಳಿಗೆಮ್ಮನಟ್ಟಿದನೆನಲಾ | ಭೂವರನಂಧಕವೃಷ್ಟಿ ||
ಆವುದು ಕಜ್ಜಮೆಂದೆನಲವರೆಂದರು | ಲಾವಣ್ಯಯುತರೆಮ್ಮ ನೃಪನ ||೫||

ವರತನುಜಾತರ್ಗೆ ನಿಮ್ಮ ತನುಜೆಯರ | ಸುರುಮುದದಿಂ ಕುಡಹೇಳಿ ||
ಧರಣೀಶನಿಮ್ಮಲ್ಲಿಗೆಮ್ಮನಟ್ಟಿದನೆನ | ಲರಸು ಮಂತ್ರಿಯನೋಡಿದನು ||೬||

ಅರಸು ಮೊಗವನೋಡಲುಪಾಧ್ಯಯನನೆಂಬ | ವರಮಂತ್ರಿಯಾಮಹತ್ತರರ ||
ಹರುಷವೊದವೆನೋಡಿ ನಿಮ್ಮ ನೃಪರಕುಲ | ದಿರವನೆಮಗೆ ಪೇಳಿಮೆನಲು ||೭||

ಆಮಾತಿಗಾಮಹತ್ತರರೊಳಗೋರ್ವನು | ದ್ದಾಮಗಂಭೀರವಾಕ್ಯದೊಳು ||
ಭೂಮಿಗೆ ಸೂತ್ರಧಾರಕನೆನೆಸುರೆವಾ | ಶ್ರೀಮದಾದೀಶ್ವರನೊಸೆದು ||೮||

ಮೊತ್ತಮೊದಲಕಾಲದೊಳು ವಂಶಭೇದವ | ಚಿತ್ತರದಿಂ ನಿರ್ಮಿಸಿದನು ||
ಮತ್ತಾಕುಲದೊಳು ಕುರುವಂಶವೆಂಬುದ | ತ್ಯುತ್ತಮಮಾಗಿ ರಂಜಿಪುದು ||೯||

ಆವಂಶದೊಳು ಸೋಮಪ್ರಭನೆಂಬೋರ್ವ | ಭೂವರನಿಹನವನನುಜ ||
ಭೂವಿಶ್ರುತದಾನತೀರ್ಥಪ್ರವರ್ತನ | ಕೋವಿದನಾಶ್ರೇಯಾಂಸ ||೧೦||

ಆಜನಪತಿ ಸೋಮಪ್ರಭನೃಪನ ತ | ನೂಜಾತ ಜಯನೃಪನೆಂಬ ||
ರಾಜಿಸು ಬುಧಜನಸುರಭೂಜನು ಘನ | ತೇಜಸು ಸಂಭವಿಸಿದನು ||೧೧||

ಕೃತಯುಗ ಚಕ್ರೇಶಭರತಗೆ ಸೇನಾ | ಪತಿರತ್ನಮಾಗಿ ಭೂಮಿಯನು ||
ಪ್ರತಿಪಾಲಿಸಿ ಕಡೆಯೊಳು ದೀಕ್ಷೆವಡೆದು | ಸ್ವತಸಿದ್ಧಪದವನೆಯ್ದಿದನು ||೧೨||

ಎನುತ ಸೋಮಪ್ರಭ ಜನಿತವಾದುದರಿಂ | ಘನತರಮಪ್ಪಾವಂಶ ||
ಅನುಕರಿಸಿತುಸೋಮವಂಶಾಭಿಧಾನಮ | ನನಿಮಿಷಪತಿಯರಿಕೆಯೊಳು ||೧೩||

ವಿಸ್ತಾರಮಪ್ಪಾವಂಶದೊಳೊಗೆದು ಸ | ಮಸ್ತನೃಪರು ಪೋಗಲಲ್ಲಿ ||
ಹಸ್ತಿಯೆಂಬರಸನುದಿಸಿ ತನ್ನ ಹೆಸರೊಳು | ಹಸ್ತಿನಪುರವಕಟ್ಟಿಸಿದ ||೧೪||

ಬಳಿಕಪಲವು ಭೂಪಾಲಕರುದಯಿಸಿ | ಕಳಿಯೆ ಮತ್ತಾವಂಶದೊಳು ||
ಖಳಕರ್ಮವಿಜಯನುದ್ಭವಿಸಿದನವನೀ | ತಳವಂದ್ಯಶಾಂತಿತೀರ್ಥಕರು ||೧೫||

ಬಳಿಕದರೊಳಗರ್ಧಪಲ್ಯೋಪಮಕಾಲ | ಕಳಿಯಲು ಸಂಭವಿಸಿದನು ||
ಕಲಿಲಾರಣ್ಯದವಾನಲಕುಂಥು ಕೇ | ವಲಬೋಧವಿಭ್ರಾಜಿತನು ||೧೬||

ಆ ಕುರುಕುಲದಲ್ಲಿ ಜನಿಸಿದರುದ್ಧತ | ಭೀಕರಕರ್ಮಾಪಹರರು ||
ಲೋಕಸ್ತವನೀಯರು ಘನಕೀರ್ತಿ | ಸ್ವೀಕೃತರರತೀರ್ಥಕರು ||೧೭||

ಮತ್ತೆಕೆಲವುಕಾಲ ಪೋಗಲಂತದರೊಳು | ಉತ್ತಮರೂಪಸಂಯುತನು ||
ಚಿತ್ತಜಸನ್ನಿಭಶಕ್ತಿಯೆಂಬೋರ್ವ ನೃ | ಪೋತ್ತಂಸನುದ್ಭವಿಸಿದನು ||೧೮||

ಆ ಶಕ್ತಿನೃಪತಿಗೆ ಧಾರಿಣಿಯೆಂಬ ಸು | ಕೇಶಿವಲ್ಲಭೆಯಾದಳವರ್ಗೆ ||
ಕೌಶಲ್ಯವಿದರೆಂದೆನಿಪಪರಾಶರ | ನಾಶಾಂತನು ಜನಿಸಿದರು ||೧೯||

ಶಾಂತನಿಗರಸುತನವನಿತ್ತು ಶಕ್ತಿಭೂ | ಕಾಂತಪರಾಶರಸಹಿತ ||
ತಾಂ ತಳೆದನು ನಿಜಪಾರಿವ್ರಾಜಕ | ಸಂತತಿಯೊಳು ದೀಕ್ಷೆಯನು ||೨೦||

ಇತ್ತಲುಜ್ಜ್ವಲಕೀರ್ತಿಯುತ ಶಾಂತನುಭೂ | ಪೋತ್ತಂಸನೊಂದುದಿನದೊಳು ||
ಮತ್ತಾಪೊಳಲಬಹಿರ್ವನದೊಳಗೆ ಬ | ರುತ್ತಿರ್ದೊಂದುತಾಣದೊಳು ||೨೧||

ವಿಮಲಶಶಾಂಕವದನೆ ವಿದ್ಯಾಧರ | ರಮಣಿಯೋರ್ವಳು ಮುದದಿಂದ ||
ಸಮೆದೊಂದುಕೂಪವನಾನೀರೊಳು ತನ್ನ | ಕಮನೀಯಮಪ್ಪ ಭೂಷಣವ ||೨೨||

ಹಾಕಿಮತ್ತಾಕೂಪದತಡಿಯೊಳು ನಿಂದು | ಶೋಕಿಸುತಿರೆ ಕಾಣುತವೆ ||
ಭೂಕಾಂತಶಾಂತನುಮವಳಸದೃಶವ | ಪ್ಪಾಕಾರಕೆ ಸೋಲ್ತನಾಗ ||೨೩||

ಈತೆರದಿಂಸೋಲ್ತೆಲೆ ಬಾಲಕಿನೀ | ನೇತರದುಃಖದಿಂದಳಲ್ವೆ ||
ಆತೆರವನು ಪೇಳೆನಲವಳೆಂದಳು | ಭೂತಳಪತಿ ಶಾಂತನುವಿಗೆ ||೨೪||

ಸೊಗಯಿಸುವೆಸ್ನ ಭೂಷಣವಿಾನೀರೊಳ | ಗಗುಳಿವೆಯಿವಸೋರ್ಮೆಯೊಳು ||
ತೆಗೆದೆನಗೀವವರಾರನುಕಾಣದೆ | ಮಿಗೆದುಃಖಿಸಿದೆನು ಕುಮಾರ ||೨೫||

ಎನಲೆಂದನಿದಕುಮ್ಮಳವೇಕೆ ನಾನೊಂ | ದಿನಿಸರೊಳಗೆ ತೆಗೆದೀವೆ ||
ವನಿತೆನೋಡೆನಲೆಂದಳಂತಾದೊಡೆ ನಾನು | ನಿನಗೆ ರಮಣಿಯಾಗುವೆನು ||೨೬||

ಇಂತೆನಲವನಿಪನೆಲೆಬಾಲೆ ನಿನ್ನ ವೃ | ತ್ತಾಂತವನೆನಗೆಪೇಳೆನಲು ||
ಕಾಂತೆಯೆಂದಳು ವಿಜಯಾರ್ಧಮಹೀಧರ | ದಂತಕದೆಸೆಯಶ್ರೇಣಿಯೊಳು ||೨೭||

ಸುರುಚಿರಪೃಥ್ವೀತಿಲಕವೆಸರಪುರ | ವರದಮಹೀಧರನೆಂಬ ||
ಅರಸುಖೇಚರಗೆ ಮನೋಹರಿಯೆಂಬೋರ್ವ | ತರುಣಿಗೆ ನಾಸುಪುಟ್ಟಿದೆನು ||೨೮||

ಈಪರಿಬೆಳೆದು ಲಕ್ಷ್ಮೀಮತಿವೆಸರಾಂತು | ಶ್ರೀಪಂಚಮಿಯ ನೋಂಪಿನೊಳು ||
ಈಪೊಡವಿಯ ಮಧ್ಯದೊಳಿಪ್ಪ ಮೇರುವ | ಹಾಪರ್ವತಕೆಯ್ದುತವೆ ||೨೯||

ಅಲ್ಲಿಯಕೃತ್ರಿಮಚೈತ್ಯಾಲಯಕೆಯ್ದಿ | ಸಲ್ಲೀಲೆಯಿಂ ಸಿದ್ಧರನು ||
ನಿಲ್ಲದೆ ಪೂಜಿಸುತಿರೆ ಚಾರಣಮುನಿ | ವಲ್ಲಭರಾಗಲೆಯ್ದಿದರು ||೩೦||

ಅವರಿಗೆರಗಿ ಧರ್ಮಾಧರ್ಮದಿರವನು | ತವೆಕೇಳಿಯತಿವೇಗದೊಳು ||
ಭವಪಾಶವನು ಹರಿವೆನೆಂಬಬುದ್ಧಿಸಂ | ಭವಿಸಿದುದಂತರಂಗದೊಳು ||೩೧||

ಮನದೊಳು ಹೇಯವಂಕುರಿಸಲೂರಿಗೆ ಬಂದು | ಜನನೀಜನಕರನುಕಂಡು ||
ಜಿನಗಂಧೋದಕವನುಕೊಟ್ಟು ದೀಕ್ಷೆಯ | ನನುಕರಿಸುವೆನಾನೆನಲು ||೩೨||

ಆ ಮಾತುಗೇಳಿಯೊತ್ತರವತ್ತಿದಂದದಿ | ತಾಮಿಂತೆಂದಾಡಿದರು ||
ಪ್ರೇಮದ ಗಂಡುಮಕ್ಕಳು ಸಮಗಿಲ್ಲಾಗಿ | ಭಾಮೆ ನೀನೇರಾಜ್ಯಕೊಡತಿ ||೩೩||

ಪಿಂತಣ ಭವದ ಪಾಪದ ಫಲದಿಂ ಗಂಡು | ಸಂತಾನವೆಮಗಿಲ್ಲವಾಗಿ ||
ಕಾಂತೆ ನೀನೇಗಂಡುಮಗುವೆಂದು ನಾವು ನಿ | ಶ್ಚಿಂತರಾಗಿರ್ದೆವಿಂದುವರ ||೩೪||

ಬೇಡ ಮಗಳೆ ಗಂಡುಮಕ್ಕಳಹಡೆದೆಮ್ಮ | ನಾಡುಬೀಡಿಗೆಕರ್ತುಗಳನು ||
ಮಾಡಿ ಬಳಿಕದೀಕ್ಷೆಗೊಳ್ಳೆಂದು ನನ್ನನು | ಬೇಡಿಕೊಂಡರು ದೈನ್ಯದೊಳು ||೩೫||

ವರಮಾತಾಪಿತೃಗಳ ಮಾತನು ಪರಿ | ಹರಿಸದೆ ಬಳಿಕನಾನೆನಗೆ ||
ಸರಿಯಹ ಸತ್ಪುರುಷರು ನಮ್ಮವಿದ್ಯಾ | ಧರಲೋಕದೊಳಿಲ್ಲವಾಗಿ ||೩೬||

ಪೆದಮುಳಮಪ್ಪಭೂಚರರೊಳುಮುದದಿಂ | ಪುದುವಾಳ್ವೆನೆಂದಿಳೆಗಿಳಿದು ||
ಮದನಸದೃಶ ನಿನ್ನ ಕುಲ ನಿನ್ನ ಬಲ ನಿನ್ನ | ಚದುರತೆಯನು ನೆರೆಕೇಳಿ ||೩೭||

ನೀನೇವಲ್ಲಭನಾಗಲುಬೇಕೆಂದು | ನಾಸಿದಹಣ್ಣಿದೆನೆನಲು ||
ಆ ನರಪತಿಯಾಕೂಪದೊಳಗುಳಿದ | ಮಾನಿತಮಣಿಭೂಷಣವನು ||೩೮||

ಶರದಿಂದ ಶರವ ಪುಂಖಾನುಪುಂಖಿಯೊಳೆಚ್ಚು | ಭರದಿಂದತೆಗೆಯಲುಕಂಡು ||
ಉರುಮುದವೆತ್ತುಲಲನೆನೃಪಗತ್ಯಾ | ದರದಿಂದಿಂತುನುಡಿದಳು ||೩೯||

ತಡೆಯದೆನ್ನಾತನುಜರಸುರನದಿಯೊಳು | ಬಿಡುವುದಕಾನುದೀಕ್ಷೆಯನು ||
ಕಡೆಯೊಳು ಕೈಕೊಂಬುದಕೆಯವನಿಪತಿ | ಯೊಡಂಬಡಬೇಕುನೀನೆನಲು ||೪೦||

ಅಂತೇಗೆಯ್ವೆನೆನಲು ಕಡುಹರಿಸವ | ತಾಂ ತಾಳಿ ಖಚರಕುಮಾರಿ ||
ಶಾಂತನು ಕುರುಕುಲಚೂಡಾಮಣಿಯೊಳ | ಗಿಂತೆಂದು ಮಾತನಾಡಿದಳು ||೪೧||

ಮದನಸದೃಶಳೀಸತಿವಿಭವದಿಸುರ | ನದಿಯುವೇಳಾವನದೊಳಗೆ ||
ಪದಪಿಂದಬಂದಿರುನಾನಾಮಡುವಿನಿಂ | ದುದಯಿಸಿದಂತೆಯ್ದುವೆನು ||೪೨||

ಎನುತತಾನಾನದಿಯೊಳಗೆ ಮುಳುಗಿಬರ್ಪ | ದಿನದವೇಳೆಯುಹೇಳಿಕೊಟ್ಟು ||
ವನಿತೆಯಾಗಳೆಪೋಗಿಯಾವಾರ್ತೆಯ ತನ್ನ | ಜನಕಗರಿಕೆಯಮಾಡಿದಳು ||೪೩||

ಆನುಡಿಗೇಳಿಯಾತನು ಹರಿಸವ ತಾಳ | ಲಾನಾರಿಯಾಶಾಂತನುವಿಗೆ ||
ಸಾನಂದದಿನುಸುರಿದವೇಳೆಯೊಳು ಮ | ತ್ತಾನದಿಗಾಗಿಬಂದಿರಲು ||೪೪||

ಅತ್ತಲವನಿಪತಿಶಾಂತನು ಸಂತಸ | ವೆತ್ತುಮಹಾವಿಭವದೊಳು ||
ಚಿತ್ತರಮಪ್ಪಗಂಗೆಯತಡಿಗೆಯ್ದಿಪಾ | ರುತ್ತಿರ್ದನವಳಬರವನು ||೪೫||

ಅನಿತರೊಳಮೃತಸಮುದ್ರದಿಂದಾಸಿರಿ | ಜನಿಯಿಸಿಪೊರಮಡುವಂತೆ ||
ವನಿತಾಮಣಿಲಕ್ಷ್ಮೀಪತಿಮುಂದಾ | ಕಿನಿಯಿಂಪೊರಮಟ್ಟಳಾಗ ||೪೬||

ಮೀಂಗಳಮರಿಗಂಗಳಚಕ್ರವಾಕಕು | ಚಂಗಳತಾವರೆಮೊಗದ ||
ಅಂಗನೆಗಂಗೆಯೆಂಬಂದದಿನಾ ದೇವ | ಗಂಗೆಯಿಂಪೊರಮಟ್ಟಳಾಗ ||೪೭||

ಹೊಳೆಯಮಡುವಿನಿಂದ ಪೊರಮಡುವಾ ಕೋ | ಮಲೆಯನಿದಿರ್ಗೊಂಡುತಂದು ||
ಸುಲಲಿತಮಪ್ಪಲಗ್ನದೊಳು ಮದುವೆನಿಂದು | ತಳೆದನುಸಲೆಸಂತಸವನು ||೪೮||

ಗಂಗೆಯುಮಡುವಿಂದ ಬಂದಕಾರಣದಿಂದ | ಗಂಗೆಯೆಂದೆಂಬನಾಮವನು ||
ಅಂಗನೆಗಿತ್ತು ಮಮತೆಯಿಂದಾನೃಪ | ತುಂಗನವಳನಾಳುತಿರಲು ||೪೯||

ಸುದತಿತನಗೆಜನಿಸಿದಮಕ್ಕಳೇಳ್ವರ | ನದಿಯೊಳುಬಿಟ್ಟಂತೆಮಾಡಿ ||
ಪಡೆದುವಿದ್ಯೆಗಳಿಂದ ತನ್ನ ಜನಕನೆಡೆ | ಗೊದವಿದಮುದದಿನಟ್ಟಿದಳು ||೫೦||

ಮತ್ತನೊಂಬತ್ತನೆಯಣುಗನನಾಸತಿ | ಹೆತ್ತಾಗನದಿಯೊಳುಬಿಟ್ಟು ||
ಹೆತ್ತಮಕ್ಕಳಸಲಹುವೆನೆಂಬಭಿಲಾಷೆ | ವೆತ್ತಾಮಗುವಸುತರಿಸಿ ||೫೧||

ತತ್ತಸುಜಾತಗೊಲಿದು ಭೀಷ್ಮನಾಮವ | ನಿತ್ತಾಗಂಗಾದೇವಿ ||
ಹೆತ್ತುದರಿಂ ಗಾಂಗೇಯಾಭಿಧಾನವ | ಸುತ್ತಮನಾನೃಪನಿಡಲು ||೫೨||

ಧರೆಯೊಳು ತನಗೆಣೆಯಾರಿಲ್ಲವೆಂಬಂ | ತರಮಗನಾಗಾಂಗೇಯ ||
ವರರೂಪಗಾಡಿವಿಕ್ರಮದೊಡಗೂಡಿಬಂ | ಧುರನಾಗಿಹರೆಯವೇರಿದನು ||೫೩||

ಹರೆಯವಡೆದಮಗನನುಕಂಡು ಬಿಜಾಜ್ಞ | ದರಿಲಕ್ಷ್ಮೀಮತಿತನ್ನ ||
ಸುರುಚಿರಮಪ್ಪವಿದ್ಯೆಗಳನೆಲ್ಲವನವ | ಗುರುಮುದದಿಂಕೊಟ್ಟುಬಳಿಕ ||೫೪||

ಒಡಲೊಳು ಮೊದಲುಹೂಣಿದ ವೈರಾಗ್ಯವಂ | ಬೊಡವೆಯುತೆಗೆದುವಲ್ಲಭನ ||
ಮುಡದಿಯೊಡಂಬಡಿಸುತ ಜಿನದೀಕ್ಷೆಯ | ಕಡುವೇಗದಿಂಕೊಂಡಳಾಗ ||೫೫||

ನುತಮಪ್ಪತಪಸಿನಫಲದಿಂದಾ ಶ್ರೀ | ಮತಿತನುಭಾರವನಿಳುಹಿ ||
ಅತಿಶಯಮೆನಿಪ ಸೌಖ್ಯವನುಸಂಭವಿಸುವ | ಚ್ಯುತಕಲ್ಪದೊಳುಜನಿಸಿದಳು ||೫೬||

ಇಂತಚ್ಯುತಕಲ್ಪದೇವನಾಗಿರಲಿತ್ತ | ಶಾಂತನುವಿರುತೊಂದುಪಗಲು ||
ತಿಂತಿಣಿಗೊಂಡರಸುಗಳುವೆರಸಿ ನಿ | ಶ್ಚಿಂತದಿ ಪೊರಮಟ್ಟುಬಳಿಕ ||೫೭||

ಬಂದು ಗಂಗೆಯತಡಿಯೊಳು ತಾಪಸಾಶ್ರಮ | ವೊಂದಿರಲಂತದರೊಳಗೆ ||
ಇಂದುವದನೆತಾಪಸಸುತೆಯೋರ್ವಳು | ಸಿಂದಿರಲವಳನೋಡಿದನು ||೫೮||

ಮುಸುಕಿದವಿರಹದಿಂದಾಶಾಂತನು ಭೂಪ | ನಸದೃಶಿಯಾಕೆಯತಂದೆ ||
ವಸುವೆಂಬಗೊರವನನಾಪೆಣ್ಮಣಿಯನು ಸಂ | ತಸದಿಂದಬೇಡಿಸಲವನು ||೫೯||

ಪಾಯಕಳೆದವರಿಗಬಳೆಯಕೊಡುವುದ | ನ್ಯಾಯಮೆನಲು ಕೇಳಿನೃಪತಿ ||
ಕಾಯಜಕಣೆಗೆತನುವನೊಡ್ಡಿ ಪುರಕೆಬಂ | ದಾಯಾಸಗೊಳುತಿರಲಾಗ ||೬೦||

ತಂದೆಗೆ ವಿರಹವಂಕುರಿಸಲು ಕೇಳ್ದಾ | ನಂದನಭೀಷ್ಮಕುಮಾರ ||
ಬಂದಾತಪಸಿಯಲ್ಲಿಗೆ ಮುದದಿಂನಮ್ಮ | ತಂದೆಗೆಕೊಡು ನಿನ್ನಮಗಳ ||೬೧||

ಎನಲವನೆಂದನಲೇಭೀಷ್ಮಸುಕುಮಾರ | ಎನುತವಿಕ್ರಮಿಕೇಳುನಿನಗೆ ||
ಅನುಚರರಾಗುವರೆನ್ನಮಗಳು ಹೆತ್ತ | ತನುಜರದರಿಂಕೊಡೆನಾನು ||೬೨||

ಎಂದುಬೆಟ್ಟಿಯುವಮಾತನುಡಿಯಲು ಭೀಷ್ಮನಿಂ | ತೆಂದನುಸನಗೀಭವಕೆ ||
ಇಂದುಮುಖಿಯುರಾರಾಜ್ಯವು ನಿರ್ವೃತಿ | ಯೆಂದುವ್ರತವಧರಿಸಿದನು ||೧೩||

ಈತೆರದಿಂಬ್ರಹ್ಮಚರ್ಯಸಂಯಮವವಿ | ಖ್ಯಾತಧರಿಸಲಾತಪಸಿ ||
ಪ್ರೀತಿಯಿಂತನ್ನತನುಜೆ ಸತ್ಯವತಿಯನು | ಭೂತಳೇಶಗೆಕೊಟ್ಟನೊಸೆದು ||೧೪||

ಧಾತ್ರಿಪನಿಂತುಮದುವೆನಿಂದಾಮೃಗ | ನೇತ್ರೆಯೊಳೊಲಿದಿರಲವರ್ಗೆ ||
ಪುತ್ರರು ಜನಿಯಿಸಿದರು ಚಿತ್ರವೀರ್ಯ ವಿ | ಚಿತ್ರವೀರ್ಯರೆಂಬವರು ||೧೫||

ಸುತರನುಸಲಹುತ ಶಾಂತನುಭೂಪತಿ | ಮತಿಹೀನನೆನಗಾಗಿಮಗನು ||
ನುತಗುಣಿಭೀಷ್ಮನು ಸತಿಯರತೊರೆದನೆಂ | ದತಿಚಿಂತಾಕ್ರಾಂತನಾಗಿ ||೧೬||

ಎನ್ನಲ್ಪಸುಖಕಾಗಿ ಸುತನಸುಖವು ತಪ್ಪಿ | ತೆನ್ನೇಕೆಬಾಳ್ವೆನೆಂದೆನುತ ||
ಉನ್ನತಗುಣಿಶಾಂತನುಧರಿಯಿಸಿದನು | ಸನ್ನುತಜಿನದೀಕ್ಷೆಯನು ||೧೭||

ಬಳಿಕಿತ್ತಭೀಷ್ಮನುಜರು ವಿಕ್ರಮಗೂಡಿ | ಬೆಳೆದವರೊಳುಚಿತ್ರವೀರ್ಯ ||
ತಳುವದೆ ಪರಭೂಪರೊಳುಕಾದಿಯುವರನು | ಗಳೆದುತಾನಲ್ಲಿಯುಳಿದನು ||೧೮||

ಬಳಿಕವಿಚಿತ್ರವೀರ್ಯಗೆ ಭೀಮನೃಪಕುಲ | ತಿಲಕನುನ್ನತರೂಪವನು ||
ತಳೆದಂಬಿಕೆಯಂಬೆಯಂಬಾಲೆಯೆಂಬ ಹೆಂ | ಗಳನು ಕಾಶೀಜನಪದದ ||೧೯||

ಒಡೆಯನಮಕ್ಕಳ ಬೇಡಿಕಳುಹಲವ | ಕುಡದಿರಲಾವಾರ್ತೆಗೇಳಿ ||
ಕಡುಗಲಿ ಭೀಷ್ಮನವನಮೇಲೆ ದಾಡೆತ್ತಿ | ನಡೆದವನನು ನೆಬಕಿಕ್ಕಿ ||೨೦||

ಆ ಮೂವರುಸತಿಯರತಂದು ತಮ್ಮಗೆ | ಪ್ರೇಮದಿ ಮದುವೆಯಮಾಡೆ ||
ಆ ಮನುಜೇಶಕುಮಾರನವರೊಳು | ದ್ದಾಮಸುಖದಿ ಕೂಡಿರಲು ||೨೧||

ಅಂಬೆಗೆಧೃತರಾಷ್ಟ್ರನೆಂಬ ಜಾತ್ಯಂಧನು | ವಂಬಿಕೆಗಾ ಪಾಂಡುನೃಪತಿ ||
ಎಂಬವನಂಬಾಲೆಗೆ ನುತ್ತವಿದುರನೆಂ | ದೆಂಬವರುದ್ಭವಿಸಿದರು ||೨೨||

ಪುತ್ರರು ಪುಟ್ಟಲೊಡನೆ ರೋಗದಿಂದವಿ | ಚಿತ್ರವೀರ್ಯನು ಸತ್ತುಪೋಗೆ ||
ಕ್ಷತ್ರಿಯಕುಲದೀಪ ಭೀಷ್ಮನವರಪಾಲಕೆ | ಧಾತ್ರಿಯೊಳತಿಕೀರ್ತಿವಡೆದ ||೨೩||

ಎಂದಿಂತಾಕುರುಕುಲದ ವಿಸ್ತಾರವ | ನೊಂದಿನಿಸಿಲ್ಲದೆಪೇಳಿ ||
ಕಂದರ್ಪನಿಭರೂಪನಂಧಕವೃಷ್ಟಿಗಿಂ | ತೆಂದನು ಮತ್ತಾಮಂತ್ರಿ ||೨೪||

ಅವನಿಪಕೇಳು ವಿಚಿತ್ರವೀರ್ಯನ ಸುತ | ರವರಿಗೆ ನಿಮ್ಮ ಸುತೆಯರ ||
ನವಿನಯದಿಂಕುಡಬೇಕೆಯುಟ್ಟಿದನೆಮ್ಮ | ನವಿರಳಗುಣಿಭೀಷ್ಮನೆನಲು ||೨೫||

ಈರೀತಿವಡೆದ ನಿಮ್ಮವನಿಪಾಲಕಸುಕು | ಮಾರಕರಾಮೂವರೊಳು ||
ಅರಗ್ರಜಾತರವರಿಗೆವ್ಮುಮಕ್ಕಳ | ನಾಸ್ಯೈಯುದೀವೆನೆಂದೆನಲು ||೭೬||

ಅರಸುತನಕೆ ಕರ್ತೃ ಧೃತರಾಷ್ಟ್ರನೆಲ್ಲಕೆ | ಹಿರಿಯನೆನಲು ಭೂವರನು ||
ಪಿರಿದುವಿಚಾರಿಸಿದನು ತನ್ನಮನದೊಳು | ನಿರುತಪುಪ್ಪಾಕಾರ್ಯವನು ||೭೭||

ಹುಟ್ಟುಕುರುಡನಾದೊಡಮೇನೂ ಧೃತರಾಷ್ಟ್ರ | ಪಟ್ಟಕೆಕರ್ತೃವಾದುದರಿಂ ||
ನೆಟ್ಟನೆಯವಗೆ ಮಕ್ಕಳಕುಡಬಹುದೆಂದು | ದಿಟ್ಟನೆಣಿಸುತಿಂತುಸುಡಿಪ ||೭೮||

ಹಿರಿಯಕುವರ ಧೃತರಾಷ್ಟ್ರಗೆ ನವಿಮ್ರಾ | ನರಪತಿವೃಷ್ಟಿಯಸುತೆಯು ||
ಹರಿಸದಿಕುಡುವೆನೆಂಬಅನುಡಿಗಾಮಂತ್ರಿ | ವರರನುರಾಗಮನೆಯ್ದಿ ||೭೯||

ಅರಸನಕೈಯಿಂದ ಬಳಿಕ ಬೀಳ್ಕೊಂಡತಿ | ಭರದಿಂದ ಪೊರಮಟ್ಟುಬಂದು ||
ವರಹಸ್ತಿನಪುರಕೆಯ್ದಿ ಭೀಷ್ಮರಕಂ | ಡೊರೆದರಂಪಾಕಾರ್ಯವನು ||೮೦||

ಆ ನುಡಿಗೇಳಿ ಶೌರೀಪುರಕಾಭೀಷ್ಮ | ಭೂನಾಥನೆಯ್ದಿಮದುವೆಯ ||
ಸಾನಂದದಿ ಮಾಡಿದನು ಧೃತರಾಷ್ಟ್ರಗೆ | ಭೂಸುತೆ ಗಾಂಧಾರಿಯನು ||೮೧||

ಉರುತರಮುಪ್ಪವಸ್ತುವ ಬಳುವಳಿಗೊಟ್ಟು | ನರಪನಂಧಕವೃಷ್ಟಿಕಳುಹೆ ||
ಹರಿಸದಿಮದವಕ್ಕಳುಗೂಡಿ ಹಸ್ತಿನ | ಪುರಕೆಬಂದನು ಭೀಷ್ಮನೃಪತಿ ||೮೨||

ಪುರವನುಪೊಕ್ಕುಮತ್ತೊಂದುದಿವಸದೊಳು | ಗರುವೆಕೊಂತಿಯನು ಪಾಂಡುವಿಗೆ ||
ಹರಿಸದಿಕುಡಹೇಳಿ ಕಳುಹಿದವರ ಕೂಡೆ | ಧರಣೀಶನಂಧಕವೃಷ್ಟಿ ||೮೩||

ನವಪಾಂಡುರೋಗವಿಡಿದ ಪಾಂಡುಕುವರಗೆ | ಯುವತೀಮಣಿಕೊಂತಿಯನು ||
ಸವಿನಯದಿಂದೀವುದುಚಿತವಲ್ಲೆನಲು ಮ | ತ್ತವರು ತಿರುಗಿದವಾರ್ತೆಯನು ||೮೪||

ಅರಿದಾಪಾಂಡುಕುಮಾರನಾ ಕೊಂತಿಯ | ಮೆರೆವವಿಲಾಸವಿಭ್ರಮವ ||
ನೆರೆಕೇಳಿಕಿವಿವೇಟಗೊಂಡು ವಿರಹದೊಳು | ಮರುಗುತಿರ್ದೊಂದುದಿನದೊಳು ||೮೫||

ಪುರದಬಹಿರ್ನಂದನಕೆಪೋಗಿ ವಿಹರಿಸು | ತಿರೆ ಮೊದಲೋರ್ವಖೇಚರನು ||
ವರಸತಿಯೊಳು ಕ್ರೀಡಿಸುತಿರ್ದು ತನ್ನಕೈ | ವೆರಲಕಾಮುದ್ರಿಕೆಯನು ||೮೬||

ಅಲ್ಲಿ ಮರೆದುಪೋಗಲದನಾ ಪಾಂಡು ಭೂ | ವಲ್ಲಭನೆತ್ತಿಕೈಗಿಟ್ಟು ||
ಸಲ್ಲೀಲೆಯಿಂದಿರಲಾ ವಿದ್ಯಾಧರ | ನಿಲ್ಲದಾ ಎಡೆಗೆಯ್ತಂದು ||೮೭||

ಏನನರಸುವಿರಿ ನೀವೆನಲವನೆಂದ | ನಾನೆನ್ನ ಕೈಯಮುದ್ರಿಕೆಯ ||
ಈನೆಲದೊಳುಕೆಡಹಿದೆನೆನೆ ಕೇಳ್ದಾ | ಮಾನಿತಗುಣಿ ಪಾಂಡುನೃಪತಿ ||೮೮||

ಭರದಿಂದ ತನ್ನವಶದೊಳಿರ್ದ ರನ್ನದುಂ | ಗುರವನು ಕೊಡಲಂದವನು ||
ಉರುಹರುಷವತಾಳಿ ಎಲೆ ಭೂಸುತಗುಣಿ | ವರಸತ್ಯನಿಧಿ ಸುಕುಮಾರ ||೮೯||
ಮರಸದೆನ್ನೀಕಾಮಮುದ್ರಿಕೆಯನು ಕೈ | ದೊರೆದುಕೊಟ್ಟೆಯಲಾ ಎಂದು ||
ಎರಕದಿಂದಾಪಾಂಡುಕುವರನ ಕೊಂಡಾಡಿ | ನೆರೆಗುಣಿಯಾಖೇಚರನು ||೯೦||

ಇದುಕಾಮಿತಫಲವೀವ ಮುದ್ರಿಕೆಯಿಂ | ತಿದುನಿನ್ನ ವಶದೊಳಿರಲಿ ||
ಇದು ನೀನುಬಯಸಿದ ಕಾರ್ಯವಕೊಡುವುದೆಂ | ದದರ ಮಂತ್ರವ ಹೇಳಿಕೊಟ್ಟು ||
ಮತ್ತಮಿಂತೆಂದನು ವಿಜಯಾರ್ಧಭೂಧರ | ದುತ್ತರದಿದಿರಶ್ರೇಣಿಯೊಳು ||
ಉತ್ತಮಮಾದ ಕಿನ್ನರಗೀತವೆಂಬೊಂದು | ಪತ್ತನದಧಿಪತಿನಾನು ||೯೨||

ನನ್ನ ಹೆಸರು ವಜ್ರಮಾಲಿ ನಾನಾವಾಗ | ನಿನ್ನೆಡೆಗೈದಿದಾಕ್ಷಣವೆ ||
ರನ್ನದನುದ್ರಿಕೆಯನುಕೊಡು ನೀನೆಂದು | ತನ್ನ ನೆಲೆಗೆಪೋದನಿತ್ತ ||೯೩||
ಸುಕುಮಾರನಾಪಾಂಡುನೃಪತಿಯಾಕಾಮಮು | ದ್ರಿಕೆಯೊಂದುಸಾಮರ್ಥ್ಯದಿಂದ ||
ಸುಕರಮಪ್ಪೊಂದು ವಿಮಾನವರಚಿಸಿಯು | ತ್ಸುಕದಿಂದ ತಾನದನೇರಿ ||೯೪||

ಒಡನಾಡಿಗಳುಕೂಡಿ ನೀರದಪಥದೊಳು | ನಡೆದು ಶೌರೀಪುರಕೈದಿ ||
ಮಡದಿಮಾಣಿಕಕೊಂತಿಯಾಡುವ ವನವನು | ಕಡುರಸಿಕನುಹೊಕ್ಕನತ್ತ ||೯೫||
ಕೊಂತಿ ನಾಲಕು ನೀರುಮಿಂದು ಕೆಳದಿಯರ | ತಿಂತಿಣಿಯನು ಕೂಡಿಕೊಂಡು ||
ಕಾಂತೆ ರಾಜನವಲ್ಲಭೆಯೆಂಬಂದದಿ | ತಾಂತಳರಿದಳಾಬನಕೆ ||೯೬||

ಬನದೊಳುತೊಳಲಿಯಾಡುತ್ತಿರ್ದಭಿನವ | ಮನಸಿಜನಂದದೊಳಿರ್ಪ ||
ಜನತಾಧಿಪಪಾಂಡುರಾಜಭಾಸ್ಕರನಾ | ವನಜಲೋಚನೆ ಕಂಡಳಾಗ ||೯೭||
ಕಾಣಲೊಡನೆತನ್ನಮನದೊಳು ಮನಸಿಜ | ಬಾಣಗಳೆಡೆಯಾಡುತಿರಲು ||
ತ್ರಾಣವಡಗಿಯಿವನಾರೆಂದು ಸಖಿಯರ | ಏಣಲೋಚನೆಕೇಳಿದಳು ||೯೮||

ಸುದತೀಮಣಿ ಗಾಂಧಾರಿಯುಪರಿಣಯ | ನದೊಳಾಧೃತರಾಷ್ಟ್ರನೊಡನೆ ||
ಮುದದಿಂದ ಬರಲಿವನನು ನಾವುಕಂಡೆವಂ | ತದರಿಂದಪಾಂಡುಕುಮಾರ ||೯೯||
ನಿನ್ನ ಸೋದರಭಾವನೆನಲಾಸುದತಿಕೇಳಿ | ಉನ್ನತಮಪ್ಪಕಾತರದಿ ||
ತನ್ನಮನವನಾತಗೆ ಮಾರುಗೊಟ್ಟಾ | ಚೆನ್ನೆನಿರೀಕ್ಷಿಸುತಿರಲು ||೧೦೦||

ಕೆಳದಿಯರವರ ಕಾತರದಚಿತ್ತವನರಿ | ದಲಘುತರಪ್ರೀತಿಯಿಂದ ||
ತಳುಮಾಡದೆ ಗಾಂಧರ್ವವಿವಾಹವ | ನೆಳಸಿಮಾಡಿದರಂತವರ್ಗೆ ||೧೦೧||

ಆ ಗಾಂಧರ್ವವಿವಾಹಾಂತರದೊಳು | ರಾಗದಿಂದಾಪಾಂಡುನೃಪತಿ ||
ಪೂಗೋಲನಾ ರತಿಯೊಳು ಕೂಡಿದಂದದಿ | ನಾ ಗರುವೆಯೊಳು ಕೂಡಿದನು||೧೦೩||
ಆರುಮರಿಯದಂತೆ ನಾಲ್ಕೆಂಟುದಿವಸ ಮ | ತ್ತಾರವ್ಯಾವಸದೊಳಗಿರ್ದು ||
ಆ ರಮಣಿಯೊಳು ಬೀಳ್ಕೊಂಡಾಪಾಂಡು ಕು | ಮಾರ ತವಪ್ಪೂರಿಗೈದಿದನು ||
ಇತ್ತಕೊಂತಿಗೆ ಗರ್ಭಚಿಹ್ನವು ದಿನದಿನ | ಕೊತ್ತಂಬಿಸಿ ಗೂಢಮಿರ್ದು ||
ಮತ್ತಮದಾರುಮರಿಯದಂತೆ ಶಿಶುವನು | ಹೆತ್ತಳು ಶುಭಲಗ್ನದೊಳು ||೧೦೪||
ಆ ಸುಕುಮಾರನನೊಂದುಮಂದಾಸಿನೊಳ್ | ರಾಸಿಮಾಡಿದ ರತ್ನಸಹಿತ ||
ಆ ಸಹಚರಿಯರಿರಿಸಿಸೋಮವಂಶಜ | ನೀಸಿಸುವೆಂದು ಶುದ್ಧಗೆಯ್ದು ||೧೦೫||
ಅಂದವಾಗಿ ಬರೆದದನಲ್ಲಿ ಪರಿವ ಕಾ | ಳಿಂದೀನದಿಯೊಳುಬಿಡಲು ||
ಅಂದಿನಪಗಲೊಳಗಾಮಂದಸುಪರಿ | ತಂದುದುಕಡುವೇಗದೊಳು ||೧೦೬||
ಮಿಗೆಸೊಗಯಿಸುವಂಗದೇಶದ ಚಂಪಾ | ನಗರಿಯಾರವೆಯಕೆಲದೊಳು ||
ಧಗಧಗಿಸುತಬರುತಿರಲದನೋರ್ವನಂ | ಬಿಗನು ತೆಗೆದು ಮುದದಿಂದ ||೧೦೭||
ತನ್ನಮನೆಗೆ ಕೊಂಡುಪೋಗಿ ಮಂದಸಿನೊಳು | ರನ್ನದರಾಸಿಯನಡುವೆ ||
ಹೊನ್ನಬೊಂಬೆಯವೊಲು ಹೊಳೆವಸಿಸುವಕಂ | ಡುನ್ನತಹರ್ಷವತಾಳಿ ||೧೦೮||
ಕರಗಳನೆರಡನೆರಡುಕರ್ಣದೊಳಗಿಟ್ಟು | ಕರವೊಪ್ಪುತಿರಲಾಸಿಸುವಿಗೆ ||
ಹರಿಸದಿ ಕರ್ಣನೆಂಬಭಿಧಾನಮನಿತ್ತು | ಪಿರಿದಳ್ತಿಯಿಂ ಸಾಕುತಿರಲು ||೧೦೯||
ಆ ನಗರಿಯ ಸೂರ್ಯನೆಂಬ ಮಹೀಪತಿ | ತಾನಾವಾರ್ತೆಯಕೇಳಿ ||
ತಾನಪುತ್ರಿಕನಾದುದರಿಂ ತಡೆಯದೆ | ಸಾನುರಾಗದಿ ತರಿಸಿದನು ||೧೧೦||
ಆ ಮಂದಸಿನೊಂದುಕೆಲದೊಳು ಬರೆದಿರ್ದ | ಸೋಮವಂಶಜನೀತನೆಂಬ ||
ನಾಮದಕ್ಕರಗಳನೋದಿಸಿ ನೋಡಿಯು | ದ್ದಾಮಹರ್ಷವನೆಯ್ದಿದನು ||೧೧೧||
ತನ್ನ ಮೋಹದರಾಧೆಯೆಂಬ ರಮಣಿಗಿತ್ತು | ಚೆನ್ನಾಗಿ ಸಲಹುತಲಿರಲು ||
ಚೆನ್ನೇಸರು ಮೂಡಗಡೆಬೆಳೆವಂದದಿ | ಸನ್ನುತವೆತ್ತುಬೆಳೆದನು ||೧೧೨||
ಸುರಭೂಜಾತದ ಸಸಿಯಂದದೊಳಾ | ಸುರಭಿಯಸಿಸುವಿನಂದದೊಳು ||
ವರಚಿಂತಾಮಣಿಗರುವಿನಂದದೊಳು ಬಂ | ಧುರನಾದನಾಸುಕುಮಾರ ||೧೧೩||
ಇದುಜಿನಪದಸರಸಿಜ ಮದ ಮಧುಕರ | ಚದುರ ಮಂಗರಸ ರಚಿಸಿದ ||
ಮದನಾರಿ ನೇಮಿಜಿನೇಶ ಸಂಗತಿಯೊಳ | ಗೊದವಿದಸಂಧಿಗಳೈದು ||೧೧೪||

ಐದನೆಯ ಸಂಧಿ ಸಂಪೂರ್ಣಂ.

# ೬. ಪಾಂಡು ಕೊಂತಿ ಮಾದ್ರಾ ವಿವಾಹಸಂಧಿ



ಶ್ರೀಮದಮರಪತಿ ಮೌಳಿಕೀಲಿತಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದದವೆತ್ತೆರಗುವೆನು ||೧||

ಮತ್ತಾ ಸೂರ್ಯನೃಪತಿಗಾರಾಧಗೆ | ಉತ್ತಮರೂಪ ಸಂಯುತನು ||
ಉತ್ತುಂಗತೇಜದಿ ಕರ್ಣನೆಂಬವನು | ತ್ಪತ್ತಿಯಾದನು ಬಳಿಕಿತ್ತ ||೨||

ಆ ಹೆಣ್ಮಣಿ ಕೊಂತಿಯೊಳು ಗಾಂಧರ್ವ ವಿ | ವಾಹದಿನಾಪಾಂಡುಕುವರ ||
ನೇಹದಿನೆರೆದುದನಾಸುತನು ಜನಿಯಿಸಿ | ದಾಹದ ಹೊರಹೊಮ್ಮಲದನು ||೩||

ಅರಸ‡ನಂಧಕವೃಷ್ಟಿಕೇಳ್ದತಿಚಿಂತಾ | ತುರನಾಗಿ ತನುಜೆಯೆಸಗಿದ ||
ದುರಘವ್ಯಾಪಾರಕಿನ್ನೇವೆನೆಂದದ | ಪರಿಹರಿಸಲುಬೇಕೆಂದು ||೪||

ನವಗಿನ್ನೇನಂದೆನಬಾಳಿದೆಂದಾ | ಕುವರಿಕೊಂತಿಯನು ಪಾಂಡುವಿಗೆ ||
ನವಿನಯದಿಂದೀವುದು ಮತವೆಂದಾ | ಸುವಿವೇಕಿಕಾರ್ಯವನೆಣಿಸಿ ||೫||

ಸುರಸಿಂಧುಜನಲ್ಲಿಗೆ ಪಾಂಡುಗವಿಮ್ರಾ | ತರಳೆ ಕೊಂತಿಯನೀವೆನೆಂದು ||
ಚರರಕಳುಹಲಾತದಕೇಳಿ ಪಾಂಡುಭೂ | ವರನಿಂತೆಂದಾಡಿದನು ||೬||

ಕಿರಿಯತನುಜೆ ಮಾದ್ರಿಯನು ಕೊಟ್ಟಲ್ಲದೆ | ಬರಿದೆ ಕೊಂತಿಯನೊಲ್ಲೆನೆಂಬ ||
ಇರುಕುವಾತಾಡಲದನು ಕೇಳಿಯಾ ನಾ | ಡೆರೆಯನಂತೇಗೆಯ್ವೆನೆನಲು ||೭||

ಗಾಂಗೇಯನಾಪುರಕೆಯ್ದಲು ತನ್ನ ಮ | ನಂಗೊಳಿಪಾಕನ್ನೆಯರನು ||
ಅಂಗಜನಿಭಪಾಂಡುವಿಗೆಯಂಧಕವೃಷ್ಟಿ | ಮಾಂಗಲ್ಯವನು ಮಾಡಿದನು ||೮||

ಇಂತು ಮದುವೆಮಾಡಿಯುಡುವಲಿಯನುಕೊಟ್ಟು | ಕೊಂತಿಮಾದ್ರಿಯರನು ಕಳುಹೆ ||
ಕಂತುಸದೃಶಪಾಂಡು ಸಹಿತಾಭೀಷ್ಮಭೂ | ಕಾಂತನೆಯ್ದಿದ ನಿಜಪುರಕೆ ||೯||

ಅತಿವಿಭವದಿ ಪೊಳಲನು ಹೊಕ್ಕಿರಲಾ | ಧೃತರಾಷ್ಟ್ರ ಪಾಂಡುಕುವರರು ||
ಸತತಸುಖಿಗಳಾಗಿರಲಾಭೀಷ್ಮಭೂ | ಪತಿಯೊಂದಾನೊಂದುಪಗಲು ||೧೦||

---

**ಪಾಠಾಂತರ.**—‡ಅಂತದಕೇಳ್ದು.

ಹಿರಿಯತಂದದಿ ರಾಜ್ಯಪದವಿಯನಿತ್ತೊಡೆ | ಕುರುಡನಿವನು ಕಿರಿಯವಗೆ ||
ಹಿರಿಯನಿದ್ದಂತೀಯಬಾರದೆನುತ ಸಚಿ | ವರರೊಳಾಲೋಚನೆಗೆಯ್ದು ||೧೧||

ವಸುಧೆಯನಾಧೃತರಾಷ್ಟ್ರಗೆ ಪಾಂಡುಗೆ | ಪಸುಗೆಯರಸ ಮಾಡಿಕೊಟ್ಟು ||
ಪಸುಳೆಯಾಗಿರ್ದ ವಿದುರಕುಮಾರನ | ಸೊಸೆದು ತಾನೋವುತಲಿರ್ದ ||೧೨||

ಧರೆಯದುರ್ಧರತರ ವಿಕ್ರಮದಿಂದಾಳು | ತುರುಮುದದಿಂ ಧೃತರಾಷ್ಟ್ರ ||
ಪಿರಿಯಣ್ಣನೊಳ್ಕೂಡಿಯಾಡುತ ಪಾಂಡುಭೂ | ವರನು ವಿರಾಜಿಸುತಿರ್ದ ||೧೩||

ಕೊಂತಿಮಾದ್ರಾದೇವಿಯರೊಳು ಒಲಿದು ನಿ | ಶ್ಚಿಂತನಾಗಿಯೊಂದುಪಗಲು ||
ಕಂತುಗುತ್ಸಹವನು ಮಾಡುತ ಬಂದ ಬ | ಸಂತಮಾಸದ ಸಮಯದೊಳು ||೧೪||

ರನ್ನಗೆಲಸದ ವಿಮಾನವನಿರದೇರಿ | ಚೆನ್ನೆ ಮಾದ್ರಾದೇವಿಸಹಿತ ||
ಸನ್ನುತಮಪ್ಪೊಂದಾನೊಂದು ವನಕಾಗಿ | ಯುನ್ನತಗುಣಿಯೈದಿದನು ||೧೫||

ನಂದನದೊಳು ನಲವಿಂದತಿಯೊಡನಾ | ಕಂದರ್ಪನೊಸೆದಿರ್ಪತೆರದಿ ||
ಇಂದುವದನೆ ಮಾದ್ರಿಯೊಳು ಪಾಂಡುನೃಪತಿಯಾ | ನಂದದಿ ರಮಿಯಿಸಿಬಳಿಕ ||

ಮಿಗೆಸೊಗಯಿಸುವಾ ವನದ ಬಾಗಿಲೊಳಿರ್ದು | ದಿಗವಲೋಕನಗೆಯ್ವಾಗ ||
ಮಿಗಗಳೆರಡು ಮುಂದೆ ಪರಿತರಲಾನೃಪ | ನೊಗೆದುದು ಕೋಪಾವೇಶ ||೧೭||

ಇಟ್ಟಣಿಸಿದ ಕೋಪದಿಂದ ಬಿಲ್ಲೊಳು ಶರ | ದೊಟ್ಟಾ ಮಿಗಗಳನೆಸಲು ||
ತೊಟ್ಟನೆ ಬೆಗ್ಗರೆವುತ ತಮ್ಮಸುವನು | ಬಿಟ್ಟು ನೆಲಕೆಬೀಳ್ದುವಾಗ ||೧೮||

ಕರುಣವಿಲ್ಲದೆಯಾಹರಿಣಿಯುಗವನಾ | ಧರಣೀಶನೆಚ್ಚುದ ಕಂಡು ||
ಪಿರಿದುಮರುಕದಿಂದಾ ಮಾದ್ರಾದೇವಿ | ಯೊರೆದಳು ತಾನಿಂತೆಂದು ||೧೯||

ಅಪರಾಧಹೀನಂಗಳವನು ಪರೀಕ್ಷೆಯಿಂ | ದಪಗತಕಾರುಣ್ಯದಿಂದ ||
ವಿಪರೀತವೃತ್ತಿಯಿಂದವೆ ಹತಿಯಿಸುವುದು | ನೃಪರ ಸದ್ವರ್ತನವಹುದೆ ||೨೦||

ಎಂದುನುಡಿದ ಸುದತಿಯಮಾತು ಮನಸಿಗೆ | ಬಂದು ಬಿಲ್ಲಂಬನೀಡಾಡಿ ||
ಒಂದಿದ ಕರುಣಾಹೃದಯನಾಗುತಾನೃಪ | ಕಂದರ್ಪನಿರ್ಪವೇಳೆಯೊಳು ||೨೧||

ಆ ಉದ್ಯಾನಕುತ್ತಮಬೋಧಸಂಯುತ | ಪಾವನಮುನಿಯೋರ್ವನೆಯ್ದೆ ||
ಆ ವರವಧುಗಳ್ಗಿಗೆ ಭಕ್ತಿಯಿಂದೆಯ್ದಿ | ಭಾವಶುದ್ಧಿಯೊಳಿರದೆರಗಿ ||೨೨||

ಕರಕಮಲವ ಮುಗಿದೆಲೆಮುನಿನಾಥಾ | ಎರಲೆಯೆರಡ ಕಂಡೆನಗೆ ||
ಉರುತರಮಪ್ಪ ಮುಸಿಸುಬಂದಿತೇಕೆನೆ | ವರಮುನಿಯಿಂತುಸುಡಿದನು ||೨೩||

ಸುರುಚಿರಮಪ್ಪಾವಿನಿತಖಂಡದ | ಕುರುಣಿಯೆಂಬಗ್ರಹಾರದೊಳು ||
ಹರುಷದಿಂ ವಟುಕವೆಸರಹಡೆದವನೀ | ಸುರನಿಪ್ಪನಾ ಬಿದಿಯಂತೆ ||೨೪||

ಅವಗೆಯುಗ್ಗಲೆಯೆಂಬಂಗನೆಯುಹಳು ಮ | ತ್ತವರಿಗೆ ದಾರಕನೆಂಬ ||
ಕುವರನಾಗಿನೀನನುದಿನ ವೇದವ | ಸುವಿಧಾನದಿಂದೋದುತಿರಲು ||೨೫||

ಜಿನಮಾರ್ಗದೊಳಗೆ ತಾತ್ಪರ್ಯವು ನಿನಗೆ ಸಂ | ಜನಿಸಿವೇದವನೋದಬಿಟ್ಟು ||
ಜನನುತಮಪ್ಪ ಪಂಚಾಣುವ್ರತಾಗಳ | ನನುಕರಿಸುತ ಮನವೊಸೆದು ||೨೬||

ಚಿಂತಾವಿರಹಿತನಾಗಿಯಾಪುರದವ | ಸಂತಪಾಲೆಯೆಂಬೋರ್ವ ||
ಕಾಂತೆಯೊಳೊಡಗೂಡಲಾ ದ್ವಿಜವಂಶಕೆ | ಕುಂತಾಯಿತೆಂದು ಕೋಪದೊಳು||೨೭||

ಆ ವಟುಕನುಬಂದು ಚಪ್ಪರಸಲ್ಕದ | ಭಾವಿಸದಾಸೂಳೆಯೊಡನೆ ||
ತೀವಿದೊಲವಿನಿಂದಿರ್ದೊಂದುದಿನದೊಳಾ | ಗಾ ಊರನಂದನಕೆಯ್ದು ||೨೮||

ಭಾವಜಕೇಳಿಯೊಳೊಂದು ಪೂವಿನಮನೆ | ಯೋವರಿಯೊಳು ಲಜ್ಜೆ ನೊರೆದು |'
ನೀವೊರಗಿರಲಲ್ಲಿಗಾವಟುಬಂದು ಕೋ | ಪಾವೇಶವಮಾನಸನಾಗಿ ||೨೯||

ಕೂರಸಿಯಿಂದಿರಿಯಲು ನೀನುಸತ್ತಾ | ಸಾರನೆ ವ್ರತಫಲದಿಂದ ||
ಈ ರಮ್ಯವಡೆದಾಕಾರದ ಪಾಂಡುಕು | ಮಾರನಾದೆ ನೀನರಸ ||೩೦||

ಬಳಿಕವಟುಕನನ್ಯಾಯವ ಕೇಳ್ದಾ | ಪೊಳಲ ಪಾರ್ವರು ನಮ್ಮಕುಲದ ||
ಒಳಗೆ ನೀನಲ್ಲವೆನುತ ಪರಿಭವಿಸುತ | ಕಳೆಯಲಾರ್ತದಿನವನಳಿದು ||೩೧||

ಹರಿಣನಾದನು ನಿನಗದರಿಂದದಕಾಣು | ತುರುತರಕೋಪವಂಕುರಿಸಿ ||
ಮರಣವನದಕೆಮಾಡಿದೆಯೆಂದುಪೇಳ್ದು ಮ | ತ್ತುರುತರ ಧರ್ಮವರ್ತನವ ||೩೨||

ನಿರವಿಸೆ ಕೇಳ್ದು ಮತ್ತವರನು ಬೀಳ್ಕೊಂಡು | ತರುಣಿಸಹಿತ ಪುರವರಕೆ ||
ಹರುಷದಿಂ ಬಂದು ಧರ್ಮೋದ್ಯೋಗದೊಳು ಗುರು | ತರಚಿತ್ತನಾಗಿರುತಿರಲು||೩೩||

ನುತರೂಪವತಿ ಕೊಂತಿಯುಬಸಿರೊಳಗೆಯು | ಚ್ಯುತಕಲ್ಪದಮರನಲ್ಲಿಂದ ||
ಚ್ಯುತನಾಗಿಬಂದು ಬೆಳೆದುನವಮಾಸ ದು | ಸ್ನುತವಹಶುಭಲಗ್ನದೊಳು ||೩೪||

ಸುತನಾಗಲಾ ಸಿಸುವಿಗೆ ಹತ್ತುದಿನದೊಳ | ಗತಿಶಯಮಪ್ಪವೈಭವದಿ ||
ಕ್ಷಿತಿಪಾಲಕನು ಯುಧಿಷ್ಠಿರನಾವವ | ನತಿಮುದದಿಂದಿತ್ತನಾಗ ||೩೫||

ಧರ್ಮೋದ್ಯೋಗದೊಳೊಗೆದಕಾರಣದಿಂದ | ಧರ್ಮಜನೆಂಬಪೆಸರನು ||
ಪೇರ್ಮಗುವಿಗೆ ಕೊಟ್ಟು ಪಾಂಡುನೃಪತಿಯುತಿ | ನಿರ್ಮಲಚಿತ್ತನಾಗಿರಲು ||೩೬||

ಬಳಿಕ ತದಚ್ಯುತಕಲ್ಪದಮರನೋರ್ವ | ನಿಳಿದಲ್ಲಿಂದೆಯ್ತಂದು ||
ಲಲಿತಾಂಗನಾಗಿ ಕೊಂತಿಯ ಬಸಿರೊಳುಬಂದು | ಬೆಳೆದನುನವಮಾಸತುಂಬಿ||೩೭||

ಮೂಲನಕ್ಷತ್ರದೊಳೊಗೆಯಲು ಕಂಡದ | ನಾಳೋಚಿಸಿ ಬಂಧುಗಳು ||
ಹೇಳದೆ ನೃಪಗೆ ಪರೇತವನದೊಳಾ | ಬಾಲಕನನು ಹಾಕಿಸಿದರು ||೩೮||

ಆ ಕುವರನ ಪೂರ್ವಕೃತಪುಣ್ಯದೇವತೆ | ಭೀಕರಮಪ್ಪ ಸುಂಟುರೆಯ ||
ಆಕಾರದಿಂದ ಬಳಸಿರಕ್ಷಿಸುತಿರ್ದು | ದಾಕುಣಪಾಲಯದೊಳಗೆ ||೩೯||

ಹುಟ್ಟಿದ ಹಸುಳೆಮಗುವನು ಮಸಣದೊಳು | ಬಿಟ್ಟುದನಾಪಾಂಡುವರಿದು ||
ಮುಟ್ಟಿದ ನೋಹದಿತಾನಲ್ಲಿಗೆಯ್ತರೆ | ಸುಂಟುರೆ ಪಿಂಗಿದುದಾಗ ||೪೦||

ಕುವರನ ಪುಣ್ಯಪ್ರಭಾವವಕಂಡಾ | ಅವನೀಶನುರುಮುದವೆತ್ತು ||
ತವಕದಿ ತೆಗೆದು ಮನೆಗೆಬಂದು ಜಾತಕ | ರ್ಮವನೊಲವಿಂದಮಾಡಿದನು ||೪೧||

ಭೀಮಪರೇತವನದ ಮಧ್ಯದೊಳಗೆ ಮ | ಹಾಮಾರುತನ ರಕ್ಷಣೆಯೊಳು ||
ಆ ಮಗುವುಳಿದುದರಿಂ ವಾಯುನಂದನ | ಭೀಮವೆಸರನಿಟ್ಟನೊಸೆದು ||೪೨||

ಬಳಿಕ ತದಚ್ಯುತದೇವನಲ್ಲಿಯ ಭೋಗ | ಗಳನನುಭವಿಸಿಯಲ್ಲಿಂದ ||
ಅಳಿದು ಕೊಂತಿಯ ಕೋಮಲಗರ್ಭದೊಳು ಪುಟ್ಟಿ | ಬೆಳೆದೊಂಬತ್ತುತಿಂಗಳೊಳು||

ಉತ್ತಮಲಗ್ನದೊಳುತ್ಪತ್ತಿಯಾಗಲು | ಮತ್ತಾಸಿಸುಗಾನೃಪತಿ ||
ಬಿತ್ತರಮಪ್ಪ ಕರ್ಮದೊಳರ್ಜುನನಾಮ | ವಿತ್ತನು ದಶದಿವಸದೊಳು ||೪೪||

ಇಂದ್ರೋತ್ಸವದೊಳೊಗೆದಕಾರಣದಿಂ | ದಿಂದ್ರಸುತಾಭಿಧಾನವನು ||
ರುಂದ್ರವಿಭವದಿಂ ಕೊಟ್ಟಾಪಾಂಡುನ | ರೇಂದ್ರ ಸಂತಸದೊಳಗಿರ್ದ ||೪೫||

ಚರಮಾಂಗರವರು ಮೂವರು ಸುಕುಮಾರರು | ಸಿರುಪಮಸತ್ವಸಂಯುತರು ||
ಸರಸಕಲಾಕೋವಿದರುತ್ತಮರೂಪ | ರುರುಮುದದಿಂದ ಬೆಳೆದರು ||೪೬||

ಮತ್ತಾ ಅಚ್ಯುತದಿವಿಜರೀರ್ವರು ಭೂ | ಪೋತ್ತಂಸಪಾಂಡುವ ಕಿರಿಯ ||
ಚಿತ್ತವಲ್ಲಭೆ ಮಾದ್ರಿಯಬಸಿರೊಳು ಪುಟ್ಟಿ | ಯುತ್ತಮಮಪ್ಪ ಲಗ್ನದೊಳು ||೪೭||

ಅವಳಿಗಳಾಗಿಜನಿಸೆ ಪಾಂಡುಭೂಪತಿ | ಮಮತೆಯಿಂ ಜಾತಕರ್ಮವನು ||
ಕ್ರಮದಿಂದೆಸಗಿ ನಕುಲ ಸಹದೇವರೆಂ | ಬಮಲನಾಮವನಿಟ್ಟನೊಸೆದು ||೪೮||

ಸ್ಮರಸೈದುಬಾಣಗಳೇ ನರರೂಪಾಂತು | ಪಿರಿದು ವಿಭ್ರಾಜಿಸುವಂತೆ ||
ತರುಣೀಜನದ ಚಿತ್ತದೊಳು ಮೋಹನಮುಸಂ | ಕುರಿಸಿ ಬೆಳೆದರಾ ಕುವರರು ||೪೯||
ಅತಿಬಲಯುತರೀತೆರದಿ ಬೆಳೆವುತಿರೆ | ಧೃತರಾಷ್ಟ್ರ ಧರಣೀಪತಿಗೆ ||
ರತಿನಿಭೆ ಗಾಂಧಾರಿಗೆಯೋರ್ವ ಸುಕುಮಾರ | ಸುತುಪತಿಯಾಗಿಯೊಪ್ಪಿದನು ||೫೦||
ತನುಜಗೆ ಜಾತಕರ್ಮವಮಾಡಿ ದುರ್ಯೋ | ಧನವೆಸರಿಟ್ಟು ಭೂವರನು ||
ಅಸುರಾಗಪಡೆದಿರಲಾ ಸೊಸು ಬೆಳೆದಾ | ದಿನಕರನಿಭತೇಜನಾದ ||೫೧||
ಆ ದುರ್ಯೋಧನಗೂಡಿ ನೂರ್ವರು ಪುಕ್ಕ | ಳಾದರು ದುಶ್ಶಾಸನನು ||
ಆ ದುರ್ದರ್ಶನನಾ ದುರ್ಮರ್ಷಣ | ನಾದಿಯ ಸುಕುಮಾರಕರು ||೫೨||
ಅವರಂತರದೊಳು ದುಶ್ಶಲ್ಯೆಯೆಂಬೋರ್ವ | ಕುವರಿ ಜನಿಸಿಯೊಪ್ಪಿದಳು ||
ಅನಳನು ಸಿಂಧುದೇಶಾಧೀಶ್ವರನು ಸೈಂ | ಧವಗೆ ಮದುವೆಮಾಡಿಸನು ||೫೩||
ಆ ಪಾಂಡುನೃಪಸುತರ್ಕೈವರು ಧೃತರಾಷ್ಟ್ರ | ಭೂಪನ ನೂರ್ವರುಸುತರು ||
ಆ ಪೊಳ್ತೀಪೊತ್ತೆನ್ನದೆ ಮುದಮುತ್ತ | ರೋಪೇತರಾಗಿರುತಿಹರು ||೫೪||
ಓರ್ವರೋರ್ವರೊಳು ಬಾಲಕ್ರೀಡೆಯಿಂ ಸರಿ | ಪರ್ವದಮಾಸಂಕದಿಂದ ||
ಸರ್ವರು ಜಿನನುವಂದದಿ ಕಳಪಪ ಮನ | ಪರ್ವಿಜಜದೆ ಮಾಡುತಿಪರು ||೫೫||
ವರಬಂಧುಜನವೆಲ್ಲ ಬೆದರುವಂತಾ ಈರ್ವ | ರರಸಿನ ಸುಕುಮಾರಕರು ||
ಹಿರಿದುಹೋಳಟಿಗೊಂಡಾತಂತಮ್ಮೊಳ | ಗೊರಸೊರಸಾಗಿರುತಿಪರು ||೫೬||
ಪುಕ್ಕಳಾಟಿಕೆಯೊಳಗಾರಾಜನಂದನ | ರಕ್ಕೆಕ್ಕೆಯಿಂ ಹೋರುತಿಹರು ||
ತಕ್ಕದೆತಂತಮ್ಮೊಳೊಬ್ಬರೊಬ್ಬರೊಳಿರ | ದುಕ್ಕುಕ್ಕುಹಳಚುವಂದದೊಳು ||೫೭||
ಬವರದಬೀಜಮುಸಾಬಾಲಕೇಳಿಯೊ | ಳವನಿಯೊಳಗೆ ಚೆಲ್ಲುವಂತೆ ||
ಅವರಯಿವರಿವರು ನೂರ್ವರು ಗರ್ಮಗವನತಿ | ತವಕದಿನೆಚ್ಚಾಡುತಿಹರು ||೫೮||
ಹೋರಟಿಗೊಂಬ ನೂರ್ವರುಮಕ್ಕಳ | ಬಾರಿಸುತಾ ಸಿಂಧುಸುತನು ||
ಆರೈದು ರಕ್ಷಿಸುತಿರ್ದನು ಧೃತರಾಷ್ಟ್ರ | ಭೂರಮಣನ ಪಾಂಡುಸಹಿತ ||೫೯||
ಮನುಸಮಚರಿತ ಮನೋಭವನಿಭರೂಪ | ನನುಪಮ ವಿಕ್ರಮಯುತನು ||
ಜನಪತಿಕುಲಮಣಿದೀಪನೊಪ್ಪಿದನು ಸ | ಜ್ಜನವನಜಾತಭಾಸ್ಕರನು ||೬೦||
ಇದು ಜಿನಪದಸರಸಿಜ ಮದ ಮಧುಕರ | ಚದುರಮಂಗರಸ ರಚಿಸಿದ ||
ಮದನಾರಿ ನೇಮಿಜಿನೇಶ ಸಂಗತಿಯೊಳ | ಗೊದವಿದ ಸಂಧಿಗಳಾರು ||೬೧||

ಆರನೆಯ ಸಂಧಿ ಸಂಪೂರ್ಣಂ.



*

## ೭. ಅಂಧಕವೃಷ್ಟಿ ಭವಾವಳಿ ಸಂಧಿ.



ಶ್ರೀಮದಮರಪತಿ ಮೌಳಿಕೀಲಿತಪಾದ | ತಾಮರಸದ್ವಯಸಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದದವೆತ್ತೆರಗುವೆನು ||೧||

ಇತ್ತಲಂಧಕವೃಷ್ಟಿರಾಜೇಂದ್ರನವನಿಯ | ನೊತ್ತಿಯಾಳುತ ತನ್ನ ಜನನ ||
ಪತ್ತುದೆಸೆಯೊಳಿನಿಸೆಡೆದೆರಪಿಲ್ಲದೆ | ಪತ್ತಿಸಿದನು ವಿಕ್ರಮದೊಳು ||೨||

ಈತೆರದಿಂದೀರಾರುವರುಷವಿ | ಖ್ಯಾತಿಯಿನಾಸ್ಪದವನು ||
ಭೂತಳವೆಲ್ಲವಪರಿಪಾಲಿಸುತಿಪ್ಪ | ನೂತನಾಗಿರುತೊಂದುಪಗಲು ||೩||

ಆ ಗಂಧಮಾದನಶಿಖರಿಯತಟದಿಯೊಳು | ಯೋಗನಿಷ್ಠಾಪರನಾಗಿ ||
ಯೋಗಿತಿಲಕಸುಪ್ರತಿಷ್ಠನು ಪ್ರತಿಮಾ | ಯೋಗದೊಳಗಿಸಿದಿರಲು ||೪||

ಪೂರ್ವಜನ್ಮದ ವೈರಸಂಬಂಧಮನವನು | ಪರ್ವಸುದರ್ಶನನೆಂಬ ||
ಓರ್ವದನುಜನೆಯ್ದಿ ಮುನಿಗುಪಸರ್ಗವ | ನುರ್ವಿಹೆದರೆಮಾಡಿದನು ||೫||

ಅತಿಮಥಯಿಸಲು ಮಾಣಿಕಕುತ್ತಮಕಾಂತಿ | ಯತಿಶಯವಾಗುವಂದದೊಳು ||
ಮತಿಹೀನ ಮಾಡಿದಬಾಧೆಯನಂತಾ | ಯತಿಗೆಶುಕ್ಲಧ್ಯಾನವಾಯ್ತು ||೬||

ಆನಿರ್ಮಲಬೋಧೋದಯದೊಳುದೇ | ವಾನೀಕಪುರದಲ್ಲಿಗೆಯ್ದಿ ||
ಆಸಂದದೊಳಾಕರುಣಾಬ್ಧಿಚಂದ್ರನ | ನೂನಮಪ್ರಾಭಕುತಿಯೊಳು ||೭||

ಸಾವಧಾನದಿನಾದೇವಪೂಜೆಯನಾ | ದೇವರ್ಕಳುಮಾಡುತಿರಲು ||
ಭೂವರನಂಧಕವೃಷ್ಟಿಯೈದಿದನತಿ | ಭಾವಶುದ್ಧಿಯೊಳಾಬಳಿಗೆ ||೮||

ಗಂಧಕುಟಿಯಹೊಕ್ಕಾಶುಕ್ಲಧ್ಯಾನ | ಸಿಂಧುವ ಪಾದಾಂಬುಜಕೆ ||
ಗಂಧಮಾಲ್ಯಾದಿವಸ್ತುವಸರ್ಜನೆಗೆಯ್ದು | ನಂಧಕವೃಷ್ಟಿಭೂವರನು ||೯||

ಬಳಿಕತುಳಿಲುಗೆಯ್ದಿಂತೆಂದನೆಲೆದೇವ | ಮುಳಿದೀದನುಜನುನಿಮಗೆ ||
ಅಲಘುಬಾಧೆಯನೆಸಗಿದಕಾರಣವನು | ತಿಳಿವಂದದಿಪೇಳಿಮೆನಲು ||೧೦||

ಆ ಜಿನವರಪತಿಯಿಂತೆಂದನೆಲೆ ವಿಭು | ಈ ಜಂಬೂದ್ವೀಪದೊಳು ||
ರಾಜಿಪಭರತದೊಳಗೆ ಕಾಂಚಿಯೆಂಬೊಂದು | ರಾಜಧಾನಿಯುಮುಂಟಲ್ಲಿ ||೧೧||

ಹರದರಿಬ್ಬರು ಸೂರದತ್ತಸುದತ್ತರೆಂ | ಬುರುತರವಸ್ತುಸಂಯುತರು ||
ಪರದುಗೆಯ್ವೆವೆಂದೊಂದುದಿನಸದೊಳು | ಪರದೇಶಕೆಪೋದರವರು ||೧೨||

ಹಿರಿದು ವಸ್ತುವನುಗಳಿಸಿ ಮಗುಳ್ದಾಪುರ | ವರದರಾಣಯದಸುಂಕಿಗರು ||
ವರವಸ್ತುತತಿಯುಕಂಡೊಡೆ ಬಲುಸುಂಕವ | ಸಿರಗಬೇಡುವರೆಂದವರು ||೧೩||

ಪೊಳಲಹೊರಗೆಯೊಂದಿನಿಸುದೂರದೊಳಿರ್ಪ | ಹಳುವಿನಮಧ್ಯದೊಳೊಂದು ||
ಮೆಳೆಯುಹೊಡಗನೆತ್ತಿಯಾರತ್ನವನೆಲ್ಲ | ನೆಲದಿ ಹೂಳಿಹೋಗಲೊಡನೆ ||೧೪||

ಅಲ್ಲಿಗಂಡೋರ್ವಧೀವರಕಳ್ಳನುದ್ಬಗ | ಳಲ್ಲಿಕೊಯ್ವೆನೆಂದೆಯ್ದಿ ||
ನಲ್ಲೀಲೆಯಿಂದಾಮೆಳೆಯ ಹೊದರಮೂಲ | ದಲ್ಲಿರ್ದೊಡವೆಯಕಂಡು ||೧೫||

ಎನ್ನದುಗಳಿಸಿದೊಡವೆಯೆಂಬಂತದನು | ಚೆನ್ನಾಗಿಸಗುವಂಬದೊಳು ||
ಹೊನ್ನಕುಪ್ಪಿಗೆಯೊಳಿರಿಸಿ ಥಗಥಗಿಸುವ | ರನ್ನವನವನೊಯ್ದನಿತ್ತ ||೧೬||

ಆಪಗಲಿನ ಮರುದಿನದೊಳವರು ಬಂ | ದಾಪೂಳಿದೊಡವೆಯುಲ್ಲದಿರೆ ||
ಪಾಪರಿಯೆಂದರಿಯದೆ ತಂತಮ್ಮೊಳು | ಕೋಪವತಾಳಿಮನದೊಳು ||೧೭||

ಒಬ್ಬರವರೊಳೊಬ್ಬರು ಸಂದೇಹಿಸಿ | ಪರ್ಬಿದಲೋಭತೆಯಿಂದ ||
ಒಬ್ಬುಳಿಗೊಂಡುಕೋಪದೊಳೀರ್ವರು ಮನ | ಸುಬ್ಬಿಕಲಹವಮಾಡಿದರು ||೧೮||

ಹರಿದೆನಿಸುವಹಜ್ಜಹಸಿಗೆಬಡಿಗೆಗೊಂಡು | ಹರದರೀರ್ವರುಹೊಯ್ದಾಡಿ ||
ಭರದೊಳುಸತ್ತು ಮೊದಲನರಕದೊಳೊಗೆ | ದಿರದೆತಮ್ಮೊಳು ಹೋರುತಿರ್ದು ||೧೯||

ಅಲ್ಲಿಂದಳಿದುಬಂದೊಂದು ಕುರಿಯಹಿಂಡಿ | ನಲ್ಲಿ ಮೇಷಗಳಾಗಿ ಜನಿಸಿ ||
ಬಲ್ಲಿದವಾಗಿಬೆಳೆದು ತಂತಮ್ಮೊಳು | ನಿಲ್ಲದೆ ಹೋರಾಟಗೆಯ್ದು ||೨೦||

ಕೋಡುಮುರಿದು ಕೊರಲುಡಿದು ಒಡೆದು ಹಣೆ | ಯೋಡುಕಿಬ್ಬರಿಗಳುಬಿರಿದು ||
ನೋಡುವಕಣ್ಣುಕಳೆದು ಬೀಳ್ದೊಂದೊಂದ | ಕ್ಕೋಡದೆಕಾದಿಯುಳಿದವು ||೨೧||

ಗಂಗಾತೀರದತುರುಪಟ್ಟಿಯೊಳಗೆ ವೃಷ | ಭಂಗಳಾಗಿಸಂಜನಿಸಿ ||
ಹಿಂಗದಕೋಪಾವೇಶದಿಂತಮ್ಮೊಳು | ಸಂಗರವನುಮಾಡಿಯುಳಿದು ||೨೨||

ಪುರಣಮುಖದಿ ವೃಷಭಂಗಳು ಸಮ್ಮೇದ | ಗಿರಿಯುಕೋಡುಂಗಲ್ಲಿನೊಳು ||
ಉರುತರಮಪ್ಪಮರ್ಕಟವಾಗಿ ತಮ್ಮೊಳು | ಹಿರಿದುಘೋರಟೆಯುಮಾಡಿದವು ||೨೩||

ಒಂದರಕಡಿತಕ್ಕೊಂದಿನಿಸಂಜದೆ | ಒಂದಿದಕಡುಗೋಪದಿಂದ ||
ನಿಂದುಕಾದಿಬೀಳ್ದಾಕೋಡಗದೊಳ | ಗೊಂದು ಮರಣವನೆಯ್ದಿದುದು ||೨೪||

ಬಳಿಕೊಂದುಬಲಿಪುಖಹರಣವಪಿಡುವಾ । ಗಳಿಗೆಯೊಳಾಗಸದಿಂದ ॥
ಇಳಿದುಬಂದರುಸುರಗುರುದೇವಗುರುವೆಂಬ । ಕಲಿಲವಿಜಯಚಾರಣರು ॥೨೫॥

ಸದಮಲಬೋಧದಿನಾಸನ್ನಭವ್ಯನಿಂ । ತಿದುತಪ್ಪದೆಂಬುದನರಿದು ॥
ಒದವಿದಕರುಣದಿ ತಮ್ಮಕಮಂಡಲ । ದುದಕಮನದಕೆನೊಸಿದರು ॥೨೬॥

ಬಲಿಮುಖಧರ್ಮಬಹಿರ್ಮುಖಕೋಪವ । ತಳೆದು ದುರ್ಗತಿಗೆಪೋಪುದನು ॥
ಉಳಿದುಸದ್ಗತಿಯನೆಯ್ದುವಸಮತೆಯನೀನು । ತಳೆಯೆಂದುಸನ್ಯಸಸವನು ॥೨೭॥

ಕಟ್ಟೊಲವಿಂದಲಿಕೊಡಲದ ಕೈಕೊಂಡು । ದಿಟ್ಟಿದೆರೆದುಮುನಿಗಳನು ॥
ನಿಟ್ಟಿಸುತಿರೆಬಳಿಯೊಳುಪಂಚಪದಗಳ । ನಿಟ್ಟರದರಕಿವಿಯೊಳಗೆ ॥೨೮॥

ಆ ಮಂತ್ರವಕೇಳಿದ ಸತ್ಫಲದಿಂದ । ಲಾಮರ್ಕಟಜೀವವಿರದೆ ॥
ಆ ಮಹೀಧರದಿಂದ ಸೌಧರ್ಮಕಲ್ಪಕೆ । ಸಾಮಮಾಡದೆಲಂಘಿಸಿದುದು ॥೨೯॥

ಆ ಸಗ್ಗದೊಳುಚಿತ್ರಾಂಗದವೆಸರಾಂತು । ಭಾಸುರಮಪ್ಪಭೋಗವನು ॥
ಆಸಕ್ತಿಯಿಂದುಂಡುಬಂದೀಭರತದೊ । ಳಾಸಿರಿವಡೆದಕಾಂಚಿಯೊಳು ॥೩೦॥

ಜಿತಸೇನನೆಂಬವನಿಪಗೆ ಸುಭದ್ರಾ । ಸತಿಗೆ ಸಾಗರಸೇನನೆಂಬ ॥
ಸುತನಾಗಿ ಬೆಳೆದುಮಂಡಲಿಕಪದದೊಳು ಸ । ನ್ನುತನಾಗಿರ್ದೊಂದುದಿವಸ ॥೩೧॥

ಆನಂದದಿಂದ ನಂದನಕೆಯ್ದಲಂತಲ್ಲಿ । ವಾನರಗಳುಹೋರುತಿರಲು ॥
ತಾನವನೋಡಿ ಜಾತಿಸ್ಮರಣವುಪುಟ್ಟಿ । ಯೂನದೆ ದೀಕ್ಷೆವಡೆದನು ॥೩೨॥

ಸಾವಧಾನದೊಳು ತಪಸುಗೆಯ್ದವನಾ । ಗ್ರೈವೇಯಕದೊಳಹಮಿಂದ್ರ ॥
ದೇವನಾಗಿದಿವ್ಯಸುಖವುಂಡುಬಳಿಕೀ । ಭೂವಲಯದಮಧ್ಯದೊಳು ॥೩೩॥

ಜನಸುತಮಪ್ಪಸುಧರ್ಮ್ಮಾಧೀಶದ ಪೌ । ದನಪುರದರಸುಸುಸ್ಥಿರಗೆ ॥
ವನಿತೆವನಜಲೋಚನೆಗೆ ಲಕ್ಷ್ಮಿಮಣಿಗೆಸಂ । ಜನಿಸಿಸುಪ್ರತಿಷ್ಠವೆಸರ ॥೩೪॥

ಧರಿಸಿಸೂರ್ಯರ್ಯಾಸ್ತಮಾನವಕಂಡು ವೈರಾಗ್ಯ । ವಿರದುದಯಿಸೆ ದೀಕ್ಷೆಗೊಂಡು ॥
ಉರುತರಮಪ್ಪದುರಿತವೆಲ್ಲವಪರಿ । ಹರಿಸಿಮುಕ್ತಿಪದವಡೆದ ॥೩೫॥

ಸೂರದತ್ತನೆಂಬಪರದನುನಾವಿಾಗ । ಭೂರಮಣೀಶಕೇಳತ್ತ ॥
ಕ್ರೂರಹೃದಯಸುದತ್ತಮರ್ಕಟ ಸಂ । ಸಾರಸಾಗರದೊಳುಮುಳುಗಿ ॥೩೬॥

ನರಿನಾಯಿಪಂದಿಪಾವುಡುವ್ರೋತಿ ಪಲ್ಲಿಮೂ । ಗುರಿಮೂಷಕಮೊದಲಾದ ॥
ತಿರಿಕನಾರಕಗತಿಯೊಳುಪುಟ್ಟಿ ತಿರ್ಯನೆ । ತಿರುಗುತಿರ್ದೊಂದುಜನ್ಮದೊಳು ॥೩೭॥

ಸುಲಲಿತವಹ ಸಿಂಧುತೀರದ ಕುಟಿಪಳ್ಳಿ | ಯೊಳಗೆಮೃಗಾಯಣವೆಸರ ||
ತಳೆದತಾಪಸಗೆ ವಿಶಾಖವೆಸರನಾಂತ | ಲಲನೆಗೆಸಂಭವಿಸಿದನು ||೩೮||

ಗೌತಮನೆಂಬಪೆಸರನುತಳೆದುಮ | ತ್ಯಾತಪದೊಳಗಾಚರಿಸಿ ||
ಜ್ಯೋತಿಷ್ಕನಾಗಿ ಸುದರ್ಶನವೆಸರನಾಂ | ತೀತನೀಗಭೂಪಾಲ ||೩೯||

ಹಿಂದಣಭವಬದ್ಧವೈರಮನೇಮನ | ದಂದುಕೋಪಾಟೋಪದಿಂದ ||
ಸಂದೇಹವಿಲ್ಲದೆಘೋರೋಪಸರ್ಗವ | ನಿಂದುನಮಗೆ ಮಾಡಿದನು ||೪೦||

ಎಂದುನುಡಿದ ಸುಪ್ರತಿಷ್ಠರನುಡಿಗೇಳಿ | ಸಂದಸುದರ್ಶನವ್ರತವ ||
ಅಂದವರಿಂದ ಸುದರ್ಶನದನುಜನಾ | ನಂದದಿಂ ತಾಂತಾಳಿದನು ||೪೧||

ಎನಲಂಧಕವೃಷ್ಟಿಯಿಂತೆಂದನೆಲೆದೇವ | ನನಗೆನನ್ನಯಪೂರ್ವಭವವ ||
ಮನದೆಗೊಂಡು ಪೇಳೆಮೆಂದುಕೇಳಿದೊಡಾ | ಮುನಿನಾಥನಿಂತುನುಡಿದನು ||೪೨||

ಸುರುಚಿರಕೌಶಲದೇಶದಯೋಧ್ಯಾ | ಪುರದೊಳು ವೈಶ್ಯವಲ್ಲಭನು ||
ಉರುತರದಾನಿ ಜಿನೇಂದ್ರದತ್ತನೆಂಬ | ಪರದನುಪೆಸರ್ವಡೆದಿರುತ ||೪೩||

ಒಂದುದಿನಕೆ ಸೂರು ಹೊನ್ನ ತೆಗೆದುಕೊಂಡು | ಬಂದು ಜಿನೇಂದ್ರಪೂಜೆಯನು ||
ಸಂದಭಕುತಿಯಿಂದಿನಬಂಜೆಯಿಲ್ಲದಾ | ನಂದದಿ ಮಾಡಿಸುತಿಹನು ||೪೪||

ಈತೆರದಿಂ ಜಿನಪೂಜೆಯಮಾಡಿ ವಿ | ಖ್ಯಾತನಾಗಿರ್ದೊಂದುಪಗಲು ||
ಪ್ರೀತಿಯಿಂದ ಹಡಗಿನವ್ಯವಹಾರವ | ನಾತನು ಮಾಡಲೆಂದೆಣಿಸಿ ||೪೫||

ತನಗತಿಹಿತನೆನಿಪ್ಪರುದ್ರದತ್ತನೆಂಬ | ವನೋರ್ವಪಾರ್ವನಕರೆದು ||
ದಿನಚರಿ ಸೂರುಹೊನ್ನಿನಪೂಜೆಯಮಾಡಿ | ಸೆನುತಲಘುಪ್ರೀತಿಯಿಂದ ||೪೬||

ವರುಷಹನ್ನೆರಡಕೆ ತಕ್ಕವಿತ್ತಮನಾ | ಪರದನವನವಶಮಾಡಿ ||
ಪರದುಗೆಯ್ವೆನೆಂದುಹಡಗೇರಿಯತ್ಯಾ | ತುರದಿಂದವಪೋದನಿತ್ತ ||೪೭||

ಆ ವೈಶ್ಯಪತಿ ತನ್ನವಶಮಾಡಿಕೊಟ್ಟರ್ಥ | ದೇವಸ್ವವೆಂದುಚಿತ್ತದೊಳು ||
ಭಾವಿಸದಾರುದ್ರದತ್ತನಾಪೊಳಲವೇ | ಶ್ಯಾವಾಸದೊಳಗನವರತ ||೪೮||

ನರರೆಲ್ಲದುರ್ಜನಿಪಂದದಿವೇಶ್ಯಾ | ತರುಣಿಯರ್ಗಾವಿತ್ತವನು ||
ಪಿರಿದಾಗಿಕುಡುವದುರ್ವರ್ತನವನು ತ | ತ್ಪುರದತಳಾರರುಕಂಡು ||೪೯||

ಇವನತಿಪಾತಕಿಯಿದಮೇಲೆಪಾರ್ವನು | ಇವನಕೊಲ್ಲಲುಬಾರದಿವನು ||
ಅವನೀಸುರವಂಶಕ್ಕೆ ಹೊರಗೆಂದು ಮ | ತ್ತವನನೂರಿಂತೆಗುಳಿದರು ||೫೦||

ಪೊಲೆವಟ್ಟು ಪೊಳಲಿಂ ಪೊರಮಡಿಸಿಕೊಂ | ಡಲಸದೊಂದಡವಿಯೊಳಿರ್ಪ ||
ಕುಲಗೆಟ್ಟ ಬೇಡವಳ್ಳಿಯ ಪೊಕ್ಕಿರ್ದಾ | ಖಳನೊಡನೊಂದು ಪಗಲು ||೪೧||

ವನಚರರೊಡಗೂಡಿಯಾನೆಗಳಿಯ ಜೀವ | ದನವರತಂ ಕೊಲ್ಲುತಮಿರಲು ||
ಅನಿತರೊಳಾಪೌರರೆಲ್ಲ ಹುಯ್ಯಲು ಬಂದು | ಕನಲಿ ಕೊಂದರು ತನ್ನನಾಗ ||೪೨||

ಘಾತಪಡೆದು ಸಪ್ತಮನರಕದೊಳಾಗೆ | ದಾಪರಿಸಿದ ದುಃಖವುಂಡು ||
ಮೂವತ್ತುಮೂರು ಸಮುದ್ರೋಪಮಾಯುಷ್ಯ | ತೀವೆ ಸತ್ತಲ್ಲಿಂದ ಬಂದು ||೪೩||

ಲವಣಜಲಧಿಯೊಳಗಾನಾರಕನು ಸಂ | ಭವಿಸಿ ತಿಮಿಂಗಿಳನಾಗಿ ||
ತವೆಯ ಪಾಪವನಿರದೆ ನೆರಪಿಕೊಂಡು | ಜವನಾಜ್ಞೆಯಿಂ ತಾನಳಿದು ||೪೪||

ಪಿರಿದು ದುಃಖಮನೀವ ಷಷ್ಠಮನರಕದೊ | ಳಿರದೊಗೆದಿಪ್ಪತ್ತೆರಡು ||
ವರಸಾಗರೋಪಮಾಯುಷ್ಯಂ ಪ್ರತೀರ್ವನ್ನ | ಬರ ಜೀವಿಸಿಯಲ್ಲಿ ಸತ್ತು ||೪೫||

ಅವನಧಿಯೊಳು ಮುಂಪೇಳ್ದ ಮೀನಾಗಿ ನಾ | ನಾವಿಧಮಪ್ಪ ಪಾಪಂಗಳನು ||
ಓವದೆ ಕಿಂದೈದನೆಯ ನರಕಬಿಲ | ದೋವರಿಯೊಳು ಸಂಜನಿಸಿ ||೪೬||

ಅದರೊಳು ಪದಿನೇಳರ್ಣವೋಪಮಕಾಲ | ಪುದಿದ ದುಃಖಮನನುಭವಿಸಿ ||
ಒದವಿದ ಮರಣದ ಮಾತಂಗರಿಪುವಾಗಿ | ಉದಯಿಸಿ ಬಹುಪಾಪವಡೆದು ||೪೭||

ಮರಣವಡೆದು ನಾಲ್ಕನೆಯ ನರಕವನು | ಸಾರಿ ಸತ್ತತಿ ದುಃಖವನು ||
ಈರೈದು ಕಡಲನ್ನಮಪ್ಪಾಯುಷ್ಯವ | ತೀರುವನ್ನ ಬರುಂಡು ಸತ್ತು ||೪೮||

ಉರುತರ ದೃಷ್ಟಿವಿಷೋರಗನಾಗಿದು | ರ್ಧರಪಾಪಮನುರೆ ಪಡೆದು ||
ಹರಣವಬಿಟ್ಟು ಮೂರನೆಯ ನರಕದೊಳು | ಭರವಸದಿಂ ಸಂಜನಿಸಿ ||೪೯||

ಏಳುಸಮುದ್ರೋಪಮಾಯುಷ್ಯಂಬರ | ಹೇಳಬಾರದ ದುಃಖದೊಳು ||
ಆಳಿಮುಳುಗುತಿರ್ದು ಸತ್ತು ಬಂದೊಂದು ಶಾ | ರ್ದೂಲನಾಗಿ ಸಂಜನಿಸಿ ||೫೦||

ಎಡೆವಿಡದತಿಹಿಂಸೆಯೊಳು ಜೀವಿಸಿ ಮತ್ತೆ | ಮಡಿದೆರಡನೆಯ ನರಕವ ||
ಪಿಡದೆಯ್ದಿ ಮೂರು ಸಮುದ್ರೋಪಮಾಯುಷ್ಯ | ಉಡುಗುವನ್ನಬರಲ್ಲಿ ಬದುಕಿ ||
ತನುವಬಿಟ್ಟೊಂದು ಗರುಡನಾಗಿ ಬಂದು ಸಂ | ಜನಿಸಿ ಜೀವಿಸಿಯಂಗವಳಿದು ||
ಘನತರಮಪ್ಪ ದುಃಖವನೀಂದುಂಡೊಂ | ದನೆಯ ನರಕದೊಳು ಪುಟ್ಟಿ ||೫೧||

ಒಂದು ಸಾಗರೋಪಮಾಯುಷ್ಯವನುಂಡು | ಹೊಂದಿ ಮತ್ತೀಭೂಮಿಯೊಳು ||
ಒಂದಾನೊಂದು ಭೇರುಂಡವಿಹಗನಾಗಿ | ಕೊಂದು ಸಕಲಜೀವಿಗಳನು ||೬೩||

ಬಳಿಕಳಿದವನೀತಳದ ಕುಯೋನಿಗ | ಳೊಳಗೊಂದುಳಿಯದತೆರದಿ ||
ತಳುವದೆ ಹುಟ್ಟಿಸಾವುತ ಭವವನದೊಳು | ತೊಳಲುತದುರಿತೋಪಶಮದಿ ||೬೪||

ಕುರುಜಾಂಗಣ ವಿಷಯದ ಹಸ್ತಿನಾಪುರ | ವರದೊಳು ಗೌತಮಕುಲದ ||
ಪಿರಿಯ ಕೌಶಿಷ್ಟನೆಂಬೋರ್ವ ಮುನಿಗೆ ಸೌಂ | ದರಿಯೆಂಬಳವನವಲ್ಲಭೆಗೆ ||೬೫||

ಜನಿಸಿ ಸ್ವಗೌತಮವೆಸರಾಂತು ನೆರೆಬೆಳೆ | ಪನಿತರೊಳಗೆ ತಾನೆಸೆಗಿದ ||
ಘನಪಾಪಫಲದಿಂದ ಜನನೀಜನಕ ಬಂಧು | ಜನಮೆಲ್ಲ ಜವಪುರಕೈದೆ ||೬೬||

ಉಡಲಿಲ್ಲುಣವಿಲ್ಲದರಿಂದುದರಾಗ್ನಿ | ಯೊಡಲಸುಡಲು ಬಗ್ಗರೆಯು |
ಹಿಡಿದು ಪುರದಕೇರಿಗಳೊಳು ಭಿಕ್ಷವ | ಕೊಡಿಯೆಂದು ಬೇಡುತಿರಲು ||೬೭||

ದುರಿತವಶದಿತನಗಾರುಭಿಕ್ಷವ ಕೊಡ | ದಿರಲಾಪುರದತಿಪ್ಪೆಯೊಳು ||
ಸುರಿದೆಂಜಲುಗೂಳುಗಳನಾಯ್ದು ತಾನುಣು | ತಿರಲಾಗ ಕಂಡಕಂಡವರು ||೬೮||

ಮನುಜರೂಪಿನ ಪಂದಿಯಿಂತಿದೆನುತ ಪುಂ | ಜನಮೆಲ್ಲದಡಿದೊಣ್ಣೆಗೊಳಲು ||
ಘನತರಮಪ್ಪ ಭೀತಿಯೊಳೋಡಿಯೊಂದೆಡೆ | ನಿಲಲನಿತರೊಳಾಪುರಕೆ ||೬೯||

ಕಾನನದಿಂದಚರಿಗೆಗೆಂದು ಸಾಗರ | ಸೇನನೆಂಬೋರ್ವ ಮುನೀಶ ||
ಭೂಮುತ್ರಬರಲದನಾಸ್ವಗೌತಮಕಂಡು | ಮಾನಸದೊಳಗಂತುನುಡಿದ ||೭೦||

ಜಗದಜಡವರೊಳಗಾನೆ ಬಡವನೆಂದು | ಬಗೆದಿರ್ದೆನಿನ್ನಿಂದಮಿವನು ||
ಮಿಗಿಲಾದ ಬಡವನಾಗಿಪನಯಿವನನೀ | ನಗರಿಯವರು ಕಾಣುತವೆ ||೭೧||

ಎನ್ನ ಕೊಲುವತೆರದಿಂದೀಪಾಪಿಯು | ಚೆನ್ನಾಗಿಕೊಲ್ವರಂತದನು ||
ತಾನೊಡನೆಯ್ದಿ ನೋಡುವೆನೆಂದು ಮುನಿಪನ | ಬೆನ್ನೊಳವನು ಬರುತಿರಲು ||೭೨||

ಆನಗರಿಯ ವೈಶ್ರವಣವೆಸರಸೆಟ್ಟಿ | ಸಾನುರಾಗದೊಳಾಮುನಿಗೆ ||
ಆಸತನಾಗಿ ನಿಲಿಸಿ ನಿಜಗೃಹಕಾಗಿ | ತಾನೊಡಗೊಂಡೊಯ್ಯುತಿರಲು ||೭೩||

ಈಪಥವನುಕಂಡಚ್ಚರಿಯಿಂ ನೆರೆ | ಭಾವಿಸುತಾಸ್ವಗೌತಮನ ||
ಆ ವರಮುನಿಕಂಡನನಘದುಪಶಾಂತ | ಭಾವವನವಧಿಯಿಂದರಿದು ||೭೪||

ಕಡುಮರುಕದಮನದಿಂದವನನುಮನೆ | ಗೊಡಗೊಂಡುಪೋಗಿಯನ್ನವನು ||
ಕೊಡಿಸಲುಕನಸಿನೊಳಗೆ ಕಂಡರಿಯೆನೆಂ | ದೊಡಲೊಡಕುಂತುಂಡುಬಳಿಕ ||೭೫||

ಆವರ್ಣೆಯಬಿನ್ನ ಹಿಡದನುದಿನತನ್ನ | ಜೀವನಹೊರೆವ್ರುತಮಿರ್ದು ||
ಆವೃತ್ತಮುಮುಪ್ಪರೂಪಧರಿಪೆನೆಂಬ | ಭಾವನೆಯುವಗೆ ಪುಟ್ಟಿದುದು ||೭೬||

ಅದನಾವಮುನಿಪತಿಯವಧಿಬೋಧದಿನರಿ | ದೊದವಿದಕಾರುಣ್ಯದಿಂದ ||
ಸದಮಲತರಮುಪ್ಪಜಾತರೂಪವನುಸಂ | ಮುದದಿನವಗೆ ಪಾಲಿಸಿದನು ||೭೭||

ಶ್ರೀಗೌತಮನೆಂಬಹೆಸರನವಗೆ ಕೊಡ | ಲಾಗ ಕೊಂಡಾ ಸುವ್ರತವನು ||
ಚೇಗೆಮಾಡದೆಪಲಕಾಲ ತಪಸುಗೆಯ್ದು | ನೀಗಿದನಾಮುನಿತನುವ ||೭೮||

ಈವಿಧದಿಂತನುವನು ಬಿಸುಟಾನವ | ಗ್ರೈವೇಯಕದೊಳುನೆಂಜನಿಸಿ ||
ತೀವಿದಿಪ್ಪತ್ತೆಂಟುಸಾಗರೋಪಮಕಾಲ | ಪೋವದೆಯುಷುಮಿಂದ್ರನಾಗಿ ||೭೯||

ಸುರುಚಿರಮುಪ್ಪಸುಖವನುಂಡದಪರಿ | ಹರಿಸಿಯಿಂತಪ್ಪಸಿರಿಯುನು ||
ಧರಿಸಿಯಂಧಕವೃಷ್ಟಿಭೂಪನೀನಾದ್ಯೆ | ಯುರುಸುಕೃತದಫಲದಿಂದ ||೮೦||

ಎಂದುಪೇಳಲು ತನ್ನತನುಜಾತರು ಹತ್ತು | ಮುಂಪಿನಿಕೆವಾರರಭವವ ||
ಕಂದರ್ಪವಿಜಯ ಬೆಸಸಿಮೆನಲವರಿಂ | ತೆಂದು ನುಡಿದರತನೊಳು ||೮೧||

ಭರತಭೂತಳದಾವಿಸಿತಾರ್ಯ್ಯಖಂಡದ | ಸುರುಚಿರಮಲಯದೇಶದೊಳು ||
ಪುರಮೊಪ್ಪುತಿಹುದು ಭದ್ರಿಲನೆಂಬುದದನಾಳ್ವ | ಧುರಧೀರಸರಥನೃಪತಿ ||೮೨||

ಅದರೊಳು ಧನದೇವನೆಂಬವಣಿಕ್ಪತಿ | ಮದನಸದೃಶನಿಹನವಗೆ ||
ಸದಮಲಶಶಿನಿಭಮುಖಿ ನಂದೆಯೆಂಬೋರ್ವ | ಸುದತಿರಂಜಿಸುವಳಂತವಗೆ ||೮೩||

ತನುಜರು ಧನದೇವ,ಧನದತ್ತ,ಜಿನದೇವ | ಜಿನಪಾಲನರ್ಹದ್ದತ್ತ ||
ಜಿನದತ್ತನರ್ಹದ್ದಾಸನುಪ್ರಿಯದತ್ತ | ಮನುಧರ್ಮರುಚಿಯೆಂಬವರು ||೮೪||

ಜನಿಯಿಸಲನಂತರದೊಳು ಪ್ರಿಯದರು | ಶನೆ ಜ್ಯೇಷ್ಠೆಯೆಂಬೊಂದುಹೆಸರ ||
ವನಿತೆಯರುದಯಿಸಿ ಜನನೀಜನಕರಿಗೆ | ಯನುರಾಗವನುಮಾಡುತಿರಲು ||೮೫||

ದಿನವೊಂದರೊಳೋರ್ವಮುನಿಯಾನಗರಿಯ | ಬನಕೆಬರಲುಧನದೇವ ||
ಅನುರಾಗದಿಂತನ್ನಮಕ್ಕಳು ನಿಜಜನ | ವನಿತೆಸಹಿತನಡೆತಂದು ||೮೬||

ಮುನಿಗಳಿಗೆರಗಿಸದ್ಧರ್ಮದತೆರನನು | ಘನವಾಗಿಕೇಳಿನಿರ್ವೇಗ ||
ಮನದೊಳು ಜನಿಯಿಸಲವರೆಲ್ಲರುಗೂಡಿ | ಜಿನದೀಕ್ಷೆಯಧರಿಯಿಸುತ ||೮೭||

ನಂದಸುಖಮನೀವಮುಕ್ತಿಗೆ ಧನದೇವ | ನಂದಪೋದನುಬಳಿಕಿತ್ತ ||
ಮುಂದಣಭವಕೀಮಕ್ಕಳು ಸುತರಾಗ | ಲೆಂದು ನಿದಾನವಮಾಡಿ ||೮೮||

ಧನದೇವನಬಳಿಕ ಸುಸಂಪದ್ಯುಕ್ತಳುಗೂಡಿ | ಜನಸುತಮುಪ್ಪತಪವನು ||
ಅನುಪಮದದಿಂಮಾಡಿತಾನೆಲ್ಲರಳಿದಾ | ಘನತರಸೌಖ್ಯಮನೀವ ||೮೯||
ನವಿಮೂರನೆಯಾನತಕಲ್ಪದೊಳು ಪುಟ್ಟಿ | ವಿದಿತಸುಖವನೆಸಿಪ್ಪತ್ತು ||
ಉದಧಿಸಮಾನಾಯುಷ್ಯಂಬರಮುಂ | ಡೊದವಿದಾಯುಷ್ಯವೃತೀರೆ ||೯೦||
ಧನದೇವನಬಳಿಸುನಂದೆಯಲ್ಲಿಂಬಂದು | ಜಿನಗೆಸುಭದ್ರೆಸೆಸರಿನ ||
ವನಿತೆಯಾದಳು ಮತ್ತಾವಳಬಸಿರೊಳಂ | ದಿನ ಸನಸಂದನರಯ್ಯು ||೯೧||
ಅಂಬುಧಿಸಜಯನಾಮಿಯು ಸುಕುಮಾರಕ | ರೊಂಬತ್ತುಮಂದಿಪುಟ್ಟಿದರು ||
ಬಿಂಬಾಧರೆಯರ್ಕ್ಸ್ಯುದಕ್ಷಿಯಾಜ್ಞೇಷ್ಟ | ಯೆಂಬವರಲ್ಲಿಂದಬಂದು ||೯೨||
ಕೊಂತಿ ಮಾದ್ರಿಯರೆಂಬ ಸುತೆಯರಾದರು ಭೂ | ಕಾಂತಕೇಳಂಧಕವೃಷ್ಟಿ ||
ಇಂತಿದವರ ಜನ್ಮ ವಸುದೇವನಜ | ನ್ಮಾಂತರವನು ಪೇಳ್ವೆನಿನ್ನು ||೯೩||
ಅಗ್ರಮೆನಿಸ ಕುರುಧರೆಯ ಪಲಾಶಕೂ | ಟಗ್ರಾಮದೊಳು ವೇದಶಾಸ್ತ್ರ ||
ಸುಗ್ರೀವನು ಸೋಮಶರ್ಮನೆಂದೆಂಬ ಗು | ಣಾಗ್ರಣಿ ಪಾರ್ವನಿರ್ಪ್ಪದಂ ||೯೪||
ಆ ಸುತಗುಣಿ ಸೋಮಶರ್ಮಗಗ್ನಿಲೆಯೆಂಬ | ಮಾನಿನಿಯೆಸೆವಿಷವಗೆ ||
ಸೂನುಜನಿಸಿದನು ನಂದಿಯೆಂಬೋರ್ವನ | ನೂನಪಾಪೋದಯದೇತನು ||೯೫||
ಕೆಟ್ಟಪಾಪಿಯು ಸಂಜನಿಸಲವರು ರೋಗ | ವಟ್ಟಾಗ ಅಗ್ನಿಲೆಯೊಸತನೆ ||
ಹುಟ್ಟಿದಣ್ಣನು ದೇವಶರ್ಮಗಾಮಗುವನು | ಕೊಟ್ಟು ಬಿಳಿತ ಸತ್ತರಿತ್ತ ||೯೬||
ಮುದದಿಂದ ಸಾಕಿಯವಗೆ ತನ್ನಣುಗಿಯು | ಮದುವೆಯ ಮಾಡುವೆನೆನಲು ||
ಆದನರಿದವನ ಕುರೂಪಿಗನವ ತಾ | ಯೊದವಿದ ಪೇಸಿಕೆಯಿಂದ ||೯೭||
ಆ ಮಗಳನು ತನ್ನ ಗಂಡನರಿಯದಂತೆ | ಸಾಮವನಾಡದೆಯವನು ||
ಕಾಮನಸದೃಶನೋರ್ವ ಪಾರ್ವನ ತನುಜಗೆ | ಪ್ರೇಮದಿ ಮದುವೆಮಾಡಿದಳು ||೯೮||
ತನ್ನ ವಿದ್ಯಾಪಿಗೊಪ್ಪಂಬಡದಾಹೆಣ್ಣು | ನನ್ನಿಗಗಿತ್ತರೆಂಬುದಕೆ ||
ತನ್ನ ತಾನೇ ಪೇಸಿಯಾನಂದಿಮನದೊಳು | ಖಿನ್ನನಾಗಿರಲದನರಿದು ||೯೯||
ಆ ದೇವಶರ್ಮನುತನ್ನಕಿರಿಯ ಮಗ | ಳಾದೊಡಮಾನಿನಗೀವೆ ||
ಖೇದವೇತಕೆ ಮನದೊಳಗೆಂದಳಿಯನ | ನಾದರದಿಂದೊಡಂಬಡಿಸೆ ||೧೦೦||
ಅದನರಿದಾಹೆಣ್ಣು ಸ್ನೇಹಾಪಿಗೆ | ಮದುವೆಮಾಡಿದ ಮರುದಿನವೆ ||
ಅರಿಯದೆ ದುರ್ಮರಣವಮಾಡಿಕೊಂಬನಂ | ದೊದವಿದಚಿಂತೆಯೊಳಿರಲು ||೧೦೧||

ಒಂದುದಿವಸಬಿಸಿಲೊಳುಪೋಗಿ ಬಲುಹುರು | ಪೊಂದಿದಮೈಯೊಳು ಬೆಮರು ||
ನಿಂದುಕನಿತುಮಿಗೆಮಲವೊಣ್ಮಲಾಕ | ಳ್ಳಿಂದಸುರಿವ ಜಾರಿನಿಂದ ||೧೦೨||

ಕೊರಟುದಲೆಯು ಕೊಳೆನಾರುವಕಬ್ಬಾಯು | ಸುರುಟುಕಿವಿಯು ಸುಂಠಿವೆರಲ ||
ಕಿರಿದುಕಿನಿಕೆ ಹತ್ತಿದಕಲ್ಲಿಹುಗಿದೊಂ | ದುರದಕುಸುಂಗಿದಬೆನ್ನ ||೧೦೩||

ಬತ್ತಿದಬಡಪೊರನಾರ ಬಲ್ಲಿರೆಸುತ್ತಿ | ಹತ್ತಿದಪಿಕ್ಕಿಗಾಯಗಳ ||
ಕೊತ್ತಿಗಣ್ಣಿಕ ಕೋತಿಮುಸುಡಿನಬಪ್ಪತೆ | ಪತ್ತುಸಾಸಿವಕಟ್ಟಿಯಿಂದ ||೧೦೪||

ಬಾತಕೆಕ್ಕೆಯು ಬಲುನುಕ್ಕರಿಹೊಟ್ಟೆಯು | ಓತಿದಲೆಯು ಕೀಸದಸಿಯು ||
ನಾತವಡೆದ ತನುವಿನ ನಳಿನಮಾಗಿನ | ಘಾತವೆ ನಡೆತಪ್ಪಂತೆ ||೧೦೫||

ಮನೆಗೆಬರಲು ಕಂಡಾವಿದೂಷಿಗೆ | ಮನದೊಳುವುಗೆಕೊತ್ತುಳಿಸಿ ||
ಘನವಾಗಿಕಾರುವ ಕಷ್ಟಕಿಮುಸುಕಂಡು | ಜನಕನವಳಸಂಸ್ಥಿಸಿ ||೧೦೬||

ಹೊಳೆಗೆಪೋಗಿ ಮೈಮಂಡೆಯು ಹಸನಾಗಿ | ತೊಳೆದು ತಿರುಗಿಬರಹೇಳೆ ||
ಹಳೆಯುಬೆಸ್ಲೆಯು ತಲೆಗಿಟ್ಟರಿಸಿನವನು | ತಳಿದೊಂವರುನೀರು ಮೊದಿಸಿ ||೧೦೭||

ಕಳುಹೆ ಬರುತ್ತಿರಲಾ ಊರೊಳಗೋರ್ವ | ರುಮಯುಲ್ಲರು ಕೂಡಿಕೊಂಡು ||
ಬಳಸಿಯಾಡುವ ಬೇದಿಯು ನಾಟಕವನು ಕ | ಣ್ಣೆಳಸಿ ಸಿರೀಕ್ಷಿಸುತಿರಲು ||೧೦೮||

ತಾನದನೀಕ್ಷಿಸನಂದು ಬರುತ್ತಿರ | ಲಾಸೆರವಿುಹೊ ನೋರ್ವನಕಂಡು ||
ಈ ನವವಿಧ ಬೋಳುವನೋಡಿ ನೀನೆಂದು | ತಾನತಿ ಹಾಸ್ಯಮನಾಡೆ ||೧೦೯||

ಭರದಿನೆಲ್ಲರು ತಗುಳಲುಪೋಗಿ ತಾನೊಂದು | ಪುರನೇರಿನೋಡುತಮಿರಲು ||
ಉರಿವ ಬಿಸಿಲುತಾಗಿಯಾಮಂಡೆಯು ಬೆಚ್ಚ | ಗಿರೆ ಕಸಿತುನೋಡುವವರ ||೧೧೦||

ಮಂಡೆಯುಮೇಲೆ ಹಸಿತುಬೀಳಲಾತದ | ಕಂಡು ಹೇಸಿದಾಣೆಯಿಂದ ||
ಕಂಡಕಂಡವರಿಡಲಿಳಿವಲ್ಲಿಂ ಕಾಲು | ಗೊಂಡೋಡೆ ಕಡುಲಜ್ಜೆಯಿಂದ ||೧೧೧||

ಆರೆನ್ನಬೈದೊಡವಾರೆನ್ನ ಕೊಂದೊಡೆ | ಬಾರಿಸದಾರನುಕಾಣೆ ||
ಕ್ರೂರಕರ್ಮ ನನಗಿಂತಪ್ಪಸಂಸಾರ | ದಿರವೇತಂದೋಡಿಬಂದು ||೧೧೨||

ಒಂದಡವಿಯುಹೊಕ್ಕಲ್ಲಿಂಬೀಳುವೆನೆಂ | ದೊಂದುಕಮ್ಮರಿಯುಸು ಪರಿ ||
ನಿಂದು ಕೆಳಗೆನೋಡಿ ಚಕಿತಹೃದಯನಾಗಿ | ಯೆಂದುಚಾಸಿಸುತಿರ್ದನವನು ||೧೧೩||

ಅಂತಕನವನ ವಿದ್ರೂಪಿಗೆ ಹೇಸಿಕೆ | ಯಾಂತಾಳಿಯೊಳಕೊಂಡುದಿಲ್ಲ ||
ಅಂತಲ್ಲದೊಡೆ ತನ್ನಸಾವಿಗೆಣೆಸಿಯುವ | ನಂತರವನು ಮಾಡುವನೆ ||೧೧೪||

ಆ ಗುಂಡಿನಡಿಯೊಳುಕ್ಕೈಯಿಕ್ಕಿ ನಿಜತತ್ತ್ವ | ಯೋಗನಿಷ್ಠಾಪರರಾಗಿ ||
ಯೋಗಿಯುಗಲವಿರಲಲ್ಲಿಯುವನ ನೆಳ | ಲಾಗಬೀಳಲುದಿಟ್ಟಿದೆರೆದು ||೧೧೫||

ಹಿರಿಯಾತಶಂಖನೆಂಬಾಮುನಿತಿಲಕನಾ | ತರುಣನಿರ್ನಾಮಿಕನೆಂಬ ||
ವರಶಿಷ್ಯಮುನಿಗಿಂತೆಂದನೀನೆಳಲಾತ | ನಿರದೆನಮಗೆ ಮೂರುಭವಕೆ ||೧೧೬||

ತಂದೆಯಾಗುವನಿದುನೆಲೆಯೆಂದಲ್ಲಿಂ | ಬಂದು ಕಮ್ಮರಿಯನು ಏರಿ ||
ನಿಂದಿರ್ದಾನಂದಿಯನೆಯ್ದಿಯುವನೊಳಿಂ | ತೆಂದರು ಹಿತವಾಕ್ಯದಿಂದ ||೧೧೭||

ಏಕಿಲ್ಲಿನಿಂದಿರ್ದಪೆಯೆನೆಕೇಳ್ದಾ | ವ್ಯಾಕುಲನಾಪ್ರಸಂಗವನು ||
ಆ ಕಂತುಹರರೊಳು ನುಡಿಯಲಿಂತೆಂದರು | ಲೋಕೈಕಹಿತಮುಪ್ಪನುಡಿಯ ||೧೧೮||

ಎಲೆನಂದನನಮ್ಮರೂಪನು ನೀನುತಳೆದೊಡೆ | ಸುಲಲಿತಮುಪ್ಪಸೌಭಾಗ್ಯ ||
ನೆಲೆದೊರಕುವುದು ನಿಶ್ಚಯಮೆನೆಕೇಳ್ದ | ನಾನದಕೈಕೊಂಡುಬಳಿಕ ||೧೧೯||

ಮುನಿಗಳವರು ಪಾಲಿಸಿದಸುವ್ರತವನು | ಇನಿಸುವಿಚಾರದೆಬಗೆಗೊಂಡು ||
ದಿನಚರಿಯುದರೊಳು ನೆಗಳೆಸನ್ಯಾಸದಿ | ತನುವಿಸರ್ಜನೆಗೆಯ್ದು ||೧೨೦||

ತುಂಬಿದಸೌಖ್ಯವನೀವ ಮಹಾಶುಕ್ರ | ವೆಂಬಸಗ್ಗದೊಳುಸಂಜನಿಸಿ ||
ಇಂಬಾದ ಈರೆಂಟಬ್ಧ್ಯೋಪಮಾಯುಷ್ಯ | ತಂಬುವನ್ನತಿಸುಖವುಂಡು ||೧೨೧||

ಬಂದೀಗಂಧಕವೃಷ್ಟಿನೃಪತಿನವ | ಕಂದರ್ಪನಿನ್ನಗರ್ಭದೊಳು ||
ಸೌಂದರ್ಯಯುತನಾಗಿ ವಸುದೇವವೆಸರಾಂತು | ನಂದನನಾಗಿಪುಟ್ಟಿದನು ||೧೨೨||

ಎನಲುತನಗೆಮನದೊಳು ವೈರಾಗ್ಯಸಂ | ಜನಿಸಿ ಜಿನಪನಂಘ್ರಿಗೆರಗಿ ||
ಮನೆಗೆಯ್ದಿಶರಧಿವಿಜಯಗೆ ಭೂಭಾರಮ | ನನುವಿಂದದಿಂಹೊರಿಸಿದನು ||೧೨೩||

ನರಪತಿಯೊಡನ್ಯನೂರ್ವರರಸುಗಳು | ವೆರಸಿಯುಂಧಕವೃಷ್ಟಿನೃಪತಿ ||
ಗುರುಸುಪ್ರತಿಷ್ಠರಕೈಯಿಂದ ದೀಕ್ಷೆಯ | ಧರಿಸಿ ಮುಕ್ತಿಯನೆಯ್ದಿದನು ||೧೨೪||

ವೀರನುದಾರನುತ್ತಮಶುಚಿ ಘನಗಂ | ಭೀರನುತ್ತಮಬೋಧಯುತನು ||
ಚಾರುಚರಿತ್ರನೆಯ್ದಿದನು ಮುಕ್ತಿಯನಾ | ಮಾರಮದಾಪಹರಣನು ||೧೨೫||

ಇದು ಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿ ನೇಮಿಜಿನೇಶಸಂಗತಿಯೊಳ | ಗೊದವಿದಸಂಧಿಗಳೇಳು ||೧೨೬||

ಏಳನೆಯ ಸಂಧಿ ಸಂಪೂರ್ಣಂ.



# ೮. ವಸುದೇವ ಶೃಂಗಾರವರ್ಣನಾಸಂಧಿ



ಶ್ರೀಮದಮರಪತಿ ಮಕುಟಕೀಲಿತಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಸ್ವಾರ್ಥಮೆನಿಸುವ ಶೌರೀಪುರದೊಳಗೆ ಕೃ | ಪಾರ್ಥದೇಶಮನಾಳುತಿರಲು ||
ಪಾರ್ಥಿವಕುಲ ಮಸ್ತಕಮಣಿವಿಸಯುಗ | ಮರ್ಥಸಮುದ್ರವಿಜಯನು ||೨||

ವಾರಿಧಿವಿಜಯನೃಪತಿಗಾಂಭೀರ್ಯದಿ | ವಾರಿಧಿಯನು ನೆರೆಗೆಲಿದ ||
ಕಾರಣದಿಂದಾ ಅಸ್ವಾರ್ಥನಾಮವು | ಸೇರಿದುದಿಳೆಯರಿಕೆಯೊಳು ||೩||

ಆದೇಯಮೂರ್ತಿ ಸಮುದ್ರವಿಜಯಧರ | ಣೀದಯಿತೇಶನೊಳೊಸೆದು ||
ಸೋದರರೊಂಬತ್ತುಮಂದಿಕುಮಾರರು | ಭೇದವಿಲ್ಲದೆಕೂಡಿಹರು ||೪||

ಅಂತವರಿಂ ನೆರೆಕಿರಿಯನು ರೂಪಜ | ಯಂತನು ವಸುದೇವಕುವರ ||
ಕಾಂತಾಚಿತ್ತಚಕೋರಚಂದ್ರಮನುರೆ | ಸಂತಸದಿಂದಿರುತಿಹನು ||೫||

ಪ್ರಾಯವೇರದಮುನ್ನ ತರುಣಿಯರುಗಳ ನಿ | ಕಾಯವನೊಲಿಸಿಕೊಂಬ ||
ಚಯತಿಕೆಯ ಚಲ್ವಿಕೆಯಾ ವಸುದೇವ | ರಾಯಕುವರಗೊಪ್ಪಿದುದು ||೬||

ಪಸಕರಿಗುತ್ತಮವುಪವೇರುವವೊಲು | ಜಸತಾಧೀಶನಂದನಗೆ ||
ಮಿಸುಗುವ ಪಡುಂಜವ್ವನವೇರಲು | ಸನವಿಲ್ಲಿಗೇರಿತುನಾರಿ ||೭||

ಇಂತು ಒಂದಾನೊತ್ತವೊದಲ ಜವ್ವನದೊಳು | ಕಂತುಸದೃಶವಸುದೇವ ||
ಸಂತಸದಿಂ ತನ್ನೆಣೆಯದಸುಕ್ಕಳ | ಸಂತತಿಯನು ಕೂಡಿಹನು ||೮||

ನಟಿಯಸುಶರಸನ ಮನಕೆಸಂತಸಮಾಕ್ಸ | ವಿಟ ವಿದೂಷಕ ನಾಗರಿಕ ||
ನಟಕಪಂಡಿತಪರಿಹಾಸಕಾದಿಗಳು ಸಿ | ಷ್ಟ್ರುಟಲತೆಯಿಂ ಕೂಡಿಹರು ||೯||

ವಾರದೊಡಿಗೆಗಳ ವೇಸಮನರಿದು ಶೃಂ | ಗಾರವಮಾಡಿಕುವರನು ||
ನಾರಿಯರ್ದೆಯೊಳಗಾಸಗರಿಯ ಕೇರಿ | ಕೇರಿಯೊಳಗೆತಿರುಗುವನು ||೧೦||

ಭಾವಿಸಿನೋಡುವ ಬಾಲಕಿಯರದಿಟ್ಟಿ | ತೀವಿಬಿಂಬಿಸೆಜನ್ನತನುವ ||
ಆ ವಸುದೇವನಾಸೆಯನೇರಿ ಪೊಳಲೊಳು | ದೇವೇಂದ್ರನೆನೆಸೊಳಲುವನು ||೧೧||

ಗೊಂದೆಗಳನು ಕಾಯುದಗೋವಿಂದನೊ | ಅಂದವಡೆದಮನುಮಥನೊ ||
ಕುಂದದಚಂದಿರನೋ ಎಂದಾಪುರ | ಸುಂದರಿಯರು ನೋಳ್ಪರವನ ||೧೩||

ವಾಜಿಯನೇರಿ ವಾಹಳಿನಾಡಿಪನುಗುಳಾ | ರಾಜಧಾನಿಯ ಕೇರಿಗಳೊಳು ||
ರಾಜನಂದನರೆಡಬಲದೊಳು ಒರೆ ರಾಜ | ರಾಜನಂದದಿತಿರುಗುವನು ||೧೪||

ಅದೆಯುಡೆ ಒಂದುಬಂದವನಾ ಅಭಿನವ | ಮದನನೆಂದಾಪುರವರದ |
ಸುದತಿಯರೊಳಗೊಬ್ಬರುಳಿಯದೆ ಬೀದಿಗೆ | ಅದಿರದೆ ಬಂದು ನೋಡುವರು ||೧೫||

ಕೇರಿಕೇರಿಯ ಮನೆಮನೆಯಂಗಣದೊಳು | ನಾರಿಯರೆಲ್ಲರೆಯ್ದುಂದು ||
ಸ್ತ್ರೀರಾಜ್ಯವೊ ಈನಗರಿಯೆಂಬಂತಾ | ಮಾರನಿಭನನೀಕ್ಷಿಸಿದರು ||೧೬||

ಸ್ಮರನೆರಡನೆಯವತಾರವಕ್ಕೊಂಡ | ಪರಿಯೊಳಗಾನಗರಿಯೊಳು ||
ತಿರುಗುವರಾಜಕುಮಾರನನಾಪುರ | ತರುಣಿಯರೊಲಿದೀಕ್ಷಿಸುವರು ||೧೭||

ಪೋಗದಿರೆಂಬತ್ತೆಯ ಮಾತಕೇಳದೆ | ಬಾಗಿಲವರ ಹೊರನೂಂಕಿ ||
ಈಗಮುಗುಳ್ನಸೆಂದೆಯ್ದುಂದುನೋಡುವ | ರಾಗಾಧರೆಯರೊಪ್ಪಿದರು ||೧೮||

ಬಾರಿಪಗಂಡರುಗಳ ಬಗೆಗೊಳ್ಳರು | ಕೂರಸಿಗಳನೆದೆಗೆಡರು ||
ಸೀರೆಕಳೆಯಲೇನೆಂದರಿಯರು ಪುರ | ನಾರಿಯರವನನೋಳ್ಪಾಗ ||೧೯||

ಅರಸುಮಕ್ಕಳ ಸತಿಯರು ತೊಟ್ಟುದುಟ್ಟುದ | ಸಿರದೆ ಬಿಸುಟು ನಾಣುಟ್ಟು ||
ನೆರೆದತೊಳ್ತಿರೊಳು ತಾಮೂತೊಳ್ತಿರಾಗಿ ಬಂ | ದುರುಮುದದಿಂನೋಳ್ಪರವನ ||೧೯||

ಅನ್ಯಪುರುಷರನೀಕ್ಷಿಸ ಮನೆಯಾಣ್ಮರಿ | ಗನ್ಯಾಯಕಾತಿಯರಹವು ||
ಮಾನ್ಯಗೆಡುವುದೆನ್ನದೆ ಮನವೆಣ್ಣಾ | ಧನ್ಯನನಂದು ನೋಡಿದರು ||೨೦||

ಮದಿಲನಡರಿ ಮಾಡವಹತ್ತಿ ಮರಗಳ | ತುದಿಯೇರಿಯಾಪುರವರದ ||
ಮದವತಿಯರು ನೋಡುವಂಬರಚರ | ಸುದತಿಯರಂತಾನೃಪನ ||೨೧||

ಲಲನೆಯರವನ ನೋಲಿಮನೋಡುವನೋಟ | ವಲಗಣೆಗಳಕಾಟಾಟ ||
ನಲಸಿದಬಗೆಯಬಲ್ಮೆಯ ನೋಡಿಸುವೋಟ | ಗೆಲವಿಗಿಕ್ಕಿದಕಾಳಕೂಟ ||೨೨||

ಅಂಗಡಿಪೀದಿಪಿಡಿದುನಡೆವಾನೃಪ | ತುಂಗನೆಯ್ದುವಕಡೆಗಾಗಿ ||
ಹಿಂಗದೆನಡೆತಂದುದಾಸತಿಯರ ಜಾಲ | ವಂಗಭವನಜಾತ್ರೆಯಂತೆ ||೨೩||

ಮುಟ್ಟಿಪಿಡಿದು ನೋಡುವ ಮುಗ್ಧಸತಿಯರ | ಕಟ್ಟಕಡೆಯ ಕಣ್ಬೆಳಗು ||
ಅಟ್ಟಿಹಿಡಿಯೆ ಮುತ್ತಿನಬೊಂಬೆಗುಂತಳ | ವಟ್ಟುನಡೆದನಾನೃಪತಿ ||೨೪||

ಗಂಡುಗಂಡಿಗೆ ಮೋಹಿಸುವ ಚೆಲ್ವಿಕೆಯ ಕೈ | ಕೊಂಡ ಕುಮಾರಚಂದ್ರಮನ ||
ಗಂಡಗಾಡಿಯ ನೋಡಿದಬಲೆಯರಿಗೆ ಕಾವ | ನಂಡಲೆಯುತಿಪಿರಿದಾಯ್ತು ||೨೫||

ಕಟ್ಟರಸಿನಕುವರನಚೆಲ್ವಿಕೆಯನುಕ | ಣ್ಣಿಟ್ಟುನೋಡಿದಮಾತ್ರದೊಳು ||
ಬಟ್ಟಜವ್ವನೆಯರಬಳಗಕಂಗೋದ್ಭವ | ನಟ್ಟುಳಿಯುತಿಘನಮಾಯ್ತು ||೨೬||

ಆ ವಸುದೇವಕುಮಾರನ ರೂಪನ | ಭಾವಬಲಿದುನಡೆನೋಳ್ಪ ||
ಭಾವೆಯರಿಗೆ ತತ್ಪುರದೊಳುಕಾವನ | ಹಾವಳಿವೆಗ್ಗಳವಾಯ್ತು ||೨೭||

ಶೃಂಗಾರಶರಧಿಶಶಾಂಕನರೂಪಮ | ನಂಗೊಳಿಸಂತೀಕ್ಷಿಸುವ ||
ಅಂಗನೆಯರ್ಗಾಪುರವರದೊಳಗೆಯ | ನಂಗನಬ್ಬರಪಿರಿದಾಯ್ತು ||೨೮||

ಆರಮಗನಾಕಾರವ ನಿರೀಕ್ಷಿಸಿ ಪರ | ಪುರುಷರನೊಲ್ಲೆನೆಂದೆಂಬ ||
ತರುಣೀಜನದಕಲ್ಲೆದೆಗೋಂಟೆಕಾವನ | ಹರಿದಾಳಿಗೀಡಾದುದಿಲ್ಲ ||೨೯||

ಅಲರಂಬನ ದಾಳಿ ಬಪ್ಪ ವಾರ್ತೆಯಕೇ | ಳ್ದಲಸದವನನಡೆನೋಳ್ಪ ||
ಲಲನೆಯರೆದೆಯಬಲುಮೆನಾಣ್ಚಿಕೆಗೂಡಿ | ಒಲಸುತೆಗೆದುಪೋದುದಾಗ ||೩೦||

ಕಟ್ಟೊಲಪಿನಕರುಪಿನವೊಲುಕಣ್ಗಳ | ಪಟ್ಟರಮಗನನೀಕ್ಷಿಸುವ ||
ಪಟ್ಟಣದಬಲಾನೀಕದಕ್ಕಿದೆಲಾಳ | ವಟ್ಟೆಯಾಯ್ತಲರಂಬಿನಿಂದ ||೩೧||

ಅವಳನೆಸುವೆನವಳನಿಳಿಗುರುಳಿಪೆ | ನವಳನುಮೆಲ್ಲೆರ್ದೆಯಿಂದ ||
ಜೀವದೆಗೆವೆನೆಂದು ಸಂದೆಗೆಸುರಗಿಯ | ಕಾವಕೇಳುವಕೆರನಾದ ||೩೨||

ಆ ಮನಸಿಜನಾ ಪೊಳಲೊಳಗಾ ಖು | ದ್ದಾಮರೂಪನನಡೆನೋಳ್ಪ ||
ಕೋಮಲೆಯರತನುಮನವನು ನಿರ್ಧೂಮ | ಧಾಮವಾಗಿರೆಸುಟ್ಟನಂದು ||೩೩||

ಆ ನರನಾಥಭಾನುವನೊಸದೀಕ್ಷಿಸು | ವಾನಗರಿಯನಾರಿಯರ ||
ಮಾನವನಾಶಂಬರರಿಪುದಂದಹ್ಯ | ಮಾನಮಪ್ಪಂತುರುಪಿದನು ||೩೪||

ಕೆಲರಂಬುಗೂಡಾಗಿಬಿಳ್ದಿರೆ ಕೆಲರಲ್ಲಿ | ಯಲರಂಬಹೊತ್ತುಹೊಮ್ಮಿರಿದು ||
ನೆಲಕುರುಳ್ದರುಪುರಸುದತಿಯರಾನೃಪ | ಕುಲತಿಲಕನನೀಕ್ಷಿಸುತ ||೩೫||

ಮಿಾಟೆನಿಸುವಮುಗುಳ್ಗಣ್ಣೆಯನರೂಪನಿ | ರ್ಧಾಟಿಪನೃಪನನೀಕ್ಷಿಸುವ ||
ನೋಟಮಾತ್ರದೊಳಬಲೆಯರ್ಗೆ ವಿರಹದಾಟ | ಕೋಟಲೆಕಡುಪಿರಿದಾಯ್ತು ||೩೬||

ಅಪಶ್ಟಾಕಿಲ್ಲವಂದದಿ ನಾಪಿವಗೆಮನ | ವ್ರೊಡ್ಡಿಬಿಡದೆಸುಖಿಯಿಸುವ ||
ದೊಡ್ಡಿತೆಂದಿಂಗಹುದೊ ಬಿಡು ಕೆಲಬರು | ಗುಡ್ಡೆಣಿಕೆಯನೆಣಿಸುವರು ||೩೭||

ಜೆನ್ನಿಗನೀವಸುದೇವನಲ್ಲದೆ ನವು | ಗನ್ನಿಗರೀ ಭವಾಂತರಕೆ ||
ಜೆನ್ನೊಡಹುಟ್ಟೆಂದು ಭಾಷೆಗಳನು ರಾಜ | ಕನ್ನೆಯರೊಸೆದು ಮಾಡುವರು ||೩೮||

ಚಿತ್ರಮನಿಪರೂಪುವಡೆದನೀರನ ಭಾವ | ಚಿತ್ರದ ಪಟಗಳ ತರಿಸಿ ||
ನೇತ್ರೇಂದ್ರಿಯಸುಖವಡೆಪರೊಸೆದು ಶತ | ಪತ್ರಾಕ್ಷಿಯರಲ್ಲಿ ಕೆಲರು ||೩೯||

ಬಣ್ಣವನುಡರು ಬಂಗಾರಗಳನು ತೊಡ | ರುಣ್ಣರಂಗವನೋಸರಿಸರು ||
ಕಣ್ಣಸವಿಗೆಯಾತನರೂಪನೋಡಿದ | ಪೆಣ್ಣಲ್ಲರಾಪುರದೊಳಗೆ ||೪೦||

ಪರಕಾಯಪ್ರವೇಶವು ಜೀವಗುಂಟೆಂ | ಬರಮಾತುಗಳನುಂಟುಮಾಡಿ ||
ಪುರಸುದತಿಯರು ಚಿತ್ತವನಾತಸಂಗದೊ | ಳಿರಿಸಿಹಡೆದುಮೂರ್ಛೆಯನು ||೪೧||

ಮರುವುಡಿಮುದ್ದುವ್ಯಯಿಸಂತೆ ಮನಸಿಜ | ಸಿರದೇರಿಂ ಸೊಕ್ಕಿದಂತೆ ||
ಅರಿವನುಗಿವನೋಹಡಿ ಮನೆವೆಣ್ಣಳು | ಮರೆವರು ಮನೆಗೆಲಸವನು ||೪೨||

ಕನಸುಮನಸು ಕನವರದೊಳಗಾನೃಪ | ತನುಜಾತನನಿಂಬುಗೊಳಿಸಿ ||
ಘನಮಾದಮೋಹ ಮರುಳುಗೊಂಡವೊಲುಪುರ | ವನಿತೆಯರುಗಳಿರುತಿಹರು ||೪೩||

ಮನಸಿನೊಳಾಕುಮರನ ಭಾವರತನೋ | ಕನಸಿನೊಳವನನುರತನೆ ||
ಅನುಕರಿಸಿರಲಂತದರಿಂದಾಪುರ | ವನಿತೆಯರೆದೆಬಿಡದಿಹರು ||೪೪||

ಅನಿತರೊಳಕಾಮುನಿಯರೆಲ್ಲರು ಹೆತ್ತ | ತನುಜರೆಲ್ಲರು ನೃಪಸುತನ ||
ಮನುತಮಪ್ಪಾಕಾರದ ಸೌಂದರ್ಯವ | ನನುಕರಿಸಿಯೆ ಜನಿಸಿದರು ||೪೫||

ಇಂತುಕಂತುವ ಪಾಪಳಿಯಾಸರಿಸಿದ | ಕಾಂತಾಜನವನು ಕಂಡು ||
ಚಿಂತೆಯಿಂದಾಪೌರರೊಂದೆಡೆಯೊಳುನಿಂದು | ಮಂತಣವನುಮಾಡುತಿರಲು ||೪೬||

ಅನಿತರೊಳೋರ್ವಪಾರ್ವನು ತನ್ನವಲ್ಲಭೆ | ಜನಸುತನಾಕುಮಾರಕನ ||
ವಾಸನೆಗೊಂಡುನೋಡಿ ಮನಸಿಜಬಾಣಕೆ | ತನುಲತೆಯನುಗುರಿಮಾಡಿ ||೪೭||

ಉಂಬುದಬಿಟ್ಟಳು ಉಡುವುದತೊರೆದಳು | ಕೊಂಬುದನೆಲ್ಲವುಳಿದಳು ||
ಶಂಬರರಿಪುನಿಭವಸುದೇವಕುಮರನ | ಪಂಬಲಸುತ್ತಾಸುದತಿ ||೪೮||

ವಿರಹದೊಳೊಂಬತ್ತನೆಯವಸ್ಥೆಯನಂ | ದಿರದೆಸಿದ್ಧಿಮೂರ್ಛೆಯೊಳಿರಲು ||
ಪರಿತಂದುನೋಡಿಯಿವಳು ಸತ್ತಳೆಂದತಿ | ಭರದಿಂದ ಪೊರಮಟ್ಟುಮನೆಯ ||೪೯||

ಮೊದಲುಮಂತಣಗೊಂಡು ನೆರೆದಿರ್ದಾಸಭೆ | ಗದಿರುತಬಂದುನ್ಮೈಯಿಕ್ಕಿ ||
ಪುದಿದದುಃಖದೊಳಿಂತೆಂದನುಪಾರ್ವನು | ಮದನರೂಪನನೀಕ್ಷಿಸುತ ||೭೦||

ಅತಿರೂಪವತಿ ಹಾವಭಾವವಿಲಾಸಾ | ನ್ವಿತೆಯೆನ್ನ ಚಿತ್ತವಲ್ಲಭೆಯು ||
ಅತನುವಿರಾಜನಡಕೆಕೊಂದಿತೆಂದಾ | ಗತಲಜ್ಜಿತನು ಮೊರೆಯಿಡಲು ||೭೧||

ಆವನ ಮೊರೆಯ ಕೇಳುತಾಸಭ್ಯರೆಲ್ಲರು | ತಮೆ ನಗುತಲ್ಲಿಂದೆಳ್ದು ||
ಅವನವಮನೆಗೆಯ್ದೆಸುತ್ತುವನೊಡಗೂಡಿ | ಯುವತೀರನಾಲಯಕೆಯ್ದು ||೭೨||

ಅರಸನೋಲಗದವಸರವು ಸರಿದುಬಂದು | ನೆರೆದರಮನೆಯಬಾಗಿಲೊಳು ||
ಶರಧಿಘೋಷಿಸುವಂತೆ ತೊನಲುಪಿಡಿದುಕೊಂಡು | ಭರದಿಂಮೊರೆಯಿಟ್ಟರಾಗ ||೭೩||

ಎಲ್ಲಿಯದೀ ಮೊರೆಯೆಂದು ಧರಿಜಾ ಭೂ | ವಲ್ಲಭನವರನು ಕರೆಸಿ ||
ಸಲ್ಲೀಲೆಯಿಂ ಕೇಳೆ ಪುರದ ಜನ್ಮ ಸವನು | ಸೊಲ್ಲಿದಿಂತೆಂದು ಮಾಡಿದರು ||೭೪||

ವಸುಧೀಶ್ವರಕೇಳೆನ್ನ ಪುನ್ನವನು | ಅಸುರಲವಸ್ತ್ರನಿಸ್ಮಸುಬ ||
ವಸುದೇವನಾಟವ ನೋಡೆಂದು ತಂತಮ್ಮ | ಸಿಸುಗಳೆಲ್ಲವನೆಳುಹಿದರು ||೭೫||

ವಸುದೇವನ ರೂಪನಗೆಯ್ದದಂತಿರ್ದ | ಸಿಸುಗಳೆಲ್ಲವರಾಣ ತಪೆ ||
ವಸುಧಾಧೀಶನೊತ್ತದಪೊತ್ತುದಂತೆ ಬೆ | ಕ್ಕಸವಟ್ಟು ಸೆನ್ನೆರಗಾಗಿ ||೭೬||

ಅನುಜನಿಂತಪ್ಪದುಃಸ್ಥಿತಿಗಳನು ಪಲ್ಲ | ವೆನುತಮನದೊಳುಭಾವಿಸುತ ||
ಜನಪತಿಯುವರಸಂಜಲುವೇಸಂಡತಿ | ವಿನಯದಿಪೇಳ್ಕೊಟ್ಟನಾಗ ||೭೭||

ಆ ಪ್ರೋಲಗದಿಂದೆಳ್ದು ಮಂತ್ರಾಲೋಚ | ನಾವಾಸದೊಳುಕುಳ್ಳಿರ್ದು ||
ಆ ವಿಭು ಮಂತ್ರಿಸುಬುದ್ಧರನು ಕರೆಸಿಕೊಂ | ಡಾವಾರ್ತೆಯನುಸುರಿದನು ||೭೮||

ಅರಸುನುಡಿಯುಲವೆಂತೆಂದು ನುಡಿದರು | ನರನಾಥನಿನ್ನನುಜಾತ ||
ತರಳತನದಿತನ್ನಗೆಯರಮಕ್ಕಳು | ವೆರಸಿ ಊರೊಳು ತಿರುಗುವನು ||೭೯||

ತಂಡತಂಡದಿ ಪರಿಹಾಸಕರನು ಕೂಡಿ | ಮಂಡಳಿಸಿರುಮಂತ್ರಿಗಳ ||
ದಂಡನಾಥರಕೇರಿಯೆನ್ನದೆ ಕುಸುಮಕೋ | ದಂಡನಂದದಿ ತಿರುಗುವನು ||೮೦||

ಇರುಳು ಹಗಲುಮೆನ್ನದೆಯುಕ್ತಿಕಾರರು | ವೆರಸಿಬವಣಿಬರುತಿರಲು ||
ಪುರವನಿತೆಯರೆಲ್ಲ ಕೈಗೆಲಸವಬಿಟ್ಟು | ಪರಿದುಬಂದವನನೋಡುವರು ||೮೧||

ಮನೆವಾರ್ತೆಯದಂದುಗವನುಮರೆದರು | ತನುಜರಗೆರೆಯರು ಹಾಲ ||
ಇನಿಯರತಕ್ಕೋಲಣ ಭಕುತಿಯಬಿಟ್ಟರು | ವನಿತೆಯರೀಪುರದೊಳಗೆ ||೮೨||

ಗುಡರತೋಳೊಳು ವ್ಯೆವುರೆದಿದರ್ಗೆ | ಪೊಡಿರುಕಸವರಗೊಳಗೆ ||
ಗಂಡುಗಳರಸನು ವಸುದೇವಕುವರನ | ಕೊಂಡುಬನ್ನಿಯೆಸುತಿಹರು ||೧೩||

ಚಿತ್ರಜನಾವಸುದೇವಕುಮಾರನ | ಉತ್ತಮಮುಸ್ವರೂಪವನು ||
ಮತ್ತಾಪುರವನಿತೆಯುರಂಗದೊಳಗ | ಚಿಟ್ಟತ್ತಿದನತಿವಿಸ್ಮಯದೊಳು ||೧೪||

ರತಿಯಿಲ್ಲದೊಡಮೇಸಸ್ವಪುರುಷರೊಳು | ಮತಿಯುಸಿಟ್ಟಾವಮಾನಿನಿಯರ ||
ಸುತರವರಂತಾಗುವರೆಂಬ ನಾಣ್ನುಡಿ | ಯತಿಸಿದ್ಧವಾಯ್ತುಮಾರಿಸೊಳು ||೧೫||

ಮತ್ತಮಂತದರಿಂದಾಪೊಸಲ್ಪೆಣ್ಗಳು | ಪೆತ್ತಮಕ್ಕಳರೂಪಲ್ಲ ||
ಉತ್ತಮವಸುದೇವನ ರೂಪಹೊಂತಾದು | ಹತ್ತಿಸಿದಂತೆಯೊಪ್ಪಿದವು ||೧೬||

ಇದರಿಂದಾ ಮಾನಸಿಧಿಯುಮೇಲಪರಾಧ | ಪೊದವಿತಲ್ಲದೆ ಬಳಿಕೊಂದು ||
ಹದನವಾಪರಿಯೆಂದಾಮಂತ್ರಿಗಳು ಭೂ | ಸುದತಿಯಾಣ್ಮಸೊಳುಸುಂದರು ||೧೭||

ಆ ಸುಟಿಗತಿಹರುಷವತಾಳಿಯಿಂತೆಂದ | ನಾ ಸ್ವಪಸೀದುರ್ಯಶಕೆ ||
ಆಸದೆ ಒಂದು ಕಾರ್ಯವಮಾಡಬೇಕೆಂದು | ತಾನವರಸುಮತದಿಂದ ||೧೮||

ಆ ಮಂತ್ರಾಳೋಚನಗೃಹದಿಂದೆ | ಕ್ಷಾಮತುದಿನದೋಲಗಕೆ ||
ಪ್ರೇಮದಿನಾವಸುದೇವಕುಮಾರನ | ನಾಮಹೀಪತಿಕರೆಸಿದನು ||೧೯||

ಬಂದನುಜನಬೇರುವಿದ ಸೊಬಗಗಾ | ಸಂದದಿ ಬಿಗಿಬಗಿಯುಪ್ಪಿ ||
ಕೆಂದಳಿರ್ವಾಯ್ದೆ ತಂಬುಲವಿತ್ತುಕೆಲದೊಳು | ತಂದುಕುಳ್ಳಿರಿಸಿ ಮೃದಡವಿ ||೨೦||

ಹಸುಳೆಯಿದೇಕೆ ನಿಸ್ಸೀಸುಕುಮಾರಾಂಗ | ಹೊಸೆದ ಹೂವಾಲೆಯಂತಾಯ್ತು ||
ಸಸುನಗೆಮಿಸುಗುವ ಮೊಗಮೇಕೆ ಪೊಗಸಿನ | ಶಶಿಯಂತೆ ಕಲೆಗುಂದಿದುದು ||೨೧||

ಬಿಸಿಲೊಳು ತಿರ್ರನೆತಿರುಗಿದಕಾರಣ | ಒಸೆದುನೋಡುವರಕಣ್ಣೀರು ||
ಮುಸುಕಿದಕಾರಣ ನಿಸ್ನ ಕೋಮಲತನು | ಹಸಗೆಟ್ಟುಬಡಬಡವಾಯ್ತು ||೨೨||

ಇನ್ನಿನಿತರಮೇಲೆ ತಿರುಗದೆಯಾದೊಡೆ | ಎನ್ನಾಣೆಯೆಂದಾಕುವರಗೆ ||
ಕನ್ನೆಯರಾದಿಯಾದಾಸುಕಪರಿಕರ | ಮಂ ನಕ್ಕೆಯಿಂತರಿಸಿದನು ||೨೩||

ಅನುಜನಮನಕೆ ತಾಮಾಡಿದಕೃತ್ಯವಂ | ದಿನಿಸರಿಯುಬಾರದಂತೆ ||
ಸನುಮನದಿಂದರಮನೆಯುಕೆಲದನಂ | ದನವನದೊಳಗಿರಿಸುತವೆ ||೨೪||

ದಾರುಕ ವಲ್ಲಭೀಕರರೆಂಬೀರ್ವರು | ವೀರಭಟರ ಕಾಪನಿರಿಸಿ ||
ಆರರಿಯದತೆರದಿಂದರಿಸಿದನು ಕು | ಮಾರನರಕ್ಷಣೆಗೆಂದು ||೨೫||

ತಮ್ಮಣ್ಣನೆಸಗಿದಕೃತ್ಯವಪೂರಿಂಹೊರ | ಹೊಮ್ಮದಿರಲು ವಸುದೇವ ||
ಕಮ್ಮಗಣೆಯುಸಂದದೊಳಾವಸದೊಳು | ಸುಮ್ಮಾನದಿಂದಿರುತಿರಲು ||೭೬||

ಹುಸದಿಸೊಂದುದಿನದೊಳಭ್ಯವಿಜಯಭೂ | ವರನವಲ್ಲಭೆ ಶಿವದೇವಿ ||
ಸ್ಮರನಿಭನಾವಸುದೇವನಸರಸಿಯರ್ಗೆ | ಪರಿಮಳಪುಷ್ಪವಸ್ತ್ರವನು ||೭೭||

ಭಾಸಿಪ ಬಹುಮಣಿಪಾತ್ರೆಯೊಳಿಟ್ಟೋರ್ವ | ದಾಸಿಯಕೈಯೊಳು ಕಳುಹೆ ||
ಆ ಸುಕುಮಾರನವಳಕಂಡು ಸರಸವ | ನೋಸರಿಸದೆ ಮಾಡಿದನು ||೭೮||

ಅತ್ತಿಗೆಯಾಶಿವದೇವಿಯುನೇಹದ | ತೊತ್ತಾದಕಾರಣದಿಂದ ||
ಒತ್ತಿರೋಡಾಡಿಸುತಿರೆ ಕಮಗೋಪವ | ಮತ್ತವಳಿಂತಾಡಿದಳು ||೭೯||

ಕೋತಿಯವೊಲು ಬಾಧಿಸದೊಳಿರ್ದೀಜೇಷ್ಟೆಯ | ನೇತ್ರೋರಿಂದೆಯೆಂಬವಳ ||
ಮಾತಿಗೆ ಕದುಕಿಸಿದಂತಾಗೆ ವಸುದೇವ | ನಾತೊಳ್ತಿಸಕ್ಕೆನಿಬಿಡು ||೮೦||

ತನ್ನ ಮುಂಗೈಯಕಂಕಣವನವಳಿಗಿತ್ತು | ಚೆನ್ನಾಗಿಯಾಪ್ರಪಂಚವನು ||
ಎನ್ನೊಳುಮರೆಸದೆ ಪೇಳೆನಲೆಂದಳು | ಮುನ್ನಾದ ಕಜ್ಜ ಪೆಲ್ಲವನು ||೮೧||

ತೆರದರುಶನವಾಗಿ ಸುಬಿದವಾಸಿಯುಮಾತ | ಸರಿಕೇಳಿಯಾವಸುದೇವ ||
ಬೆರಗಾಗಿ ತಾನಾಬುತ್ತಾಗುವ ಹುಲ್ಲೆಯ | ತೆರನಿನೆ ಮನದೊಳು ನೊಂದು ||೮೨||

ನಿರ್ಮಲಸಿವನೆನ್ನ ಸುಜಾತನೆನ್ನದೆ | ಕೂರ್ಮೆಯನೊಕ್ಕಿಗಳೆನ್ನ ||
ದುರ್ಮತಿಗಳಮಾತಿಗೆ ನೆರೆಯಿಡುವುದು | ಧರ್ಮವೆ ಎನ್ನಗ್ರಜಗೆ ||೮೩||

ಪಿರಿದುವಂಚಿಸಿ ನಿರ್ದೋಷಿಯನೆನ್ನೀ | ಪರಿಯೊಳು ಸೆರೆಯೊಳಗಿಟ್ಟ ||
ಅರಸನಸದಿಟ್ಟಿಗೆ ನೀರಬರಿಸಿ ನಾನು | ಪರಮಂಡಲಕೆಯ್ದುವೆನು ||೮೪||

ಅಳಿವುದೊಡಲು ಉಳಿವುದು ಕೀರ್ತಿಯಪಕೀರ್ತಿ | ಇಳೆಯೊಳು ಮನುಜರಿಗೆಂದು ||
ಅಲಘುವಿಕ್ರಮಿಚಿಂತಿಸುತಾಸಮಯಕ್ಕೆ | ನಳಿನಬಾಂಧವನಸ್ತಮಿಸಿದ ||೮೫||

ಆ ರವಿಯಸ್ತಮಾನದ ಜಾವವೆರಡರ | ಘೋರಮಪ್ಪರ್ಧರಾತ್ರಿಯೊಳು ||
ಧೀರಲಲಿತವಸುದೇವಕುಮಾರನು | ದಾರಯ್ಯದೆ ಪೊರಮಟ್ಟ ||೮೬||

ಪೊರಮಟ್ಟಾಪುರವನು ಪೊರವಳಲೊಳು | ಕಿರಿದಾನುದೂರಮೆಯ್ತಂದು ||
ಸೆರೆಗಲಿಯದಿರದೆ ಹೊಕ್ಕನಂತಕರಾಜ | ನಿಕೆಯರುದ್ರಭೂಮಿಯನು ||೮೭||

ಆವಬಳಿಯೊಳಿನ್ನದೆ ಕೊಂಡದಕುಂಟೆ | ಯಾ ಉರಿಯಂತಕನೆಂಬ ||
ದೇವಗೆ ಮಿಳ್ಳುಕಾರ್ತಿಕದೊಳಗೆತ್ತಿದ | ದೀವಳಿಗೆಯತೆರನಾಯ್ತು ||೮೮||

ಅಲ್ಲಿಗನತಿದೂರವೊಳೊಂದು ಹೊಸಸೂಲ | ದಲ್ಲಿ ಕೀಲಿಸಿಜೀವವಿಡಿದ ||
ಬಲ್ಲಿದನೋರ್ವ ಬೀರಸಕೂಡೆಯುದಿರದೆ | ನಿಲ್ಲದಿಂತೆಂದಾಡಿದನು ||೧೦೨||

ಎಲೆ ಶೂಲದ ಬೀರ ಕೇಳೆನ್ನ ಗ್ರಜ | ನಿಳೆಹೊರದಪಕೀರ್ತಿಯನು ||
ಅಲಸದೆಯುಪಚಾರದಿಂದೆನ್ನ ತಲೆಯೊಳು | ನೆಲೆಮಾಡಿದನಲ್ಲರರಿಯ ||೧೦೩||

ಅಂತದರಿಂದೀ ಉರಿಗೊಂಡದೊಳು ಜೀ | ವಂತಕಗೃಹಕೆಯ್ದುವೆನು ||
ಇಂತೀವಾರ್ತೆಯನಿಲ್ಲಿಗೆಯ್ದಿದರೊಳು | ನೀಂ ತಳುವಮಾಡದೆ ಪೇಳು ||೧೦೪||

ಎಂದುಕೊರಚಿ ತನ್ನ ಹೆಸರನುಸುರ ಮ | ತ್ತೊಂದುಪಣನಹಿಡಿದೆಳೆದು ||
ತಂದಾಕುಂಡದೊಳಗೆಹಾಕಿ ವಸುದೇವ | ನಂದುಮುಂದಕೆಜಿಮ್ಮಿದನು ||೧೦೫||

ಬೆಳಗಾಗುವಸಮಯಕೆ ಮೊತ್ತಮೊದಲೆ ತಾ | ನಲಘುವೇಗದೊಳೈತಂದು ||
ಬಳಲದೆ ತಳಿರಡಿಗಳ ನೋವ ನೋಡದೆ | ಕಳೆದನು ತನ್ನ ಸೀಮೆಯನು ||೧೦೬||

ಇತ್ತಶಬಾಲಯುವನುಕಾವವರಾ | ಹೊತ್ತಾರೆಯಾಬಳಿಗೈದಿ ||
ಮತ್ತಾಕುಂಡದಬಳಿಯೊಳು ಕಂಡರ | ತ್ಯುತ್ತಮಮಪ್ಪಭೂಷಣವ ||೧೦೭||

ಆ ಸಮಯದೊಳಾಕಾವರನೊರೆದಮಾತ | ನಾ ನಾವಿಸವಾರ್ತೆಯನು ||
ಆ ಸೂಲದಮೇಲಣಬೀರನೆಲ್ಲವ | ನೋಸರಿಸದೆ ಪೇಳಿದನು ||೧೦೮||

ಅರೆಬೆಂದಾಕೊಂಡದೊಳರಿಮುರಿಯಾಗಿ | ಉರುಳಿಬೀಳ್ದಶಬಗಂಡು ||
ಅರಸುಮಗನದೆಂದೇಬಗೆದಾಭಟ | ರುರುತರದುಃಖವತಾಳಿ ||೧೦೯||

ಮತ್ತಾಮಣಿದೊಡವಾ ಓಲೆಯುಸಿರ | ದೆತ್ತಿಕೊಂಡಾಪುರಕೆಯ್ದಿ ||
ಸುತ್ತಿದರಸುಗಳ ನಡುವಣೋಲಗದ ನೃ | ಪೋತ್ತಂಸನಬಳಿಗೆಯ್ದಿ ||೧೧೦||

ದೇವ ಚಿತ್ತೈಸುನಿನ್ನ ಣುಗಿನನುಜ ವಸು | ದೇವನ ತೊಡವು ಇವೆಂದು ||
ಕಾವಲಕ್ಷುದ್ರಭೂಮಿಯೊಳಿರ್ದವೆಂದವ | ನೋವದೆಂದುಮುಂದಿಟ್ಟ ||೧೧೧||

ಸೂಲದಮೇಲೆಕೀಲಿಸಿ ಜೀವವಿಡಿದ | ದಾರ್ಕಳಿನೊಳೊರೆದನುಡಿಯನು ||
ಪೇಳಿಮತ್ತಾ ಓಲೆಯನೀಯಲದನೋರ್ವ | ನಾಳೋಚಿಸುತಿಂತುನುಡಿದ ||

ತರಳತನದಿನಳ್ತಿಯಿಂ ನಾನೂರೊಳು | ತಿರುಗಿದುದನೆ ತಪ್ಪೆಂದು ||
ಪಿರಿದುಭಾವಿಸಿದಿರಲ್ಲದೆ ಪರಪೆಣ್ಗೆ ಸೋ | ದರನೆಂದುಭಾವಿಸಿತಿಲ್ಲ ||೧೧೩||

ದೋಷಿಯಲ್ಲದನೆನ್ನನು ದೋಷಿಯೆಂಬಾ | ದೂಷಕರಾದೂರುಗೇಳಿ ||
ಮೋಸವಮಾಡಿ ಸನ್ಮಾನದಿಂದವೆ ಮ | ತ್ತಾಸರವನೆಯೊಳಿಕ್ಕಿದಿರಿ ||೧೧೪||

ಇರುವಟ್ಟವೊಂದುಜಕ್ಕರಿಸಲದಕೆ ಸುಮ್ಮ | ನಿರಬಲ್ಲವನನೀವಿಧಿಗೆ ||
ಬರಿಸಿದಹೀಹಾಳಿಕೆಗಾಗಿ ಕೊಂಡದ | ಉರಿಯೊಳುತನುವನೀಗಿದೆನು ||೧೧೫||

ಹಿಂದೆಯಾರಾರುಮಾಡದ ದೋಷಮುನಾ | ನಿಂದುಮಾಡಿದೆನಾಫಲವೆ ||
ಕಂದೆನ್ನನೀಗತುಪ್ಪದೊಳಗೆಬೇಯಿಸಿ | ಕೊಂದುದು ನಿಶ್ಚಯುಮಾಗಿ ||೧೧೬||

ಅನುಜನಳಿದನೆಂದಗ್ರಜರೆಲ್ಲರೊಂ | ದಿನಿಸುಮ್ಮಳವಮಾಡಬೇಡ ||
ಘನದುರಿತದ ಪ್ರಾಯಶ್ಚಿತ್ತಕಾಗಿ ನಾ | ತನುವನಗ್ನಿಯೊಳುನೀಗಿದೆನು ||೧೧೭||

ಎಂದಾಬರೆದೋಲೆಯ ಸಂಧಿವಿಗ್ರಹಿ | ಯೊಂದಿನಿಸುಳಿಯದೋದಿದುದ ||
ಸಂದೆಗವಿಲ್ಲದೆ ಕೇಳಲೊಡನೆಮೂರ್ಛೆ | ಯೊಂದಿದುದತಿಬೇಗದೊಳು ||೧೧೮||

ಸಿರಿಗಂಪು ಸಿರಿಪಚ್ಚೆಪನಿನೀರು ಬಿಜ್ಜಣ | ದೆಲರುಪಚಾರಗಳಿಂದ ||
ಧರಣೀಪತಿದಿಟ್ಟೆದೆರೆದೀಕ್ಷಿರದೊಳು | ಹಿರಿದಾಗಿಹಳವಳಿಸಿದನು ||೧೧೯||

ಎಲ್ಲಿಯರಾಜ್ಯವೆಲ್ಲಿಯಭೋಗದಕಾಂಕ್ಷೆ | ಎಲ್ಲಿಯುಮಹದೈಶ್ವರ್ಯ ||
ಎಲ್ಲಿಯ ಸುದತೀಜನದಬಾಳುವೆ ನೀ | ನಿಲ್ಲದಿರಲು ವಸುದೇವ ||೧೨೦||

ಹಾ ವಸುದೇವ ಹಾ ಯದುಕುಲಮಣಿದೀಪ | ಹಾ ವನಿತಾಜನಮದನ ||
ಹಾ ವಸುಧಾಲಂಕೃತ ಹಾಹಾ ಎಂ | ದಾವಿಭುಹಳವಳಿಸಿದನು ||೧೨೧||

ಇನ್ನೇಕರಸುತನದ ಪಂಬಲನುಜಾತ | ನಿನ್ನನುಳಿವಕೊಂಡದೊಳಗೆ ||
ನನ್ನ ಕೈಯಾರೆಕೆಡಹಿಕೊಂಡಪಾಪಿಗೆಂ | ಬನ್ನಗಮಾಪ್ರೋಲಗಕೆ ||೧೨೨||

ಮುಕುಳಿತಮಾದನಪಾಂಬುಜವನಪನು | ವಿಕಸನಮಾಳ್ಪನಸಂತೆ ||
ವಿಕಲಮಾಗಿದರ್ಶನಭಗರಿಂದಮುನಿ | ಬಕಳಂಕಮುನಿಯೆಯ್ದಿದನು ||೧೨೩||

ಬಂದಾಮುನಿತನಗೆರಗಿದನೊಳಗಿಂ | ತೆಂದನೆಲೇನರನಾಥ ||
ಕಂದರ್ಪರೂಪನುಕೆಲವಾನುದಿವಸಕ್ಕೆ | ಬಂದುನಿನ್ನಡೆಗೆಯ್ದುವನು ||೧೨೪||

ಬೇವುದುಪುಸಿವಹ್ನಿಯೊಳಕೊಳ್ಳನಾಸ್ವಾ | ಹಾವಧುತನ್ನೋಪವಳು ||
ಆ ವಸುದೇವನ ರೂಪಿಗೆ ಸೋಲ್ವಳೆಂ | ಬಾಶಂಕಾಭಾವದಿಂದ ||೧೨೫||

ಎಂದುನುಡಿದು ನರನಾಥನಚಿತ್ತದ | ಸಂದೇಹಪಪರಿಹರಿಸಿ ||
ಹೊಂದಿಸಿಮನಕೆಮುದವನಾಮುನಿಯು | ಲ್ಲಿಂದಪೋದನು ಬಳಿಕಿತ್ತ ||೧೨೬||

ವಸುದೇವನೆಲ್ಲಾ ಜನಪದವನುಹೊಕ್ಕು | ಕುಸುಮಶರನಬೀಡೆನಿಸಿ ||
ಎಸೆವವಿಜಯಖೇಟವೆಂಬನಗರಿಯುರಂ | ಜಿಸುವನಂದನವನಕೆಯ್ದೆ ||೧೨೭||

ಆ ವನಲಕ್ಷ್ಮಿಯ ಮಧ್ಯದೊಳೆಸೆವ ನಾ | ಭೀವಲಯದತೆರನಾದ ||
ತಾವರೆಗೊಳದೊಳಗಡಗಿಸಿದನು ವೈ | ತೀವಿದಪಥಪರಿಶ್ರಮವ ||೧೨೮||
ಆವನಜಾಕರದೊತ್ತಿನೊಳೊಂದೆಳೆ | ಮಾವಿನಲಲ್ಲಿಗೆಯ್ದುಂದು ||
ಸೇವಂತಿಯೆಸಳ ಪಚ್ಚಡಿಸಿಯೆ ಊರಗಿದನು | ಭೂವನಿತೆಯ ಸಪ್ಪುವಂತೆ ||೧೨೯||
ಒಂದು ಜಾಮಪರ್ಯಂತರ ಸಿದ್ರಾ | ಸುಂದರಿಯೊಳು ಮೈಮರೆದು ||
ಒಂದಿದ ಸುಖದಿಂದ ತನ್ನ ತಾನರಿಯವೆ | ಕಂದರ್ಪನಿಭನು ಕೂಡಿರಲು ||೧೩೦||
ಹರಿಣಲೋಚನೆಯರೀರ್ವರು ತನ್ನ ಕೋಮಲ | ತರಪದಯುಗಪದ್ಮಂಗಳನು ||
ಹರಿಸದಿನೊತ್ತುವ ಕನಸುಗಂಡಾ ನಿದ್ರೆ | ಹರೆಯಲು ರಾಜನಂದನಗೆ ||೧೩೧||
ಕನಸಿನಿತಾಯಿತ್ತೆಂಬಂತೀರ್ವರು | ವನಿತೆಯರಾಪಜ್ಜೆಗಳನು ||
ಮಿನುಗುವ ತೊಡೆಯಮೇಲಿಟ್ಟು ಒತ್ತಿದರಾ | ವನಜೋಪಮಕರದಿಂದ ||೧೩೨||
ಆ ವಧುಗಳ ಕಡೆಗಣ್ಣಬೆಳ್ಪಿಳ | ಗಾವರಿಸಲು ವಸುದೇವ ||
ಭೂವರ ಕಣ್ದೆರೆದನು ಜೊನ್ನಗಂಡಿಂ | ದೀವರವೆಂಬವಮಾಳ್ಕೆಯೊಳು ||೧೩೩||
ಗಾಢಿಕಾತಿಯರ ಕತನದಿಂದಲೆ ಸಮ್ಮ | ನಾಡುಬೀಡೆಲ್ಲವಬಿಟ್ಟು ||
ಓಡಿಬಂದರೆ ಬೆನ್ನ ಬಿಡದೆಯಿಂದಂದೆನ್ನ | ಕಾಡಿಕಾಲ್ವಿಡಿದರೆಂದಾಗ ||೧೩೪||
ಪೆಣಗನೊಳನಾಂಟಿದ ದಿಟ್ಟಿದೆಗೆಯದಾ | ಸೊಗಯಿಪಕಣ್ಗೊಡವರಿದು ||
ಬಗೆನಾಂಟಿದ ಮನವನುತೆಗೆಯದೆ ಕಾಲ | ತೆಗೆದ ನಪರತೊಡೆಯಿಂದ ||೧೩೫||
ಅದನರಿದವರ ಕೆಳದಿ ಚಿತ್ರಲತೆಯೆಂಬ | ಮದವತಿ ತಳೆದೆಸಲಿಂದು ||
ಮೊದಲಲರ್ವಿಜ್ಜಣಿಗೆಯ ಬೀಸುತನಿನೊಳ | ಗೊದವಿಸುಡಿದಳಿಂತೆಂದು ||೧೩೬||
ಲಜ್ಜೆಯಿದೇಕೆ ಕಾಲ್ದೆಗೆದಪೆ ಸುಕುಮಾರ | ಕಜ್ಜಳಾಕ್ಷಿಯರಾರಂಜಿಸುವ ||
ಪಜ್ಜೆಗಳನುಮುಂದಕೆ ನಿನ್ನ ಕೈಯಿಂದ | ಸಜ್ಜುಕಸೆರಸೊತ್ತಿಸುವನು ||೧೩೭||
ಎಂದುನುಡಿದ ಚಿತ್ರಲತೆಯನುಡಿಗೆ ಮನ | ದಂದಾ ವಸುದೇವಕುಮಾರ ||
ಸುಂದರಿಯರು ಕಾಲನೊತ್ತುವ ಕಾರಣೇ | ನೆಂದುಕೇಳಲು ಪೇಳ್ದಳಿಂತು ||೧೩೮||
ಈಪುರವರದ ಮಹೀಪತಿ ಜಿತಶತ್ರು | ಗೀಪೆಣ್ಮಣಿಗಳು ಪುಟ್ಟಿದರು ||
ರೂಪಕಲಾಪರಿಣತೆಯೊಳು ತಮಗೆ ತಾ | ಮೇಪಡಿಯಾಗಿ ರಂಜಿಸುತ ||೧೩೯||
ಈಯಂದದಿನೊಪ್ಪುವ ಜಯೆ ವಿಜಯೆಯೆಂ | ಬಾಯತಾಕ್ಷಿಯರಿಗುತ್ತಮದ ||
ಪ್ರಾಯವೇರಲು ಕಾಣುತಕರೆಸಿದನಾ | ರಾಯನೊರ್ವ ಶಕುನಿಗನ ||೧೪೦||

ಕರಸಿದನೈಮಿತ್ತಿಕನೊಳಗಿಂತೆಂ | ದೊರೆದನೆವಿಶ್ವಾಸುತೆಯರಿಗೆ ||
ವರನೆಂತಪ್ಪನಾಗುವನೆನೆಕೇಳ್ದಾ | ದರದಿ ನುಡಿದನವನಿಂತು ||೧೪೧||

ಈಊರವನದಕೊಳದತೀರದ ಸಸಿ | ಮಾವಿನಮರದ ಮೂಲದೊಳು ||
ಭೂವರನೋರ್ವನುಬಂದೊರಗುವನವ | ನೀವನಿತಾಮಣಿಗಳಸು ||೧೪೨||

ನವವಿಧಸಂಗೀತದ ಸುಪ್ರಪಂಚದಿ | ವಿವರಿಸಿಗೆಲುವನಂದವಗೆ ||
ಇವರುರುತರಹರುಷದಿ ಮಾಲೆಸೂಡುವ | ರವನೀತಳಮರಿವಂತೆ ||೧೪೩||

ಇಂದುವದನೆಯರಿಗಿದು ಸಿದ್ಧಾದೇಶ | ವೆಂದೊರೆದನನುಡಿಗೇಳಿ ||
ಅಂದಿಂದೀನಂದನವನದೊಳು ಕಾಪ | ತಂದಿಟ್ಟನೆಮ್ಮಭೂವರನು ||೧೪೪||

ಬಲ್ಲಿದರಾಣೆಯಿಡಲುವಿಚಾರದಂತೆ ನೀ | ನಿಲ್ಲಿಗೆ ಬಂದೊರಗಿರಲು ||
ಇಲ್ಲಿರ್ದಕಾವಲವರು ನಮ್ಮರಸಿಗೆ | ನಿಲ್ಲದೆಪೇಳಲ್ಕೈದಿದರು ||೧೪೫||

ಆ ಶಕುನಿಗನ ಮಾತನುಕೇಳಿದಂದಿಂ | ದೀಸುದತಿಯರೀವನದೊಳು ||
ಬೇಸರದಾತುರದಿಂ ವನಸತಿಯರ | ಪಾಸಟಿಯಂತಿರುತಿಹರು ||೧೪೬||

ಇಂದುನೀನಾಪಾಂಥಶ್ರಮದಿಂದಿಲ್ಲಿ | ಕಂದರ್ಪನಂತೊರಗಿರಲು ||
ಸುಂದರಿಯರು ನಿನ್ನಕಾಲಾಸರುಕೇಶ | ಲೆಂದುನಲ್ಮೆಯೊಳೊತ್ತಿದರು ||೧೪೭||

ಇಂತಿದಕೇಸುಕುಮಾರ ನಿನಗೆಲಜ್ಜೆ | ಕಾಂತೆಯರುಗಳನ್ಯರಲ್ಲ ||
ಸಂತಸದಿಂದಕಾಲ್ಗಳನೀಡಿದೊಡೆ ನೋ | ವಂತಪಿಸುವರು ಎಂಬಾಗ ||೧೪೮||

ಸುರಪತಿವಿಭವದಿಂದಾಜಿತಶತ್ರುಭೂ | ವರನಾನಂದನಕೆಯ್ದಿ ||
ಹರುಷದಿನಾ ವಸುದೇವನಕಂಡಾ | ದರವನುಪಿರಿದಾಗಿಮಾಡಿ ||೧೪೯||
ಅರಮನೆಗೊಡಗೊಂಡುಪೋಗಿಸತ್ಕರಿಸಿ ಬಂ | ಧುರಬಂಧುಕಾಧರೆಯರ ||

ಸುರುಚಿರಸಂಗೀತಪ್ರಪಂಚಮನೀ | ನಿರದೆ ಪರೀಕ್ಷಿಸಿವೆನಲು ||೧೫೦||
ಆ ವಸುದೇವನವರಸಂಗೀತದಿ | ನೋವದೆಗೆಲಲಾತುರದಿ ||

ತೀವಿದೊಲವಿನಿಂದವನ ಕಂಧರದೊಳು | ಪೂವಿನಮಾಲೆಸೂಡಿದರು ||೧೫೧||
ಅಂದಿನದಿನದ ಮುಹೂರ್ತದೊಳಾವಿಭು | ಕಂದರ್ಪದೇವಸನ್ನಿಭಗೆ ||

ಇಂದುಮುಖಿಯರೀರ್ವರು ತನುಜೆಯರನಾ | ನಂದದಿಮದುವೆಮಾಡಿದನು ||೧೫೨||
ಈತೆರದಿಂದ ಮದುವೆಮಾಡಿಯಾತನು | ಜಾತೆಯರ್ಗರ್ಧರಾಜ್ಯವನು ||

ಪ್ರೀತಿಯಿಂದೀಯಲಂತವರೊಳಗಾ ವಿ | ಖ್ಯಾತನೊಸೆದುಕೂಡಿದನು ||೧೫೩||
ಗಿರಿಸುತೆ ಗಂಗಾಸುದತಿಯರೊಳಗಿಂದು | ಧರನೊಲವಿಂಕೂಡಿದಂತೆ ||
ಗರುವೆಯರವರೀರ್ವರೊಳು ಕೂಡಿದನಾ | ವರಗುಣನಿಧಿವಸುದೇವ ||೧೫೪||
ಇದುಜಿನಪದಸರಸಿಜ ಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿ ನೇಮಿಜಿನೇಶಸಂಗತಿಯೊಳ್ | ಗೊದವಿದಾಶ್ವಾಸಗಳೆಂಟು ||೧೫೫||

## ಎಂಟನೆಯ ಸಂಧಿ ಸಂಪೂರ್ಣಂ.



# ೯. ವಸುದೇವ ಗಜಾರೋಹಣ ಸಂಧಿ.

---

ಶ್ರೀಮದಮರಪತಿ ಮೌಳಿಕೀಲಿತಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಎರಕದಿಂದಾ ಈರ್ವರೊಳುಕೂಡಿರಲಾ | ಕಿರಿಯಳು ವಿಜಯಾಂಗನೆಗೆ ||
ನೆರೆಗಲಿಯಕ್ರೂರನೆಂಬಹೆಸರನಾಂ | ತರಿಕೆಯಮಗನುದಿಸಿದನು ||೨||

ಅವರೀರ್ವರೊಳಗತಿಮೋಹದೊಳಿರ್ದೊಂದು | ದಿನದೊಳಗೀಸತಿಯರೊಳು ||
ಅವಿರತಮಿರ್ಪುದೆನಗೆಯನುಚಿತವೆಂದು | ಕುವರನೆಣಿಕೆಮಾಡಿದನು ||೩||

ಬಂದಾನೊಂದುರಾತ್ರಿಯೊಳರಮನೆಯ | ರೊಂದಿನಿಸರಿಯದಂದದೊಳು ||
ಕಂದರ್ಪನಿಭನಾನಗರಿಯ ಪೊರಮ | ಟ್ಟೊಂದಿದಾರಣ್ಯಕೆಯ್ದಿದನು ||೪||

ಕರಿಬಳ್ಳಿದಂಷ್ಟ್ರ್ಯಷ್ಟಾಪದ ಭಲ್ಲೂಕ | ಹರಿಚಿತ್ರಕಾಯಲುಲಾಯ ||
ಪುರುಷಮೃಗಾನೀಕಾಸ್ಪದಮಾದ ದು | ರ್ಧರತರ ವಿಪಿನಕೆಯ್ದಿದನು ||೫||

ಆ ವನದೊಳು ಲಯಕಾಲದಕಾರ್ಮುಗಿ | ಲಾವಳಿಯಾಗಸದಿಂದ ||
ಭೂವಲಯಕೆ ಬಂದಂತಿರಾನೆಯಹಿಂಡು | ತೀವಿ ಭೀಕರಮೆಯ್ದಿದುದು ||೬||

ಆ ಕರಿಗಳಮಧ್ಯದೊಳಗೊಂದು ಮದಹಸ್ತಿ | ನಾಕಾಧಿಪನ ಗಜದಂತೆ ||
ಆಕಾರವಡೆದುನ್ಮದವೇರಿ ನಡೆದುಬಂ | ದಾಕುವರನಕಂಡುದಾಗ ||೭||

ಮರಗಳಕಿಳ್ತು ಪಿರಿಯಮರಗಳ ಹೊ | ಯ್ದುರುಳಿಸುತವೆಕಗ್ಗಲ್ಲ ||
ನೊರಡಿಯನಾಕೊಂಬಿನಿಂ ನುಗ್ಗುನುರಿಮಾಡು | ತಿರದೆಯ್ದಿತಾಭದ್ರಹಸ್ತಿ ||೮||

ಈ ನವಮದಮಾತಂಗಮನೇರಿದೊ | ಡಾನೆವಿನ್ನಾಣೆನಾನಹೆನು ||
ಈನೆಲಕೋರ್ವನೆಯೆನುತದಕಣ್ಮು | ತ್ತಾನದೆಸರದೋರಿದನು ||೯||

ತುಳಿಲಾಳಿನಾಸರವನು ಕೇಳುತಾಗಳೆ | ವಳಿಯುಪಾವಿನಮಾಳ್ಕೆಯೊಳು ||
ಇಳಿದ ಸುಂಡಿಲನೆತ್ತಿಯಿದಿರಾಗಿಬಂದು ಬ | ಲ್ಮೊಳಿಸಿಂದಮೇಲ್ವಾಯ್ವಾಗ ||೧೦||

ದಂಡಧರನಕೋಣನುರೆ ಮುಳಿದವೊಲು ವೇ | ತಂಡನುಗ್ರದಿನೆಯ್ತಂದು ||
ಸುಂಡಿಲನೆತ್ತಿಪೊಡೆಯಲುಕುಸುಂಗಿ ಭೂ | ಮಂಡಲಾಧಿಪನುರುಳಿದನು ||೧೧||

ಧರೆಗುರುಳುವನೃಪತಿಯ ಕಂಡುನ್ಮದ | ಕರಿದಂತಯುಗದಿಂದತಿವಿಯೆ ||
ಹರಸಡಿಗಾಣಲೆಂದಾಹರಿಯಿಳೆಯ ಸೊ | ಕರನಾಗಿತಿವಿದಂತಾಯ್ತು ||೧೨||

ತಿವಿದಾನೆಯದಂತದ್ವಯಮಧ್ಯದೊ | ಳವನಿಪಜಗುಳಿಸಿಲ್ಕಿದೊಡೆ ||
ತಪಕದಿಪಿಡಿವರಾಹುವಿನದಾಡೆಯೊಳೊ | ಪ್ಪುವ ಚಂದ್ರನಂತೊಪ್ಪಿದನು ||೧೩||

ಎರಡುಕೋಡೆಡೆಸಿಲ್ಕಿದರಸನೊಪ್ಪಿದನಾ | ಕರಿಯೆಂದೆಂಬಕಮ್ಮರನ ||
ಕರದೊಳಗಣಸವದಳವವರಿದಹೊಸ್ನ | ಸುರಗಿಯೆಂದೆಂಬಮಾಳ್ಕೆಯೊಳು ||೧೪||

ಚಂಡವಿಕ್ರಮ ದಂತದಿಂಸಾಯದಿರ್ದೊಡೆ | ಕಂಡುಕೋಪದೊಳೀಡಾಡಿ ||
ಸೆಂಡನೊದೆವತೆರದಿಂದಾಪುದವೇ | ತಂಡನೊದೆಯುತಡಿಯಿಂದ ||೧೫||

ಒಪೆಯಲೊಡನೆ ಕಾಲಬಾಯಿಗೆಸಿಲ್ಕದೆ | ಪಥಪಿಂದುರುಳಿಬಳಿಕ್ಕ ||
ಮದದಂತಿಯನಾಲಾಗ್ಗಲನಡುವೆ ಭೂ | ಸುದತೀಪತಿನಿಂದನಾಗ ||೧೬||

ಏನೆಂಬೆನಾಸಾಸಿಗನಬಲುಮೆಯನಾ | ಆನೆಬಿಟ್ಟೊಡೆ ತಾನುಬಿಡದೆ ||
ನಾನಾತೆರದೊಳದರಕೂಡೆವಿಗೆಹೋರಿ | ತಾನತಿಕೀರ್ತಿವಡೆದನು ||೧೭||

ಬತ್ತೀಸತೆರವಬಿನ್ನಣದಿಂದಾ ಭೂ | ಪೋತ್ತಂಸನಸತ್ಯಗ್ರಮಪ್ಪ ||
ಮತ್ತಗಜವಬಳಲಿಸಿಬಳಿಕಾಬೆನ್ನ | ಹತ್ತುವೆನೆಂದೆಣಿಸಿದನು ||೧೮||

ಕಡುಸೊಗಯಿಪಕಾರ್ಗಾಲದಮುಗಿಲನು | ಕುಡಿಮಿಂಚುಹತ್ತುವಂದದೊಳು ||
ತಡಮಾಡದೆತತ್ಕರಿಯಬೆಂಗಡೆಗಾ | ಕಡುಗಲಿಯಣ್ಮಿತೇರಿದನು ||೧೯||

ಹರಿನೀಲರತ್ನರಚಿತದಮಾಡದಮೇಲೆ | ಸುರುಚಿರಪುಷ್ಪಹೊಂಗಳಸ ||
ಕರವೆಸೆವಂತಾಕರಿಯಕಂಧರದೊಳು | ನರನಾಥಚಂದ್ರನೊಪ್ಪಿದನು ||೨೦||

ಕರಿಯಮುಗಿಲಜೋಳಿಕೆಯನೇರಿದಶೀತ | ಕರಮಂಡಲದಮಾಳ್ಕೆಯೊಳು ||
ಉರುಮದವೇರಿದಕರಿಯ ತಲೆಯನಾ | ಅರಮಗನೇರಿಯೊಪ್ಪಿರಲು ||೨೧||

ಆ ಪ್ರಸ್ತಾವದೊಳಂಬರದಿಂದಮ | ತಿಪ್ರೌಢಖಚರರೆಯ್ತಂದು ||
ಆ ಪ್ರಭುವಂಶಭಾನುವಪಾದಕೆ ಮಣಿ | ದಪ್ರಭೆಯುರ್ಘ್ಯವೆತ್ತಿದರು ||೨೨||

ಮತ್ತೆತುಳಿಲುಗೆಯ್ದಿಂತೆಂದರೆಲೆ ಭೂ | ಪೋತ್ತಂಸವಿಜಯಾರ್ಧಗಿರಿಯ ||
ಉತ್ತರದಿಕ್ಛ್ರೇಣಿಯಕುಂಜರಾವರ್ತ | ಪತ್ತನಮೆಂಬುದೊಪ್ಪಿಹುದು ||೨೩||

ಚಲ್ಲಿಯಶನಿವೇಗನೆಂಬೋರ್ವಖೇಚರ | ವಲ್ಲಭನಿಹನವನಣುಗೆ ||
ಸಲ್ಲಲಿತಾಂಗಿ ಶಾಲ್ಮಲಿದತ್ತೆಯೆಂಬೋರ್ವ | ಫುಲ್ಲಾಕ್ಷಿಕಣ್ಗೊಪ್ಪಿದಳು ||೨೪||

ತದೇಶದೊಳಾಕೆಗೆಯನುರೂಪಾದ | ಕಾವಲವಾರಿಲ್ಲದಿರಲು ||
ಖೇದಹೃದಯನಾಗಿ ನಮ್ಮರಸಿರಲ್ಲಿ | ಗಾದೇಶವಿದನೋವನೆಯ್ದಿ ||೨೫||

ಈ ಮದಹಸ್ತಿಯನೀ ಹಳುವಿನೊಳೇಂ | ದಾಮಹಿಮನೆನಿಸ್ಸಸುತ್ತೆಗೆ ||
ಪ್ರೇಮದಪೊಸಮದವಳಿಗನಾಗುವನೆಂ | ಬಾಮಾತನಾಡಿದನವನು ||೨೬||

ಆ ನುಡಿಗೇಳಿಯಶನಿವೇಗಖಚರೇಂದ್ರ | ನಾನಂದದಿಂದೆಮ್ಮ ಕರೆದು ||
ಈ ನಡುಗಾಡೊಳು ನಮ್ಮಾರ್ಪನಂ | ದಾನೆಗಾವಲನಿರಿಸಿದನು ||೨೭||

ಅಂದಿಂದಡವಿಯಮೃಗವಾಗಿನಾವು ಮ | ತ್ತೊಂದುಕಡೆಗೆಪಜ್ಜೆಗಳನು ||
ಒಂದುಗಳಿಗೆ ತೆಗೆಯದೆಕಾವಲಿರ್ದೆವು | ಇಂದುನೀನೀ ಎಡೆಗೆಯ್ದಿ ||೨೮||

ಸಾಹಸಿಗನಾಗಿಯಾದೇಶಪುರುಷನಾಗಿ | ಈಸಿಂಧುರದಮಸ್ತಕವನು ||
ಓಸರಿಸದೆಹತ್ತಿದೆ ನಮ್ಮ ಸುಕೃತದಿ | ವಾಸವನಿಭಶಕ್ತಿಯಿಂದ ||೨೯||

ಬಲ್ಮೆನಿಸನೆ ಕೇಳನ್ಯಪುರುಷರೆಂಬ | ಶಾಲ್ಮಲಿಗರಗಿಳಿಯಾದ ||
ಶಾಲ್ಮಲಿದತ್ತೆಯೊಡನೆಯೆಡೆವರಿಯದೆ | ನಲ್ಮೆಯಿಂದೊಡಗೂಡಲೇಳು ||೩೦||

ಎಂದು ವಿಮಾನವನೇರಿಸಿಕೊಂಡಾ | ನಂದದಿನಾಕುಮಾರಕನ ||
ಅಂದವನೊಡಗೊಂಡುಪೋಗಲಶನಿವೇಗ | ನಂದನೆಯನುಕೊಟ್ಟನವಗೆ ||೩೧||

ಆ ಶಾಲ್ಮಲಿದತ್ತೆಯೊಳು ವಸುದೇವಭೂ | ಮೀಶನೆಲ್ಲಾಪಗಲಿರುಳು ||
ಆಸಕ್ತಿಯಿಂಮೈಮರೆದನು ತಮ್ಮಾ | ದೇಶಾಕೋಶ ನಗರಿಯ ||೩೨||

ಮುಕ್ತಾಬಾಲೆಯಬಸಿರೊಳು ಧ್ರುವನೆಂ | ಬುತ್ತಮಸತ್ವಸಂಯುತನು ||
ಚಿತ್ರಸಂಭವಸನ್ನಿಭಸೌಂದರ್ಯನು | ತ್ಪತ್ತಿವಡೆದುರಂಜಿಸಿದನು ||೩೩||

ದಂಪತಿಗಳುರತಿಮನಸಿಜರಂತೆಯು | ಲಂಪಿನಜೀವನವಾಗಿ ||
ಪೊಂಪುಗೊಂಡು ಸುಖದೊಳಿರೆ ಬಂದುದು | ಸೊಂಪೆಸೆವಾಚೈತ್ರಮಾಸ ||೩೪||

ಆ ಉಷ್ಣದಿವಸದೊಂದಿರುಳು ಹರ್ಮ್ಯದಮೇಲೆ | ಭಾವಭವಕ್ರೀಡೆಯಿಂದ ||
ತೀವಿದಮೈಯಬಳಲ್ಕೆಯಿಂದೊರಗಿದ | ತಾವರವನಿತೆಯರಿರ್ದು ||೩೫||

ಪಡಿಯುಷ್ಟೆದೊಡುಪ್ಪೆತಾಗುವುದೆಂಪಾ | ಮಡದಿಯೆಡದತೋಳೋಳೊರಗಿ ||
ಬಡಗಾಳಿಗೆಮೈಯೊಡ್ಡಿನೃಪಾತ್ಮಜ | ನಡಸಿದನಿದ್ರೆಯೊಳಿರಲು ||೩೬||

ಬಳಸಿದುರಗಿಯಬಿಡಿಸಿಬಾವನ್ನವ | ನೆಳೆದೊಯ್ವಂತೋರ್ವಖಳನು ||
ಲಲನೆಯತೋಳತಲ್ಪವನುಬಿಡಿಸಿ ನೃಪ | ತಿಲಕನಕೊಂಡೊಯ್ದನಾಗ ||೩೭||

ಅಸಿತರೊಳಾಖೇಚರತನ್ನ ತೋಳೊಳ | ಗಿಸೆಯನಿಲ್ಲದಿರೆಕಣ್ದೆರೆದು ||
ಕಸಲಿಕಾಸೆಯನುಟ್ಟು ಕಂಚುಕವನೆತೊಟ್ಟು | ಘನವೇಣಿಯನಸುವಾಡಿ ||೩೮||
ಕರವಾಳುಖೇಟಕವನುಕರದೊಳಗಾಂತು | ಮರುತಮಾರ್ಗದೊಳುವಲ್ಲಭನ ||
ಭರದಿಂಕೊಂಡೊಯ್ವುಖಳನನಟ್ಟಿದಳಾ | ಸ್ಮರವೀರಲಕ್ಷ್ಮಿಯಂದದೊಳು ||೩೯||
ಪರಿಮಳವನು ಕಳ್ದೊಯ್ವನಿಲನಬೆನ್ನ | ಪರಿದುಪಿಡಿವತುಂಬಿಯಂತೆ ||
ಅರಸನಕೊಂಡೊಯ್ವುಖಚರನ ಬೆನ್ನಪ | ಟ್ಟೊರೆವುತೆಯ್ದಿದಳಾತರುಣಿ ||೪೦||
ಬಿಡುಬಿಡು ಬೀರಾಳನು ಬಿಡದಿರ್ದೊಡೆ | ಕಡಿಖಂಡವಾಳ್ಪೆನೆಂದಸಿಯ ||
ಒಡಿವುತ್ತೊಪ್ಪಿದಳು ತಳತ್ತಳಿಸುವಮಿಂಚ | ಪಿಡಿದಂಬರಲಕ್ಷ್ಮಿಯಂತೆ ||೪೧||
ಸೋಗೆಯಕಳರವವನು ಕೇಳಿಯುಳುಕಿದ | ನಾಗರುಹಿಡಿದಸೌರಭವ ||
ಬೇಗಲುಗುಳುವಂತೆಯುವಳದನಿಗೆಯಂಜು | ತಾಗಲವನುಬಿಟ್ಟುಪೋದ ||೪೨||
ನೆಲಕುರುಳುವ ಭೂಪಾಲಭಾನುವನಾ | ಲಲನೆತಾಮರೆಗೈಯೊಳಾಂತು ||
ನೆಲೆಮೊಲೆಯೊಳಗಿಟ್ಟು ಬಾಗಿಗೆಬಾಯಿತಂ | ಬುಲಮಿಕ್ಕಿಪುಗುಳಿದಳಾಗ ||೪೩||
ಅಸಿತರೊಳಂಬರದೊಳಗೊಂದು ದೇವ | ಧ್ವನಿಯೆಲೆಖಚರಿಯಿನ್ನೃಪನ ||
ಬಿಸಯದಿ ಭೂತಳಿಗಿಳುಹಲುಕೆಲವಾನು | ದಿನಕೆನಿನ್ನ ಡೆಗೆಯ್ದುವನು ||೪೪||
ನಿನ್ನ ಜನಕನಮನೋರಥಕೀವಿಕ್ರ | ಮೋನ್ನತನಾರಥಿಯಹನು ||
ಇಂತಿದುನಿಶ್ಚಯಮೆನೆನಾಲ್ದೆಸೆಯುನಾ | ಧನ್ನಸ್ಮನೆನೋಡಿದಳು ||೪೫||
ಇದು ದೇವವಚನಮಲಂಘ್ಯವೆನುತ್ತಾ | ಸದಮಲಗುಣಸಂಯುತನ ||
ಚದುರೆ ಖೇಚರಿಪರ್ಣಲಘುವಿದ್ಯೆಯೊಳು ಕೊಡ | ಲದುಧರಣೀತಳಕೆಯ್ದಿ ||೪೬||
ಅಂಗದೇಶದ ಚಂಪಾಪುರವರದಮ | ನಂಗೊಳಿಸುವನಂದನದೊಳು ||
ಸಿಂಗರಿಸಿದಲತೆವನೆಯೊಳಗಿಳುಹಿತ | ಭಂಗನನಾವಿದ್ಯೆಯಂದು ||೪೭||
ನಲ್ಲಳತೋಳತಲ್ಪದಮೇಲಾನೃಪ | ವಲ್ಲಭನೊರಗಿದಂದದೊಳು ||
ಉಲ್ಲಾಸದಿಂದಾಲತಿಕಾಮಂದಿರ | ದಲ್ಲಿ ಪ್ಪೈಮರೆದೊರಗಿರಲು ||೪೮||
ಮುಂದೆಸೆಯೊಳುಮೂಡುವ ಕೆಂಪುಗಂಡಾ | ನಂದನವನದಪಕ್ಕಿಗಳ ||
ಸಂದಣಿಚಿಲಿಮಿಲಿಯೆಂಬವೇಳೆಗೆ ನೃಪ | ಕಂದರ್ಪದಿಟ್ಟೆದೆರೆದನು ||೪೯||
ಬಟ್ಟೆಜವ್ವನೆಯ ತೆಕ್ಕೆಯ ಕಾಣದೆ ಚೋದ್ಯ | ವಟ್ಟಾಯೆಡೆಯಿಂದೆಳ್ದು ||
ದಿಟ್ಟನುಬರುತಿರ್ದು ಉದಯದೊಳೆದ್ದಾ | ಬಟ್ಟೆಯೊಳಗೆ ಒರ್ವಜನವ ||೫೦||

ಎಲೆಯಣ್ಣಗಳಿರಾ ಇದೆಲ್ಲಿಯಬಟ್ಟೆ ಈ | ನೆಲನಾವುದುಪೇಳಿಮೆನಲು ||
ಚೆಲುವನೀಯಣ್ಣನಾಗಸವನೊಡೆದು ಭೂ | ತಳಕೆಬೀಳ್ದವರಂದವೊಳು ||೫೧||

ಕೇಳುವಪರಿಯಚ್ಚರಿಯೆಂಬರವರಾತ | ಕೇಳಿ ಮುಗುಳ್ನಗೆನಗುತ ||
ಆ ಲಲಿತಾಂಗನು ಬಂದೊಂದುಕೊಳಹೊಕ್ಕು | ಲೀಲೆಯಿಂದವೆವೊಗದೊಳೆದು ||

ಬಳಿಕಶಾಯೆಡೆ ವಾಸುಪೂಜ್ಯತೀರ್ಥೇಶರ | ನಿಲಯವಿರಲುಕಂಡುಬಂದು ||
ಅಲಘುಭಕ್ತಿಯೊಳುವಂದಿಸಿ ಸಿದ್ಧಶೇಷೆಯ | ತಲೆಗಿಟ್ಟುಕೊಂಡು ಭೂವರನು ||೫೩||

ಆ ಯೆಡೆಯೊಳಗಿರ್ದಬೋಧಸಿಂಧುಗಳೆಂ | ಬಾಯತಿರಾಜಗೆವಣಿದು ||
ಆ ಇರುಳಾದವೃತ್ತಾಂತವನೆಲ್ಲವ | ನೊಯ್ಯಾರದಿಂ ಕೇಳಿದವಗೆ ||೫೪||

ಮನುಸಿಭನಿನ್ನ ಶಾಲ್ಮಲಿದತ್ತೆಯ ನಿಜ | ಜನಕನಶನಿವೇಗನಿಗೆ ||
ಮುನಿದೋರ್ವಸಂಗಾರವೇಗನೆಂಬವನಾ | ತನಪಿರಿಯಣ್ಣನಮಗನು ||೫೫||

ನಾಡುಬೀಡೆಲ್ಲವನಿರದೆ ಸುಲಿದುಕೊಂ | ಡೋಡಿಸಲಾಗಿರಿವರದ ||
ಕಾಡೊಳಗೊಂದು ಪಟ್ಟಣವನಶನಿವೇಗ | ಮಾಡಿಕೊಂಡಿದ್ದೊಂದುಪಗಲು ||೫೬||

ಚಾರಣರನುಕಂಡು ನನಗೆನವ್ಮಾನಾಡು | ಸೇರುವುದೆಂದಿಗೆಂದೆನಲು ||
ಭೂರಮಣೀಪತಿನಿನ್ನ ಪಿರಿಯ ಮಕ | ವಾರಿಗೆ ಭೂಚರನೋರ್ವ ||೫೭||

ಅಸುಗೀಶನಾಗುವನವನ ತನೂಜನ | ದೆಸೆಯಿಂದಹುದೆಂದವರು ||
ಉಸುರಲಂತದಕೆಯಶನಿವೇಗವಿಗೆ ಸಂ | ತಸಗೆಯ್ಯಲಾವಾರ್ತೆಯನು ||೫೮||

ಕಿವಿದ್ರನೂನಸನಂಗಾರವೇಗನುಕೇಳಿ | ಛಿದ್ರಾನ್ವೇಷಿಯಾಗಿರ್ದು ||
ರೌದ್ರನಾಗಿನಡೆತಂದು ನೀನವಳೊಳು | ನಿದ್ರೆಯೊಳೊರಗಿರೆಕಂಡು ||೫೯||

ನಿನ್ನನೆತ್ತಿಕೊಂಡು ಪೋಗುತ್ತಿರಲಾ | ಚೆನ್ನೆಕನಲಿಬೆನ್ನೊಳೆಯ್ದಿ ||
ನಿನ್ನಬಿಡಿಸಿಕೊಂಡಶರೀರವಚನವ | ತಾಂನೆರೆಕೇಳಿಯಿಾಯೆಡೆಗೆ ||೬೦||

ಒಯ್ಯಾರದಿಂಬಿಡಿಯಿಸಿದ ವೃತ್ತಾಂತವ | ನಾ ಯತಿಪುಂಗವನುಸುರೆ ||
ಕಾಯಜನಸ್ನಿಭನವರನು ಬೀಳ್ಕೊಂ | ಡಾಯೆಡೆಯಿಂದೆಯ್ದಿದನು ||೬೧||

ಅಲ್ಲಿಗನತಿದೂರದೊಳೊಂದುಕರ್ವಿನ | ವಿಲ್ಲಟಂಕಾರದಂದದೊಳು ||
ಮೆಲ್ಲನುಲಿವುತಿರೆಯುದನಂದಪೆಸೆಂ | ದುಲ್ಲಾಸದಿಂದೆಯ್ದಿದನು ||೬೨||

ಆ ರಂಜಿಸುವ ಇಂಚರದ ಪಚ್ಚೆಯವಿಡಿ | ದಾರಾಜಸುತನಾಬಳಿಗೆ ||
ಆರೈವುತಪೋಗಿಕಂಡನೊಂದಹರ್ಾ | ಗಾರದ ಮಣಿಮಂಟಪವನು ||೬೩||

ಮತ್ತದರೊಳಗಭಿನವ ಶಾರದೆಯಂತೆ | ಮೊತ್ತದಸಖಿಯರನಡುವೆ ||
ವೃತ್ತಪಯೋಧರೆಪಿಡಿದು ವೀಣೆಯಬಾಜಿ | ಸುತ್ತಿರಲಲ್ಲಿಗೆಯ್ದಿದನು ||೧೪||

ನವವಿಧಮಪ್ಪಾವೀಣೆಯಿಂಚರವನು | ಭುವನಾತಿಶಯರೂಪವಡೆದ ||
ಯುವತಿಯನೋಡುವೆನೆಂದೊಂದು ಕಂಬವ | ನವನಿಪಮರೆಗೊಂಡನಾಗ ||೧೫||

ಆ ಮಣಿಗಂಬವಮರೆಗೊಂಡುನಿಂದಿರೆ | ಭಾಮಿನಿಗಭ್ಯಾಸಿಸುವ ||
ಆ ಮನೋಹರನೆಂಬ ಗಾಂಧರ್ವಾಚಾರ್ಯ | ನಾಮಹಿಮನಕಂಡನಾಗ ||೧೬||

ಆರಿವನೆಂದು ನಿರೀಕ್ಷಿಸಿಯವನಾ | ಕಾರಕೆಮಿಗೆ ಮೆಚ್ಚಿತನ್ನ ||
ಸಾರಕೆಕರೆದೊಲ್ಮೆಯೊಳು ಕುಳ್ಳಿರಿಸಿದನ | ಕಾರಣಪುರುಷನನೆಂದು ||೧೭||

ಅನ್ನೆಗಮಾಬಸದಿಯಪದ್ಮಾವತಿ | ಕನ್ನೆಯವೀಣೆಯಿಂಚರಕೆ ||
ಚೆನ್ನಾಗಿಮೆಚ್ಚಿಪಸಾಯನಮಿತ್ತಳು | ತನ್ನಮುಂಡೆಯ ಕುಸುಮವನು ||೧೮||

ಕಾಮಿತಫಲಸಿದ್ಧಿಯಾಹುದೆಂದಾ ಹೂವ | ನಾಮುಡಿಗಿಟ್ಟುಚಿತ್ತದೊಳು ||
ಕಾಮನಿಭನಿಗಿತ್ತು ಗುರುವಿಗೆವಂದಿಸಿ | ಭಾಮೆ ಮನೆಗೆಪೋದಳಿತ್ತ ||೧೯||

ಈ ಉತ್ತಮರೂಪನೆಯ್ದಲೊಡನೆ ಪ | ದ್ಮಾವತಿಯುವಳೊಪ್ಪುವನು ||
ಶ್ರೀವಿದೊಲವಿನಿಂಕೊಟ್ಟಳಂತದರಿಂ | ದೀವನಿತೆಗೆವರನಿವನು ||೨೦||

ಎಂದಾಚಾರ್ಯನು ಮನಕನುರಾಗವ | ತಂದು ಮುಗುಳ್ನಗೆಯಿಡಲು ||
ಕಂದರ್ಪಸನ್ನಿಭನಂತದನರಿದಿಂ | ತೆಂದವನೊಳಗಾಡಿದನು ||೨೧||

ಈ ನಾರೀಮಣಿ ಯಾವರಾಯನಮಗ | ಳೇನೆಂಬ ಹೆಸರುಮತ್ತಿವಳ್ಗೆ ||
ಏನುಕಾರಣ ವೀಣೆಯಸಾಧನೆಯೆನ | ಲಾನುಡಿಗಿಂತೆಂದನವನು ||೨೨||

ಚಿತ್ರಜನಿಭಕೇಳೀನಗರಿಯ ಚಾರು | ದತ್ತವಣಿಗ್ವರನಣುಗೆ ||
ಉತ್ತಮಸೌಂದರ್ಯಾನ್ವಿತೆ ಗಾಂಧರ್ವ | ದತ್ತೆಯೆಂಬಬಾಲಿಕೆಯರಮಣಿ ||೨೩||

ಈ ವೀಣೆಯ ರಮ್ಯವಾದನದಿಂ ತನ್ನ | ನಾವನೋರ್ವನುಗೆಲಿದವನೆ ||
ಜೀವಿತೇಶ್ವರನೆಂಬೊಂದು ಪ್ರತಿಜ್ಞೆಯ | ನಾವಧುಮಾಡಿಕೊಂಡಿಹಳು ||೨೪||

ಅದರಿಂದಾವೈಶ್ಯವಿಭು ತಿಂಗಳಿಗೊಮ್ಮೆ | ಪದೆದುವೀಣಾಸ್ವಯಂವರವ ||
ಒದವಿಸೆನಾಡನೃಪಾತ್ಮಜರೆಯ್ದಿಂ | ದದುಘಟಿಸದೆ ಪೋಗುತಿಹರು ||೨೫||

ಎಂದೆನಲೀನುಡಿಯೀನಡೆಯೀಗಾಡಿ | ಒಂದಿವಸಿಂಗಾರದೇಳ್ಗೆ ||
ಸೊಂಪುಸೊಬಗು ಭೂಚರಸತಿಯರಿಗಿಲ್ಲ | ವೆಂದು ನುಡಿದನಾನೃಪತಿ ||೨೬||

ಆ ಸುಡಿಗೇಳಿಯಾಚಾರ್ಯನಿಂತೆಂದನು | ಮೂಸನಿದಾನನಕೂಡೆ ||
ಭೂನುತಚಾರುದತ್ತನಕಥನವನು ಮ | ತ್ತಾನಾರಿಯುಹುಟ್ಟುಮೆಟ್ಟ ||೭೭||

ವೈಶ್ರವಣೋಪಮನಾಚಾರುದತ್ತ ರಾ | ಜಶ್ರೇಷ್ಠಿಯುಸತ್ಕಥನವ ||
ವಿಶ್ರುತನಾಮಸೋಹದರಪೇಳೆ ಕೇಳ್ದನಾ | ಆಶ್ರಿತಜನಕಲ್ಪಕುಜನು ||೭೮||

ಇದು ಜಿನಪದಸರಸಿಜ ಮದನುಧುಕರ | ಚದುರಮಂಗರಸರಚಿಸಿದ ||
ಮದನಾರಿ ನೇಮಿಜಿನೇಶಸಂಗತಿಯೊಳ | ಗೊದವಿದ ಸಂಧಿಯೊಂಬತ್ತು ||೭೯||

ಒಂಬತ್ತನೆಯ ಸಂಧಿ ಸಂಪೂರ್ಣಂ.



## ೧೦. ಚಾರುದತ್ತನ ಪ್ರಸಂಗ ಸಂಧಿ

ಶ್ರೀಮದಮರಪತಿ ಮೌಲಿಕೀಲಿತಪಾದ | ತಾಮರಸದ್ವಯಸಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಮಾನಿತಮಾದೀಯಂಗದೇಶದರಾಜ | ಧಾನಿಚಂಪಾನಗರಿಯೊಳು ||
ಭೂನುತವಿಕ್ರಮಿ ವಿಮಲವಾಹನನೆಂಬ | ಮಾನವೇಂದ್ರನು ಸುಖವಿರಲು ||೨||

ಆನಗರಿಯೊಳಿಭ್ಯಕುಲ ಚೂಡಾಮಣಿ | ಭಾನುದತ್ತನೆಂಬ ಪರದ ||
ಮಾನಿನಿದೇವಿಲೆಯೆಂಬಳವಳಕೂಡಿ | ಸಾನಂದದೊಳಿರುತಿಹನು ||೩||

ಒಂದುದಿವಸ ಕುಸುಮಿತೆಯಾಗಿನಾಲ್ನೀರ | ಮಿಂದುಪತಿಯುಸೂಳ್ಗೆವಂದು ||
ಕಂದರ್ಪಕೇಳಿಯೊಳಾದೇವಿಲೆಯು | ದಂದಿನ ಕಡೆಯರಾತ್ರಿಯೊಳು ||೪||

ಕರುಣದಿಚಾರಣ ಪರಮೇಷ್ಠಿಗಳು ತನ್ನ | ಕರದೊಳಗೊಂದು ಮಾಣಿಕವ ||
ಇರಿಸಿದುತ್ತಮಪುಷ್ಪಕನಸುಗಂಡಾನಿದ್ರೆ | ಹರೆದು ಹಿರಿದು ಸುಖವಿರಲು ||೫||

ಕೆಲವುದಿವಸದೊಳು ಗರ್ಭೋದಯಮಾಗೆ | ಸುಲಲಿತಮಪ್ಪಲಗ್ನದೊಳು ||
ಅಲರ್ಗಣೆಯನಸಿರಿ ಹಡೆವಂತೆ ಹಡೆದಳು | ಲಲಿತಾಂಗನನೋರ್ವನನು ||೬||

ಚಾರಣರುಗಳು ರತ್ನವಕನಸಿನೊಳಿಟ್ಟ | ಕಾರಣದಿಂದಾಸಿಸುಗೆ ||
ಚಾರುದತ್ತನೆಂಬಭಿಧಾನವಿತ್ತನು | ಚಾರುಮೂರ್ತಿಯು ಭಾನುದತ್ತ ||೭||

ಆಊರೊಳಗೈವರು ವೈಶ್ಯೋತ್ತಮ | ರ್ಗಾವೇಳೆಯೊಳು ಪುಟ್ಟಿದರು ||
ಭೂವಿಶ್ರುತರೈವರು ಸುಕುಮಾರರು | ಕಾವನಕಣೆಗಳೆಂಬಂತೆ ||೮||

ಅವರೈವರನೊಡಂಬಡಿಸಿಯಾ ಮಕ್ಕಳ | ಸವಿನಯದಿಂ ಕೊಂಡುಬಂದು ||
ತವಿರಿಲ್ಲದ ಕೂರ್ಮೆಯಿಂದವೆತನ್ನಾತ್ಮ | ಭವನೊಳುಜಾತಕರ್ಮವನು ||೯||

ವಿರಚಿಸಿಯಾ ಭಾನುದತ್ತರಾಜಶ್ರೇಷ್ಠಿ | ಹರಿಬಾಂಧವಗೋಮುಖನು ||
ಮರುಭೂತಿಯುಂಪರಂತಪ ದೇವದತ್ತನೆಂ | ಬುರುನಾಮವನಿತ್ತನವರ್ಗೆ ||೧೦||

ಆತನುಸದೃಶಚಾರುದತ್ತನವರುಗೂಡಿ | ಸತತ ಸಕಲಕಲೆಗಳನು ||
ಮತಿವಂತನಾಗಿ ಕಲಿತುಜವ್ವನವಾಂ | ತತಿಶಯಕೀರ್ತಿವಡೆದನು ||೧೧||

ಚಾತುಕಲಾಕುಶಲತೆಯಿಂದಪಿಸುತೋ | ದಾರತೆಯಿಂದ ರೂಪಿಂದ ||
ಸಾರಸದ್ಗುಣದಿಂದ ಭೂರಿಭೂಷಣನಾಗಿ | ಚಾರುದತ್ತನೊಪ್ಪಿದನು ||೧೨||

ಒಂದಾನೊಂದು ದಿನದೊಳಾನಗರಿಯ | ಮುಂದಣ ಹೊಳೆಗೆಯ್ತಂದು ||
ಖಂದಾಕೆಲದ ನಂದನದೊಳಗತ್ತ್ಯಾ | ನಂದದಿವಿಹರಿಸಿಬಳಿಕ ||೧೩||

ಪುರಕೆತಿರುಗುವ ಸಮಯದೊಳಗಾವನಾಂ | ತರದೊಳಗೊಂದು ಸೂಲದೊಳು ||
ಪಿರಿದಾಗಿಕೀಲಿಸಿಯರೆಜೀವವಾಗಿರ್ದ | ಪುರುಷನೊರ್ವನ ಕಂಡನಾಗ ||೧೪||

ಅವನದಿಟ್ಟಿಗಳಾಬಳಿಯೊಳು ಬಿದ್ದಿರ್ದ | ನವರತ್ನಮಯಖೇಟಕದೊಳು ||
ಅವಿರಳವಾಗಿ ಕೀಲಿಸಿಸಿಂದಿರಲಾ | ಕುವರನಾಭಾವವನರಿದು ||೧೫||

ಆ ರತ್ನಮಯಖೇಟಕದಮಧ್ಯದೊಳೊಂದು | ಚಾರುಘುಟಿಕೆಕೀಲಿಸಿರಲು ||
ಚಾರುದತ್ತನು ಸುವಿವೇಕತನದಿಸದ | ನಾರೈದುತೆಗೆದುನೋಡಿದನು ||೧೬||

ಆಸರೌಷಧಿಯೆಂಬ ಘುಟಿಕೆಪಿಡಿ | ದಾಸೂಲದಪುರುಷನನು ||
ಓಸರಿಸದೆ ತಾನುತೆಗೆವೆನೆನುತ ಮುಟ್ಟ | ವಾಸೆಮಯಕೆ ತನ್ನತಾನೆ ||೧೭||

ಒಸಿದಸೂಲದೊಳಿದಾರ್ಗ ಕಂಠಗತಪ್ರಾ | ದಷುದೇಹದೊಳು ಪೂರಯಿಸಿ ||
ಮುಸುಕಿದ ಶಕ್ತಿಯೊಳಾಯೆಡೆಯಿಂ ಸಂ | ತಸದಿಂದಿಳಿತಂದನಾಗ ||೧೮||

ಉತ್ತಮನಿನ್ನಕರುಣದಿಂದ ಪುಸರು | ತ್ತ್ರ್ತಿಯಾದುದು ನನಗೆಂದು ||
ಚಿತ್ತಶುದ್ಧದೊಳು ಕೀರ್ತನೆಗೆಯ್ದಾಚಾರು | ದತ್ತಗೆ ವಿನಮಿತನಾಗಿ ||೧೯||

ಇನ್ನೀಜನ್ಮಕೆ ನೀನೇನಿಜಗುರು | ನೆನ್ನಮಾತಾಪಿತೃನೀನು ||
ಇನ್ನಿದುಸಂಶಯಮಿಲ್ಲೆಂದವನೊಳು | ತನ್ನತೆರನ ಪೇಳ್ದನಿಂತು ||೨೦||

ವಿಲಸಿತವಿಜಯಾರ್ಧಗಿರಿಯ ದಕ್ಷಿಣತಟ | ದೊಳಗೆ ಶಿವಂಕರವೆಂಬ ||
ಪೊಲೊಮಿತಗತಿಯೆಂಬವನಾನೆನ್ನ | ಲಲನೆ ಕಲಾವತಿಗೂಡಿ ||೨೧||

ಅನುರಾಗದಿಂದಿರಲವಳಿಗೆ ಸೋಲ್ತುವಾ | ಜನೆಯಿಂದೊರ್ವ ಖೇಚರನು ||
ತನಗೆನಗೆರವಿಲ್ಲದಂತೆನ್ನೊಳು ಕೆಳೆ | ತನವನುಮಾಡಿಕೊಂಡಿರ್ದು ||೨೨||

ಎನ್ನೊ ಪನಾಟಕೆಸಲವಾಗಿಯಾಖಳ | ತನ್ನರಾಜ್ಯವಬಿಟ್ಟುಬಂದು ||
ಉನ್ನತಮಪ್ಪಕಪಟಸ್ನೇಹವನವ | ಜೆನ್ನಾಗಿಮಾಡುತಲಿರ್ದ ||೨೩||

ಇರಲಿಂತುನಾನೀಚಂಪಾನಗರಿಯ | ವರಜಿನವಾಸುಪೂಜ್ಯರನು ||
ಉರುಭಕ್ತಿಯಿಂಪೂಜಿಸಲೆಂದು ಬಂದಾ | ತುರದಿಂದಾಸತಿಸಹಿತ ||೨೪||

ಕಂದರ್ಪಹರನನರ್ಚಿಸಿಬಳಿಕತ್ತಾ | ನಂದದಿಂದೀನಂದನದ ||
ಕುಂಡಲತಾಮಂಟಪದೋವರಿಪ್ರೊ | ಕ್ಕಿಂದುವದನೆಯೊಡಗೂಡಿ ||೨೫||

ಸುರತಾಂತ್ಯಶ್ರಾಂತಿಯೊಳಾಸುಮೈನುರೆ | ದಿರಲಾಖಳನೆಯ್ತಂದು ||
ಭರದಿಂದೆನ್ನಸೂಲದೊಳಿಕ್ಕಿ ಬಳಿಕಾ | ತರುಣಿಯ ಕಳ್ದೊಯ್ದನಿತ್ತ ||೨೬||

ಇನ್ನಿಲ್ಲಿ ನಾನೊಂದಿನಿಸು ತಡಮಾಡಿದೊ | ಡೆನ್ನ ವಿಪತ್ತಿಯೊಳಿರದೆ ||
ತನ್ನ ಜೀವನವತೊರೆವಳು ನಿಜಾಂಗನೆ | ಸನ್ನುತಗುಣಗಣನಿಳಯ ||೨೭||

ಎನುತಾಚಾರುದತ್ತನಕ್ಕೈಯಿಂ ಕಡು | ವಿನಯದಿಂದವೆಜೀಳ್ಕೊಂಡು ||
ಇನಿಸುವೇಗದೊಳಾ ವಿದ್ಯಾಧರರಾಜ | ನನಿಲಪಥಕೆಪೋದನಿತ್ತ ||೨೮||

ಕೆಳೆಯರ್ವೆವರುಗೂಡಿಯಾಚಾರುದತ್ತನು | ಪೊಳಲಹೊಕ್ಕಾನಿಜಗೃಹಕೆ ||
ತಳರಿಬಳಿಕ ವಿದ್ಯಾಭ್ಯಾಸಂಗಳ | ನುಳಿಯದೆಮಾಡುತವಿಹನು ||೨೯||

ಈತೆರದಿಂದಿರೆ ಭಾನುದತ್ತನು ತನ್ನ | ಪ್ರೀತಿವಡೆದ ಮೈದುನನ ||
ನೀತಿನಿಪುಣ ಸಿದ್ಧಾರ್ಥನೆಂಬನತನು | ಜಾತೆಮಿತ್ರಾವತಿಯೆಂಬ ||೩೦||

ಅಭಿನವರತಿದೇವಿಯಸಂಗೋದ್ಭವ | ನಿಭಗೆ ಮದುವೆಮಾಡಿದನು ||
ಶುಭತರಮಪ್ಪ ಲಗ್ನದೊಳಮರಾಧೀಶ | ವಿಭವದೊಳಿಳೆಪೊಗಳ್ವಂತೆ ||೩೧||

ಅತಿರೂಪಯುತ ಚಾರುದತ್ತಕುಮಾರನು | ವಿತತವಿದ್ಯಾಭ್ಯಾಸದೊಳು ||
ಮತಿಯನಿಟ್ಟಾಸತಿಮಿತ್ರಾವತಿಯೊಳು | ಸತತಸುಖದೊಳಿಹುದಿಲ್ಲ ||೩೨||

ಅದರಿಂದಾಜವ್ವನೆಯೊಡಲೊಳು ಚಿಂತೆ | ಯೊದವಿರಲರಿದೊಂದುದಿನದ ||
ಉದಯದೊಳಾನಿಜಜನನಿ ಸೌಮಿತ್ರೆ ಸ | ಮ್ಮದವಳಿದವಳೆಡೆಗೆಯ್ದಿ ||೩೩||

ಬಣ್ಣಗೆಡದಬಂದುಗೆಹೂದುಟಿಯಲ | ರ್ಗಣ್ಣಾಂಜನರೇಖೆಬಿಡದ ||
ಬಣ್ಣಿಸಿತೊಡೆವಂಗರಾಗವುದುರದೆಳೆ | ವೆಣ್ಣಮಾಣಿಕವನೋಡಿದಳು ||೩೪||

ಉಡೆನಿರಿಯೊಳಗಿಟ್ಟ ಮಣಿಕಾಂಚಿಯಕೀಲು | ಸಡಿಲದಮುಡಿಯಲರುಗಳ ||
ಕಡುಸೊಗೆಯಿಸುವ ತಿಲಕವಚ್ಚಳಿಯದ | ಮಡದಿಮಣಿಯನೀಕ್ಷಿಸಿದಳು ||೩೫||

ನೇತ್ರಯುಗದಕಡೆಯೊಳು ಕೆಂಪುದೋರದ | ಚಿತ್ರವಡೆದಸುಣ್ಣದಪಿನ ||
ಪತ್ರಕೆ ಭಂಗವಾಗದ ಕಾಂಚನಶತ | ಪತ್ರಮುಖಿಯನೀಕ್ಷಿಸಿದಳು ||೩೬||

ಅಳಿಕಳಭಾಕಳವಳಿಕಗೊಳಳಿಯದ | ಒಳಿಯೊಡೆಯದತನುಲತಿಕೆ ||
ಬಳಲದ ಬಲುಮೊಲೆಗಳು ಗುಜ್ಜುವಡೆಯದ | ಲಲಿತಾಂಗಿಯನೋಡಿದಳು ||೩೭||

ಕಂದರ್ಪಕೇಳಿಯಸುಖಮಿಲ್ಲಮಿಾಬಾಲೆ | ಗೆಂದು ಬಗೆವ್ರುತಲೆಮಗಳೆ ||
ಅಂದುನಿವ್ಮ್ರಕ್ತ್ರಿಯುವಮಾತುಗೇಳಿದದೆಸೆ | ಯಿಂದೆಗ್ಗರಾದೆವುನಾವು ||೩೮||

ಎಂದು ತನ್ನತ್ರಿಗೆದೇಯಿಲೆಯೆಡೆಗೆ | ಯ್ಯಂದೆಲೆಪಾತಕಿ ನಿನ್ನ ||
ನಂದನಗತಭೋಗಿಗೆ ಎನ್ನಮಗಳನು | ತಂದುಕೆಡಿಸುವುದುಮತವೆ ||೩೯||

ಎನಲಾದೇಯಿಲೆಯಿಂತೆಂದಳೆನ್ನಗ್ರ | ತನಯನುತ್ತಮನಾಯಕನು ||
ವಿನುತವಿದ್ಯಾಭ್ಯಾಸದೊಂದಾತುರದಿಂದ | ಮನವನಿಕ್ಕನು ರತಿಸುಖಕೆ ||೪೦||

ಅದನೊಂದೆರಡುದಿನದೊಳು ಮಾಣಿಸುವೆನಿಂ | ತಿದನುರೆನಂಬುನೀನೆನುತ ||
ಜದುರೆವೇಯಿಲೆ ತನ್ನಾ ನಾದುನಿಯನು | ಸದನಕೆಬೀಳ್ಕೊಟ್ಟು ಬಳಿಕ ||೪೧||

ತನ್ನವಲ್ಲಭ ಭಾನುದತ್ತನನುಜನ | ತ್ಯನ್ನತವೇಶ್ಯಾಚಾರಿ ||
ಸನ್ನುತರುದ್ರದತ್ತನನು ಕರೆದುಕೊಂಡು | ಮನ್ನಿಸಿನುಡಿದಳಿಂತೆಂದು ||೪೨||

ಚದುರರನ್ನನು ಚಾರುದತ್ತಗೆ ರತಿಯಿಚ್ಛೆ | ಯುದಿಯುದತೆರನಿನ್ನಿಂದ ||
ಒದವುವುದದನೀನೆಸಗುವುದದಕೆಂದ | ನಿದಕೆ ಸಂಶಯಮಾಡಬೇಡ ||೪೩||

ಎರಡುದಿನಕೆ ಚಾರುದತ್ತನನೀಪೇಳ್ವ | ಪರಿಯಮಾಡುವೆನೆನಲವಗೆ ||
ಹರಿಸದಿಪಿರಿದು ವಸ್ತುವನಿತ್ತತ್ಯಾ | ದರವನುಸುರಿಬೀಳ್ಕೊಡಲು ||೪೪||

ಬಂದಾಮಹಿಮಗೆ ರುದ್ರದತ್ತನುಮನ | ಸಂದುಸಹಾಧ್ಯಾಯಿಯಾಗಿ ||
ಒಂದಿಸಿವೋಳವ ಕೆಲದಿನಮಿರ್ದು ಮ | ತ್ತೊಂದಾನೊಂದುದಿನದೊಳು ||೪೫||

ಗಾಡಿವಡೆದ ಸಮ್ಮೋರಸೊಬಗನೀ | ನೋಡುಬಾರೆಂದೊಡಂಬಡಿಸಿ ||
ಕೂಡಿಕೊಂಡುಬಂದು ಪುರವರದೊಳಗಾ | ರೂಢಿವಡೆದಕೇರಿಯೊಳು ||೪೬||

ಹೂವಿನಂಗಡಿಗೊಂಡುಕದಂಬವ | ಹೂವನಿರದೆ ಬೆಲೆಗೊಡುವ ||
ಭಾವಕಿಯರ ಹಾವಭಾವಂಗಳನಾ | ಭಾವಜನಿಭಗೆ ತೋರುವನು ||೪೭||

ಸಿರಿಗಂಪನರೆದುಮಾರುವ ಶೋಮಳೆಯು | ಸುರುಚಿರಮಪ್ಪರೂಪವನು ||
ಸುರನಿಭನಾಚಾರುದತ್ತನಿಗತ್ಯಾ | ದರದಿಂದವೆ ತೋರುವನು ||೪೮||

ವರವಿದ್ಯಾಧರವನಿತೆಯಂತಂದದಿ | ಕರುಪೂಡಂಗಳನೇರಿ ||
ಹರಿಸದಿನಾಡುವ ನೃಪಸುತೆಯರನಾ | ಸ್ಮರಸದೃಶಗೆ ತೋರಿಸುವನು ||೪೯||

ಕೇರಿಕೇರಿಯೊಳೆಡೆಯಾಡುವ ಬಿಡುವೆಣ್ಗ | ಳಾರಮ್ಯಮಪ್ಪರೂಪವನು ||
ಮಾರಸಮಧುರಾಕಾರನಗೆಲ್ಲಾ | ಚಾರುದತ್ತಗೆ ತೋರುವನು ||೫೦||

ಧಾರುಣಿಪತಿಯೋಲಗಕೆಯ್ದುವಪ್ಪಾ | ವಾರಾಂಗನೆಯರಚೆಲ್ವ ||
ಧೀರನುದಾರನುತ್ತಮಗುಣನಿಧಿಗಂ | ಭೀರಗೊಲಿದು ತೋರಿಸುವನು ||೫೧||

ಈತೆರದಿಂತಿರುಗಿಸುತೊಂದುದಿನ ಚಿತ್ತ | ಜಾತನರಾಜ್ಯದಂದದೊಳು ||
ರೀತಿವಡೆದ ಸೂಳೆಗೇರಿಯನಾವಿ | ಖ್ಯಾತರೂಪನ ಹೊಗಿಸಿದನು ||೫೨||

ಕಂಡಮಾತ್ರದೊಳು ವಿರಕ್ತಜನಂಗಳ | ಕೊಂಡಸುವ್ರತವನುಬಿಡಿಸಿ ||
ಗಂಡುದೊಳ್ತ್ಯಾಗಿಸುವಾಸೂಳೆಗೇರಿಗೆ | ಕೊಂಡೊಯ್ದನಾಕುಮಾರಕನ ||೫೩||

ಬೆಲೆವೆಣ್ಣಕೇರಿಗೆಯ್ದಿದನು ಸಖರುಗೂಡಿ | ಒಲವಿನಸಬಗೆಬಿಟ್ಟಬೀಡ ||
ಚೆಲುವಿನ ಬೆಳೆಸಳನಳಿಸಿಬೆಳೆವ ಕಾಡ | ಸಲರಂಬನ್ನೃಪನಾಳ್ವನಾಡ ||೫೪||

ಅತಿವೀತರಾಗವ್ರತದವರಿಗೆಮಾರಿ | ಅತನುಸೌಖ್ಯದ ಕೆರೆಯೇರಿ ||
ರತಿಮುಕ್ತಿಗಿರದೆಯ್ದಿಸಲಿಕ್ಕಿದದಾರಿ | ಸುತಮಾದುದಾಸೂಳೆಗೇರಿ ||೫೫||

ಹೊಸಮಿಸುನಿಯ ಹೊನ್ನಪಟ್ಟಶಾಲೆಗಳಿಂದ | ಮಿಸುಪರನ್ನದಲೋವೆಯಿಂದ ||
ರಸಚಿತ್ರವೆಸದಿನೊಪ್ಪುವ ಭಿತ್ತಿಗಳಿಂದ | ಹಸನಾದುದಾಕೇರಿಯಂದ ||೫೬||

ಒತ್ತೆಗೆಸುತಬಂದಲ್ಲಲ್ಲಿನಿಂದಿರ್ದ | ವೃತ್ತಕುಚೆಯರಚೆಲ್ವಿಂದ ||
ಚಿತ್ತವಸೆರೆಗೆಯ್ವಾವಿಟಜನವೃಂದ | ವತ್ತಿತ್ತತೊಲಗದಲ್ಲಿಂದ ||೫೭||

ಮುತ್ತಿನ ತೋರಮಣಿಯಭೂಷಣವಿಟ್ಟು | ಉತ್ತಮದೇವಾಂಗವುಟ್ಟು ||
ಕತ್ತುರಿಪುಣುಗುಜವಾದಿಯನಂಪಿಟ್ಟು | ಒತ್ತೆಗೆಯ್ದಿದರಳವಟ್ಟು ||೫೮||

ಪೊರ್ದದವರ ಮೈವಳಿಯೊಳೊಲಿಸಿಕೊಂಬ | ಪೊರ್ದಿದವರ ಸುಲಿತಿಂಬ ||
ಬರ್ದಿನಬಲ್ಲಿನಿಂದಾಕೇರಿಯತುಂಬ | ಲಿರ್ದುದುವಧೂನಿಕುರುಂಬ ||೫೯||

ನರಜನ್ಮಲೇಸುಜವ್ವನಲೇಸದರೊಳು | ವರರೂಪುಲೇಸು ಗಂಡರೊಳು ||
ಸರಿಸೋಲಲೇಸು ಪೆಂಡಿರಿಗೆಂದೋರ್ವಳು | ಗರುವೆಗಿಳಿಯನುಡಿಸಿದಳು ||೬೦||

ಗರುವರಚಿತ್ತವಸೊಲಿಸಿಕೊಂಬಬಲೆಯು | ವರಗೃಹವಾಬಲಮುರಿಯು ||
ಸುರುಚಿರಶಂಖವಹೊಳೆದ ಭೂಮಿಯು | ಸರಿಕೇಳು ಸಖಿಯಿನುಡಿಯ ||೬೧||

ವರಗುಣಭೂಷಣವಿಲ್ಲದವಳ ಚೆಲ್ವು | ಪರಿಮಲವಿಲ್ಲದಪೂವು ||
ಸುರುಚಿರಮಾದ ಸುಗ್ಗಿಯೊಳುಬೆಳೆದಬೇವು | ಉರುರುದ್ರಭೂಮಿಯುಮಾವು ||೬೨||

ಕೊಡುವಕೋವಿದವಿಟರುಗಳ ಹೃದಯವನು | ಕೆಡಲೀಯದೆ ಮೋಹವನು ||
ಬಿಡದೊಡೆಬಿಡದೈಸಿರಿಯೂಪೆಣ್ಣನು | ಮಡದಿಮಣಿಯೆಕೇಳಿದನು ||೬೩||

ಸಿರಿಚಲ್ವುಚಾಣ್ಮೆಜವ್ವನ ವಿತರಣವನು | ಕರಿಸಿ ಒಲಿದಕಾದಲನನು ||
ಹೊರೆಗಾಣಿಸದೆ ಒಲಿಯುಬಲ್ಲವಳನು | ಅರಲಂಬನೇನಮಾಡುವನು ||೬೪||

ಪರಲೊತ್ತುವಮೊಲೆಯಿಂದೊಡವೆರೆದೆನು | ದೊರೆವೆತ್ತುಚಾಣುವಡೆದೆನು ||
ಪರಮುಖಶಶಿಗೆ ಸರೋಜನಿಯಾದೆನು | ಗರುವನೀಜಿಡುವುದಕೇನು ||೬೫||

ಮನೆಯುಮಾನಿನಿಯುತೆಲ್ಲಕೆಹೊರಗಾದೆನು | ಅನುದಿನ ದುಃಖವೆಯ್ದಿದೆನು ||
ಮನದಾಣ್ಮನಕೇಳು ಸ್ನಿಗ್ಧಕತದಿನಾಣನು | ನನೆಗಣೆಗೊಪಲನೊಡ್ಡಿದೆನು ||೬೬||

ಎಂದುನುಡಿವ ಮೋಹಿಗಳಮಾತಕೇಳುತ | ಕಂದರ್ಪನಿಭಚಾರುದತ್ತ ||
ಮುಂದಕೆನಡೆದುಬರಲು ವೇಸಿಯರಮೊತ್ತ | ನಿಂದುನೋಡಿದುದವನತ್ತ ||೬೭||

ಆವಾವದಿನದೊಳಗೀಕೇರಿಗೆಬರ್ಪ | ಕೋಪಿದರೊಳಗಿಂತಪ್ಪ ||
ಲಾವಣ್ಯವುಳ್ಳರ ಕಾಣುದಿಲ್ಲೆಂದಾ | ಭಾವೆಯರವನನೋಡಿದರು ||೬೮||

ವರವಜ್ರವಿಲ್ಲದೆಯಿದ್ದ ಸುರಪತಿಯೊ | ಅರಲಂಬನುಳಿದಂಗಜನೊ ||
ಉರಿಗಣ್ಣಬಿಸುಟುಗ್ರನೊ ಯೆಂದುನೋಡಿದ | ರಿವದಾತರುಣಿಯುರವನ ||೬೯||

ಈತೆರದಿಂ ತನ್ನಚೆಲ್ವನಿರೀಕ್ಷಿಸು | ವಾತರಳಾಕ್ಷಿಯರುಗಳ ||
ರೀತಿಯನಡೆನೋಡುತತದ್ವೀಥಿಯೊ | ಳಾತುಳಿಲಾಳಿಯುವಾಗ ||೭೦||

ಆರುದ್ರದತ್ತನ ಪ್ರೇರಣೆಯಿಂಮದ | ವಾರಣವೊಂದಿದಿರಾಗಿ ||
ಘೋರೆನೆಬರುತಿರೆ ಕಾಣುತಹಿಮ್ಮೆಟ್ಟಿ | ಯಾರಸಿಕನುಬರ್ಪಾಗ ||೭೧||

ಮತ್ತೊಂದುಮದಗಜವಾದೆಸೆಯಿಂದ ಬ | ರುತ್ತಿರಲಾತವಕಂಡು ||
ಉತ್ತಮನೊಂದುಗೃಹದಮುಣಿವಾಗಿಲ | ಹತ್ತಿರಸಾರನಿಂದಿರಲು ||೭೨||

ಆರುದ್ರದತ್ತನು ಮುನ್ನತನಗೆಪೇಳ್ದ | ಕಾರಣದಿಂ ಕೆಳದಿಯುವ ||
ಚಾರುದತ್ತನನು ವಸಂತತಿಲಕೆಯೆಂಬ | ನಾರಿಕರೆಯಲಟ್ಟಿದಳು ||೭೩||

ಬಂದಾಸಖಿಯರೀಯಾನೆ ಪೋಹನ್ನವ | ರೊಂದುನಿಮಿಷ ನಮ್ಮಮನೆಗೆ ||
ಸಂದೇಹಮಿಲ್ಲದೆ ಬಿಜಯಂಮಾಡುವು | ದಂದತ್ಯಾಗ್ರಹದಿಂದ ||೭೪||

ಕರೆದುಕೊಂಡುಹೋಗಿ ತಲೆವಾಗಿಲಹೊಚ್ಚಿ | ಕರುಮಾಡದೊಳುಕುಳ್ಳಿರಿಸಲು ||
ಗರುವೆವಸಂತತಿಲಕೆ ಬಂದಳಾಗ ನಿಂ | ಗರದೊಟ್ಟು ಸಂತಸದಿಂದ ||೭೫||

ಅರಲಂಬನಾರಾಧಿಪದೇವತೆಯೊ | ಸುರಭಿಶರನಕೀರ್ತಿಸತಿಯೊ ||
ಸ್ಮರರಾಜನವಿಜಯಾಂಗನೆಯೋ ಎನೆ | ತರಳಾಕ್ಷಿ ನಡೆತಂದಳಾಗ ||೭೬||

ನೆಡಗರದಿಂಬಂದು ಕೆಲದೊಳುಕುಳ್ಳಿರ್ದ | ಮಡದಿಯುಮಮತೆಯಾಳಿಯರು ||
ಕಡುವೇಗದಿಂನೆತ್ತವಲಗೆಯನೀರ್ವರ | ನಡುವೆತಂದುಮಡಗಿದರು ||೭೭||

ಎಲೆಚಾರುದತ್ತ ಚೌಷಷ್ಟಿಕಲೆಗಳೊಳು | ಸುಲಭನೀನಂತವರಿಂದ ||
ಲಲನಾಮಣಿಯಿವಳೊಳು ನೆತ್ತವನಾಡಿ | ಗೆಲುವಬಿನ್ನಣವತೋರೆಂದು ||೭೮||

ನೆತ್ತದ ಚಾರಿಹಾಸಗಿಯನದರಮೇ | ಲಿತ್ತುತಳುವದಾಡೆನಲು ||
ಮತ್ತದಕವನು ಮೆಲ್ಲನೆ ಮಾಡಲಾರುವ್ರ | ದತ್ತನಿದರಿನೇನುಕೊರತೆ ||೭೯||

ಒಂದೆರಡಾಟಮನಾಡಿ ಮತ್ತೀಬಳಿ | ಯಿಂದೆದ್ದು ಹೋಹೆವೆಂದಾಗ ||
ಕಂದರ್ಪರೂಪನಕೈಯಿಂದನೆತ್ತಮು | ನಿಂದುಮುಖಿಯೊಳಾಡಿಸಿದನು ||೮೦||

ಕಡೆಗಣ್ಣಳ ಸನ್ನೆಯಿಂದಾಸುಕುಮಾರ | ನೊಡನೆಬಂದಾಕೆಳೆಯರನು ||
ತಡೆಯದೊಬ್ಬೊಬ್ಬರನೇಳಿಸಿತಾಕಟ್ಟ | ಕಡೆಯೊಳು ಚಿಮ್ಮಿದನಿತ್ತ ||೮೧||

ನೆತ್ತಮನೊಂದೆರಡಾಟಮನಾಚಾರು | ದತ್ತನಾಡಿಗೆಲಲಾಗ ||
ವೃತ್ತಪದನೆ ನನ್ನೀಸೋಲಕೆಸೋಲ | ಪಿತ್ತಲ್ಲದೆ ಪೋಗಬೇಡ ||೮೨||

ಎಂದು ಕಾವನಕೈಯರತಿಪಿಡಿದೆಳೆವಂತೆ | ಯಂದದಿಂದವನಕೈವಿಡಿದು ||
ಮಂದಗಮನೆಮಾಡದ ಮೇಲ್ನೆಲೆಗಾ | ನಂದದಿಂ ಕೊಂಡೊಯ್ದಳಾಗ ||೮೩||

ಸರಸಜಾತದಮೇಲಕೆಗಂಡುಗಿಳಿಯೆಡ | ವೆಸಸಿ ಸಾರಿಕೆಪೋಪಂತೆ ||
ಕರುಮಾಡವನು ಜಯಂತರೂಪನು ಸಹಿ | ತರವಿಂದಮುಖಿಯೇರಿದಳು ||೮೪||

ಬಳಿಕಬಂಧುರಮಣಿಮಂಚದಮೇಲೆ ಕ | ಣ್ಗೊಳಿಸುವ ಮೃದುತಲ್ಪಕಿರದೆ ||
ಕಳಹಂಸಮಿಥುನಮುಳಲ್ಗುಪ್ಪೆಗಡರ್ವಂತೆ | ತಳಿರದರಾಪ್ರಿಯತಮರು ||೮೫||

ಪರಿಚಾರಕಿಯರನಿತರೊಳು ಪನಿನೀರು | ಪರಿಮಳಕುಸುಮತಾಂಬೂಲ ||
ಸಿರಿಗಂಪುಸಿರಿಪಚ್ಚೆಮೊದಲಾದ ಸುಖಪರಿ | ಕರಮನಿರಿಸಿಜಾರಿದರು ||೮೬||

ಮುಸುಕಿದನಾಣ್ಗೆಸದೆಗೆದನುರಾಗದ | ರಸೆವಿಂಪೂಸಿ ಚೆಲ್ವೆಡೆದ ||
ರಸಿಕನಮನದಮನೆಗೆಕಂತುರತಿಸಹಿ | ತೊಸದೊಕ್ಕಲೇರಿದನಾಗ ||೮೭||

ಭೋಗೋಚಿತವಸ್ತುಪಸಲ್ಲಪಸಸು | ರಾಗಮೊದವೆಕೈಕೊಂಡು ||
ಭೋಗಿಗಳವರೀರ್ವರು ನವಸುರತೋ | ದ್ಯೋಗಮನೆಸಗಿದರಾಗ ||೮೮||

ನೋಡಿದಣೆವಕಡೆಯರುಲಲ್ಲೆವೆರೆದಮಾ | ತಾಡಿದಣಿಯರು ಚುಂಬನವ ||
ಮಾಡಿದಣೆಯರೊಬ್ಬೊಬ್ಬರೊಳೊಲವಿಂ | ಕೂಡಿದಣೆಯರಾಪ್ರಿಯರು ||೮೯||

ಎವೆಯಲುಗದನೋಟವೆಸಕದೆದೆಯಬೇಟ | ಸವಿಗೆಸವಿಯಪೊರೆಯಿಡುವ ||
ಹವಣೆನಿಸಿಲ್ಲದ ಲವಲವಿಕೆಯಕೂಟ | ಪವರೊಳು ಸಲೆಸಂದಿತಾಗ ||೯೦||

ಪಗಲಿರುಳೆನ್ನದೀಪರಿಯ ಜಾಣುಮೆಯಿಂ | ಸೊಗಯಿಪ ಸತ್ಕಾರದಿಂದ ||
ತೆಗೆಬಿಗಿಯಿಲ್ಲದ ಸಮರತಿಯಿಂದವ | ಳಗಣಿತಸುಖವಿತ್ತಳವಗೆ ||೯೧||

ಅವನಕಣ್ಗಳ ಬೊಂಬೆಗಳ ತನ್ನಚೆಲುವಿನ | ಭವನದೊಳಗೆ ಬಂಧಿಸಿದಳು ||
ಅವನಮನದಕಾಲನಾಕಾಮಿನಿತನ್ನ | ಸವಿಯಸಂಕಲೆಯೊಳಿಕ್ಕಿದಳು ||೯೨||

ಇಂತಪ್ಪನೇಹದಿನಾಚಾರುದತ್ತನ | ಸಂತತಿಲಕೆಯೊಡಗೂಡಿ ||
ಸಂತತಸೋಲ್ತಿರಲವಳ ಜನನಿತಾ | ನಿಂತೆಂದೆಣಿಕೆಮಾಡಿದಳು ||೯೩||

ಹಣವಹಿಡಿಯದೆ ವಿಟರಿಗೆಮೋಹಿಪನೆಂ | ದೆಣಿಕೆಯಮನದೊಳುಮಾಳ್ಪ ||
ಗಣಿಕೆಯರುಂಬುಡುವುದನು ಹಡೆಯದೆ | ಬಣಗಾಗಿತಿರಿಪರೂರೊಳಗೆ ||೯೪||

ಎನುತಚಿಂತಿಸಿಯವಳಾಚಾರುದತ್ತನ | ಮನೆಗೆ ಊಳಿಗದಾಳಿಯರ ||
ಮನಹೋನೆಕಳುಹಿದೊಡವರಾತನ ನಿಜ | ಜನನಿದೇಯಿಲೆಯೆಡೆಗೆಯ್ದಿ ||೯೫||

ನಿನ್ನತನಯನೆಮ್ಮಮನೆಯಬೀಯಕೆತಕ್ಕ | ಹೊನ್ನತಡೆಯದೀಸಿಕೊಂಡು ||
ಬನ್ನಿಮೆಂದೆಮ್ಮಕಳುಹಿದನೆಂಬುದಕೇಳಿ | ಯುನ್ನತಿಕೆಯಮುದದಿಂದ ||೯೬||

ಲೇಸಾಯಿತೀನುಡಿ ನಿಮ್ಮಮನೆಗೆವಿತ್ತ | ವೇನುಬೇಕೆನೆ ಬೇಡಿಮೆನಲು ||
ಆಸುದತಿಯರೆಂದರಾದೇಯಿಲೆಯನಿ | ರಾಶಾಹೃದಯವನು ಕಂಡು ||೯೭||

ದಿನಕೆಸಾಸಿರಪರ್ವಕೆ ಪತ್ತುಸಾಸಿರ | ಧನವಾಗಬೇಕೆಮ್ಮ ಮನೆಗೆ ||
ಎನಲದುಲೇಸೆಂದಾ ಹವಣಿನಹೊನ್ನ | ನನುಮಾನಿಸದೆ ಕೊಟ್ಟಳವಳು ||೯೮||

ಈತೆರದಿಂದಿನ ಬರಡಿಲ್ಲದೆನು | ಪ್ರೀತಿಯಿಂದಲೆ ಕೊಡುತಿರಲು ||
ಆತನ್ವಂಗಿಯರಿಯದಂದದೊಳ | ತ್ಯಾತುರದಿಂ ತರಿಸುವಳು ||೯೯||

ಇಂದೂರವ್ರತಣವಿಂದುನಂಟರುಬಂದ | ರಿಂದುಮುಯ್ಯನಿಕ್ಕಬೇಕು ||
ಎಂದು ಎಂದಿನ ಲೆಕ್ಕವಲ್ಲದವಳಕ್ಕೆ | ಯಿಂದವಿತ್ತವತರಿಸಿದಳು ||೧೦೦||

ಆರುವರುಷವೀತೆರದಲೆಕ್ಕದಿಪದಿ | ನಾರುಕೋಟಿವಿತ್ತವನು ||
ನೀರೆಗೆನೆರೆಕೊಟ್ಟಾಚಾರುದತ್ತನು | ದೂರಾದನಾನಗರಿಯೊಳು ||೧೦೧||

ಮಗನಪ್ರಬುದ್ಧಿಗೆಯಾತಾಯಿದೇಯಿಲೆ | ಬಗೆಯಿತ್ತು ಮನೆಯವಿತ್ತವನು ||
ತೆಗೆದುಹಾಳುಮಾಡಿದುದಕೆ ವಿಸ್ಮಯನಾಗಿ | ಮಿಗೆನೊಂದನುಭಾನುದತ್ತ ||೧೦೨||

ಇಭ್ಯಕುಲೋತ್ತಮನಾಸುದಸನದು | ರಭ್ಯಾಸಕೆಮನಸೊಂದು ||
ಅಭ್ಯಗ್ರದಿಂಪರಿಪಡಿಸಿದನಂಬಾ | ಹ್ಯಾಭ್ಯಂತರಪರಿಗ್ರಹವ ||೧೦೩||

ಉತ್ತಮಜಿನದೀಕ್ಷೆಯು ತಳೆದಾಭಾಸು | ದತ್ತನಿರದೆಪೋಗಲಿತ್ತ ||
ಮತ್ತೆವಸಂತತಿಲಕೆಯೊಳಗಾಚಾರು | ದತ್ತನಗಲದಿರುತಿರ್ದ ||೧೦೪||

ತಂದೆತಪವಕ್ಕೈಕೊಂಡುದನಾಮನೆ | ಯಿಂದರ್ಥವೆಲ್ಲಹೋದುದನು ||
ಒಂದಿನಿಸರಿಯುದೆಯುವಳೊಲವೇ ಜೀವ | ವೆಂದುಸಂತಸಮಿರ್ದನವನು ||೧೦೫||

ಲೌಕಿಕಮುಪ್ಪಕಾರ್ಯವನಿನಿಸರಿಯದೆ | ಯಾಕಾಂತೆಯು ಮೋಹಿಸೋವೆ ||
ಆಕಾರವಾಗಿಯುವನುಕೂಪಕಂಬದ | ಕಾಕನವಾಳ್ಕೆಯೊಳಿರ್ದ ||೧೦೬||

ಇಂತುಮತ್ತಾರುವರುಷ ಪರಿಯಂತವ | ಸಂತತಿಲಕೆಯೊಡಗೂಡಿ ||
ಸಂತಸಮಿರೆತರಿಸಿದಳು ಕುಂಟಣಿಮುನ್ನಿ | ನಂತೆಷೋಡಶ ಕೋಟಿಹೊನ್ನ ||೧೦೭||

ವರುಷಗಳಿಂತುಪನ್ನೆರಡಕ್ಕೆ ಮೂವ | ತ್ತೆರಡುಕೋಟಿ ವಿತ್ತವನು ||
ತರಿಸಿಬಳಿಕ್ಕಂದಿನಂತೊಂದು ದಿನಹೊನ್ನ | ತರಹೇಳಿ ಸಖಿಯುರಕಳುಹೆ ||೧೦೮||

ಚಿನ್ನಬೆಳ್ಳಿಬಂಗಾರಗಳೆಂಬವು | ತನ್ನ ಮನೆಯೊಳಿಲ್ಲದಿರಲು ||
ಇನ್ನೇವೆಸೆಂದುದೇಯಿಲೆ ಮನೆಯುಸುಮಾರಿ | ಮುನ್ನಿಸಂದದಿಕೊಟ್ಟಳಾಗ ||೧೦೯||

ಆಮನೆಯುಸು ಮಾರಿಕೊಟ್ಟವಿತ್ತವಕೂಂ | ಡಾಮರುದಿನಕೆಳವಿಯರ ||
ಸಾಮಮಾಡಪೆಯಿಂದಿನಹೊನ್ನತನ್ನಿಮೆಂ | ದಾಮುದಿಪಾರಿಯಟ್ಟಿದಳು ||೧೧೦||

ಬರುತವರಾದೇಯಿಲೆ ಹಣವಿಲ್ಲದೆ | ವರಗೃಹವನು ಮಾರಿತನ್ನ ||
ಹಿರಿಯಣ್ಣಸಿದ್ಧಾರ್ಥನಮನೆಗಾಪೋ | ದಿರುಳೇಪೋದಳೆಂಬುದನು ||೧೧೧||

ಆಮನೆಯನುಕೊಂಡವರುಸುರಲುಕೇಳಿ | ಯಾವಾನಿನಿಯರಾಯೆಡೆಗೆ ||
ತಾಮೆಯ್ದಿಕಂಡುದೇಯಿಲೆಯಿಂದಿನಹೊನ್ನ | ನೀವಿಾವುದುನಮಗೆನಲು ||೧೧೨||

ಆನುಡಿಯನುಕೇಳಿಲಜ್ಜಿಸಿತಲೆವಾಗಿ | ಮೋನಗೊಂಡಿರ್ದತ್ತೆಯನು ||
ಮಾನಿತೆಮಿತ್ರಾವತಿತನ್ನಸೊಸೆಗಂಡು | ತಾನಿಂತೆಂದಾಡಿದಳು ||೧೧೩||

ಅತ್ತೆಯಿದೇಕೆ ನಿಮಗೆಚಿಂತೆಯಿಂದಿನ | ವಿತ್ತಮನಾನೀವೆನೆಂದು ||
ಉತ್ತಮಮಪ್ಪತನ್ನಾಭರಣವತೆಗೆ | ದಿತ್ತಳುಸಂತಸದಿಂದ ||೧೧೪||

ಆ ಉತ್ತಮಾಭರಣವಕೊಂಡುಬರಲವ | ರಾವಾರತೆಯುಸುಕೇಳಿ ||
ಭಾವೆವಸಂತತಿಲಕೆ ತನ್ನ ಮನದೊಳು | ನೋವುತಿಂತೆನುತಾಡಿದಳು ||೧೧೫||

ಜಾತಿವೇಸಿಯರು ವಿಟರ ನಿಜಸತಿಯರಿ | ಟ್ಟಾತೊಡವಿಗೆಯಾಸೆ ಮಾಡೆ ||
ಪಾತಕಮೆಂದು ತಿರುಗಿಯಟ್ಟಿದಳು ನಿಜ | ಮಾತೆಯನೆರೆಪ್ಪೈವ್ರತವಳು ||೧೧೬||

ಚಾರುದತ್ತನಮನೆಯಿಂತಂದ ಹಣಮೆಲ್ಲ | ವಿೂ ರಾಜ್ಯಮಿೂ ಪಟ್ಟಣವನು ||
ಆವೈಕೆಯುನಾವನುದಿನಮಾಡಲು | ತೀರಲರಿಯದದರಿಂದ ||೧೧೭||

ಇಂದು ಮೊದಲು ನೀವವರನು ಬೇಡುವೆ | ಪೆಂದತ್ತಲಡಿಯಿಡಬೇಡ ||
ಎಂದಾಪರಿಚಾರಕಿಯರಕರೆಸಿ ಯಾ | ಯಿಂದುವದನೆ ಮಾಣಿಸಿದಳು ||೧೧೮||

ಆ ನುಡಿಯನು ಕೇಳುತತಿಕೋಪವತಾಳು | ತಾನಂದನೆಯೆಡೆಗೆಯ್ದಿ ||
ದೀನಮಾನಸನೊಳೆ ವಿನ್ಯಾಣದಮಾತ | ತಾನಿಂತೆಂದಾಡಿದಳು ||೧೧೯||

ಚಾರುದತ್ತನ ಮನೆಯೊಳಗಿರ್ದ ಹಣವೆಲ್ಲ | ತೀರಿಹೋದುದು ಹಿರಿದಾಗಿ ||
ದಾರಿದ್ರ್ಯವೆಡೆಗೊಂಡುದವನನುಕಂಡರೆ | ಊರೆಲ್ಲ ಹೇಸುವಂತಾಯ್ತು ||೧೨೦||

ಹಣವುಳ್ಳವನೆಯಿಂದ್ರ ಹಣವುಳ್ಳವನೆ ಚಂದ್ರ | ಹಣವುಳ್ಳವನೆ ಜಯಂತ ||
ಹಣವುಳ್ಳವನೆಕಾಮ ಹಣವಿಲ್ಲದವನತ್ತ | ಹೆಣನುಕಾಣೆಲೆ ಕೇಳುಮಗಳೆ ||೧೨೧||

ಈ ಊರೊಳಗೆ ಜವ್ವನದಿಂದ ರೂಪಿಂದ | ಲಾವಣ್ಯದಿಂ ಜಾಣ್ಮೆಯಿಂದ ||
ತೀವಿದವನ್ನುಪಿಂದವಗೆ ಬಲ್ಲಿದರುಂಟು | ಭಾವಕಿವರಿಸುನೀನವರ ||೧೨೨||

ಹೊನ್ನ ಹಿರಿದುಕೊಟ್ಟವನ ತಗುಳ್ವುದು | ನನ್ನಿಯುಲ್ಲಮೆಂದಪೆಯು ||
ಮುನ್ನ ಕರೆವ ಹಸುವಿನಹಾಲು ಬೀತೊಡೆ | ಮನ್ನಿಸುವರೆ ಮುನ್ನಿನಂತೆ ||೧೨೩||

ಅಲತಗೆಯೆಸೆವ ರಸವಹಿಂಡಿದರಲೆಯ | ಎಲೆಬೀತಮರದನೆಳಲನು ||
ಹೊಲೆಗೆಟ್ಟು ಹಡೆವನೊಳೆಯುವನುಪೋಲ್ವರು | ಸಲೆವಿತ್ತವಿಲ್ಲದವಿಟರು ||೧೨೪||

ಒಲವು ಮನದೊಳಿಲ್ಲದೊಡೇನೊ ಒಲಿದಂತೆ | ಒಲಿಸಿವಿಟನವಿತ್ತವನು ||
ಸುಲಿದುಬಳಿಕ ಪೊರಮಡಿಸುವುದದುನೀತಿ | ಬೆಲೆವೆಣ್ಗಳಿಗೆಲೆಮಗಳೆ ||೧೨೫||

ತಗುಳುವುದಿದೆಪೇಳೆಯಾ ಚಾರುದತ್ತನ | ಮಗಳೆಯೆಂಬಾನುಡಿಗೇಳಿ ||
ಮಿಗೆ ನೊಂದು ಮಾರುತ್ತರವನುಡಿದಳಾ | ಬಗಸೆಗಂಗಳಭಾಮೆಯಿಂತು ||೧೨೬||

ನಿನ್ನ ವಂಶದವೇಸಿಯರು ಕಡುಚದುರೆಯ | ರುನ್ನತಿಕೆಯರೂಪಿನವರು ||
ನನ್ನಂತೆಯರು ತಮ್ಮದಿನದೊಳುಗಳಿಸಿದ | ಹೊನ್ನೇನುನನಗದನುಸುರು ||೧೨೭||

ನೀಮುನ್ನ ಹಡೆದೇರುಂಜವ್ವನದೊಳು | ಪ್ರೇಮದಿನಿನ್ನ ಭೋಜಗರು ||
ತಾವಿತ್ತಹಣ ಬಂಗಾರಮುಂಟಾದೊಡೆ | ಈ ಮನೆಯೊಳಗಿಲ್ಲದಿಹುದೆ ||೧೨೮||

ಎನ್ನೊಳೀರಗೆಯುವರೀನೆರೆಯೊಳಗಿರ್ದ | ಚೆನ್ನೆಯರತಿಚತುರೆಯರು ||
ಸನ್ನುತಮಪ್ಪಜವ್ವನೆಯರುಗಳಿಸುವ | ಬಿನ್ನಾಣವತೋರೆನಗೆ ||೧೨೯||

ಬರಿದೆ ಜನನಿಯೇತಕೆನುಡಿದಪೆನಾ | ಡರಿಕೆಯತನ್ನ ಸಿರಿಯನು ||
ಪಿರಿದು ನನಗೆಕೊಟ್ಟೊಲಿದೊಲಿಯಿಸಿಕೊಂಡ | ನೆರೆಚೆಲುವನಬಿಡೆನೆಂದು ||೧೩೦||

ಕೋಟಿಮೂವತ್ತೆರಡರ್ಘಮನಿತ್ತನ | ಮೀಟೆನಿಸಿದರೂಪಯುತನ ||
ಬೇಟವರಿದು ಸವಿಯಾವವನನುನಿ | ರ್ಘಾಟಿಸೆಂದಿಂತುಪೇಳುವರೆ ||೧೩೧||

ಅವನಿತ್ತಹಣವವೆಚ್ಚಿಸುವುದಕವನಿತ್ತ | ನವಮಣಿದೊಡವಿಡುವುದಕೆ ||
ಅವನಿತ್ತುಡುಗೆಯುಡುವುದಕ್ಕೆಂದಿಗೆ | ಸವೆವುದೆಮ್ಮಯಪೀಳಿಗೆಗೆ ||೧೩೨||

ಸಮರೂಪಸಮಯೌವನಸಮಚತುರತೆ | ಸಮಭೋಗಬಲಸಮಸೋಲ ||
ಸಮರತಿಸಮಸುಖಿಗಳನಗಲಿಸುವುದು | ಕ್ರಮವೆ ಹೆಂಗಳಹೆತ್ತವರಿಗೆ ||೧೩೩||

ಪಿರಿದು ನಿಷ್ಕಪಟವಿಮೋಹದಸತಿಯನು | ನೆರೆವನೆನವಕೋವಿದನು ||
ಬೆರಕೆನೇಹವಮಾಡುವಾತನವನು ನರ | ಗುರಿಯಹಕೇಳಲೆ ಜನನಿ ||೧೩೪||

ನೆನಹನೊಲ್ಮೆಯೊಳಾಳಿಸಿಕೊಂಡವನನು | ಮನವಿತ್ತುಬೆರಸುವಾತನನು ||
ತನಿಸೊಗಸಿಗೆ ಸೊಗಸನು ಸಂಧಿಸುವನನು | ಇನಿಸಗಲ್ದೆಂತುಜೀವಿಪೆನು ||೧೩೫||

ಸೋಲದ ಸೊಗಸನಳ್ಕಿರ್ದೆಯೊಳು ತೀವಿದ | ಲೋಲುಪತೆಯೊಳ್ಗುಳಿಸಿದ ||
ಲೀಲೆಗಾರನನಾಲಯದಿಂದತಗುಳಿದ | ಬಾಲೆಗೆಬರದೆಪ್ಪವಾದ ||೧೩೬||

ಒಲುಮೆಯಸೋಲತಲೆಯ ಹಿಡಿದವನನು | ಸಲೆನೇಹದೊಳಗಾಳ್ವನನು ||
ಗೆಲವುಮನದೊಳಳ್ಕನಿತಿಲ್ಲದವನನು | ತೊಲಗಿನಾನೆಂತುಜೀವಿಪೆನು ||೧೩೭||

ಒಲವೆಯೊಡಲಬಾಳುವೆಗೆ ಜೀವನವಾದ | ಒಲವೆಜೀವಕೆಮುಕ್ತಿಯಾದ ||
ಒಲವೆಜೀವನವೆಂಬಲತೆಗೆ ಯೆಡರ್ಪಾದ | ಲಲನೆಗಹುದೆ ಬೇರೆಬಿನದ ||೧೩೮||

ಗೆಲುವನೊಬ್ಬರಮನಸಿನೊಳು ಕಾಣಿಸಿತಿಲ್ಲ | ಒಲುಮೆಹಿರಿದುಕಿರಿದಿಲ್ಲ ||
ಬಲುಮೆಯೆಂಬುದು ಬಗೆಯೊಳಗೊಂದಿನಿಸಿಲ್ಲ | ತೊಲಗಿನಾನಸುಗೊಂಬುದಿಲ್ಲ ||
ಪಿರಿದುಮೋಹವನನವರತಮಾಡುವನನು | ಸಂಸವಿಯೊಳುಕೂಡುವನನು ||
ಹರಣವನುರೆ ನೆರೆಪಿಡಿದಬಲ್ಲಹನನು | ಕರೆಯದೊಡೆಂತುಜೀವಿಪೆನು ||೧೪೦||

ಒಲಿದುಒಲಿಸಿಕೊಳ್ಳಬಲ್ಲರಸಿಕನನು | ಸಲುಗೆಯನಲಿಸುವಾತನನು ||
ಕಲೆಯುನೆಲೆಯುನರಿವೊಸೆದು ಕೂಡುವನನು | ತೊಲಗಿನಾನೆಂತುಜೀವಿಪೆನು ||೧೪೧||

ಅಗಣಿತಮಪ್ಪವಸ್ತುವನಿತ್ತವಸನು | ಸೊಗಯಿಪಮಣಿಭೂಷಣವನು ||
ಬಗೆಗುಂದದೆಕೊಟ್ಟ ಚಿಂತಾಮಣಿಯನು | ತಗುಳೆಂಬರೆ ತಾಯೆನೀಸು ||೧೪೨||

ಭೋಗಮತ್ತವನಿಂದತಿಪಿರಿದಾದುದು | ಶ್ರೀಗೆಣೆಯೈಸಿರಿಯಾಯ್ತು ||
ರಾಗದೇಳಿಗೆವುಸಗೆಲ್ಲ ಕೊದವಿದುದು | ಈಗಲವನನೂಂಕಲಾಯ್ತು ||೧೪೩||

ಮಳೆಯುತನಿಗೆ ಬಾಯ್ಬಿಡುವ ಚಾತಕಪಕ್ಷಿ | ಕೊಳಕುನೀರನು ಸೇವಿಸುವುದೇ ||
ತುಳಿಲಾಳಿಗೆಕೈವಶವಾದ ಸುದತಿಯು | ರಳಿಪಿಟರಿಗೆ ಮೋಹಿಸುವರೆ ||೧೪೪||

ಹೊನ್ನ ತಗಡಮೇಲೆ ಹೊಳೆವಮಾಣಿಕವುಕ | ಬೊರ್ನೊಳಗತಿರಂಜಿಪುದೆ ||
ಚೆನ್ನ ಗಂಡರೊಳು ರಂಜಿಪಳತಿಕೂರಾಳ | ಸನ್ನಿಧಿಯೊಳುಸೊಗಯಿಪಳೆ ||೧೪೫||

ಕರುಣವಿಲ್ಲದೆಮೋಹಕೆ ಕಂಟಕಿಯಾಗಿ | ಪಿರಿದುನಿಗ್ರಹಿಸಲು ನೀನು ||
ಹರಣವಬಿಟ್ಟಬಳಿಕ ನಾಸುಬಿಡುವೆಸು | ಸರಸಕಲಾಕೋವಿದನ ||೧೪೬||

ಎಂದುನುಡಿದವುುಗುದೆಯುವಾತಿಗೆ ಮನ | ಸೊಂದಾಬಳಿಯಿಂದೆಳ್ಳು ||
ಬಂದಾಕಿನಿತಾಕ್ರೃತಕವಾಸಸೆಯಾಗಿ | ಯೊಂದಾನೊಂದು ದಿನದೊಳು ||೧೪೭||

ಎಳೆನೀರಿನೊಳು ಸೊಕ್ಕುವ ಮದ್ದನೊಡಗೂಡಿ | ಕಳುಹಲಂದಾಕಾದಲರು ||
ಎಳಸಿಪಾನವಮಾಡಲಾ ಸೊಕ್ಕುಪೂರಿಸಿ | ಬಳಿಕವ್ಯೆಮರೆದೊರಗಿದಲು ||೧೪೮||

ಇಂತುವ್ಯೆಮರೆದ ಸೊಕ್ಕಿಂದೆಚ್ಚರದೆವ | ಸಂತತಿಲಕೆಯೊಡಗೂಡಿ ||
ಕಂತುಸದೃಶಚಾರುದತ್ತನಿರಲುತನ | ಗಿಂತಿದೆ ವೇಳೆಯೆಂದವಳು ||೧೪೯||

ಆರುವುರಿಯುದಂತವನ ಕಂಬಳಿಯೊಳ | ಗಾರಾತ್ರಿಯ ಮಧ್ಯದೊಳು ||
ಆರಯ್ಯದೆ ಕಟ್ಟಿಸಿಹಾಕಿಸಿದಳಾ | ಊರಚೌವಟದ ತಿಪ್ಪೆಯೊಳು ||೧೫೦||

ಅಲ್ಲಿಕಿರಿದುಹೊತ್ತು ಮೈಮರೆದಿದರ್ಾ | ಮೆಲ್ಲನೆಸೊಕ್ಕು ತಿಳಿಯಲು ||
ಸಲ್ಲೀಲೆಯಿಂದಾಕರುವಾಡದಮೇಲೆ | ಸಲ್ಲಳತೋಳ ತೆಕ್ಕೆಯೊಳು ||೧೫೧||

ಸಂದಸುಖದೊಳೊರಗಿರ್ದನನಿಲ್ಲಿಗೆ | ತಂದುಹಾಕಿದರಾರೆಂದು ||
ಕಂದರ್ಪರೂಪನೆಣಿಕೆಮಾಡಿ ಬಳಿಕ | ಲ್ಲಿಂದ ಕಡೆಯರಾತ್ರಿಯೊಳು ||೧೫೨||

ತನ್ನ ಮನೆಯಬಾಗಿಲ್ಗೆಯ್ದುತಿರಲಾ | ಮುನ್ನ ಮನೆಯ ಕೊಂಡವರು ||
ನಿನ್ನ ಜನನಿನಮಗೀಮನೆಯನು ಮಾರಿ | ನಿನ್ನಮಾವನ ಮಂದಿರಕೆ ||೧೫೩||

ಏಳೆಂಟುದಿನದೊಳು ಪೋದಳೆಂಬಾಮಾತಂ | ಗೇಳಿ ಪಿರಿದುದುಃಖವನು ||
ತಾಳಿಯುಕ್ಕಟವಿಧಿಯೇಯೆಂದಾಮಾವ | ನಾಲಯಕಂಬೈದಿದನು ||೧೫೪||

ಜನನಿಗೆರಗಿವಾವಗೆಯಭಿವಂದಿಸಿ | ಧನತೀರಲಾ ತನ್ನತಂದೆ ||
ಬಿನದೀಕ್ಷೆಯಕೊಂಡುದನು ಮನೆಯನು ಮಾರಿ | ದನಿತನೆಲ್ಲವನು ಕೇಳಿದನು ||
ಅನಿತರೊಳಾ ನಿಜಸತಿಮಿತ್ರಾವತಿ | ವನಜವಿಲೋಚನೆ ಬಂದು ||
ಇನಿಯನಮೈಯಹತ್ತಿದ ತಿಪ್ಪೆಯಧೂಳ | ನನುರಾಗದಿಂದ ತೊಡೆದಳು ||೧೫೬||
ಬಳಿಕಮೈಮರ್ದನ ಮಜ್ಜನಭೋಜನ | ಗಳನತ್ಯಾಸಕ್ತಿಯಿಂದ ||
ಲಲನಾಮಣಿಮಾಡೆ ಕಂಡತಿಸಂತಸ | ದಳೆದನು ವೈಶ್ಯಕುಮಾರ ||೧೫೭||
ಜನನಿಯಮೊಗನೋಡಿ ಎಲೆತಾಯೆನನ್ನಿಂದ | ನಿನಗೀಯಂದದವಸ್ಥೆ ||
ಜನಕಗೆದೀಕ್ಷಾವಿಧಿಯಾಯಿತೀ ದು | ರ್ಜನವ ನಾನೆಂತುನೀಗುವೆನು ||೧೫೮||
ಮುನ್ನ ಕೆಡಿಸಿದ ವಿತ್ತಕೆವಾಸಟಿಯಾಗಿ | ಚೆನ್ನಾಗಿಪರದುಗೆಯ್ದಾನು ||
ಸನ್ನುತನಾದಲ್ಲದೆ ಮನೆವೊಗೆನೆಂ | ದುನ್ನತಿಕೆಯ ಭಾಷೆಮಾಡಿ ||೧೫೯||
ಈತೆರದಿಂದಾಚಾರುದತ್ತನು ನಿಜ | ಮಾತೆಯೊಳಾಡಿದಮಾತ ||
ನೀತಿನಿಪುಣಸಿದ್ಧಾರ್ಥನರಿದುಚಾರು | ಮಾತೃವಬಳಿಗೆಯ್ತಂದು ||೧೬೦||
ಅಣ್ಣಿಗನಾನಲ್ಲ ನಿನ್ನಸೋದರಮಾವ | ನನ್ನೊಳು ಪದಿನಾರುಕೋಟಿ ||
ಹೊನ್ನಿದೆಯದನುಕೈಕೊಂಡುಭೋಗಿಸುನೀನು | ಮುನ್ನಿನಂದದೊಳು ಚೆನ್ನಾಗಿ ||
ಎನಗೆಗಂಡುಮಗನಾಗಿ ಮಿತ್ರಾವತಿ | ತನುಜೆಯವಳು ನಿನ್ನರಮಣಿ ||
ಅನಿತರಿಂದಾವೊಡವೆಗೆ ನೀನೇಕರ್ತ | ನೆನಲಾನುಡಿಗಿಂತುನುಡಿದ ||೧೬೨||
ತಂದೆಗಳಿಸಿದವಿತ್ತವನುಕೆಡಿಸಿ ತನ್ನ | ಮಂದಿರವನುಮಾರುಗೊಟ್ಟು ||
ಬಂದುಮಾವನಮನೆಯೊಡವೆಗೊಡೆಯನಾಗಿ | ನಿಂದನೆಂಬಪಕೀರ್ತಿಯನು ||೧೬೩||
ತಳೆದುಜೀವಿಪನಲ್ಲವದರಿಂದ ಪರಮಂ | ಡಲಕೆಯ್ದಿಬಹುವಿತ್ತವನು ||
ಗಳಿಸಿಬಂದೊಡೆ ನಿನ್ನಜಾವಮಾತ್ರವಲ್ಲದೊ | ಡಿಳೆಗೆ ನಾನೇಭಾರಕನು ||೧೬೪||
ಇದಕೆಸಂಶಯವೇತಕೆಮಾವ ಎನಲೆಂದ | ನದುಲೇಸಾವ್ಯವಹರಕೆ ||
ಮೊದಲಬಂಡವಕೊಂಡುಪರದುಗೆಯ್ಯೆನಲಂ | ತದಕೆಮುಗುಳ್ನಗೆನಗುತ ||೧೬೫||
ಪರದುಗೆಯ್ವೊಡೆಬಂಡಮೊದಲ-ಬೇಡುವನವ | ಪರದರಮಗನೆನೆಂಗರಕೆ ||
ನೆರವಹಾರುವನವವಿಕ್ರಮಿಯೇಯೆಂದು | ಪರಮಾರ್ಥವೆಂದೊಡಂಬಡಿಸಿ ||೧೬೬||
ಮಾತೆಯಮೃದುಪದಯುಗಕೆವಣೆದು ನಿಜ | ಮಾತುಳನಡಿಗೆಟ್ಟಹಣೆಯ ||
ಪ್ರೀತಿಯಿಂಮಿತ್ರಾವತಿಯನಂತೈಸಿವಿ | ಖ್ಯಾತನವ್ಯಗ್ರಹೃದಯನು ||೧೬೭||

ಪೊರಮಟ್ಟುಮನೆಯುಸು ದಕ್ಷಿಣದೆಸೆಗಾಗಿ | ಕಿರಿದುದೂರಕೆನಡೆತಪ್ಪ ||
ಮರುದಿನದೊಳು ಮಾತುಳಸಿದ್ಧಾರ್ಥನು | ಮರುಕದಿಬಂದುಕೂಡಿದನು ||೧೬೮||

ಸಿದ್ಧಾರ್ಥನತಿಸಿದ್ಧಪುರುಷಾರ್ಥನಾಸುಪ್ರ | ಸಿದ್ಧಸುಚಾರುದತ್ತಸೊಳು ||
ಒದ್ಧನಾಗಲುತಾವಿರ್ವರುನಡೆದೊಂ | ದುದ್ಧತವನವನೆಯ್ದಿದರು ||೧೬೯||

ಆವಸದೊಳು ದಿವ್ಯಮೂಲಿಕೆಗಳಕಿಳ್ತು | ತಾವಿರ್ವರುಪೊರೆಗಟ್ಟಿ ||
ಓವದೆಪೊತ್ತುಪಲಾಶವೆಸರ್ವಡೆ | ದಾ ಊರಿಗಿರದೆಯ್ದಿದರು ||೧೭೦||

ಆದರೊಳದನುವಿಕ್ರಯಮಾಡಿ ಬಳಿಕಾ | ಮೊದಲಂಜವಳಿಯುಕೊಂಡು ||
ಅದನೊಂದುಮನೆಯೊಳಗಿರಿಸಲಂತದು ಬೇಯು | ಲದಕೆ ವಿಸ್ಮಯಚಿತ್ತರಾಗಿ ||೧೭೧||

ಪುತ್ತಿಕೆಲರುಪರದರಕೂಡಿಯಾವ್ಯ | ಶ್ಯೋತ್ತಂಸನೊಂದುಪರ್ವತದ ||
ತುತ್ತತುದಿಯನೇರಿಯಾಗುಹೆಯೊಳಗ | ತ್ಯುತ್ತಮನುಪ್ಪರತ್ನವನು ||೧೭೨||

ಅಗೆದುಪೊರೆಯುನವರೊಳುಕಟ್ಟಿಸಿಕೊಂಡು | ವಿಗೆಹರಿಸದಿಬಪ್ಪಾಗ ||
ನಗದಬೇಡರುದಾರಿದಾಗಲವರನು ಸಾ | ಸಿಗನೆಬ್ಬಟ್ಟಿಯೋಡಿಸುತ ||೧೭೩||

ಮತ್ತೊಂದುಪುರಕೆಯ್ದಲದರೊಳು ವಾಸವ | ದತ್ತನೆಂಬೋರ್ವನುಕಂಡು ||
ಚಿತ್ತಶುದ್ಧಿಯೊಳಿದಿರ್ವಂದತಿಸಮ್ಮದ | ವೆತ್ತುಮನೆಗೆಕೊಂಡುಪೋಗಿ ||೧೭೪||

ಸದುವಿನಯದೊಳತ್ಯುಪಚಾರವಮಾಡಿ | ತದನಂತರದೊಳವರಿಗೆ ||
ಒದವಿದವಸ್ಥೆಯೆಲ್ಲವಕೇಳಿಮನದೊಳು | ಬೆದಬೆದೆಬೇವುತಿಂತೆಂದ ||೧೭೫||

ಸನ್ನುತಗುಣಭೂಷಣಚಾರುದತ್ತಕೇ | ಳ್ನಿನ್ನ ಜನಕಭಾನುದತ್ತ ||
ಎನ್ನೊಳಗೆರವಿಲ್ಲದಿರ್ಪನಂತದರಿಂ | ದೆನ್ನ ಮನೆಯುವಿತ್ತವನು ||೧೭೬||

ತೆಗೆದುಕೊಳ್ಳೆನಲಿಂತೆಂದನು ಜಲಯಾ | ತ್ರೆಗೆತಕ್ಕುದ್ಯೋಗವನು ||
ನೆಗಳಿಸಿಮೆನೆಪಡಗಿನಸಮಕಟ್ಟಿನು | ಜ್ಜುಗವನೆಸಗಿಕೊಟ್ಟನಾಗ ||೧೭೭||

ತವಕದಿನಂದಾಜಲಯಾತ್ರ್ಯಾವಾ | ತ್ರವನೇರಿಯಾಶರಧಿಯೊಳು ||
ಸುವಿವೇಕಿನಡೆದುಬಂದೊಂದುತ್ತಮದ್ವೀ | ಪವನಾರಿ ಚತುರತೆಯಿಂದ ||೧೭೮||

ತನ್ನವಶದೊಳಿರ್ದವಸ್ತದಮೊದಲಿಂ | ಚೆನ್ನಾಗಿಬೆವಹಾರಮಾಡಿ ||
ಪನ್ನೆರಡಬ್ದಕಳೆವಪರಿಯಂತರ | ತ್ಯುನ್ನತಮಪ್ಪವಸ್ತುವನು ||೧೭೯||

ಮುನ್ನಕೆಡಿಸಿದವಿತ್ತಕೆಪಾಸಟಿಯಾದ | ಹೊನ್ನಗಳಿಸಿಹಡಗೇರಿ ||
ಮುನ್ನೀರಬಟ್ಟೆಯೊಳಗೆಬರುತಿರಲಾ | ಮುನ್ನಿನಕೃತಪಾಪಫಲದಿ ||೧೮೦||

ಪ್ರಳಯುಪವನನಂದದಿನೊಂದುಸುಂಟುರೆ | ಸುಳಿದಾಭೈತ್ರಪನಿರದೆ ||
ತಳಹೊಳಗೊಳಿಸಿಮತ್ತಾಕೂವಕಂಬವು | ಸುಳಿಯಾದೆಪುುರಿದುಹಾಕಿದುದು ||
ಹದಗೊಡೆದಾವೇಳೆಯುಗಂಡುನಾಮುಂದು | ಹಡೆದದುರಿತವಶವೆುನುತ ||
ಕಡುಗಲಿಯಾಚಾರುದತ್ತನು ಸಿದ್ಧಾರ್ಥ | ನೊಡಗೂಡಿ ನಿಶ್ಚಲನಾಗಿ ||೧೮೨||
ಹಿಡಿದುಪ್ರಮಾದಫಲಕವನು ಬೇಗದಿ | ಕಡಲೊಳು ಬೀಳ್ದಿಯ್ದುರುತ ||
ದೃಢಧೀರ ಚಾರುದತ್ತನದೊಂದು ಕುರುವದ | ಕಡೆಗಾಗಿಸೇರದನಾಗ ||೧೮೩||
ಐಯೆಡೆಯೊಳು ಮೂರುದಿನತಡಗೈದಾ | ವಾಯುುವಶದಿನಲ್ಲಿಂದ ||
ಒಯ್ಯಾರದಿಂಬಂದು ಶಂಬರಿಯೆಂಬೂರ್ಗೆ | ಕಾಮುಜನಿಭನುಸೇರಿದನು ||೧೮೪||
ಅದರೊಳು ಧನದತ್ತನೆಂಬವಣಿಗ್ವರ | ನಿದಿರ್ಬಂದು ಚಾರುದತ್ತನನು ||
ಸದುವಿನಯದೊಳೊಡಗೊಂಡು ಮನೆಗಪೋಗಿ | ಒದವಿದ ಸತ್ಕಾರದಿಂದ ||೧೮೫||
ಹಿಂದೆ ನಿಮ್ಮಯ್ಯನೆನ್ನೊಳು ತನ್ನಾಪತ್ತಿ | ಗೆಂದು ಷೋಡಶಕೋಟಿಹೊನ್ನ ||
ತಂದಿರಿಸಿದನದರೊಳು ಮೊನ್ನೆ ಸಿದ್ಧಾರ್ಥ | ಬಂದೆಂಟುಕೋಟಿವಿತ್ತವನು ||೧೮೬||
ಕೊಂಡುಚಂಪಾಪುರಕೆಯ್ದಿದನುಳಿದುದ | ಕೊಂಡು ಸೀನೆಯ್ದುನಬಾಗ ||
ಗಂಡುಗಳರಸನಾಚಾರುದತ್ತನು ಮನ | ಗೊಂಡಾವಸ್ತುವತರಿಸಿ ||೧೮೭||
ಆನಾಡೊಳಗಿರ್ದಬಸದಿಗಳೆಲ್ಲಕೆ | ದಾನಶಾಲೆಗೆವೆಚ್ಚವನು ||
ಸಾನುರಾಗದಿಮಾಡುತಿರೆ ಪೊಗಳಿದುದು ಮ | ತ್ತಾನಗರಿಯುಜನವೆಲ್ಲ ||೧೮೮||
ಒಡವೆಯುಕೆಡಿಸಿ ಮನೆಯುಮಾರಿ ಪರದೇಶ | ವಡೆದು ಒಳಿಕಹಡಗೊಡೆದು ||
ಕಡುಗೇಡುವಡೆದು ಬಳಿಕ ವಿಾಪಗುಣವನು | ಬಿಡದಾದನಾಚಾರುದತ್ತ ||೧೮೯||
ಎಂದು ನಗರಿಯೆಲ್ಲಮೆಲ್ಲನುಲಿವುತಿರ | ಲಂದಾತನಪಿತರಣದ ||
ಅಂದವನೀಕ್ಷಿಪೆನೆಂದು ವೀರಪ್ರಭ | ನೆಂದೆಂಬಯಕ್ಷನದೋರ್ವ |೧೯೦||
ಆಊರಪೊರಪೊಳಲೊಳಗೆರಂಜಿಸುವಚಿ | ನಾವಾಸದಮಂಟಪದೊಳು ||
ತೀವಿದವೈಕುರ್ವಣದಿಂದ ಬಲ್ಗ್ರಹ | ವಾಪರಿಸಿದಮೂಕೈಯೊಳು ||೧೯೧||
ಕೆಡದಿರ್ದಮತ್ತೊರ್ವನನು ನಿರ್ಮಿಸಿಯೂರ | ಕಡೆಗಾಗಿ ಕಳುಹಲಾದವನು ||
ಕಡುವೇಗದಿಬಂದು ನೆರೆದಿರ್ದಪುರಜನ | ದೊಡನಿಂತೆಂಬಾಡಿದನು ||೧೯೨||
ಎನ್ನೊಡೆಯನು ವಿಕ್ರಮಾಂಕನೆಂಬಾತನು | ನಿಮ್ಮೂರ ಬನದಬಸದಿಗೆ ||
ಷಮ್ಮದದಿಂಬರಲವನನುಬಲ್ಗ್ರಹ | ನೆಮ್ಮಿಹುದತಿವೇಗದೊಳು ||೧೯೩||

ಆದುಮಾನವರಕ್ತವಬಲಿಯನು ಬೇಡು | ತ್ತದೆಯಡತಡೆಯದೆಕೊಡುವ ||
ಅಧಟರಂಟೆಯೆಂಬನುಡಿಗೇಳಿ ಪುರಜನ | ವೊದವಿದಮೌನದೊಳಿರಲು ||೧೯೪||

ಆನುಡಿಯನು ಕೇಳಿಹರುಷಹೃದಯನಾಗಿ | ಭೂನುತನಾಚಾರುದತ್ತ ||
ತಾನವನೊಡಗೂಡಿಯಾವಿಕ್ರಮಾಂಕನಿ | ರ್ದಾನಂದನಕೆಯ್ದಿದನು ||೧೯೫||

ಬಸದಿಗೆಬಂದು ನಿರ್ಭರಭಕ್ತಿಯಿಂದಾ | ಕುಸುಮಕೋದಂಡಮರ್ದನನ ||
ಒಸೆದುವಂದಿಸಿಪಲತೆರದಿಂದಪೂಜಿಸಿ | ಯುಸವಸದಿಂಪೊರಮಟ್ಟು ||೧೯೬||

ಬಲತಾಗ್ರಹವಾವರ್ತಿಸಿದಾತನ | ಪಿರಿದುಕರುಣದಿಂದನೋಡಿ ||
ವರಮಂತ್ರತಂತ್ರಯಂತ್ರಂಗಳಸತ್ವಾ | ದರದಿಮಾಡಲು ಬಿಡದಿರಲು ೧೯೭||

ಆದರಿಂದಿವನಸುವನುಕಾವೆನೆಂದಾ | ಸದಮಲಗುಣಿ ತನ್ನಬರಿಯ ||
ಪಡೆದುತಿವಿದುಕೊಂಡಾತನ್ನರಕ್ತವ | ನದಿರದೆ ಬಲಿಗೊಟ್ಟನಾಗ ||೧೯೮||

ಆವೇಳೆಯೊಳಾಗಾಯಸೊರಗಿಮೂರ್ಛೆ | ಯಾವರಿಸಲು ನೆಲಕೊರಗಿ ||
ಆ ವೀರವಿತರಣಗುಣಮಣಿಭೂಷಣ | ನಾವಿಧಿಯನು ನಡೆನೋಡಿ ||೧೯೯||

ಅನಿತರೊಳಾದೇವನಾವಿಗುರ್ವಣೆಯನೊಂ | ದಿನಿಸುವೇಗದಿಪರಿಹರಿಸಿ ||
ಅನುರಾಗದಿಂಬಂದಾಚಾರುದತ್ತನ | ಘನತರಮಪ್ಪಮೂರ್ಛೆಯನು ||೨೦೦||

ಪರಿಹರವಮಾಡಿ ಬಳಿಕ ಗುಣನಿಧಿಯಕಿ | ಬ್ಬರಿಯಗಾಯವ ಮಾಣಿಸುತ ||
ಉರುಮುದದಿಂತನ್ನದಿವ್ಯರೂಪವತೋರಿ | ಪಿರಿದುಮೆಚ್ಚುತ್ತಾದೇವ ||೨೦೧||

ಪುರುಷಾರ್ಥಮಾಗಿತನುವನಿತ್ತುತ್ತಮ | ಪುರುಷ ನಿನಗೆ ಭೂತಳದೊಳು ||
ಸರಿಯಪ್ಪವರನು ಕಾಣೆನೆನುತ ನುಡಿ | ದರಲಮಳೆಯನುರೆಕರೆದು ||೨೦೨||

ಹೊನ್ನಮಳೆಯನು ಸುರಿದು ಬಳಿಕಾದೇವ | ನುನ್ನತಗುಣಿಬೀಳ್ಕೊಂಡು ||
ತನ್ನನೆಲೆಗೆಪೋಗಲಿತ್ತ ಸೌಭಾಗ್ಯನಂ | ಪನ್ನನಲ್ಲಿಯಕಾಂಚನವನು ||೨೦೩||

ನಾಡುಬೀಡಿನೊಳುಳ್ಳವರದಾರಿದ್ರ್ಯವೆ | ಲ್ಲೋಡುವಂದದಿದಾನಗೆಯ್ದು ||
ರೂಢಿವಡೆದುತತ್ಪುರದಿಂಬಂದೊಂದು | ಕಾಡೊಳು ತಾಪಸಾಶ್ರಮಕೆ ||೨೦೪||

ಬರಲಲ್ಲಿಲೋಹಿತಾಂಬಕನೆಂಬಪನೋರ್ವ | ಗೊರವನೀಕ್ಷಿಸಿ ತನ್ನಮನೆಗೆ ||
ಪುರುಷನನೊಡಗೊಂಡುಬಂದು ಬಳಿಕಮುಪ | ಚರವಮಾಡುತಮಿಂತುನುಡಿದ ||

ಮನಸಿಜನಿಭರೂಪ ಚಾರುದತ್ತನೆಕೇಳ್ | ನಿನಗೊಂದುರಸವಿದ್ಯೆಯುಂಟು ||
ಅನುವಾಗಿಯದನೆನಗುವರೆ ಸಹಾಯಿಗ | ಳನುಕಾಣೆನಾನಿಂದುವರ ||೨೦೬||

ಎನೆಚಾರುದತ್ತನಿಂತೆಂದನೀವಿದ್ಯೆಗೆ | ಮನದೆಗೊಂಡೊಡಗೂಡುವೆನು ||
ನಿನಗೆಂಬಾನುಡಿಯನುಕೇಳಿ ಹರುಷದಿ | ಮನೆಯಿಂಪೊರಮಟ್ಟುಬಂದು ||೨೦೭||

ಉರುತರಮಪ್ಪೊಂದುಕೂಪದಲ್ಲಿಗೆಬಂದು | ವರಸಿದ್ಧರಸಮಿದರೊಳಗೆ ||
ಪರಿಪೂರ್ಣವಾಗಿದೆಯಿದನು ತೆಗೆಯಬೇಕು | ತರುಣನೀಪೊಗುವೊಡಸಾಧ್ಯ||೨೦೮||

ನೀನಿಲ್ಲಿರು ನಾನೀಕೂಪವಹೊಕ್ಕು | ವಾನಿತಮಪ್ಪೀರಸವ ||
ಆನದೆತಹೆನೆಂಬುದಕೇಳಿ ನಸುನಕ್ಕು | ನಾನೆಹೋಗುವೆನೆಂದೆನಲು ||೨೦೯||

ಆನುಡಿಗತಿಹರ್ಷಿತನಾಗಿ ಭೌತಿಕ | ತಾನಿಂತೆಂದಾಡಿದನು ||
ಈ ನೇಣುವಿಡಿದು ಬಾವಿಯಹೊಕ್ಕುರಸದೊಳು | ನೀನಿನ್ನ ಕೈಗಳನಿಡದೆ ||೨೧೦||

ಸುರುಚಿರವಪ್ಪಾಸಿದ್ಧರಸವನೀ | ಸೋರೆಗುಂಡಿಗೆಯೊಳುತುಂಬಿ ||
ಕರತಳವನುಸೋಂಕಿಸದೀಹಗ್ಗಕೆ | ಭರದಿಂದ ಕಟ್ಟಿಯಲುಗಲು ||೨೧೧||

ಒಂದುಸೂಳೀಸಿದ್ಧರಸವತೆಗೆದು ಮ | ತ್ತೊಂದುಸೂಳೀಹಗ್ಗವನು ||
ಕಂದರ್ಪನಿಭನಿನಗಿಳಿಯಬಿಡುವೆನಿದ | ರಿಂದವೋಲಕೆ ನೀನೆಯ್ದು ||೨೧೨||

ಎನಲಾವಾತನುಕೇಳಿಯಂತೇಗೆಯ್ದು | ನೆನುತಾಹಗ್ಗವಹಿಡಿದು ||
ಅನುವಾನಿನದಾ ಘನಕೂಪವಹೊಕ್ಕು | ಇನಿಸುವೇಗದೊಳತಿಮುದದಿ ||೨೧೩||

ಗೊರವಹೇಳಿದಮಾಳ್ಕೆಯೊಳಾರಸವನು | ಸೊರೆಯಗುಂಡಿಗೆಯೊಳುತುಂಬಿ ||
ಭರದಿಂದಾಹಗ್ಗದತುದಿಯೊಳುಕಟ್ಟಿ | ಪಿರಿದಾಗಿಯಲುಗಾಡಿಸಿದನು ||೨೧೪||

ಆ ನೇಣನುತೆಗೆದಾರಸವನುಕೊಂ | ಡಾನೆಲೆಯಿಂದಾಪಾಪಿ ||
ಆನದೆಪೋಗಲೊಂದೆರಡುಗಳಿಗೆಯೊಳ | ಗಾನೇಣುಬರದಿರೆಕಂಡು ||೨೧೫||

ಕ್ಷುದ್ರಹೃದಯಭೌತಿಕನೀಗಲೆನ್ನನು | ಛಿದ್ರಿಸಿಪೋದನೆಂದೆನುತ ||
ಅದ್ರಿಸಮಾನಧೈರ್ಯನಂದಾಶಾಂ | ತೋದ್ರೇಕಮಾನಸನಾಗಿ ||೨೧೬||

ಹೊರಡಬಾರದಬಾವಿಯೊಳೆನ್ನನುಬಿಟ್ಟು | ಗೊರವಹೋದನದರಿಂದ ||
ಮರಣವಲ್ಲದೆನನಗುಳುವಿಲ್ಲೆಂದುರು | ತರಶಾಂತರಸಚಿತ್ತನಾಗಿ ||೨೧೭||

ಹಿಂದೆನಾನೆಸಗಿದದುಷ್ಕರ್ಮದಫಲ | ದಿಂದೀವಿಧಿಯಾಯಿತೆನಗೆ ||
ಮುಂದಕೆ ಸದ್ಗತಿಯನುಸಾಧಿಸುವೆನೀ | ಯಂದದೊಳೆಂದುಭಾವಿಸುತ ||೨೧೮||

ಇನ್ನತಿಹಿತಮಪ್ಪಸನ್ಯಸನಮನಾನು | ಚೆನ್ನಾಗಿಧರಿಸಿ ದೇಹವನು ||
ಛಿನ್ನವಮಾಡಿ ಬಳಿಕಸಾಧಿಸುವೆನು | ಸನ್ನುತಮಪ್ಪಸದ್ಗತಿಯ ||೨೧೯||

ಎಂದುತನ್ನೊಳುತಾನೆನುಡಿವಾಗಳಾಕೂಪ | ದೊಂದುಕಡೆಯತಿಟ್ಟಿನೊಳು ||
ಮುಂದವೀರ್ಯನಾಗಿರ್ದೋರ್ವನರನಿಂ | ತೆಂದುಕಾರ್ಯವನುಸುರಿದನು ||೨೨೦||

ಎಲೆಯಣ್ಣನೀನೀದಾರುಣಕೂಪದ | ನೆಲೆಯಿಂದಧರಣೀತಳಕೆ ||
ಅಲಸದೆಪೋಪತೆರನಪೇಳುವೆನಾನು | ತೊಲಗಿಸುನಿನ್ನ ಚಿಂತೆಯನು ||೨೨೧||

ಎನೆಚಾರುದತ್ತನಿಂತೆಂದನವನಕೂಡೆ | ನನಗೆಹೇಳುವಮಾಟವನು ||
ನಿನಗೆಮಾಡದೆ ಸುಮ್ಮನೆಯೇಕಿರ್ದಪೆ | ಯೆನಲವನಿಂತುನುಡಿದನು ||೨೨೨||

ಇಂದಿಗೆ ಮೂರುದಿವಸದೊಳು ನಿನ್ನಪೆ | ಟ್ಟಂದದಿನಾಭೌತಿಕನು ||
ತಂದೆನ್ನನೀಬಾವಿಯೊಳುಬಿಟ್ಟುಪೋದುದ | ರಿಂದಿಲ್ಲಿನಾನುಬೀಳ್ದಿರ್ದೆ ||೨೨೩||

ಪಿಂದಪ್ಪನೀರಡಿಕೆಯಿನೀರಸವನು | ಸರಸೋದಕವೆಂದುನಾನು ||
ಭರದಿಂದಪಾನವಮಾಡುವೆನೆಂದೆನ್ನ | ಕರವನೀಡುವಸಮಯದೊಳು ||೨೨೪||

ಇದರೊಳುಮುರುಟಿದವೆನ್ನೀಹಸ್ತಗ | ಳಿದರಿಂದೆನಗೆಯುಸಾಧ್ಯ ||
ಚದುರಕೇಳೀಸಿದ್ಧರಸವನೊಂದುಡುಬಂದು | ಪಡೆದುಪಾನವಮಾಡಿಕೊಂಡು ||೨೨೫

ಹೋಗುತಲಿದೆಯಂತವರಜಾಲವಹಿಡಿ | ದೀಗಳಿಗೆಯೊಳಾನೆಲಕೆ ||
ಪೋಗೆಂದುನುಡಿವುತ ಕಂಠಗತಪ್ರಾಣ | ನಾಗಲಂತವನೆಡೆಗೈದಿ ||೨೨೬||

ಭರದಿಂದಕಿವಿಯೊಳುಪಂಚಪದಂಗಳ | ನೊರೆದುಸಮಾಧಿಯನವಗೆ ||
ಹರುಷದಿಮಾಡಲವನು ಜನಿಯಿಸಿದನು | ಸುರಲೋಕದೊಳುಬಳಿಕಿತ್ತ ||೨೨೭||

ಉಡುಬಂದಾಸಕ್ತಿಯಿಂದಾರಸವನು | ಕುಡಿದುಮುಗುಳ್ದಾಬಿಲಕೆ ||
ನಡೆವಸಮಯದೊಳು ತಾನಾಬಾಲವ | ಪಿಡಿಯಲಂತದುಮೇಲಕೆಯ್ದೆ ||೨೨೮||

ಅದರಪೆಂಬಳಿಯೊಳುಬಂದೊಂದುಪುತ್ತಿನೊ | ಳದರಬಾಲಪಬಿಟ್ಟುನಿಲಲು ||
ಅದುಮೇಲಕೆಪೋಗಲಾವಲ್ಮೀಕದ | ವದನವಿಟ್ಟಿಡೆಯಾಗಲಾಗ ||೨೨೯||

ಮೇಲಕೆಬರಬಾರದಿದಕನ್ನೇವೆನೆಂ | ದಾಲಲಿತಾಂಗನಲ್ಲಿರ್ದು ||
ಆಲೋಚನೆಯನುಮಾಡುತಲಿರಲಾ | ವೇಳೆಯೊಳೊಂದಾಡುಬಂದು ||೨೩೦||

ಪುತ್ತಿನಬಾಯೊಳುಕಾಲಿಕ್ಕಲಂತದ | ನೊತ್ತಿಹಿಡಿಯಲಾಕಾಲ ||
ಕಿತ್ತುಕೊಳ್ಳಲು ಬಾರದಾಮೇಕನಿರವದು | ಚಿತ್ತಿರಲಂತದಕೇಳಿ ||೨೩೧||

ಆಡಮೇಯಿಸುವಮಕ್ಕಳುಗಳೆಲ್ಲರುಬಂದು | ಕೂಡಿತೂಯ್ದುಡೆಜಾರದಿರಲು ||
ನೋಡುವೆವಿದರೊಳಗೇನಿರ್ದಪುದೆಂದು | ತೋಡಿದರಾವಲ್ಮೀಕವನು ||೨೩೨||

ಆದರಿಂದಾಹುತ್ತಿನಬಾಯಿತೆರಪಾಗ | ಲಧಟನಲ್ಲಿಂಪೊರಮಟ್ಟು ||
ಒಡವಿದತನ್ನಾಪತ್ತಿಗೆವಿಸ್ಮಯ | ಹೃದಯನಾಗಿಬರುತಿರಲು ||೨೩೩||

ಕಡುಗೋಪದಿಂಕೊಂದಾಡುಗ್ರಿಯ ಕೈಯ | ಮಡಿದು ಬಳಿಕವುರುಃಹುಟ್ಟ ||
ಹಡೆದುಬಪ್ಪಾ ಮಹಿಷಾಸುರನೋಯೆನೆ | ನಡೆತಂದುದೊಂದು ಕಾಡ್ಗೋಣ ||೨೩೪||

ಆಲಲಿತಾಂಗನಕಂಡತ್ಯುಗ್ರದಿ | ಮೇಲುವಾಯಲೆಂದೆನುತ ||
ಕಾಲಾಂತಕನೇರುವ ಕೋಣನಂತಾ | ಭೀಳಾಕಾರವ ಹಡೆದು ||೨೩೫||

ನಡೆನೋಡಿ ಕೆಂಗಣ್ಮಿನಗಿಪರಿದುಬಂದು | ಹೊಡೆಯೆಹೊಳೆದು ಹಿಮ್ಮೆಟ್ಟಿ ||
ಕಡುದೊಡ್ಡಿತಪ್ಪೊಂದು ಹೆಬ್ಬಾವಿನಸಟ್ಟ | ನಡುಬೆನ್ನಮೆಟ್ಟಿದಾಂಟಿದನು ||೨೩೬||

ಆದಕತಿಕೋಪಾಟೋಪದಿನೇಳ್ದ ಹಾ | ವಿದಿರಾವಾ ಕೋಣನನು ||
ಅದಿರದೆನುಂಗಲಂತದಕಂಡು ದುಷ್ಕರ್ಮ | ದೊದವಿಗೆ ತಲೆತೂಗುತವೆ ||೨೩೭||

ಮುಂದೊಂದೆಡೆಯೊಳು ಪರವತೊಳೆಯುಹೊಕ್ಕು | ಮಿಂದುಮೇಲಕೆಪೊರಮಟ್ಟು ||
ಬಂದುಪಲವು ಫಲತೀವಿದನವಮಾ | ಕಂದದಡಿಯೊಳು ಕುಳ್ಳಿರಲು ||೨೩೮||

ಭರವಶದಿಂದಾ ಸಮಯಕೆಬೇಗದಿ | ಹರಿಸಖನಾದಿಯುಸಖರು ||
ಗರುವರೈವರುಗೂಡಿಯಾ ರುದ್ರದತ್ತನು | ಬರುತಿದ್ದನತಿಮುಮತೆಯೊಳು ||೨೩೯||

ಅವರಕಂಡಿದಿರೇಳ್ದಾ ಚಿಕ್ಕೈಯಗೆ | ಯುವನತನಾಗಿತನ್ನಡಿಗೆ ||
ಸವಿನಯದಿಂದೆರಗಿದನಿಜಸಖನಿವ | ಜವನುರೆಹರಸಿದನಾಗ ||೨೪೦||

ಬಳಿಕುತ್ತಮಕ್ಷೇಮ ಕುಶಲವಾರ್ತೆಯಕೇಳಿ | ಲಲಿತಾಂಗನು ತನ್ನ ಜನನಿ ||
ಲಲನೆಮಿತ್ರಾವತಿ ಮೊದಲಾದವರು ಸುಖ | ದೊಳಗೆಯಿರ್ದಪರೆಂದು ಕೇಳಿ ||೨೪೧||

ಕೋವಿದಕುಲಚಿಂತಾಮಣಿನಿನ್ನ ಸ | ದ್ಭಾವವೆತಮ್ಮತನುವಿಗೆ ||
ಜೀವವಾಗಿನೀನುಬಂದುದು ಮೊದಲಾಗಿ | ಜೀವಿಸಿಕೊಂಡಿರುತಿಹರು ||೨೪೨||

ಎನುತನುಡಿದುರುದ್ರದತ್ತಮತ್ತಿಂತೆಂದ | ನಿನನನಬ್ಬಿನಿ ನೆನವಂತೆ ||
ವನಿತೆವಸಂತತಿಲಕೆ ನಿನ್ನಬರವನೆ | ಯನುನಯದಿಂಹಾರುತಹಳೆ ||೨೪೩||

ಎನೆಚಾರುದತ್ತನವರೊಳಿಂತೆಂದನು | ದಿನಚರಿತನಗಿರದೆರಗಿ ||
ಅನುರಾಗದಿಂದುಂಬತುಂಬಿಯುಗಲೆ ಕುಮು | ದಿನಿಬಳಿಕದನು ಹಾರುವುದೆ ||೨೪೪||

ವಿಟರನಗಲಿದವಿಟೀಜನಕತಿ ಸಂ | ಕಟವುಂಟು ವಿರಹದೊಳೆಂಬ ||
ಕುಟಿಲವಚವನೆಲೇ ಚಿಕ್ಕಯ್ಯನೆ | ದಿಟವೆಂದು ನಂಬಲುಬಹುದೆ ||೨೪೫||

ಎಂದವಮಾತಿಗೆ ರುದ್ರದತ್ತನು ಹರಿಸಖ | ರೆಂದರುಸೇನುತೊಲಗಿದ ||
ಅಂದಿಂದುಳಿದವಿಟರುತನ್ನ ಸೋದರ | ರೆಂದುಭಾವಿಸಿಕೊಂಡಿಹಳೆ ||೨೪೬||

ವಿಲಸಿತವಿಟಕಿಲವಲ್ಲರಿಮದುರಿತು | ತೊಲಗಲಲರಬಿದಿರ್ವಂತೆ ||
ಲಲಿತಾಂಗನೀನಗಲ್ದುದಿಂದಾ ಕೋ | ಮಲೆತೆಗೆದಳು ತೊಡವುಗಳ ||೨೪೭||

ಕಾರಕಾಲಮನಿಶ್ಚೈಸಿ ಚಾತಕಪಕ್ಷಿ | ನೀರುಣಲೊಲ್ಲದಂದದೊಳು ||
ಧೀರಲಲಿತನಿನ್ನ ಬರವಹಾರೈಸಿ ಯಾ | ನಾರಿಯುಣಿಸನುತೊರೆದಳು ||೨೪೮||

ವಿತತವಸಂತವಲ್ಲಭನನಗಲಿಪರ | ಭೃತವಮೌನಗೊಂಡಿರ್ಪಂತೆ ||
ಅತನುಸದೃಶನೀನಗಲಿದಂದಿಂದಾ | ಸತಿಯೊಬ್ಬರೊಡನೆನುಡಿಯಳು ||೨೪೯||

ಇಂದುಬಿಂಬವನಲ್ಲದುಳಿದವಸ್ತುವ ನೋಡೆ | ನೆಂದು ಮುಗಿವಕುಮುದಿನಿಯು ||
ಅಂದದಿನಬಲೆನೀನಲ್ಲದನ್ಯರನೋಡೆ | ನೆಂದು ವ್ರತವಧರಿಸಿದಳು ||೨೫೦||

ಎಂದು ವಸಂತತಿಲಕೆಯುಂದಮುನಿ | ದ್ರಂದದಿನವರುನುಡಿಯಲು ||
ಮಂದೇತರಮುಪ್ಪ ಹರುಷಮನಾನವ | ಕಂದರ್ಪನುತಾಳಿದನು ||೨೫೧||

ತನಗೆಬಂದಾಪತ್ತನವರೊಳಗುಸುರುತ | ಜನಸುತನಲ್ಲಿಂದೆಳ್ದು ||
ಅಸುರಾಗದಿಂನಡೆತಂದಾಪಶ್ಚಿಮ | ವಸಧಿಯತಡಿಯೊಳಗೆಸೆವ ||೨೫೨||

ಬಿತ್ತರಮಾದರಜತಮೆಂಬಪರ್ವತ | ದೊತ್ತಿನಪಾರ್ಶ್ವಕಮೆಂಬ ||
ಪತ್ತನವನುಪೊಕ್ಕುಬಳಿಕಲ್ಲಿಯಾರುದ್ರ | ದತ್ತನಮುಖದಿಂದಾಗ ||೨೫೩||

ಅಲ್ಲಿಸಕಲದೇಶಭಾಷೆಗಳೆಲ್ಲವ | ಬಲ್ಲಪಾರಸಿಕನೋರ್ವನನು ||
ಸಲ್ಲೀಲೆಯಿಂದಕರೆದುಕೊಂಡವನೊಳು | ನಿಲ್ಲದಿಂತೆಂದಾಡಿದನು ||೨೫೪||

ಉತ್ತಮಮುಪ್ಪರತ್ನದ್ವೀಪಕೆಬಟ್ಟೆ | ಯೆತ್ತಮದೇಕಡೆಯಿಹುದು ||
ಮತ್ತಮದಕೆಪೋಪತೆರನೆಂತುಟದನೀನು | ಬಿತ್ತರಿಸೆನಲೆಂದನವನು ||೨೫೫||

ಆರಮ್ಯಮುಪ್ಪ ರತ್ನದ್ವೀಪಮಪರಾಂ | ಭೋರಾಶಿಯನಟ್ಟನಡುವೆ ||
ಸೇರಿಹುದುತ್ತಮಮುಪ್ಪರತ್ನಂಗಳ | ಭೂರಿಯಿಂದದನೇಪೊಗಳ್ವೆ ||೨೫೬||

ವಾರಿಧಿಯೊಳುನಾಲ್ವೆರಳಗಲದಕಲ್ಲ | ದಾರಿಮುತ್ತದರಿಕ್ಕೆಲದೊಳು ||
ಆರಯ್ಯೆಪಿರಿದುಮಗಾಧೋದಕಮಿಪ್ಪು | ದಾರುಪೊಗುವುದಳವಲ್ಲ ||೨೫೭||

ಆಡಿನಬೆನ್ನೊಳುಕುಳ್ಳಿರ್ದು ಮನದೊಳ | ಳ್ಕಾಡದೆಪೋಗಲುಬೇಕು ||
ರೂಢಿವಡೆದರತ್ನದ್ವೀಪದದಾರಿ | ನಾಡಾಡಿಗಳಿಗದುವಶವೆ ||೨೫೮||

ಎಂದವರಾತಸುಕೇಳಿನಾವಿದನೋಡುವೆ | ವೆಂದಾಡುಗಳನುತರಿಸಿ ||
ಕಂದರ್ಪನಿಭನೇರಿಯುಸಿಯಮದಿಲಮೇಲೆ | ಯಂದದಿನಡೆಗಲಿಸಿದನು ||೨೭೯||

ಈತೆರದಿಂಸಡೆಗಲಿಸಿಮತ್ತಾಯೇಳು | ಹೋತಿನಸಡುಬೆನ್ನನೇರಿ ||
ಆತುರದಿಂದೆಯ್ದಿಯಂಬುನಿಧಿಯುರಂಜಿ | ಪಾತಡಿಗಿವದೆಯ್ದಿದರು ||೨೮೦||

ಆ ವಾರಾಶಿಯತಡಿಯೊಳುನಿಂದಾ | ಕೋವಿದನಿಂತುಸುರಿದನು ||
ನೀವರುವರುತಡೆದಿರಿನಾನಾರನ್ನ | ದೀವಿಗೆಯೋರ್ವನೆಪೋಗಿ ||೨೮೧||

ಅವರಳಬಳವನಿರೀಕ್ಷಿಸಿಬಳಿಕೀ | ಉದಧಿಯತಡಿಗೆಯ್ದಿಮತ್ತೆ ||
ಪಮಳದಿನಾವೆಲ್ಲರುಪೋಪೆವೆಂದಾ | ಸದಮಲನವರನಲ್ಲಿರಿಸಿ ||೨೮೨||

ಆರ್ಗನಿಸಳವಲ್ಲದಂಭೋರಾಶಿಯು | ಮಾರ್ಗದೊಳದಿರದೆಪೋಗಿ ||
ಭೋರ್ಗರೆವಾರಣ್ಯದನಡುವಣರತ್ನ | ದುರ್ಗವನೋಡಿಮುಗುಳಿದ ||೨೮೩||

ಇತ್ತಲುರುದ್ರದತ್ತಾದಿಗಳಾಚಾರು | ದತ್ತನೇತಕೆಬಾರನೆಂದು ||
ಅತ್ತಲುಮುಖವಾಗಿಯಾಹೋತಿನಬೆನ್ನ | ಹತ್ತಿನಡೆದುಬರುತಿರಲು ||೨೮೪||

ಭೋರನೆತಗಿದಿರೆಯ್ದುವರನುಕಂಡು | ಚಾರುದತ್ತನುಶಂಕೆಯಿಂದ ||
ಆರಯ್ಯುದಿಂತೆಯ್ದುವರೆಯೊಂದೆನೆಮ | ತ್ತಾರುದ್ರದತ್ತನಿಂತೆಂದ ||೨೮೫||

ನೀನಾಗಕುರಿತವೇಳೆಗೆ ಬಾರದಿರೆಕಂಡಿ | ದೇನೆಂದುಶಂಕೆಯಿಂದಾವು ||
ಆನದೆನಿನ್ನನೋಡುವೆವೆಂದುವಿಚಾರ | ಮಾನಸರಾಗಿಯ್ದಿದೆವು ||೨೮೬||

ಇಟ್ಟಣಿಸಿದವಾರಾಶಿಯುನಡುವೆ ನಾ | ಲ್ವೆಟ್ಟಗಲದದಾರಿಯೊಳಗೆ ||
ನೆಟ್ಟನೆಬರುತಪಿಂತಕೆತಿರುಗುವೆನೆಂಬ | ದಿಟ್ಟರುಂಟೀವಿಚಾರಿಸಲು ||೨೮೭||

ಎಂದುನುಡಿದುನಾನೀನೀರನಿಧಿಯೊಳು | ಹೊಂದಿನಿಮ್ಮನುಕಳುಹುವೆನು ||
ಎಂದಾಗುಣಭೂಷಣನನ್ನುಣ್ಣಡಿಗಿಂ | ತೆಂದರುಹರಿಸಖಾವಿಗಳು ||೨೮೮||

ಲೋಕದೊಳಗೆ ನಮ್ಮಂತಪ್ಪಮನುಜರ | ನೇಕರುಂಟುಭಾವಿಸಲು ||
ಏಕಾಂಗವೀರನಿನ್ನಂತಪ್ಪಗುಣರ | ತ್ನಾಕರರೆಂದಿಗಾಗುವರು ||೨೮೯||

ಅದರಿಂನಾವಿಲ್ಲಿಹರಣವನೀಗುವೆ | ವಿದನುನೀಕಳೆದುಹೋಗೆನಲು ||
ಅದಕೆ ನಿಮ್ಮೆಲ್ಲರಕೊಂದುಬಂದಪಕೀರ್ತಿ | ಯೊದವನಾನೆಂತುನೀಗುವೆನು ||೨೯೦||

ಎಂದು ತನ್ನತಿಚಾತುರ್ಯವನೋಡುವೆ | ನೆಂದುಸಮುಸ್ಸಿದ್ಧೇಭ್ಯ ||
ಬಂದತ್ಯವಧಾನದಿಂದ ಹೋತಿನಬೆನ್ನಿ | ನಿಂದೆಡಗಡೆಗಾಗಿಜಗುಳಿ ||೨೯೧||

ಒಂದಂಘ್ರಿಯನಾಬಟ್ಟೆಯೊಳಿಟ್ಟುಮ | ತ್ತೊಂದಂಘ್ರಿಯಮೇಲಕೆತ್ತಿ ||
ನಿಂದತಿಕುಶಲತೆಯಿಂದಾಹೋತನ | ಮುಂದಕೆನಡುಬಾರಿಸುತ ||೨೭೨||
ಮುಂದಣವೆರಡಡಿಯನುಮಾಸರಣಿಯೊ | ಳ್ತಂದಿಟ್ಟುಗರಿಯಿಂದದೊಳು ||
ಹಿಂದಣವೆರಡುಕಾಲನು ಮೆಲ್ಲನೆತಿರಿ | ತಂದುಸಸಿನವನಾಡಿದನು ||೨೭೩||
ಇಂತುಸಸಿನಮಾಡಿಯಾಹೋತಿಸಬೆಸ್ನ | ಸಂತರಿಸದೆತಾನೇರೆ ||
ಪಿಂತಣತುದ್ರದತ್ತಾದಿಗಳೀಕ್ಷಿಸಿ | ಸಂತಸವನೆಮಾಡಿದರು ||೨೭೪||
ಬಳಿಕನಿಶ್ಚಿಂತಹೃದಯರಾಗಿಯಲ್ಲಿಂ | ತಳೆದಾಕಿರುವಟ್ಟೆವಿಡಿದು ||
ತಳುಪದೆಯಾರತ್ನದ್ವೀಪಕೆಪೋಗಿ | ಜಲಧಿಯತಡಿಯೊಳಿಳಿದರು ||೨೭೫||
ಮತ್ತಾದ್ವೀಪದನಾಲ್ದೆಸೆಯನುನೋ | ಡುತ್ತಿರ್ದೊಂದೆಡೆಯಿರ್ಪ ||
ಉತ್ತಮಮುಪ್ಪಕೊಳನಕಂಡಲ್ಲಿಗೆ | ಚಿತ್ತಜಸನ್ನಿಭನೆಯ್ದಿ ||೨೭೬||
ಕರಚರಣಾನನವನು ತೊಳೆದಲ್ಲಿಂ | ದುರುಮುದದಿಂದೆಯ್ತಂದು ||
ಸರಸಚೂತವನೊಂದಕಂಡಲ್ಲಿ ನಿದ್ರೆಯೊ | ಳಿರೆ ರುದ್ರದತ್ತನೆಯ್ತಂದು ||೨೭೭||
ಒರಗಿದಚಾರುದತ್ತಬಡಪರಿಯ | ಚ್ಚರವಂತೆಯೊಯ್ಯಾರದಿಂದ ||
ತುರುಗೆವೆರಿಟ್ಟಿಗಂಜನಮಿಟ್ಟಾವ್ಯೆ | ಮರೆಪಂದದಿಮಾಡಿಬಳಿಕ ||೨೭೮||
ಆ ರುದ್ರದತ್ತನುತನ್ನೊಳುಮೊದಲಾ | ಪಾರಸಿಕನುಪೇಳ್ದಂತೆ ||
ಕ್ರೂರಕರ್ಮಿಯಂದಾಯೇಳಾಡಿನ | ಹೋರಿಯತಲೆಯನುಕಡಿದು ||೨೭೯||
ಕತ್ತಿಯಿಂದವರಕೊವಲಸೀಳಿ ಮಾಂಸವ | ಕಿತ್ತಿಟ್ಟಾತೊವಲುಗಳ ||
ಒತ್ತಿಮುಗುಚಿ ತಿದಿಯನುಮಾಡಿಯಾಚಾರು | ದತ್ತನನದರೊಳುಹೊಗಿಸಿ ||೨೮೦||
ಅದರಬಾಯನುಸೊಮ್ಮಿಬಳಿಕುಳಿದಾಡಿನ | ತಿದಿಯೊಳಗರುವರುಹೊಕ್ಕು ||
ಪದುಳದಿನಾಬಾಯಿಗಳಹೊಲಿದಿರ್ಪಾ | ಪದದೊಳುತಾವಿರ್ಪಬಳಿಗೆ ||೨೮೧||
ಸುರಪತಿತಮ್ಮರಟ್ಟೆಯಕಡಿವಂದಂಜಿ | ಶರಧಿಯಹೊಕ್ಕಶೈಲಗಳು ||
ಇರದಲ್ಲಿಂಪೊರಮಡುವಂತೆಯ್ದಿದ | ವುರುತರಮೆಂಟುಭೇರುಂಡ ||೨೮೨||
ಅಂತುಬಂದವರೊಳಗಾರುಖಗಂಗಳು | ಮುಂತಿರ್ದಾರುತಿದಿಯನು ||
ಅಂತರಮಾಡದೆರಗಿಕಚ್ಚಿಕೊಂಡಾ | ಅಂತರಿಕ್ಷಕೆಪಾರಿದವು ||೨೮೩||
ಚಾರುದತ್ತನುಪೊಕ್ಕತಿದಿಯನೊಕ್ಕಣ್ಣಿನ | ಭೇರುಂಡಕಚ್ಚಿಯಾಗಸಕೆ ||
ಭೋಂಕನೆಪಾರುತ್ತಿರಲಲ್ಲಿಮತ್ತೊಂದು | ಭೇರುಂಡಕುಟುಕುವಡೆಯದೆ ||೨೮೪||

ದಿಟ್ಟಿಯಿಲ್ಲದಕಡೆಯಿಂದಾವಿಹಗನ | ಮುಟ್ಟಿಬಂದದ್ದನುಸೆಳೆಯಲು ||
ಬಿಟ್ಟೋಡಲಾತಿದಿಬೀಳುತಮಿರೆಕಂಡು | ತೊಟ್ಟನೆರಗಿಕಚ್ಚಿದುದು ||೨೮೫||

ಅದರಕೈಯಿಂದಾಯೇಕಾಕ್ಷಭೇರುಂಡ | ನದರಂತೆಯುದನುಕರ್ದುಕಲು ||
ಅದುಬಿಡಲಾತಿದಿಮತ್ತೆಬೀಳುತ್ತಿರೆ | ಯೊದವಿಪಿಡಿದುವಾಪಕ್ಷಿ ||೨೮೬||

ಈತೆರದಿಂದೊಂದೊಂದತಿಕೋಪದಿ | ನಾತಿದಿಗಾಗಿಯೋರಟೆಯು ||
ಆತುರದಿಂದೇಳುಸೂಳ್ವರಪಾಳ್ವಾಗ | ಭೂತಳಕದುಬಿಸ್ದದಾಗ ||೨೮೭||

ಭೇರುಂಡವೆರಡರಹೋರಟೆಯಿಂದಾ | ನೀರನಿಧಿಯಮಧ್ಯದೊಳು ||
ಚಾರುದತ್ತನುಹೊಕ್ಕಾತಿದಿಬೀಳ್ದುದು | ಪ್ರಾರಬ್ಧಕರ್ಮವಶದೊಳು ||೨೮೮||

ಶರಧಿಯತೆರೆಹೊಯ್ಲಿಂದೊಂದುಕುರುವಕೆ | ಒರಲಾತಿದಿಯನುಕೊಯ್ದು ||
ಅರುಹನೆಗತಿಯೆಂದಾಚಾರುದತ್ತನು | ಭರದಿಂದಪೊರಮಟ್ಟನಾಗ ||೨೮೯||

ಆಕುರುವದೊಳಿರ್ದುದೊಂದು ಕಾಸಾರವ | ನಾಕಂತುರೂಪನುಹೊಕ್ಕು ||
ನೌಕುವಾರಾಂಗವೆಲ್ಲವ ಪ್ರಕ್ಷಾಲಿಸಿ | ಲೋಕೈಕನಾಥನನೆನೆದು ||೨೯೦||

ಏಸಿದುವುನ್ನೆಸಗಿದಕರ್ಮವಶದಿನಂ | ಭೋನಿಧಿಯಾಕುರುವದೊಳು ||
ನಾನೋರ್ವನೆಸಿಲುಕಿವೆನಿಂತಿದಕೆಚಿಂತೆ | ಯೋಸರುಹನೆಗತಿಯೆಂದು ||೨೯೧||

ಇದಕೆಮನಗಾಣ್ಣಿಯಮಾಡುವುದಿದು | ಸದಮಲರಂಗವಲ್ಲೆನುತ ||
ಅಧಟರವೇಪನಲ್ಲಿರ್ದೊಂದುಕಲ್ಲೇರಿ | ಮುದದಿನಾಲ್ದೆಸೆಯನೋಳ್ವಾಗ ||೨೯೨||

ಕಾಯೋತ್ಸರ್ಗದಿನೊಂದುಸವಾಮ್ರ | ಚ್ಛಾಯೆಯೊಳಗೆಕೈಯಿಕ್ಕಿ ||
ಕಾಯಜಮದಮರ್ದನನೋರ್ವಸುಜತಿ | ರಾಯನಿರಲುಕಂಡನಾಗ ||೨೯೩||

ತನಗೆಬಂದಾಪತ್ತೆಲ್ಲಾ ಮುನಿದರು | ತನದಿಂ ವಿಚ್ಛಿನ್ನಮಾಗೆ ||
ಅನುನಯದಿಂದೆಯ್ದಿ ಗುರುಭಕ್ತಿಪೂರ್ವಕ | ವಿನಮಿತನಾಗಲುಕಂಡು ||೨೯೪||

ಯೋಗಮನುಪಸಂಹರಿಸಿತಚ್ಚಾರಣ | ಯೋಗಿಕೈಗಳನೆತ್ತಿಬಳಿಕ ||
ಆಗಲಿವನಮುಖಕದಿನೋಡಿಪಿರಿದನು | ರಾಗದಿಮಿಗೆ ಹರಸಿದರು ||೨೯೫||

ಒದವಿದಬೋಧದಿನಾಚಾರುದತ್ತನಂ | ಬುದನುತಿಳಿದು ಕರುಣದೊಳು ||
ಸದಮಲಗುಣೆನಿನಗಿಂತಪ್ಪವಸ್ಥೆಬಂ | ದುದು ಪೂರ್ವಕೃತಪಾಪದಿಂದ ||೨೯೬||

ಎಂಬಾಗಲಂಬರದಿಂದಾದಿಸಮಣಿ | ಬಿಂಬವಿಳಿದುಬರ್ಪಂತೆ ||
ಕೆಂಬಸದನಪಟ್ಟುಹರಿಕೇತುವೆಂಬೊರ್ವ | ನಂಬರಚರನೃಪವರನು ||೨೯೭||

ವಿಲಸಿತವಿಮಲಮಾಣಿಕ್ಯವಿಮಾನದಿಂ | ದಿಳಿದು ತತ್ಪಿತೃಗುರುಪದಕೆ ||
ಅಲಘುಭಕ್ತಿಯೊಳೊಂದಿಸಲಾಮುನಿಕುಲ | ತಿಲಕಹರಸುತಿಂತೆಂದ ||೨೯೮||

ಹರಿಕೇತುಕೇಳುನಮ್ಮನು ಚಂಪಾಪುರ | ವರದನದಿಯತಡಿಯೊಳಗೆ ||
ಭರದೊಳಗಾವೈರಿಶೂಲದೊಳಿಕ್ಕಲು | ಕರುಣದಿಂದೆಮ್ಮರಕ್ಷಿಸಿದ ||೨೯೯||

ಉತ್ತಮಗುಣಮಣಿಭೂಷಣನಾಚಾರು | ದತ್ತನೀತಗೆನಮ್ಮಂದ ||
ಮತ್ತೆವೆಗ್ಗಳೆದಪಿತೃಸ್ಥಾನವೀಪುರು | ಷೋತ್ತಮನನುಕೊಂಡುಪೋಗಿ ||೩೦೦||

ಒಸೆದುನಿನ್ನಯಸಾಮ್ರಾಜ್ಯಪದವನಿತ್ತು | ಬೆಸಕೆಯ್ಯುದ್ಬಾಳುನೀನೆಂದು ||
ಬೆಸಸಲಂತೇಗೆಯ್ವೆನೆಂದಾಹರಿಕೇತು | ಮುಸುಕಿದಸಂತಸದಿಂದ ||೩೦೧||

ಚಾರುದತ್ತನನಿರ್ಮಲತರಮೃದುಪದ | ವಾರಿಜಕಳಿಸಿಸುವಾಗಿ ||
ಆರಯ್ಯದೆರಗಿಕುಳ್ಳಿರ್ದಸಮಯದೊಳು | ನೀರದಪಥದಿಂದಿಳಿದು ||೩೦೨||

ಕುಸುಮಶೇಖರನೆಂಬದಿವಿಜನೋರ್ವನುಬಂ | ದೊಸೆದಾಮುನಿಗಳಿರ್ದಂತೆ ||
ರಸಿಕನುಚಾರುದತ್ತಗೆಭಕ್ತಿಯಿಂದಬಂ | ದಿಸಿಮತ್ತೆಮುನಿಪದಕೆರಗಿ ||೩೦೩||

ಹರಿಕೇತುವಿಂತೆಂದನೆಲೆದಿವಿಜಾತಾ | ಪರಗುರುವಿರ್ದಮಾಕ್ಕಿಯೊಳು ||
ಉರುಭಕ್ತಿಯಿಂದಗೃಹಸ್ಥಗೆರಗುವುದು | ಸಿರುತಮೆಯೆನಲೆಂದನವನು ||೩೦೪||

ರಸಕೂಪದೊಳುಬೀಳ್ದಜ್ಞಾನದಿಂಸಾ | ವೆಸಗಿದುರ್ಗತಿಗೆಪೋಪವನ ||
ಒಸೆದೆನ್ನಕಿವಿಯೊಳುಪಂಚಪದವಕಟ್ಟಿ | ಹನಸಪ್ಪಗತಿಗೊಳಿಸಿದನು ||೩೦೫||

ಇದುದೈವವಿದುಗುರುವಿದುಸದ್ದರುಶನ | ವಿದುಸಚ್ಚರಿತವೆಂಬುದನು ||
ವಿದಿತಮಾಗಿಯುವಿವೇಬೋಧವೆನಗೀ | ಸದಮಲನಿಂಸಂಭವಿಸಿತು ||೩೦೬||

ಅದುಕಾರಣದಿಂದಿಂತೆಸಗಿದೆನೆಂದು | ಪದೆದಾಕುಸುಮಶೇಖರನು ||
ಮದನಸದೃಶಚಾರುದತ್ತನನವಕುಸು | ಮದೊಳಭಿಷೇಕಮಾಡಿದನು ||೩೦೭||

ಕೊರಗದಲರುಮಾಸದನವಚಿತ್ರಾಂ | ಬರನೆಸೆದಂದದೊಳಪ್ಪ ||
ವರರತ್ನಾಭರಣಗಳಿಂದಾಬಂ | ಧುರನನಲಂಕರಿಸಿದನು ||೩೦೮||

ಇಂತುಪೂಜಿಸಿದೇವನಾಗುಣಮಣಿಯನ | ಸಂತಸೊಳಿರವೆಕೊಂಡಾಡಿ ||
ಕಂತುಸದೃಶನಿಮ್ಮಚಂಪಾನಗರಿಗೆ | ಸಂತಸದಿಂಪೋಪವೇಳು ||೩೦೯||

ಎಂದವಮಾತನುಕೇಳಿಮನಗೊಡಲಾಮುನಿ | ವೃಂದಾರಕನಾನೃಪನ ||
ಒಂದಾಗಿನಮ್ಮಪಟ್ಟಣಕೆಯ್ದಲುಬೇ | ಕೆಂದುತಡೆಯಲಾಕ್ಷಣದೊಳು ||೩೧೦||

ಬಳಿಕಾಕುಸುಮಶೇಖರನದುಲೇಸೆಂ | ದಲಘುಭಕ್ತಿಯೊಳುಬೀಳ್ಕೊಂಡು ||
ತಳರ್ದನಮರಲೋಕಕಿತ್ತಲಾಖಗಕುಲ | ತಿಲಕನು ಹರಿಕೇತುನೃಪತಿ ||೩೧೧||

ಚಾರಣರನುಬೀಳ್ಕೊಂಡತಿವಿನಯೋಪ | ಚಾರದಿಪುಷ್ಪಕವೇರಿ ||
ಚಾರುವಿಭವದಿಂದೊಡಗೊಂಡುಪೋದನು | ಚಾರುದತ್ತನತಮ್ಮಪುರಕೆ ||೩೧೨||

ಹರುಷದಿಕೊಂಡೊಯ್ದುರಸುತನಮನಾ | ದರದಿಂಕುಶಲೊಲ್ಲದಿರಲು ||
ಅರಸುಮಕ್ಕಳನೀರೇಳ್ಬರಬಲೆಯರ | ನಿರದೆಮದುವೆಮಾಡಿದನು ||೩೧೩||

ಅರಮಣಿಯರೊಳಗನುರಾಗವಿರ್ದಾ | ಭೇರುಂಡಗಳುಕೊಂಡುಪೋದ ||
ಆರುದ್ರದತ್ತನುಹರಿಸಖಾದಿಯುಸಖ | ರಾರತ್ನದ್ವೀಪದೊಳಗೆ ||೩೧೪||

ಇರಲಲ್ಲಿಗೆಸಿಹ್ಮಕೇತುಖೇಚರನನು | ಚರರುವಿದ್ಯಾಧರರುಗಳ ||
ಬರಿಸಿಕಳುಹಿಯುವರಿಂದಾಚಂಪಾ | ಪುರಕವರನುಕಳುಹಿಸಿದ ||೩೧೫||

ಇಂತುಸುಖದೊಳಿರ್ದುಹರಿಕೇತುವಿನಪ್ರ | ತ್ಯಂತಪೃಥಿವಿಪಾಲಕರ ||
ಅಂತಕನಿಭಕೋಪನಾಚಾರುದತ್ತನಿ | ಸ್ಸಂತಾನವಮಾಡಿದನು ||೩೧೬||

ಧುರದೊಳಗರಿಭೂಪರನಾನೆಲದೊಳು | ನೆರಪಿಯಾಹರಿಕೇತುವಿನ ||
ಅರಸುತನಕೆನಿಷ್ಕಂಟಕವನುಮಾಡಿ | ಹರುಷದಿಕೆಲದಿನವಿರ್ದು ||೩೧೭||

ಹರಿಕೇತುಕುವರನೊಡನೆನವ್ಮಾನಿಜ | ಪುರಕೆಯ್ದಲುಬೇಕೆನಲು ||
ಅರಸುತನವಬಿಟ್ಟುಜನಕನವ್ಮೊಡನಾ | ನಿರದೆಯ್ದುವೆನೆಂದನವನು ||೩೧೮||

ಎಂದನುಡಿಯಕೇಳುತಾಚಾರುದತ್ತನಿಂ | ತೆಂದನೆಲೆಸುಕುಮಾರ ||
ಇಂದುನಿನಗೆನಾನುರಾಜ್ಯವನಿತ್ತೆನು | ಸಂದೇಹಬೇಡವೆನ್ನಾಣೆ ||೩೧೯||

ಎಂದು ನಾನಾವಿಧವುಪ್ಪೊಡಂಬಡಿಕೆಗ | ಳಿಂದೊಡಂಬಡಿಸಲಾಕುವರ ||
ಕಂದರ್ಪರೂಪಗೆ ಕೈಗಳಮುಗಿದಿಂ | ತೆಂದನೆಲೆಪ್ರಿಯಜನಕ ||೩೨೦||

ತರುಣೀಮಣಿಯೆನ್ನಿಂದ ಕಿರಿಯಳಾ | ಸಿರಿಸರನತಿಪಾರ್ವತಿಗೆ ||
ಸರಿಮಿಗಿಲೆನಿಪೀಗಾಂಧರ್ವದತ್ತೆಯು | ಗರುವೆಯುನಿನ್ನನಂದನೆಯು ||೩೨೧||

ವರಿಯಿಪಚೆನ್ನಗಂಡುಗಳೆಮ್ಮ ವಿದ್ಯಾ | ಧರಲೋಕದೊಳಗಾರಿಲ್ಲ ||
ಧರೆಯರಸುಗಳೊಳಗೀಕೆಗೆ ತಕ್ಕೋರ್ವ | ಪುರುಷಗೆ ನೀನೀವುದೆಂದು ||೩೨೨||

ಅನುಜೆಯನೊಪ್ಪಿಸಿಕೊಡಲಾಗುಣಮಣಿ | ನೆನೆಯೆತತ್ಕುಸುಮಶೇಖರನು ||
ಅನುರಾಗದಿಂದನಿಮಿಷರಬಲವೆಕೂಡಿ | ಯನಿಲಪಥದೊಳೆಯ್ತಂದು ||೩೨೩||

ಕಾಂತುರೂಪಸನನುಸಯುದಿ ಪೂಜಿಸುತವು | ಸಂತಸೂಳಿರದೆ ಕೊಂಡಾಡಿ ||
ಸಂತಸದಿಂತಂದುಕೊಟ್ಟನು ಸುರಧೇನು | ಚಿಂತಾರತ್ನಂಗಳನು ||೩೨೪||

ಈತೆರದಿಂದಾದೇವಕೊಡಲು ಸಿಹ್ಮ | ಕೇತುಸಹಿತತತ್ಪುರವ ||
ಆ ತರುಣಿಯರೀರೇಣ್ಬರುಸಹಿತ ವಿ | ಖ್ಯಾತನು ಪೊರಮಟ್ಟನಾಗ ||೩೨೫||

ಮಾನಿತಮಣಿಮಯರಂಜಿತಮಪ್ಪ ವಿ | ಮಾನದಮೇಲೆಕುಳ್ಳಿರ್ದು ||
ಮಾನನಿ‾ಾನಸಂಬರಪಥವಿಡಿದುಸು | ವ್ಯಾಮನಮೊದವಲೆಯ್ದಿದನು ||೩೨೬||

ಸುರಸೇನೆವಿದ್ಯಾಧರಸೇನೆಸಹಿತಾ | ದರದಿಂ ಚಂಪಾಪುರದ ||
ಸುರುಚಿರಮಪ್ಪಬಹಿರ್ವನದೊಳಗಾ | ಸ್ಮರರೂಪನು ಜೀಡಬಿಡಿಸಿ ||೩೨೭||

ಅರಸುವಿಮಲವಾಹನಸಂತದಕೇಳಿ | ಪುರದೊಳಗಪ್ಪಶೋಭೆಯನು ||
ವಿರಚಿಸಿವಿಬುಧಾಧೀಶವಿಭವದಿಂ | ಹರಿಸದೊಳಿದಿರ್ವಂದನಾಗ ||೩೨೮||

ಅರಸಗೆರಗಿ ಹಿರಿಯರ್ಗಭಿವಂದಿಸಿ | ಹರುಷದಿನುಳಿದಸಂಟರಿಗೆ ||
ಉರುತರಮಪ್ಪಾದರವಚನಂಗಳ | ನೊರೆದು ಬಳಿಕಚಾರುದತ್ತ ||೩೨೯||

ಜನನಿದೇಯಿಲೆಯ ಕೈಯಿಂಜೆಲೆಗೊಂಡಾ | ಮನೆಯೊಳಗಿರ್ದವೈಶ್ಯಂಗೆ ||
ವಿನಯದಿಂದವೆಸೂರುಮುಡಿಹೊನ್ನನುಕೊಟ್ಟು | ಆನುಮಾಡಿಸಿದನಾಕ್ಷಣದೊಳು ||

ಅರಸೊಡಬರೆಮೇಲೆವಿದ್ಯಾಧರಸೇನೆ | ಸುರಸೇನೆಬಹುವಿಭವದೊಳು ||
ಪುರವನು ಪೊಕ್ಕರಸನಬೀಳ್ಕೊಂಡುರೆ | ಹರಿಸದಿಮನೆಗೆಯ್ದಿದನು ||೩೩೧||

ಜನನಿದೇಯಿಲೆಗಭಿವಂದಿಸಿನಿಜಸತಿ | ಜನನುತೆಮಿತ್ರಾವತಿಗೆ ||
ವಿನಯಮನುಸುರಿಯುಳಿದಬಂಧುಸುದತೀ | ಜನಕುಪಚರವಮಾಡಿದನು ||೩೩೨||

ಅನಿತರೊಳಾದೇವಕುಸುಮಶೇಖರನಾ | ದಿನದೊಳು ಹೊನ್ನಮಳೆಯನು ||
ಮಿನುಗುವರತ್ನವೃಷ್ಟಿಯನುಕರೆದು ಜನ | ವಿನುತನಬೀಳ್ಕೊಂಡುಪೋದ ||೩೩೩||

ಹರುಷದಿ ಹತ್ತೆಂಟುದಿನ ಸಿಹ್ಮಕೇತುವ | ನಿರಿಸಿಕೊಂಡಿರ್ದಕ್ಕರಿಂದ ||
ಪುರುಷಾರ್ಥನಿಧಿಶಿವಮಂದಿರಪುರಕಾ | ದರದಿಂಕಳುಹಿಮತ್ತಿತ್ತ ||೩೩೪||

ಪರವಿಟಜನವಿಕಸಿತನವಚಂಪಕ | ವರವನಕಳಿಸಿಸುವಾದ ||
ತರುಣಿವಸಂತತಿಲಕೆಯನುಮುದದಿಂದ | ಕರೆಯಿಸಿದನು ತನ್ನಮನೆಗೆ ||೩೩೫||

ಮತ್ತೆಪೊಳಲಪೊರವಸದನಡುವೆಯು | ತ್ಯುತ್ತಮಮಪ್ಪರತ್ನಗಳ ||
ತೆತ್ತಿಸಿಪದಿನೆಂಟುಕರುಮಾಡಂಗಳ | ಬಿತ್ತರದಿಂಮಾಡಿಸಿದನು ||೩೩೬||

ಅಲ್ಲಿಮಿತ್ರಾವತಿಯನು ವಿದ್ಯಾಧರ | ವಲ್ಲಭೆಯರುಷೋಡಶವನು ||
ಸಲ್ಲಲಿತಾಂಗಿವಸಂತತಿಲಕೆಯನು | ಸಲ್ಲೀಲೆಯೊಳಿರಿಸಿದನು ||೩೩೭||

ಚಿತ್ರಜಸಂತವರೊಡನಿರ್ದು ಗಾಂಧರ್ವ | ದತ್ತೆಗೆಹೊನ್ನ ಮಾಡವನು ||
ಎತ್ತಿಸಿಕೊಟ್ಟುಕುಬೇರನಂದದಿಚಾರು | ದತ್ತನುಸಂತಸಮಿರ್ದ ||೩೩೮||

ಮಾರಸದೃಶರೂಪಶರನಿಧಿಸಿಭಗಂ | ಧೀರಸುರಭಿಸಮುದಾಸಿ ||
ಸಾರಸದ್ಗುಣಿಸುದತೀಜನಹೃದಯ | ಕ್ಷೀರವಾರಾಶಿಚಂದ್ರಮನು ||೩೩೯||

ಇದು ಜಿನಪದಸರಸಿಜಮುದಮಧುಕರ | ಚದುರಮಂಗರಸರಚಿಸಿದ ||
ಮದನಾರಿ ನೇಮಿಜಿನೇಶಸಂಗತಿಯೊಳ | ಗೊದವಿದಾಶ್ವಾಸಗಳ್ಪತ್ತು ||೩೪೦||



# ೧೧. ಗಾಂಧರ್ವದತ್ತೆಯ ವೀಣಾಸ್ವಯಂವರ ಸಂಧಿ



ಶ್ರೀಮದಮರಪತಿಮೌಲಿಕೀಲಿತಪಾದ | ತಾಮರಸದ್ವಯಸಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಎಂದುನುಡಿದವೀಣಾಗುರುವಿಗೆಯಾ | ನಂದದಿನಾವಸುದೇವ ||
ಅಂದವಡೆದತನ್ನಮುಂಗೈಯಕಡಗವ | ನಂದುತೆಗೆದುಕೊಟ್ಟನಾಗ ||೨||

ಅನಿತರೊಳಾಶಾಸುದತಿಯಮನೆಗಾ | ಇನನೆಯ್ದಲಾಮನೋಹರನು ||
ಮನಸಿಜನಿಭವಸುದೇವನೃಪನತನ್ನ | ಮನೆಗೊಡಗೊಂಡೆಯ್ದಿದನು ||೩||

ಆಮರುದಿನ ವೀಣಾಸ್ವಯಂವರವಾಗ | ಲಾಮನೋಹರನಾಗ್ರಹದಿ ||
ಪ್ರೇಮದೊಳೊಡಗೊಂಡುಪೋದನಲ್ಲಿಗೆತ | ತ್ಕಾಮಸದೃಶನೃಪವರನ ||೪||

ಸತಿಯಬಯಸಿಬಂದ ಸಕಲಮಹೀಶ್ವರ | ಸುತರಮಧ್ಯದೊಳುಕುಳ್ಳಿರ್ದು ||
ಅತಿರಂಜಿಸಿದನು ವಸುದೇವತಾರಾ | ತತಿಯಮಧ್ಯದಚಂದ್ರನಂತೆ ||೫||

ಅನಿತರೊಳತಿರಂಜಿಸುವಭೂಷಣವಿಟ್ಟು | ಜನನುತೆಗಾಂಧರ್ವದತ್ತೆ ||
ಅನುರಾಗದಿಂತನ್ನಬಳಸಿಬರಲುಸಖಿ | ಜನದಮಧ್ಯದೊಳೆಯ್ದಿದಳು ||೬||

ಶಂಬರಶತ್ರುವಾರಾಧಿಪದೇವತೆ | ಯೆಂಬಂತಾಯೆಡೆಗೆಯ್ದಿ ||
ಅಂಬುಜಲೋಚನೆಕುಳ್ಳಿರ್ದಳೊಸೆದುಸ್ವ | ಯಂಬರಗೃಹದಮಧ್ಯದೊಳು ||೭||

ವಸುದೇವನುಕಣ್ಗೆತ್ತಲಾಚಾರ್ಯನು | ವಸುಧಾಧೀಶನಂದನರ ||
ರಸಿಕತೆಯಿಂಹಸನಾಗಿಬಾಜಿಸಿಮೆನ | ಲೊಸೆದುವೀಣೆಯಬಾಜಿಸಿದರು ||೮||

ಒಲವಿನದಿಟ್ಟಿಮನಮನೊಂದುಕಡೆಯೊಳು | ನಿಲಿಸಲವರುನುಡಿಯಿಸುವ ||
ವಿಲಸಿತಮಪ್ಪವಿಪಂಚಿಯಿಂಚರಮಾ | ಲಲನೆಯಕಿವಿಯೊಕ್ಕುದಿಲ್ಲ ||೯||

ತರಳಾಕ್ಷಿಯಚಿತ್ತವರಿದಾವೀಣಾ | ಗುರುವಸುದೇವಭೂವರನ ||
ಸುರುಚಿರಮಪ್ಪವಿದ್ಯಾಪೀಠದಮೇ | ಲಿರಿಸಿದನತಿಮುದದಿಂದ ||೧೦||

ಕಡುಸೊಗಯಿಸುವವಿಪಂಚಿಯತಂದಿಡ | ಲೊಡನಾತಂತಿಯಮಿಡಿದು ||
ನುಡಿಸಿನೋಡಿದೋಷಮಿಲ್ಲದವೀಣೆಯ | ತಡೆಯದೆತಂದೀವುದೆನಲು ||೧೧||

ಸರಸತಿಪಿಡಿದುಬಾಜಿಸುವಾವೀಣೆಗೆ | ಸರಿಮಿಗಿಲಾದವೀಣೆಯನು ||
ತರಿಸಿಹತ್ತೆಂಬಸರಿಸಲವರೊಳುಸುರು | ಚಿರಮುಪ್ಪದೊಂದುವೀಣೆಯನು ||೧೨||

ಪಿಡಿಯಲಾಚಾರ್ಯನಿಂತೆಂದನೆಲೇವಿಭು | ಕಡುಚತುರತೆಯಿಂದನೀನು ||
ಪಿಡಿದವೀಣೆಯಕುಲಮಾವುದುಪೇಳೆನೆ | ನುಡಿದನಿಂತೆಂದಾನೃಪತಿ ||೧೩||

ಸುತಹಸ್ತಿನಾಖ್ಯಪುರದಮೇಘರಥಭೂ | ಪತಿಗೆಪದ್ಮಾವತಿಯೆಂಬ ||
ಸತಿಗೆ ಜನಿಸಿದರು ವಿಷ್ಣುಕುಮಾರನು | ದ್ಧತಪದ್ಮರಥನೆಂಬವರು ||೧೪||

ಆ ಸುತರೀರ್ವರು ಸಕಲಸಾಮಂತರು | ಭೂಸುರರುಗಳಮಧ್ಯದೊಳು ||
ವಾಸವಸಂತೆಹೊನ್ನುಪ್ಪರಿಗೆಯನೇರಿ | ಯೋಸರಿಸದೆಕುಳ್ಳಿರ್ದ ||೧೫||

ಮೇಘರಥಾವನಿಪಾಲನೊಂದಾನೊಂದು | ಮೇಘಲಕ್ಷಣದರುಶನದಿ ||
ಈ ಘನದಿರವೀಸಂಸಾರದೇಳ್ಗೆಯು | ಮೋಘವೆಂದುಭಾವಿಸುತ ||೧೬||

ಕಿರಿಯತನುಜಪದ್ಮರಥಗೆ ಭೂಭಾರವ | ಹೊರಿಸಿ ತೃಣವಹರಿವಂತೆ ||
ಹೊರಗೊಳಗಾವರಿಸಿದಮೋಹಪಾಶವ | ಹರಿದನುಸಿಮುಷಮಾತ್ರದೊಳು ||೧೭||

ತಂದೆಯೊಡನೆ ದೀಕ್ಷೆಯನುಧರಿಸಿಯುಗ್ರ | ನಂದನವಿಷ್ಣುಕುಮಾರ ||
ಬಂದಿದತಪದಿಂಶುದ್ಧಿಸಂಪನ್ನಿಕೆ | ಯಂದಳೆದಿರೆಬಳಿಕಿತ್ತ ||೧೮||

ಭೂಸುತಮುಪ್ಪವಂತೀಜನಪದದು | ಜ್ಜೆನಿಯಾಪೊರಸಂದನದೊಳು ||
ಜೈನಮುನೀಶಪಕಂಪನೆಂಬೋರ್ವಮು | ಹಾನುಭಾವನುನಿಂದಿರಲು ||೧೯||

ಅಲ್ಲಿಗಾಪುರದವೃಷಭಸೇನನೆಂಬಭೂ | ವಲ್ಲಭಗೆಸೆವಮಂತ್ರಿಗಳು ||
ಬಲ್ಲಿದಬಲಿಬೃಹಸ್ಪತಿಶುಕ್ರರೆಂಬಪ | ರುಲ್ಲಾಸದಿಂದೆಯ್ದಿದರು ||೨೦||

ಅವರುವಿಂಧ್ಯಾಗನಗರ್ವಶೈಲಾರೂಢ | ರವರಾಮುನಿವರರೊಡನೆ ||
ಅವಿವೇಕಪಿಂವಾದವಮಾಡಿಬಳಿಕಸೋ | ಲವನಾಂತುಭಂಗವಡೆದರು ||೨೧||

ಇಂತುಭಂಗವಪಡೆದಾ ಬಲಿಯಾಮುನಿ | ಕಾಂತನಕೊಲಲುಬೇಕೆಂದು ||
ಅಂತಕನಿಭಕೋಪನವರಿರ್ದ ನಂದನ | ಕಂತರಿಸದೆ ನಡೆತಂದು ||೨೨||

ಕರವಾಳಪಿಡಿದವರನು ಕೊಲ್ಲಲೆತ್ತಿದ | ಕರವನಾವನದೇವತೆಗಳು ||
ಪಿರಿದುಕೋಪದಿ ಕೀಲಿಸಿ ಮತ್ತವಗೆನಿ | ಷ್ಠುರಮುಪ್ಪಬಾಧೆಮಾಡಿದರು ||೨೩||

ಆಬಲ್ಲಿತಪ್ಪಬಾಧೆಯತಾಳಲಾರದೆ | ಯಾಬಲಿಮೊರೆಯಿಡಲಾಗ ||
ಆಬಳಿಗಾಪೊಳಲರಸೆಯ್ದಿಬಂದು ಮ | ತ್ತಾಬಲಹೀನನಕಂಡು ||೨೪||

ವಿನಯಪೂರ್ವಕದಿ ಸಾಷ್ಟಾಂಗಾನತನಾಗಿ | ಮುನಿಯಮುಖದಿ ಬಲಿಗಾದ ||
ಘನತರಮುಪ್ಪಪಸರ್ಗವಪಿಂಗಿಸಿ | ಮನುಜೇಶನಿಂತೆಂದನಾಗ ||೨೫||

ಯತಿರಾಜನನು ಕೊಲ್ಲುವೆನೆಂದೆಣಿಕೆಮಾಡಿ | ದತಿದೋಷಿಗಳಿನ್ನು ನಮಗೆ ||
ಹಿತವರಲ್ಲೆಂದಾಬಲಿಶುಕ್ರನಾ ಬೃಹ | ಸ್ಪತಿಯಸೂರಿಂತಗುಳಿಸಿದ ||೨೬||

ಆಪೊಳಲಿಂಭ್ರಷ್ಟರಾಗಿ ಬಂದಾಹಸ್ತಿ | ನಾಪುರವರವನುಪೊಕ್ಕು ||
ಆ ಪದ್ಮರಥನಸಮ್ಮುಖದಿ ಮಂತ್ರಿತ್ವವ | ನೇಪಡೆದುರೆ ಜಾಣ್ಮೆಯಿಂದ ||೨೭||

ಮತ್ತತಿಹಿತವರಾಗಿರಲಾನೃಪನಮೋ | ಲೆತ್ತಿಪ್ರತ್ಯಂತಭೂವರರು ||
ಒತ್ತಂಬಿಸಲಾಬಲಿಯಾಬೆಸನನು | ಹೊತ್ತವರ್ಗಿದಿರಾಗಿನಡೆದು ||೨೮||

ಮಂತ್ರಿಬಲದಿ ವೈರಿಭೂಪಾಲರತಳ | ತಂತ್ರಮನೆಲ್ಲವ್ವೋಡಿಸಲು ||
ಮಂತ್ರಿಬಲಿಗೆ ಪದ್ಮರಥವಿಭುಮೆಚ್ಚಿದ | ತಾಂತ್ರಿಕರಣಶುದ್ಧಿಯೊಳು ||೨೯||

ಪರಮಂತ್ರಿನಿನಗೆಮೆಚ್ಚಿದೆ ನಿನ್ನಿಚ್ಛೆಯ | ನಿರದೀವೆ ಬೇಡಿಕೊಳ್ಳೆಸಲು ||
ಧರಣಿಪ ನೀನೀವಮೆಚ್ಚುಬಂಡಾರದೊ | ಳಿರಲಿಯೆಂದತಿಸುಖಮಿರಲು ||೩೦||

ಒಂದಾನೊಂದುದಿವಸ ಮತ್ತಾ ಊರ | ಮುಂದಣಸೌಮ್ಯಗಿರಿಯೊಳು ||
ಒಂದಾಗಿಯ್ಯೆನೂರ್ವರುಮುನಿಗಳು ನಿಲೆ | ನಿಂದನಕಂಪಮುನೀಂದ್ರ ||೩೧||

ಧೃತಿಯಿಂದತನ್ನೊಳುಮಚ್ಚರಿಪಾಪ | ವ್ರತವನಿರದೆ ಮೆಟ್ಟಿದಂತೆ ||
ಯತಿನಿಕರದಮಧ್ಯದೊಳಗೆಯಕಂಪ | ವ್ರತಿಯೋಗನಿಷ್ಠೆಯೊಳಿರಲು ||೩೨||

ಹಿಂದೆತಾನಪರೊಳುವಾದಿಸಿ ಸೋಲ್ತುದ | ರೊಂದುಪರಾಭವದಿಂದ ||
ಅಂದಾಮುನಿಗುಪಸರ್ಗವನೆಸಗುವೆ | ನೆಂದಾಬಲಿಯೆಣಿಸಿದನು ||೩೩||

ಅರಸಿನೆಡೆಗೆಬಂದು ಬಂಡಾರದೊಳುನಾ | ನಿರಿಸಿದಮೆಚ್ಚೀವುದೆನಲು ||
ಭರದಿಂಬೇಡುಕೊಡುವೆನೆನಲೇಳುವಾ | ಸರದೊಡೆತನವ ಬೇಡಿದನು ||೩೪||

ಕೊಡೆನೆಂಬೆರಡಕ್ಕರಮನರಿಯನಾಗಿ | ಕಡುಚಾಗಿಯಾಯೇಳುದಿನದ ||
ಒಡೆತನವನುಕೊಟ್ಟುತಾನರಮನೆಯೊಳ | ಗಡಗಿದನಿಳೆಪೊಗಳ್ವಂತೆ ||೩೫||

ಅರಸುತನವಪಡೆದಾಬಲಿಯಾಮುನಿ | ವರಗೆ ಬಾಧೆಯಮಾಳ್ಪೆನೆಂದು ||
ಧರಣಿಯೊಳುಳ್ಳಧರಾಮರರೆಲ್ಲರ | ಕರಸಿದನತಿವೇಗದೊಳು ||೩೬||

ಹೋಮಕರ್ಮಭೂಸುರಭೋಜನಮುಮ | ನಾಮಹೀಧರದಗುಹೆಯೊಳು ||
ಪ್ರೇಮದಿ ಮಾಡಬೇಕೆಂದು ಮತ್ತಾಮಂತ್ರಿ | ಯಾಮಹೀಸುರರ್ಗುಸುರಿದನು ||

ದಂಡತ್ರಯಧಾರಿಗಳದೀಕ್ಷಿತರಪ್ರ | ಚಂಡವಾದಿಗಳವಟುಗಳ ||
ಮಂಡಳಿನೆರೆದಾತನುಚೆಸಸಿದುದಕ್ಕೆ | ಕೊಂಡೆಸಗಿದುದತಿಭರದಿ ||೩೮||

ವರಮುನಿಗಳುನಿಂದಿರ್ದಾಸೌಮ್ಯಭೂ | ಧರದಗುಹೆಯುಬಾಗಿಲೊಳು ||
ಉರುತರಮಷ್ಟಕರ್ಮದಿಕೋಟಿಹೋಮವ | ವಿರಚಿಸಿದರುವಿಸ್ತಣದಿ ||೩೯||

ಅರೆಯೆಡೆಪಶುಮಾರಣವರೆಯೆಡೆಹೋಮ | ವರೆಯೆಡೆಭೋಜನದಡುಗೆ ||
ಹರವರಿಯಾಗಲುರಿವಕಿಚ್ಚಿನಿಂದಾ | ಗಿರಿಯೊಲೆಕಲ್ಲವೊಲಾಯ್ತು ||೪೦||

ಉರಿದುವುಮರನೊಡೆದುವುಕೋಡುಂಗಲ್ಲು | ಕರಿದುವಲ್ಲಿಯಕಮ್ಮರಿಗಳು ||
ಹುರಿಯೋಡಿಸಂತಾಡುದುನೆಲಸಾಗಿರಿ | ವರದೊಳೇಳುವಕಿಚ್ಚಿನಿಂದ ||೪೧||

ಹರಿವಿರಿಂಚಿಗಳಹೋರಟೆಯಿಂದಾ ಉಗ್ರ | ದುರಿಲಿಂಗವಾದಂದದೊಳು ||
ದುರುಳಸವನುವಮಾಡಿಸುವಹೋಮದುರಿಯಿಂ | ಕರವೊಪ್ಪಿತಾಸೌಮ್ಯತಿಖಿ ||೪೨||

ಆ ಉರಿಹೊಗೆಯುಸಡುವೆಯುಪಶಮವೆಂ | ಬಾವೊರತೆಯುನಿರ್ವಾಣಲಾಂಬು ||
ತೀವಿತಮ್ಮಂಗವನಂತದರಿಂದಮ | ತ್ತಾಮುನಿಗಳುಜೀವಿಸಿದರು ||೪೩||

ವಮುತ್ತಿದಕೆಮ್ಮುಗಿಲೊಳುತಾರೆಗೂಡಿತ | ಳತ್ತಳಿಸುವಚಂದ್ರನಂತೆ ||
ಹೊತ್ತುವಶಿಖಿಯೊಳುಮುನಿಕುಲದೊಡನೆಸ | ದ್ವೃತ್ತನಕಂಪನೊಪ್ಪಿರಲು ||೪೪||

ಅಲ್ಲಿಗೆಬಡಗಸಹಸ್ರಯೋಜನದೂರ | ದಲ್ಲಿಯೊಂದಾನೊಂದುಗಿರಿಯು ||
ಬಲ್ಲಿತುವಡೆದೊಂದುಗವಿಯೊಳುಮನಸಿಜ | ಮಲ್ಲನವಧಿಬೋಧಯುತನು ||೪೫||

ಕ್ಷಿತಿನುತಸುಗ್ರೀವನೆಂಬಹೆಸರಯತಿ | ಪತಿಯಾರಾತ್ರಿಯೊಳೇಳ್ದು ||
ಯತಿಯುಪಸರ್ಗಕಂಬರತಳದೊಳಗದು | ಭುತವಾಗಿಸೆರೆಕಂಪಿಸುವ ||೪೬||

ಶ್ರವಣನಕ್ಷತ್ರವಕಂಡಿದೇತಕ್ಕೆಂ | ದವಧಿಬೋಧದಿನಾಮುನಿಗೆ ||
ವಿವಿಧೋಪಸರ್ಗಮಪ್ಪುದನರಿದೊಡವೆಕೆ | ಟ್ಟವರಂತೆಮುಲುಮಲಮರುಗಿ ||೪೭||

ಅಯ್ಯಯ್ಯೋಕಡುಪಾತಕಬಲುಗೊಲಿ | ಗಯ್ಯಪಾರ್ವನುಬಾಧಿಸುವ ||
ಸಂಯಮಿಗಳಬಾಧೆಯನುಬಾರಿಸಬಲು | ಗಯ್ಯತಕಾಣೆನೆಂಬಾಗ ||೪೮||

ನೆರೆದಶಿಷ್ಯರುಗಳಮಧ್ಯದೊಳೋರ್ವನಂ | ಬರಚರಸದ್ಬ್ರಹ್ಮಚಾರಿ ||
ಕರಯುಗಲವಮುಗಿದಿಂತೆಂದನೆಲೆಮುನಿ | ವರಕೇಳುನಾನೀಗಲೆಯ್ದಿ ||೪೯||

ಅತಿಭರದಿಂದಾಬಲಿಗಾಜ್ಞೆಯನಿಕ್ಕಿ | ಯತಿಪತಿಗಳಬಾಧೆಯನು ||
ಕ್ಷಿತಿಯರಿವಂತೆಮಾಣಿಸಿಬಪ್ಪೆನೆನಲಾ | ವ್ರತಿಕುಲತಿಲಕನಿಂತೆಂದ ||೫೦||

ವ್ರತಯುತರೀಕ್ರಮವನುಭಾವಿಸುವುದು | ಮತವಲ್ಲವೆಂದಾಖಗನ ||
ಅತಿಕೋಪವನುತಂಬಿಸಿಯಾಸುಗ್ರೀವ | ಯತಿಯಾಗುಹೆಯುಮೂಲೆಯೊಳು ||೫೧||

ಮಲಗಿರ್ದಾವಿಷ್ಣುಮುನಿಯಕರೆದುನೀ | ವಲಸದೆನಡೆದಾಯತಿಗೆ ||
ಬಲಿಮಾಡುವುಪಸರ್ಗವನುಬಿಡಿಸುಯೆನೆ | ಸುಲಲಿತಋದ್ಧಿಸಂಯುತನು ||೫೨||

ಅಂತೆಗೆಯ್ವೆನೆಂದಾನಿಜಗುರುಯತಿ | ಕಾಂತಗೆನಮಿಸಿಬೀಳ್ಕೊಂಡು ||
ಅಂತರಿಸದೆಹಸ್ತಿನಪುರಕೆಯ್ದಿಭೂ | ಕಾಂತನುತನ್ನನುಜಾತ ||೫೩||

ವಿತತಗುಣಿಪದ್ಮರಥನೆಡೆಗೆಯ್ದಿ ಕಂ | ಡತಿಭಕ್ತಿಭರದಿಂದೇಳ್ದು ||
ನತಿಸಿದೊಡಾತನಹರಸಲೊಲ್ಲದೆಯುಪ | ಗತರಾಗಯುತಮುಖನಾಗಿ || ||೫೪||

ವೀತರಾಗಾಸನವನು ತಂದಿರಿಸಿದೊ | ಡೀತಕೆನಮಗಿದೆಂದೆನುತ ||
ಆ ತಪಸ್ವಿಯಿಂತೆಂದುನುಡಿದನಾ | ಭೂತಳಪತಿ ಪದ್ಮರಥಗೆ ||೫೫||

ಅರಸನಾದುದಕಿದುಕುರುಹೇಯಾಮುನಿ | ವರಗಾದುಷ್ಟನಮುಖದಿ ||
ಪಿರಿದಪ್ಪುಪಸರ್ಗವನು ಮಾಡಿಸಿ ಬಲು | [illegible]ರವಡರ್ದಂದದಿನಿಹುದು ||೫೬||

ಅನುಚಿತವೆಂಬುದನರಿಯಬೇಡವೆಯೆಂಬ | ಮುನಿವಚನವಕೇಳುತವೆ ||
ಮುನಿಸುದಳೆದುಗದ್ದುಗೆಗೊಯ್ದುನನಗೀ | ಘನತರಮಪ್ಪಪಾಪವನು ||೫೭||

ಮಾಡಿಕೊಡುವಪಾತಕಿಯುತಲೆಯುಸೆಂ | ಡಾಡುವೆನೆಂದೇಳುವಾಗ |
ಬೇಡನೃಪತಿನಿಷ್ಠುರಮುಂಚೆನೀಮೇಲು | ನೋಡದೆಕೊಟ್ಟುದಕೀಗ ||೫೮||

ಅಳಿಪಿದನೆಂಬಪಕೀರ್ತಿಯುದೇಕಾ | ಖಳಗೆನಾನಾಜ್ಞೆಯಿಕ್ಕುವುದ ||
ಇಳೆಯಾಧಿಪತಿನೀನೋಡೆಂದಾಯತಿ | ಕುಲತಿಲಕನು ನಡೆತಂದು ||೫೯||

ಪುರವರವೆಲ್ಲಸರೆದು ಬೆನ್ನಬಿಡದೆಯು | ಚ್ಚರಿವಟ್ಟುನೋಡುತಬರಲು ||
ಧರಿಯಿಸಿಪಂಚಮತಾಳೋತ್ಸೇಧದ | ವರವಾಮನರೂಪವನು ||೬೦||

ರನ್ನದಕುಂಡಲದಿಂಪರ್ಘಿಯಿಂಪೊಸ | ಪೊನ್ನುಂಗುರದಿ ಮುಂಜಿಯಿಂದ ||
ಜನ್ನಿವಾರದಿಶಿಖಿಯಿಂಧೋತ್ರದಿಂಕಡು | ಚೆನ್ನುಹಡೆದುನಡೆತಂದು ||೬೧||

ಎಳೆಯಮಾಣಿಕದಬೊಂಬೆಯೊಪವಳದ ಪು | ತ್ತಳಿಯೊಯೆಂಬಮಾಳ್ಕೆಯೊಳು ||
ವಿಲಸಿತಮಪ್ಪ ವಾಮನರೂಪವನಾಂತು | ಬಲಿಯೆಡೆಗೆಯ್ತಂದನಾಗ ||೬೨||

ಸ್ವಸ್ತಿವಿನುತಭೂಸುರಬಲಿನಿರ್ವಿಘ್ನ | ಮಸ್ತುಸುರಭಿದಾನಿಯೆಂದು ||
ಕುಸ್ತರಿಸಿದಮಾಣಿಗೆಮಣಿದಮಣಿ | ಮಸ್ತಕವನುಬಾಗಿಸಿದನು ||೬೩||

ಹರಸಿದಗುಜ್ಜಹಾರುವನಾಕಾರಕೆ | ಪೇದು ವಿಸ್ಮಯಚಿತ್ತನಾಗಿ ||
ಸರಸದಿನೆಲೆವಟುಬೇಡು ಸಿನ್ನಿಚ್ಛೆಯ | ಭರದಿಂಸಲಿಸುವೆನೆನಲು ||೬೪||

ದಿನಚರಿನಾವುಕುಳ್ಳಿರ್ದನುಷ್ಠಾನವ | ಸನುಗೆಯ್ವೊಡೆಮ್ಮ ಹೆಜ್ಜೆಯೊಳು ||
ಅನುರಾಗದಿಂ ಮೂರಡಿಭೂಮಿಯನೀವು | ದೆನೆ ಬಲಿಯಿಂತೆಂದನಾಗ ||೬೫||

ಘನತರವಸ್ತುವಬೇಡದೆಯಲ್ಪವ | ಮನಮಿತ್ತು ಬೇಡಿವೆಯೆನ್ನ ||
ಎನುತಬೇಡಿದುದನುಕೊಟ್ಟೆನಕೆದುಕೊ | ಳ್ಳೆನಲಾಪ್ರಸ್ತಾವದೊಳು ||೬೬||

ಒಲಿಯನುಜಾತಭಾರ್ಗವನು ಬಂದೀವಟು | ಸಲೆಯುಟಮುಟಿಗನಿಂತಿವಗೆ ||
ನೆಲನಕುಡುವುದನುಚಿತವೆಂದು ಮುಂದಡ್ಡ | ನಿಲುತಮತ್ತ್ಯಾಗ್ರಹಗೆಯ್ಯೆ ||೬೭||

ಏಕೆ ದಾನಕೆ ಕಂಟಕನಾಗುವೆಯೆಂದು | ನೂಕುವಸಮಯದೊಳವನ ||
ಆಕ್ಕೆಯದರ್ಭೆಯಮೊನೆತಾಕಿಕಣ್ಣೊಡೆ | ದೇಕಾಕ್ಷನಾದನಾಶುಕ್ರ ||೬೮||

ಬಳಿಕ ಮೂರಡಿನೆಲವನು ಕೊಟ್ಟೆನೆಲೆವಾಣಿ | ಯಳಿಯೆಂದು ಧಾರೆಯನೆರೆಯೆ ||
ಒಲಿನೋಡುನೀನಿತ್ತಭೂಮಿಯನಳೆವೆನು | ತಳುವದೆಂದಾವಾಮನನು ||೬೯||

ಉರದುದ್ದ ಕೊರಲುದ್ದ ತಲೆಯುದ್ದ ಮುಡಿಲುದ್ದ | ಮರದುದ್ದವಾಮುಗಿಲುದ್ದ ||
ಮರುತಮಾರ್ಗದುದ್ದಮಾಗಿನೋಳ್ಪವರಿಗ | ಚ್ಚರಿಯಾಗುವಂತೆ ಬೆಳೆದನು ||೭೦||

ಆಕಾಶಕೇಶನೊಳೇಕಾಂತಪಮಾಡ | ಬೇಕೆಂದು ನಿಗರಿಬೆಳೆದನೊ ||
ನಾಕವನಿಲುಕಿನೋಡುವೆನೆಂದು ಬೆಳೆದನೊ | ಆಕೌತುಕದವಾಮನನು ||೭೧||

ಪರಮಣಿಮುಕುಟಕುಂಡಲಕೌಸ್ತುಭರತ್ನ | ಕರಕಂಜನಾಭನಳಿನದ ||
ದೊರೆಯಾದದಿನಪಬಿಂಬವಾವಿಷ್ಣುಗಗನಕ್ಕೆ | ಪರಿಪಿಡಿಯಿಂಬೆಳೆವಾಗ ||೭೨||

ಅಂಬರಪರಿಯಂತ ಬೆಳೆದತ್ರಿವಿಕ್ರಮ | ನಿಂಬುವಡೆದ ನಿಜಮುಖಕೆ ||
ತುಂಬುದಿಂಗಳು ಸಮ್ಮುಖವೊಳುನಿಜಮುಕು | ರಂಬೋಲುಕಣ್ಗೆಡ್ಡಮಾಯ್ತು ||
ಉಡಿಯಮೇಲಿಟ್ಟಮೇಖಲೆಯ ಕಿಂಕಿಣಿಗಳ | ಪಡಿಯಾಗಿ ಮಿಗೆರಂಜಿಸಿದುವು ||
ಉಡುನಿಕುರುಂಬವಂಬರದತಲವೂಮುಟ್ಟೆ | ಕಡುಬೆಳೆದಾತ್ರಿವಿಕ್ರಮನ ||೭೩||

ಈತೆರದಿಂದಬೆಳೆದುದೊಂದುಕಾಲನಿ | ಳಾತಳಕಿಟ್ಟೊಂದುಕಾಲ ||
ಆತರಣಿಯಸೆಂಡನೊದೆವಂದದಿ ವಿ | ಖ್ಯಾತನೊದೆದನಂಬರಕೆ ||೭೪||

ಕಡಲಮಧ್ಯದ ಭೂಮಿಯನೆಲ್ಲವನೊಂ | ದಡಿಮಾಡಿಯಾಗಸವೆಂಬ ||
ಕೊಡೆಗೆಮತ್ತೊಂದುಕಾಲನು ಕಾವನುಮಾಡಿ | ನಡುಗಿಸಿದನು ಭೂತಳವನು||೭೫||

ಇದು ತಾರಾಕುಸುಮನೋಮಂಜರಿತರು | ವಿದುಚಂದ್ರದೀಪದಕಂಬ ||
ಇದು ಸುರನದಿಗಿಟ್ಟ ಕಾಲುವೆಯೆನಲೊಪ್ಪಿ | ದುದುತ್ರಿವಿಕ್ರಮನಕ್ರಮವು ||೭೭||

ಗಗನವೆಂದೆಂಬ ಗೂಡಾರಕಿಕ್ಕಿದಕಂಬ | ಮುಗಿಲೆಂಬ ಭೂಮಂಡಲವ ||
ನೆಗಪಿದ ಪಂಚಫಣಾಶೇಷನವೊಲು | ಸೊಗೆಯಿಸಿದುದು ವಿಷ್ಣುಪಾದ ||೭೮||

ಧರೆಯನಡುವೆನಿಂದು ಮಾನುಷೋತ್ತರಗಿರಿ | ಗಿರಿಸಿತಿರುಗುವ ವಿಷ್ಣುವಿನ ||
ಚರಣವೊಪ್ಪಿತು ಬಿದಿಸೆಲಸನಿರ್ಮಿಸುವಂದು | ತಿರುಹುವಕವೆಯುರದಂತೆ ||೭೯||

ನರಲೋಕದನಭದೊಳಗೆಡಬಿಡವಿಲ್ಲ | ದಿರಿಸಿತಿರುವುತಿರಲಾಗ ||
ಸುರಪನೇರಿದಸಿಹ್ಮಾಸನವದಿರಲು | ಸುರನಪುತಿಯಕೂಡಿಕೊಂಡು ||೮೦||

ಇರದೆಂಟುಸಗ್ಗದಿಂದ್ರರುಜೋಯಿಸರಾ | ಉರಗೇಂದ್ರವ್ಯಂತರಾದಿಗಳ ||
ಬೆರಸಿಬಂದಾನಭದೊಳು ತಿರುಗುವವಿಷ್ಣು | ಚರಣವನಂದರ್ಚಿಸಿದನು ||೮೧||

ದೇವರದೇವನೆ ಜಯಜಯಜಯವೆಂಬ | ದೇವರ್ಕಳುಲುಹನುಕೇಳಿ ||
ಭೂವಲಯಮದೆಲ್ಲಪಿರಿದಚ್ಚರಿವಟ್ಟು | ತಾಮಿಳೆಯೊಳುಪೂಜಿಸಿದುದು ||೮೨||

ಬಳಿಕಬಲರಾರಿಕೈಗಳನು ಮುಗಿದುಮುನಿ | ಕುಲತಿಲಕನವಿಗುರ್ವಣೆಯ ||
ತಳುವದೆ ಬಿಡಿಸಿಯಾಬಲಿಯನು ಬಂಧನ | ದೊಳಗಿರಿಸವಸವುಯದೊಳು ||೮೩||

ಹರುಷದಿಗಾಂಧರ್ವರಾವಿಷ್ಣುವಮುಂದೆ | ಕರಕುಶಲದಿಬಾಜಿಸಿದರು ||
ವರಗಾಂಧಾರಿಸುಘೋಷಣೆಯೆಂಬಾ | ಯೆರಡುವಿಪಂಚಿಯತಂದು ||೮೪||

ಆವಿಷ್ಣುಮುನಿಪನ ಬೆಸದಿಗಾಂಧರ್ವ | ರಾವೀಣೆಯನುಭಯವನು ||
ಆವಸುಧಾಧರ ಪದ್ಮರಥಗೆಕೊಟ್ಟು | ತಾವೆಯ್ದಿದರು ತಮ್ಮನೆಲೆಗೆ ||೮೫||

ಅನಿತರೊಳಾಮುನಿಯ ಉಪಸರ್ಗವನುವಿಷ್ಣು | ಮುನಿಪ ಬಿಡಿಸಿಯಾಬಲಿಗೆ ||
ಜನಸುತರತ್ನತ್ರಯವನುಕೊಟ್ಟು ಮ | ತ್ತನುರಾಗದಿಂದೆಯ್ದಿದನು ||೮೬||

ಆ ವಂಶದವೀಣೆಯಿದುತಾನೆಂದು ಮ | ತ್ತಾವೀಣೆಯನೆದೆಗಿಟ್ಟು ||
ಕೋವಿದವಸುದೇವನೃಪತಿಬಾಜಿಸಿದನು | ಭಾವಕಿ ಮೆಚ್ಚುವಂದದೊಳು ||೮೭||

ಅವನುಡಿಯಿಸುವವಿಪಂಚಿಯನಾದಕೆ | ಯವನವಿಲಾಸದುನ್ನತಕೆ ||
ತವೆಸೋಲ್ತುಬಂದು ಮಾಲೆಯನುಸೂಡಿದಳಾ | ಯುವತೀಮಣಿ ಹರುಷದೊಳು ||

ತನ್ನ ಕೈಗಾತನಕೊರಲಿಗೆ ಸಂಕಲೆ | ಯಂ ನೆರೆಹೂಡುವಂದದೊಳು ||
ಚೆನ್ನಮಾಲೆಯಸೂಡೆ ಚಾರುದತ್ತನುಕಂ | ಡುನ್ನತಹರುಷವಡೆದನು ||೮೮||

ಹಸನಾದಂದಿನರಾತ್ರಿಯೊಳತಿಸಂ | ತಸದಿಂದಿಳಿಪೊಗಳ್ವಂತೆ ||
ವಸುದೇವಗೆ ಗಾಂಧರ್ವದತ್ತೆಯನಿತ್ತ | ಸಸದೃಶವೈಭವದಿಂದ ||೯೦||

ಇಂತು ಮದುವೆಯಾಗಿ ಗಾಂಧರ್ವದತ್ತಾ | ಕಾಂತೆಯೊಡನೆ ಭೂವರನು ||
ಸಂತತಸಮರತಿಯೊಳು ಮನಸಿಜನಿ | ರ್ಪಂತೆಯೊಲಿದುಸುಖಮಿಹನು ||೯೧||

ನೋಟದೊಳಲಸಿಕೆಯಕ್ಕರೊಳುಕ್ಕುವ | ಬೇಟದೊಳಗೆ ಭಿನ್ನಮನಸು ||
ಕೂಟದೊಳಗೆ ದಣಿವಸುಪೊರ್ದದಾಸತಿ | ನಾಟಿಸಿದಳು ತನ್ನೊಳವನ ||೯೨||

ಮೇರುಮಹೀಧರ ಸಮಧೀರ ಮನುಜಮಂ | ದಾರಮನೋಜಾತರೂಪ ||
ಕಾರುಣ್ಯನಿಧಿಕಾಂತಾಜನಹೃದಯ | ಕ್ಷೀರವಾರಾಶಿಚಂದ್ರಮನು ||೯೩||

ಇದು ಜಿನಪದಸರಸಿಜ ಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿ ನೇಮಿಜಿನೇಶ ಸಂಗತಿಯೊಳ | ಗೊದವಿದಾಶ್ವಾಸ ಪನ್ನೊಂದು ||೯೪||

## ಹನ್ನೊಂದನೆಯ ಸಂಧಿ ಸಂಪೂರ್ಣಂ



# ೧೨ ರೋಹಿಣೀ ಸ್ವಯಂವರ ಸಂಧಿ



ಶ್ರೀಮದಮರಪತಿಮೌಲಿಕೀಲಿತಪಾದ | ತಾಮರಸದ್ವಯಸಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಒಸೆದಾರಾಜಮಿಥುನವೆರಡಂಗಕೆ | ಯಸುವೊಂದಹಡೆವಂದದೊಳು ||
ಸಸುತೊಲಗದೆ ಸಮರತಿಕೇಳಿಯೊಳು ಸಂ | ತಸದಿ ಸುಖಿಸುತಿರಲಂದು ||೨||

ಅವರುದ್ಧತಮೋಹನದಮನಕೆಯುಬ್ಬು | ಗವಳವನಿಕ್ಕುವಂದದೊಳು ||
ನವಚೈತ್ರಮಾಸಮೊದವೆವನಕೇಳಿಗೆ | ವಿವಿಧವಿಭವದಿನೆಯ್ದಿದರು ||೩||

ಕೃತಕಗಿರಿಯನೇರಿ ಕೃತ್ರಿಮನದಿಗೆಯ್ದಿ | ಲತೆವನಗಳೊಳುಕುಳ್ಳಿರ್ದು ||
ಶತಪತ್ರಾಕರದೊಳು ಮೂಡಿಮುಳ್ಕಾಡಿ | ಯತಿವಿನೋದದೊಳಿರ್ದರಲ್ಲಿ ||೪||

ಕರ್ಪೂರತರುವನದೊಳುಪನಿನೀರ್ಗಳ | ಕಾಳ್ಪೂರದೊಳುನಾಗೊನರ ||
ಸೀರ್ಪನಿಯೊಳಗಾರಾಜಮಿಥುನಪತಿ | ಕೂರ್ಪಿಂತಿರುಗಿಯಾಡಿದುದು ||೫||

ಮತ್ತೊಂದುಮಲ್ಲಿಗೆಯೆಳೆಲತೆವನೆಯೊಳು | ವೃತ್ತಪಯೋಧರೆಯೊಡನೆ ||
ಚಿತ್ತಜಕೇಳಿಯೊಳೊರಗಿರ್ದಾ ಭೂ | ಪೋತ್ತಮನಲ್ಲಿಂಪೆಳ್ದು ||೬||

ಸುರತಾಂತಶ್ರಾಂತಿಯನಾರಿಸಲೆಂದು | ಬರುತಿದಿರೊಳು ಸೊಂಪುವಡೆದ ||
ತರುಣಚೂತದ ತನ್ನೆಳಲೊಳಗೋರ್ವಳು | ತರಳಾಕ್ಷಿ ನಟಿಸಿದಳಿಂತು ||೭||

ತಾಳದಂಡಿಗೆಯಾವುಜವಾಸೆದುಡುಮೆಯ | ಕಾಳೆಮದ್ದಳೆ ಕಿನ್ನರಿಯ ||
ಲೋಲಾಕ್ಷಿಯರುನರ್ತಿಪನೆಂಬ ನಾರಿಯ | ಮೇಳಕೆನಿಂದರಾಬಳಿಯ ||೮||

ಕಿರಿಯಮುಗಿಲ ಮರೆಯೊಕ್ಕಿಂದುಲೇಖೆಯ | ತೆರದಿತೆರೆಯ ಹೊಕ್ಕಬಲೆಯ ||
ಮಿರುಗುವರೂಪ ನೋಡುವೆನೆಂದಾರಾಯ | ನೊರಗಿದನೊಂದೆಳೆಲತೆಯ ||೯||

ಉಗುರಬೀಗುಗೂಡಿಸೂಸೆವೂವಲಿಯನು | ತೆಗೆಯಲಾಳಿಯರು ತೆರೆಯನು ||
ಮುಗುದೆಚಾರದ ಸಂಜೆಯರೋಹಿಣಿಯನು | ಮಿಗೆಗೆಲ್ದಳೀನೆಂಬೆನದನು ||೧೦||

ಕಳೆದತೆರೆಯಮುಂದೆಬಂದು ನಿಂದಾಪಾತ್ರ | ದಳವುರಂಭೆಯ ಭಾವಚಿತ್ರ ||
ಎಳಸಿನಿರೀಕ್ಷಿಸುವಾರಸಿಕರನೇತ್ರ | ಗಳದೊಂದು ಜನ್ಮಪವಿತ್ರ ||೧೧||

ಅಸಿಯುಳಾಟದೊಳಭಿನಯಿಪಕರಾಂಗುಲಿ | ಯೆಸಕದಿಂದಾಶಶಿಮೌಳಿ ||
ನೊಸಲಸಯುಸದಿಂದುರುಪಲುಮ್ಮೈಯಳಿ | ದಸಮಾಸ್ತ್ರಗೆಮರುಜವಳಿ ||೧೨||

ಅಕ್ಶಿಕಾರರಕಣ್ಮನಕೆ ಸಂಮೋಹನ | ಮೂರ್ತಿಮದನನಮಂಡಳಿಕನ ||
ಕೀರ್ತಿಯೆಂದೆನೆರಂಜಿಸುವಾ ವಧುವಿನ | ನರ್ತನವರ್ಗಸಮಾನ ||೧೩||

ಹಲುಬುವಮುಗಿಲವೆಲ್ಲುಲಿಗೆ ಸಂತಸದೊಳು | ನಲಿವಸವಿಲವಾಳ್ಕೆಯೊಳು ||
ಉಲಿವಮದ್ದಳೆಯ ಜತಿಗೆಯುರುಮುದದೊಳು | ಲಲನಾಮಣಿ ನಟಿಸಿದಳು ||೧೪||

ಸೊಗಯಿಪಶುದ್ಧಮಲ್ಲದೆಯುವಗುಣಗಳು | ತೊಗದಿತಕಾಳವಟ್ಟದೊಳು ||
ಬಗೆಗೊಳಿಪ್ಪೈದುವಾದ್ಯದ ಸಂದಣಿಯೊಳು | ಬಗಸೆಗಣ್ಣಬಲೆಯಾಡಿದಳು ||೧೫||

ವನಿತೆಗೊದವಿದುದು ಹಾವವದನದೊಳು | ಮಿನುಗುವ ಭಾವಚಿತ್ತದೊಳು ||
ವಿನುತವಿಳಾಸವತಿಯುತಲೋಚನಗಳೊ | ಳ್ಕೊನೆವುರ್ವಿನೊಳು ವಿಭ್ರಮಗಳು ||೧೬||

ಧಾರಿಣಿಗತಿವಿನ್ನಾಣಿಯಂಗಜಸೂತ್ರ | ಧಾರಿಯಕೈಯ ವಿಚಿತ್ರ ||
ಚಾರುಲಾವಣ್ಯಸುಧಾಂಬು ಪೂರಿತಗಾತ್ರ | ವಾರಿಜವದನೆಯ ಪಾತ್ರ ||೧೭||

ಸತಿಯುರಕುಲಮಣಿಯಾಡುವ ನರ್ತನ | ಯತಿಗಳ ಧೈರ್ಯಾಪಹರಣ ||
ಚತುರಜನಾನೀಕ ಚಿತ್ತಾಕರ್ಷಣ | ಸುತಶೃಂಗಾರೋದ್ಧರಣ ||೧೮||

ಎರಲಿಗಲುಗುವತಮಾಲಲತಿಕೆಯೋ | ತೆರೆಗಲುಗುವ ಕುಮುದಿನಿಯೋ ||
ನೊರೆವಮುಗಿಲ್ಗೆ ಕುಣಿವನವಿಲೋ ಯೆಂದು | ಕರಿಯಳ ನಡೆನೋಡಿದನು ||೧೯||

ಕಾವನಕೈಯಕಿರಿಯ ಕಬ್ಬಿನಬಿಲ್ಲೋ | ಕಾವನೇರುವ ಮದಕರಿಯೋ ||
ಕಾವನರ್ಚಿಪನೀಲದಬೊಂಬೆಯೊಯೆಂ | ದಾವನಿತೆಯ ನೋಡಿದನು ||೨೦||

ನಗೆಮಿನುಗುವಮುದ್ದುಮೊಗವ ತುಂಬಿದಮ್ಮೈಯ | ಹೊಗರನೇಳಿಪನೀಲಿಗುರುಳ ||
ಮೃಗಮದವರ್ಣದ ಮೈಯಕೋಮಲೆಮಿಗೆ | ಬಗೆಯಬಂಧನವ ಮಾಡಿದಳು ||

ನೀಲಕರಂಡಕವೋ ಕುಚವೋಕ | ವಾರ್ಳಿಯಕಂಬವೊ ತೊಡೆಯೋ ||
ತೋಳೋ ಮದನಕೃಷ್ಣಪಂಚಫಣಾಹಿಯೋ | ಜಾಲೆಯೊ ಮನಸಿಜಗಜವೋ ||

ಎಂದುನೋಡುತ್ತೀ ಕುಸುಮಕೋಮಲೆಯಾರ | ನಂದನೆಯೆನಲಾಸತಿಯು ||
ಒಂದಾಗಿರ್ದವಳಿವಳು ಚಾಂಡಾಳಿಕೆ | ಯೆಂದುಪೇಳಲು ವಸುದೇವ ||೨೩||

ಇದುಚಿತ್ರವಿಾಚಾಂಡಾಳಿಕೆಗೀರೂಪು | ವಿದಿತವಿಲಾಸವೆಂಬಾಗ ||
ಮದನಸದೃಶರೂಪನನೊಲವಿನೊಳ್ನೋಡಿ | ಚದುರೆಮೂರ್ಛೆಯನೆಯ್ದಿದಳು ||೨೪||

ಅನಿತರೊಳಾಸಹಚರಿಯರು ಮರುಕದಿ | ಘನಶೈತ್ಯೋಪಚಾರವನು ||
ವನಿತೆಗೆಮಾಡುತಿರಲು ಬಂದುಕಂಡಾ | ವನಜಾಕ್ಷಿ ಗಾಂಧರ್ವದತ್ತೆ ||೨೫||

ಅತಿಮುಮತೆಯೊಳುನೀನಿವಳನು ನೋಳ್ಪುದು | ಮತವಲ್ಲಕಹಿಸೋರೆಯೊಳಗೆ ||
ಹಿತವುಂಟೆಯೆಂದು ಪತಿಯಪಿಡಿದೆಳೆದಳು | ರತಿಯುತಸುವನೆಳೆವಂತೆ ||೨೬||

ಅಂತೊಯ್ದು ಪ್ರಣಯಕಲಹಕಲುಷಿತೆಯಾಗಿ | ಕಾಂತಸೊಳವಳಿರಲಿತ್ತ ||
ಸಂತಸದಿಂ ಕೃತ್ರಿಮಚಾಂಡಾಳಿಕೆ | ಯಂತಂದಬಿಜ್ಜಾದರಿಯರು ||೨೭||

ಆದೇಶಪುರುಷನು ದೊರಕಿದನೇಳೆಂ | ದಾದರಹಸಿತಾನನೆಯು ||
ಸಾದರದಿಂತಮ್ಮ ಪುರಕೆಯ್ದಿಸಿಯವ | ಳ್ಗಾದವಸ್ಥೆಗಳೆಲ್ಲವನು ||೨೮||

ತರುಣಿಯುಪಿತೃಸಿಹ್ಮನಾದಖೇಚರಸೊಳ | ಗಿರದೆನಿವೇದಿಸಲಾಗ ||
ಹರುಷದಿವೈತಾಳಿಯೆಂಬ ದೇವತೆಯುನು | ಕರೆದುಕಾರಣ ಪುರುಷನನು ||೨೯||

ತರಹೇಳಲದು ಚಂಪಾಪುರವರಕೆಯ್ದಿ | ಭರದಿಂ ವಸುದೇವನನು ||
ಗರುವೆಗಾಂಧರ್ವದತ್ತೆಯಕೂಡಿ ನಿದ್ರೆಯೊ | ಳಿರಲೆತ್ತಿತಂದಾಕ್ಷಣದೊಳು ||೩೦||

ಆವಿಜಯಾರ್ಧದ ಮೇಘಪುರಕೆತರ | ಲಾವಸುಧಾವಲ್ಲಭನು ||
ಕೋವಿದಗಿದಿರ್ವಂದು ಕೊಂಡೊಯ್ದು ಹರುಷದಿ | ಭಾವೆಯುಮದುವೆಮಾಡಿದನು ||

ಇಂತುನೀಲಾಂಜನೆಯೊಳು ಮದುವೆಯನಿಂದು | ಕಂತುಸದೃಶ ವಸುದೇವ ||
ಸಂತಸದಿಂರತಿಸುಖದೊಳೋಲಾಡಿನಿ | ಶ್ಚಿಂತದಿಕೆಲದಿನವಿರ್ದು ||೩೨||

ಭೂವಲಯುಕ್ಕವತರಿಸುವೆನೆಂದಾ | ಮಾವನೊಳುಸುರಲುಕೇಳ್ದು ||
ಸಾವಧಾನದಿಪರ್ಣಲಘುವಿದ್ಯೆಯಿಂ ವಸು | ದೇವನನಿಳೆಗಿಳುಹಿದನು ||೩೩||

ಈತೆರದಿಂಬಿಜ್ಜಾದರನಾಡಿಂ | ಭೂತಳಕಿರದೆಯ್ತಂದು ||
ಪ್ರೀತಿಯಿಂ ಭೂಚರಖೇಚರನೃಪತನು | ಜಾತೆಯುರತಿಚತುರೆಯರ ||೩೪||

ಕೆಲಬರನಾಗಾಂಧರ್ವವಿವಾಹದಿ | ಕೆಲಬರನಾದೇಶಮುಖದಿ ||
ಕೆಲಬರನಾಸ್ವಯಂವರದಿಂದಾನೃಪ | ತಿಲಕನುವರಿಸಿದನೊಸೆದು ||೩೫||

ಇಂತೇಳುನೂರತೊಂಬತ್ತೇಣ್ಬರು ಭೂ | ಕಾಂತಸುತೆಯರ ಸ್ವೀಕರಿಸಿ ||
ಸಂತಸದಿಂ ಕೆಲಪಗಲುಮತ್ತಲ್ಲಲ್ಲಿ | ಕಂತುಸುಖವನನುಭವಿಸಿ ||೩೬||

ಅವರನವನುತಂದೆತಾಯ್ಗಳ ಬಳಿಯೊಳು | ಸುವಿನಯದಿಂದಿರಿಸುತವೆ ||
ಕುವರನರಿಷ್ಟಪುರದಪೊರಗೊಪ್ಪುವ | ನವನಂದನಕೆಯ್ದಿದನು ||೩೭||

ಆನಗರಿಯೊಳು ಹಿರಣ್ಯಾಕ್ಷನೆಂಬೋರ್ವ | ಭೂನಾಥನಾತನವನಿತೆ ||
ಭೂಸುತೆಗುಣವತಿಯವರೀರ್ವರಿಗೋರ್ವ | ಮಾನಿನಿಜನಿಸಿಯೊಪ್ಪಿದಳು ||೩೮||
ರೋಹಿಣಿಯೆಂಬವಳಾಕೆಯ ರೂಪಿಗೆ | ಊಹಿಸಿನೋಡಲು ರತಿಯು ||
ರೂಹಪರಂಜಿಯುತಗಡಿಗೆಕರ್ಬೊನ್ನ | ನೂಹಿಸಿನೋಡುವಂತಿಹುದು ||೩೯||
ಆತ್ರಿಭುವನಸೌಂದರ್ಯಸಂಕೇತಧ | ರಿತ್ರಿಯನಾ ಕೋಮಲೆಯ ||
ಧಾತ್ರಿಪರಾರುಬೇಡಲು ಕೊಡದಾಹೇಮ | ನೇತ್ರಸ್ವಯಂವರಗೃಹವ ||೪೦||
ವಿರಚಿಸಲಲ್ಲಿಗೆ ಸಾಗರವಿಜಯಭೂ | ವರಮೊದಲಾದರಸುಗಳು ||
ನೆರೆದುಕುಳ್ಳಿರಲಾಯೆಡೆಗಾ ವಸುದೇವ | ನುರುಮುದದಿಂದೆಯ್ದಿದನು ||೪೧||
ಪೋಗಿಸ್ವಯಂವರ ಮಂಟಪವನು ಸಾನು | ರಾಗದಿಹೊಕ್ಕಮತ್ತಲ್ಲಿ ||
ಆಗರುವೆಯನುಬಯಸಿ ಕುಳ್ಳಿರ್ದಾ | ಭೂಗಧಿಪರಕಂಡನಾಗ ||೪೨||
ಆಯೆಡೆಯೊಳುವಾದಿಸುವ ವಾದಕಸಂಪ್ರ | ದಾಯದೊಳೋರ್ವವಾದಕನು ||
ಒಯ್ಯಾರದಿಂಬಾಜಿಪವಾದ್ಯವನು ವಿ | ಡಾಯಕಾರನೀಸಿಕೊಂಡು ||೪೩||
ಆವಾದ್ಯವ ತನ್ನ ಕೊರಲೊಳಗಿಟ್ಟನಾ | ನಾವಿಧವಾಗಿ ಬಾಜಿಸುವ ||
ಆವಾದ್ಯದಧ್ವನಿಗಾವಾದ್ಯಕಾರರು | ತಾವತಿಚೋದ್ಯವಡೆದರು ||೪೪||
ಆಪದದೊಳಗಲರ್ವಿಲ್ಲಬಲ್ಲಹಬಹು | ರೂಪುವಡೆದ ಮಾಳ್ಕೆಯೊಳು ||
ಭೂಪಾಲಸಂತತಿಕುಳ್ಳಿರಲವರ ಮ | ತ್ತಾಪೆಣ್ಮಣಿನೋಡಿದಳು ||೪೫||
ಅವರೊಳುತನ್ನ ಮನಕೆ ತಕ್ಕಲಾವಣ್ಯ | ನವಯೌವನಗಂಡಗಾಡಿ ||
ಭುವನಾತಿಶಯ ರೂಪಯುತರಿಲ್ಲದಿರಲಾ | ಯುವತೀಮಣಿಮುಂದಕೆಯ್ದಿ ||೪೬||
ನಟನೆವಿಗಲುನಡೆನೋಳ್ಪನೃ ಪರನಟ || ವಿಟರಕಂಡಂತೆ ಕೊಕ್ಕರಿಸಿ ||
ಚಟುಲಚಕೋರಲೋಚನೆ ಕಂಡಳಾನಿ | ಷ್ಕುಟಿಲಕುಮಾರಚಂದ್ರಮನ ||೪೭||
ತುಂಬಿಕುಳ್ಳಿರ್ದಕುಮಾರಕರುಗಳ ವಿ | ಡಂಬಿಸಿ ಬಿಸರುಹನಯನೆ ||
ಮುಂಬರಿದೀಕ್ಷಿಸಿ ಸಲೆಸೋಲ್ತಳಾ ರವಿ | ಬಿಂಬಸದೃಶತೇಜಯುತಗೆ ||೪೮||
ಅತಿರೂಪಯುತರೆಂದೆನಿಪವನೀಶ್ವರ | ಸುತರತಿರಸ್ಕಾರಮಾಡಿ ||
ಸುತಸತ್ಯವಾಣಿ ನಡೆದುಬಂದಳಾಕಡು | ಚತುರಚತುರ್ಮುಖನೆಡೆಗೆ ||೪೯||
ರನ್ನಗನ್ನಡಿಯನೇಳಿಪವದನದ ಹೊಸ | ಹೊನ್ನಕಳಸಕುಚಯುಗದ ||
ಚಿನ್ನದಚಿತ್ರದಂದದಿನಾಪೆಣ್ಮಣಿ | ಸೆನ್ನುತನೆಡೆಗೆಯ್ದಿದಳು ||೫೦||

ಸಿಡುಗಣ್ಗಳ ನಿಬಿಡಸ್ತನಗಳಪಿಡಿ | ನಡುವಿನ ಪೀಲಿದುರುಬಿನ ||
ಕಡುಚೆಲ್ವುವಡೆದ ಸೊಬಗುಗಂತಿಮೆಲ್ಲನೆ | ನಡೆತಂದಳಾ ನೃಪನೆಡೆಗೆ ||೫೧||

ಮೊತ್ತದವಾನ್ನಿಯರುಗಳ ಧೈರ್ಯಂಗಳ | ನೆತ್ತರತತ್ತರವಮಾಡಿ ||
ಚಿತ್ತವನಿತ್ತು ನೂತನಲಕ್ಷ್ಮಿಯಾ ಪುರು | ಷೋತ್ತಮಗತಿಸೋಲ್ತಳಾಗ ||೫೨||

ರೂಢಿಸಿದವನೀಶ್ವರರರೂಪವನು ರೋ | ಡಾಡಿಕನಕಲಲಿತಾಂಗಿ ||
ಗಾಡಿಯಿಂದಾ ಭೂಪಾಲವಸಂತಗೆ | ಸೂಡಿದಳಲರವಾಲೆಯನು ||೫೩||

ರಾಜಾಧಿರಾಜಕದಂಬವ ಬಿಸುಟಾ | ರಾಜಶೇಖರಗೆ ಸೂಡಿದಳು ||
ಓಜೆಯಿಂದಾ ಅಭಿನವಪಾರ್ವತಿ ವಿ | ಭ್ರಾಜಿಸುವಲರ ಮಾಲೆಯನು ||೫೪||

ಭೂಲೋಕಾಧಿಪರಿರ್ದಂತೆ ವಾದಕ | ಗಾಲೋಲಾಕ್ಷಿಯೊಲಿದಳು ||
ಬಾಲೆಯರೊಲಿದೊಡೆ ಮೊರೆಜಾತಿಯೆಂಬುದ | ನಾಳೋಚನೆಮಾಳ್ಪದಿಲ್ಲ ||೫೫||

ಇದರಿಂದಿಳೆಯೊಳಗಪಕೀರ್ತಿಯೊದವುವು | ದಿದರಿಂದಕೇಡುದಯಿಪುದು ||
ಇದರಿಂಕುಲಹಾನಿಯೆಂಬುದರಿಯರೊಲ್ಮೆ | ಗೆದೆಯ ನಿತ್ತೇಣಾಕ್ಷಿಯರು ||೫೬||

ಮೇಲುತಾಗೆಂಬುದನೇನೆಂದರಿಯರು | ಕಾಲೋಚಿತಪಭಾಪಿಸರು ||
ಸೋಲವಸೊಗಸೆದೆಯೊಳಗಾವರಿಸಿದ | ಲೋಲಾಕ್ಷಿಯರಿಳೆಯೊಳಗೆ ||೫೭||

ಮೋಹೋನ್ಮತ್ತದಫಲವು ಮೈದಾಗಿದ | ಮೋಹಿಗಳಿದಿರನೀಕ್ಷಿಸರು ||
ಈಹದಟಿಂಕೇಡುಸಮುಗಪ್ಪದೆಂಬುದ | ನಂಹೆಗಿನಿಸು ತಂದರಿಯರು ||೫೮||

ಮೋಹಿಮುಂಗಾಣ್ಬುದಿಲ್ಲೆಂಬಾನಾಣ್ನುಡಿ | ಈ ಹೆಣ್ಣಿಂತೆರೆದರ್ಶನವೂ ||
ಆಹಾ ಕಡುಚೆನ್ನಾಯಿತ್ತೆಂದನು | ತಾಹಿರಣ್ಯಾಕ್ಷನು ಬಗೆದು ||೫೯||

ಒಂದಿದಚಿಂತೆಯಿಂದೆಯ್ದಂದಾ ಸವ | ಕಂದರ್ಪ ವಸುದೇವನೆಸೆವ ||
ಸುಂದರತೆಯನೋಡಿ ಈತನುತ್ತಮಜಾತಿ | ಯೆಂದಾಮೋದವನೆಯ್ದಿ ||೬೦||

ಅವನಜಲ್ಲಿಕೆಯನವನಲಾವಣ್ಯವ | ನವನುತ್ತಮಯೌವನವ ||
ಅವನಗರುವತನವನು ಕಂಡಾಭೂ | ಧವನತಿ ಸಂತಸವಡೆದು ||೬೧||

ಬಳಿಕಾದಂಪತಿಗಳ ರತ್ನಮಯರಥ | ದೊಳಗೆಕುಳ್ಳಿರಿಸಿ ಸಂಮುದದಿ ||
ಪೊಳಲೊಳಪೊಗಿಸೆ ಮತ್ತೆನಭೂಪಾಲಸಂ | ಕುಲಮೆಲ್ಲಮಂತದನರಿದು ||೬೨||

ಅಂತರಮುಪ್ಪಜಪತಿಗೆ ಮಾಲೆಯನಾ | ಕಾಂತೆ ಸೂಡುವುದನುಚಿತವು ||
ಇಂತಿದನಾವು ವಿಚಾರಿಸದೊಡೆದೋ | ಷಂತಪ್ಪದು ನಮಗೆಂದು ||೬೩||

ಚರನನೋರ್ವನನುಕರೆದು ಹೇಮಾಕ್ಷಭೂ | ವರನಲ್ಲಿಗಟ್ಟಲಂತವನು ||
ಭರದಿಂಪೋಗಿಯಿಂತೆಂದಾಡಿದನು ನಿ | ಷ್ಠುರತರವಚನಗಳಿಂದ ||೧೪||

ರಾಜಸುತೆಯನು ತಜ್ಞಾತಿಗೆಕುಡುವುದೊಂ | ದೋಜೆಯ ವಿಾರಿದುಷ್ಕುಲದ ||
ಬಾಜನೆಕಾರಗೆಕುಡುವುದುಚಿತವೆಯೆಂ | ದಾಜನಪತಿಗಳಟ್ಟಿದರು ||೧೫||

ನೆರೆದನೃಪರೊಳಣುಗೆಯನಾರ್ಗೀವೆನೆಂ | ದರಸಸಂದೆಗ ಮಾಡಬೇಡ ||
ದುರಗಲಿಯರ್ಧಚಕ್ರೇಶಜರಾಸಂಧ | ಗುರುಮುದದಿಂದೀವುದೆನಲು ||೧೬||

ಇಂತೆಂಬ ಚರನಮಾತನುಕೇಳಿಯಾಕ್ರೋ | ಧಾಂತಕನಾ ವಸುದೇವ ||
ಮಂತಣವೇಕಿನ್ನು ನಿಮಿಷಮಾತ್ರದೊಳಾ | ತಿಂತಿಣಿಗೊಂಡ ಭೂವರರ ||೧೭||

ನೆಲಹೊರದಂತಪ್ಪ ಜಲವನುನೆಲದೊಳ | ಗಲಸದೆ ನೆರಪಿಯಂತಕಗೆ ||
ನೆಲೆಯಾಗಿಯಾತಣವನು ಮಾಡದಿರ್ದೊಡೆ | ಪುಲುವಾನಿಸಮಾತ್ರೈಸೆ ||೧೮||

ಬಾಜನೆಕಾರನಾನಹುದೆನಗಿದಿರಾಗಿ | ಯಾಜಿರಂಗದೊಳೆನ್ನ ಗೆಲಿದು ||
ಈ ಜಲಜಾಕ್ಷಿಯ ಕೊಂಡೊಯ್ವೊಡೆ ತಾವು | ರಾಜರ ಬಸಿರ ಬಂದವರು ||೧೯||

ಎಂದು ನುಡಿದು ದೂತನ ಬೀಳ್ಕೊಟ್ಟಾ | ಕಂದರ್ಪರೂಪನನೋಡಿ ||
ಸಂದೇಹವ ಬಿಟ್ಟು ಹೇಮಾಕ್ಷನೃಪವರ | ನಂದುಕಲಹಕುಜ್ಜುಗಿಸಿದ ||೨೦||

ಚರನನುಡಿಯನಿತ್ತುಕೇಳಿ ನೃಪಾಲಕ | ರುರುಕೋಪಾರೂಢರಾಗಿ ||
ಭರದಿಂದೆಯ್ತಂದೆಡೆಯಿಲ್ಲದಂತಾ | ಪುರವಮುತ್ತಿದರು ಮೂವಳಸಿ ||೨೧||

ಆ ನಗರಿಯ ಧೂಳಿಗೋಂಟೆಯು ಕೊಳಲೆಂ | ದಾನಾಡನಾಡಮನ್ನೆಯರು ||
ಆನದೆ ಬಂದು ಮುತ್ತಿದರಾರ್ಭಟೆಯಿಂ | ಜೇನೆಯ್ದಿ ಮುಸುಕುವಂದದೊಳು ||೨೨||

ಆವೇಳೆಯೊಳು ಹಿರಣ್ಯಾಕ್ಷನಾವಸು | ದೇವಸಹಿತ ಬಲವೆರಸಿ ||
ತೀವಿದ ಕೋಪಾಟೋಪದಿಂದವೆ ತನ್ನ | ಊರನೆಪೊರಮಟ್ಟನಾಗ ||೨೩||

ಇಂತು ಪೊಳಲಪೊರಮಟ್ಟಾಬಲವ ಕಂ | ಡಂತಕನಾ ಒಹುರೂಪ ||
ತಾಂ ತಳೆದಂದದಿ ಕಡುಮುಳಿದಾನೃಪ | ಸಂತತಿಯಾರುತೇರಿದುದು ||೨೪||

ತಬ್ಬಿಬ್ಬಿಗೊಂಬ ಹಿರಣ್ಯಾಕ್ಷನ ಪೌಜಿ | ನುಬ್ಬೆಯಕಂಡು ಕೋಪದೊಳು ||
ಗಬ್ಬಿಗಳರಸನು ವಸುದೇವನಿದಿರಾಗಿ | ಕೊಬ್ಬಿರಿದಾಗಲೇರಿದನು ||೨೫||

ಗಂಡರಗಂಡನುದ್ದಂಡನೊಂದೇಬಿಲ್ಲು | ಗೊಂಡಾಗನಾನಮನ್ನೆಯರ ||
ಮಂಡಳಿಸಿದ ಮೋಹರವ ಹೊಕ್ಕನು ಹಸು | ವಿಂಡ ಹೆಬ್ಬುಲಿ ಹೊಕ್ಕಂತೆ ||೨೬||

ಎಕ್ಕತೂಳದ ಬಂಟನಾವಸುದೇವನು | ಕಕ್ಕಸದಿಂದಿದಿರಾದ ||
ಲೆಕ್ಕವಿಲ್ಲದ ಮನ್ನೆಯರ ಮೋಹರವನು | ಹೊಕ್ಕು ಸಂಹಾರವಮಾಡಿದನು ||೭೭||

ಕಲಿಗಳರಸನೆಚ್ಚ ಕಣೆಗಳೊಂದೊಂದು ಮಾ | ರ್ಮಲೆವ ಮನ್ನೆಯರ ಮೋಹರದ ||
ಪಲವಾನೆಕುದುರೆ ಕಾಲಾಳು ತೇರುಗಳನು | ನೆಲಕಿಕ್ಕಿದನು ನಿಮಿಷದೊಳು ||೭೮||

ಆಳುಕದೆ ನಿಂದತಿರಥರೆಸುವಾ ಕಣೆ | ಗಳನಾಬಿಲ್ಲನಾರಥವ ||
ತಳುವದೆಕಡಿದು ಭಂಗಿಸಿದನವನ ಕೈಯ | ಚಳಕವನೇನಬಣ್ಣಿಪೆನು ||೭೯||

ಆರೆಬರ ನೆಲಕಿಕ್ಕಿಯರೆಬರ ಬೆದರಿಸಿ | ಯರೆಬರ ನೋಡಿಸಿ ಬಳಿಕ ||
ಅರಿಯರೆನಿಪರಾಯರ ಪೌಜಿನೊಳು ಚಾರಿ | ವರಿದಾಡಿದನಾಸುಭಟ ||೮೦||

ಬೀರಿತೋಡಿತು ಬೀರಾಳ್ವತಿ ಹಯದೊಡ್ಡು | ಮುರಿದುದಾನೆಯ ಬಲುಪೌಜು ||
ಹೆರೆಸಾರಿತು ತೇರಕಟ್ಟುತಟ್ಟಾದುದು | ನರೆಗಲಿಯೆಸುವುರವಣೆಗೆ ||೮೧||

ಎಲ್ಲಿಯುಮಾರಿಯು ಬರಿಯಚಿವುಟಿ ಮ | ತ್ತೆಲ್ಲಿಯ ಬಲುಮಿಳ್ಳುವಿನ ||
ಹಲ್ಲಟೆಗಾಡಿದೆವೆನುತೊಲ್ಲೈಸಿತು | ಬಲ್ಲಿದನೃಪನಿಕುರುಂಬ ||೮೨||

ಮಾಳವ ಮಗಧಕಳಿಂಗಗುಜ್ಜರ ನೇ | ಪಾಳ ಕೊಂಕಣಪಾಂಚಾಳ ||
ಚೋಳತೆಲುಂಗಭೂಭುಜರವನೆಸುಗೆಯ | ತಾಳಲಾರದೆ ತೊಲಗಿದರು ||೮೩||

ಹರೆಗಾರಸಲ್ಲಿವನಿರಿಗಾರನೆನುತವೆ | ಬೆರಗಾಗಿ ನಾಡಮನ್ನೆಯರು ||
ಗರಿಮೂಡಿದಂತೆ ಬೆಳ್ಳೆರಲೆಗೆ ನಿಮಿಷದಿ | ಬಿರಿತೋಡಿದರು ದಶದಿಶೆಗೆ ||೮೪||

ಅದನರಿದರ್ಧಚಕ್ರೇಶ ಜರಾಸಂಧ | ನಿದುಹರಿವಂಶಾಗ್ರಗಣ್ಯ ||
ಅಧಟನಂಬುಧಿವಿಜಯಂಗಲ್ಲದಾಗದೆಂ | ಬುದಕೇಳಿ ಕೆಕ್ಕಳಗೆರಳಿ ||೮೫||

ವಿಜಿಗೀಷು ವಸುದೇವನೆಸುಗೆಗೆ ಸಕಲಭೂ | ಭುಜರೆಲ್ಲ ಹೆರಸಾರಲಾಗ ||
ನಿಜಗಲಿತನದಿಂದಿದಿರಾಗೆ ಸಾಗರ | ವಿಜಯನೆಕ್ಕಟಿಗಲಿನಿಂದ ||೮೬||

ಕದುಬಿತನ್ನೊಳು ಕಾದಲೆಂದು ರಥವ ಸಾರ್ಚು | ತಿದಿರಾದ ಭಟನಿವನಾರು ||
ಅದಿರದೆನುತ ಪೆಚ್ಚುತಾವಸುದೇವನಂ | ದೊದವಿಶರವತೆಗೆದೆಚ್ಚ ||೮೭||

ಶರಧಿವಿಜಯನೆಚ್ಚ ಕಣೆವಸುದೇವನ | ಶಿರದಮೇಲಾವಸುದೇವ ||
ನಿರದೆಚ್ಚ ಶರವು ಸಾಗರವಿಜಯನ ಚಾರು | ಚರಣದೊಳೆರಗುತಮಿರಲು ||೮೮||

ಆರುಭಟೆಯೊಳಾನೆಚ್ಚ ದಿವ್ಯಾಸ್ತ್ರಗ | ಳಾರ್ವೆಯದೆನಗಿದಿರಾದ ||
ವೀರನ ಮೃದುಪಾದ ತಳಕೆರಗುವುದೇನು | ಕಾರಣವಿವನಾರೆಂದು ||೮೯||

ಸಾರಥಿಯನು ಕೇಳಲವನಿಂತೆಂದನೀ | ಧೀರನು ಹರಿಕುಲತಿಲಕ ||
ಮೇರುಸದೃಶಧೀರಸಂತಕನಿಭ ಕೋಪ | ವಾರಿಧಿವಿಜಯಭೂವರನು ||೯೦||

ಎಂದ ನುಡಿಯ ಕೇಳುತಾವಸುದೇವನು | ಮಂದೇತರಘೋರುವಾಗಿ ||
ಇಂದು ಸೋದರನೊಳು ಕಾದುವಪಾತಕ | ಪೊಂದಿತೆನಗೆ ಪಾಪವಶವಿ ||೯೧||

ಎಂದು ಬಿಲ್ಲಂಬುಗಳನುಬಿಟ್ಟು ಸುಮ್ಮನೆ | ನಿಂದಿರ್ದಾಸಾಹಸಿಯೊಳು ||
ಕುಂದಲ್ಲವೆರಣದೊಳುಕೈದುಬಿಸುಡುವು | ದೆಂದಸಾರಥಿಗಿಂತುನುಡಿದ ||೯೨||

ಹಿರಿಯಣ್ಣನೊಳು ಮುಂದರಿಯದೆ ರಣದೊಳು | ಹಿರಿದುಹೋರಿದೆನೆಂದೆನುತ ||
ಇರವನೆಲ್ಲವನು ತಿಳಿಯಪೇಳುತಿಂತೆಂದ | ಕರುಣಹೃದಯ ವಸುದೇವ ||೯೩||

ಸಾದರದಿಂದಾಸೆಯುದ್ಧವ ಬರವನಿ | ವೇದಿಸು ಮುಂದೆ ನೀಪೋಗಿ ||
ಸೋದರನೊಳಗೆಂದು ಕಳುಹಲಾ ಸಾರಥಿ | ಪೋದನು ತಾನಾತನೆಡೆಗೆ ||೯೪||

ಪೋಗಿ ಸಾಗರವಿಜಯನ ಪಾದಕೆ ತಲೆ | ವಾಗಿ ತ್ವದೀಯಾನುಜಾತ ||
ಆ ಗಂಡುಗಲಿ ವಸುದೇವನು ನಿಮಗಿದಿ | ರಾಗಲಣ್ಮದೆ ಬಿಲ್ಲಬಿಸುಟು ||೯೫||

ನಿಮ್ಮಡಿಗೆರಗಲು ಬರುತಿರ್ದಪನೆನೆ | ಗಮ್ಮನೆ ಬಿಲ್ಲನೀಡಾಡಿ ||
ತಮ್ಮ ಸಿರವಪೇಳಲು ತೊಟ್ಟತೊಡವನು | ಸಮ್ಮದದಿಂ ಕೊಟ್ಟನವಗೆ ||೯೬||

ಅನಿತರೊಳಾವಸುದೇವನು ರಥದಿಂ | ದನುರಾಗದಿಂದಿಳಿತಂದು ||
ಮಿನುಗುವ ಮಕುಟಮಣಿಯನಣ್ಣನ ಪಾದ | ವನಜಮೂಲದೊಳಿಕ್ಕಿದನು ||೯೭||

ಇಂತು ವಿನಯವಿನಮಿತನಾದ ತಮ್ಮನ | ಸಂತಸದಿಂಬಿಗಿಯಪ್ಪಿ ||
ಕಂತುಸದೃಶ ಹರಿವಂಶಭಾನುವೆ ನೀ | ನಿಂತೆನ್ನ ಬಿಟ್ಟೆಯುದ್ಧವರೆ ||೯೮||

ದೇಸಿಗನಾಗಿ ಈತೆರದಿನೋರ್ವನೆ ಪರ | ದೇಶಕೆ ಪೋಪುದುಚಿತವೆ ||
ದೇಶಾಧಿಪತ್ಯವ ಬಿಟ್ಟೆಂದಾಭೂ | ಮೀಶ ಕಣ್ಣೀರಿಡುವಾಗ ||೯೯||

ಹರುಷದಿನಕ್ಷೋಭ ಮೊದಲಾದಣ್ಣಂ | ದಿರು ಬರಲಾಗವರಡಿಗೆ ||
ಸಿರದಲೆಯಿಕ್ಕಲಂತವರಿರದಮರ್ದಪ್ಪಿ | ಹರಸಿದರತಿಹಿತದಿಂದ ||೧೦೦||

ಬಳಿಕ ಹಿರಣ್ಯಾಕ್ಷನಂತದನರಿದಾ | ಜಲಧಿವಿಜಯನೆಡೆಗೈದಿ ||
ತಳೆದನು ಕಡುಹರುಷವನತಿದಾರಿದ್ರ್ಯ | ನೆಳಸಿ ನಿಧಿಯಪಡೆವಂತೆ ||೧೦೧||

ಶರಧಿವಿಜಯಭೂವರನನುಜಾತನು | ವರರೂಪಯುತವಸುದೇವ ||
ದುರಗಲಿಯೆಂಬುದನರಿದು ನೆರೆದಭೂ | ವರರೆಲ್ಲ ಹರುಷವೆಯ್ದಿದರು ||೧೦೨||

ಮತ್ತೆ ಹಿರಣ್ಯಾಕ್ಷನಬ್ಧಿವಿಜಯಭೂ | ಪೋತ್ತಂಸನುಸಹಮಾಗಿ ||
ಪತ್ತನವನು ಪೊಕ್ಕತಿವೈಭವದಿಂ | ದುತ್ತಮಮಪ್ಪ ಲಗ್ನದೊಳು ||೧೦೩||

ನೆರೆದ ನರೇಂದ್ರರೆಲ್ಲರು ದಿಬ್ಬಣಿಗರಾಗೆ | ಧರೆಯೆಲ್ಲ ಕೊಂಡಾಡುವಂತೆ ||
ವರಸುತೆ ರೋಹಿಣಿಯನು ವಸುದೇವಭೂ | ವರಗೆ ಮದುವೆಮಾಡಿದನು ||೧೦೪||

ಮದುವೆಯುಮಾಡಿವಧೂವರರನು ಸಂ | ಮದದಿನಿರಿಸಿಕೊಂಡು ಬಳಿಕ ||
ಉದಧಿವಿಜಯಭೂಪಾಲನಸತಿವಿನ | ಯದೊಳೂರಿಗೆ ಕಳುಹಿದನು ||೧೦೫||

ಅಣ್ಣನನುಜ್ಞೆಯೊಳುಳಿದಾ ವಸುದೇವ | ಹೆಣ್ಣಕುಲಕೆ ಮಾಣಿಕದ ||
ಕಣ್ಣಬೆಳಂತಿಗೆಬೆಳಗೆಂಬ ಬಲೆಯೊಳು | ಬಣ್ಣಿಸಲೇನು ಸಿಕ್ಕಿದನು ||೧೦೬||

ಕುಸುಮಗಂಧಿಯಕುಮುದಾಕ್ಷಿಯಬಂದುಗೆ|ಯೆಸಳ್ವಾಯಿದೆರೆಯಕೋಮಲೆಯ ||
ಮಿಸುನಿದಾವರೆಮೊಗ್ಗೆಮೊಲೆಯೊಳವಸದಿಟ್ಟ | ಹಸುಳೆದುಂಬಿಯೊಲೆರಗಿದುವು ||

ಇಂತಿರುತೊಂದು ರಾತ್ರಿಯೊಳಾವಿಭು ನಿ | ಶ್ಚಿಂತದೊಳಾ ಸತಿಯೊಡನೆ ||
ಸಂತಸದಿಂ ನಿದ್ರೆಯೊಳಿರೆಖೇಚರ | ಕಾಂತೆಯೋರ್ವಳೆಯ್ತಂದು ||೧೦೮||

ಉರುಮುದದಿಂದೆತ್ತಿಕೊಂಡು ವಿಮಾನದೊ | ಳಿರಿಸಿ ತಪನ್ಮಾನಂದಪುರದ ||
ವರನಂದನದೊಳಗಿರಿಸಲವಳಪತ್ರ | ಮಾರುತವೇಗಗೆ ಸೂಚಿಸಲು ||೧೦೯||

ಕರಮೊಳ್ಪಿತೆಂದವನಿದಿರ್ವಂದು ಕಾರಣ | ಪುರುಷನ ಪುರಕೆಯ್ತಂದು ||
ತರಳಲೋಚನೆ ಚಂದ್ರಲೇಖೆಯನತ್ಯಾ | ದರದಿಂದ ಮದುವೆಮಾಡಿದನು ||೧೧೦||

ಆ ಚಂದ್ರಲೇಖೆಯೊಳೊಲವಿಂ ಕುಸುಮನಾ | ರಾಚನಸದೃಶನಿರ್ದುಬಳಿಕ ||
ಭೂಚಕ್ರಕೆ ಪೋಪೆನೆಂದಾನೃಪನೊಳು | ಸೂಚಿಸಲವನದಕೇಳಿ ||೧೧೧||

ಅದುಲೇಸೆಂದು ನಂದನೆಗುಡುವಲಿಗೊಟ್ಟು | ಒದವಿದವೈಭವದಿಂದ ||
ನವಮಲರೂಪಯುತನನು ಕಳುಹಿದನು | ಮುದದಿಂದಾಖೇಚರನು ||೧೧೨||

ಪದಪಿಂದೆಯ್ದಿಯರಿಷ್ಟನಗರಿಗಾ | ಸುದತಿ ರೋಹಿಣಿಯೊಡಗೂಡಿ ||
ಮೊದಲುಮದುವೆಯಾದ ಖೇಚರಭೂಚರ | ಮದವತಿಯರನೆಲ್ಲರನು ||೧೧೩||

ಇಂದುವದನೆ ಚಂದ್ರಲೇಖೆಯು ವಿದ್ಯೆಗ | ಳಿಂದ ಕರೆಯಲಟ್ಟಲವರು ||
ಬಂಧಿದಹರುಷದಿನಾನಗರಿಯ ಪೊರ | ನಂದನಕೆಯ್ದಿದರು ||೧೧೪||

ಕಾಮಧೇನುವು ಕರೆವಂದದಿತನುಜೆಗೆ | ಪ್ರೇಮದಿನುಡುವಲಿಗೊಟ್ಟು ||
ಹೇಮಾಕ್ಷಕಳುಹೆ ಮತ್ತಾರೋಹಿಣಿಗೂಡಿ | ಯಾ ಮುನಿಮನು ಪೊರಮಟ್ಟ

ಇಷ್ಟವಲ್ಲಭೆಯರೆಲ್ಲರುಗೂಡಿ ನಡೆದನ | ರಿಷ್ಟಪುರವಪೊರಮಟ್ಟು ||
ಸಪ್ಟಾರಾತಿ ಕುಮಾರಚಂದ್ರಮನು ಪ | ಶಿಷ್ಟವಿಭವದಿನೆಯ್ದಿದನು ||೧೧೬||

ಸುರಪತಿಕಪ್ಪವ ಕಳುಹಿದಸಗ್ಗದ | ತರುಣಿಯರೆಂಬ ಮಾಳ್ಕೆಯೊಳು ||
ಮರುತಮಾರ್ಗದೊಳು ವಿಮಾನವನೇರಿ ಖೇ | ಚರಕಾಂತೆಯರೆಯ್ದಿದರು ||೧೧೭||

ದೆಸೆವೆಣ್ಗಳಾಕುವರನ ರೂಪಿಗೆ ಮನ | ವೊಸೆದೆಯ್ದುವತೆರನಾಗಿ ||
ಅನವಸದಿಂದಬಂದರು ದಿಕ್ಕುದಿಕ್ಕಿನ | ವಸುಧಾಧಿಪನಂದನೆಯರು ||೧೧೮||

ರತಿಬಹುರೂಪವಡೆದು ಮನಸಿಜನೊಳ | ಗತಿಮುದದಿಂಬರ್ಪಂತೆ ||
ಕ್ಷಿತಿಪನೊಡನೆ ಶೌರೀಪುರಕಾನೃಪ | ಸುತೆಯರೆಲ್ಲರು ಬಂದರಾಗ ||೧೧೯||

ಪುರದೊಳಗಷ್ಟಶೋಭೆಯನಬ್ಧಿವಿಜಯಭೂ | ವರನು ಮಾಡಿಸಿಯಿದಿರ್ವಂದು ||
ಚರಣಕೆರಗಿದನುಜಾತನಬಿಗಿಯಪ್ಪಿ | ಹರುಷವೊದವಿಹರಸಿದನು ||೧೨೦||

ಬಳಿಕಕರ್ಣ್ಣೇಭನು ಮೊದಲಾದಗ್ರಜ | ರೊಳುವಿನಮಿಸಿ ಹರಕೆಯುನು ||
ತಳೆದವರೊಡಗೂಡಿ ಶೌರೀಪುರವರ | ದೊಳಹೊಕ್ಕನಾವಸುದೇವ ||೧೨೧||

ಈತೆರದಿಂದೂರ ಹೊಕ್ಕರಮನೆಗೆಯ್ದಿ | ಯಾ ತರಳಾಕ್ಷಿ ರೋಹಿಣಿಗೆ ||
ಪ್ರೀತಿಯಿಂದವೆ ಪಟ್ಟವಕಟ್ಟಿ ಸುಖದಿಂ | ದಾತುಳಿಲಾಳೊಪ್ಪಿದನು ||೧೨೨||

ಪಲವುನಕ್ಷತ್ರಕಾಂತೆಯರೊಳು ಚಂದ್ರಮ | ನೊಲವಿನಿಂಕೂಡುವಂದದೊಳು ||
ಲಲನೆಯರೊಡಗೂಡಿ ಯಾವಸುದೇವನು | ಸಲೆಸುಖದೊಳಗಿರುತಿರ್ದ ||೧೨೩||

ಅಭಿನವಾಂಗಜನತಿಚತುರಕಲಾನ್ವಿತ | ಶುಭಗುಣಗಣಭೂಷಿತನು ||
ತ್ರಿಭುವನೈಕನಾಥನಿರಂಜಿಸಿದನಾ | ಪ್ರಭುಕುಲಮಣಿದೀಪಕನು ||೧೨೪||

ಇದುಜಿನಪದಸರಸಿಜಮುದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಚರಿತೆಯೊಳ | ಗೊದವಿದಾಶ್ವಾಸ ಹನ್ನೆರಡು ||೧೨೫||

## ಹನ್ನೆರಡನೆಯ ಸಂಧಿ ಸಂಪೂರ್ಣಂ



## ೧೩. ಕಂಸಪ್ರಸಂಗ ಸಂಧಿ



ಅಂಗಜವಿಜಯಮುಕ್ತ್ಯಂಗನೆಯಧಿಪಭು | ಜಂಗೇಶವಂದಿತಚರಣ ||
ಮಂಗಲಮೂರ್ತಿನೇಮೀಶನಚರಿತವ | ಸಂಗೊಳಿಸುವೆ ಭಕ್ತಿಯಿಂದ ||೧||

ಒಂದುಪಗಲು ಋತುಮತಿಯಾಗಿ ರೋಹಿಣಿ | ಮಿಂದುನಾಲಕುನೀರ ಬಳಿಕ ||
ಅಂದವಡೆದಬೆಳುವಸದನಮಿಟ್ಟಾ | ಸಂದದಿಪತಿಯು ಸೂಳ್ಗಯ್ದಿ ||೨||

ಸುರತಸುಖದೊಳೋಲಾಡಿಸುಷುಪ್ತಿಯೊ | ಳಿರೆಬೆಳಗಪ್ಪಜಾವದೊಳು ||
ತರುಣಿಶಶಾಂಕನನಾಸ್ವಪ್ನದೊಳುಕಂಡು | ಹರುಷದಿ ದಿಟ್ಟಿದೆರೆದಳು ||೩||

ಬಳಿಕಿನನುದಯದೊಳೆಳ್ದು ಕೈಮುಗಿದು ಸ | ಲ್ಲಲಿತಾಂಗನಲ್ಲಿಗೈತಂದು ||
ಲಲನಾಮಣಿತಾನು ಕಂಡಾಕನಸನು | ತಳುವದೆಪೇಳಲು ಕೇಳಿ ||೪||

ಲಲಿತಾಂಗಿ ನಿನಗೆಯುಗಣ್ಯಪುಣ್ಯನುನೃಪ | ಕುಲಲಲಾಮನೋರ್ವಕುವರ ||
ಅಲಘುವಿಕ್ರಮಿಜನಿಸುವನೆನೆಸಂತಸ | ದಳೆದಿರೆಪತಿವಿಡಿಯಿಂದ || ||೫||

ಗರ್ಭದದಾರಿದ್ರ್ಯವಳಿದು ತುಹಿನರೋ | ಚಿರ್ಭಾಸುರಕಾಂತಿಯುತನ ||
ಅರ್ಭಕನನುಪಡೆಯಲು ವಸುದೇವನು | ನಿರ್ಭರವೈಭವದಿಂದ ||೬||

ಕ್ಷುದ್ರಾರಾತಿಭೂಪಾಲಕನಿಕುರುಂಬ | ವಿದ್ರಾವಣನಿವನೆಂದು ||
ಭದ್ರಮುಹೂರ್ತದೊಳಾ ಸಿಸುವಿಗೆಬಲ | ಭದ್ರವೆಸರನಿಟ್ಟನೊಸೆದು ||೭||

ವರಮೌಕ್ತಿಕವರ್ಣ ವಜ್ರಶರೀರನು | ಉರುತರಧೀರೋದಾತ್ತ ||
ನಿರವಧಿಸಾಹಸನತಿರೂಪಯುತ ಬಂ | ಧುರಗುಣಮಣಿಭೂಷಣನು ||೮||

ಪಕಕುಂಡಲನೇಕಾಂಗವಿಕ್ರಾಂತನ | ನೇಕಕಲಾಕೋವಿದನು ||
ಆ ಕುವರನುಕೂಡಿ ಹರುಷದಿವಸುದೇವ | ಭೂಕಾಂತನತಿಸುಖಮಿರಲು ||೯||

ಸಲ್ಲಲಿತಾಂಗಿ ರೋಹಿಣಿಯ ಸ್ವಯಂವರ | ದಲ್ಲಿ ಸಕಲಭೂಭುಜರ ||
ಎಲ್ಲವರೊಳುಕಾದಿಗೆಲಿದ ತನ್ನಧಟಿನ | ಬಲ್ಲಬಿನ್ನಾಣಮನರಿದು ||೧೦||

ಕಲಿವೆವೆನುತ ತನ್ನಡೆಗಿರದೆಯ್ದಿದ | ನೇದಾಣ್ಮರನಂದನರ್ಗೆ ||
ಒಲವಿಂದಬಿಲ್ಲೋಜನಾಗಿತಾನಿರಲಾ | ನೆಲೆಗೊಂಡಾನೊಂದುಪಗಲು ||೧೧||

ಕಂಸನೆಂಬನುಬಂದು ಸಮಿಸಿನರೇಂದ್ರೋ | ತ್ರಂಸಗೆನಾಸು ಧೀವರರ ||
ವಂಶದವನು ದೇವರೊಳುನಿಂದು ಬಿಲುವಿದ್ಯೆ | ಯಂಸಾಧಿಸಲೆಯ್ದಿದೆಸು ||೧೨||

ಎಸಲಿವನಕುಲಜನಾದೊಡಿಂತೀ ರೂಪು | ಜನಿಯಿಸದೆನುತಾನೃಪತಿ ||
ಏಸಯುವೊದವಿಬಿಲುವಿದ್ಯೆಯುಸವನಿಗೆ | ಯಸುವಾನಿಸದೆ ಕಲಿಸಿದನು ||೧೩||

ಮರೆದುವಸೆಚ್ಚರಿಸಿದೊಡದಕ್ಕೆಕೊಂಬ | ತೆರನಾಗಿಬಿಲುವಿದ್ಯೆಯನು ||
ಅರಿಕೆಮಾಡಿದೊಡದನನುವಾಗಿಸಾಧಿಸಿ | ಮೆರೆದನು ಮಹಿಪೊಗಳ್ವಂತೆ ||೧೪||

ಬಲ್ವಿಡಿದಿವನನು ಸಂಗರಮುಖದೊಳು | ಗೆಲ್ವವರಾರಿಲ್ಲದಂತೆ ||
ಬಲ್ವಲದಿಂದ ಕಂಸನು ವಸುದೇವಗೆ | ಸಲ್ವವನಾಗಿರಲತ್ತ ||೧೫||

ಪೆಸರುಳ್ಳ ಪೌದನಪುರದಧಿಪತಿ ಸಾ | ಹಸದಿಂದೆರಡು ಸಿಹ್ಮವನು ||
ವಶಮಾಡಿ ತಾನೇರುವರಥದೊಳು ಕಟ್ಟಿ | ವಸುಧೆಯೊಳತಿಕೀರ್ತಿವಡೆದ ||೧೬||

ಆದರಿಂಸಿಹ್ಮರಥಾಭಿಧಾನವನಾಂತು | ಕದನೋದ್ರೇಕವಾಸನನು ||
ಮದವೆತ್ತರ್ಧಚಕ್ರೇಶ ಜರಾಸಂಧ | ಗಿದಿರಾಗಿ ಮಾರ್ಮಲೆತಿರಲು ||೧೭||

ಕೆಲವುಸೇನೆಯುಕಳುಹಲು ಕಾಡುತನ್ನದೋ | ರ್ವಲದಿಂದೋಡಿಸಲದಕೆ ||
ಕೆಳಲಿಬಳಿಕ ಚಕ್ರೇಶ್ವರನಾಪುರ | ಗಲಿಸಿಹ್ಮರಥನೊಳುಕಾದಿ ||೧೮||

ಗೆಲಿದವನಿಗೆ ತನ್ನಮಗಳನು ಮತ್ತವ | ನೊಲಿದು ಬೇಡಿದರಾಜ್ಯವನು ||
ನೆಲೆಯಾಗಿಕೊಡುವೆನೆನುತ ಸಾರಿಸಲಾ | ಉಲುಹಿಗೆಲ್ಲರು ಸುಮ್ಮನಿರಲು ||೧೯||

ಇವನಗೆಲುವಶಕ್ತಿ ವಸುದೇವಗಲ್ಲದೆ | ಸವನಿಸದೆಂದಾಚಕ್ರಿ ||
ಸವಿನಯದಿಂದ ಸಮುದ್ರವಿಜಯಭೂ | ಧವಗೆ ಲೇಖನವನಟ್ಟಿದನು ||೨೦||

ಆಲೇಖನವನೋದಿಸಿನೋಡಿಯಾಭೂ | ಪಾಲಕನಾಸಿಹ್ಮರಥನ ||
ಮೇಲೆತ್ತಿನಡೆಯೆಂದುಕಳುಹಲುವಿಕ್ರಮ | ಶಾಲಿಸನ್ನುತವಸುದೇವ ||೨೧||

ಎಕ್ಕತೂಳದಭಟಸಂತತಿಯನುಕೂಡಿ | ರಕ್ಕಸನಂತೆಯ್ತಂದು ||
ಮಿಕ್ಕಸಾಹಸಿಸಿಹ್ಮರಥನೂರಿಗೆಯ್ತಂ | ದಕ್ಕರಿಗರಕಳುಹಿದನು ||೨೨||

ಬಳಿಕವರೆಯ್ತಂದೆಲೆವಿಭುಯಾದವ | ಕುಲತಿಲಕನನೀಗಬಂದು ||
ತಳುವದೆಕಂಡವನತನಾಗಿಸಲೆನುಖ | ದೊಳುಜೇವಿಪುದುಲೇಸೆನಲು ||೨೩||

ಉದ್ರೇಕಿಸಿಸಿಹ್ಮರಥನೆಂದನೆಲವೊ | ಕ್ಷುದ್ರನಿನ್ನೊಳಗೇನುಮಾತು ||
ರೌದ್ರತೆಯಿಂದನಾನಿರಿಯಲಾಸಮರೆಸ | ಮುದ್ರಪರೀತಾವನಿಪರು ||೨೪||

ಎಂದುರೆಸಿಹ್ಮನಾದದಿಗರ್ಜಿಸಿಯಲ್ಲಿ | ಬಂದಕ್ಕರಿಗಳನುಕಳುಹಿ ||
ಪಿಂದೆಸಮರಸನ್ನದ್ಧನಾಗುತಪೊಳ | ಲಿಂದಬೇಗದಿಪೊರಮಟ್ಟ ||೨೫||

ಆರಭಟೆಯಿನಾಕಲ್ಪಾಂತಕಲ್ಲೋಲ | ವಾರಧಿವಜ್ರವೇದಿಕೆಯ ||
ದ್ವಾರದಿಪೊರಮಡುವಂತಾನಗರಿಯ | ದ್ವಾರವಪೊರಮಟ್ಟುಬಂದು ||೨೬||

ಚಾತುರ್ದಂತಬಲವಕೂಡಿಯಾಹವ | ಭೂತಳದೊಳಗೊಡ್ಡಿನಿಲಲು ||
ಆತುಳಿಲಾಳ್ವಸುದೇವನದಕೆ ಕಲ | ಹಾತುರನಾಗಿನಡೆಯಲು ||೨೭||

ಅದನುಕಂಡಾಸಿಹ್ಮರಥತನ್ನಬಿಲ್ಪಡೆ | ಗದಿರದೆಕೈವೀಸಲಾಗ ||
ಒದವಿಕಡೆಯಕಾಲದಮುಗಿಲಕರೆವಂತೆ | ಕದುಬಿಸುರಿದುದಸ್ತ್ರಸಮಿತಿ ||೨೮||

ಬಲವೆಲ್ಲವಂಬುಗೂಡಾಗಿಬೀಳ್ವುದಕಂಡು | ಕೆಳಲಿಮಹಾರಥರುಗಳ ||
ತಳುವದೆವಸುದೇವಕಳುಹಲವರು ಪತ | ಬಲವಸಂಹರಿಸಿದರಾಗ ||೨೯||

ಅದಕಂಡುಸಿಹ್ಮರಥನುರಥವನುನೂಕಿ | ಪದೆದುಪಿಡಿದುಬಿಲ್ಲುಕೋಲ ||
ಒದವಿಯಾದನಬಲವನುಹೊಕ್ಕುಕಣ್ಗೆಡಿ | ಸಿದನುಮಹಾರಥಿಕರನು ||೩೦||

ಇಂತುಬರ್ಪವಸುದವನೆಯಕಂಡಾಕ್ರೋ | ಧಾಂತಕನಾವಸುದೇವ ||
ಅಂತರಿಸದೆತೇರನೂಂಕುವಸಮಯಕೆ | ಮುಂತೆಬಂದಾಕಂಸನಿಂದು ||೩೧||

ದೇವಬಿನ್ನಪವಿಾಜೆಸೆನನು ನನಗಿರ | ದೀವುದೆನುತಬೇಡಲಾಗ ||
ಆವಸುದೇವನಂತೇ ಮಾಡೆನಲವ | ನಾವಹಿಂದಿತೇರನೂಂಕಿ ||೩೨||

ಗಂಡುತನದೊಳಿದಿರಾದಾಕಂಸನ | ಕಂಡುಪಸಿದಹುಲಿಯಂತೆ ||
ದಿಂಡುಗೆಡಹುವೆನಿನ್ನನೆಂದಾಉ | ದ್ದಂಡನುಕೊಪ್ಪರಿದೇರಿ ||೩೩||

ಎಲವೋ ಧೀವರನೀನೆನಗೆಣೆಯೇಯೆಂದು | ಬಲಿದೆಸೆವಾಸಿಹ್ಮರಥನ ||
ಅಲಘುವರೂಥಕಿಕ್ಕಿದಸಿಹ್ಮವೆರಡರ | ತಲೆಗಳಪರಿದೆಚ್ಚನಾಗ ||೩೪||

ತಡೆಯದೆಮತ್ತೊಂದುಶರದೊಳಗಾವಿಭು | ವಡರ್ದವರೂಥವನವನು ||
ಪಿಡಿವಬಿಲ್ಲಂಬನವನುತೊಟ್ಟಕವಚವ | ಕಡಿದುವಿರಥನಮಾಡಿದನು ||೩೫||

ಸಂಶಯವಿಲ್ಲದೆಪಿಡಿದಾಸುಭಟೋ | ತ್ತಂಸನೆಕಂಠೀರವರಥನ ||
ಕಂಸನಿರದೆಪಿಡಿದಾಯಾದವರಾಜ | ಹಂಸನಮುಂದಿರಿಸಿದನು ||೩೬||

ಬಳಿಕಮುಭಯಘೋಷಣೆಯಹೊಯಿಸಿಯಾ | ಪೊಳಲಹೊಕ್ಕಲ್ಲಿಶೋಭಿಸುವ ||
ಕಲಿಲವಿಜಯಬಾಹುಬಲಿಕೇವಲಿಗಳ | ನಿಲಯವಹೊಕ್ಕಘನಮಿಸಿ ||೩೭||

ಅಲ್ಲಿಂದಬೀಡನೆತ್ತಿಸಿಶೌರೀಪುರ | ಕುಲ್ಲಾಸದಿಂದೆಯ್ತಂದು ||
ಬಲ್ಲಿದಸಿಹ್ಮರಥನಸುತಂದಣ್ಣನ | ಮೆಲ್ಲಡಿಗಳಮುಂದಿರಿಸಲು ||೩೮||

ಈ ಸಿಹ್ಮರಥನನೀನೇಕೊಂಡುಪೋಗಿ ಜ | ರಾಸಂಧಚಕ್ರೇಶ್ವರಗೆ ||
ಈಸಮಯದೊಳೊಪ್ಪಿಸಿಎಂದಹೇಳಿದ | ಲಾಸಾಸಿಗನಲ್ಲಿಗೆಯ್ದಿ ||೩೯||

ಅವನನೊಪ್ಪಿಸೆಕಂಡತಿಹರುಷವತಾಳಿ | ಯವನೀಶ್ವರನಿಂತುನುಡಿದ ||
ಇವನನಾವನುಗೆಲ್ದಾತಗೆನಮ್ಮಾ | ಕುವರಿಯಜೀವಂಜಸೆಯನು ||೪೦||

ಅವನೊರೆದಿಳೆಯಕೊಡ.ವೆನೆಂದೆವದರಿಂದ | ಕುವರಿನಿನಗೆವೊರೆಯಲ್ಲ ||
ಇವಳನಿನ್ನ ಯಮುನಸಿಗೆಬಂದವನಾವ | ನವಗೆಮದುವೆನೂಡೆನಲು ||೪೧||

ಆನೊಲ್ಲಿಗಾವನಂದೇಪನಿಂತೆಂದನಿಂ | ದೀಸಿಹ್ಮರಥನನುಹಿಡಿದ ||
ಸಾಸಿಗನಿವನೆಂದಾಕಂಸನನುಜ | ರಾಸಂಧಗೆತೋರಿಸಿದನು ||೪೨||

ಆವವಂಶೋದ್ಭವನೆಂದವನನುಕೇಳಿ | ದೇವಕೌಶಂಬಿಯೊಳೋರ್ವ ||
ಧೀವರನಣುಗನೆಂದಾಕಂಸನುಸುರಿಸೊ | ಡಾವನುಧಾವಲ್ಲಭನು ||೪೩||

ಆವನಚಾಪುಜಾಂಘಿಗಳಪ್ಪಭುಜಯುಗ | ಮವನಲಕ್ಷಣಲಲಿತಾಂಗ ||
ಅವನವಿಶ್ರುತವಕ್ಷಮವನಸೌಂದರ್ಯಮ | ತ್ತವನಲಾವಣ್ಯವನೋಡಿ ||೪೪||

ಇವನುಸತ್ಕುಲಜನಲ್ಲದೆ ದುಷ್ಕುಲಜನಲ್ಲ | ವಿವರಿಪೆನಾನಿದನೆಂದು ||
ಅವನತಂದೆಯಕರೆತರಹೇಳಿ ಕೌಶಂಬಿ | ಗವನಿಪನಾಳನಟ್ಟಿದನು ||೪೫||

ಬಂದಾಚರರಾಧೀವರನೊಳಗಿಂ | ತೆಂದರಾಕಂಸನುನಿನ್ನ ||
ನಂದನನೊ ಅಲ್ಲವೊ ಎಂಬುದನುಕೇಳ | ಲಿಂದೆಮ್ಮರಸನಟ್ಟಿದನು || ||೪೬||

ಎನೆಕೇಳ್ದಾಧೀವರನೆಂದನುಕಂಸ | ನೆನಗೆಹುಟ್ಟಿದಮಗನಲ್ಲ ||
ಎನುತೊಂದುಮಂದಾಸುಸಹಿತ ಚಕ್ರೇಶನ | ಬಳಿಗಿರದೆಯ್ದಿದನವನು ||೪೭||

ಬಂದುದೂರದೊಳುಸಾಷ್ಟಾಂಗನಮಿತನಾಗಿ | ಮಂದಾಸನಿರಿಸಿಭೀತಿಯೊಳು ||
ನಿಂದುಬಿನ್ನಪದೇವಕಾಳಿಂದಿಯೊಳೀ | ಮಂದಾಸುಬರುತಿರೆತೆಗೆದು ||೪೮||

ಕಾಂಸ್ಯಮಂಜೂಷೆಯೊಳಿರ್ದಕಾರಣದಿಂ | ಕಂಸನೆಂಬಾಹೆಸರಿಟ್ಟು ||
ಸಂಶಯಮಿಲ್ಲದೆ ನಿಜತನುಜನತೆರ | ದಿಂಸಾಕುತಿರೆದುಷ್ಟನಾಗಿ ||೪೯||

ಪೊಳಲೊಳುಕಂಡಕಂಡವರೊಳುಹೋರಟೆ | ಗೊಳುತಿರಲಪಕಾಸಲಸಿ ||
ಬಳಿಕನನ್ನೊಳುನೀನಿರಬೇಡವೆಂದೀ | ಖಳನನೂರಿಂತಗುಳಿದೆನು ||೫೦||

ಎನಲಾಮಂದಾಸತರಿಸಿಯಾಕೆಲದೊಳು | ಜನಸುತಸೋಮವಂಶಜನು ||
ಮನುಜೇಶನುಗ್ರಸೇನಗೆಯಾತನಸತಿ | ವನಜಾಕ್ಷಿಪದ್ಮಾವತಿಗೆ ||೫೧||

ಜನಿಸಿದನಿಸುವೆಂಬವರ್ಣವನೋದಿಸಿ | ಜನಪತಿತನ್ನನುಜಾತೆ ||
ವನಜಾವತಿಯುತನುಜನೆಂಬುದನರಿ | ದನುರಾಗವಮಾನಸನಾಗಿ ||೫೨||

ಅರಸುವಬಳ್ಳಿಕಾಲನುತೊಡರಿತ್ತೆಂಬ | ತೆರನಾಗಿನನ್ನನಂದನೆಗೆ ||
ಎರೆಯನೀನಾದೆಯೆನುತಕಂಸಗೆಧಾರೆ | ಯೆರೆದನು ಜೀವಂಜಸೆಯ ||೫೩||

ಮದುವೆಯಮಾಡಿಬಳಿಕಬೇಡಿದ ಜನ | ಪದವನೀವೆನುಬೇಡೆನಲು ||
ಅದಕಾಕಂಸನು ನಿಜಪಿತೃರಾಜ್ಯಮ | ನದನೆಪಾಲಿಸಬೇಕೆನಲು ||೫೪||

ಇವನನ್ವೈರವನುತಿಳಿವೆನೆಂದಾಭೂ | ಧವನಿರದೆಳ್ದುಬಂದೋರ್ವ ||
ಅವಧಿಜ್ಞಾನಿಮುನೀಶನಪದಪದ್ಮ | ಕವನತನಾಗಿಕೈಮುಗಿದು ||೫೫||

ಮುನಿಕುಲತಿಲಕಬಿನ್ನಪವಿಾಕಂಸಗೆ | ಜನನೀಜನಕರೊಳುವೈರ ||
ಜನಿಸಿದುದೇನುಕಾರಣಬೆಸಸೆನಲತಿ | ವಿನಯದೊಳುಸುದರ್ಶನಿಂತೆಂದು ||೫೬||

ಈಪೃಥವಿಯೊಳುಪಂಚಾಗ್ನಿಮಧ್ಯದೊಳೋರ್ವ | ತಾಪಸಿತಪಗೆಯ್ಯುತಿರಲು ||
ಆಪದದೊಳುವೀರಭದ್ರವೆಸರಜಾತ | ರೂಪನೋರ್ವನುಬರುತಿರ್ದು ||೫೭||

ಇದುಹಿಂಸಾರೂಪದತಿಕಷ್ಟತಪವೆನ | ಲದಕೇಳಿಕೋಪವಿಂದೆದ್ದು ||
ಅದಿರದೆಕೊಪಲಿಯುತಿರುಪುತಹಿಂಸೆಯ | ನಿದರೊಳುತೋರುನೀನೆಲು ||೫೮||

ಅವರನನುರಿಪುವಕಿಚ್ಚಿನೊಳಗೆ ಜೀವ | ನಿವಹವುರಿವುದನುತೋರೆ ||
ಅವನದಕತಿಬೆರಗಾಗಿ ಮುಂದರಿಯದೆ | ಇವಗೆ ಮುನಿದೆನೆಂದಾಗ ||೫೯||

ಪರಸುವಬಿಸುಟು ಬಳಿಕ ನಿಮ್ಮಚರಿತವ | ಧರಿಸುವೆನೆನುತವರ್ಗರಗಿ ||
ನಿರುತಮಪ್ಪ ಜಿನದೀಕ್ಷೆಯನಾಂತು ನಿ | ಷ್ಠುರಮಪ್ಪ ತಪಗೆಯ್ಯಲೊಡನೆ ||೬೦||

ವನದೇವತೆಗಳಾತಪದ ಸಾಮರ್ಥ್ಯಕೆ | ಮನದೆಗೊಂಡೆಯ್ದಿ ಕೈಮುಗಿದು ||
ಮುನಿಪತಿಬೆಸಸೆನಲಾನಾವಾಗ | ನೆನೆಯಲೊಡನೆ ಬನ್ನಿವೆಂದು ||೬೧||

ಮುದದಿಂ ಮಧುರೆಗೆಬಂದು ಮಾಸೋಪವಾ | ಸದೊಳಿರಲಾ ಉಗ್ರಸೇನ ||
ಪದಪಿಂಬಂದವರ್ಗೆರಗಿ ತನ್ನೊಡನೆ | ಯ್ದಿದ ಭವ್ಯನಿಕರಕಿಂತೆಂದ ||೬೨||

ಪಾರಣೆಗಿವರು ಬಿಜಯಮಾಡಲು ತಾನೆ | ಯಾರಯ್ಯದೆನಿಲಿಸುವೆನು ||
ಊರೊಳಗಾರುನಿಲ್ಲಿಸಬೇಡವೆಂದಾ | ಭೂರಮಣೇಶನು ಬೆಸಸಿ ||೬೩||

ಮುನಿಗೆವಂದಿಸಿ ಪುರವರಕೆಯ್ದಲಾಮುರು | ದಿನದೊಳಗಾಯತಿವರರು ||
ಅನುನಯದಿಂಪಾರಣೆಗೆಂದು ಬರಲಾ | ಜನಪನೇರುವ ಪಟ್ಟದಾನೆ ||೧೪||

ಮದವೆದ್ದು ಪುರದೊಳು ಕೋಳಾಹಳ ಮಾಡ | ಲದರಿಂದಾನೃಪವರನು ||
ಪದುಳದಿನವರನು ನಿಲಿಸಲು ಮರೆದಿರ | ಲವಕಪರಲ್ಲಿಂದತಿರುಗಿ ||೧೫||

ಬಂದು ಬಳಿಕ್ಕೊಂದು ಮಾಸೋಪವಾಸದೊ | ಳ್ನಿಂದು ಮತ್ತದರಂತರದೊಳು ||
ಒಂದಿದಹಸುವಿಂದಾನಗರಿಗೆಭಿಕ್ಷೆ | ಗೆಂದು ನಡೆದುಬರುತಿರಲು ||೧೬||

ಅರಮನೆಕಿಚ್ಚೇಳ್ದಾ ಸಂಭ್ರಮದಿಂ | ಧರಣೀಪತಿನಿಲಿಸುವುದ ||
ಪಿರಿದಾಗಿಮರೆದಿರಲರಸನಾಜ್ಞೆಯೊಳಾ | ಪುರಜನನಿಲಿಸಲಣ್ಮದಿರೆ ||೧೭||

ಮುನಿಪತಿಮಗುಳ್ದುಮುನ್ನಿನತೆರದಿಂದನ | ಶನವಕ್ಕೈಕೊಂಡಾಕಡೆಯ ||
ದಿನದೊಳುಪಾರಣೆಗೆಂದು ಬರಲ್ಕೋರ್ವ | ಜನಪತಿಯಾಪುರಕೆಯ್ದಿ ||೧೮||

ಬರಲಾತನನಿದಿರ್ಗೊಂಬವೈಭವದಿಂ | ದರಸುಮುನಿಯನಿಲಿಸುವುದ ||
ಪಿರಿದಾಗಿಮರೆದಿರಲೊಡಲೊಳುದೀಪನ | ದುರಿಹತ್ತಿಬಲಹೀನನಾಗಿ ||೧೯||

ತಿರುಗನಡೆಯಲಾರದಾನಗರದ ಚ | ತ್ವರದ ಕೆಲದಗೋಡೆಯೊಳು ||
ಪಿರಿದಾಗಿ ನೆಮ್ಮಿರೆ ಕಂಡಿಂತೆಂದರು | ಪುರದೊಳಗಡೆಯಾಡುವರು ||೨೦||

ಆರೊಬ್ಬರಿಂದ ನಿಲಿಸಲೀಯತಾನವಿ | ಚಾರದಿನಿವರನಿಲಿಸನು ||
ಈ ರಾಯಗೀಮುನಿಯೊಳು ಚಲವೋಯೆನೆ | ಘೋರೆನೆ ಮುನಿಸಂಕುರಿಸಿತು ||೨೧||

ಈವಿಧದಿಂ ಕೋಪಾನಲನೊಡಲೊಳ | ಗಾವರಿಸಲು ಪಿಂತೆತನಗೆ ||
ಓವದೆ ಸಾಧ್ಯಮಾದಾದೇವತೆಗಳು | ತಾವೈದಿಬೆಸನೇನೆನಲು ||೨೨||

ಇಂತೆಂದನಾಮುನಿಯೆನಗೀಗ ಜೀವನ | ವಂತೊರೆವಾವೇಳೆಯಾಯ್ತು ||
ಮುಂತಣಭವಕೆಯೊದಗಿಯೆನಲವು ಪೋ | ದಂತರದೊಳಗಾತಪಸಿ ||೨೩||

ತನುವನು ಬಿಸುಟಾ ಉಗ್ರಸೇನನ ನಿಜ | ವನಿತೆಯ ಗರ್ಭವಾಸದೊಳು ||
ಜನಿಯಿಸಲೊಡನಾಕೆಗೆ ಪೊಲ್ಲದಬೈಕೆ | ಮನದೊಳಗೊಗೆಯಲಂತದನು ||೨೪||

ಇನೆಯನೊಳುಸುರಲಮ್ಮದೆ ಮೌನಗೊಂಡಿರೆ | ಜನಪನವಳಮನವರಿದು ||
ವನಿತೆಯಿದೇನು ಕಾರಣವೆಂದಾಗ್ರಹ | ವನೆಮಾಡಿ ಬೆಸಗೊಳಲವಳು ||೨೫||

ಏಕಾಂತದೊಳೆಲೆವಿಭು ನಿನ್ನವಕ್ಷವ | ನೇ ಕೊರೆದಾರಕ್ತವನು ||
ಸಾಕೆಂಬಂತೀಂಟುವ ಬೈಕೆಯಾಯ್ತು | ನ್ನೇಕೆನ್ನ ಜೀವನದಾಸೆ ||೨೬||

ಎನಲೆಂದನೆಲೆಮಾನಿನಿ ನಿನ್ನ ಬಸಿರೊಳು | ಜನಿಸಿದ ಶಿಶುವಿನಮನದ ||
ಮುನಿಸಿನಸತೆರಸಲ್ಲದೆ ಮತ್ತೊಂದಲ್ಲ | ವೆನುತ ಮನೆಯಪೊರಮಟ್ಟು ||೭೭||

ಮಂತ್ರಶಾಲೆಗೆ ಬಂದಾಕಾರ್ಯವಸಂದು | ಮಂತ್ರಾಲೋಚನೆವಾಡೆ ||
ತಂತ್ರದಿಂದಾಸಿದನೆಸಗುವೆನೆಂದಾ | ಮಂತ್ರಿಭೂಪಸಬೀಳ್ಕೊಂಡು ||೭೮||

ಅರಸನ ಪೋಲ್ವಿಕೆಯಿಂದೊಂದು ಲೆಪ್ಪದ | ಕರುವವಮಾಡಿಸಿಯದರೊಳಗೆ ||
ಪರಿಪೂರಸಿಯಲತಗೆಯರಸವನಾ | ವರಮಂತ್ರಿ ಗೂಢದೊಳಿರಿಸಿ ||೭೯||

ಅರಸಿಯಲ್ಲಿಗೆಬಂದು ದೇವಿಬಿನ್ನಪನಿ | ಮ್ಮರಸನಿರ್ದಪನುತೀರ್ಚುವುದು ||
ಭರದಿಂದ ನಿಮ್ಮ ಬಯಕೆಯನೆಂದಾಲೆಪ್ಪ | ದರಸನ ಮನೆಯೊಳಗಿರಿಸಿ ||೮೦||

ಮತ್ತಮಿಂತೆಂದನು ಎಲೆದೇವಿ ನಿನ್ನಾ | ಚಿತ್ತೇಶನನೀಕ್ಷಿಸುತವೆ ||
ಕತ್ತಿಗೊಂಡಿರಿವುದುಚಿತವಲ್ಲವೆಂದಾ | ವೃತ್ತಕುಚೆಯು ನಿಜಮುಟಕೆ ||೮೧||

ವರವಸ್ತ್ರವನು ನುರಿಯುವಮಾಡಿ ಕೈಯೊಳು | ಸುರಗಿಯುಕೊಡಲು ಕೃತ್ರಿಮದ ||
ಅರಸನೆದೆಯು ತಿವಿದೊಗುವರುಣಾಂಬುವ | ನರಸಿ ಕೋಪದೊಳೀಂಟಿಬಳಿಕ ||೮೨||

ತನ್ನಿಚ್ಛೆ ತೀರೆಲೆಪ್ಪದಭೂಪತಿಯುನು | ತನ್ನವಲ್ಲಭನೆಂದು ಬಗೆದು ||
ಉನ್ನತಮುಪ್ಪದುಃಖದಿ ಕಟ್ಟೆನೆಂದಾ | ಚೆನ್ನೆಮೂರ್ಛೆಗೆ ಸಲಲಾಗ ||೮೩||

ಅತಿಶೀತಳಕ್ರಿಯೆಯಿಂದವೆಚ್ಚರಿಸಿ ಭೂ | ಪತಿಬರ್ದುಕಿದನೆಂದವನು ||
ಸತಿಯುಸಂತೈಸಿ ಕೆಲವುದಿನಕಾತನು | ಕ್ಷತಪಿಂಗಿತೆಂದಾಕೆಗರುಪೆ ||೮೪||

ಆರಮಣೀಮಣಿಗೊಗದಮನಕ್ಷತ | ತೀರಲು ನವಮಾಸತುಂಬಿ ||
ಕ್ರೂರಮಪ್ಪಲಗ್ನದೊಳು ಸಿಸುವುದಯಿಸ | ಲಾರಯ್ಯದಾಭೂವರನು ||೮೫||

ಬಂದಾಹಸುಳೆಯ ಮೊಗನೋಡಲದು ತನ್ನ | ತಂದೆಯುಮೊಗವನೋಡುತವೆ ||
ಬಂದಿದ ಕೋಪದಿ ಕಡೆಗಣ್ಣಳೊಳು ಕೆಂಪು | ತಂದು ನಿರೀಕ್ಷಿಸುತಿರಲು ||೮೬||

ಈಮುಗತನಗೆ ಪಗೆವನೆಂದುಬಗೆದು ಮ| ತ್ತಾಮನುಜೇಶ್ವರನುಸುರೆ ||
ಆ ಮಂತ್ರಿಯೊಂದು ಕಂಚಿನಮಂಜೂಷೆಯೊ | ಳಾಮಗುವನುತಂದಿರಿಸಿ ||೮೭||

ಕೆಲದೊಳುಸುರಿದುರತ್ನಮತಂದೆತಾಯ್ಗಳ | ಕುಲಮನವರ ನಾಮವನು ||
ನೆಲೆಯಾಗಿ ಬರೆಯಿಸಿಜಗುನೆಯೊಳಗೆ ಬಿಡೆ | ಸಲವಿಂದದು ಪರಿತರಲು ||೮೮||

ಅದನು ಕೌಶಂಬಿಯೊಳೋರ್ವಧೀವರಕಂಡು | ಮುದದಿಂತೆಗೆದು ಕೊಂಡೊಯ್ದು ||
ಒದವಿದಮರುಕದಿನಾಕಂಸನ ಸಾ | ಕಿದನೆಲೆಯರ್ಧಚಕ್ರೇಶ ||೮೯||

ಎಂದು ನಿರೂಪಿಸಿದಾಜತಿರಾಯುಗೆ | ಬಂದಿಸಿ ಬಳಿಕ ಬೀಳ್ಕೊಂಡು ||
ಮಂದಿರಕೆಯ್ದಿ ಮತ್ತಾಮರುದಿನದೊಳು | ನಂದನೆಗಡುವಲಿಗೊಟ್ಟು ||೯೦||
ಆವನಕೋಪವಸರಿದಾಮಧುರೆಯುನಾ | ನಿವಗೆಕೊಡಲು ಮಾತೃಪಿತೃಗೆ ||
ತವೆಯುದದುಃಖವಹುದು ಕೊಡದಿರ್ದೊಡೆ | ನವಗೆ ಭಾಷಾಭಂಗವಹುದು ||೯೧||
ಎಂದು ಕಂಸನಕರೆದಾತಂದೆತಾಯ್ಗಳ | ಕೊಂದು ರಾಜ್ಯವನಾಳಬೇಡ ||
ಎಂದು ನುಡಿದು ಬಳಿಕವಗಾಮಧುರೆಯು | ನಂದುಪಾಲಿಸಿ ಬೀಳ್ಕೊಡಲು ||೯೨||
ಪಿರಿದು ಭಕ್ತಿಯೊಳು ವಂದಿಸಿ ವಸುದೇವಭೂ | ವರಗೆ ಕಂಸನು ದೇವನಿಮ್ಮ ||
ಕರುಣದಿನಿಂತಪ್ಪ ಮಹದೈಶ್ವರ್ಯವು | ದೊರೆಕೊಂಡಿತೆನಗದರಿಂದ ||೯೩||
ಆ ಮಧುರೆಗೆ ಬಿಜಯಂಗೆಯ್ದೆನ್ನನು | ಪ್ರೇಮದೊಳಿರಿಸುವುದೆನಲು ||
ಆಮಾತನವಧಾರಿಸಿ ಕಂಸನಕೂಡೆ | ಯಾಮಹಿಪನು ನಡೆತರಲು ||೯೪||
ಭರದಿ ಮಧುರೆಗೆಯ್ದಿ ಜನನೀಜನಕರ | ನುರುತರಕೋಪದಿಂಪಿಡಿದು ||
ಪುರದಬಾಗಿಲ್ವಾಡದಮೇಲಸಿಪಂ | ಜರದೊಳು ಸೆರೆಯನಿಕ್ಕಿದನು ||೯೫||
ಮತ್ತಾಪುರಕೆಯರಸನಾಗಿಯಾಭೂ | ಪೋತ್ತಂಸವಸುದೇವನೊಳು ||
ಚಿತ್ತಶುದ್ಧಿಯೊಳು ಭೃತ್ಯತ್ವವಡೆದು ಸಂ | ಪತ್ತಿಯೊಳಾಕಂಸನಿರ್ದ ||೯೬||
ಆ ಉಗ್ರಸೇನ ಮಹಿಪನನುಜಾತನು | ದೇವಸೇನನೆಂದೆಂಬ ||
ಭೂವಲ್ಲಭನಗ್ರಮಹಿಷಿ ಪೆಣ್ಮಣಿ ಧನ | ದೇವಿಯೆಂಬವಳಿಹಳವರ ||೯೭||
ಅತಿಮುಕ್ತನೆಂಬ ಕುಮಾರಕನಾಕಂಸ | ನತಿದುಷ್ಟತನವನುಕಂಡು ||
ಮತವಲ್ಲಸಂಸ್ಕೃತಿಯೆಂದು ದೀಕ್ಷೆಯನ | ಪ್ರತಿಮುನಾಗುತ ಧರಿಯಿಸಿದ ||೯೮||
ಮತ್ತಾತನಕಿರಿಯಳು ದೇವಕಿಯೆಂ | ಬುತ್ತಮರೂಪವತಿಯನು ||
ಮತ್ತಮರಾಳಗಮನೆಯನುರ್ವೀಪಾ | ಲೋತ್ತಂಸವಸುದೇವನಿಗೆ ||೯೯||
ದೇವಕೇಳಿಂತಿದು ಗುರುಪೂಜೆಯೆಂದು ಮ | ಹಾವಿಭವದೊಳು ರತಿಯನು ||
ಭಾವಭವಗೆ ಕೊಡುವಂದದಿ ಮದುವೆಯು | ತೀವಿದ ಮುದದಿಮಾಡಿದನು ||೧೦೦||
ಅವನಿತಾತತ್ನದೊಡನೆ ಸಂತತವಸು | ದೇವರಾಜೇಂದ್ರಶೇಖರನು ||
ತೀವಿದ ಮಮತೆಯಿಂದತ್ಯಂತಸುಖಸಂಕ | ಥಾವಿನೋದದೊಳೊಪ್ಪಿದನು ||೧೦೧||
ಅನುಪಮರೂಪಸತ್ಯಂತಕಲಾವಿದ | ನನಿಮಿಷಕುಜನಿಭದಾನಿ ||
ಜನತಾಧಿಪವಸುದೇವನೊಪ್ಪಿದನಾ | ವಿನಯವಸಧಿಚಂದ್ರಮನು ||೧೦೨||
ಇದು ಜಿನಪದಸರಸಿಜ ಮದಮಧುಕರ | ಚದುರಮಂಗರಸ ರಚಿಸಿದ ||
ಮದನಾರಿ ನೇಮಿಜಿನೇಶಸಂಗತಿಯೊಳ | ಗಿದು ಪದಿಮೂರಾಶ್ವಾಸ ||೧೦೩||

## ೧೪. ಮಂಗಿಯ ಕಥಾಸಂಧಿ



ಶ್ರೀಮದಮರಪತಿಮೌಲಿಕೀಲಿತಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಬಾವನ್ನವೀರಕಂಸನಕಡುಗೈಗೇಳಿ | ದಾವಸುಧಾಮಂಡಲದ ||
ಚಾವಡಿಚಾವಡಿಯೊಳಗುಳ್ಳ ವೀರಭ | ಟಾವಳಿಬಂದುಸೇರಿದುದು ||೨||

ತಾನಿರಿಯಲು ಬಲ್ಲನಿರಿದವರಿಗೆ ಕೈ | ವಾರದೆ ಮೆಚ್ಚೀಯಬಲ್ಲ ||
ಭೂನುತಗುಣಿಕಂಸನೃಪನೆಂದು ಸೇರಿದ | ರಾನಾಡನಾಡಸುಭಟರು ||೩||

ಪೃಥುವಿಯೊಳುಳ್ಳರ್ಧರಥಸಮರಥರತಿ | ರಥರು ಮಹಾರಥರುಗಳು ||
ಪೃಥುವೀರವಿತರಣಗುಣಿ ಕಂಸನಗುಣ | ಕಥನವಕೇಳಿಸೇರಿದರು ||೪||

ದಿಕ್ಕರಿನಿಕರವನಾನೆಪನ್ನಾಣದಿ | ಧಿಕ್ಕರಿಸುವ ಜೋಧರರು ||
ಲೆಕ್ಕವಿಲ್ಲದೆಬಂದು ಸೇರಿದರಾರಣ | ರಕ್ಕಸ ಕಂಸಭೂವರನ ||೫||

ಭರತತ್ರಿಖಂಡಮಂಡಲದೊಳಗುಳ್ಳರಿ | ಬಿರುದಿನರಾಯರಾವುತರು ||
ಅರಿನೃಪಗಜಕೇಸರಿ ಕಂಸನೃಪನನಾ | ದರದಿಂಬಂದುಸೇರಿದರು ||೬||

ಚಕ್ರಿಗಿವನೆತೋಳ್ವಲವೆಂದಾಭೂ | ಚಕ್ರದಮಕುಟವರ್ಧನರು ||
ವಿಕ್ರಾಂತಯುತ ಕಂಸಭೂಪಾಲನನಾ | ನಾಕ್ರಮದಿಂದೋಲಯಿಪರು ||೭||

ದುರಗಲಿಕಂಸನುದ್ಧತಸಾಹಸವಕೇಳಿ | ಹರಿವಹಾವುರಿವಕಿಚ್ಚುಗಳು ||
ಭರದಿಂದಡಗುವುವದರಿಂದವನ ನಿ | ಷ್ಠುರಬಲಯುತವನೇಸಂಬೆ ||೮||

ನಷ್ಟಾರಾತಿನರೇಂದ್ರನಿಕಾಯನ | ರಿಷ್ಟನಧಿಕಕೋಪಯುತನು ||
ಅಷ್ಟಮದೊಪೇತನವನೀತಳಕತಿ | ದುಷ್ಟನರಸನಾಗಿಹನು ||೯||

ಸತ್ಯಸದಾಚಾರಗಳಿಗತಿದೂರನ | ಕೃತ್ಯಮಾಸನರ್ಗೆ ಹಿತವನು ||
ಅತ್ಯಂತಕಪಟಹೃದಯನಾರಾಜಾಧಿ | ಪತ್ಯದೊಳಗೆ ನಿಂದಿರಲು ||೧೦||

ದೇವಕಿದೇವಿಯ ಹಿರಿಯಣ್ಣನಖಿಳೋ | ರ್ವೀವಿಶ್ರುತತಪದೊಳಗೆ ||
ಓವದೆನೆಗಳಿಯುವವಧಿಬೋಧಯುತನಾಗಿ | ಯಾ ಊರಿಗೊಂದುದಿನದೊಳು ||೧೧||

ಅನಶನಮಿರ್ದುಪಾರಣೆಗೊಂದತಿಮುಕ್ತ | ಮುನಿವೀದಿಯೊಳು ಬರುತಿರಲು ||
ವನಜವದನೆದೇವಕಿದೇವಿಯಿದಿರ್ವಂ | ದನುರಾಗದಿಂ ನಿಲಿಸಿದಳು ||೧೨||

ಬಳಿಕುನ್ನತಾಸನದೊಳುಕುಳ್ಳಿರಿಸಿ ಕೋ | ಮಲತರಪಾದಪದ್ಮವನು ||
ತೊಳೆದುವಿಶಿಷ್ಟಮಪ್ಪಷ್ಟವಿಧಾರ್ಚನೆ | ಗಳಿನರ್ಚಿಪಸಮಯದೊಳು ||೧೩||

ಭೂವಲ್ಲಭ ಕಂಸನಪಟ್ಟವಲ್ಲಭೆ | ಜೀವಂಜಸೆನಡೆತಂದು ||
ದೇವಕಿಪುಷ್ಪಿತೆಯಾದ ವಸ್ತ್ರವನುತಂ | ದಾವರ್ಣಿಯಮುಂದೆಪಿಡಿದು ||೧೪||

ಎಲೆಯತಿಮುಕ್ತಭಾವ ನೀನೇಕೆ ಬೆ | ತ್ತಲೆಬಂದೆಯೀವಸ್ತ್ರವನು ||
ಒಲಿದುಟ್ಟುಕೊಂಡು ನಿನ್ನೀತಂಗಿ ದೇವಕಿ | ಹೊಲೆತಡೆದೆಂತಪ್ಪವಂಗನೆ ||೧೫||

ಹಡೆವಳೆನಲುಕೇಳಿಯಲ್ಲಿಂಮುಂದಕೆ | ನಡೆವುತಿರಲುಪರಿತಂದು ||
ಕಡುರಾಗದಿಂದದ್ದನಿಂದುಕಾಡಿದೊಡಾ | ಕೆಡಿಕೆಯೊಳಿಂತಾಡಿದರು ||೧೬||

ಸನ್ನುತದೇವಕಿದೇವಿಯಣುಗವಿಕ್ರ | ಮೋನ್ನತನಿನ್ನ ಗಂಡನನು ||
ನಿನ್ನ ತಂದೆಯನು ನೆಲಕೆನೆರಪುವನಿದು | ಸನ್ನಿಯೆಂಬಾನುಡಿಗೇಳಿ ||೧೭||

ಸಿಂಗವಗರ್ಜನೆಯನುಕೇಳಿದ ಮಾ | ತಂಗಿಯಂದದೊಳಾದುಷ್ಟೆ ||
ಅಂಗಜಮಲ್ಲನನುಡಿಗೇಳಿ ಮನೆಗೆಯ್ದಿ | ಹಿಂಗದಪಾರ್ದುಃಖದಿಂದ ||೧೮||

ಮಾಗಿಯಕೋಗಿಲೆಯಂದದಿನಾಸತಿ | ಮೂಗುವಟ್ಟಿರೆಕಂಸನೆಯ್ದಿ ||
ರಾಗಾಧರೆ ನಿನ್ನ ಮನನಿಸುಬ್ಬೆಗವನು | ನೀಗಿಸುವೆನು ಪೇಳೆನಲು ||೧೯||

ಅತಿಮುಕ ಮುನಿಪತಿನುಡಿದ ನುಡಿಯತನ್ನ | ಪತಿಯೊಳೊರೆಯೆಕೇಳಿಯವನು ||
ಅತಿಭೀತಮಾನಸನನ್ಯಥಾಮುನಿಭಾ | ಷಿತವೊಂದು ಮನಸೊಳೆಣ್ಣೈಸಿ ||೨೦||

ಪುತ್ರಮುದ್ಧತಸತ್ತ್ವನಪ್ಪುದರಿಂದಾ | ಚಿತ್ರವಲ್ಲಭೆಗಿಂತುನುಡಿದ ||
ಮತ್ತತ್ವದಿಂ ನೀನುಕಾಡಿದೊಡಾಮುನಿ | ಪಿತ್ತೋದ್ರೇಕದೊಳಿರಪೆ ||೨೧||

ಒರಲಿಪೊಡೇತಕೆ ಒಡುಚಿಂತೆಬಣ್ಣಪಾ | ಯ್ದರೆಯಕೋಮಲೆಯಂತದಕೆ ||
ಹರುವನಕಾಣವೆಯಿರ್ದೊಡೆ ನಾನು ನಿ | ಸ್ನರೆಯನೊಂದು ಸಂತೈಸಿ ||೨೨||

ಇರಲಾದೇವಕಿದೇವಿಗೆ ಗರ್ಭವಂ | ಕುರವಾಗಿಕಾಣಿಸಿಬೆಳೆದು ||
ಬರಲೇಳುತಿಂಗಳು ದಿನದೊಳಗಾಕಂಸ | ನುರುತರಕಪಟಮಾನಸನು ||೨೩||

ವಸುದೇವನಲ್ಲಿಗೆಬಂದು ಕೈಮುಗಿದಿಂ | ತುಸುರ್ದನು ದೇವಕಿದೇವಿ ||
ಪ್ರಸವಸಮಯದೊಳು ತವರುಮನೆಗೆಬಂದು | ಶಿಶುವನುಹಡೆಯಲುಬೇಕು ||೨೪||

ಎಂದವಮಾತಿಗೆ ಮೆಲ್ಲನೆಮಾಡಲೊತ್ಕಂಬ | ದಿಂದಪಾದವಕಟ್ಟಿಕೊಂಡು ||
ಸಂದೇಹವೇಕೆಂದು ತಿಳುಪಿಭಾಷೆಯಕೊಂ | ಡಂದುಮನೆಗೆಪೋದನಿತ್ತ ||೨೫||

ದೇವಕಿಯುದಿದು ಚಕಿತಚಿತ್ತೆಯಾಗಿ ಮ | ತ್ತಾನಲ್ಲಭನೆಡೆಗೈದಿ ||
ಆವರ್ಣಕೋಪದಿಂ ಮುಂದಪ್ಪಕಾರ್ಯಮ | ಜೀವಂಜಸೆಯೊಳಗಿರದೆ ||೨೬||

ಉಸುರಿದನದರಿಂದೆನ್ನೀಗರ್ಭದ | ಸಿಸುಗೆಕಂಟಕವನುತರದೆ ||
ಸಸಿನೆನಿಲ್ಲವನಲ್ಲಸಾದುಷ್ಟನೆನೆಕೇಳಿ | ವಸುದೇವನಾಸತಿಗೂಡಿ ||೨೭||

ಗರ್ಭೀಕೃತಬೋಧರತಿಮುಕ್ತದೆಡೆಗೆಯ್ದಿ | ನಿರ್ಭರಭಕ್ತಿಯಿಂದೆರಗಿ ||
ದುರ್ಭಾವಿಕಂಸನಿಂದೀ ದೇವಕಿಯನಿಜ | ಗರ್ಭಕುಂಟಹುದೇಕೇಡು ||೨೮||

ಎಂದುನುಡಿದ ವಸುದೇವನೊಳಾಮುನಿ | ವೃಂದಾರಕನಿಂತುನುಡಿದ ||
ಸಂದೇಹಿಸದೆ ಕೇಳೀಮಧುರೆಯನೃಪ | ನಂದವಡೆದಸೂರಸೇನ ||೨೯||

ಅವನರಾಜಶ್ರೇಷ್ಠಿರವಿದತ್ತನೆಂಬವ | ನವನಿಗೆಯಮುನಾದತ್ತೆ ||
ಯುವತಿಯುವರ್ಗೀಳು ಮಂದಿಮಕ್ಕಳು ಸಂ | ಭವಿಸಿದರತಿರೂಪಯುತರು ||೩೦||

ಆನಗರಿಯೊಳತಿದುಷ್ಟಾಚಾರದಿ | ಭಾನುಸುರಸುಸೂರಕೀರ್ತಿ ||
ಭಾನುಸೇನಾಸುರದೇವಸೂರಸುಸೂರ | ಸೇನನೆಂಬವರಿರುತಿರಲು ||೩೧||

ಆನಗರಿಯೊಳೋರ್ವ ಮುನಿಬರಲಲ್ಲಿಯ | ಭೂನಾಥನವರೆಡೆಗೆಯ್ದಿ ||
ಭಾನುದತ್ತನುಗೂಡಿ ಧರ್ಮದಿರವಕೇಳಿ | ಜೈನದೀಕ್ಷೆಯುತಾಳಲಿತ್ತ ||೩೨||

ತಂದೆಗಳಿಸಿದಬಾರಹಕೋಟಿವಿತ್ತವ | ನೊಂದುಳಿಯದೆ ವೈಶ್ಯಸುತರು ||
ತಂದುದುರ್ವ್ಯಸನಕ್ಕೆ ಕೊಟ್ಟುಕೆಡಿಸಿಕಳ | ವಿಂದಜೀವಿಸಿಕೊಂಡಿರಲು ||೩೩||

ಭೂವರನದಿದಾಯೇಳ್ವರುಕಳ್ಳರ | ನಾ ಊರಿಂ ಪೊರಮಡಿಸೆ ||
ಆವಿಷಯವಪೊರಮಟ್ಟುಜ್ಜಯಿನಿಯೆಂ | ಬಾ ಊರಿಗೊಂದು ರಾತ್ರಿಯೊಳು ||೩೪||

ಕಳಲೆಂದುಬಂದಾಪೊಳಲ ಬಹಿರ್ಭಾಗ | ದೊಳಗೊಂದು ಪಿತೃವನದೊಳಗೆ ||
ಕುಲಸಂತತಿಗಿರಿಸುತ್ತಾಕಿರಿಯನಾ | ಬಲಯುತಸೂರಸೇನನನು ||೩೫||

ಬಳಿಕತಾವರುವರುಕಳಲೆಯ್ದಲ್ಕಾ | ಪೊಳಲವೃಷಭಕೇತುವೆಂಬ ||
ಇಳಿಯಸಾನ್ಮಾನಕಿಂಕರವಜ್ರಮುಷ್ಟಿಯೆಂ | ಬಲಘುವಿಕ್ರಮಿಯಿಹನವಗೆ ||೩೬||

ಕನಕವಲ್ಲರಿಪಂಗಿಯೆಂಬ ಹೆಸರನಾಂತ | ವನಿತೆಯರಿಹರವರೊಳಗೆ ||
ವಿನುತವಿಲಾಸಾನ್ವಿತೆ ಮಂಗಿಗೆಕ | ಣ್ಮನವಿತ್ತು ಸಲೆವಾಸುತಿಹನು ||೩೭||

ನೊಂದುದಿವಸದೊಳಗರವೆಸ | ದಿಂದಬೇರೂರ್ಗೆಯ್ದುಲವನು ||
ಕನಕವಲ್ಲರಿಯತಿಕಾಪಟ್ಯ | ದಿಂದವಳೊಳುನೇಹವಮಾಡಿ ||೩೮||

ಗಿಮುಡಿಹೂವಿನ ಮಾಲೆಯುಮೇಲೆ | ಪ್ರೇಮವೆಂಬುದಬಲ್ಲಳಾಗಿ ||
ವಿಲ್ಲದೆ ಹೂವಿನಹೇಳಿಗೆಯೊಳು | ದ್ದಾಮವಿಷಾಹಿಯನಿರಿಸೆ ||೩೯||

ಕಮನರಿಯದೆ ಹೂವಮುಡಿವೆನೆಂ | ದಾಕ್ಕೈಯನಿಡಲಲ್ಲಿರ್ದ ||
ಾಹಿ ಹಿಡಿಯೆವಿಷಪೂರಿಸಿ | ಯಾಕಾಮಿನಿಬೀಳ್ದಳಾಗ ||೪೦||

ರಪಿತೃವನದೊಳಗಾವಂಗಿಯ | ಸಾವಧು ಹಾಕಿಸಲಾಗ ||
ಮುಷ್ಟಿಬಂದಾಪ್ರಿಯವಲ್ಲಭೆ | ಯಾವೆಡೆಯಿರ್ದಪಳೆನಲು ||೪೧||

ಳಗೆ ಹೂವಕೊಯ್ವವೇಳೆಯೊಳು ಕ | ರುತ್ತೊಂದು ಹಾವುಹಿಡಿಯಲು ||
ವಂಗಿಯಂತದಕಂಡು ನಾನಳ | ಲುತ್ತಿರೆತಳವಾರರೆಯ್ದಿ ||೪೨||

ಪುತ್ರೋತ್ಪತ್ತಿಯಾದುದಕೆಂದು | ಪುರದೊಳಗಾರಳಬೇಡ ||
ನಿರಿಮೆಂದು ಬಂದುಹೇಳಲ್ಕಾ | ರಗೇಳಿನಾನದರಿಂದ ||೪೩||

ಗಿಯಶಬವನು ಸುಡುಗಾಡಿಗೆ | ನಾಪುಂಜೆಕಳುಹಿದೆನೆಂಬ ||
ತುಗೇಳಿ ನೊಂದಾವಜ್ರಮುಷ್ಟಿ ಯು | ದ್ದಾಮದುಃಖೋಪೇತನಾಗಿ ||೪೪||

ಯೊಳಗಾನಗರಿಯ ಪೊರಮ | ಟ್ಟಾರುದ್ರಭೂಮಿಗೆಯ್ತಂದು ||
ಶಬವನರಸಿಕೊಂಡು ಮತ್ತಾ | ಧೀರನಡೆದುಬಪರ್ಾಗ ||೪೫||

ರೊಳಗೋರ್ವ ಜಿನಮುನಿಕೈಯಿಕ್ಕಿ | ದಿಟ್ಟನೆಯಾಗಿನಿಂದಿರಲು ||
ವರಪಾದಮೂಲಕೆ ಮಂಡೆಯ | ನಿಟ್ಟಂತೆ ದಾಡಿದನು ||೪೬||

ಲ್ಲಳಶಬವನು ನಾನುಕಂಡೊಡೆ | ನಿನ್ನ ಕೆಂದಳಿರ್ವಜ್ಜೆಗಳಿಗೆ ||
ತಾಮರೆಯ ಸಾಸಿರಮನರ್ಚಿಪೆನೆಂ | ದುನ್ನತಿಕೆಯ ಭಾಷೆಮಾಡಿ ||೪೭||

ಮುಂದಕೆಬಂದೊಂದುಬಳಿತನ್ನ | ನಲ್ಲಳುಬಿದ್ದಿರೆಕಂಡು ||
ಪದುಃಖದಿಂದಾಮುನಿಯಿ | ರ್ದಲ್ಲಿಗವಳತಂದಿರಿಸಲು ||೪೮||

ರ್ವೌಷಧಿಋದ್ಧಿಸಂಪನ್ನರ | ಪ್ಪುದರಿಂದವರದೇಹವನು ||
ಗಿದೆಲರುತೀಡಲಾಕ್ಷಣದೊಳಗಾ | ಸುದತಿಗೆಯಸುಪೂರಿಸಿತು ||೪೯||

ರೆದನಲ್ಲಳಕಂಡುಸಂತಸ | ವಟ್ಟಾಕೆಯನಲ್ಲಿರಿಸಿ ||
ನದಿಹೊಂದಾವರೆಗೊಳನಿರ್ಪ | ಬಟ್ಟೆವಿಡಿದುಪೋದನಿತ್ತ ||೫೦||

ಭರದಿಂದಡ್ಡ ಹಿಡಿಯೆ ಖಣಿಲೆಂಬಾ | ಕರವಾಳುಬೀಳಲು ಕಂಡು ||
ತರುಣಿಯಿದೇನೆಂದು ಕೇಳದೊಡಾದುಷ್ಟೆ | ಮರುಳಗೊಡ್ಡಾಟವೆಂದೆನಲು ||೧೪||

ಅವಳೆಸಗುವ ಕಾಪಟ್ಯವನರಿಯದೆ | ಯುವನಾಖಡ್ಗವತೆಗೆದು ||
ತವಕದಿ ತನ್ನೆಡಗೈಯೊಳಗಿರದಾಂತು | ಸವಿನಯದಿಂದಾಹೂವ ||೧೫||

ಸಾಸಿರವನು ಬಲಗೈಯಿಂದರ್ಚಿಸಿ | ಅಸಂಯಮಿಯಡಿದಳಕೆ ||
ಸಾಸಿರ ಸೊಳುಸಮಿಸಿ ಮತ್ತವಳ್ಗೂಡಿ | ಸಾಸಿಗನೂರ್ಗೈದನಿತ್ತ ||೧೬||

ಮಾನಿನಿಯರು ಮಾಡುವ ಕಾಪಟ್ಯವ | ನೇಸೆಂದಿನಿಸುಭಾವಿಸದೆ ||
ಮಾನಿತಮಪ್ಪಾಚಾರವನುಳಿದತಿ | ಹೀನಕೃತ್ಯದಿ ಕೆಟ್ಟವೆಂಬ ||೧೭||

ಸೂರಸೇನಾಗ್ರಜರುವರು ಕಳ್ಳರಾ | ಊರರಸಿನಮನೆವೊಕ್ಕು ||
ಭೂರಿವಸ್ತುವಕಳ್ದು ಪೊರೆಗಟ್ಟಿಕೊಂಡು ಮ | ತ್ತಾರುದ್ರಭೂಮಿಗೆಯ್ದಿದರು ||೧೮||

ಒಂದಾವಸ್ತುವನಾಸೂರಸೇನನ | ಮುಂದೇಳುಭಾಗೆಯಮಾಡಿ ||
ಕುಂದುಹೆಚ್ಚಸುನೋಡಿ ನಿನ್ನ ಮನಸ್ಸಿಗೆ | ಬಂದುದ ತೆಗೆದುಕೊಳ್ಳೆನಲು ||೧೯||

ನಾರಿಯುರಸುಸಾಬಿ ಹರಣದಾಶೆಯ ಬಿ | ಟ್ಟಾರಿಕೆಯೊಡಮೆಯಕದ್ದು ||
ನಾರಕಗತಿಗೆಯ್ದಬೇಡೆಂದು ಮಂಗಿಯು | ವಾರತೆಯನು ಪೇಳಿದನು ||೨೦||

ಆಮಾತುಗೇಳಿಯುಗ್ರಜರುಗಳರುವರು | ತಾಪತಿವಿಸ್ಮಯವಟ್ಟು ||
ಪ್ರೇಮದಿ ಸೂರಸೇನನು ಗೂಡಿದೀಕ್ಷೆಯ | ನಾಮುನಿಯಿಂಧರಿಸಿದರು ||೨೧||

ಗಂಡರಾಮಂಗಿಯು ಕಥನದಿದೀಕ್ಷೆಯ | ಕೊಂಡುದ ಕೇಳಿ ಮತ್ತವರ ||
ಪೆಂಡಿರೇಳ್ವರು ನಿರ್ವೇಗದಿ ದೀಕ್ಷೆಯ | ಕೊಂಡುಪೋದರು ಬಳಿಕಿತ್ತ ||೨೨||

ದೀಕ್ಷೆಗೊಂಡಾಭಾನುಮುನಿಮೊದಲಾದ ಮು | ಮುಕ್ಷುಗಳೇಳ್ವರೆಯ್ತಂದು ||
ಪಕ್ಷೋಪವಾಸಾಂತರದೊಳುಜ್ಜೈನಿಗೆ | ಭಿಕ್ಷೆಗೆಂದು ಬರುತಿರಲು ||೨೩||

ಅವರಕಂಡಾ ವಜ್ರಮುಷ್ಟಿನಿಲ್ಲಿಸಿ ತನ್ನ | ಭವನಕೆಯ್ದಿಸಿ ಭಿಕ್ಷೆಯನು ||
ಸುವಿಧಾನದಿಂದ ಮಾಡಿಸಿ ಕೈಮುಗಿದು ಮ | ತ್ತವರೊಳಿಂತೆಂದಾಡಿದನು ||೨೪||

ಕುಸುಮಕೋದಂಡನ ಗೆಲ್ವೀಚೆಲ್ವಿಕೆ | ಹಸನಾದೀ ಚಿಕ್ಕಹರೆಯ ||
ಮಿಸುಗುವಿಂತಪ್ಪಲಾವಣ್ಯಮುಮಿರ್ದೀ | ಯಸಿಧಾರಾಸುವ್ರತವು ||೨೫||

ನಿವಗೇನುಕಾರಣದಿಂದಾಯಿತೆನಲಾ | ಗವರು ಮಂಗಿಯ ಕಥನವನು ||
ವಿವರಿಸೆಕೇಳಿ ವಿಸ್ಮಯಮಾನಸನಾಗಿ | ತವೆಯುದ ವೈರಾಗ್ಯದಿಂದ ||೨೬||

ಆ ವಜ್ರಮುಷ್ಟಿಪೆಂಡಿರದೊಂದು ಕಪಟಕೆ | ನೋಂವ್ರತದೀಕ್ಷೆವಡೆದಸು ||
ಆವಿಧವರಿದು ತಪವನಿರದಾಂತಳು | ಲಾವಣ್ಯಾಯುತೆಯಾಮಂಗಿ ||೭೭||

ಮತ್ತಾಸಪ್ತರ್ಷಿಯರು ಪಲವು ಪಗ | ಲುತ್ತಮತಪದೊಳು ನೆಗಳೆ ||
ಸತ್ತುಮೊದಲ ಸೌಧರ್ಮಕಲ್ಪದೊಳು | ತ್ಪತ್ತಿಯಾದರು ಧರೆವೊಗಳೆ ||೭೮||

ಅಲ್ಲಿಯೇಕಸಾಗರೋಪಮಾಯುಷ್ಯಂಬ | ರುಲ್ಲಾಸದಿಂ ಸುಖವುಂಡು ||
ನಿಲ್ಲದಲ್ಲಿಂದಿಳಿದೀಧಾತಕಿಖಂಡ | ದಲ್ಲಿಯು ವಾಸವದೆಸೆಯ ||೭೯||

ಮಂದರಗಿರಿಯ ತೆಂಕಣ ಭರತಕ್ಷೇತ್ರ | ದೊಂದುಮಧ್ಯದ ವಿಜಯಾರ್ಧ ||
ವೆಂದೆಂಬಗಿರಿಯ ತೆಂಕಣತಪ್ಪಲೊಳಗತಿ | ಸುಂದರಮಾದದೇಶದೊಳು ||೮೦||

ಎಸೆವ ನಿತ್ಯಾಲೋಕಮೆಂಬಪುರದೊಳು ರಂ | ಜಿಸುತಿರ್ಪನಾಚಿತ್ರಚೂಳ ||
ವಸುಧೀಶನವಗೆ ಮನೋಹರಿಯೆಂಬೋರ್ವ | ಳಸಿಯಳು ಸತಿಯಾದಳವರ್ಗೆ ||೮೧||

ಆ ಸಗ್ಗಿಗರೇಳ್ವರುಬಂದು ಪುಟ್ಟಿವಿ | ಲಾಸವಡೆದದೇಹವಾಂತು ||
ಸಾಸಿಗರಾಗಿಬೆಳೆದು ಜವ್ವನವಾಂತು | ಭಾಸುರತರ ಕೀರ್ತಿವಡೆದು ||೮೨||

ಇರುತಾಚಿತ್ರಾಂಗದ ಗರುಡಧ್ವಜ | ಗರುಡವಾಹನ ಮಣಿಚೂಡ ||
ಸುರಭಿಚೂಳ ಗಗನಾನಂದ ಗಗನೇ | ಚರರೆಂಬಾನೃಪಸುತರು ||೮೩||

ಹರಿವಾಹನನೆಂಬಪಗೋರ್ವಳಶಿಸ್ವಯಂ | ವರದೊಳು ಮಾಲೆಯನಿಕ್ಕಿ ||
ವರಿಸಲೋರ್ವನುಚಕ್ರಿಯುವನಹತಿಸಿಯಾ | ತರುಣಿಯುನೆಳದೊಯ್ಯಲಾಗ ||೮೪||

ವನಿತೆಯುಕಥನದಿಹರಿವಾಹನಸತ್ತ | ನೆನುತಸಂಸ್ಕೃತಿಗೆಕೊಕ್ಕರಿಸಿ ||
ಜನನುತಮೆನಿಸಿದುತ್ತಮಜಿನದೀಕ್ಷೆಯ | ನನುಕರಿಸಿದರಿಳೆವೊಗಳೆ ||೮೫||

ಇಂತುದೀಕ್ಷೆಯನಾಂತು ತಪಗೆಯ್ದಾಜೀವಿ | ತಾಂತದೊಳಗೆ ನಾಲ್ಕನೆಯ ||
ಸಂತತಸುಖಮಾವಸಗ್ಗದೊಳಗೆನಿ | ಶ್ಚಿಂತದಿ ಜನಿಸಿಯೊಪ್ಪಿದರು ||೮೬||

ಅಲ್ಲಿಸಪ್ತಸಾಗರೋಪಮಾಯುಷ್ಯವ | ನೆಲ್ಲವತೀರಿಸಿಬಳಿಕ ||
ನಲ್ಲಲಿತಾಂಗಚಿತ್ರಾಂಗದಚರದೇವ | ನಿಲ್ಲಿಯುಕುರುಜಾಂಗಣದ ||೮೭||

ಜನನುತ ಹಸ್ತಿನಪುರದೊಳು ಸಿತವಾ | ಹನನೆಂಬ ವೈಶ್ಯೋತ್ತಮಗೆ ||
ವನಜಾಕ್ಷಿ ಬಂಧುಮತಿಗೆ ಶಂಖನೆಂಬೋರ್ವ | ತನುಜಾತನಾಗಿಯೊಪ್ಪಿದನು ||

ಆ ಊರರಸು ಗಂಗದೇವಗೆ ನಂದಯ | ಶಾವನಿತೆಗೆ ಪುಟ್ಟಿದರು ||
ಆ ಉಳಿದರುವರು ಗರುಡಧ್ವಜಾವಿಯ | ದೇವರ್ಕಳಾಸಗ್ಗದಿಂದ ||೮೯||

ಬಂದು ಗಂಗ ಗಂಗದೇವ ಗಂಗಾಮಿತ್ರ | ಸಂದಿಸಂದಿಬಾಂಧವನು ||
ನಂದಿಷೇಣರೆಂಬ ನಾಪುವಹಡೆದತಿ | ಸುಂದರಶಿಯುನೆಯ್ದಿದರು ||೯೦||

ರೇವತಿಯೆಂಬೋರ್ವ ದಾದಿಮುಮತೆಯಿಂ | ದೋವಲಂತವರುರೆ ಬೆಳೆದು ||
ಆವೈಶ್ಯಸುತ ಶಂಖನೊಳು ಪೂರ್ವಜನ್ಮದೊ | ಳಾವರಿಸಿದನೇಹದಿಂದ ||೯೧||

ಭಾವಶುದ್ಧಿಯೊಳೊಡನುಂಡೊಡವೆರದಾಡಿ | ಓವದೆಕೆಳೆಗೊಂಡಿರಲು ||
ಆ ವಸುಧೀಶನ ಸತಿ ನಂದಯಶಾ | ದೇವಿ ಮತ್ತೊಂದು ಮಗುವನು ||೯೨||

ಹಡೆದದ ನೋಡಿಯವಳು ಪೂರ್ವಜನ್ಮದೊ | ಳಡಸಿದ ನಿಜವೈರದಿಂದ ||
ಕಡುಮುನಿದಾದಾದಿ ರೇವತಿಯೆಂಬಾ | ಮಡದಿಯುಕೈಯೊಳುಕೊಟ್ಟು ||೯೩||

ಆರೊಬ್ಬರಿದನು ಸಾಕುವೆನೆಂಬವರಿಗೆ | ಸೇರಿಸೆಂದವಳನು ಕಳುಹೆ ||
ಆರಾಜಶಿಶುವಕೈಯೊಳಗೆತ್ತಿಕೊಂಡು ಮ | ತ್ತಾರೇವತಿಬರುತಿರ್ಪ ||೯೪||

ಕೇರಿಯೊಳಗೆ ವೈಶ್ಯಸುತ ಶಂಖಬರುತಿ | ರ್ದಾರತನುಜನಿವನೆಂದು ||
ಕಾರುಣ್ಯದಿಂಕೇಳಲಾಪ್ರಪಂಚಮನಾ | ನಾರಿಯುಸುರೆಕೇಳುತವೆ ||೯೫||

ಒಂದಿದಮುರುಕದಿನಾಸಿಸುವಸುತಂದು | ನಂದಯಶಿಯುಸಹಜಾತೆ ||
ಸುಂದರಿತನ್ನ ಜನನಿಬಂಧುಮತಿಗಾ | ನಂದದಿ ಕೊಡಲು ಕೈಕೊಂಡು ||೯೬||

ಅವಗೆನಿರ್ನಾಮಿಕನೆಂಬ ಹೆಸರವಿ | ಟ್ಟವಳು ಸಾಕುತ್ತಿರಲಿತ್ತ ||
ಅವನಿಪ ಗಂಗನೊಂದಾನೊಂದುದಿನದೊಳ | ಗನಧಿಬೋಧರಬಳಿಗೆಯ್ದಿ ||೯೭||

ವಿನಮಿತನಾಗಿ ನಿರ್ನಾಮಿಕಗಾನಿಜ | ಜನನಿ ಮುನಿದಕಾರಣವ ||
ಎನಗೆ ಬೆಸಸಿಮೆನಲವರಿಂತೆಂದರೀ | ವಿನುತಸೌರಾಷ್ಟ್ರವಿಷಯದ ||೯೮||

ಗಿರಿನಗರಮನಾಳ್ವ ಘನರಥಭೂಪತಿ | ತರುಣಿಕನಕಮಾಲೆಗೂಡಿ ||
ಇರಲವಗಮೃತರಸಾಯನ ನಾಮವ | ಧರಿಸಿಬಾಣಸಿಯೋರ್ವನಿಹನು ||೯೯||

ಒಂದುದಿವಸಮುವಹಿತಶಾಕಂಗಳ | ನೊಂದಿಸಿಯಾಭೂವರಗೆ ||
ತಂದಿಕ್ಕಲವು ಸವಿಯಾಗಲವಗೆ ಮೆಚ್ಚಿ | ಒಂದು ಗ್ರಾಮುವನಿತ್ತನಾಗ ||೧೦೦||

ಹಿಂಸಾಸುರೂಪದ ಬಾಣಸಿ ಬಿನ್ನಣ | ದಿಂಸಲೆಸವಿಯಾಗಿ ಸಮೆದ ||
ಮಾಂಸಾಹಾರವನಾಭೂಪಾಲೋ | ತ್ತಂಸನಸುಣುತ ಸುಖಮಿರ್ದು ||೧೦೧||

ಮತ್ತೊಂದುದಿವಸ ಸುಧರ್ಮರೆಂಬೋರ್ವರ | ತ್ಯುತ್ತಮಮುನಿಯಲ್ಲಿಗೈದಿ ||
ಚಿತ್ತಶಮಪ್ಪ ಸದ್ಧರ್ಮವನಾಭೂ | ಪೋತ್ತಂಸಗೆ ಪೇಳಲಾಗ ||೧೦೨||

ದೊರೆಕೊಂಡಲಬ್ಧಿವಶದಿ ನಿಜನಿರ್ವೇಗ | ಮಿರದಾಂತತಿವೇಗದೊಳು ||
ವರಸುತ ಚಿತ್ರರಥಗೆ ಪಟ್ಟವಕಟ್ಟಿ | ಧರಿಸಿದನಮಲದೀಕ್ಷೆಯನು ||೧೦೩||

ಬಳಿಕಾಚಿತ್ರರಥಾವನಿಪಾಲಕ | ವಿಲಸಿತಮುಪ್ಪಸುವ್ರತವ ||
ತಳೆದಾಬಾಣಸಿಗಗೆಕೊಟ್ಟಗ್ರಾಮವ | ತಳುವಾದದೆ ತೆಗೆಯಿಸಿದ ||೧೦೪||

ಈಸವಣನವೆಸೆಯಿಂದೆನ್ನುಂಬಳಿ | ಯೋಸರಮಾಯಿತ್ತಾಗಪೆಂದು ||
ಆ ಸೂಪಕಾರನು ಕಡುನೊಂದುಕಪಟದಿ | ಸಾಸುಧರ್ಮರಬಳಿಗೆಯ್ದಿ ||೧೦೫||

ಚರಣಯುಗಕೆ ವಿನಮಿಸಿಯೆಮುನಿಪತಿ | ಸುರುಚಿರಮುಪ್ಪಸುವ್ರತವ ||
ಪರಪಾಲಿಸೆಸುತ ಕಪಟವಮಾನಸನಂದು | ಧರಿಸಿದನಾಚರಿತವನು ||೧೦೬||

ಪ್ರಾಣಿದಯಾಪರಧರ್ಮವ ಪೊರ್ದಿದ | ಬಾಣಸಿಗನುಗುಣಯೋಗ ||
ಬಾಣದಗುಣಯೋಗದಂದದಿ ಮನದೊಳು | ಹೂಣಿಸಿದುದನೇನೆಂಬೆ ||೧೦೭||

ಈತೆರದಿಂಕಾಪಟ್ಯಚರಿತ್ರೋ | ಪೇತಪಾಚಕನೊಂದುಪಗಲು ||
ಆತಾಪಸಿಚರಿಗೆಗೆಬರೆ ಕುಟಿಲ | ಪ್ರೀತಿಯಿಂದ ತಾನಿಲಿಸಿ ||೧೦೮||

ಭಕ್ಷ್ಯಗಳೊಳು ಗರಳವಕೂಡಿ ಕೈಯೆತ್ತಿ | ಭಿಕ್ಷೆಯನೊಸೆದು ಕೈಕೊಂಡು ||
ತಕ್ಷಣದೊಳು ನಿಜದೇಹವಬಿಸುಟು ಮು | ಮುಕ್ಷು ಸ್ವರ್ಗಕೆಪೋದನಿತ್ತ ||೧೦೯||

ಯತಿವಧೆಗೆಯ್ದಾಪಾತಕಿಯನು ಭೂ | ಪತಿತಲೆಹೊಯ್ಸಲುಸತ್ತು ||
ಅತಿದುಃಖಮಿಾವೆಲ್ಲಾ ನರಕದೊಳುತ | ಪತಿಯಾಗಿ ನೆರೆಜೀವಿಸುತ ||೧೧೦||

ಪಲಪಗಲೀತೆರದಿಂದ ಸಂಸೃತಿಯೆಂಬ | ಜಲರಾಶಿಯ ಮಡುವಿನೊಳು ||
ಸಲೆಸಿಕ್ಕಿ ಊಹಿಸಬಾರದದುಃಖವ | ನಲಸದೆತಾನುಣುತಿರ್ದು ||೧೧೧||

ಎತ್ತಾನುದುರಿತೋಪಶಮದಿನಾರ್ಯಖಂಡ | ದುತ್ತಮಮಲಯದೇಶದೊಳು ||
ಚಿತ್ರರವಾದ ಪಲಾಶಕೂಟಾಖ್ಯಂ | ಬೆತ್ತುರಂಜಿಸಪಳ್ಳಿಯೊಳು ||೧೧೨||

ಯಕ್ಷದೇವನೆಂಬ ಶೂದ್ರನಾತನಸತಿ | ಯಕ್ಷದತ್ತೆಯೆಂಬವಗೆ ||
ಯಕ್ಷಿಳನೆಂಬವನಿಂಸೆರೆಕಿರಿಯನು | ಯಕ್ಷದತ್ತಪೆಸರ್ವಡೆದು ||೧೧೩||

ಜನಿಸಿಬೆಳೆದು ಮತ್ತಾಸೋದರರೊಂದು | ದಿನದೊಳು ಬೆಳೆಪಕಳವೆಯ ||
ವನವನೋಡುವೆವೆಂದೊಂದುಬಂಡಿಯನೇರಿ | ಯತಿರಾಗದಿಂಬರುತಿರ್ದು ||೧೧೪||

ಮತ್ತಲ್ಲಿಯೊಂದುರಗಿಯುವೇಳಲಾಯಕ್ಷ | ದತ್ತತಾನೇರಿದರಥವ ||
ಒತ್ತಿಹಾಯಿಸಲಾವೇಳೆಯೊಳಂತದು | ಸತ್ತುಮತ್ತೀಕ್ಷೇತ್ರದೊಳು ||೧೧೫||

ಭಾಸುರಮಪ್ಪಾಶ್ವೇತಪುರಮನಾಳ್ವ | ವಾಸವಸಂಬಟ್ಟಭೂಪತಿಗೆ ||
ಆಸತಿ ವಸುದೇವಗೆ ಸಂದಯಶೆಯುಂ | ಬಾಸುದತೀಮಣಿಯಾಗಿ ||೧೧೬||

ಜನಿಯಿಸಿ ಗಂಗನೃಪತಿನಿಸಗೊಲವಿಸ | ವನಿತೆಯಾದಳು ಬಳಿಕಿತ್ತ ||
ಜನನುತ ಪಿರಿಯಯಕ್ಷಿಳನಾತಮ್ಮನು | ಮುನಿಸಿಂದಾ ಉರಗಿಯನು ||೧೧೭||

ಕೊಂದುದಕಂಡೆಲೆಯನುಜಾತಾನೀ | ಸಿಂದುನಿರಪರಾಧಿಯನು ||
ಹೊಂದಿಸುವುದು ಮತವೇಯೆಂದಾವನ | ಸಂದುಬೋಧಿಸಲದಕೇಳಿ ||೧೧೮||

ಕರುಣಹೃದಯನಾಗಿ ಕೆಲದಿನಮಿದರ್ಾ | ಮರಣದಿನಾಯಕ್ಷದತ್ತ ||
ಅರಸಕೇಳ್ನಿನರ್ಾಮಿಕನಾಗಿ ನಿಸ್ನೀ | ಯರಸಿಯಬಸಿರೊಳೊಗೆದನು ||೧೧೯||

ಹಿಂದಣಜನ್ಮಾಂತರವೈರದಿಂದಾ | ನಂದಯಶಾದೇವಿಯವಗೆ ||
ಒಂದಿಸಿದಳು ಕೋಪವನೆನೆಕೇಳ್ದಾ | ನಂದದಿನಾಗಂಗನೃಪತಿ ||೧೨೦||

ವೈರಾಗ್ಯದಿಂದ ತನ್ನಾಅರುವರು ಸುತ | ಮಾರಕರಾವೈಶ್ಯತನುಜ ||
ಕಾರುಣ್ಯನಿಧಿಶಂಖನಿರ್ನಾಮಿಕರುಗ | ಳಾರೆಯ್ದುದೊಡನೆಯ್ದಿಬರಲು ||೧೨೧||

ಭಾವಶುದ್ಧಿಯೊಳುತಪವತಾಳಲಾಗಂಗ | ದೇವನಸತಿನಂದಯಶೆಯು ||
ರೇವತಿಯೆಂಬಾದಾದಿವೆರಸಿತಾ | ನೋಪದೆದೀಕ್ಷೆಯಹಡೆದು ||೧೨೨||

ಮುಂದಣಭವಕೀಯರುವರುಕುವರರು | ನಂದನರಾಗಬೇಕೆಂದು ||
ನಂದಯಶಾಕಾಂತಿಕೆಯರುನಿದಾನಮ ನಂದು ಚೆನ್ನಾಗಿಮಾಡಿದರು ||೧೨೩||

ಆ ರೇವತಿಕಂತಿಕೆತಾನಾರ್ಯೆ | ದಾರಾಜಸುತರುವರನು ||
ಆರ್ವೆವೆಮುಂದಣಜನ್ಮಕೆನುತನುನ | ವಾರೆನಿದಾನಮಾಡಿದಳು ||೧೨೪||

ಇಂತವರೀರ್ವರುಮಾಡಿ ನಿದಾನಮ | ಸಂತತಮಾಜಿಸತಪವ ||
ಅಂತರಿಸದೆಮಾಡಿ ಸನ್ಯಸನದಿಜೀವಿ | ತಾಂತದೊಳುತ್ತಮಮಪ್ಪ ||೧೨೫||

ಪದಿನಾರರನೆಯಸಗ್ಗದೊಳು ಸಂಜನಿಯಿಸಿ | ಸದಮಲತರಸುಖವುಂಡು ||
ಒದವಿದಮರಣಮುಖದಿದೇವಸೇನಗೆ | ಉದಯಿಸಿಕಡುಚೆಲ್ವುವಡೆದ ||೧೨೬||

ದೇವಕಿಯೆಂಬನಾಮವನುಹಡೆದು ವಸು | ದೇವನಿನಗೆಸತಿಯಾದ ||
ರೇವತಿಚರದೇವನುಬಂದು ಮಲಯಮೆಂ | ಬಾವಿಷಯದಮಧ್ಯದೊಳು ||೧೨೭||

ಪರಿರಂಜಿಸುವಭದ್ರಿಳಮೆಂಬನಗರಿಯ | ವರದಸುದೃಷ್ಟಿಯೆಂಬವಗೆ ||
ಗರುವೆಯಳಕೆಯೆಂಬವಲ್ಲಭೆಯಾಗಿ ಬಂ | ಧುರಶೀಲವತಿಯಾದಳತ್ತ ||೧೨೮||

ಆ ವೈಶ್ಯಸುತ ಶಂಖಮುನಿಸತ್ತುಸಲೆ ಸುಖ | ವಿಭಾವಮಹಾಶುಕ್ರದೊಳು ||
ಓವದೆಜನಿಸಿಯಲ್ಲಿಂಬಂದೀಬಲ | ದೇವನಾಗಿಯೆ ಪುಟ್ಟಿದನು ||೧೨೯||

ಮತ್ತಾಗಂಗನೃಪಾಲಕನಾತ್ಮಜ | ರುತ್ತಮರರುಪರುತಪದಿ ||
ಸತ್ತುಮತ್ತಾಸಗ್ಗದೊಳುಸಂಜನಿಯಿಸಿ | ಚಿತ್ತರಪಹಸುಖವುಂಡು ||೧೩೦||

ಅಲ್ಲಿಂವಿಗತಪೇವಿಗಳಾಗಿಯೆಲೆ ಭೂ | ವಲ್ಲಭ ನಿನಗೆ ಮುಚ್ಚೂಳು ||
ಸಲ್ಲಲಿತಾಕಾರದಮಳುಗಳಾಗಿತಾ | ವೃಲ್ಲಾಸದಿಂಜನಿಸುವರು ||೧೩೧||

ಆ ಗುಡುಮಕ್ಕಳಸಿಂದ್ರಸಬೆಸದಿಂ | ನೈಗಮದೇವನೆಂಬವನು ||
ಬೇಗದೊಳೆತ್ತಿಕೊಂಡಳಕೆಯಬಳಿಗನು | ರಾಗದಿತಂದಿರಿಸುವನು ||೧೩೨||

ಅವಳುಪೆತ್ತರೆಯಾಯುಷ್ಯದಮಕ್ಕಳ | ಯುವತಿದೇವಕಿಯುಮುಂದಿಡಲು ||
ತವಕದಿಬಂದಾ ಅರುವರುಮಕ್ಕಳ | ತವೆಕೊಲಿಸುವನಾಕಂಸ ||೧೩೩||

ಬಳಿಕತ್ತಲಳಕೆ ಸಾಕಿದನಿನ್ನಮಕ್ಕಳು | ಸುಲಲಿತಚರಮಾಂಗಿಗಳು ||
ತಳುವದೆದೀಕ್ಷೆಯಧರಿಯಿಸಿನಿರ್ವಾಣ | ಲಲನೆಗೆನಲ್ಲರಾಗುವರು ||೧೩೪||

ಭೂವರಕೇಳಾನಿರ್ನಾಮಿಕಚರ | ದೇವನುನಿನ್ನೀರಮಣಿ ||
ದೇವಕಿಯೊಡಲೊಳಗೊಗೆದೇಳುತಿಂಗಳು | ತೀವಲೊಡನೆಸಂಜನಿಸಿ ||೧೩೫||

ಪೆರತೊಂದೆಡೆಯೊಳುಬೆಳೆದು ಮಾರಾಂತರ | ನುರದಿಕ್ಕಿಮರೆಹೊಕ್ಕರನು ||
ನೆರೆರಕ್ಷಿಸಿಯರ್ಧಚಕ್ರೇಶ್ವರನಾಗಿ | ಮೆರೆವನುಭೂತಳದೊಳಗೆ ||೧೩೬||

ಈನುಡಿಪುರುತೀರ್ಥಕರುಭರತಧರ | ಣೀನಾಥಗೆನಿರವಿಸಿದ ||
ಮಾನಿತಮಪ್ಪವಚನಮಿಂತಿವನಂಬು | ನೀನೆಂದಾಮುನಿಯುಸುರೆ ||೧೩೭||

ಸರ್ವಜ್ಞೋಽಮೋಘವಚನೋಯೆಂದುಭೂಮಿಪ | ಧವತಿಲಕನುವಸುದೇವ ||
ಯುವತಿಸಹಿತಯತಿಗೆರಗಿಬೀಳ್ಕೊಂಡಾ | ಭವನಕೆನಡೆತಂದನಾಗ ||೧೩೮||

ಜನಸುತಜಯಜಾಯಾಪತಿಸೂತನ | ಮನಸಿಜಮನುಜಮಂದಾರ ||
ಘನಗುಣಭೂಷಣನೆಸೆದನುಸಜ್ಜನ | ವನರುಹವನಭಾಸ್ಕರನು ||೧೩೯||

ಇದು ಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿ ನೇಮಿಜಿನೇಶಸಂಗತಿಯೊಳ | ಗೊದವಿದಾಶ್ವಾಸವೀರೇಳು ||೧೪೦||

## ಹದಿನಾಲ್ಕನೆಯ ಸಂಧಿ ಸಂಪೂರ್ಣಂ

# ೧೫ ಕೃಷ್ಣೋದಯವರ್ಣನಾಸಂಧಿ



ಶ್ರೀಮದಮರಪತಿಮೌಲಿಕೀಲಿತಪಾದ | ತಾಮರಸದ್ವಯಸಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಆಲಲಿತಾಂಗಿಯ ಗರ್ಭಬೆಳೆದು ಬಳಿ | ಕೇಳುತಿಂಗಳು ಸಮನಿಸಿದ ||
ವೇಳೆಯೊಳಾಪಾತಕಿ ಕಂಸನಿರದೆ ತ | ನ್ನಾಲಯಕೊಡಗೊಂಡುಪೋಗಿ ||೨||

ಅಂತರಂಗದಹಗೆ ಬಹಿರಂಗದ ಹಿತ | ವಾತಿಕೆಯಿಂದುಪ್ಪಸಿರಲು ||
ಅಂತದನರಿದಾಮುನಿವಾಕ್ಯವನಂಬಿ | ಕಾಂತೆನಿಶ್ಚಿಂತದಿನಿರ್ದ್ದು ||೩||

ನವಮಾಸವೃತೀಪಿವಜ್ರದೇಹಿಗಳಪ್ಪ | ಜವಳಿಮಕ್ಕಳನು ಹಡೆಯಲು ||
ತವಕದಿನಿಂದ್ರಸಬೆಸದಿಂನೈಗಮ | ದಿವಿಜಾತನಾಬಳಿಗೈದಿ ||೪||

ಲಲನೆಗೆ ಮಾಯಾನಿದ್ರೆಯನೊದವಿಸಿ | ಯುಳಕೆಹೆತ್ತಾಸಿಸುಗಳನು ||
ತಳುವದೆತಂದಲ್ಲಿಮಡಗಿ ಮತ್ತಾಶಿಶು | ಗಳನಲ್ಲಿಗೆ ಕೊಂಡುಪೋದ ||೫||

ಆಸಮಯದೊಳ್ಕೈತಂದು ಹೆರಿಸಬಂ | ದಾಸೂನೆಗಾತಿಗೆಹೇಳಿ ||
ಓಸರಿಸದೆಯುರೆಯಾಯುಷ್ಯವ ಹಡೆ | ದಾಶಿಶುಗಳಕೊರಲುಗಳ ||೬||

ಅರುಗುಲಿತಸದಿಮುರಿಸಿ ಬಹಿರಂಗದ | ಮರುಕದಿನಾದೇವಕಿಯನು ||
ನೆರೆಯುಪಚರಿಸಿನೋಯದ ಕಣ್ಗಳಿಂ ನೀರ | ಸೊರಯಿಸಿನಿಶ್ಚಿಂತಮಿರ್ದ ||೭||

ಇಂತು ಮೂರುಸೂಳವಳಿ ಮಕ್ಕಳನು ಕೃ | ತಾಂತಸಂದದಿನಾಕಂಸ ||
ಅಂತರಿಸದೆ ಹತಿಯಿಸಿ ಮುನಿವಚನವ | ನಂತಾನುಗೆಲಿದೆನೆಂದೆನುತ ||೮||

ಘನತರವಹಕೃತಕದಿನಿರದಾಕಂಸ | ಮನೆಮುರೆಯೊಳು ಮಾಡಿಸಿದ ||
ಮುನಿಸುಗಿಚ್ಚುಹೊರಹೊಮ್ಮದುದಡುಗೆಯ | ಮನೆಯ ಕಿಚ್ಚಿನಹೊಗೆಯಂತೆ ||೯||

ಈತೆರದಿಂ ಕಪಟವಮಾಡಿ ಮತ್ತಾ | ಪಾತಕಿ ನಿಶ್ಚಿಂತಮಿರಲು ||
ಆತನುಜಾತರಗಲ್ಕೆಯದುಃಖದಿ | ನಾತರುಣೀಮಣಿಯಿರಲು ||೧೦||

ಒಂದುದಿವಸ ಋತುಮತಿಯಾಗಿ ನಾಲ್ನೀರ | ಮಿಂದುಬಳಿಯತೊಡವಿಟ್ಟು ||
ಕಂದರ್ಪನಿಭವಸುದೇವನ ಸೂಳ್ಗೆ | ತಂದುರತಿಯೊಳೋಲಾಡಿ ||೧೧||

ಬೆಳಗಪ್ಪ ಜಾವದೊಳಗೆ ರವಿಶಶಿಕರಿ | ಕಳಭಕೇಸರಿ ಚಕ್ರಗಳನು ||
ಲಲನೆಕನಸಿನೊಳುಕಂಡುಪ್ಪವಡಿಸಿ | ಬಳಿಕದನಿನೆಯನೊಳುಸುರೆ ||೧೨||

ಬಾಲೆನೀನು ಕಂಡಕನಸಿನಿಂವಿಕ್ರಮು | ಶಾಲಿವಿಶ್ವಂಭರೇಶ್ವರನು ||
ಬಾಲಕ ನಿನಗೋರ್ವನಪ್ಪನೆಂಬುದಕೇಳಿ | ಲೀಲೆಯೊಳಾಸತಿಯಿರಲು ||೧೩||

ಆ ನಿರ್ನಾಮಿಕಚರದೇವನೆಯ್ತಂದು | ಮಾನಿನಿಯಮಲಗರ್ಭದೊಳು ||
ತಾನಿರದುದಯಿಸಿದನು ಶುಕ್ತಿಯೊಳುಪುಟ್ಟು | ವಾಸವಮೌಕ್ತಿಕದಂತೆ |೧೪||

ಕೇಡನೆಣಿಸುವೆನೆಂಬಾಕಂಸಗೆ ಮಿಳ್ತು | ಮೂಡಿಬೆಳೆವಮಾಳ್ಕೆಯೊಳು ||
ಮೂಡಿ ಬೆಳೆದುಗರ್ಭಚಿಹ್ನ ಕಾಣಿಸಿತಾ | ಗಾಡಿಕಾತಿ ದೇವಕಿಗೆ ||೧೫||

ಕರವನೀಡುವ ಕಂಸನಸುಂಗುವೆನೆಂ | ದುರುಗರ್ಭನಿಧಿಯಮೇಲಿರ್ದ ||
ಕರಿಯನಾಗರವೊಲಿರ್ದುದು ರೋಮಾವಳಿ | ಸರಸಿಜದಳಲೋಚನೆಗೆ ||೧೬||

ಕಡುಗಲಿ ಕಂಸನಹಣೆಯಕ್ಕರವನಿಂ | ತಡಗಿಪೆನೆಂದು ತೋರ್ಪಂತೆ ||
ಮಡದಿಯೊಡಲಸಿಸುಬೆಳೆದು ತ್ರಿವಳಿಗಳ | ನಡಗಿಸಿತದನೇನೆಂಬೆ ||೧೭||

ಈವಿಧದಿಂ ಸಿಸುವಿನಗರ್ಭಮಾವನು | ದೇವನ ಪಟ್ಟದಸುದತಿ ||
ದೇವಕಿದೇವಿಗೆ ಬೆಳೆದೇಳುತಿಂಗಳು | ತೀವಿದುತ್ತಮಲಗ್ನದೊಳು ||೧೮||

ದುಷ್ಟಚತುಷ್ಟಯಕಷ್ಟಮಚಂದ್ರನ | ದೃಷ್ಟನಾಗಿಪಡೆವಂತೆ ||
ಅಷ್ಟಮಿಯರ್ಧರಾತ್ರಿಯೊಳರ್ಧಚಕ್ರಿಯ | ನಿಷ್ಟದಿನವಳುಪಡೆದಳು ||೧೯||

ನೀಃದಪುತ್ರಿಕೆಗಸುವೂರಿಸಿದಂತೆ | ಬಾಲಕ ಸೊಗಯಿಸುತಿರ್ಪ ||
ವೇಳೆಯೊಳೊಸಗೆಯದೇವದುಂದುಭಿಯಂತೆ | ಮೇಲೆ ಗುಡುಗುಮೊಳಗಿದುದು ||೨೦||

ಆ ವಸುದೇವಕುಮಾರನ ನಿಜವೈರಿ | ಭೂವರತತಿಯಪಕೀರ್ತಿ ||
ಆವರಿಸುವಮಾಳ್ಕೆಯೊಳುದಿಕ್ತಟವನು | ತೀವಿದುದಾಕಾಳಮೇಘ ||೨೧||

ಇಂತೊಡ್ಡಿಕಣ್ಣಾಹುಯ್ವರ ಕಾಣಲ್ಬಾರ | ದಂತಾದ ಮಳೆಯಮೋಡದೊಳು ||
ಅಂತರಮಿಲ್ಲದೆ ಸುರಿವಸೋನೆಯೊಳು ಭೂ | ಕಾಂತನಾಶಿಶುವನುನೋಡಿ ||೨೨||

ಹಿಂದೆಹುಟ್ಟಿದ ಮಕ್ಕಳನಾಪಾತಕಿ | ಕೊಂದನು ಮತ್ತಾತೆರದಿ ||
ಇಂದೀಶಿಶುವನುಕೊಲ್ಲದೆನಿಲ್ವನ | ಲ್ಲೆಂದು ಪಿರಿದುಮರುಕದೊಳು ||೨೩||

ಮತ್ತಾಮಗುವನುಕಂಡು ನಿಕ್ಷೇಪವ | ನೆತ್ತುವಂತಾವಸುದೇವ ||
ಎತ್ತಿಕೊಂಡಾಮನೆಯನು ಪೊರಮಟ್ಟು ಬ | ರುತ್ತಿರಲಾಕಾವಳದೊಳು ||೨೪||

ಧಾತ್ರೀಪಲಯುವೆನ್ನೀತಮ್ಮಗೇಕ | ಚ್ಛತ್ರವೆಂಬಂತೊಂದುಕೊಡೆಯ ||
ಮಿತ್ರತ್ವದಿಂಬಲರಾಮ ಪಿಡಿಯಲಾ | ರಾತ್ರಿಯೊಳಗೆ ನಡೆತಂದು ||೨೫||

ಆ ಪುರವರದಕಡೆಯ ಹೆಬ್ಬಾಗಿಲ | ಗೋಪುರಪರಿಯಂತರೈದಿ ||
ಆಪಡಿಹೊಚ್ಚಿರಲ್ಲಿಂಮುಂದಕೆ | ಪೋಪಹಾದಿಯುನು ಪಡೆಯದೆ ||೨೬||

ಪಿರಿದುಚಿಂತಿಸುತಿರಲಾ ಪುಣ್ಯಾಶಿಶುವಿನ | ಚರಣಾರುಣರುಚಿಸೋಂಕೆ ||
ತರಣಿಕಿರಣವ ಕಂಡಾಕಂಜಮಲರ್ವಂತೆ | ಬಿರಿದುವಾಪೊಳಲಕವಾಟ ||೨೭||

ಪಡಿದೆಗೆಯಲು ಪಸುಳೆಯಪುಣ್ಯಕೆ ಚೋದ್ಯ | ಪಡುತಲ್ಲಿಂಪೊರಮಟ್ಟು ||
ಇಡಿಕಿರಿದಾಗಿ ದಾರಿಯೊಳು ಮುಂದಕೆಹೋಹ | ಹಡೆಯದೆ ಚಿಂತಿಸುತಿರಲು ||೨೮||

ಮತ್ತಾಮಗುವಿನಸುಕೃತದೇವತೆಯೆರ | ಡುತ್ತುಂಗಮಪ್ಪಕೊಂಬಿನೊಳು ||
ಪೊತ್ತುಪಜ್ಜಳಿಪದೀಪವನುವೃಷಭರೂಪ | ವೆತ್ತುಮುಂದಕೆನಡೆತರಲು ||೨೯||

ಆ ವೃಷಭನಬೆಂಬಳಿಗೊಂಡುಬಂದುಮು | ತ್ತಾವಿಭುಗಳುಮುಂಗಡೆಯೊಳು ||
ತೀವಿಪರಿವಜಗುನೆಯುಕಂಡಿಂತಿದ | ನಾವಂದದಿದಾಂಟುವೆವು ||೩೦||

ತಳುವದೆಂದಿಂತುಚಿಂತಿಸುತಿರಲಾಗೂಳಿ | ನಳನಳಿಸುತಪರಿತಪ್ಪ ||
ಹೊಳೆಯುಹಾಯಲುಕಟ್ಟಿಯುಕಟ್ಟಿದಮಾಳ್ಕೆ | ಯೊಳಗದರೊಳುಕಾಣಿಸಿತು ||೩೧||

ಈವಿಧದಿಂ ದಾರಿದೋರಿದಪೊಳೆಯೊಳ | ಗಾವಸುದೇವನಾಬಲನು ||
ಆವೃಷಭನಬೆಂಬಿಡಿದಾಜೆಯುತಡಿ | ಗೋವದೆನಡೆತಂದರಾಗ ||೩೨||

ಆನದಿಯುನುದಾಂಟಿ ಕೆಲದೂರನಡೆತಂ | ದಾನೆಲೆಯೊಳಗಿಪ್ಪುದೊಂದು ||
ಮಾನಿತಮಪ್ಪಯಕ್ಷಿಯಗೃಹಪವಿಯುಂತ | ರಾನಂದದಿಂದೈದಿದರು ||೩೩||

ಆವೇಳೆಯೊಳಗದೃಶ್ಯತೆಯುನುಹಡೆ | ದಾವೃಷಭನುಪೋಗಲಾಗ ||
ಆವಸುದೇವನಾಸುತಗೂಡಿಯಾಯಕ್ಷಿ | ಯಾವಾಸಕೆಹೋಗಿರಲು ||೩೪||

ನಂದನೆಂಬವನುಕೈದೀವಿಗೆಸಹಿತಾ | ಮಂದಿರಕೆಯ್ತರುತಿರಲು ||
ಬಂದಪನಾಕಂಸನೆಂದಂಜಿದೇವಿಯ | ಹಿಂದೆಯಡಗಿಕೊಂಡಿರಲು ||೩೫||

ಅನಿತರೊಳೊಂದುಪೆಣ್ಗೂಸನುಕೊಂಡಾ | ಮನೆಯೊಕ್ಕಾಗೋವಳನು ||
ವಿನಯವಿದೂರನಾಯಕ್ಷಿಯುಮುಂದೆನಿಂ | ದಿನಿಸುಕೋಪಾಟೋಪದಿಂದ ||೩೬||

ಎಲೆದೇವಿಯೆನ್ನನಂಬಿಸಿಗಂಡುಮಗುವನು | ಒಲಿದುವರವನೀವೆನೆಂದು ||
ಹಲವುತೆರದಿಹಸನಾದಪೂಜೆಯನಾ | ಹಲವುಹಗಲುಕೈಕೊಂಡು ||೩೭||

ಹರಕೆಯುಹಣವೆಂದುಸಂಬಿಸಿಕೆಗೆದತಿ | ಕರುಣವೆಂಬುದಿನಿತಾಯ್ತು ||
ವರಸತಿಗೋಪಿದೇವಿಗೆ ಗಂಡುಮಕ್ಕಳ | ವರವಕೊಡದೆ ಹೆಣ್ಣುಮಗುವ ||೩೮||

ಸೀನೀಯುಬಹುದೆಸೀನಿತ್ತಪೀಡೆಯುನಿನ್ನು | ನೀನೇತೆಗೆದುಕೊಳ್ಳೆಂದು ||
ಆ ನಂದನಾಕಊಸನಿರಿಸಿಯಲ್ಲಿಂಕೋಪ | ಮಾನಸಪೂರಮಡಲಾಗ ||೩೯||

ಅನಿತರೊಳರಸುವನಿಧಿಯನೆಡಹಿಕಂಡೆ | ವೆನುತಸುತನನಲ್ಲಿರಿಸಿ ||
ಜನನುತವಸುದೇವನಾಪೆಣ್ಣುಸುಮನ | ದನುರಾಗದಿಂಕ್ಕೈಕೊಂಡು ||೪೦||

ಬಲದೇವನಕ್ಕೈಯುಕೊಟ್ಟಾದೇವಿಯು | ಸಿಲಯುದಬಾಗಿಲ್ಗೆಯ್ದಿ ||
ಎಲೆಗೋಪಸಿಸಗೊಂದುಗಂಡುಮಗುವನ್ನಾ | ನೊಲಿದೀವೆನು ತಿರುಗೆಸಲು ||೪೧||

ತಿರುಗಿ ನೀಲದಬೊಂಬೆಯುಂದದಿತೊಳಗುವ | ತರುಣನನೊಸೆದೆತ್ತಿಕೊಂಡು ||
ವರವನಿತ್ತಳು ದೇವಿಯೆಂದುವಿಸತನಾಗಿ | ಹರಿಸದಿಮನೆಗೆಯ್ತಂದು ||೪೨||

ಯಕ್ಷಿಯೆನ್ನಸುಕರೆದೀಗಂಡುಮಗುವ ಪ್ರ | ತ್ಯಕ್ಷದಿನಿತ್ತಳೆಮ್ಮಂತೆ ||
ಈಕ್ಷಿತಿಯೊಳುಪುಣ್ಯವಂತರುಂಟೇಕಮು | ಲಾಕ್ಷಿಕ್ಕೈಕೊಳ್ಳೊಲವಿಂದ ||೪೩||

ಎಂದಾನಂದದಿನಾಸಂದನಾಕಊಸ | ನಂದುಕೊಡಲುಕ್ಕೈಕೊಂಡು ||
ಇಂದುವದನೆಕಣ್ಗುರುಡಗೆಕಣ್ಗಳು | ಬಂದಂತೆಹರುಷವೆಯ್ದಿದಳು ||೪೪||

ಆಕೃಷ್ಣಯಕ್ಷಿಯುವರದತನುಜನೆಂ | ದಾಕುವರಗೆಕೃಷ್ಣವೆಸರ ||
ಗೋಕುಲದಧಿಪತಿಯಾನಂದನೊಲವಿಂ | ಸ್ವೀಕಾರವಮಾಡಿದನು ||೪೫||

ವಸುದೇವನಿತ್ತಲಾಬಾಲೆಯನೆತ್ತಿಕೊಂ | ಡೊಸೆದಾಮಧುರೆಗೆಬಂದು ||
ಅಸಿಯುಳುದೇವಕಿಯೊಡನಾಪ್ರಪಂಚವು | ನುಸುರಿಯಾಮಗವನುಕೊಡಲು ||೪೬||

ಏಳುತಿಂಗಳಗರ್ಭದೊಳಗಾದೇವಕಿ | ಬಾಲಕಿಯುನುಪೆತ್ತಳೆಂದು ||
ಕೇಳಿಮತ್ತಾಕಂಸತನ್ನೊಳಗಿಂತೆಂ | ದಾಳೋಚನೆಯುಮಾಡಿದನು ||೪೭||

ಆ ಪೆಣ್ಮಗುವಿನಗಂಡನದೆಸೆಯಿಂ | ದಾಪತ್ತುತನಗಪ್ಪುದೆಂದು ||
ಆ ಪಸುಳೆಯುಮೂಗನಾರರಿಯದವೊಲು | ಪಾಪಕರ್ಮಿಯೊತ್ತಿಸಿದನು ||೪೮||

ಈಪರಿಯಿಂದಮಯೋಗ್ಯಮಪ್ಪಂತೆ ಕು | ರೂಪಾಗಿಸಂತತಬೆಳೆದು ||
ಆ ಪೆಣ್ಣಾರೂಪಿಗೆತಾನೇಹೇಸಿ | ತಾಪಸರೂಪಸುತಾಳಿ ||೪೯||

ಭಾವಶುದ್ಧಿಯೊಳುವಿಂಧ್ಯವಹೊಕ್ಕುತಪಗೆಯ್ದು | ದೇವಲೋಕದೊಳುದ್ಭವಿಸಲು ||
ಆ ವನಚರರಾರೂಪವವಿಂಧ್ಯಾ | ದೇವತೆಯೆಂದುಪೂಜಿಸಪರು ||೫೦||

ಇತ್ತ ಕಂಸನ ಮನೆಯೊಳು ಸುರಿದುದುಳ | ನ್ನೆತ್ತರ ಹನಿಮತ್ತವನ ||
ಸತ್ತಿಗೆ ಮುರಿದುದವನ ಗದ್ದುಗೆಯುದಿ | ರಿತ್ತು ಬಿದ್ದುದು ಪಗಲುಳ್ಕು ||೫೧||

ವಸದೇವತೆಗಳತ್ತ ವೃಕಊರಸಿಗಳ | ಮೊಸೆಯೊಳು ಕಿಡಿಸೂಸಿದುವು ||
ಘಸತರನಪ್ಪುದು ಭುತವಹಡೆದು ಸಂ | ಜನಿಸಿತು ಭೂಕಂಪನವು ||೫೨||

ಕಂಸನಂತದ ಕಂಡು ಮುಗಿಲದನಿಯ ಕೇಳ್ದ | ಹಂಸನಂದದಿನಿದೇನೆಂದು ||
ಹಂಸಹಾರಿಯೋರ್ವ ಶಕುನಿಗನೊಳಗೆ ಪ್ರ | ಶಂಸೆಯನಿಂತು ಮಾಡಿದನು ||೫೩||

ಏನು ಕಾರಣವಿಾ ಉತ್ಪಾತವೆನಲೆಂದ | ನೀನೆಲದೊಳು ಭೂಪನಿಸಗೆ ||
ಭೂನುತವಿಕ್ರಮಶಾಲಿ ಪಗೆವನೋರ್ವ | ನಾಸದೆ ಬೆಳೆಯುತಲಹನೆ ||೫೪||

ಎಂದವಮಾತಿಗೆ ಶಂಕೆಗೊಂಬವೇಳೆಯೊಳಾ | ಹಿಂದಣ ಭವದೊಳು ತನ್ನ ||
ಬಂದು ಬೆಸನಬೇಡಿದ ದೇವತೆಗಳ್ಕೆ | ತಂದು ಕಂಸಾವನಿಪಾಲಾ ||೫೫||

ಮುನಿಪತಿನೀನಾಗಿರ್ದ ಜನ್ಮದೊಳಾವು | ನಿನಗೆ ಬೆಸನ ಮಾಡುವೆವು ||
ಎನಲು ಮುಂದಣ ಜನ್ಮ ಕೊದಗಿಯೆಂದೆಯಲಾ | ಅನಿತರಿಂ ನೀಗಲೆಯ್ದಿದೆವು ||೫೬||

ಆರಸುಗೊಳ್ವೆ ವಾರಸು ನಿಸಗೆರಗಿಪೆ | ವಾರಬೀರವನು ಬಾರಿಪೆವು ||
ಆರನೊಣವೆವಾರ ದಿಗುಬಲಿಗೊಡುವೆ | ವಾರನಾರಂತೆ ನೀಳುವೆವು ||೫೭||

ಬೆಸಸು ಬೆಸನು ಕಂಸಭೂಪತಿಯೆನಲೀ | ವಸುಧೆಯೊಳೆನಗೋರ್ವವೈರಿ ||
ಎಸಕದಿ ಬೆಳೆವುತಲಹನೆ ನೀವರದೆಯ್ದಿ | ಮಸಕದಿನವನ ಕೊಲುವುದು ||೫೮||

ಎನಲಾದೇವತೆಯರು ತಾಮೇಳ್ವರು | ಏನುತವಿಭಂಗಬೋಧದೊಳು ||
ವನರುಹನಾಭನು ಬೆಳೆವನೆಲೆಯನರಿ | ದೆನಿತ ಕೋಪದಿನಲ್ಲಿಗೆಯ್ದಿ ||೫೯||

ನಾವೆಲ್ಲರು ಕೂಡಿಕೊಲ್ವಡೆ ನರಕೀಟಕ | ವಿಾವೈರಿಯಂತದರಿಂದ ||
ನಾವೊಬ್ಬರೊಬ್ಬರೆ ಪೋಗಿಕೊಲ್ಲುವೆವೆಂ | ದೋವದೆ ಪೂತಿನಿಯೆಂಬ ||೬೦||

ದೇವತೆಯಾಗೋಪಿ ನೀರ್ಗೆಪೋದೆಡೆಯೊಳ | ಗಾವಾಸಕೆನಡೆತಂದು ||
ಆವನಜಾಕ್ಷಿಯ ಯಶೋದೆಯ ರೂಪನಂ | ದೋವದೆ ತೀವಿಕೋಪದೊಳು ||೬೧||

ತೊಟ್ಟನೆ ಬಂದು ಹಸಿದೆ ಮಗನೇಯೆಂದು | ತೊಟ್ಟಿಲೊಳಿರ್ದ ಮಗುವನು ||
ಕಟ್ಟೊಲುಮೆಯ ವೊಲುತೆಗೆದು ತನ್ನದೆಯ ಮೇ | ಲಿಟ್ಟುಕೊಂಡಳು ಮುದ್ದಾಡಿ ||
ಹಸಿದೆಯಲಾಯೆನ್ನ ಹಿಡಿಹೋರಿಕೊಳ್ಳೆಂದು | ವಿಷವನೂಡಿದ ತನ್ನ ಮೊಲೆಯ ||
ಮಸಕದಿ ಕೊಡೆ ಪುಣ್ಯಪ್ರಭಾವದಿನಾ | ಸಿಸುಬೇಗದೊಳು ಮೊಲೆಗರ್ಚಿ ||೬೨||

ವಿಷವನೆಲ್ಲವನುಂಡಾ ಮೊಲೆಯೊಳಗುಳ್ಳ | ಬಿಸಿಯರಕ್ತವನೆಲ್ಲವನು ||
ಹಸಿವುಹೋಗದೆಮತ್ತೆ ನೆರೆಹೀರುತಿರಲು | ಬ್ಬಸವಾಗಿ ತಳಹೊಳಗೊಂಡು ||೧೪||

ಉಸುರಿಗುಬ್ಬಸವಾಗಿಯಸುರರಿಗಿಡುತಾ | ಸಸುರನಾಗಿದೆಯೆಂದವಳು ||
ಅಸವಸದಿಂದವೊಲೆಯತೂನಲ್ಕಾ | ಸಿಸುಕಚ್ಚಿಬಿಡದಿರಲಾಗ ||೧೫||

ಮತ್ತಾಮಗುಪಿನಬಾಯೊಳು ಮೊಲೆದೊಟ್ಟು | ಕಿತ್ತುಹೋಹಂದದಿತುಯ್ದು ||
ಸೆತ್ತರುಸುರಿವುತಿದೆಲ್ಲಿಯುಮಿಳ್ತುವೆ | ಸುತ್ತರಕ್ಕಸಿಪೋದಳಿತ್ತ ||೧೬||

ಮತ್ತೆಯಶೋದೆ ನೀರಸುತಂದುಮನೆವೊಕ್ಕು | ನೆತ್ತರೊಕ್ಕಿರಲಲ್ಲಿಕಂಡು ||
ಒತ್ತಿಬೆದರಿಕೆಟ್ಟೆಮಗನೆಯಿನ್ನೇವೆನೆ | ಸುತ್ತತೊಟ್ಟಿಲಬಳಿಗೈದಿ ||೧೭||

ಆರಕ್ಕಸಿಯುಮೊಲೆದೊಟ್ಟು ಬಾಯೊಳುಸಿಕ್ಕಿ | ಯಾರಕುತದಧಾರೆಸುರಿವ ||
ಚಾರುಕಪೋಲಸಹಿತ ಬಾಲಕೃಷ್ಣನು | ಧಾರುಣಿಯೊಳುಬಿದ್ದಿರಲು ||೧೮||

ಎತ್ತಿಕೊಂಡಾವೊಲೆ ದೊಟ್ಟತೆಗೆದುಬಾಯ | ಹತ್ತಿದನೆತ್ತರ ತೊಳೆದು ||
ಮತ್ತೆತೂಪಿರಿದು ಮುಂಡಾಡಿವೊಲೆಯನೂಲಿ | ದಿತ್ತು ಮೊಗವನೋಡಿದಳು||೧೯||

ಹರಕೆದಗೆದು ಮತ್ತಾಕೃಷ್ಣಯಕ್ಷಿಗೆ | ಹರಿಸದಿಂಪಾ ಹಸುಳೆಯನು ||
ಕೊರಲದೇವರಹೊನ್ನ ಸೋವುವವೊಲುಕಡು | ಹರಿಸದಿಸಾಕುತಲಿರಲು ||೨೦||

ಹೊಂಬಣ್ಣದಂಬುಜದೊಳು ಝೇಂಕರಿಸುತ | ತುಂಬಿಪಸುಳೆಬೆಳೆವಂತೆ ||
ತುಂಬಿಗರೆವುತಕೃಷ್ಣನು ಹೊನ್ನತೊಟ್ಟಿಲೊ | ಳಿಂಬಾಗಿಬೆಳೆವುತಲಿರ್ದ ||೨೧||

ದುರುಳಚಾಣೂರಮುಷ್ಟಿಗರನೊದೆದುಗುದ್ದಿ | ಯುರಸುವ ಮಲ್ಲವಿದ್ಯೆಯನು ||
ಭರದಿಸಾಧಿಸುವಂತೆ ತೊಟ್ಟಿಲೊಳಾಹರಿ | ಕರಚರಣವನಾಡಿಸುವನು ||೨೨||

ಕಾಕಾಕಾರವಕೈಕೊಂಡು ಕೋಪದಿ | ಮಾಕಾಳಿಯೆಂಬೋರ್ವಳಸುರೆ ||
ಆಕುಲಿಶೋಪಮನಿಶಿತ ಚಂಚುವಿನಿಂ | ದಾ ಕೃಷ್ಣನಿರ್ದೆಡೆಗೈದಿ ||೨೩||

ದಿಟ್ಟಿಗಳನುಕುಟುಕುವಸಮಯದೊಳಾ | ದಿಟ್ಟನುಪೊರಕೈಯಿಂದ ||
ಮುಟ್ಟಿಬೀಸಲು ಬೀಳ್ದುದಿಂದ್ರಸುಹೊಡೆದಾ | ರಟ್ಟೆಯುಬೆಟ್ಟಬೀಳ್ವಂತೆ ||೨೪||

ಕಾಕಾಕಾಯೆಂದು ಕೊಕ್ಕನೆಲಕ್ಕೂರಿ | ಮಾಕಾಳಿಕೆಟ್ಟೆನಾನೆಂದು ||
ಕಾಕಾಕಾರವ ಬಿಟ್ಟದೃಶ್ಯತೆವೆತ್ತು | ಸಾಕಿದೆನುತಪೋಗಲಿತ್ತ ||೨೫||

ಬಂದುಯಶೋದೆಯಿದೆಲ್ಲಿಯ ಬಲುಮಿಳ್ತ | ವೆಂದು ಸಿಸುವನೆತ್ತಿಕೊಂಡು ||
ಇಂದಿಗೆರಡುಕಂಟಕಹಸುಳೆಗೆ ತಪ್ಪಿ | ತೆಂದತಿಸಂತಸದಿಂದ ||೨೬||

ಎನ್ನದೇವತೆ ಕೃಷ್ಣಯಕ್ಷಿಯಕರುಣವೆಂ | ಬುನ್ನತಪ್ರಹವಜ್ರಕವಚ ||
ಎನ್ನಶಿಶುವಿನಂಗಕುಂಟೆಂದು ಸಿಕ್ಷ್ಷಯು | ವಂಸೆರೆವಮಾಡಿಕೊಂಡಿರಲು ||೭೭||

ಉರುಳಿಟ್ಟಂಬೆಗಲಿಸಿ ದಟ್ಟಡಿಯಿಟ್ಟು | ಪರಿದಾಡುವಸಮಯದೊಳು ||
ಉರುತರಕೋಪದಿ ಕೌಶಂಬಿಯೆಂಬ ನಿ | ಷ್ಠುರಮುಪ್ಪರಕ್ಕಸಿಯೈದಿ ||೭೮||

ರಾಸಭರೂಪಧರಿಸಿ ಪರಿಪರಿದು ಕ | ಟ್ಟಾಸುರವಾಗಿಘೋಷಿಸುತ ||
ಓಸರಿಸದೆಕಚ್ಚಿಕೊಲುವೆನೆನುತ ಬರ | ಲಾಸಿಸುವಂತದಕಂಡು ||೭೯||

ಭರದಿಂಕಚ್ಚುವೆನೆಂದು ತೆರೆದತುಟಿ | ಎರಡನೆರಡುಕರದಿಂದ ||
ಎರಡುಹಸುಗೆಯುಪ್ಪಂದದಿ ಸರ್ರನೆ | ಉರುಕೋಪದಿಂದ ಸೀಳಿದುದು ||೮೦||

ಸೀಳಿಹಾಕಲೊಡನಾಜಲುರಾಸಭ | ಗೋಳಿಡುತಂದದೃಶ್ಯತೆಯು ||
ತಾಳಿಪೋಗಲು ಕಂಡಚ್ಚರಿಯುಸು ಗೋ | ಪಾಲರೆಲ್ಲರುಮಾಡಿದರು ||೮೧||

ಇಂತುರಾಸಭರಾಕ್ಷಸಿಯನುಮರ್ದಿಸಿ | ಸಂತತಮಾಕೇಶವನು ||
ತಿಂತಿಣಿಗೊಂಡಗೋಪರಮಕ್ಕಳೊಡನೆ ನಿ | ಶ್ಚಿಂತದಿಂದಾಡುತಮಿರಲು ||೮೨||

ಪೊಂಗವಡಿಕೆಸಿಂಗದುಗುರುಡೆವಣಿಗಜ್ಜೆ | ಮಾಂಗಾಯಿ ಬಂದಿಬೆಂಡೋಲೆ ||
ಸಿಂಗಾರವಾಗಿ ಮತ್ತಾಬಾಲಕೇಶವ | ಸಂಗಣಮೊಳಗಾಡುತಿರಲು ||೮೩||

ಬೇರುಮೇಲಾಗಿ ಬಲ್ಮರಗಳನೆಗ್ಗೊತ್ತಿ | ಕೇರಿಕೇರಿಯುಮನೆಗಳನು ||
ಮಾರಿಹೊಕ್ಕಂದದಿ ಮುರಿದೆಲ್ಲೆಡೆಯೊಳು | ಚಾರಿವರುವೃತ್ತಿತಂದು ||೮೪||

ಪೃಥುಕಿಯೆಂಬಾರಕ್ಕಸಿಯಾಸುರಮಪ್ಪ | ರಥರೂಪವಕೈಕೊಂಡು ||
ಮಥಿಸುವೆವೈರಿಯನೆಂದು ಮುಸಿದುಮುರ | ಮಥನನಲ್ಲಿಗೆ ಸಣೆತರಲು ||೮೫||

ಇಟ್ಟೆಡೆಯೊಳು ಸಿಲುಕಿದಬಾಲಕೃಷ್ಣನು | ಕೆಟ್ಟೆವು ಕೆಟ್ಟೆವೆಂದೆನುತ ||
ಕಟ್ಟಮ್ಮುಳದಿಗೋಳಿಡುತಾಗಲಾತುರು | ಪಟ್ಟೆಯುಗೋಪಿಯಿರಲು ||೮೬||

ಕಟ್ಟುಗ್ಗರದೊಳಿಂತು ಮೇಲ್ವಾಯ್ವಶಕಟಪ | ಹಿಟ್ಟಿನಬಂಡಿಯುಸೂಡೆದು ||
ನೆಟ್ಟನೆಮುರಿವಂತೆಪದತಳದಿಂದಾ | ದಿಟ್ಟಸೂವೆದುಸೂಕಲಾಗ ||೮೭||

ಅಚ್ಚುಮುರಿದುಮೂಕುಗುಡುಗಿರಿದಾಗುಂಬ | ನುಚ್ಚುನೂರಾಗಲಾಶಕಟ ||
ಬೆಚ್ಚಿದಂದದಿ ಮಾಯವಾಗಿಪೋಗಲು ಕಂ | ಡಚ್ಚರಿಯುಸುತಾಳ್ದರೆಲ್ಲ ||೮೮||

ಕಕ್ಕಸದಿಂಬಂದಾಶಕಟನನೆಲ | ಕಿಕ್ಕಿಬಳಿಕನುಡಿಗಲಿತು ||
ಮಕ್ಕಳಮಾಣಿಕಮಾತನ್ನಪಾಟಿಯ | ಮಕ್ಕಳೆಲ್ಲರ ಕೂಡಿಕೊಂಡು ||೮೯||

ಕರೆವಗೋಪಿಯರಲ್ಲಿಗೆ ಪೋಗಿಯಂಡೆಯ | ಹರಿದುಕೊಂಡಾಹಾಲಸುರಿದು ||
ಎರೆದಿ ತನ್ನೊಡನಾಡುವ ಮಕ್ಕಳಿ | ಗೆರೆದು ಮುಂದಕೆ ಪೋಗುತಿಹನು ||೯೦||
ಒಡನಾಡುವಮಕ್ಕಳಹೆಗಲನುಮೆಟ್ಟಿ | ಹಿಡಿದುನೆಲುಹಿನೊಳಗಿರ್ಪ ||
ಮಡಕೆಯುಬೆಣ್ಣೆಯ ಮೆದ್ದಾ ಸತಿಯರು | ಹಿಡಿಹಿಡಿಯೆನಲೋಡುತಿಹನು ||೯೧||
ಕಡೆಗೋಲಿಂದ ಬಡಿಯುಬಡಕಳುಕದೆ | ಹಿಡಿದುಗೋಪಿಯರನುನೂಂಕಿ ||
ಕೊಡದೊಳಗಣಮೊಸರನು ಮಕ್ಕಳಿಗೆ ಸೂರೆ | ಗೊಡುತಿರಲವರಿರದೆಯ್ದಿ ||೯೨||
ಎಲೆಗೋಪಿ ನಿನ್ನ ಮಗನಪೆಸೆಯಿಂದೆಮ್ಮ | ಕಲತಿಯ ಮೊಸರುಬದುಕದು ||
ನೆಲಹಿನಬೆಣ್ಣೆಯುಳಿಯದಾಕಾವಕಂ | ದಲಹಾಲುಹಾಳಾಗಿಹೋಯ್ತು ||೯೩||
ತನ್ನೊಡಲನು ತುಂಬಿಸಿಕೊಂಬುದಲ್ಲದೆ | ತನ್ನೊಡವಂದಮಕ್ಕಳಿಗೆ ||
ಚೆನ್ನಾಗಿ ಫುಲ್ಲಿಮೆನುತ ಸೂರೆಗುಡುವುದ | ನಿನ್ನ ಸೈರಿಸುವವರಲ್ಲ ||೯೪||
ಪೇಡಯುತೋದೆ ಮೊಲೆಯುಕೊಡು ನಿನ್ನೀ | ಕೇಡಾಳಿಕೇಶವಗೆನಲು ||
ಕೂಡೆಪರಿದುಬಂದು ಹಸುಳೆಯನೆತ್ತಿ ಮು | ದ್ದಾಡಿಸಿ ಮೊಲೆಗೊಟ್ಟಳಾಗ ||೯೫||
ಮತ್ತೆಮನೆಗೆ ಕೊಂಡುಪೋಗಿ ಬೆಣ್ಣೆಯುಮುದ್ದೆ | ಯಿತ್ತುಕೆನೆಯುಮೆಲ್ಲಗೊಟ್ಟು ||
ಅತ್ತಿತ್ತಯೋದಡೆ ಯೊರವ್ಯೆವಗಳುಕ | ರುತ್ತುಮುಸುಕುವುವುನಿನ್ನ ||೯೬||
ಅನಿತರಿಂದೀಮನೆಯೊಳಗಿರು ಎಂಬಾ | ಜನನಿಯಮಾತನುಮೀರಿ ||
ವನಕರಕಳಭನಂದದಿ ಪೊರಮಡೆ ಬೆ | ನ್ನನೆ ಬಂದುಪಿಡಿದೆಳದೊಯ್ದು ||೯೭||
ಕಲ್ಲೊರಳೊಳು ಹಗ್ಗವಿಟ್ಟು ಕಾಲನುಕಟ್ಟ | ಲುಲ್ಲಾಸದಿಂದದಕಿಳ್ತು ||
ಎಲ್ಲರೆಚ್ಚರಿವಡುವಂತೆಳೆದಸುರರ | ಮಲ್ಲಸಂಗಣಕೆ ಒಪರ್ಗ ||೯೮||
ಆರ್ಜುನಿಯೆಂಬ ದೇವತೆಯಾಸುಕುಮಾ | ರಾರ್ಜುನನನುಕೋಪದಿಂದ ||
ನಿರ್ಜೀವಮಾಡುವೆನೆಂದೊಂದೆಡೆಯೊಳ | ಗರ್ಜುನತರುಯುಗವಾಗಿ ||೯೯||
ಕವಡಿಯನೆಟ್ಟಂದದಿಬೆಳೆದಾಕೇ | ಶವನಲ್ಲಿನಡೆವವೇಳೆಯೊಳು ||
ಬವನದಾಡೆಗಳಂತಿರುಂಕಿಬೇಗದಿಕೊ | ಲ್ಲುವೆನೆಂಬಾಸಮಯದೊಳು ||೧೦೦||
ಎರಡುತೋಳಿಂದಹಿಗ್ಗಿಸಿಯುತಿಭರದೊಳು | ಕರದಿಂಕಿತ್ತೀಡಾಡೆ ||
ಧರೆಯುರಿವಂತೆಗೋಳಿಡುತಾಮತ್ತಿಯು | ಮರವಾಯುಮಾಯ್ತುಬೇಗದೊಳು ||
ಈಪರಿಯಾದಕ್ಕಸಿಯುಬಿಟ್ಟೋಡಿಸಿ | ಗೋಪಾಲಸುತರೊಡಗೂಡಿ ||
ಆವೊಳ್ತುಬಾಲಕ್ರೀಡೆಯೊಳೊಲವಿಂ | ದಾಪದ್ಮನಾಭನೊಪ್ಪಿದನು ||೧೦೨||

ಹಾಲುಂಡಸೊಕ್ಕಿನೊಳಗೆ ಹರಿದಾಡುವ | ಬಾಲಕರೇಣಾವಂದದೊಳು ||
ಲೀಲೆಯಿಂದಾತುರುಪಟ್ಟಿಯಂಗಣದೊಳು | ಬಾಲಕೇಶವಬಂದುನಿಲಲು ||೧೦೩||

ತಾಳಜಂಘೆಯೆಂಬದೇವತೆಬಂದೊಂದು | ತಾಳತರುವಿನಂದವನು ||
ತಾಳಿಯಾಕಸ್ಮಿಕದಿಂಬೇಳಿದವನನು | ಕಾಲನಾಲಯಕೆಯ್ದಿಸುವೆನು ||೧೦೪||

ಎಂದುಮುಂಬರಿಗಾಳಿಗಪೇಳುವಪಣ್ಣ | ಗಾದದಿಹಿಡಿಗುಂಡುಗಳ ||
ಅಂದವಡೆದುಕರೆಯಲುಕಂಡಾಗೋ | ವಿಂದನುಕಡುಮುನಿಸಿಂದ ||೧೦೫||

ಎಡಗಾಲೊಳಗೊದೆಯಲುತಾಳವೇಲಾಗಿ | ಕೆಡೆದುಮುಂದರಿಯದೆಬಂದು ||
ಕೆಡಿಕನಕೆಣಕಿದೆನೆಂದುಹಿಂದುಗೋ | ಳಿಡುತದೃಶ್ಯತೆವೆತ್ತುದಿತ್ತ ||೧೦೬||

ಕೇರಿಕೇರಿಗೆಹೋಗಿಕೆಣಕಿಮಕ್ಕಳಮಂಡೆ | ಜೋರೆಹೋಹಂದದಬಹೆಟ್ಟಿ ||
ಹೋರಿಬಳಿಕಗುದ್ದಿಯಾಡುವುದಾಬಾಲ | ನಾರಾಯಣಗದುಲೀಲೆ ||೧೦೭||

ಮರೆಯೊಳುಬಂದು ಮಕ್ಕಳಗದ್ದುಗವಹಾಲು | ಪರೆಯೆಂದುಬಾಚಿಹಿಡಿಯಲು ||
ಹೆರಸೂರಿಬಳಿಕಕ್ಕಲಿಂದಸುಲಿವನಾವ | ದುರುದುಂಬಿಯಾಬಾಲವಿಷ್ಣು ||೧೦೮||

ಕಕ್ಕಸದಿಂದಕಡಿವಬೆವೃಟುವನುಗು | ರಿಕ್ಕುವಪಿಸಿವಪೆಟ್ಟುವನು ||
ಚಿಕ್ಕವರುಗಳನೆಲ್ಲರನೇನುವಿಕರಿಯೊ | ಮಕ್ಕಳಾಟದೊಳುಹಾಘವನು ||೧೦೯||

ಬಾಸುಳೇಳ್ವಂತೆಬಡಿವತಡೆಗಾಲ್ವೊಯ್ದು | ಒಸರಿಸದೆಕೆಡಹುವನು ||
ಗಾಸಿಮಾಡುವನುಮಕ್ಕಳನೇನುಕೆಡಿಕನೊ | ಕೂಸಾಟದೊಳುಕೇಶವನು ||೧೧೦||

ಈಪರಿಯಿಂಪರಿಮರೆಯಾಡುತಾಬಾಲ | ಗೋಪಾಲನಿರಲೊಂದುದಿವಸ ||
ಕೋಪದಿಕೇಸರಿಯೆಂಬದೇವತೆಮು | ತ್ತಾಪಳ್ಳಿಗಿರದೆಯ್ತಂದು ||೧೧೧||

ತುರಗರೂಪವನಾಂತು ತುರುಪಟ್ಟಿಯೊಳಗರೆ | ಬರನೊದೆದರೆಬರಕಚ್ಚಿ ||
ಅರೆಬರಖುರಪುಟದಿಂಕೊಲುತಾ ಚಾರಿ | ವರಿದಾಡಿಪೋಗುತಿರಲಾಗ ||೧೧೨||

ಬೆಚ್ಚಿಗೋವಳರೆಲ್ಲ ಮನೆಯಕದಂಗಳ | ಹೊಚ್ಚಿಕೊಳಲುನಡೆತಂದು ||
ನಿಚ್ಚಟಗಲಿ ನೀಲವರ್ಣನೆಡೆಗೆಬಂದು | ಕಚ್ಚುವೆನೆಂದುಕೋಪದೊಳು ||೧೧೩||

ಒತ್ತಿಬಿಟ್ಟಬಾಯುಸುಕಂಡುಭರದಿ ಕ | ರುತ್ತುತಿವಿದಕರಶಾಖೆ ||
ನೆತ್ತಿಯೊಳಗೆ ಮೂಡಲಾಕುದುರೆಗೆ ಕಿವಿ | ಮತ್ತೊಂದುಮೂಡಿದಂತಾಯ್ತು ||

ಅಂತಾದಮೊಗವಹಿಡಿದು ಕಡುಪಿಂಕೋ | ಪಾಂತಕನದಿರದೆ ಸೀಳಿ ||
ಸಿಂತುಮುಂತಾಗುವಂದದಿ ಹಾಕಲಾಜೀವ | ತಾಂತಮೊಳಾತುರಂಗಮದ||೧೧೫||

ಕಡುನಿಡಿದಪ್ಪಾಬಾಲವಕಿತ್ತು ತ | ನ್ನೊಡನಾಡುವಗೋವಳರು ||
ಬಿಡದೂದುವಕೊಳಲಿಗೆ ಕಟ್ಟಿಕೊಡೆ ಕಡು | ಸಡಗರವೆಯ್ದಿದರೆಲ್ಲ ||೧೧೬||

ಒಡನಾಡುವ ಗೋಪಸಂದನರಸುಕೂಡಿ | ಹಿಡಿಗವಡಿಕೆಹಿಳ್ಳುಲಗ್ಗೆ ||
ಸಡುಗುಡುಮೊದಲಾದ ಮಕ್ಕಳಾಟವಕಡು | ಸಡಗರದಿಂದಾಡುತಿಹಸು ||೧೧೭||

ಮಕ್ಕಳನೆಲ್ಲರನೊಡಗೊಂಡು ಮನೆಮನೆ | ಹೊಕ್ಕು ಹಾಲುಬೆಣ್ಣೆಮೊಸರ ||
ಒಕ್ಕಲಿಕ್ಕಿ ಸೂರೆಯಾಡುವುದನುಕಂ | ಡಕ್ಕರಿಂದಾಗೋಪಿಯರು ||೧೧೮||

ಮೊರೆಯಿಡೆಕೇಳಿಯಶೋದೆಕೃಷ್ಣನಕರೆ | ದೆರಕದಿ ಬಿಗಿಬಿಗಿಯಪ್ಪಿ ||
ತುರುವಕಾವುದನು ಕಲಿಯಬೇಕು ಮಗನೆನೀ | ಪೊರವಡುಸಡಗರದಿಂದ ||೧೧೯||

ಎಂದು ಕಲಸಗೂಳಕಟ್ಟಿಕೊಟ್ಟಾಗೋಪಿ | ಯೊಂದೋರಗೆಯಮಕ್ಕಳನು ||
ಒಂದಾಗಿಕೂಡಿಕೊಟ್ಟಾತುರುಗಳಕಾಯು | ಲೆಂದು ಕೃಷ್ಣನಕಳುಹಿದಳು ||೧೨೦||

ಕಳುಹಲುಬಂದು ತುರುವನೊಂದು ಬೆಟ್ಟವ | ಕೆಳಗಣಕಾಡೊಳಹೊಕ್ಕು ||
ಬಲಯುತನಾಬಾಲಗೋಪಾಲನಾಗೋ | ವಳರುಸಹಿತಮೇಯಿಸುವನು ||೧೨೧||

ಹುಸಿದಿಂದಾಬಾಲಹರಿಕೊಳಲೂದುವ | ಸರಗೇಳಿ ವೈರವತೊರೆದು ||
ಕರಿಹರಿಹುಸಿಹುಲಿಫಣಿಪಮೃಗಗಳುಕೂಡಿ | ಯುರುವಂದದಿಂಕೇಳುತಿಹವು ||೧೨೨||

ಕಾಡೆಮ್ಮೆಗಳನುಹಿಡಿದು ಗೋಣ್ಮುರಿಗೊಂ | ಡಾಡುವನುಕ್ಕಳಬಾಯ್ಗೆ ||
ಆಡಕರೆವತೆರದಿಂದ ಕರೆವುತಳ್ತಿ | ಮಾಡುವನಾಕೇಶವನು ||೧೨೩||

ಬೇಕೆಂದುಗುಹೆಗಳ ಹೊಕ್ಕು ಹೆಬ್ಬುಲಿಗಳ | ನೆಕ್ಕಲುಗಳುತಪ್ಪವೆಂದು ||
ಸೊಕ್ಕಾನೆಗಳನು ಹಿಡಿವನೇನುಸತ್ತ್ವನೊ | ಚಿಕ್ಕಂದಿನೊಳುಕೇಶವನು ||೧೨೪||

ಈಪರಿಯಿಂತುರುಗಳಮೇಯಿಸುತಿರ | ಲಾಪದದೊಳಗಾಯೆಡಗೆ ||
ಆ ಪೂತಿನಿಮೊದಲಾದರಕ್ಕಸಿಯರು | ಕೋಪಮೊದವಿಸಡೆತಂದು ||೧೨೫||

ಹರೆಯುದಮುಗಿಲಡಗದಮಿಂಚಳಿಯಂದ | ಸರಥಸುಘಟಿಘಟಿಲೆಂಬ ||
ಸರವಡಗದಸಿಡಿಲೇಳತಗ್ಗದಸುಂ | ಟುರೆಗಳನೊಡ್ಡಿದರಾಗ ||೧೨೬||

ಸುಪಸರಿಪರಿವೊಡಾಧಾರವಕಾಣದೆ | ಮರುತವರ್ಮಾರ್ಗದಿನೀಧರೆಗೆ ||
ಸುರಿದವುದೊಯೆನಲೆಡೆಬಿಡಪಿಲ್ಲದೆ | ಸುರಿದುದಂದಿನಬಹುವೃಷ್ಟಿ ||೧೨೭||

ಪೊಡೆವಸಿಡಿಲನದಿರದೆಪೊಡೆಸೆಂಡನು | ಪೊಡೆವಂತಾವನವಮಾಲಿ ||
ಪಿಡಿದಗೋವಳಗೋಲಿಂನುಗ್ಗುನುರಿಮಾಡಿ | ಪಡೆದನದೇನುಬಲ್ಲಿದನೊ ||೧೨೮||

ಸುರಿವಾಲಿವರಲ್ಲೆಲ್ಲವುಬಲುವಜ್ರದ | ಹರಲಂತಿರಾಗೆಗೋವಳರು ||
ಪಿರಿದಾಗಿಬೆದರಿಮತಾ್ತಗೋವರ್ಧನ | ಗಿರಿವರಕಾಗಿಯೋಡಿದರು ||೧೨೯||

ಅದುತಾನೊಂದೇಶಿಲೆಯುವೃಪರಿಂ | ದದರೊಳುಗವಿಕೊಡೆಗಲ್ಲು ||
ಹುದುಗಿಜಿಳಿದಮರನಿಲ್ಲವಾದುದರಿಂ | ದದುರಿಸಂಕಟಗೊಳುತಿರಲು ||೧೩೦||

ಆಸಮಯದೊಳಚ್ಯುತನಾಬಳಿಗೆಯ್ದಿ | ಯೋಸರಿಸದೆಯಾಗಿರಿಯ ||
ಕೇಸಡಿಯಿಂಬಿಡದೊತ್ತಿಯೊದೆದುವಸು | ಧಾಸಂಧಿಯುಪತ್ತುವಿಡಿಸಿ ||೧೩೧||

ಕರವುನದರಕೆಲದೊಳಗಿಕ್ಕಿಹಿಗ್ಗಿಸಿ | ಭರದಿಂತಾನೊಳಪೊಕ್ಕು ||
ಉತ್ತಬಾಹುದಂಡದಿಂದಾಗೋವರ್ಧನ | ಗಿರಿಯನುಮೇಲಕೆತ್ತಿದನು ||೧೩೨||

ಹರಿಸದಿಂದಾ ಂಗ್ರಾಣಿಯುನೆತ್ತುವ | ಪರಿಯೆನೆಪದ್ಮೋದರನು ||
ಉರುತರವುವೃರ್ಪಧರವನುವಾಮ | ಕರದಿಂಬಿಡದೆತ್ತಿದನು ||೧೩೩||

ಲೀಲಾಪಾತ್ರದಿಗಿರಿಯನೆತ್ತಿದಗೋ | ಪಾಲಸಹಸ್ರಮೊಪ್ಪಿದುದು ||
ಭೂಲಲನೆಗೆಪಿಡಿದಾಸತ್ತಿಗೆಯುಹರಿ | ನೀಲದಕಾವಿದೆಂಬಂತೆ ||೧೩೪||

ಹರಿಯೆ ಡಗೈಯೊಂಬಪಂಚಫಣೋರಗ | ನಿರದಾಭೂಧರವೆಂಬ ||
ಧರೆಯುಹೊರಲುಕಂಡು ಬೇಸರಿಸುವೆವೆಂದು | ಭರದಿಂದಾದೇವತೆಯುರು ||೧೩೫||

ಇರದೇಳುದಿನಕಲ್ಲಮಳೆಯಬಲುಗ್ಗಿಂಡಿನ | ಸರಿಯುಪಾಸರೆಯುತಂದಲಸು ||
ಪಿರಿಯುಸರಿಯುನೋಸೆಯುನುಸುರಿದರುಪಗ | ಲಿರುಳೆನ್ನದತಿಕೋಪದಿಂದ ||೧೩೬||

ಮತ್ತದಕಿನಿಸುಬೇಸರದಿಳುಹದೆ ಪುರು | ಷೋತ್ತಮನಾಪರ್ವತವನು ||
ಎತ್ತಿರೆಕಂಡಸುರೆಯರು ತಾವೇಬೇ | ಸತ್ತಿವ ನಮಗೆಬಲ್ಲಿದನು ||೧೩೭||

ನಾವಿವನನುಕೊಲ್ವೆವೆಂಬುದಜ್ಞತೆಯೆಂದು | ದೇವತೆಗಳುಬಿಟ್ಟುಪೋಗೆ ||
ದೇವದುಂದುಭಿವೊಳಗಿದುದಾಗಸದಿಂದ | ಪೂವಿನಮಳೆಸೂಸಿದುದು ||೧೩೮||

ಆವಸುಧಾಧರದಡಿಯೊಳುನಿಂದಿರ್ದ | ಗೋವಿನಗೊಂದಣಗಳನು ||
ಗೋವಳರುಗಳನುಪೊರಮಡಿಸಿದನಾ | ಭೂವಲಯುಕೆಲೀಲೆಯಿಂದ ||೧೩೯||

ವಿಸ್ಮಸ್ಮರಿಪುನಿಕುರುಂಬಸಜ್ಜನಸುಖ | ದಾಶ್ರಯುನಾಕೇಶವನು ||
ವಿಶ್ರುತಮಪ್ಪಭೂಧರಮನಿಳಾತಳ | ಕಶ್ರಮದಿಂದಿಳುಹಿದನು ||೧೪೦||

ಆ ನಾಡುಬೀಡೆಲ್ಲವು ಬಂದು ಲೋಕಕ್ಕೆ | ನೀನೇನೆರೆದೈವವೆಂದು ||
ನಾನಾಪರಿಪೂವೆಸಿಕೊಂಡಾಡಿದು | ದಾನಂದದಿಂದಾಹರಿಯ ||೧೪೧||

ಅತಿಬಲಯುತನಿವನಾರಾರದೆಸೆಯಿಂ | ಚ್ಯುತಮಪ್ಪುದಿಲ್ಲೆಂದೊಸೆದು ||
ಕ್ಷಿತಿತಳಮೆಲ್ಲಕೊಂಡಾಡಿಯುವಗೆಯು | ಚ್ಯುತನಾಮವನಿಟ್ಟರೊಸೆದು ||೧೪೨||

ಆಹವಲಂಪಟನತಿಶಕ್ತಿಸಂಯುತ | ಬಾಹುಭುವನಭುಂಭುಕನು ||
ಶ್ರೀಹರಿಕಣ್ಗೆಸೆದನುಸತ್ಕವಿಚಿತ್ರ | ಗೇಹಮಾಣಿಕ್ಯದೀಪಕನು ||೧೪೩||

ಇದು ಜಿನಪದಸರಸಿಜ ಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗಿದುಪದಿನ್ನೈದಾಶ್ವಾಸ ||೧೪೪||

## ಹದಿನ್ನೈದನೆಯ ಸಂಧಿ ಸಂಪೂರ್ಣಂ



# ೧೬. ಕಂಸವಧಸಂಧಿ



ಅಂಗಜವಿಜಯಮುಕ್ತ್ಯಂಗನೆಯಧಿಪಪ್ರಭು | ಜಂಗೇಶವಂದಿತಚರಣ ||
ಮಂಗಳಮೂರ್ತಿನೇಮೀಶನಪದಯುಗ | ಲಂಗಳಿಗೊಲಿದೆರಗುವೆನು ||೧||

ನಂದನ ನಂದನಸತಿಬಲನೆಂಬುದ | ನಂದುದೇವಕಿದೇವಿಕೇಳಿ ||
ನಂದನದೊಳುನೋಗೆಮುಗಿಲಡನಿಗೆಯಾ | ನಂದಿಪಂದದಿನಲವೇರಿ ||೨||

ಸುತವದನಾಳೋಕನೋತ್ಸುಕತೆಯಿನಾ | ಪತಿಯೊಳುಬಲರಾಮನೊಳು ||
ಅತಿಗುಪ್ತದಿಂದರುಪಿದೊಡಾಕಾರ್ಯಕೆ | ಹಿತವಾಗಿನಿಜಸೇನೆಸಹಿತ ||೩||

ಗೋಮುಖಿಯೆಂಬ ನೋಂಪಿಯನಾದೇವಕಿ | ಪ್ರೇಮದಿಮಾಡಬೇಕೆಂದು ||
ಆಮಹೀಪಾಲಕರಾತುರುಪಟ್ಟಿಗೆ | ನಾನುವಿಲ್ಲದೆಪೋದರಾಗ ||೪||

ನಂದಗೋಪನನುಕರೆಸಿ ನಿನ್ನ ಸುದತಿಯು | ರೊಂದಾಗಿ ನಾಳೆಯುದಯಕೆ ||
ಬಂದುಪೂಜೆಯಮಾಡಿಸಬೇಕೆನೆ ಮನ | ದಂದು ಮನೆಗೆಬರಲತ್ತ ||೫||

ಉತ್ತಮವಿಜಯಾರ್ಧಗಿರಿಯೊಳು ಶಾಲ್ಮಲಿ | ದತ್ತೆಯುಪಿತನದಾಯಾದ ||
ಮತ್ತಾವಸುದೇವಸುತನದೆಸೆಯಿನಾ | ಪತ್ತುಂಟುತನಗೆಂಬುದನು ||೬||

ಮೊದಲುಬಲ್ಲವನಾಗಿಶಕುನಿಗರಿಂದಾ | ಅಘಟನಿರ್ದಿತಾಣವನು ||
ಪದೆದುತಿಳಿದು ತನ್ನರಿಷ್ಟನೆಂಬೋರ್ವನ | ಗ್ಗದಕಲಿಬಿಡರನಕರೆದು ||೭||

ಅರಿಕೆವಡೆದ ಮಧುರೆಯೊಳುರಂಜಿಸುವಾ | ತುರುಪಟ್ಟಿಯನಂದಸುತನ ||
ತರಿದಿಕ್ಕಿಬರ್ಹೇಳಿಕಳುಹಿದೊಡವನಾ | ಎರವೆಸದಿಂದೆಯ್ತಂದು ||೮||

ಕಟ್ಟುಗ್ರಮಪ್ಪವೃಷಭನಾಕಾರವ | ತೊಟ್ಟುಗೋಪಾಲರೆಲ್ಲರಸು ||
ಅಟ್ಟಿಕೊಲುತಬರ್ಪ ಕೋಲಾಹಲವನು | ದಿಟ್ಟನಾರಾಯಣನರಿದು ||೯||

ಇದಿರ್ವಂ ಕಡೆಗಾಲದರುದ್ರನೇರುವ | ಗ್ಗದಗೂಳಿಯೆಂಬಂದದೊಳು ||
ಬದಗಿಬಪ ಷಭನಕಂಡುನಡೆದು ಬಂ | ದದರಕೊಂಬೆರಡನುಪಿಡಿದು ||೧೦||

ನೆಲಕೆನೆಗೆ ಲುಗೋಳಿಟ್ಟಾಗೂಳಿ | ಕಲಿಯುಕೈಯಿಂಹತವಾಗೆ ||
ನಲಿಯೆ ರೆಲ್ಲರಾಸಮಯದೊಳಾ | ನೆಲೆಯಿಂದದುವಾಯುಮಾಯ್ತು ||೧೧||

ಈಪರಿಯಿಂದ ವೃಷಭರಾಕ್ಷಸನಸಂ | ದಾಪದ್ಮನಾಭನುಕೊಲಲು ||
ಗೋಪವಲ್ಲಭನತಿಮುದದಿಂದಿರೆ ಮ | ತ್ತಾಪಗಲಿಸ ಮರುದಿವಸ ||೧೨||

ದೇವತೆಯಾವಾಸದೊಳಿರ್ದದೇವಕಿ | ಯಾವಸುದೇವನಿರ್ದೆಡೆಗೆ ||
ಆವಿಷ್ಣುವಾಗೋಪಿಯಾಗೋಪರೊಡಗೂಡಿ | ತೀವಿದವಿಭವದಿಂದೆಯ್ದಿ ||೧೩||

ಬಳಿಕಾಕೃಷ್ಣಯಕ್ಷಿಯನೋಂಪಿಯನು ಕ | ಣ್ಗೊಳಿಪಂತೆ ದೇವಕಿದೇವಿ ||
ತಳುವದೆಮಾಡಿಯತ್ಯಂತಸಂತೋಷವ | ತಳೆದಾನಂದಗೋಪನನು ||೧೪||

ಕರೆದುಡುಗೊಟ್ಟು ಮತ್ತಾಗೋಪಿಗೆ ಪಲ | ಪರಲವಿಭೂಷಣವಿತ್ತು ||
ಮುರವೈರಿಯುವರಕೇಲದೊಳಿರಲಿವನಾರ | ವರಸುತನೆಂದುಕೇಳಿದನು ||೧೫||

ಕೇಳಲವರುತಮ್ಮತನಜಾತನಿವನೆಂದು | ಪೇಳಲು ಕರೆದುಸನ್ನಿಧಿಗೆ ||
ಲೀಲೆಯಿಂದಾಮಾತಾಪಿತೃವಗ್ರಜ | ರಾಲೋಕನವಮಾಡಿದರು ||೧೬||

ಬೆನ್ನತಡವಿನಿಮ್ಮಮಗನು ಬಲ್ಲಿದನೆಂ | ದುನ್ನತಮಪ್ಪನೇಹದೊಳು ||
ರನ್ನದೊಡವು ಬಹುಚಿತ್ರಾಂಬರದಿಂ | ಚೆನ್ನಾಗಿಮಾಡಿಸಿಂಗರವ ||೧೭||

ಬಳಿಕಸುರಾಗದಿ ತೊಡೆಯಮೇಲಿಟ್ಟುಕೊಂ | ಡೆಳೆವರೆಯದಕೇಶವನ ||
ಲಲನಾಮಣಿಯಮರ್ದಪ್ಪಿಯಾನಂದಾಶ್ರು | ಗಳೊಳಾಸ್ನಪನತೊಳೆದಳು ||೧೮||

ಅನಿತರೊಳಾನಂದನಾನಂದಗೋಪಿಯ | ರಸುರಾಗದಿಂವಸುದೇವ ||
ವನಜಲೋಚನೆ ದೇವಕಿದೇವಿಯಾಜನ | ನನುತನುಬಲದೇವರಿಗೆ ||೧೯||

ಮತ್ತಾಹರಿಹೇಳಲು ಪೂತಿನಿ ಮೊಲೆ | ಯಿತ್ತಾಗಲಾಸಂಜುಗೂಡಿ ||
ನೆತ್ತರೊಗಲು ಕೆಂಪುಕರದುಕೂಡಿದ ವಿಷ | ವೃತ್ತಿಕೆಯೆಂಬಭೂಮಿಯನು ||೨೦||

ಪುರರಿಪುಮುರಿದಕಾಕನಕೆನ್ನೆತ್ತರು | ಸುರಿದಲ್ಲಿಯಾವಾಗನೋಡೆ ||
ಇರದೆಕಾಗೆಗಳು ಪಾರಲುಕಾಕನರ್ಭಿಯೆಂ | ಬುರುಭೀಕರಧರಣಿಯನು ||೨೧||

ಶಕಟನನಾವಿಷ್ಣುವೊದೆಯಲುಪಾತಾ | ಳಕೆತೂತುಗೊರೆಯಲಂತಲ್ಲಿ ||
ಶಕಟಚ್ಛಾಯೆದೋರುತಭೀತಿಮಾಡುವ | ಶಕಟಬಿಲದ್ವಾರವನು ||೨೨||

ವನಮಾಲಿಕಿತ್ತುಮತ್ತಿಯಮರಗಳಮೂಲ | ದನಿತುಕೊರೆದಕುಳಿಯೊಳಗೆ ||
ಎನಿತುಮಣ್ಣನುತಂದುಹೊಯ್ದಡೆಹೂಳದ | ರ್ಜುನಗರ್ತವೆಂಬಕುಂಡವನು ||೨೩||

ಸಿರಿಯರೆಯನುಸೀಳಿದಾಕಿಶೋರನಬಾಯೊ | ಳಿರದರುಣೋದಕಸುರಿದ ||
ಧರೆಯೊಳುಕುದುರೆಯಮುಖಮಾಗಿತೋರುವ | ತುರಗವದನವೆಂಬನೆಲನ ||೨೪||

ಬಾಲಕೃಷ್ಣನುಕೆಡಹಿದತಾಳವೃಕ್ಷದ | ಮೂಲದನಿತ್ತುಧರೆಯೊಳಗೆ ||
ಆಲೋಕಿಸೆತಾಳಫಲಪಣ್ಣೆದಾಗುವ | ತಾಳಗರ್ತವುವೆಂಬಜಲವ ||೨೫||

ದೋರ್ದಂಡದಿಂಬಾಲಗೋಪಸಪ್ಪಳಿಸಲು | ಗರ್ದಭಸುರುಳಲಂತಲ್ಲಿ ||
ಗಾರ್ದಭನಂತಾವಾಗಲುರುಚುತಿರ್ಪ | ಗರ್ದಭರವವೆಂಬಶಿಲೆಯು ||೨೬||

ಓವದೆಯಾದೇವತೆಗಳೋಲ್ವಾಸದ | ತೀವಿಮುನಿವಕಲ್ಲವಳಿಗೆ ||
ಆವಿಷ್ಣುವೆತ್ತಿಯೆಡದಕೈಯೊಳಗಾಂತ | ಗೋವರ್ಧನವೆಂಬಗಿರಿಯು ||೨೭||

ಅಂದವಡೆದುಕ್ಷೋರಾತಬರಲತ್ತ್ಯಾ | ನಂದದಿನಾನೃಪವರರು ||
ನಾದಗೋಪನಬೀಳ್ಕೊಟ್ಟುವನೆಗೆಪೋಪ | ವೆಂದೆಯ್ದುವದಾರಿಯೊಳು ||೨೮||

ವಸುಧೆಯಿನಾಗಗನಕೆಕೀಲುಕೊಟ್ಟಂತಿ | ರೆಸಕವಡೆದುದೊಂದುಶಿಲೆಯು ||
ಅಸಮಪರಾಕ್ರಮಿಯಾಮೋಕಕುಂಡಲ | ನಸದೃಶಭುಜಬಲದಿಂದ ||೨೯||

ಒತ್ತಿಯಣೆದುಭೂತಳಕಿರದುರುಳಿಸಿ | ಕಿತ್ತುಚೆಂಡನುಹಾಕುವಂತೆ ||
ಮತ್ತೊಂದುಕಡೆಗೆಹಾಕಲುಪೂವಾಳಿಕರೆ | ಯುತ್ತುನಭೋಮಾರ್ಗದಿಂದ ||೩೦||

ಅದನುಕಂಡಾಮಾತಾಪಿತೃಗಳುಸಂ | ಮದವೇರಿಮಥುರಾಪುರಗೆ ||
ಪದುಳದಿನೆಯ್ದಿಸುಖದೊಳಿರಲತ್ತ | ವಿದಿತವಿದ್ಯಾಧರಗಿರಿಯ ||೩೧||

ರಥನೂಪುರಚಕ್ರವಾಳಪುರದೊಳಿರಿ | ಮಥನಸುಕೇತುವೆಂಬೋರ್ವ ||
ಪೃಥುವಿಪಾಲಕನಾಸ್ವಯಂಪ್ರಭೆಯೆಂಬೋರ್ವ | ಪೃಥುಸಿತಂಬೆಗೆಜನಿಸಿದಳು ||೩೨||

ಕಂಜವದನೆಸತ್ಯಭಾಮೆಯೆಂಬೋರ್ವಳು | ರಂಜಿಪಕಲೆಯೊಡಗೂಡಿ ||
ಹೊಂಜೆಳೆಹೊಗರಹಡೆವತೆರದಿಂದೇ | ರಂಜನ್ವನವೆಯ್ದಿದಳು ||೩೩||

ಅವರಯ್ಯನಾಖೇಚರನೊಂದಾನೊಂದು | ದಿನದೊಳು ತನ್ನ ತನುಜೆಯ ||
ಭುವನಾತಿಶಯವಪ್ಪರೂಪನೀಕ್ಷಿಸಿ ಸಂ | ಭವಿಸಿದ ಸಹಗರಪಿಂಪ ||೩೪||

ತರುಣಿಗೆವರನೆಂತಪ್ಪನಾಗುವನೆಂ | ದಿರದೆಸಂಭಿನ್ನನೆಂಬೋರ್ವ ||
ಸುರುಚಿರಬೋಧನಯುತ ಶಕುನಿಗನೊಳ | ಗೊರೆದುಲಿಂತವನುಸುರಿದನು ||೩೫||

ಮಾಸನಿಧಿಯೆ ನಿನ್ನ ಶಸ್ತ್ರಶಾಲೆಯೊಳ್ಳೈದಿ | ನಾಗಶಯ್ಯೆಯನೊಲಿದೇರಿ ||
ಭೂನುತಮಪ್ಪೀಶಾರ್ಙ್ಗಯನೇರಿಸಿ | ಈ ನವಶಂಖವೂದಿದನೆ ||೩೬||

ಭರತಾವನಿಗಧಿಪತಿಯಕ್ಕುಮವನೇ | ಯುರವಕೇಳ್ನಿನ್ನನಂದನೆಗೆ ||
ನಿರುತವಾಗಿವಲ್ಲಭನಕ್ಕುಮೆನೆಕಂಡು | ಹರುಷದಿನಾಖೇಚರನು ||೩೭||

ಭರತಪದಸುಗಳೊಳಗೆ ಕಂಸನೇಮುರು | ತರವಿಕ್ರಮಯುತನೆಂದು ||
ಪಿರಿದು ವಿಚಾರಿಸಿಯುಪನಿಪ್ಪಮಥುರಾ | ಪುರಕಾದಿವ್ಯವಸ್ತುವನು ||೩೮||

ಚರರಕೈಯಿಂದ ಕಳುಹಲಾತವರತಿ | ಭರದಿಂದಾಪುರಪಥದ ||
ಹೊರೆಯನಂದನದ ಮಹಾಪೂತಜಿನಮಂ | ದಿರವಮಂಟಪಕಿರವೆಯಿದ್ದ ||೩೯||

ಭೂವರಕ ನಗರುಪೆಯುಪಸಂದಾ | ದೈವಜ್ಞನಕೇಳಿದೊಡೆ ||
ಆವಸ್ತುವಾವವನಿಗೆ ವಶಮವನೇ | ಶ್ರೀಪಥುವಿಗೆ ಪರಸಹನು ||೪೦||

ನಿನಗಹಿತವುಮವನಿಂದೆನೆಶಂಕಿಸಿ | ಮನದೊಳು ಬಳಿಕಾಕಂಸ ||
ವಿನುತಮಪ್ಪೀವಸ್ತುಗಳ ಸಾಧಿಸಿದರ್ಗೆ | ಯೆನಿತು ಬೇಡಿದುದಕೊಡುವೆನು ||೪೧||

ಎಂದುಡಂಗುರವನೆಲ್ಲೆಡೆಯೊಳು ಹೊಯಿಸಿದೊ | ಡಂದಾತುರುವಟ್ಟೆಯೊಳು ||
ನಂದನ ನಂದನನಿದನು ನಾಥಪನಾ | ನೆಂದುನಿಲಿಸಘೋಷಣೆಯ ||೪೨||

ಆವಾರತೆಯಸೋಲಗದೊಳಗಿರ್ದ ಕಂ | ಸಾಪನಿಪಾಲಕಗೊರೆಯೆ ||
ಆ ಓಲಗದೊಳಗಿರ್ದರಿಂತೆಂದರು | ಭೂಪಿಶ್ರುತವಿಷ್ಣುವಿರವ ||೪೩||

ವೊಲೆಯುಂಬಕಾಲಮೊದಲು ಚಿಸ್ನಕೊಲಬಂದ | ಒಲಯುತದೇವತೆಗಳನು ||
ನೆಲಕಿಕ್ಕಿ ಬಳಿಕಗೋವರ್ಧನಗಿರಿಯನು | ಚಲಿಸದೆಚಾಳಿಸಿದವನು ||೪೪||

ಮುಳಿದೊಡೆನೆಲನನಾಗನಕಾನಘವನು | ಇಳೆಗೆತಪರ್ಬಲಯುತಗೆ ||
ತಿಳಿಯಲಿದೇನುಗಹನಮೆಂದು ನುಡಿದವ | ರೊಳಗಾಕಂಸನಿಂತೆಂದ ||೪೫||

ನಾಳೆಯುದನು ಕಾಣಲಕ್ಕುಮೆಂದಾವಸ್ತು | ಪಾಲಕರುಗಳನು ಕರೆಸಿ ||
ಮೇಳೈಸಿ ನಿಮ್ಮವಸ್ತುವನುದಯಕ್ಕೆಂದು | ಪೇಳಿದೊಡಾಖೇಚರರು ||೪೬||

ಆಮರುದಿನದುದಯದೊಳಂತವನು ಸು | ಪ್ರೇಮದಿನಜನಗೈದು ||
ಸಾಮಂತರರಕುಮಕ್ಕಳುಸಹಿತಾಕಂಸ | ಭೂಮಿಪಾಶನಲ್ಲಿಗೈದಿದನು ||೪೭||

ಆ ಸುರತರಮುಪ್ಪಾಶಯನದಚಂಡ | ವಾಸುಕಿವಿಷದುಸುರ್ವೊಯ್ಯೆ ||
ಕೇಸರಿ ಛಟಛಟಲೆನೆ ಕಂಡದಕೆ ಸ | ಭಾಸದರೆಲ್ಲಳುಕಿದರು ||೪೮||

ಆಸಮಯದೊಳಂಬುಜೋದರನಾಬಳಿ | ಗೋಸರಿಸದೆನಡೆತಂದು ||
ಕೇಸಡಿಯಿಂದ ಭರದಿಮೆಟ್ಟಿಯೇರಿದ | ನಾಸರ್ಪಶಯ್ಯೆಯನಂದು ||೪೯||

ರಾಜೀವೋದರಸಂಗದೀಧಿತಿಫಣಿ | ರಾಜತಲ್ಪದೊಳೊಪ್ಪಿದುದು ||
ರಾಜಮಂಡಲದನಡುವೆ ನೆರೆಕಾಣಿಸಿ | ರಾಜಿಪಚಿಸ್ಥದಂದಮೊಳು ||೫೦||

ಮತ್ತಮಗುರ್ವಿಸುವಾಶಾಜಾರ್ಯನಾ | ಉತ್ತಮಸತ್ತ್ವನುಂಗುಟವಿ ||
ಒತ್ತಿತಿರುವನೇರಿಸಿಸುರಥನುವನು | ಹೊತ್ತಕಾವರ್ಗಿಲಾತೆಸೆದನು ||೪೧||

ಕಂಬುವನೂದುವೆನೆಂದು ಕರ್ಚಿದಕವು | ಲಾಂಬಕನಾಸ್ಯವೊಪ್ಪಿದುದು ||
ತುಂಬುವೆರೆಯುನೋವದೆ ಕಚ್ಚಿದರಾಹು | ಬಿಂಬವಿದೆಂಬಂದದೊಳು ||೪೨||

ಆ ಪಾಂಚಜನ್ಯವನತಿಭರದಿಂಪಿಡಿ | ದಾಪೀತಾಂಬರನೂದೆ ||
ಆಪತ್ತುದಿಗ್ವಿಸರಂಗಳೊಳಗೆ ತಾ | ನೇಪೂರಿಸಿತಾರವವು ||೪೩||

ಪರಿಭುಜಂಗಶಯ್ಯೆಯನಾಶಾಚಾರ್ಯ | ನೇರಿಸಿಯಾಶಂಖವನು ||
ಹಾರಲೂದಿದ ಹರಿಯನುಕಂಡುಕಂಸಗೆ | ಪರಿಟ್ಟಿಗೊಂಡಾತಾಯ್ತು ||೪೪||

ಆವಸ್ತುಗಳಸುರಕ್ಷಿಸುತ್ತಿರ್ಪಯಕ್ಷ | ದೇವತೆಗಳು ಸಂತಸದಿ ||
ಆವಾಸುದೇವನಪೂಜಿಸಿ ಒಳಿಕನಾ | ನಾವಿಧದಿಂಪೊಗಳಿದರು ||೪೫||

ಮತ್ತಾತುರುಪಟ್ಟಿಗಾಹರಿಪೋಗೆ ಕ | ರುತ್ತಾತಕಂಸನಂದವನ ||
ಎತ್ತರವನುಕಂಡುಕೊಲಿಸಬೇಕವನನೆ | ನುತ್ತ ಮನದೊಳೆಣಿಸಿದನು ||೪೬||

ಅವನಮುನಿಸನರಿದಾಬಲಭದ್ರನು | ತವಕದಿ ತುರುಪಟ್ಟಿಗೈದಿ ||
ನವಿನಯದಿಂತನ್ನ ತಮ್ಮ ನಚ್ಯುತನೊಳ | ಗವಿರತಕೂಡಿರಲಿತ್ತ ||೪೭||

ಕಾಳಿಂದಿಯಮಡುವಿನಕವಳವತರ | ಹೇಳಿಸಂದಗೋವಳಗೆ ||
ಆಳನಿರದೆಕಂಸನಟ್ಟಲಂತದನವ | ಕೇಳಿಚಿಂತೆಯೊಳಿರುತಿರಲು ||೪೮||

ಚಿಂತೆಯಿದೇಕೆಂದಾಹರಿಕೇಳಿದೊ | ಡಿಂತೆಂದನೆಲೆತನುಜಾತ ||
ಅಂತಿಂತೆನಲೇಕಂತಕನಾಲಯ | ದಂತೆಯುಗುರ್ವಿಸುತಿರ್ಪ ||೪೯||

ಜಗುನೆಯಮಡುವಿನೊಳೊಂದು ಹೇಮಾಂಬುಜ | ವೊಗೆದಿದೆಯದನುಕಾದಿರ್ಪ ||
ವಿಗಡವಿಷೋರಗಕಳುಕಿಯದಕೆತುಂಬಿ | ಮೊಗವಿಕ್ಕವದಕತರಹೇಳಿ ||೫೦||

ಆರಸೆನ್ನ ಬಳಿಗಾಳನಟ್ಟಿದನದರಿಂ | ಪಿರಿದಪ್ಪಚಿಂತೆಯಾಯ್ತೆನಲು ||
ಹರಿಯೆಂದನೆಲೆತಂದೆಯೊಳ್ಳಿಯಕಾಪಿನ | ಸರಸಿಜವನುತಹುದಕ್ಕೆ ||೫೧||

ಚಿಂತೆಯಿದೇಕೆನುತಾತನ್ನಣೆಯ ಗೋಪ | ಸಂತತಿಯನು ಕೂಡಿಕೊಂಡು ||
ಅಂತರಿಸದೆ ಕಾಳಿಂದಿಯ ಮಡುವಿಗೆ | ಸಂತಸದಿಂದೆಯ್ದಿದನು ||೫೨||

ಸಾಸಿರೆಸಳಕಂಜಮನಾಮಡುಹೊಕ್ಕು | ಸಾಸಿಗನಲ್ಲಿಂದಕೀಳೆ ||
ಓಸರಿಸದೆಯುದನೂಸೆದು ರಕ್ಷಿಸುವಾ | ವಾಸುಗಿಕೆಕ್ಕಳಗೆರಲಿ ||೫೩||

ಅರೆವೆಡೆಗೊಂಡು ಭುಗಿಲ್ಭುಗಿಲೆನುತಕೇ | ಸುರಿವೆರಸಿದಗರಳವನು ||
ಭರದಿಂದುಗುಳುತ ಮೇಲಾರ್ವಿಯಾದ್ಧಕರಿ | ಯುರಗನಕಂಡು ಕೇಶವನು ||೬೪||

ಎಡದಕೈಯಿಂದ ಮತ್ತದರ ಹೆಡೆಯುಹಿಡಿ | ದೊಡನೊಡನವು ಕೈಯುಸುತ್ತಿ||
ಕಡುನೇಹದಿಂದಾಸುರಿಪನಾಗರ | ಪಡಿಯಾಗಿ ಪಿರಿದುರಾಜಿಸಿತು ||೬೫||

ಮತ್ತಾಕೈಯಿಂದಾತಲೆಯುಸು ಪಿಡಿ | ದೊತ್ತಿ ಬಿಡಿಸಿಕಾಳಿಂಗನನು ||
ಮೊತ್ತದಗೋಪರು ಕೊಂಡಾಡಲಾಪುರು | ಷೋತ್ತಮನಲ್ಲಿಗೈತಂದು ||೬೬||

ಒಂಮಕೈಯೊಳು ಕಾಂಚನಕಂಜಪಸು ಮ | ತ್ತೊಂದುಕೈಯೊಳು ಕಾಳಿಂಗನನು||
ತಂದಾನಂದಗೋಪನ ಕೈಯಕೊಡಲಾ | ನಂದದಿನಂತವು ಸಹಿತ ||೬೭||

ಒಂದಾಕಂಸಗೊಪ್ಪಿಸೆಕಂಡುಕಡುವೆಚ್ಚಿ | ದಾಮವಿಸುತುತೊಡವಿತ್ತು ||
ನಂದನನಾತುರುಪಟ್ಟಿಗೆಕಳುಹಿಯಿಂ | ತೆಂದುಮನದೊಳೆಣಿಸಿ ದನು ||೬೮||

ಪ್ರವೃಕೃತಕದಿಂದಶತೃದಿಸ್ಲೇಪಗೆ | ಯುಲಗನಮುಖದಿಕೊಲ್ವುದಕೆ ||
ಬಲುಗೈಯವಸುದೇವ ಬಲಭದ್ರರುಬಂದು | ಬಲವಾಗುವರುಬೇಗದೊಳು ||೬೯||

ಅದರಿಂದೀಹಗೆಯುಸು ಜಟ್ಟಿಗಳಿಂದ | ಸದೆಯಿಸಿನಿಶ್ಚಿಂತಮಿಹೆನು ||
ಎದುಕಾರ್ಯಮೊಂದು ಬಗೆದುಕಂಸನೃಪತಿಯು | ಗ್ಗದಭುಜಬಲಶಾಲಿಗಳು ||೭೦||

ಜಗಜಟ್ಟಿಗಳು ಚಾಣೂರಕೇಸರಿಮು | ಷ್ಟಿಗವಜ್ರಜಂಘರಕರೆದು ||
ವಿಗಡಮುಪ್ಪಾತುರುಪಟ್ಟಿಯುನಂದನ | ಮಗನನಿವಿಸ್ಮಾವಿದ್ಯೆಯಿಂದ ||೭೧||

ನೆಲಕಿಕ್ಕುವ ಸತ್ವಮುಂಟೆಯೆನೆಕೇಳಿ | ಇಳೆಯಾಧಿಪತಿಕೇಳೆಮಗೆ ||
ಕಲಹಕೆದಿಗುದಂತಿಗಳೆಣೆಯಲ್ಲದೆ | ಹುಲುಗೋವನನುತನೆಣೆಯೇ ||೭೨||

ಒತ್ತಿತಿಎದು ಛಿದ್ರವಮಾಡಿ ಭೂಮಿಯು | ಹೊತ್ತಹಾವಿನಹೆಡೆವಣಿಯು ||
ಕಿತ್ತುತನ್ನಿಯೆಸ್ನದೆಡನಗಾಯಿಯು | ಮತ್ತೆಮಗಿದಿರನಿಕ್ಕುವರೆ ||೭೩||

ಎಂದವಮಾತನುಕೇಳಿ ನಿವಿಸ್ಮಾಸಾಧನೆ | ಯಿಂದಮವನನಿಕ್ಕಿದೊಡೆ ||
ಸಂದೇಹವೇಕೆನಿಮಗೆ ಬೇಡಿದುದನೀವೆ | ನೆಂದವರೊಳುಮಾತನಾಡಿ ||೭೪||

ಆ ಮರುದಿನಮಲ್ಲರಂಗಮನಾಕಂಸ | ಭೂಮಿಶನುಮಾಡಿಸುತಿರೆ ||
ಆ ಮಹೀಪಾಲಕ ವಸುದೇವನಾಬಲ | ರಾಮನವನಕಾರ್ಯವರಿದು ||೭೫||

ನಂದಗೊಪನನಾರುಮರಿಯುದವೊಲು ಗೋ | ವಿಂದನಪಿತಕರೆತಂಸಿ ||
ಬಂದವರೊಳಗೇಕಾಂತದೊಳಾ ಅರ | ವಿಂದನಾಭನಹುಟ್ಟುವೊಟ್ಟ ||೭೬||

ವರಮುನಿಯತಿಮುಕ್ತರು ತಮ್ಮೊಳಗಂ | ದೊರೆದವಚನವಾದಿಯಾಗಿ ||
ಹರಿಯಿಂದಕಂಸ ಜರಾಸಂಧಚಕ್ರಿಗೆ | ಮರಣಮುಂಟೆಂಬುದೆಲ್ಲವನು ||೭೭||

ತಿಳಿಯಪೇಳಿಯೆಚ್ಚರಿಕೆಯೆಂದವರನು | ಬಲರಾಮನಕೂಡೆಕಳುಹೆ ||
ಬಳಿಕಿತ್ತಮಲ್ಲರಂಗವನಾನೃಪನನು | ಗೊಳಿಸಿತಾನಾಬಳಿಗೆಯ್ದಿ ||೭೮||

ಉತ್ತುಂಗವುಪ್ಪಚೌಪಳಿಕೆಯುಮಾಡಿಸಿ | ಪೊತ್ತದರಸುಗಳುವೆರಸು ||
ಮತ್ತಹೃದಯಕಂಸಕುಳ್ಳಿರ್ದುಬಲವನು | ಸುತ್ತುವಲಯದೊಳಗಿರಿಸಿ ||೭೯||

ಇರಲಲ್ಲಿಗೆವಸುದೇವನೃಪತಿತ | ನ್ನರುತರಸೈನ್ಯವಕೂಡಿ ||
ಭರದಿಂದಮತ್ತೊಂದುಚೌಪಳಿಕೆಯೊಳುಸಂ | ಗರಕೆಸನ್ನದ್ಧನಾಗಿರಲು ||೮೦||

ಮಲ್ಲರೊಳಗೆಹೋರಿಸಬೇಕುನಿನ್ನ | ಬಲ್ಲಿದನಪ್ಪನಂದನನ ||
ನಿಲ್ಲದೆಕಳುಹೆಂದಾನಂದಗೆಕಂಸ | ವಲ್ಲಭನಾಳನಟ್ಟಿದನು ||೮೧||

ಅವರುಬಂದುಸುರೆಯಶೋದೆಯಿಂತೆಂದಳು | ವಿವರಿಸಲೆನ್ನನಂದನನು ||
ಜವನಿಂದಸಾಯಕಿಚ್ಚೆಂಬೇಯನದರಿಂ | ದಿವನನೋಯಿಸಪವರುಂಟೆ ||೮೨||

ಎಂದಾಬಂದದೂತರೊಳುನುಡಿದುನಿಜ | ನಂದನನನುಸಿಂಗರಿಸಿ ||
ಇಂದುನಿನ್ನಾರಿಪುಗಳನೆಲ್ಲರಹೊಂದಿ | ಸೆಂದುಕರಸಿಬೀಳ್ಕೊಡಲು ||೮೩||

ಬಲನಾರಾಯಣರಾಕಂಸನನಿಂದು | ಕೊಲುವೆವೆನುತನಂದಸಹಿತ ||
ಪಲವುಗೋಪಾಲನಂದನರೊಡಗೂಡಿನಿ | ಶ್ಚಲರಾಗಿಪೊರಮಟ್ಟರಾಗ ||೮೪||

ಕೊಂಬುತಿತ್ತಿಗಾಳೆಕೊಳಲುತಮ್ಮಟೆತಾಳ | ಚೆಂಬಕವರೆಪೀರವಾದ ||
ಬೊಂಬುಳಿಗಳಬಾಜಿಸುವಗೋಪರನಿಕು | ರುಂಬಸಹಿತಬಂದರಾಗ ||೮೫||

ಅತ್ತಲತ್ಯಂತಕುಹಕಿಯಾಕಂಸನು | ನ್ಮತ್ತತನಗೆಯತಿಹಿತನು ||
ಮತ್ತೋರ್ವಕೈಟಭನೆಂಬಸುರನನುತ | ನ್ನೊತ್ತಿಗೆಕರೆಯಿಸಿಕೊಂಡು ||೮೬||

ನೀನೆನಗುಳ್ಳವನಾದೊಡೆಗೋಪನ | ಸೂನುಜಟ್ಟಿಗಳಕಾಳಗಕೆ ||
ಆನದೆನಡೆತರುತಹನೆಯವನನುಮ | ತ್ತೀನೆಲಕಿಕ್ಕುವುದೆನಲು ||೮೭||

ಎಲೆನೃಪಕಡೆಗಾಲದರುದ್ರನಭುಜ | ಬಲವನೆಗ್ಗುವಸತ್ವಯುತಗೆ ||
ಹುಲುಗೋವಳಕುಡುಗನಕೊಲ್ಲೆಂದೆನ | ಗಲಸದೀಬೆಸನಹೇಳುವರೆ ||೮೮||

ಒಂದುಗಲ್ಲವಹಿಸಿಯುಲುಮೊಲೆವಾಲುಮ | ತ್ತೊಂದುಗಲ್ಲವನುಹಿಸಿಯುಲು ||
ಒಂದಾಗಿಸೆತ್ತರುಸುರಿವಬಾಲನಕೊ | ಲ್ಲೆಂದುಬೆಸನಹೇಳುವರೆ ||೮೯||

ಕರುಕಊಚಿಗನನುಕ್ಕೈಟಘಕೊಂದನೆಂದೆಂಬ | ಕೊರತೆಯುನೆನಗೆನೃಪಾಲ ||
ಹೊರಿಸಿದೆಮುಂದರಿಯದೆಯೆಂದುಸುಡಿದಾ | ನೆರೆಗಲಿಯುವನಬೀಳ್ಕೊಂಡು ||೯೦||

ಬಂದಾಬಲಯುತನಾನಂದಗೋಪನ | ನಂದನನಾಕೇಶವನು ||
ಗೊಂದಣಗೊಂಡಗೋವಳರನಡುವೆಯಾ | ನಂದದಿಬಪ್ಪಬಟ್ಟೆಯೊಳು ||೯೧||

ಪಲವುಬಣ್ಣದಚಿತ್ರಾಂಬರಂಗಳನಾ | ನೆಲಹಿಡಿಯುದವ್ರೊಳುಹರಹಿ ||
ಉಲಿದುಪರಿವಜಗುಸೆಯುತಡಿಯೊಳಗೋರ್ವ | ಬಲಯುತರಜಕರೂಪವನು ||೯೨||

ಧರಿಸಿಸೀರೆಯತೊಳೆಯುತ್ತಿರಲಾಮುರ | ಹರನುತನ್ನಡಬಲವಿಡಿದು ||
ಹರಿಸದಿಬರ್ಪಗೋವಳರನಡುವೆಸಡೆ | ತರುತೆಲೆಸಜಕದಾರಿಯೊಳು ||೯೩||

ಹರಹಿದಸೀರೆಯತೆಗೆಯೆಂದೊಡವಸೆಂದ | ನಿರವೆತ್ಕಕತ್ತೆಕಾಗೆಯುಸು ||
ದುರುಳತನದಿಕೊಂಡಗಬ್ಬಿತನದವಾತ | ನೊರೆದುಕೆಡಲುಬೇಡತೊಲಗು ||೯೪||

ಜನಪತಿ ಕಂಸಗೆತೊಳೆವದುಕೂಲವ | ನಿನಿಸುನಿನ್ನವರು ಮುಟ್ಟಿದೊಡೆ ||
ನಿನಗೆತಕ್ಕುದನುಮಾಳ್ಪೆನು ನೋಡಿಸಡೆಯೆಂದು | ಕನಲಿನುಡಿದನುಡಿಗೇಳಿ ||೯೫||

ಮುಂದೆಬಂದುದನೋಡಿಕೊಂಬಮಿಂತಿದರಿಂ | ಬಂದುದುಬರಲಿಯೆಂದೆನುತ ||
ಸಂದಣಿಗೊಂಡಗೋಪಾಲರುಸಹಿತವು | ಕುಂದದಮುಟ್ಟಲುಸೀರೆಗಳನು ||೯೬||

ಎಲವ್ರೋ ಕರುಗಾಯಿಯೆದೆಹುಯ್ಲುತನದಿಂ | ದಿಳಿಯಮಾಣ್ಕನವಸ್ತ್ರಗಳನು ||
ಹುಲುಗೋವಳರುಸಹಿತಮುಟ್ಟಬಹುದೆಯೆಂ | ದಲಘುಕೋಪಾಟೋಪದಿಂದ ||೯೭||

ಮಾರಿಮ್ಮೈಮರೆದುಮುಸೆಗಿಬರ್ಪಂದದಿ | ನಾರಾಯಣನೆಡೆಗೈದಿ ||
ಭೂರಿಗೋಪಾಲರುನಡುಗುವಂದದಿಬಿಡ | ದಾರುತಮುಟ್ಟಿಮೂದಲಿಸಿ ||೯೮||

ಕೆನ್ನೆಯಹೊಡೆದುಕೆಡಹಿಕೊಲ್ವೆನೆಂದಾ | ಉನ್ನತಮುಪ್ಪವಸ್ತ್ರವನು ||
ತನ್ನಹತ್ತಿರಕ್ಕೈದಿಸಿನಸುಸಗುತು | ತ್ವನ್ನಪರಾಕ್ರಮಯುತನು ||೯೯||

ಕಳಿಲೆಬಿದಿರಕುಡಿಯನುಮುರಿವಂದದಿ | ಮುರಿದುಮಾಯದಮಡಿವಳನ ||
ಮೊಳಕೈಗಳನೆರಡನುಮುರಿದಂಬರ | ತಳಕಿರದೀಡಾಡಿದನು ||೧೦೦||

ಅದನುಕಂಡಾಗೋವಳರಾಲಿಬೊಬ್ಬಿರಿ | ದಧಟನಿನಗೆಸಮರದೊಳು ||
ಇದಿರಪ್ಪರುಂಟೆಯೆಂದೆನುತಳಿಯೆಡೆಹರ | ಹಿದಸೀರೆಗಳನೆಲ್ಲವನು ||೧೦೧||

ಓವದೆಸೂರೆಯನಾಡಿತಮ್ಮಾಕೈಯ | ಗೋವಳಗೋಲತುದಿಯೊಳು ||
ತೀವಿಗುಡಿಯುಗಟ್ಟಿಕುಣಿಕುಣಿದಿರದಾ | ಗೋವಿಂದನೊಡನೈದಿದರು ||೧೦೨||

ತಪ್ಪಳೆಗುಟ್ಟುತತಾರೆಲೆವಾಡುತ | ಒಪ್ಪಗೋವಳರಮಧ್ಯದೊಳು ||
ಒಪ್ಪದಿನಾಂಟಲಕೇಶವರೀರ್ವರು | ಬರ್ಪಪಟ್ಟಣದದಾರಿಯೊಳು ||೧೦೩||

ಅಜಿತಂಜಯನೆಂಬಕಂಸನಪಟ್ಟದ | ಗಜಮನವನುಪೊರಮಡಿಸೆ ||
ಗಜಬಜಿಸಲುತತ್ಪುರಮನೆಲ್ಲಾಸರ | ಸಿಜನಾಭಗಿದಿರಾಗಲಾಗ ||೧೦೪||

ಎಲೆಎಲೆಕೃಷ್ಣತೊಲಗುತೊಲಗೆಂದುರೆ | ಪಲುಬುತಿರಲುಪುರಜನವು ||
ಅಲಘುವಿಕ್ರಮಿಸಿಹ್ಮನಾದಮನಾಭೂ | ತಳಮುದಿರ್ವಂತೆಮಾಡಿದನು ||೧೦೫||

ಬಳಿಕದುಬರಿಕೈಯಿಂದೆತ್ತಿಹುಯ್ಯಲು | ಬಲಭದ್ರಾನುಜನಾಗ ||
ಕೆಳಲಿಯುಕ್ಕಲನಸೂದೆವತೆರದಿಂಪದ | ತಳದಿನೊದೆಯೆಕುಕ್ಕುರಿಸಲು ||೧೦೬||

ಹದದನೆಲದಮೂಲಂಗಿಯುಕೀಳ್ವಂತೆ | ಯುದರಕೊಂಬನುಕಿಳ್ತುಕೊಂಡು ||
ಗದೆಮಾಡಿಪಿಡಿದುಪೆಗಲೊಳಿಕ್ಕಿಕೊಂಡಾ | ಪದಿತವಿಕ್ರಮಿನಡೆತರಲು ||೧೦೭||

ನೋಡಿರೆನಮ್ಮಕಂಸನಹೆಡ್ಡಾಟವ | ನಾಡಕೋಲುವಮಾಳ್ಕೆಯೊಳು ||
ರೂಢಿಸಿದೀದ್ವಿರದವಕೊಂದಗೆಮಲ್ಲ | ರೀಡೆಯೆಂದೆಲ್ಲರುಲಿಯಲು ||೧೦೮||

ಆ ಹಸ್ತಿಯಳಿದವಾರ್ತೆಯಕೇಳಿ ಕಂಸನಾ | ಜ್ಯಾಹುತಿಗೊಂಡಗ್ನಿಯಂತೆ ||
ಊಹಿಸಬಾರದಕೋಪದಿನಿರಲತ್ತ | ಲಾಹರಿಯುತಿಲೀಲೆಯಿಂದ ||೧೦೯||

ವಸುದೇವನಿರ್ದಪಕ್ಕದೊಳಗೆಮಲ್ಲರು | ಪಸದನಗೊಂಡುನಿಂದಿರಲು ||
ಆಸಮಸಾಹಸಿಚಾಣೂರನಕ್ಕಡಕಿರ | ದಸವಸದಿಂಹೊಕ್ಕನಾಗ ||೧೧೦||

ದಂಡಾಧೀಶರದುರ್ಗಾಧಿನಾಥರ | ಮಂಡಲಿಕರಮನ್ನೆಯರ ||
ಗಂಡುಗಲಿಗಳಗಡಿಯನಾಯಕರತಂಡ | ತಂಡದನಡುವೆಕುಳ್ಳಿರಲು ||೧೧೧||

ವರಬುಧಗುರು ಕವಿಜನವೆಡಬಲದೊಳ | ಗಿರೆದೋಷಾಕರನಾಗಿ ||
ಇರೆಕಂಸನಾತಂಗದೊಳು ರಾಹುಬಿಂಬದ | ದೊರೆಯಾದನಾಕೇಶವನು ||೧೧೨||

ಮತ್ತೆಚಾಣೂರಮಲ್ಲನು ಭುಜವನುಹೊ | ಯ್ದತ್ತಿತ್ತಕೃಷ್ಣನೋಡೆಂದು ||
ಹತ್ತಸಾರಿಬಂದುಗರ್ಜಿಸಿಕಂಡುಕ | ರುತ್ತಾಯೆಡೆಯೊಳುನಿಂದು ||೧೧೩||

ಆರಭಟೆಯಿನಾಸ್ಫಾಳಿಸಲಾಧ್ವನಿ | ನಾರಾಯಣನಮುಡುಹಿನೊಳು ||
ಕಾಳಕಾರ್ಮುಗಿಲೊಡ್ಡಿನೊಳುಜನಿಸಿದಸಿಡಿ | ಲೋರಗೆಯಂತಗುರ್ವಿಸಿತು ||೧೧೪||

ಕಗ್ಗಲಿನೀಡಿದೆಡದಹಸ್ತವನವ | ಸಗ್ಗಳಮಪ್ಪಕೈಯಿಂದ ||
ಬಗ್ಗಿಸಿನೋಡಲಿನಿಸುಬಗ್ಗಿತಿಲ್ಲದು | ಕಗ್ಗಲಿಯೊನಕೆಯಂದದೊಳು ||೧೧೫||

ಅಣೆದುತಸ್ನುರುಭುಜಬಲದಿನೋಡಿದರಾ | ತೃಣಜೊಂಬೆಯು-ಕ್ಕಿನಕರುವ ||
ಅಣಿಮನೋಡುವಪತೆರನಾಯಸ್ತಾಕಮಲೇ | ಕ್ಷಣನೇನುಸತ್ತ್ವಾಧಿಕನೊ ||೧೧೬||

ಡೊಕ್ಕರದಿಂಬಂದವನಕಾಲ್ಗಳನೊಳ | ಪೊಕ್ಕುಹಿಡಿದುನೋಡಿದೊಡೆ ||
ಸೊಕ್ಕಾನೆಯುಮುಂಗಾಲಸಂಜದೆಬಂ | ದೆಕ್ಕಲನೆಳೆವಂತಾಯ್ತು ||೧೧೭||

ಬಲ್ಲಿತಪ್ಪಾಬಲಗೈಯಿಂವದಿದಡೆ | ಪೊಲ್ಲಮುನಿಸಿನಿಂತಿವಿಯೆ ||
ಮಲ್ಲರಮಲ್ಲನ ಮೈಯೊಳಗನಮುಷ್ಟಿ | ಕಲ್ಲತಾಗಿದವಿಂಟಿಯಮಾಯ್ತು ||೧೧೮||

ಒತ್ತಿಹಿಡಿದುಕೊಲ್ವೆನೆಂದೆನುತಾಮೈಯ | ಪತ್ತಿಹಿಡಿದುನೋಡಿದೊಡೆ ||
ಮತ್ತವನಿರದೆಸಾಧಿಪಮಲ್ಲಗಂಭದಂ | ತುತ್ತಮಸತ್ತ್ವನೊಪ್ಪಿದನು ||೧೧೯||

ಇಂತುಪಲವುಪರಿಯಿಂನೋಡಲಿವನೆನ | ಗೆಂತಾನುಶಕ್ಯಮಲ್ಲೆಂದು ||
ಚಿಂತಿಸುತಾಚಾಣೂರನೊತ್ತಿದೊಡನು | ರಾಂತಕನನುನಗೆನಗುತ ||೧೨೦||

ಅಳ್ಳಿಯಿಂದಾನರಿಗಾಳಿಗವನುಕೆಲ | ಹೊತ್ತುಕೊಂಡುವೆನಿವಗೆಂದು ||
ಮಿಳ್ಳಸವಮಾಧಾನವಡೆದಂತಡಗಿಸಿ | ಎತ್ತರಮುಪ್ಪಕೋಪವನು ||೧೨೧||

ಒತ್ತಿದೊಡೊಡನೆಹಿಮ್ಮೆಟ್ಟುವನೊಸ್ಮೊ | ಕ್ಕೆತ್ತಿಮೊಡೇಳ್ವಕೈವಿಡಿದು ||
ಎತ್ತಲೆಳೆಯಲತ್ತಲೈದುವನಾಹರಿ | ಮತ್ತವನಿಗೆಗೆಲುವಿತ್ತು ||೧೨೨||

ವಿರಿದಾಣಕೆಮೈಗೊಡುವನುಡೊಕ್ಕರ | ದಿಂದಹಾಕಿದೊಡುತುಳುವನು ||
ಒಂದಾಗಿಹುದುಗೆಹುದುಗಿನೋಡುವನುಮು | ಕುಂದನದೇಂವ್ಯೈಸಿಕನೊ ||೧೨೩||

ಒಮ್ಮೆಸೋಲವನಿತ್ತೊಮ್ಮೆಗೆಲುವನಿ | ತ್ತೊಮ್ಮೆಸರಿಯುಕಾಳಗವನು ||
ಸುಮ್ಮಾನದಿಂದಿತ್ತಾಸಭೆಗಚ್ಚರಿ | ಯಂಮಿಗೆಮಾಳ್ಪವೇಳೆಯೊಳು ||೧೨೪||

ಹರಿಯುವಂಚನೆಯುಕಾಳಿಗದಸತ್ತ್ವವತನ್ನ | ಸರಿಸತ್ತ್ವವೆಂದೇಬಗೆದು ||
ಮರಳಿಮರಳಿಮೈಯುಸಂಟುಹತ್ತುವವೊಲು | ಮರುಳುಗೊಂಡವರಂದದೊಳು||೧೨೫

ಹೂಣಹೊಕ್ಕುಹಿಡಿದಾಕೃಷ್ಣನನುವಿಂ | ಬಾಣಂಗೊಳ್ವೆನೆಂದೆಂಬ ||
ಚಾಣೂರಮಲ್ಲನನೆತ್ತಿಹಿಡಿದ-ಕೊಂಡು | ಗೋಣಮುರಿದುಹಾಕಿದನು ||೧೨೬||

ಎಲೆಕಂಸನೀನೆನಗಪರಾಧಿಯಲ್ಲೆಂ | ದಲಸದಿಂತಿದನೆತ್ತೆನುತ ||
ಜಲಜೋದರನುಹಾಕಿದಮುಂಡಿಗೆಯೆನೆ | ನೆಲಕುರುಳೊಪ್ಪಿದನವನು ||೧೨೭||

ಅದಕಂಡು ಕೇಸರಿಯೆಂದೆಂಬವನುಕಂಸ | ಗೆದೆಗಲ್ಲಾಗಿನಿಂದಿರ್ಪ ||
ಅಧಟರದೇವನಚ್ಯುತನಿತ್ತಿತ್ತಂ | ದದಿರದೆಬಂದುಮೇಲ್ವಾಯೆ ||೧೨೮||

ಕುಟ್ಟಿಕೆಡಹಿಕಾಲ್ವಿಡಿದುಸಭೋಮಾರ್ಗ | ಕಿಟ್ಟುಹಾಕುವೆನೆಂಬಾಗ ||
ಮುಟ್ಟಿಗನೆಂಬಕೆಸರ ಜಟ್ಟಿಯುದಕಂಡು | ಮುಟ್ಟಿಪುೂದಲಿಸಿಮೇಲ್ವಾಯ್ದ ||೧೨೯||

ಒಂದುಹಸ್ತದೊಳುವುುಷ್ಟಿಗನಹಿಡಿದುಮ | ತ್ತೊಂದುಕೈಯೊಳುಮೊತ್ತಮೊದಲು ||
ಅಂದದಿಹಿಡಿದಕೇಸರಿಯುಹಿಳ್ಳಿಯುಹೊಡೆ | ವಂದದಿಹೊಡೆದಿಡಲಾಗ ||೧೩೦||

ಮಿಗೆಮುನಿಸಿಂವಜ್ರಜಂಘನೆಂದೆಂಬೋರ್ವ | ಜಗಜಟ್ಟಿಬರೆಕಂಡುಹಿಡಿದು ||
ಗಗನಮಂಡಲಕಿಟ್ಟುಬೀಳದವುುಷ್ಣವು | ಷ್ಟಿಗನಿಂದಿಡಲುಮತ್ತವನ ||೧೩೧||

ಮತ್ತಾಚಾಣೂರಮಲ್ಲಸಹೂಡಿಂ | ದೊತ್ತಿಕಾದಿಸಾವಡರ್ದ ||
ಮತ್ತಹೃದಯುಮೂವರಿಂಕಂಸನತಿಧೈರ್ಯ | ದೆತ್ತರಮುದವಡಗಿದುದು ||೧೩೨||

ಬಳಿಕಬಳಸಿನಿಂದಸಾಸಿರ್ವರುಮಲ್ಲ | ರೊಳಗೊಬ್ಬರುಳಿಯುದೆಬಂದು ||
ವಿಲಯಭೈರವಸಂತಿನಿಂದಹರಿಯು ಜೇಸ | ಹುಳುಮುುತ್ತುವವಾಳ್ಕೆಯೊಳು ||೧೩೩||

ಮುತ್ತಿಹಿಡಿಯಲುನೊರಜಸಿರದೊಪಮುವ | ತೊತ್ತಿಹೊಸೆದುಕೆಲಬರನು ||
ಹತ್ತಿಯುಹಿಸಿವಂತೆ ಹಿಸಿದುಕೆಲಂಬರ | ತೊತ್ತುಳತುಳಿದುಕೆಲರನು ||೧೩೪||

ಒದೆದುಕೆಲರನೊಕ್ಕಲಿಕ್ಕಿ ಕೆಲಂಬರ | ಮಿದಿದುಕೆಲರಗುದ್ದಿ ಕೆಲರ ||
ಕುದಿದುಕೆಲರಕೊಂದನಾನೋಡುವಕಂಸ | ನೆದೆಹವ್ವನೆಹಾರುವಂತೆ ||೧೩೫||

ಕೆಪ್ಪೆಯಕುಟ್ಟಿ ಕೆಲಂಬರ ಸುರೆಬಿಗಿ | ಯುಪ್ಪಿ ಕೆಲರಕಾಲ್ವಿಡಿದು ||
ಅಪ್ಪಳಿಸುತ ಕೆಲಬರ ಕಂಸನೃಪನೆದೆ | ಹೆಪ್ಪಳಿವಂತೆ ಮರ್ದಿಸಿದ ||೧೩೬||

ಗುದ್ದಿಕೆಲರಗೂಡ-ಕೆಡೆವಂತೆ ಕೆಲಬರ | ಸುದ್ದಿಯೊರಸಿಕೆಲಬರನು ||
ಉದ್ದಕೆಹಾಕಿಕೆಲಂಬರಸಾಹರಿ | ಬದ್ದಿಕ್ಕಿದನುಮಿಳ್ಳುವಿಗೆ ||೧೩೭||

ಕುಟ್ಟಿಕೆಲರ ಸುಸುಕಿರಿದು ಕೆಲರದೆಸೆ | ಗಿಟ್ಟುಕೆಲರನವನಿಯೊಳು ||
ಮೆಟ್ಟಿಕೆಲರಕೊಂದಾರಂಗದೊಳ-ಮೆ-ದೆ | ಯೊಟ್ಟಿಹೆಮ್ಮಾರಿಯುಂಡದೊಳು ||೧೩೮||

ಇರೆಕಾಣುತುರಿದುಕೆಡುವದೀಪಿಗೆಯುಂ | ತುರುತರಮುಪ್ಪಕೋಪದೊಳು ||
ತರಹರಿಸದೆಕಂಸಭೂಪತಿತನ್ನದು | ರ್ಧರತರಮುಪ್ಪಸೇನೆಯನು ||೧೩೯||

ತಲೆಗೂಳ್ಳಿತಡೆಯದೆಸುತಕ್ಕೈವೀಸಲು | ನೆಲನೆಬೆಸಲೆಯಾದಂತೆ ||
ಬಲವೆಲ್ಲಮೇಲ್ವಾಯಲುಕಂಡು ವಸುದೇವ | ಬಲದೇವರಂದಿದಿರಾಗೆ ||೧೪೦||

ಅದನುಕಂಡಾಕಂಸನತಿಕೋಪದಿಂದೇಳ್ವ | ಪದದೊಳಗಾಕೇಶವನು ||
ಅಧಟನಪೂರ್ವಜಟ್ಟಿಯುಕಾಲ್ವಿಡಿದುಬೀಸಿ| ಯೊದಗಿಯವನಕಾಲನಿಡಲು ||೧೪೧||

ಧರೆಗೆಬೀಳ್ದಾ ಕಂಸನಕಂಡು ಕೋಪದಿ | ಪರಿದುಬಂದುಕಾಲಹಿಡಿದು ||
ಅರಸನೀನೇಕಿಂತಿರ್ದಪೆಯೆನ್ನ ಸೋ | ದರರನೆಲ್ಲರಕೊಂದೆಯಲ್ಲ ||೧೪೨||

ಮತ್ತೆನ್ನ ಹಸುಳೆವರೆಯುಮೊದಲಾಗಿ ಕ | ರುತ್ತುನಿನ್ನಾ ರಕ್ಕಸಿಯರು ||
ಮೊತ್ತದಿಂದಕೊಲಲೆಣಿಸಿದದೋಷಿಯೆ | ನುತ್ತೊಂದುಪಾಪಸರೆಯೊಳಗೆ ||೧೪೩||

ಪಸರಿಸಲವನಿಯೊಳಗೆ ಖಂಡವರುಣಾಂಬು | ದೆಸೆದೆಸೆಯನು ಬಣ್ಣವಿಡಲು ||
ಮಸಕದಿನಾಹರಿಯಾಕಂಸನನೆತ್ತಿ | ಯಸಗಹೊಯ್ಲಿಂಕೊಂದನಾಗ ||೧೪೪||

ಅಕಲಂಕವಿಕ್ರಮಾನ್ವಿತಸತಿಕೋಪಾಂ | ತಕನುದ್ಧತಸತ್ತ್ವಯುತನು ||
ಪ್ರಕಟಿತನಾಹರಿಯೆಸೆದನು ಸತ್ಕವಿ | ನಿಕರಮಾಕಂದಕೋಕಿಲನು ||೧೪೫||

ಇದು ಜಿನಪದಸರಸಿಜ ಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿ ನೇಮಿಜಿನೇಶಸಂಗತಿಯೊಳ | ಗೊದವಿದಾಶ್ವಾಸಷೋಡಶವು ||೧೪೬||

ಹದಿನಾರನೆಯ ಸಂಧಿ ಸಂಪೂರ್ಣಂ

# ೧೭. ದ್ವಾರಾವತಿ ನಿರ್ಮಾಣ ಸಂಧಿ



ಶ್ರೀಮದಮರಪತಿ ಮೌಳಿಕೀಲಿತಪಾದ | ತಾಮರಸದ್ವಯುಸಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಅತ್ತಲುವಸುದೇವಬಲಭದ್ರರುಗಳು ಕ | ರುತ್ತುತಪಗೆ ಮಾರ್ಮಲೆವ ||
ಮೊತ್ತದಬಲವನೆಲ್ಲವಕೊಂಡಾ ಪುರ | ಷೋತ್ತಮನೊಡಗೂಡಿದರು ||೨||

ಅಭಯಘೋಷಣೆಯುಮಾಡಿಸಿ ಮತ್ತಲ್ಲಿರ್ದ | ಸಭೆಯನೆಲ್ಲವನು ಸಂತೈಸಿ ||
ತ್ರಿಭುವನವೀರನಸಿಪಂಜರದೊಳಿರ್ದ | ವಿಭುವುಗ್ರಸೇನನಬರಿಸಿ ||೩||

ಆಕಂಸನಶವವನು ಸಂಸ್ಕರಿಸಿ | ಯಾಕಾಂತೆಜೀವಂಜಸೆಯ ||
ಏಕಡೆಗೈದದಂಡದಿಕಾಪಿಟ್ಟಾ | ಲೋಕಾಗ್ರಣಿಗಳಲ್ಲಿರಲು ||೪||

ದುರುಳಕಂಸನನಿಜಸಖರು ಪಲ್ಲವದೇಶ | ದರಸುಗಳಸುರವಲ್ಲಭರು ||
ಉರುಬಲಯುತಮುರಮಧುಕೈಟಭಾರಿಷ್ಟ | ನರಕಾಸುರರೆಂಬವರು ||೫||

ಒದವಿದಬಲಸಹಿತಲ್ಲಿಗೆ ನಡೆತರ | ಲದನಾ ಕೇಶವನರಿದು ||
ಇದಿರ್ವಂದಾಬಲವನುಸಂಹರಿಸಿ ಮು | ತ್ತಧಟಿಂದವರನುಕೊಂದು ||೬||

ಮುರನಗದೆಯ ಮಧುವಿನತೀರನರಕಾ | ಸುರನಖಡ್ಗವಕೈಟಭನ ||
ಉರುಕೇತುವನರಿಷ್ಟನಸಗೆಯಕೊಂಡು | ಹರುಷದಿಮಧುರೆಗೈದಿದರು ||೭||

ಅನಿತರೊಳಾಮಧುವಿನನಿಜಸುತ ಭೂ | ಜನಸುತನಾಹಿರಣ್ಯಾಕ್ಷ ||
ತನಗಿಂದನರೆಕಿರಿಯಳು ರೇವತಿಯೆಂಬ | ವನರುಹದಳಲೋಚನೆಯನು ||೮||

ಬಲರಾಮಗೆಕೊಟ್ಟು ಮತ್ತವರನುಕಂಡು | ಬಳಿಕನಿಶ್ಚಿಂತದಿನಿರಲು ||
ಬಲಯುತರಾತಮ್ಮ ಶೌರೀಪುರವರ | ಕಲಸದೆಪೋಪೆವೆಂದೆಣಿಸಿ ||೯||

ಉಗ್ರಸೇನನನುಕರೆಸಿ ತನ್ನ ತನುಜಾತ | ರಗ್ರಗಣ್ಯರುಸಹವಾಗಿ ||
ವ್ಯಗ್ರದಿಂದಲಿಮಧುರೆಯುಪೊರಮಟ್ಟು ಸ್ವ | ಪಾಗ್ರೇಶವಸುದೇವನೈದಿ ||೧೦||

ಶೌರೀಪುರಕಾನಂದದಿಪೊಕ್ಕಾ | ವಾರಿಧಿವಿಜಯಭೂವರನ ||
ಚಾರುಚರಣಕಾತನುಜಾತರುಗೂಡಿ | ಭೀರುತೆಯಿಂದೆರಗಿದನು ||೧೧||

ಅತ್ಯಾತುರದಿಂದತರಹೇಳಿತನ್ನ ಸು | ಭೃತ್ಯರಕಳುಹಲಂತವರು ||
ಸತ್ಯಭಾಮಾದೇವಿಯುಬೇಡಿದೊಡವ | ಳತ್ಯಂತನಿಷ್ಠುರೆಯಾಗಿ ||೯೦||

ಅನ್ನಿಗಸಂಬರರಾಜತನುಜನನು | ತನ್ನ ನಂದನನೆಂದುಬರಿಸಿ ||
ಉನ್ನತಿಕೆಯುಮೆರೆದೊಡೆನಾನುಕೊಡುವೆನೆ | ನನ್ನ ಮಂಡೆಯಕುಂತಳವನು ||೯೧||

ಎನಲಾವಾತನವರುಪೋಗಿಪೇಳಲು | ವನಮಾಲಿಯಾನಾರದನ ||
ನನೆಗಣೆಯನಸುಪ್ರಪಂಚಮನೆಲ್ಲವ | ನಿನಿಸುಳಿಯದೆಪೇಳೆಂದು ||೯೨||

ಕಳುಹಲವನುಸತ್ಯಭಾಮಾದೇವಿಯು | ನಿಲಯಕೆಪೋಗಿಕುಳ್ಳಿರ್ದು ||
ತುಳಿಲಾಳಾಮನಸಿಜನಪ್ರಪಂಚಮು | ತಿಳಿಯಪೇಳಿದನಿಂತೆಂದು ||೯೩||

ಈಮೇರುವಿನಪೂರ್ವವಿದೇಹಕೆಪೋಗಿ | ಶ್ರೀಮಂದರತೀರ್ಥಕರಿಗೆ ||
ಪ್ರೇಮದಿಂದೆರಗಿಮತ್ತಾಗಣಧರರಿಂ | ದಾಮಾರನಿರ್ವತಾಣವನು ||೯೪||

ಮತ್ತಮವನಜನ್ಮಾಂತರದಿರವನು | ಚಿತ್ತರಮಾಗಿಕೇಳಿದೆನು ||
ವೃತ್ತಪಯೋಧರೆಯದನುಸುರುವೆನೇಕ | ಚಿತ್ತದಿಕೇಳುಪೇಳುವೆನು ||೯೫||

ಎನುತೀಭರತಾರ್ಯಖಂಡದಜನ | ವಿನುತಮಗಧದೇಶದೊಳು ||
ಘನಶೋಭೆವಡೆದಶಾಲಿಗ್ರಾಮವುಂಟಲ್ಲಿ | ವನಿತೆಯಗ್ಗಿಲೆಯೆಂಬಳೊಡನೆ ||೯೬||

ಸೋಮಶರ್ಮನೆಂಬಪಾರ್ವನುಕೂಡಿಹ | ನಾಮಿಥುನದಗರ್ಭಕೊಗೆದ ||
ಪ್ರೇಮರಸುತರಗ್ನಿಭೂತಿಮಾರುತಭೂತಿ | ನಾಮದವರುನೆರೆಬೆಳೆದು ||೯೭||

ಇರಲೊಂದುಪಗಲಾಪುರದನಂದನಕೋರ್ವ | ವರಮುನಿಬರಲವರೊಡನೆ ||
ಉರುತರಮಪ್ಪಮಿಥ್ಯಾಗಮಗರ್ವದಿ | ಭರದಿನವರುವಾದಮಾಡಿ ||೯೮||

ಅವರವಚೋವಜ್ರಪಾತದಿಂತಮ್ಮಾ | ವಿವಿಧವಿದ್ಯಾಗರ್ವವೆಂಬ ||
ಅವನೀಧರನುಚ್ಚುನುರಿಯಾಗಲಾಗನಂ | ಭವಿಸಿದಕಡುಲಜ್ಜೆಯಿಂದ ||೯೯||

ಮುನಿಸಿಂದಕೂರಸಿಗೊಂಡಾಯಿರುಳೊಳು | ಮುನಿಯಕೊಲುವೆನೆಂದುಪೋಗೆ ||
ವನವರಕ್ಷಿಸುವಕನಕಯಕ್ಷನೆಂಬೋರ್ವ | ನಿನಿಸುಕೋಪದಿನೆಯ್ತಂದು ||೧೦೦||

ವಿವಿಧೋಪಸರ್ಗಮನೆಸಗುತಮಿರಲುಮು | ತ್ತವರದಕಾನದೆಬೆದರಿ ||
ನವಗೀವುದಸುದಾನವನೆಂದಾಮುನಿ | ಗವನತರಾಗಿಬಿದ್ದಿರಲು ||೧೦೧||

ನಿಮ್ಮಕುಮಾರ್ಗವಬಿಟ್ಟುಸದ್ಧರ್ಮವ | ನೆಮ್ಮಿದೊಡಲ್ಲದೆನಾನು ||
ಸುಮ್ಮನೆಬಿಡೆನೆಂದಾಯಕ್ಷನುಸುರಲು | ಹಮ್ಮುಳಿದುಬೇಗದೊಳು ||೧೦೨||

ಆಯಕ್ಷ ಸುಸುರ್ದಂತಾಪಾವಕಭೂತಿ | ವಾಯುಭೂತಿಗಳುಸುವ್ರತವ ||
ಆಯುತಿಯಿಂದಧರಿಸಿತಮ್ಮಾಲಯು | ಕೊಯ್ಯ್ಯರದಿಂಬರಲಾಗ ||೧೦೩||

ಜನನೀಜನಕರಾವಾರತೆಯನುಕೇಳಿ | ತನುಜರಿರಾವೈದಿಕದ ||
ವಿನುತಮಾರ್ಗವಬಿಟ್ಟುಸವಣರಧರ್ಮವ | ನಸುಕರಿಪುದುಮತವಲ್ಲ ||೧೦೪||

ಎನುತನಿಗ್ರಹಿಸಿನುಡಿದನುಡಿಯುನುವಿಾರಿ | ಜಿನಮಾರ್ಗದೊಳೋಸರಿಸದೆ ||
ಅನಲಭೂತಿಯುವಾಯುಭೂತಿಗಳನುದಿನ | ಮನದೆಗೊಂಡನೆರೆನೆಗಳಿ ||೧೦೫||

ಆಧರ್ಮದಫಲದಿಂದವರಳಿದಾ | ಸೌಧರ್ಮಕಲ್ಪದೊಳೊಗೆದು ||
ಸಾಧಾರಣವಲ್ಲದಸುಖವುಂಡುಸ | ಮಾಧಿಮುಖದಿನೆಯ್ತಂದು ||೧೦೬||

ಇಲ್ಲಿಯುಕೌಶಲವಿಷಯುದಸಾಕೇತ | ದಲ್ಲಿಯರಿಂಜಯನೆಂಬ ||
ಬಲ್ಲಿದನೃಪನಿಹನವಸರಾಜಶ್ರೇಷ್ಠಿ | ಸಲ್ಲಲಿತನುಜಿನದಾಸ ||೧೦೭||

ಶ್ರೀವಪ್ರೆಯೆಂಬಸುದತಿಗೂಡಿಸುಖಸಂಕ | ಥಾಪನೋದದೊಳಿರುತಿರಲು ||
ಆವಹ್ನಿಭೂತಿಯುನಿಲಭೂತಿಚರದೇವ | ರಾವೈಶ್ಯಮಿಥುನಕೆಜನಿಸೆ ||೧೦೮||

ಒಸೆದುಪೂರ್ಣಭದ್ರವಾಣಿಭದ್ರಸುಮೆಂಬ | ಹೆಸರನವರುಕೊಡಲವರು ||
ಮಿಸುಗುವಸತ್ಕಲೆಗೂಡಿಬೆಳೆದುಹೊಚ್ಚ | ಹೊಸಜವ್ವನವೇರಿದರು ||೧೦೯||

ಈಪರಿಯಿಂದಿರ್ದೊಂದುಪಗಲುಮ | ತ್ತಾಪುರವರದನಂದನಕೆ ||
ಪಾಪರಹಿತನೋರ್ವಮುನಿಬರಲಲ್ಲಿಯ | ಭೂಪಸುತಮ್ಮಜನಕನು ||೧೧೦||

ಬಂದುಬಳಿಕಧರ್ಮಾಧರ್ಮವನುಮುನ | ದಂದುಕೇಳಿದೀಕ್ಷೆಗೊಳಲು ||
ಅಂದಾಪೂರ್ಣಭದ್ರಸುವಾಣಿಭದ್ರರು | ದಂದುಗವನುಪರಿಹರಿಸಿ ||೧೧೧||

ಉತ್ತಮದೀಕ್ಷೆಯುಹಡೆದದರೊಳಗೇಕ | ಚಿತ್ತದಿನಡೆದುಮತ್ತಳಿದು ||
ಮೊತ್ತಮೊದಲಸಗ್ಗದೊಳುಜನಿಯಿಸಿಸಂ | ಪತ್ತಹಡೆದುಸುಖವುಂಡು ||೧೧೨||

ಮತ್ತಲ್ಲಿಯೇಕಸಮುದ್ರೋಪಮದಾಯು | ಒತ್ತುವನ್ನಬರಲ್ಲಿರ್ದು ||
ಸತ್ತುಬಂದೀಕುರುಧರಣೀಮಂಡಲ | ದುತ್ತಮಹಸ್ತಿನಪುರದ ||೧೧೩||

ಅಧಿಪತಿವಿಶ್ವಭೂಪಗೆಯಾಪಟ್ಟದ | ವಧುರೂಪವತಿಯೆಂಬವಳ್ಗೆ ||
ಮಧುಕೈಟಭರೆಂಬಸುತರಾಗಿಜನಿಯಿಸಿ | ಯಧಿಕಲಾವಣ್ಯವಹಡೆದು ||೧೧೪||

ಬೆಳೆದುಜವ್ವನವೇರಲಾವಿಶ್ವಭೂಪತಿ | ಬಳಿಕಮಕ್ಕಳಿಗೆರಾಜ್ಯವನು ||
ತಳುವದೆಕೊಟ್ಟುತ್ತಮಜಿನದೀಕ್ಷೆಯ | ತಳೆದೊಪ್ಪಿದನುಮತ್ತಿತ್ತ ||೧೧೫||

ಅಧಿರಾಜಯುವರಾಜಪದದೊಳುನಿಂದಾ | ಮಧುಕೈಟಭರಿರಲತ್ತ ||
ಮಥುರಾನಗರಿಯೊಳಗೆವೀರಸೇನನೆಂ | ಬಧಿಪನರಸುಗೆಯ್ಯುತಿಹನು ||೧೧೬||

ಆವೀರಸೇನನೃಪಾಲಕನಾಮಧು | ಭೂವನಿತಾವಲ್ಲಭನೊಳು ||
ತೀವಿದಸ್ನೇಹದೊಳಿರ್ದುಚಂದ್ರಾಭೆಯೆಂ | ಬಾವನಿತೆಯಕೈಯಿಂದ ||೧೧೭||

ಘನತರಮಪ್ಪವಸ್ತುವನುಪಸಾಯನ | ವನುಕೊಟ್ಟುಕಳುಹೆಮತ್ತವಳ ||
ಮಿನುಗುವಲಾವಣ್ಯವನೋಡಿಯಾಮಧು | ಜನನಾಥನವಳಿಗೆಸೋಲ್ತು ||೧೧೮||

ಅವಳನುಮನೆಯಿಂಪೊರಮಡಲೀಯದೆ | ಯವಿವೇಕಿನೆರೆಕೂಡಿರ್ಪ ||
ವಿವರವರಿದುವೀರಸೇನನಾಮಧುಭೂ | ಧವನಿಂದತನ್ನವಲ್ಲಭೆಯ ||೧೧೯||

ತರಿಸಿಕೊಂಬುದಕೆಯಶಕ್ತನಾದುದರಿಂ | ಮರುಳಾಗಿಯಾಯಿಭಪುರಕೆ ||
ಬರಲಲ್ಲಿಯಜನವುರಹಿಸಕೃತ್ಯಕೆ | ಪಿರಿದಾಗಿನಗುವುದಕೇಳಿ ||೧೨೦||

ಪರದಾರಹರಣದದುರ್ಯಶಕಂತಃ | ಕರಣದೊಳಾವುಧುನೃಪತಿ ||
ಪಿರಿದುಕೊಕ್ಕರಿಸುತಿರ್ದೊಂದುದಿನದೊಳಾ | ಪುರವರದುದ್ಯಾನವನಕೆ ||೧೨೧||

ವಿಮಲವಾಹನರೆಂಬಕೇವಲಿಗಳುಬರೆ | ಸಮತೆಯಿಂದಾಮಧುನೃಪತಿ ||
ಮಮತೆಯಿನಾತ್ಮೀಯಸುತಗೆರಾಜ್ಯವನಿತ್ತು | ರಮಣೀಯಮಪ್ಪದೀಕ್ಷೆಯನು||೧೨೨||

ಅನುಜಾತನಾಕೈಟಭಗೂಡಿಧರಿಯಿಸಿ | ಮಾನದೆಗೊಂಡದರೊಳುನಡೆದು ||
ತನುವನುಬಿಸುಟುಮಹಾಶುಕ್ರಕಲ್ಪದೊ | ಳನಿಮಿಷಪತಿಯಾದನಿತ್ತ ||೧೨೩||

ರುದ್ರಮಪ್ಪಾಯೋಗದೊಳುಕೈಟಭಯೋ | ಗೀಂದ್ರನೆಗಳಿಯಾದಿವದ ||
ಇಂದ್ರಗೆಭವಬದ್ಧಸ್ನೇಹದಿಂದಪ್ರ | ತೀಂದ್ರನಾಗಿಜನಿಯಿಸಿದ ||೧೨೪||

ಉರುಮುದದಿಂದಪ್ರತೀಂದ್ರವೆರಸಿಮಧು | ಚರದಿವಿಜಾಧೀಶ್ವರನು ||
ಎರಡೆಂಟುಸಾಗರೋಪಮದಾಯುತವೆವಸ್ನ | ಮರದೆಸುಖವನನುಭವಿಸಿ ||೧೨೫||

ಗೋವಿಂದಗೆರುಗ್ಮಿಣಿಗಾಮಧುಚರ | ದೇವೇಂದ್ರನಲ್ಲಿಂಬಂದು ||
ತೀವಿದನವಲಾವಣ್ಯಸಮನ್ವಿತನಪ್ಪ | ಪೂವಿಲ್ಲನಾಗಿಪುಟ್ಟಿದನು ||೧೨೬||

ಅತ್ತಲುವೀರಸೇನನುತನ್ನಸುದತಿಗೆ | ಚಿತ್ತವಿಟ್ಟುಮರಳಾಗಿ ||
ಸತ್ತುಭವಾಂಬುಧಿಯೊಳುತೊಳಲುತಮಿ | ರ್ದತ್ತಾನುಮುಪಶಮದಿಂದ ||೧೨೭||

ಹಡೆದುಮನುಷ್ಯಜನ್ಮವಪಂಚಾಗ್ನಿಯ | ನಡುವೆತಪಂಗೈದುಬಳಿಕ ||
ಮಡಿದುಧೂಮಕೇತುವೆಂಬಹೆಸರನಾಂತು | ಪುಡುಲೋಕದೊಳುಸಂಜನಿಸಿ |೧೨೮|

ಮಾರುತಮಾರ್ಗದೊಳಗೆಬರುತಿರಲುಮ | ತ್ತಾರುಗ್ಮಿಣಿಯುಮುಗ್ಗಿಲೊಳು ||
ಮಾರಕುಮಾರನಿರಲುಕಂಡಾಯೆಡೆ | ಭೋರನೆನಡೆತರುತಿರ್ಪ ||೧೨೯||

ತನ್ನ ವಿಮಾನನಿಲಲುನೇಲಕಿಳಿದಾ | ಚೆನ್ನಿಗನನುಕಂಡುಬಳಿಕ ||
ಮುನ್ನಿನಹಗೆಯೆಂಬುರಿದೆತ್ತಿಕೊಂಡೊ | ಯ್ದುನ್ನತವಮಾದಡವಿಯೊಳು ||೧೩೦||

ಹಾಕಿಪೋಗಲು ಕಾಳಶಂಬರಕೊಂಡೊಯ್ದು | ಸಾಕಲುಜನ್ಮನವಡೆವ ||
ಆಕಾವನಕಂಡಂದಿನ ಚಂದ್ರಾಭೆ | ಬೇಕಾದಭವದೊಳುತೊಳಲಿ ||೧೩೧||

ಕಾಳಶಂಬರಖಚರೇಶಗೆ ಕಾಂಚನ | ಮಾಲೆಯೆಂಬಾಸಲ್ಲಳಾಗಿ ||
ಆಲಲಿತಾಂಗಗಂದಿನಬದ್ಧಮೋಹದಿ | ಮೇಲಿಕ್ಕಿ ಮರುಳಾದಳತ್ತ ||೧೩೨||

ಮತ್ತಾತ್ಮಕೈಟಭಚರದೇವನೀಪುರು | ಷೋತ್ತಮುಗಾಸಗ್ಗದಿಂದ ||
ಸತ್ತುಬಂದಿಂದಿಗಾರನೆಯತಿಂಗಳಿಗು | ತ್ಪತ್ತಿಯಾಗುವನೆಲೆಯುಬಲೆ ||೧೩೩||

ಎನುತನಾರದನು ತಿಳಿಯಪೇಳಲಾಮಾತ | ಮನದೆಗೊಂಡಾಸತ್ಯಭಾಮೆ ||
ಅನಿತರೊಳಗೆಯಳಕವನು ರುಗ್ಮಿಣಿದೇವಿ | ಯನುಚರರಿಗೆ ಕೊಳ್ಳಿಮೆನಲು ||೧೩೪||

ಇಂತೆಂದು ನುಡಿದರವರು ರುಗ್ಮಿಣಿದೇವಿ | ಕುಂತಳವನು ಬೇಡಿದೊಡೆ ||
ಅಂತರಿಸದೆ ಕೊಡಬಂದರೆ ಪಿಡಿಯುದೆ | ಪಿಂತಕೆತಿರುಗಿನೀವೆಂದು ||೧೩೫||

ನವಗಾಜಜ್ಞಾಪಿಸಿಕಳುಹಿದಳದರಿಂ | ಯುವತಿ ನಾವಿವನೊಲ್ಲೆವೆಂದು ||
ಅವರು ತಿರುಗಿಬಂದಾರುಗ್ಮಿಣಿಗಾ | ವಿವರವೆಲ್ಲವನುಸುರಿದರು ||೧೩೬||

ಆದನುಕೇಳಿ ರುಗ್ಮಿಣಿದೇವಿಯುತಿಸೆ | ಮ್ಮದವಹುಡೆದು ತನ್ನತನುಜ ||
ಮದನಕುಮಾರನಸುಕೃತದೊದವನೋಡಿ | ಪದುಳವಿರ್ದಳುಸುಖದೊಳಗೆ ||೧೩೭||

ತುಂಗವಿಕ್ರಮನಸುಹೃದ್ಭೂಭುಜಮಾ | ತಂಗಮೃಗಾಧೀಶ್ವರನು ||
ಮಂಗಲಗುಣಭೂಷಣನೊಪ್ಪಿದನಾ | ಶೃಂಗಾರರಸಪೂರಿತನು ||೧೩೮||

ಇದು ಜಿನಪದಸರಸಿಜ ಮದಮಧುಕರ | ಚದುರಮಂಗರಸ ರಚಿಸಿದ ||
ಮದನಾರಿ ನೇಮಿಜಿನೇಶ ಸಂಗತಿಯೊಳ | ಗೊದವಿಪಾಶ್ವಾಸವಿಪ್ಪತ್ತು ||೧೩೯||

## ಇಪ್ಪತ್ತನೆಯ ಸಂಧಿ ಸಂಪೂರ್ಣಂ



# ೨೧. ಮದನವಿದರ್ಭೆಯರ ವಿವಾಹವರ್ಣನಾಸಂಧಿ.

———:o:———

ಅಂಗಜವಿಜಯಮುಖ್ಯಾಂಗನೆಯಧಿಪಪ್ರಭು | ಜಾಗೇಶವಂದಿತಚರಣ ||
ಮಂಗಳಮೂರ್ತಿನೇವಿಶಾಶನಪದಯುಗ | ಳಂಗಳಿಗೊಲಿದೆರಗುವೆನು ||೧||

ಇಂದಿರಾರಮಣಯುತಿಂಗಳರಾತ್ರಿಗೆ ಸಗ್ಗ | ದಿಂದಂಗಜಕುಮಾರಕನ ||
ಹಿಂದಣಭವದಸುಜಾತನುಬಂದು ಮು | ಕುಂದಗೆ ಮಗನಾಗುವನು ||೨||

ಎನುತನುಡಿದ ನಾರದನನುಡಿಯಕೇಳಿ | ಮನದೆಗೊಂಡು ಸತ್ಯಭಾಮೆ ||
ವನಜೋದರನಬಳಿಗೆ ಬಂದುತಾನಂ | ದಿನ ಸೂಳನು ಬೇಡಿಪಡೆದು ||೩||

ಮಗುಳಿಮನೆಗೆಬರಲಾತದನರಿದಾ | ಮುಗುಳ್ಗಣ್ಣೆಯುನುತನ್ನ ಕೈಯ ||
ಸೊಗಯಿಪ ಕಾಮಮುದ್ರಿಕೆಯನು ತಂದಾ | ಸುಗುಣೆ ಜಂಭಾವತಿಗೀಯೆ ||೪||

ಆವನವಳಂಗುಲಿಯೊಳಗಿಟ್ಟಾದಿನ | ವೊದಗುವಪರಿಯುಂತರಿರ್ದು ||
ಮದಪತಿ ಸತ್ಯಭಾಮೆಯದೊಂದುರೂಪವ | ಪವಪಿನಿಂದವೆಕ್ಕೈಕೊಂಡು ||೫||

ಅಂದಿನರಾತ್ರಿಯೊಳಗೆ ಮೊದಲೇಗೋ | ವಿಂದನಸೂಳ್ಗೆಯ್ತಂದು ||
ಮಂದಗಮನೆನಿಲೆ ಸತ್ಯಭಾಮೆಯೆತಪ್ಪ | ದೆಂದು ರತಿಯೊಳಿರಲಾಗ ||೬||

ಪಿಡಿದುಸಿಂಗರದೊಟ್ಟ ಸತ್ಯಭಾಮಾದೇವಿ | ಭರದಿನೋಪನಸೂಳಿಗೆಂದು ||
ಬರುತಾಮುರರಿಪುಮತ್ತೋರ್ವಸತಿಯೊಳು | ನೆರೆದಪನೆಂಬುದಕೇಳಿ ||೭||

ಮನೆಗೆಬಂದತಿಕೋಪವಿಂದಿರ್ದಾಮರು | ದಿನದುದಯಕೆನಡೆತಂದು ||
ವನಜನಾಭನಕಂಡು ನೀಪುರುಷೋತ್ತಮ | ನೆನಿಸಿಕೊಂಬುದ ಪುಸಿಮಾಡಿ ||೮||

ದಿನಗಾಹಿಯೆಂಬವಮಾತನು ನೆಲೆಮಾಡಿದೆ | ಯೆನೆನಸುನಗುತಾವಿಷ್ಣು ||
ವನಜವದನೆಕೇಳಾಜಂಭಾವತಿ | ನನೆಗಣೆಯನಕೃತ್ಯದಿಂದ ||೯||

ಕಾಮಮುದ್ರಿಕೆಯನುಕೈಗಿಟ್ಟು ನಿನ್ನಭಿ | ರಾಮಮಪ್ಪಾರೂಪಧರಿಸಿ ||
ಈವಾಟದೊಳು ಬರನೀನೆಂದವಳೊಳು | ಪ್ರೇಮದಿಕೂಡಿದೆನ್ನೈಸೆ ||೧೦||

ಎನ್ನೊಳು ತಪ್ಪಿಲ್ಲವೆಂದಾತರುಣಿಗೆ | ಯುನ್ನತನಪ್ಪೊಳುನುಡಿಯು ||
ಚೆನ್ನಾಗಿನುಡಿದು ಸಂತೈಸಿಕಳುಹಲಾ | ಸನ್ನುತೆಜಾಂಭಾವತಿಗೆ ||೧೧||

ಬಸಿರುಬಲಿದುನವಮಾಸನೆರೆಯೆ ಕಡು | ಹಸನಪ್ಪುದೊಂದುಲಗ್ನದೊಳು ||
ಸಿಸುವುದಯಿಸೆಪದ್ಮನಾಭನರಿದುಮನ | ಮೊಸೆನೊಸಗೆಯಮಾಡಿಸಿದನು ||೧೨||

ಅವನಿಗೆಶಂಭುಕುವರನೆಂಬಪೆಸರನು | ಸುವಿಧಾನದಿಂದಿತ್ತುಸಲಹೆ ||
ನವಶಶಿಕಲೆಗೂಡಿನೆರೆಬೆಳವಂದದಿ | ನವನಿಪಕುವರಬೆಳೆದನು ||೧೩||

ರೂಪಿನೊಳತಿಬಲದೊಳುಸುಗುಣದೊಳುವಿ | ದ್ಯಾಪರಿಣತೆಯೊಳಗವನು ||
ಆಪಂಚಬಾಣಗೆಸರಿಮಿಗಿಲೆಂದುಮ | ತ್ತಾಪೃಥ್ವಿಪೊಗಳುತಿಹುದು ||೧೪||

ಚಿತ್ತಭವನುಪೂರ್ವಭವದೊಲವಿಂಮನ | ಪಿತ್ತಾಚರಮಶರೀರಿ ||
ಉತ್ತಮಶಂಭುಕುಮಾರಚಂದ್ರನೊಳೊಲ | ಪಿತ್ತುಕೂಡಿಸುಖಿಸುತಿಹನು ||೧೫||

ತನಗೆಪುಸ್ನತಿಸಾಹಸದಿಂಸೇರಿದ | ಘನತರಮುಪ್ಪವಿದ್ಯೆಯನು ||
ಅನುರಾಗದಿಂದಮನೇಕವನಿತ್ತನು | ವಿನಮಗೇದೆಕೂಡಿಹನು ||೧೬||

ಈರೀತಿಯಿಂದವರೊಡಗೂಡಿಸುಖಿಮಿರ | ಲಾರುಗ್ಮಿಣಿಯೊಂದುದಿವಸ ||
ಸಾರವಸ್ತ್ರವನುಪಾಗುಡಗೊಟ್ಟುತಮ್ಮಣ್ಣ | ನಾರುಗ್ಮಿಣಭೂಪನೆಡೆಗೆ ||೧೭||

ವರಸಚಿವರನಟ್ಟಲವರಾಕೌಂಡಿನ | ಪುರಕೈದಿಯಾರುಗ್ಮಿಣಗೆ ||
ಹರುಷದಿಪಾಗುಡಮಿತ್ತುಬಳಿಕ್ಕಿಂ | ತೊರೆದರು ಎಲೆಭೂಪಾಲ ||೧೮||

ನಿಮ್ಮತನುಜೆವೈದರ್ಭಿಯರುಗ್ಮಿಣಿ | ತಮ್ಮಪಿರಿಯಸುಕುಮಾರ ||
ಕಮ್ಮಗಣೆಯುಗೀವುದೆಂದುನಿಮಗೆಹೇಳ | ಲೆಮ್ಮನಿಮ್ಮಲ್ಲಿಗಟ್ಟಿದಳು ||೧೯||

ಎನಲೆಂದನಿಮ್ಮೊಡೆಯನುಬಂದುಮೊದಲೆಮ್ಮ | ಜನಕನಕೊಂದುಮತ್ತೆನ್ನ ||
ಅನುಜೆಯನೊಯ್ದನಾತನತನಯಂಗೆನ್ನ | ತನುಜೆಯನೆಂತುಕೊಡುವೆನು ||೨೦||

ಅವರಿಗೆಕೊಡುವುದಕಿಂತಮಾತಂಗಗೆ | ಸವಿನಯದಿಂದೀವೆನೆಂದು ||
ಅವರೊಳುಬೆಟ್ಟಿನುಡಿಯನುಡಿದಾಭೂ | ಧವನುಕಳುಹಲವರೆಯ್ದಿ ||೨೧||

ಆರುಗ್ಮಿಣಭೂಪಾಲನೊರೆದಮಾತ | ನಾರುಗ್ಮಿಣಿಯೊಳಗವರು ||
ಆರೈದುಸುರಲಂತದನುಕೇಳ್ದಾಸುಕು | ಮಾರಚಂದ್ರಮನುಪೇಳಿದನು ||೨೨||

ಜನನಿಚಿತ್ತೈಸುರುಗ್ಮಿಣಮಾತುಳತನ್ನ | ತನುಜೆಯಮಾತಂಗರಿಗೆ ||
ಅನ ನಯದಿಂಕೊಟ್ಟಪೆನೆಂದಗಡನಾ | ನನುಕರಿಸುವೆನದನೆಂದು ||೨೩||

ಮೆಲ್ಲಡಿಗಳಿಗೆಮಣಿದುತಾಯಬೀಳ್ಕೊಂಡು | ನಿಲ್ಲದೆಶಂಭುಕುವರನ ||
ಸಲ್ಲೀಲೆಯಿಂಕೂಡಿಕೊಂಡುವಿಮಾನವ | ಫುಲ್ಲಾಸ್ತ್ರನೇರಿಯಾತುಪದಿ ||೨೪||

ಅನಿಲಪಥವೊಳ್ಕೈತಂದಾ ಕೌಂಡಿನ | ಪುರದವೋಗಡೆಯೊಳುನಿಂದು ||
ಮನಸಿಜನೋರ್ವಳುವೃದ್ಧಮಾತಂಗಿಯು | ಸನುರೂಪವವಿದ್ಯೆಯಿಂದ ||೨೫||

ವಿರಚಿಸಲಾವಮಾಯದವೃದ್ಧಮಾತಂಗಿ | ಭರದಿಂದಾಪುರಕಿಳಿದು ||
ಅರಮನೆಗಾಗಿಸಡೆದುಬಂದುರಂಜಿಪ | ಬೆರಕೆವರಲಚಿಬ್ಬಿಲೊಳಗೆ ||೨೬||

ಹೊಸಹೊನ್ನಸರಿಗೆಯುಮೀವುಗಳನುತುಂಬಿ | ವಸುಧಾಧೀಶರುಗ್ಮಿಣಸ ||
ಎಸೆವವೋಲಗಕೆಯ್ದಿನಿಸ್ಸನುಗಳನೆಸ್ಸ | ಬಸಿರೊಳುಬಂದಸಂದನಗೆ ||೨೭||

ಪ್ರೀತಿಯೊಳೀವುದೆನಲುಚೋದ್ಯವಡುತಾ | ಭೂತಳಪತಿಯಿಂತುನುಡಿದ ||
ಮಾತಂಗಿಕೇಳೆಮ್ಮಮಗಳಸುತಪ್ಪನಿ | ನ್ನಾತನಸುಜನತಂದುತೋರು ||೨೮||

ಎಂದುನುಡಿದನುಡಿಗೇಳಿಯುಂತೀಗೆಯ್ವೆ | ನೆಂದುಮಾಯದಮಾತಂಗಿ ||
ಪಿಂದಕೈತಿರುಗಿರುಗ್ಮಿಣಸಾಡಿದಮಾತಿ | ನಂದಪನಾಕಾಮುಗುಸುರೆ ||೨೯||

ಹೊನ್ನಜೊತ್ತಗೆಹೊರಜೆಯುತಿಕ್ಕೆಪಗಲೊಳು | ರನ್ನವಾವುಗೆಕಂಕುಳೆಡೆಯು ||
ಕೆನ್ನೆಯಕೀಲುಳಿಕಣ್ಗೆಸೆಯುಲುಕಡು | ಚೆನ್ನಿಗನಾಚಿತ್ತಭವನು ||೩೦||

ಘಟ್ಟಿಪಟ್ಟೆಯಸೀಳಸುರಳತಲೆಯವೋ | ಲಿಟ್ಟಾಶಂಭುಕುಮಾರ ||
ಮುಟ್ಟಿವುುಯ್ಗಳಚೀರವಿಡಿದುಕಣ್ಣಾಗೆಗಳ | ವಟ್ಟುಬರಲುಬಂದನಾಗ ||೩೧||

ಈಪರಿಯಿಂಮಾತಂಗವೇಷವತಾಳಿ | ಯಾಪಟ್ಟಣದಬೀದಿಯೊಳು ||
ಆಪುರಜನವೆಲ್ಲನೋಡುತಿರಲುತ | ದ್ಭೂಪನಾಲಯಕಾಗಿಸಡೆದು ||೩೨||

ಓಲಗಶಾಲೆಯುಸೆಯ್ದುರುಗ್ಮಿಣಭೂ | ಪಾಲಗೆರಗಿಮೂರದೊಳು ||
ಆಲಿಸಿನೋಲ್ಪರಚ್ಚರಿಪಡುವಂತಾ | ಲೀಲಾನಿಧಿನಿಂದಿರಲು ||೩೩||

ಅವಿಭುವಿಂತೆಂದುನಿರವಿಸಿದನುನೀ | ವಾವವೊಳಲುನಿಮ್ಮಕಾರ್ಯ ||
ಅವುದುಪೇಳೆನಲವನೆಂದರಾದ್ವಾ | ರಾವತಿನಾವಿಪ್ಪನಗರಿ ||೩೪||

ಭೂವರನಿಮ್ಮಸುತೆಯುಮಾತಂಗರ್ಗೆ | ನೀವೀವೆವೆಂದಿರಿಕಂಡ ||
ಅವಾರ್ತೆಯುಕೇಳಿಯಾಸುಕುಮಾರಿಯು | ನಾವುಬೇಡಲುಬಂದೆವೀಗ ||೩೫||

ಎಂದುದಕರಸುವಿರಸನಾಗದೆಸಗು | ತೆಂದಸುತನಗಲ್ಲದವರ್ಗೆ ||
ಸಂದನೆಯುನಕುಡುವುದರಿಂದನಿಮಗೀವು | ದಂದವುಮಾತಂಗರಿರ ||೩೬||

ಸದಮಲತರವುಪ್ಪೀರೂಪಲಾವಣ್ಯ | ದೊದವುಮಾತಂಗರಿಗುಂಟೆ ||
ಇದುನಮಗಚ್ಚರಿಯಾಗಿದೆಯೆನಲವ | ರದಿರಪೆನುಡಿದರಿಂತೆಂದು ||೩೭||

ಹರಿಯಕರುಣದಿಂದೆಮಗೀರೂಪೀ | ಸಿರಿದೊರಕಿತುವೆಣ್ಣೇರುಗಿರಿಯು ||
ಪೊರೆದಕಾಗೆಯುವೈ ಪೊಂಬಣ್ಣವಾಗುವ | ಪರಿಯೊಳಗೆಲೆಭೂಪಾಲ ||೩೮||

ಅರಸುಗಳಾಡಿದುದಕೆತಪ್ಪರವರಿಂ | ತರುಣಿಯುನಮಗೀವುದೆನಲು ||
ಒರೆದನಿಂತೆಂದುನೀವಾದ್ವಾರಾವತಿ | ಪುರವದರಿಂದಲ್ಲಿಯವರ್ಗೆ ||೩೯||

ಕೊಡುವುದಿಲ್ಲಾನೃಪವರ್ಗೆಕೊಡುವೆವೆಂದು | ನುಡಿದನುಡಿಯುಕೇಳುತವರು ||
ಕೊಡದೊಡೆಮಾಣೆಯೆಂದಲ್ಲಿಂ ಪೊರಮಟ್ಟು | ನಡುಬೀದಿಗೆಬಂದುನಿಲಲು ||೪೦||

ಅನಿತರೊಳಾರುಗ್ಮಿಣಭೂಪಾಲನ | ತನುಜೆವಿದರ್ಭೆಶೃಂಗರಿಸಿ ||
ಕನಕವಿರಾಜಿತಕನ್ಯಾಮಾಡವ | ನನುರಾಗದಿಂದೇರಿದಳು ||೪೧||

ಉದಧಿಯೊಳಗೆಯುದಯಿಸಿಚಂದ್ರಲೇಖೆಬಂ | ದುದಯಾದ್ರಿಯನೇರುವಂತೆ ||
ಸುದತಿಶಿರೋಮಣಿಮಣಿಮಯಮಾಡವ | ಮುದದಿಂದೇರಿದಳಾಗ ||೪೨||

ಪ್ರೀತಿಮಿಗಲುಪಿರಿಯುಪ್ಪರಿಗೆಯನಳಿ | ಜಾತೆಯರೊಗ್ಗಿನೊಳೆಯ್ದ ||
ಆತರಳಾಕ್ಷಿಯೇರಿದಳಾಮಾಯದ | ಮಾತಂಗರನೋಳ್ಪೆನೆಂದು ||೪೩||

ನೀಲಕುಂತಳದನಿಬಿಡಕುಚಯುಗದವಿ | ಶಾಲನೇತ್ರದವಿಧುಮುಖದ ||
ಬಾಲೆಯರೊಗ್ಗಿನೊಳೆಯ್ದೇರಿದಳುಭೂ | ಪಾಲತನುಜೆಯುಪ್ಪರಿಗೆಯ ||೪೪||

ವ್ಯೋಮಕೇಶನತಲೆಯೇರುವಗಂಗಾ | ಭಾಮಿನಿಯೆಂಬಂದದೊಳು ||
ಆನಾಮಿತಪಥಚುಂಬಿತಸೌಧವ | ನಾಮೀನಾಕ್ಷಿಯೇರಿದಳು ||೪೫||

ಈತೆರದಿಂ ಹೊನ್ನುಪ್ಪರಿಗೆಯನೇರಿ | ಯೂತಾಮರಸದಳನಯನೆ ||
ಭೂತಳಕತಿಹೊಸತೆಂದೆನಿಸುವವಿ | ಖ್ಯಾತರವರರೂಪುಗಳನು ||೪೬||

ಆದರೊಳಗ್ರಜಪಂಚಬಾಣನರೂಪವ | ವಿದಳಿತವಿಮಲಾಂಬುಜಾಕ್ಷಿ ||
ಎದೆಗೆಟ್ಟುತನ್ನಂಗದೊಳ್ಸಾತ್ವಿಕಭಾವ | ವುದಯಿಪಂದದಿನೋಡಿದಳು ||೪೭||

ಮುಂಡಲಕತಿಹೊಸತೆನಿಸುವಕುಸುಮಕೋ | ದಂಡನಂಗೋಪಾಂಗದೊಳು ||
ಕಂಡಮಾತ್ರದೊಳುಕಣ್ಗಳಪುತ್ರಿಕೆಗಳು | ಚಂಡಿಗೊಂಬಂತೆನೋಡಿದಳು ||೪೮||

ನಾರಿಯನಗೆಗಣ್ವೆಳಗುಹರಿಯುಲುಕು | ಮಾರನಮನವತಾನಡರ್ದ ||
ಚಾರುಸುವರ್ಣಹರ್ಮ್ಯಕೆಹತ್ತಿಸಲಿ | ಟ್ವಾರಜ್ಜುವಿನಂತಾಯ್ತು ||೪೯||

ಕ್ಷತ್ರಕಮಾತಂಗಮನ್ಮಥನುತನ್ನನೆಕಂ | ಡತಿಕಾತುರಚಿತ್ತೆಯಾಗಿ ||
ಮತಿಯನಿಟ್ಟುನೋಡುತಿರ್ಪವಿದರ್ಭೆಯ | ನ್ನತಮಪ್ಪಲಾವಣ್ಯವನು ||೫೦||

ನಡೆನೋಡಿತನ್ನಂಬಿಗೆತಾನೆಗುರಿಯಾಗಿ | ಪೊಡವಿಯೊಳೀಚೆಲುವಿಕೆಯ ||
ಹಡೆದಹೆಣ್ಣಾಳಕಾಣೆನೆಂದುತಲೆಯತೂಗು | ತೊಡನಾರೂಪವಬಿಸುಟು ||೫೧||

ತುರುಗಿನೋಡುತ್ತಿರಲಾಪುರವರವೆಲ್ಲ | ಕೊರವಿಯರಂದವಧರಿಸಿ ||
ಕುರುವಿಡಿನಡುವಿನಕುವರಿಕಾಣ್ಬಂದದಿ | ದುರುದುಂಬಿಗಳುಬಂದರಾಗ ||೫೨||

ಕಂಕುಳಗೂಡೆಕ್ಕೈಯೊಳುಬೆತ್ತದನೆಳೆ | ಶಂಕಿನಮಣಿಕಣೆಗಾಲ ||
ಸೋಂಕಿದುಡುಗೆಸೀರುದಲೆಯಕೊರವಿಯರ | ದೇಂಕಡುದೇಸಿವಡೆದರೋ ||೫೩||

ಈಚೆಲ್ವೀಜವ್ವನಮಾಲಾವಣ್ಯ | ವಾಚಕುರತೆಯಾವೇಷ ||
ಭೂಚಕ್ರದೊಳಾರ್ಗವಿಲ್ಲೆಂದು ಜನವಾ | ಲೋಚಿಸಿನಡೆನೋಡುತಿರಲು ||೫೪||

ಮುನ್ನ ಹೋದುದನೀಗ ಮನದೊಳಗಿರ್ದುದ | ನಿನ್ನು ಮುಂದಕೆಬಪ್ಪುದನು ||
ಚೆನ್ನಾಗಿಪೇಳುವೆವೆಂದೆಯ್ದುತಿರಲಾ | ಕನ್ನೆವಿದರ್ಭೆಯಾಳಿಯರು ||೫೫||

ಕಂಡುಭರದಿಕನ್ಯಾಮಾಡಕ್ಕೊಡ | ಗೊಂಡುಪೋಗಲುಕುವರಿಯನು ||
ದುಂಡಿನಿನ್ನಯಕ್ಕೈಯತೋರು ನೀನುಂಡೂಟ | ಕಂಡಕನಸಹೇಳುವೆನು ||
ಏಕೆತಡವುಮೊರಕಕ್ಕೆಯತರಿನೆಂ | ಬಾಕೊರವಿಗೆಕ್ಕೈಯನೀಡಿ ||
ನಾಕಂಡಕನಸಾವುದುಂಡೂಟವಾವುದೆಂ | ದಾಕಂಜಮುಖಿಬೆಸಗೊಳಲು ||೫೬||

ವಿಲಸತ್ತ್ರಿಜ್ಞಪ್ತಿಯೆಂಬವಿದ್ಯೆಯಿನಾ | ಲಲನೆಕೇಳಿದಮಾತುಗಳನು ||
ತಿಳಿದವಳುಂಡೂಟಕಂಡಕನಸನೆನಿ | ಸುಳಿಯದೆಪೇಳ್ವಳಿಂತೆಂದು ||೫೮||

ವನಿತೆನೀನಿಂದಿನಿರುಳುಕಾವನಕೈಯ | ನನೆವಿಲ್ಲನಲಂಬುಗಳನು ||
ಕನಸಿನೊಳಗೆಕಂಡುದು ಹುಸಿಯಲ್ಲೆಂ | ದೆನುತವಳುಂಡೂಟವನು ||೫೯||

ಒಂದಿನಿಸುಳಿಯದೆಪೇಳೆಕೇಳುತಬಿಸ | ಪಂದವಡೆದುವೈದರ್ಭೆ ||
ಒಂದಿದಹರುಷದಿನೇಕಾಂತಕೊಡಗೊಂಡು | ಬಂದಿಂತೆಂದಾಡಿದಳು ||೬೦||

ಕೌರವಿಯುರಿರಸನ್ನಮನಸಿನೊಳಿರ್ದುದ | ತೆರದರಸನುಮಾಳ್ಪುದೆನಲು ||
ತಿರಷ್ಪುಗಂಗಳತೆಳುವಸಿರತರುಣಿನಿ | ನ್ನೆರಕವನಿರದುಸುರುವೆನು ||೬೧||

ಎನುತೆಣ್ಗಣಾಕ್ಷಿಯಕ್ಕೈಯಹಿಡಿದುನೋಡಿ | ವನಿತೆನೀನೋರ್ವಮಾದಿಗಗೆ ||
ಮನವಿತ್ತೆಬೇನಹೇಳುವೆನೆನಲದುಪುಸಿ | ಯೆನುತಮುಗುಳ್ನಗೆಯಿಡಲು ||೬೨||

ಮುಚ್ಚುಮರೆಯಿದೇಕೆಮುಗುಧೆಮೊದಲುನೀ | ನಿಚ್ಚೈಸಿದವನಿನ್ನೆಡೆಗೆ ||
ಮೆಚ್ಚಿಬಂದಪನೆನ್ನಮಾತಾಳಿಯಾಣೆನೀ | ನಚ್ಚುಕವನುಮಾಡಬೇಡ ||೬೩||

ಎಂದವಳೊಳುಮೆಚ್ಚುಗೊಂಡಾಯೆಡೆಯಿಂ | ಬಂದಾತೂಪವವಿಸುಟು ||
ಹಿಂದಣಮಾತಂಗರೂಪಕ್ಕೈಕೊಂಡ್ಯ | ತಂದಾಪಂಚಮಾರ್ಗಣಸು ||೬೪||

ತರುಣೀಮಣಿವೈದರ್ಭೆಯುಮುಂದೆಬಂ | ದಿರಲಾತನಚೆಲ್ವಿಕೆಯು ||
ಪಿರಿದುನೋಡಿಮತ್ತೆಸಾತ್ತ್ವಿಕಮುದಯಿಸಿ | ಮರವಿಟ್ಟುಮೈಯುಮರೆದಳು ||೬೫||

ಅವನವಕ್ಷಸ್ಥಲವೆಂಬಮಂಟಪದೊಳ | ಗೆವೆದೆರೆದೆಗೆಯುದೊಪ್ಪದೊಳು ||
ಅವಳವಿಲೋಲಲೋಚನಪುತ್ರಿಕೆಗಳು | ಸವಿನಯದಿಂನಟಿಸಿದುವು ||೬೬||

ಚಾರುಕಟಾಕ್ಷಮರೀಚಿನಟಿಸುತಿರೆ | ತಾರಿವೆಗಳನಿನಿಸಿಡದೆ ||
ನಾರೀಮಣಿನೋಡುತಿರಲಾಮಾರಕ: | ಮಾರನಿಂತೆಂದಾಡಿದನು ||೬೭||

ತಪವೇಕೆತರಳವಿಲೋಚನೆಜೀವನ | ಸ್ನೊಡವಂದುಮಾರಜೇಕೇಳು ||
ಬಿಡುಸಂದೇಹವನೆಂದೆತ್ತಿಕೊಂಡುಬಾಂ | ಗಡೆಯುವಿಮಾನಕ್ಕೆತಂದು ||೬೮||

ರಂಭೋಪಮಾತೂಪಿಯೆಡಗಡೆಬಲದೊಳು | ಶಂಭುಕುಮಾರಕುಳ್ಳಿರಲು ||
ಅಂಭೋರಾಶಿಯುನಡುವಣೂರಿಗೆ ಲೋಕ | ಭುಂಭುಕನಿರದೈತಂದು ||೬೯||

ಬಳಿಕಲವೊಳಲುದ್ಯಾನದೊಳಗೆಬಂ | ದಿಳಿದುವಿದ್ಯಾದೇವತೆಯರ ||
ಕಳುಹಿಸಗಂಧಮಾಲ್ಯಾಂಬರಭೂಷಣ | ಗಳನತಿವೇಗದಿಂತರಿಸಿ ||೭೦||

ತನ್ನಕೈಮುಟ್ಟಿಕುಸುಮಮಾರ್ಗಣನಾ | ಕನ್ನೆವೈದರ್ಭೆಯುನೊಲಿದು ||
ಚೆನ್ನಾಗಿಸಿಂಗರವನುಮಾಡಲೆಸೆದಳು | ರನ್ನಕೆಚಿನ್ನವಿಟ್ಟಂತೆ ||೭೧||

ಶೃಂಗಾರಕೆತಾನೆಶೃಂಗಾರವಾದಾ | ಅಂಗನೆಯುನಡೆನೋಡಿ ||
ಅಂಗಜರಾಜಕುಮಾರನುತನ್ನಮ | ನಂಗೊಳಿಸುವಹಾರವನು ||೭೨||

ಜೀವುಮಾಡಿಕೊಟ್ಟೆಲೆಪೆಣ್ಣೆನೀನಿದ | ನೀವೂರೊಳುನನಗೆಣೆಗೆ ||
ಓವದೆಮಾರೆಂದುನೇಮಿಸಿವಿದ್ಯಾ | ದೇವತೆಯುರನತಿಮುದದಿ ||೭೩||

ಪರಿವಾರನಾರಿಯುರನುಮಾಡಿಛತ್ರಚಾ | ಮರವ್ಯಜನಾದಿಯುಪಲವು ||
ಪರಿಯುಸಿಯೋಗವನಿರ್ವರ್ತಿಸಿಯಾ | ತರುಣಿಯೊಡನೆಕಳುಹಿದನು || ||೭೪||

ಪಿರಿದಪ್ಪರೂಪುವಡೆದುಬರ್ಪಕೃತ್ರಿಮ | ತರುಣಿಯುರೆಡೆಯಾಕೆಮಣಿ ||
ಸುರಸತಿಯುರಮಧ್ಯದೊಳುಬರ್ಪಾಶಚಿ | ಯಿಂತವೆನೆಕಣ್ಗೊಪ್ಪಿದಳು ||೭೫||

ಅನುರಾಗದಿಂಬೀವಕೊಳ್ಳಿಯುವಲಶಿವ | ಕೆನುತಾಕೃತಕಪಾತಂಗಿ ||
ಜನಜಾತ್ರೆಯಾಗಿಕಾವರೆಗೊಂಡಾಪುರ | ಜನವಿವಾಕ್ಷಿಪಂತ್ಯೆದಿದಳು ||೭೬||

ಕಣ್ಣಮುಂದಣಕೈಗೆಲಸವೆಲ್ಲವಬಿಟ್ಟು | ಉಣ್ಣದುಡದೆಪರಿತಂದು ||
ಬಣ್ಣದುಟಿಯಬಾಲೆಯನಲ್ಲಿಯಗಂಡು | ಪೆಣ್ಣೆಲ್ಲನೆರೆದುನೋಡಿದುದು ||೭೭||

ಚಿನ್ನವರದರುಪರದುಗೈಯಲಿಂದಿರ್ದ | ಹೊನ್ನುಹಣವನೆಲ್ಲವನು ||
ಮನ್ನಿಸದಲ್ಲಿಬಿಸುಟುನಡೆತಂದಾ | ಚೆನ್ನೆಯನಡೆನೋಡಿದರು ||೭೮||

ಸನ್ಯಾಸಿಗಳುತಮ್ಮವೇದಶಾಸ್ತ್ರಗಳನು | ಪನ್ಯಾಸಂಗಳಮರೆದು ||
ದೈನ್ಯದೃಷ್ಟಿಗಳಿಂದನೋಡಿದರಾರಾಜ | ಕನ್ನೆಯಸೌಂದರಿಯವನು ||೭೯||

ದೊರೆದೊರೆಗಳು ತಮ್ಮವೈಭವವನುಪರಿ | ಹರಿಸಿಬಡವರಂದದೊಳು ||
ನೆರೆದನೆರವಿಯೊಳಗೇಕಾಂಗಿಗಳಾಗಿ | ಗರುವೆಯನಿಂತುನೋಡಿದರು ||೮೦||

ಅಂಗಡಿಗಳುಸೂರೆಹೋಹುದಮರೆದೇ | ಳ್ದಂಗಡಿಕಾರರಾತುರದಿ ||
ಪಿಂಗದೆಪೀಲಿದುರುಂಬಿಸಬಲೆಯವು | ಸಂಗೊಳಿಸಡೆನೋಡಿದರು ||೮೧||

ಅಸುವನುಹಡೆದಪರಂಜಿಯಪುತ್ರಿಕೆ | ಉಸುರಹಡೆದರನ್ನಬೊಂಬೆ ||
ಪೊಸನಡೆಗಲಿತಚಿನ್ನದಚಿತ್ರವೆಂದಾ | ಅಸಿಯಳನಡೆನೋಡಿದರು ||೮೨||

ಮಾತುಗಲಿತಕನ್ನಡಿಕಣ್ಣಹಡೆದಕಂ | ಜಾತಕಲಂಕುಗಾಣಿಸದ ||
ಆತಿಂಗಳಬಿಂಬವೆನೆನೋಡಿದರು ಸಂ | ಪ್ರೀತಿಯಿಂದವಳಾಸ್ಯವನು ||೮೩||

ಅಳಿಕಳಭಗಳುಕುಳ್ಳಿರ್ದಸಿತಾಂಬುಜ | ದಳವೊಬೆಳ್ಗರಿಯುದಯಿಸಿದ ||
ಅಳಿಕಳಭಗಳೋಯೆಂದಾನೀರೆಯ | ಲಲಿತನೇತ್ರವನೀಕ್ಷಿಸಿದರು ||೮೪||

ಮಧುರತೆವಡೆದಮಾಣಿಕಬಲಿಯದಬಾಲ | ವಿದುಕಡುಗೆಂಪುದ್ಭವಿಸಿದ ||
ಸುಧೆಯಲ್ಲದೆಮತ್ತೊಂದಲ್ಲವೆಂದವ | ಳಧರವನೆರೆನೋಡಿದರು ||೮೫||

ಕ್ರೂರತೆಯನು ಕುಂದುಮಾಡಿಮೆರೆವಕಂ | ಠೀರವನೋಮೃದುವಡೆದ ||
ಚಾರುಕನಕಲತೆಯೋತಪ್ಪದೆಂದಾ | ನಾರಿಯನಡುವನೋಡಿದರು ||೮೬||

ಪಸುಳೆದಳಿರೊ ಪವಳದಪಾವುಗೆಗಳೊ | ವಿಸುಪಕೆಂದಾವರೆಯಲರೊ ||
ಅಸಿಯಳರುಣಪದತಳವೋಯೆನುತೀ | ಕ್ಷಿಸುತಿರಲಾಪುರಜನವು ||೮೭||

ಅಲರಂಬುಗಳಾವನಕೈಯೊಳುಂಟವ | ನೊಲಿದಿತ್ತನ್ನೀಕೈಯ ||
ಸುಲಲಿತಮಪ್ಪೀಮಣಿಮಾಲೆಯಬೀವ | ಬೆಲೆಗೊಳಿಮೆಸುತಬೀದಿಯೊಳು ||೮೮||

ಬಳಸಿನೋಳ್ಪರಕಣ್ಮನವಸುಹರಿಸೂರೆ | ಗೊಳುತಜಂಗಮಲತೆಯಂತೆ ||
ತಳಿರಡಿದಳಿದಕುಸುಮಗಂಧಿಯರಾಜ | ನಿಲಯಕಿರದೆನಡೆತರಲು ||೮೯||

ಅಲ್ಲಿಯೋರ್ವಳುಬಂದಾ ಅಂಗಜನಪಟ್ಟ | ವಲ್ಲಭೆರತಿದೇವಿಯೊಡನೆ ||
ಸಲ್ಲಲಿತಾಂಗಿಯುವಳಬರವನುತಾ | ನಿಲ್ಲದೆಪೇಳ್ದಳಿಂತೆಂದು ||೯೦||

ದೇವಿಬಿನ್ನಪನಮ್ಮಮನೆಗೆ ಉತ್ತಮಹಾವ | ಭಾವವಿಲಾಸಸಂಪನ್ನೆ ||
ಆಪಾಣಿಯಾಲಕ್ಷ್ಮಿಯಂತೋರ್ವಳತಿಮುಗ್ಧೆ | ಬೀವಸುಬೆಳೆಗೊಳ್ಳಿಮೆನುತ ||೯೧||

ಬರುತಿರ್ದಪಳೆನೆಕೇಳ್ದಿಂತೀಯ | ಚ್ಚರಿಯನಿರೀಕ್ಷಿಪೆನೆನುತ ||
ಹರುಷದಿಂದಾರತಿದೇವಿಯುದಧಿಯನು | ಕರೆಸಿಕೊಂಡೊಡನೆಯ್ದಿದಳು ||೯೨||

ಕ್ಷಿತಿತಳಕತಿಶಯಮೆನಿಪರೂಪಾನ್ವಿತೆ | ಕೃತಕಮಾತಂಗಿಲೋಲಾಕ್ಷಿ ||
ರತಿಯಮುಂದೆಬಂದಿಂತುಸುರಿದಳುಸ | ಸ್ಮಿತಕೋಕಿಲಾಲಾಪದಿಂದ ||೯೩||

ಅಲರಶರವನು ಎನಗೆಕೊಟ್ಟೀಬೀವ | ಬೆಳೆಗೊಳ್ಳಿಯೆನುತನುನಯದಿ ||
ಲಲಿತಾಂಗಿನುಡಿಯಲಂತದಕಾರತಿನಕ್ಕು | ಎಲೆಮಾಯದಮಾತಂಗಿ ||೯೪||

ಅರಲಂಬನೀಬೀಪಕೊಟ್ಟುಪಡೆಪೆನೆಂಬ | ಮರುಳುತನದಮಾತೇಕೆ ||
ಸ್ಮರನರೂಪವನೋಡೆನಿನ್ನಮನಸಿನೊಳ | ಗರಲಂಬುಗಳುನಟಿಸುವುವು ||೯೫||

ಎನಲವಳೆಂದಳೆಲೇದೇವಿನೀನೆನ್ನ | ಮನಕೆಬಾರದುದನುಡಿವರೆ ||
ಎನಗೆನ್ನನುತಂದಮಾತಂಗನಿಂದಾ | ಮನಸಿಜನೇನಗ್ಗಳನೊ ||೯೬||

ಅವನಾಲೋಕನಾತವೆಯಲರಂಬಿನ | ನಿವಹಪಲ್ಲವೆಯದರಿಂದ ||
ಅವನನೋಡಿದಲೋಚನಗಳುಕೂಪಕಂ | ಭವನೆಮ್ಮಿದಕಾಂಕನಿದವು ||೯೭||

ಎನೆಕುರುಪತಿಯಕುಮಾರಿಯುದಧಿಯೆಂದ | ಳನಿಮಿಷಲೋಚನೆಯಿವಳು ||
ಜನನುತವಂಶವಲ್ಲದೆದುಷ್ಕುಲನಂ | ಜನಿತೆಯಲ್ಲವಳುಭಾವಿಸಲು ||೯೮||

ಅಲ್ಲದಕುಲದನಾರೀಚೆಲ್ವೀಭಾಗ್ಯ | ಮುಲ್ಲಸವೆತ್ತೀಚದುರು ||
ಎಲ್ಲಿಯುದೆಲೆರತಿನಿಮ್ಮಾತನಗೊಡ್ಡ | ವಲ್ಲದೆಪೆರತೊಂದಲ್ಲ ||೯೯||

ನಿರತಮಿದೆಂದುನುಡಿಯುತಿರಲದನೋರ್ವ | ಪರಿಚಾರಕಿಕಂಡುಬಂದು ||
ಅರಸಿರುಗ್ಮಿಣಿಗರುಪಲುಕೇಳ್ದಾತ್ಯಾ | ತುರದಿಂದಕರೆಯಲಟ್ಟಿದಳು ||೧೦೦||

ಅರಸಿಕರೆಸಲತಿವಿಭವದಿಂದೈತಪ್ಪ | ಗರುವೆಮಾತಂಗಸತಿಯನು ||
ನೆರೆದಂತಃಪುರದಬಲಾನೀಕವ | ಚ್ಚರಿವಟ್ಟುನಡೆನೋಡುತಿರಲು ||೧೦೧||

ಆರಾಜಮುಖಿಯುಬಳಸಿದವಿದ್ಯಾಪರಿ | ಚಾರಕಿಯರಮಧ್ಯದೊಳು ||
ತಾರಾಸತಿಯರನಡುವಣರೋಹಿಣಿ | ರಾಜಿಸುವಂತೊಪ್ಪಿದಳು ||೧೦೨||

ಈತೆರದಿಂ ಬಂದಕೃತಕವಮಾತಂಗಿಯು | ರೀತಿಗೆಬಿಸವಂದವಡೆದು ||
ನೀತಿನಿಪುಣೆರುಗ್ಮಿಣಿದೇವಿಯುವಳೊಳು | ಮಾತನಿಂತೆಂದಾಡಿದಳು ||೧೦೩||

ಬಾಲೆನೀನೇನವಮಾರುವೆ ಏನಕೊಂಡಪೆ | ಪೇಳೆನಲಿಂತೆಂದಳವಳು ||
ಲೀಲೆಯಿಂದರಲಂಬುಗೊಂಡೀನವಮಣಿ | ಮಾಲೆಯುಬೀವಮಾರುವೆನು ||೧೦೪||

ಎಂದವಮಾತಿಗೆ ಶಂಕೆಯೊಳಾರು.ಗ್ಮಿಣಿ | ಕಂದರ್ಪನುತನ್ನೊಡನೆ ||
ಬಂದುಬೆಸನಬೇಡಿಕೊಂಡಲ್ಲಿಗೆ ಪೋ | ದಂದವುಸರಿದುಚಿತ್ತದೊಳು ||೧೦೫||

ಮರೆಬೇಡಮಗಳೆ ನಿನ್ನೀವೃತ್ತಾಂತವ | ಕರೆದವರಸನುವಸಾಪ್ಪದೆನಲು ||
ನೆರವೇರೆಮೊಗದಮಾನಿಸಿಲಜ್ಜಿಸಿಮುಂಡೆ | ಯೆರಗಿಮೌನದೊಳಿರುತಿರಲು ||೧೦೬||

ಇನ್ನೇಕೆವಮೌನತಿಳಿಯಪೇಳೆಂವಾ | ಸನ್ನುತಕೀರಿಕೇಳಿದೊಡೆ ||
ತನ್ನತಾಮರೆಗೈಯುಮುಗಿದಾ ಹೆಂಗಳ | ರನ್ನಯಿಂತೆಂದುಪೇಳಿದಳು ||೧೦೭||

ವಿನುತವಿದರ್ಭವಿಷಯುದೊಳಗೆಸೆವಕೌಂ | ಡಿನಪುರದರಸರುಗ್ಮಿಣಸ ||
ವನಿತೆಲಕ್ಷ್ಮೀಮತಿಯುವರೀರ್ವರ ನಿಜ | ತನುಜೆವಿದರ್ಭೆಯೆಂಬವಳು ||೧೦೮||

ಸಾನಿದ್ದನೆಲೆಗೀರ್ವರು ಮಾತಂಗ | ರಾಸದೆಯ್ದಿದರವರೊಳಗೆ ||
ಭೂಸುತರೂಪಯುತನು ಪಿರಿಯವನೆನ್ನ | ನೀನೆಲೆಗಿರದೆಯ್ದಿಸಿದನು ||೧೦೯||

ಎನುತತನ್ನ ಸುತಂದ ಸುಪ್ರಪಂಚವನೊಂ | ದಿನಿಸುಳಿಯದೆಪೇಳಿಕೇಳಿ |
ಆನಿತರೊಳಾರುಗ್ಮಿಣಿದೇವಿಯೆದ್ದು ಬಂ | ದನುರಾಗದಿಂದಪ್ಪಿದಳು ||೧೧೦||

ಬಳಿಕಕಣ್ಬನಿಗಳ ಸುರಿವುತೆಲೇ ಕೋ | ಮಲೆಮುನ್ನ ಕೈಟಭಾಂತಕನು ||
ಮುಳಿದುಬಂದೆನ್ನ ಜನಕನನಾಹವಮುಖ | ದೊಳಗೆಮಡಿಹಿತಂದನೆನ್ನ ||೧೧೧||

ಇಂದಾತನಸುತನಂಗಜನಿನ್ನನೀ | ಯುಂದದಿಬರಿಸಿದನೆನುತ ||
ಇಂದುವದನೆಯುವಳನುತನ್ನ ಕೆಲದೊಳು | ತಂದುಕುಳ್ಳಿರಿಸಿಕೊಂಬಾಗ ||೧೧೨||

ಸ್ಮರನಾಶಂಭುಕುಮಾರಸಹಿತಬಂದು | ವರಜನನಿಯುಪದಯುಗಕೆ ||
ಹರುಷದಿಯೆರಗಲುಹರಸಿಕುಳ್ಳಿರಿಸಿಯಿಂ | ತೊರೆದಳುನೀರುಗಣ್ಣಿಂದ ||೧೧೩||

ಮಗನೆನೀನೆನ್ನಗ್ರಜಾತನನೇನೆಂದು | ಬಗೆಯುದೆಪೆಣ್ಣಾತಂದೆಯಲಾ ||
ವಿಗೆದುಃಖವೆಮ್ಮಂದೆಮ್ಮತವರುಮನೆ | ಗೊಗೆದುದುಕಡುಪಿರಿದಾಗಿ ||೧೧೪||

ಎಂದುಮತ್ತಿಂತೆಂದಳೆಲೆತನುಜಾತನೀ | ನಿಂದೆನ್ನಪಿರಿಯಣ್ಣನನು ||
ಇಂದುವದನೆಲಕ್ಷ್ಮೀಮತಿಯುಸುಕರೆ | ಸೆಂದೊಡಂತೇಗೈವೆನೆಂದು ||೧೧೫||

ಭರದಿಂದವಿದ್ಯೆಯುಬರಿಸಿನಾರದನನು | ಕರೆಸಿಕಳುಹಲಾಕ್ಷಣದೊಳು ||
ಹರುಷದಿಕೌಂಡಿನಪುರಕೆಬಂದಾನೃಪ | ವರರುಗ್ಮಿಣನನುಕಂಡು ||೧೧೬||

ಚತುರತೆಯಿಂದೊಡಂಬಡಿಸಿಬಳಿಕಭೂ | ಪತಿಯನಲಕ್ಷ್ಮೀಮತಿಯನು ||
ಅತಿವಿಭವದೊಳುದ್ವಾರಾವತಿಪುರಕಾ | ಯತಿತರಲರಿದುಮುರಾರಿ ||೧೧೭||

ಇದಿರ್ವಂದುಪುರಕೊಡಗೊಂಡುಬಂಡತಿಸಂ | ಮುದದಿಂದರಮನೆಗೈದಿ ||
ವಿದಿತವಿಭವದಿಂದಾವಿವರ್ಭೆಯನಾ | ಮದನಗೆಮದುವೆಮಾಡಿದನು ||೧೧೮||

ಬಳಿಕರುಗ್ಮಿಣಭೂಪತಿಗೆಸಂತಸದಿಂ | ವಿಲಸಿತಮುಪ್ಪವಸ್ತುವನು ||
ನಳಿನನಾಭನುಮುಯ್ಯನಿತ್ತುಬೀಳ್ಕೊಡೆತಮ್ಮ | ಪೊಳಲನೈದಿದನುಮತ್ತಿತ್ತ ||೧೧೯||

ಮನಸಿಜನಾವಮಾನಿನಿರತ್ನಗಳೊಳ | ಗನುದಿನಸುಖಮಿರ್ದನೊಸೆದು ||
ಅನಿಮಿಷಪತಿಯುರೊಳಮರಾಧೀಶ್ವರ | ನನುಭವಿಸುವಮಾಳ್ಕೆಯೊಳು ||೧೨೦||

ಮಂಗಲಗುಣಮಣಿಗಣಭೂಷಿತನು | ತುಂಗಪರಾಕ್ರಮಯುತನು ||
ಅಂಗಜಕವರನೊಪ್ಪಿದನುಸತ್ಕವಿಜನ | ಜಂಗಮಕಲ್ಪಭೂರುಹನು ||೧೨೧||

ಇದುಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗೊದವಿದಾಶ್ವಾಸೈಕವಿಂಶ ||೧೨೨||

## ಇಪ್ಪತ್ತೊಂದನೆಯ ಸಂಧಿ ಸಂಪೂರ್ಣಂ



# ೨೨. ನೇಮೀಶ್ವರೋದಯ ಸಂಧಿ.

ಶ್ರೀಮದಮರಪತಿಮೌಳಿಕೀಲಿತಪಾದ | ತಾಮರಸದ್ವಯಸಜಗೆ ||
ಕಾಮಮದೇಭಹರಿಗೆನೇಮಿಜಿನಪತಿ | ಗಾಮೋದವೆತ್ತರಗುವೆನು ||೧||

ಹರಿವಂಶತಿಲಕನಾನತನೃಪಮಸ್ತಕ | ವರಮಣಿಮಕುಟಾಂಘ್ರಿಯುಗಲ ||
ನಿರುಪಮಗುಣಭೂಷಣನಬ್ಧಿವಿಜಯಭೂ | ವರಚಂದ್ರಮನೊಪ್ಪಿದನು ||೨||

ಕಾರಣಪುರುಷರುವಸುದೇವಬಲಭದ್ರ | ನಾರಾಯಣಮನ್ಮಥರು ||
ಚಾರುಚರಣಮೂಲದೊಳ್ ಮುಗ್ಗುತಿರಲಾ | ಧೀರಲಲಿತನೊಪ್ಪಿದನು ||೩||

ಆಪೃಥಿವಿಪನನಿಜಾಂಗನೆಸಕಲಕ | ಲಾಪರಿಣತೆಪುಣ್ಯವಂತೆ ||
ರೂಪವಿಲಾಸಾನ್ವಿತೆಗುಣಭೂಷಣೆ | ಯಾಪೆಣ್ಮಣಿಶಿವದೇವಿ ||೪||

ಆವಳಸೌಂದರ್ಯಮವಳನವಲಾವಣ್ಯ | ಮವಳಸಲ್ಲಲಿತವಿಲಾಸ ||
ಆವಳವಿವೇಕದೊದವುಭಾಪಿಸಿದೊಡೆ | ಭುವನದೊಳತ್ಯಾಶ್ಚರ್ಯ ||೫||

ಅರಲೆಯುಪಾದುಕಕರಗಿನರಸವನು | ಪರಿಪೂರಿಸಿದಂದವಾಗಿ ||
ತರುಣಿಯಮೃದುಪಾದತಳದೊಳರುಣರುಚಿ | ಯಿರವುಮನೋಹರಮಾಯ್ತು ||೬||

ಉಗುರೆಂಬುವೈದೈದುನಗೆಗಣ್ಗಳಿಂಧಗ | ಧಗಿಪಶುಕ್ತಿಯುಚರಮಾಂಗ ||
ಸೊಗಯಿಸುವಂತಾಸೊಬಗುಗಾತಿಗೆಪೊಗು | ಮಿಗೆರಂಜಿಸಿದುವುಮೇಗಾಲು ||೭||

ಲಲಿತಾಂಘ್ರಿಕೂರ್ಮಪೀಠದಮೇಲೆಜಂಘೆಯೆಂ | ಬಲರಶರದಬತ್ತಳಿಗೆಯ ||
ನೆಲಸಿವಜ್ರದಮೊಳೆಗೊಟ್ಟಂತಿರೆಸೆದುವು | ಲಲನೆಯಗೂಢಗುಲ್ಫಗಳು ||೮||

ಬಾಲಕದ್ರೇಣುಕರಕೆಸಮಪಾದಾ | ಬಾಲೆಯಬಟ್ಟದೊಡೆಗಳು ||
ಬಾಳೆಯಕಂಬಶಾವೆಣೆಯೊಂಬಗರ್ವದಿ | ಬಾಳೊಂದೇತಮಗಾಯ್ತು ||೯||

ಅಂಗಜಭೌತಿಕನತಿಸಂಯಮಿಗಳಬೆ | ಡಂಗಬೇಯಿಸಿದಭಸ್ಮವನು ||
ಪಿಂಗದೆಕೀಪಿದಾಧಾರದಗುಂಡಿಗೆ | ಯಂಗೆಲ್ದುವನಳನಿತಂಬ ||೧೦||

ಒಡಬಾಸೆಸುಳಿನಾಭಿಯಿರ್ದಕಾರಣದಿಂದ | ಮಡದೀಮಣಿಗೆಸಂಶಯುದಿ ||
ನಡುವುಂಟೆಂಬುದನರಿವರಲ್ಲದೆಯುದ | ನಡೆನೋಡಿಕಂಡವರಿಲ್ಲ ||೧೧||

ತನುಮಧ್ಯದೊಳುನಿಂದಲಾವಣ್ಯಜಲದೊಳು | ತನುಸ್ತೊಬಗಿನಸಣ್ಣ ಸೋನೆ ||
ಹನಿವಾಗಲೊದಕಿರಿಯುಬಟ್ಟೆದೆರೆಯೆನೆ | ವನಿತೆಯನಾಭಿಯೊಪ್ಪಿದುದು ||೧೨||

ಅಂಗಜನೊಲಿದವರೊಳಗಲದವೋಹಿಜ | ಸಂಗಸಂಜಬೇಡೆಂದು ||
ಪಿಂಗದೆಪಿಡಿದೆತ್ತಿದಭಯಹಸ್ತದರೇಖೆ | ಯಂ ಗೆಲ್ದುವವಳವಳಿಗಳು ||೧೩||

ಸುಳಿನಾಭಿಯೆಂಬಕೂಪದೊಳೊಗೆದಸಿತೋ | ತ್ಪಲನಾಳವುತಿರಂಜಿಸಂತೆ ||
ಲಲಿತಲತಾಂಗಿಯತನುಮಧ್ಯದೊಳಗೆಕ | ಣ್ಗೊಳಿಸಿದುದಾರೋಮರಾಜಿ ||೧೪||

ಎಟವಿತತಿಗೆವಿಷಪುವೂರಿಸಿಸಂ | ಕಟವಮಾಳ್ಪವೋಹಸರ್ಪಗಳ ||
ಘಟಯುಗವೆನೆಗುರುಕುಚಗಳೊಪ್ಪಿದುವಾ | ಚಟುಲಚಕೋರಲೋಚನೆಗೆ ||೧೫||

ವರವೈರಿವದನವಿಧುವನೋಡಲೊಲ್ಲದೆ | ಧರಣಿಗೆವೊಗವೂಗಿಜೆಳೆದ ||
ಅರುಣಾಂಭೋರುಹನಾಳಗಳೆನಲಾ | ತರುಣಿಯತೋಳ್ಗಳೊಪ್ಪಿದುವು ||೧೬||

ಶೃಂಗಾರಶರಧಿಯೊಳೊಗೆದೆಳ್ವವೊಗವೆಂಬ | ತಿಂಗಳಬೆಂಗಡೆಯುದಿಸಿ ||
ಪಿಂಗದೆಸಿಗೆವಕಂಬುವಿದೆಂಬಂತೆಬೆ | ಡಂಗಾದುದವಳಸುಣ್ಗೊರಲು ||೧೭||

ಉರಗಸುಂಡುಗುಳ್ವುನ್ನತವ್ಯಾಧಿವಡೆದಾ | ಕರಿವದನನಶಾಪವಡೆದ ||
ವರವಕ್ತ್ರಸಾವದೋಷಾಕರನಾಕೆಯ | ಸಿರಿವೊಗಕೆಣೆಯೆನಬಹುದೇ ||೧೮||

ಮಾಣಿಕ್ಯಮಣಿಗರಡಿಗೆಮಧುರತೆಯಿಕ್ಕೆ | ದಾಣಸುಗಂಧದಬರಣೆ ||
ವಾಣಿಯನೆಲೆವನೆಯಾಯ್ತುಬಾಯ್ದೆರೆಯಾ | ಏಣಾಂಕನಿಭನಿಜಮುಖಿಗೆ ||೧೯||

ಮುತ್ತಿನಸರವೊಮುಗುಳ್ಗಣೆಯನಸೊಂಪು | ವೆತ್ತಸತ್ಕೀರ್ತಿವಲ್ಲರಿಯ ||
ಬಿತ್ತಿನಸಾಲೊವಜ್ರದಪಜ್ಞಗಳೋ | ಮತ್ತಕಾಶಿನಿಯದಂತಗಳೊ ||೨೦||

ಮುಗುದೆಯಮುಖದನಾಸಾಚಂಪಕದರೆ | ಮುಗುಳವಾಸನೆತುಂಬಿವರಿಗೆ ||
ಪಗೆಯಾದುದಿಲ್ಲವಗುಣದಿರವುಂಟೇ | ಸುಗುಣಿಗಳನುಪೂರ್ವಿದವರ್ಗೆ ||೨೧||

ಗಹವೆಯಗಂಡವುಂಡಲದಗುಣವನವ | ಧರಿಸಿದತಂಬುಲದೆಲೆಗೆ ||
ಸುರತೋದ್ದೀಪನಕಾರಿನೀನಾಗೆಂದು | ವರಪಿತ್ತಮುದನವಿರಿಂಚಿ ||೨೨||

ಮುಕ್ತ್ಯೈದೆತನದಶೃಂಗಾರಕೆತಾನಿಂಬು | ವೆತ್ತುರಂಜಿಸುವಕಾರಣದಿ ||
ವೃತ್ತಪಯೊಧರಯುಗಳೆಯಕರ್ಣವೊಂ | ದುತ್ತಮಿಕೆಯನೇನೆಂಬೆ ||೨೩||

ಬಟ್ಟಜವ್ವನದಬಾಲೆಯವೊಗದೊಳಗಳ | ವಟ್ಟುನಿಶಿತಗುಣವಾಂತ ||
ದಿಟ್ಟಿಗಳೋಧೀರೋದಾತ್ತರೆದೆಯೆ | ರಿಟ್ಟಿಗಳೋಭಾವಿಸಲು ||೨೪||

ಅಂಕದಮುಖಕಿದಿರಾದವಿರಕ್ತರ | ಬಿಂಕವನಂಗಜನವಳ ||
ಕೊಂಕಿದಪುರ್ಬೆಂಬಬಿಲ್ಗೆ ಹೂಗಣೆಯಿಟ್ಟು | ಕೊಂಕುವಂತಾರುತೆಸುವಸು ||೨೫||

ಕುವಲಯಕಾನಂದವನುವಿಬುಧಜನ | ನಿವಹಕೆಸಂಪ್ರೀತಿಯನು ||
ಸವಮೋಹನಾಬ್ಧಿಗುಚ್ಚಹವನೆಯ್ದುವುದಾ | ಯುವತಿಯನಿಟಿಲೇಂದುಲೇಖೆ ||೨೬||

ಕುರುಳೋಕುಡುಬಿಲ್ಲನೆಂಬಶಬರನಾ | ವಿರಹಿವಿಹಂಗವನೆಳೆವ ||
ಉರುಳೋಯೆನೆಕಣ್ಗೆಡ್ಡವಡೆದುವಾ | ಪರಿಪೂರ್ಣಚಂದ್ರಾನನೆಯ ||೨೭||

ಬಂಧೂಕಸದೃಶಾಧರೆಯವಿಸ್ಮೃತಕೇಶ | ಬಂಧಸಮೂತನಗುಳ್ಳ ||
ಬಂಧುರತರದಿಬಲ್ಲರಬಗೆಗಳನಸು | ಬಂಧನವನುಮಾಡುತಿಹುದು ||೨೮||

ಆಸುರುಚಿರಮಿಥುನದಗರ್ಭದೊಳುಮ | ತ್ತಾಸುಪ್ರತಿಷ್ಠಚರೇಂದ್ರ ||
ಆಸರ್ವಾರ್ಥಸಿದ್ಧಿಯಿಂನಿಳಿತಂದಾರು | ಮಾಸಕೆನೇಮೀಶನಾಗಿ ||೨೯||

ಜನಿಯಿಪನೆಂಬುದನವಧಿಬೋಧದಿನರಿ | ದನಿಮಿಷಪತಿನಾಲ್ದೆರದ ||
ಅನಿಮಿಷರನುಕೂಡಿಕೊಂಡುದ್ವಾರಾವತಿ | ಗನಿಲಮಾರ್ಗದಿನಿಳಿತಂದು ||೩೦||

ಪಿಂಗದಭಕುತಿಯಿಂದವೆಯಾಸ್ಯಪಮಿಥು | ನಂಗಳನತಿಸುಮತೆಯೊಳು ||
ರಂಗುವಡೆದರತ್ನದಹಸೆಯೊಳಗಿಮ | ಸಂಗೊಳಿಸಂತೆಕುಳ್ಳಿರಿಸಿ ||೩೧||

ಗಂಗಾನದಿಮೊದಲಾದಪಾವನತೀ | ರ್ಥಂಗಳನಿರ್ಮಲಜಲವ ||
ಪೊಂಗೊಡದೊಳುತೀವಿಯಾದಂಪತಿಗಳುತ್ತ | ಮಾಂಗಕೆಮಜ್ಜನವೆರೆದು ||೩೨||

ಅಮರೀಮಾಂಗಲ್ಯಸಂಗೀತಸ್ವನ | ವಮರದುಂದುಭಿಯಿಂಚರಗಳು ||
ಅಮರಲೆಸ್ಗೆದ್ದೆಸೆಯನುನ್ನತಹರುಷದೊಳಾ | ಅಮರೇಶನಾದಂಪತಿಗಳ ||೩೩||

ದಿವ್ಯವಿಭೂಷಣದಿವ್ಯಾನುಲೇಪನ | ದಿವ್ಯಾಮೋದಪ್ರಸೂನ ||
ದಿವ್ಯಾಂಬರದಿಂದಪೂಜೆಮಾಡಿದನಾ | ದಿವ್ಯದೇಹಿಗಳನೀತೆರದಿ ||೩೪||

ಮಣಿಮಯಮೌಳಿಕುಂಡಲಮುದ್ರಿಕೆಕಂ | ಕಣತಾರ ಹಾರಕೇಯೂರ ||
ಫಣಿಸರಪದಕವೃತ್ತರಿಕೆಯಾದಿಯಂಭೂ | ಷಣವಿಟ್ಟರಬ್ಧಿವಿಜಯಗೆ ||೩೫||

ರಂಭಾವಿಲಸನಸವನುಸೋಲಿಪಕನ | ಕಾಂಭೋಜಾಸ್ಯೆಯತೊಡೆಗೆ ||
ರಂಭೆನಿರಿಯನಿಟ್ಟಳಾಪಸದನದಪ್ರಾ | ರಂಭದೊಳತಿಚದುರಿಂದ ||೩೬||

ಕೇಶಬಂಧನವನತ್ಯಂತಬಿನ್ನಣದಿನು | ಕೇಶಿರಚಿಸಲಾಸ್ಯವೆಂಬ ||
ಆಶಶಿತನ್ನಕರೆಯಪೆರಸೂಂಕಿದಂ | ತಾಶಿವದೇವಿಗೊಪ್ಪಿದುದು ||೩೭||

ತಿಲಕಮನೊಸೆದಿಕ್ಕಿದಳುತಿಲೋತ್ತಮೆ | ಯೆಳೆವೆರೆಗಂಕವಿಟ್ಟಂತೆ ||
ವಿಲಸಿತಮಪ್ಪಕಸ್ತುರಿಯಿಂಸೃಪಕುಲ | ತಿಲಕನಂಗನೆಯಳಕದೊಳು ||೩೮||

ಮಂಜಿನಹನಿಯುರೆಮುಗುಳ್ದ ಸಂಪಗೆಯೊಳು | ಮಂಜುಳವಾಗಿನಿಂದಂತೆ ||
ಮಂಜುಘೋಷೆಯಿಕ್ಕಿದನಾಸಾಮಣಿ | ಕಂಜವದನೆಗೊಪ್ಪಿದುದು ||೩೯||

ಶ್ರೀಕಾರಮನೇಳಿಪಕರ್ಣಯುಗದೊಳು | ಶ್ರೀಕಾಂತೆಮುತ್ತಿನೋಲೆಯನು ||
ಸ್ವೀಕಾರಂಗೆಯ್ದಳಾಕೈವಲ್ಯ | ಶ್ರೀಕಾಂತನಮಾತೃವಿಗೆ ||೪೦||

ರೋಹಿಣಿಯುವಳಕುಚಕೆಕಂಠಿಕೆಯನಾ | ರೋಹಣವನುಮಾಡಿದಳು ||
ಊಹೆವಡೆದುದಂಗಜಗಜಶಿರಕೆತಾ | ರಾಹಾರಮಿಕ್ಕಿದಂದದೊಳು ||೪೧||

ಇಂದ್ರಾಣಿಯುಸರವಸುತಂದಿಕ್ಕಿದ | ಳಿಂದ್ರಾಣಿಯುತಿಮುದದಿಂದ ||
ಇಂದ್ರನರೇಂದ್ರವಂದಿತಚರಣಾಸನೇಮಿ | ಚಂದ್ರನಜನನಿಯುಕೊರಲ್ಗೆ ||೪೨||

ಗೀರ್ವಾಣಧನುರ್ಲೇಖೆಯುನಿವಿಮುಗಿಲೊಳು | ನೇರ್ಪಡಿಸಿದವೊಳ್ಕಿಯೊಳು||
ಊರ್ವೀದೂರವಬಳಸಿದನಿರಿಗಿಕ್ಕಿದ | ಳೂರ್ವಸಿಮಣಿಮೇಖಲೆಯು ||೪೩||

ಪದ್ಮರಾಗರತ್ನೋಪಮನಿಜಪದ | ಪದ್ಮಯುಗಲಕಲತಗೆಯು ||
ಪದ್ಮಾವತಿಮುಸವೊಸೆದೂಡಿಸಿದಳಾ | ಪದ್ಮಿನಿಶಿವದೇವಿಗಾಗ ||೪೪||

ಲಲಷೆಗೊಪ್ಪಿದುವಲಕ್ತಕಕಾಂಚಿಕಂಚುಕ | ತಿಲಕಸೊಸೆಕತಾಟಂಕ ||
ಲುಳಿಸರಪದಕನಾಸಿಕಭೂಷಣಕಲ್ಕ | ಒಳೆಬಾಹುಪುರಿಮಣಿಕಟಕ ||೪೫||

ಸುರಭಿಲತೆಗೆ ಸುಮನೋಮಂಜರಿಯೇಣ | ಧರಗೆಸವಾಮೃತಕಿರಣ ||
ಸರಸೀಕ್ಷುಕೋದಂಡಕೆ ಪಂಚಮಾರ್ಗಣ | ದಿರವಾದುವವಳಾಭರಣ ||೪೬||

ಇಂತುಸುರಾಂಗನೆಯತಕ್ಕೈಯಿಂದತಿ | ಸಂತಸದಿಂಭೂಷಣವನು ||
ಕಂತುಹರನನಿಜಮಾತೆಗಿಂದ್ರಾಣೀ | ಕಾಂತನುರಚನೆಮಾಡಿಸುತ ||೪೭||

ಮಿಗೆರಂಜಿಪಾರುಕುಲಾದ್ರಿಯಸಾಸಾ | ರಗಳಸುರತ್ನಕುಂಟದೊಳು ||
ಸೊಗಯಿಪಶ್ರೀಹ್ರೀಧೃತಿಕೀರ್ತಿಬುದ್ಧಿಲ | ಕ್ಷ್ಮಿಗಳೆಂಬಸತಿಯರುವರ ||೪೮||

ಬಳಿಕರುಚಕಶೈಲದ ಚೈತ್ಯಗೃಹದಕ | ಣ್ಗೊಳಿಪಸುರಪದಿಕ್ಕಿನೊಳು ||
ತೊಳಗುವಕೂಟಾಷ್ಟಕದೊಳಗಿರ್ಪದಿ | ಗ್ಲಲನೆಯರುಗಳೇಣ್ಬರನು ||೪೯||

ಪುತ್ತಾಗಿರಿಶಿಖರದತೆಂಗಡೆಯೊಳು | ಬಿತ್ತರವಾಗಿರಂಜಿಸುವ ||
ಉತ್ತಮಮಪ್ಪಕೂಟಾಷ್ಟಕದೊಳಗಿರ್ಪ | ತತ್ತರುಣಿಯರೇಣ್ಬರನು ||೫೦||

ಆ ಭೂಧರದಮೇಗಡೆರಂಜಿಪಪರದಿ | ಶಾಭಾಗದಕೂಟದೊಳು ||
ಶೋಭೆವಡೆದುವಿಹರಿಸಿನೆರೆಬಾಳ್ವವು | ಶ್ರೀಭಾಮೆಯರೇಣ್ಬರನು ||೫೧||

ಅರುಚಕಾದ್ರಿಯ ಶಿಖರದೊಳೆಸೆವಕು | ಬೇರದಿಕ್ಕಿನವಾಡಗಳೊಳು ||
ಆರಯ್ಯುದತಿಸುಖದಿಂಜೀಪಪದೇವ | ನಾರಿಯರೆಂಟುಮುಂದಿಯುಸು ||೫೨||

ಮತ್ತುಳಿದಮರಲೋಕದವಾನಿನಿಯರ | ವೊತ್ತಪನೆಲ್ಲವಕರೆದು ||
ಉತ್ತಮೆಗಾಳ್ಗಲಸವಗೆಯಿವೆಂಮುದೇ | ವ್ರೋತ್ತಂಸನತಿಮುದದಿಂದ ||೫೩||

ಜಿನರಾಜಚಂದ್ರನಜನನಿಯುಗರ್ಭಶೋ | ಧನವನುಮಾಡಿಸೀವೆಂದು ||
ಅನಿಮಿಷಪತಿಯುಮರಿಯರಿಗೆ ಬೆಸನಿತ್ತು | ಮನದೆಗೊಂಡುಪೋದನಿತ್ತ ||೫೪||

ದಿವ್ಯೋದಕಮಜ್ಜನ ದಿವ್ಯಭೋಜನ | ದಿವ್ಯಕರ್ಪೂರತಾಂಬೂಲ ||
ದಿವ್ಯಕುಸುಮದಿವ್ಯಪುಷ್ಪನುಲೇಪನ | ದಿವ್ಯಾಂಬರದಿಂಮೊಸೆದು ||೫೫||

ದಿನಚರಿಯಾದಿವಿಜಾಂಗನೆಯರು ಜಿನ | ಜನನಿಯುಗರ್ಭಶೋಧನೆಯ ||
ಘನದುಃಕೃತಪರಿಹರತವುಗಾಗಬೇ | ಕೆನುತನುನಯದಿವಾಡಿದರು ||೫೬||

ಅನಿಮಿಷರಾಜನಬೆಸದಿಕುಬೇರನು | ದಿನಚರಿಯಾಮೂರುಹೊತ್ತು ||
ಮಿನುಗುವರತ್ನವೃಷ್ಟಿಯುನುಮಾಡಿದನಾ | ವನಧಿಪವಿಜಯುನಂಗಣದೊಳು ||೫೭||

ಅಡಿಗಲತಗೆಯನೂಡುವತೊಡವಿಕ್ಕುವ | ಮುಡಿಗೆವೂಗಳನಳವಡಿಪ ||
ಉಡಿಸುವಕನ್ನಡಿದೋರುವಸಗ್ಗದ | ಮಡದಿಯರೊಪ್ಪಿದಳವಳ್ಗೆ ||೫೮||

ಗೀತವಾದ್ಯನೃತ್ಯವನಭವನನಿಜ | ಮಾತೆಯುಮನದಿಚ್ಛೆಯರದು ||
ಪ್ರೀತಿಯಿಂದಾಯಿಂದ್ರನಂಗನೆಯರುನಾ | ನಾತೆರದಿಂತೋರಿಸುವರು ||೫೯||

ಇಂತರುದಿಂಗಳುಪದಿಯಂತರಾದೇವ | ಕಾಂತೆಯರತಿಮುದದಿಂದ ||
ಕಾಂತಕಲಾಭ್ಯುದ್ಬಿಂಬಮುಖಿಗೆನಿ | ಶ್ಚಿಂತದಿಮಾಡುತಲಿರಲು ||೬೦||

ಮನದನುರಾಗವೆಮ್ಮೈಂಬೊಳುಣ್ಮಿದುದೆನೆ | ಪನಿತೆಪಡೆಯೆಮಾಣಿಕವನು ||
ಅನಿಮಿಷಸುದತಿಯರನುಗೊಳಿಸಿದರಾ | ಮಿನುಗುವರುಣಭೂಷಣವನು ||೬೧||

ಅರುಣಚಂದನದಬೊಂಬೆಯೊಪದ್ಮರಾಗದ | ಪುಬಜೋವಿದ್ರುಮದಪುತ್ಥಳಿಯೋ ||
ಸರಸಕುಂಕುಮದಮೂರುತಿಯೋಯೆನೆನೃಪ | ಸರಸಿಜೆಂದೊಡವಿಟ್ಟೊಪ್ಪಿದಳು ||೬೨||

ಬಳಿಕಾಕಾಶಗಂಗೆಯದಿವ್ಯಜಲವನು | ಲಲನೆಗೆನಾಲ್ಮೀರನೆರೆದು ||
ಬೆಳರ್ವನದನದಿಂದಶೃಂಗರಿಸಿದರಿಂ | ತೆಳಸಿನಿಳಿಂಪನಾರಿಯರು ||೬೩||

ದುಗುಲದಂಡೆಯ ಮೋಸಕಿಮಲ್ಲಿಗೆಯಬಿರಿ | ಮುಗುಳಮುಡಿಯಮಂಜುಘೋಷೆ ||
ಸೊಗಸುಮುತ್ತಿನಹಾರವರಂಭೆವಜ್ರಸೂ | ಡಗಪಸುಶಚಿಯಸುಗೊಳಿಸೆ ||೧೪||

ಸಿರಿಗಂಪಿಸಣ್ಣಪುಕೇಶಿಯಂಗದೊಳುಕಾ | ಲ್ವೆರಲುಗುರ್ವಳತಸಿಮಿಂಚ ||
ಹರಿಸದಿಯೂರ್ವಸಿಸುಂಜೋಲೆಯನಾ | ದಧದತಿಲೋತ್ತಮೆಯಿಡಲು ||೧೫||

ಆತನುಭೂಪಸಪಿತರಣಲಕ್ಷ್ಮಿಬೊಪ್ಪಡು | ಪತಿಪೂಜಿಪದೇವತೆಯೋ ||
ಪಿತತವಿದ್ಯುಲ್ಲತಿಕೆಯಬೊಂಬೆಯೊಯೆಸೆ | ಸತಿಬೆಳ್ಗೊಡವಿಟ್ಟಿಸೆದಳು ||೧೬||

ಅಸಿತರೊಳಾಪಗಲಳಿಯಲಹೇಂದ್ರನ | ವನಿತೆಮುತ್ತಿನಹಾವುಗೆಯ ||
ಆಸುರಾಗದಿನೀಡೆಯರಸನಸೊಳ್ಗಾ | ಜನಸುತೆಸಡೆತಂದಳಾಗ ||೧೭||

ಮುತ್ತಿನಸಮುಗ್ಧಯಪ್ರೊಲುಸವಕುಲಿಶಪ | ಪುತ್ರಿಯೊಲುಕರ್ಪೂರದ ||
ವೃತ್ತಕುಚೆಯುಪ್ರೊಲುಸಡೆತಂಡಳಾಗ | ತ್ಯುತ್ತಮೆಯರಸನಸೊಳ್ಗೆ ||೧೮||

ಶರದದಮುಗಿಲನೇರುವಶಶಿಲೇಖೆಯ | ದೊರೆಯೆನೆಪತಿಯೊರಗಿರ್ದ ||
ಅರಸಂಜೆದುಪ್ಪುಳುವಾಸಿಸಮಂಚವ | ಸರಸಿಯೇರಿದಳತಿಮುದದಿ ||೧೯||

ಇನಿಯನೊಡನೆಮನಸಿಜಕೇಳಿಯೊಳಿರ್ದು | ವನಿತೆಬೆಳಗುಜಾವದೊಳು ||
ವಿನುತಮಪ್ಪೀರೆಂಟುಕನಸುಗಂಡಾಮರು | ದಿನದುದಯದೊಳುಪ್ಪವಡಿಸಿ ||೨೦||

ಸಿರಿಮೊಗದೊಳ್ದುಸಿಂಗರಿಸಿಪತಿಯಬಳಿ | ಗಿರಪ್ಪೈದಿತಾಕಂಡಕನಸ ||
ಕರದಿಗೆವಾಯ್ದೊರೆದೊರೆಯಲುಕೇಳ್ದಾ | ದರದಿನುಡಿದನಿಂತೆಂದು ||೨೧||

ಗಜಪನಿರುಳುಕಂಡಕನಸಿನಫಲದಿನಂ | ಗಜಮಂಡಳಿಕನಸ್ಸೈಸಿಕಕೆ ||
ಗಜಬೆಯುಸುಪುಟ್ಟಿಸುವನುದಯಿಪನಾ | ಗಜರಾಜನಸ್ಸಿಭಗವನೆ ||೨೨||

ಗೋಪತಿಯನುಕನಸಿಂಕಾಣ್ಕೆಲಿತಾಂ | ಗೋಪಾಂಗೆಕೇಳ್ವಿನಗೋರ್ಪ ||
ಗೋಪತಿಸುತಪದಪರಸಪ್ಯತಶ್ರೀ | ಗೋಪಪನುದ್ಭವಿಸುವನು ||೨೩||

ಸಿಹ್ಮವಸಿಂಬಿಸಿದುಳ್ಕಂಡಕನಸಿಂದ | ಸಂಯತದುಷ್ಟಕಿಲ್ಬಿಷನು ||
ಸಿಹ್ಮಾಸನಾಲಂಕೃತನಿನಗೊಗೆಸನು | ಸಿಹ್ಮಸದೃಶತಸಮಧ್ಯೆ ||೨೪||

ಲಕ್ಷ್ಮಿಯನೀಕಂಡಕನಸಿನಿಂದಭಿನವ | ಲಕ್ಷ್ಮಿಕೇಳ್ನಿನ್ನಗರ್ಭದೊಳು ||
ಲಕ್ಷ್ಮಿಯಸುತಮದಭಂಜನನಾಮುಕ್ತಿ | ಲಕ್ಷ್ಮಿಯರಸನುದ್ಭವಿಪನು ||೨೫||

ಸುರಭಿಕುಸುಮವಾಲೆಯಕಂಡಕನಸಿಂ | ಸುರಭಿಸಮಪ್ರದಾಯಕನು ||
ಸುರಪತಿಮೌಳಿಕೀಲಿತಪಾದಯುಗಲಭಾ | ಸುರಮೂರ್ತಿನಿನಗುದಯಿಪನು ||೨೬||

ಚಂದ್ರನನೀಕಂಡಕನಸಿಂದಾಪೂರ್ಣ | ಚಂದ್ರಮಂಡಲನಿಭವದನೆ ||
ಚಂದ್ರಾರ್ಕಕೋಟಿಸಂಕಾಶನೆನಿಪಜಿನ | ಚಂದ್ರನುನಿನಗುದಯಿಪನು ||೭೭||

ಪಗಲೆರೆಯನಕಂಡಕನಸಿನಸುಕೃತದಿಂ | ಪಗಲದಸುತನುದ್ಭವಿಪನು ||
ಪಗಲಪಕ್ಕಿಯನೇಳಿಸುವಪಯೋಧರೆ | ಪಗಲಪಂಕೋದ್ಭವವದನೆ ||೭೮||

ಕುಂಭವಕಂಡಾಸ್ವಪ್ನಫಲದಿಶಾತ | ಕುಂಭಸರೋರುಹವದನೆ ||
ಕುಂಭೋರೋಜೆನಿನಗೆಮನಸಿಜಗಜ | ಕುಂಭಕೇಸರಿಯುದಯಿಪನು ||೭೯||

ಬಾಳೆದೊಡೆಯಬಾಲಕಿರಕಿದೇವಿಯು | ಬಾಳಕೆಡಿಪರೂಪಿನವಳೆ ||
ಬಾಳೆವರಿಯಕಂಡಕನಸಿಂತ್ರೀಜಿನ | ಬಾಲಕನುದ್ಭವಿಸುನು ||೮೦||

ಕಂಜಾಕರವನುಕಂಡಕನಸಿನಿಂದ | ಕಂಜಾತಸನ್ನಿಭವದನೆ ||
ಕಂಜೇಕ್ಷಣೆನಿನಗೊಗೆವನಕಾಂಚನ | ಕಂಜಪೀಠಾಲಂಕೃತನು ||೮೧||

ಶರನಿಧಿಯನುಕಂಡಕನಸಿಂದುದ್ಗಮ | ಶರಸಸೊಗಸುವಿಲ್ಲಮುರಿವ ||
ಶರಧಿಗಂಭೀರನಿನಗೆಸಂಜನಿಪನವ | ಶರದಿಂದುಸನ್ನಿಭವದನೆ ||೮೨||

ಮೃಗಪತಿಪೀಠವಕಂಡಕನಸಿನಿಂದ | ಮೃಗಮದಮಧುರಸುಗಂಧಿ ||
ಮೃಗಲೋಚನೆನಿನಗುದಯಿಪನಾಕೋಟಿ | ಮೃಗಧರಮಿತ್ರವಿಕಾಸ ||೮೩||

ಮಾನನಿದಾನವಮೂರ್ತಿಯೆಕೇಳ್ವಿಬುಧವಿ | ಮಾನವಕಂಡಕನಸಿನ ||
ಮಾನಿತಫಲವುದಯಿಸುವುದುಮನ್ಮಥ | ಮಾನಾಪಹಾರಕಾರಿಯನು ||೮೪||

ನಾಗಾಲಯಮನಿರುಳುಮಬಗಿದುರ್ನಿನೀ | ನಾಗಕಂಡಾಸ್ವಪ್ನಫಲದೀ ||
ನಾಗನರಾಮರವಂದ್ಯನೊಗೆವನುಪು | ನ್ನಾಗಕುಸುಮಸೌಗಂಧಿ ||೮೫||

ನವರತ್ನರಾಶಿಯಕಂಡುದರಿಂದಮಾ | ನವಸುರಫಣಿಪತಿವಿನುತ ||
ನವಕೋಟಿಮುನಿವಂದ್ಯನುದ್ಭವಿಸುವನಭಿ | ನವಚಂದ್ರಮಂಡಲವದನೆ ||೮೬||

ತಿಂಗಳಂದದಮೊಗದಳೆಪಜ್ಜಳಿಸುತೆಳೆ | ತಿಂಗಳಿರಲುಕಂಡಕನಸಿಂ ||
ತಿಂಗಳೊಂಭತ್ತಕೆಜಿನಮುಖಶಶಿಬೆ | ಳ್ದಿಂಗಳೆಳೆಯನಾವರಿಪುದು ||೮೭||

ಈತೆರದಿಂಕಂಡಕನಸಿನಫಲವನಿ | ಳಾತಳಪತಿನಿರವಿಸಲು ||
ಆತರಳಾಂಬಕಿಕೇಳಿಮನಕೆಸಂ | ಪ್ರೀತಿಯೊದವಿಸುಖಮಿರಲು ||೮೮||

ಮುನ್ನಪೇಳ್ದಾಸರ್ವಾರ್ಥಸಿದ್ಧಿಯೊಳ | ತ್ಯುನ್ನತಸೌಖ್ಯವಪಡೆದು ||
ಸನ್ನುತನಹಮಿಂದ್ರನಲ್ಲಿಂಬಂದಾ | ಚನ್ನೆಯಬಸಿರೊಳುಬೆಳೆಯೆ ||೮೯||

ಬಸಿರಬಡವುಹೋದುದಿಲ್ಲಬಲ್ಮೊಲೆತೊ | ಟ್ಟಸಿತವರ್ಣವಸಾಂತದಿಲ್ಲ ||
ಎಸಕಮಾಯ್ತಿಲ್ಲರೋಮಾಳಿಯುಡಗಿತಿಲ್ಲ | ಮಿಸುಪವಳಿಗಳಾಸತಿಗೆ ||೯೦||

ಬಸಿರೊಳಗಿರ್ದಜಲಾರಸಂದ್ಯಸಮೂರು | ಮಿಸುಪಪೀಠದರೇಖೆಗಳೆ ||
ಪುಸಿಸದುವಿಸೊಳುತೋರ್ಪಂತಡಗದೆರಂ | ಜಿಸಿದುವವಳತ್ರಿವಳಿಗಳು ||೯೧||

ತೆಳುವಸಿರಿಸೊಳುಬೆಳೆವಜಿನಶಿಶುವಿಸ | ಗ್ಗಳನೆಸಿಸುಪಶಾಂತರಸದ ||
ಜಲಧಿಯುವಳಿಗಳಂದದಿನಾದೇವಿಯ | ವಳಿಗಳಡಂಗದೊಪ್ಪಿದುವು ||೯೨||

ಒಡಲೊಳುಬೆಳವರುಹಚ್ಚಿಶುವಿಸಮೋಲೆ | ಪಿಡಿದ್ಯೈದಾಲಿಯೆಂದೆಂಬ ||
ಕೊಡೆಯುನೀಳದಸ್ಣ್ಣಗಾವೆಂದೆನೆಬಾಸೆ | ಕಡುಸೊಗಸಿದುದಾಸತಿಗೆ ||೯೩||

ದೂರೀಕೃತದೋಷಸುದಯಿಸಲೊಡನಂಧ | ಕಾರಪರೆಯಲಾಸ್ಯ ||
ಘೋರಿಸೆಹರಿಪಂದದಿನಲಸದೆಪಿಂಗ | ತಾರಾಜಕೀಮಂತಿನಿಗೆ ||೯೪||

ಲೋಲಾಕ್ಷಿಯುಸುಲಗರ್ಭದೊಳೊಪ್ಪಿದನಾ | ತ್ರೈಲೋಕ್ಯಾಧೀಶ್ವರನು ||
ಲೀಲಾದರ್ಪಣದೊಳುಪೂರ್ಪೊಳೆವಕು | ತ್ಕೀಲೇಂದ್ರವೆಂಬಾದದೊಳು ||೯೫||

ಭಾವಿಸಿನೋಡಿನುಡಿದುರತಿಸೌಖ್ಯವು | ನಾವಘುಪಿಂದಹಡೆದನು ||
ಆವಿಘುವೀರಾಸಕಲ್ಪದಿನತ್ತಣ | ದೇವೇಂದ್ರಸಂಬಂದದೊಳು ||೯೬||

ಆಸತಿಯಿಂತುಸುಖದೊಳಿರಲುನವ | ಮಾಸವೊದವೆವೈಶಾಖ ||
ಮಾಸದಪೊದಚತ್ರಯೋದಶಿಯೊಳುಭಾ | ಭಾಸಚಂಪ್ರತಾರೆಯೊಳು ||೯೭||

ಇಂದ್ರದಿಗ್ವನಿತೆಯುಬಸಿರಿಂದಾಪೂರ್ಣ | ಚಂದ್ರನುಜ್ಞವಿಸುವಂದದೊಳು ||
ಇಂದ್ರನರೇಂದ್ರಫಣೀಂದ್ರವಂದಿತನೇಮಿ | ಚಂದ್ರನುದಯುಗೆಯ್ಯಲೊಡನೆ ||೯೮||

ತಡವುಮಾಡದೆಯುಭವನಪುಜ್ಜನವಸುನ | ವಿಧಿದುಮಾಡವೊಡೇಳಂದು ||
ತೊಡೆಯತಿವಿಡುಸನ್ನೆಮಾಡುವಂದದಿನಡ | ನಡುಗಿತಿಂದ್ರನಸಿಮ್ಹಪೀಠ ||೯೯||

ಅಲುಗುವಾಸನವಕಂಡವಧಿಬೋಧದಿನಾ | ಕಲಿಲವಿಜಯಸುತಪತಿಯ ||
ನಲೆಯುನರಿದುನಾಕಪತಿಜಯಜಯವೆಸು | ತಲಸದಿಳಿದುಬಂದನಾಗ ||೧೦೦||

ಅನಿಮಿಷಪತಿಯುತ್ಕೃಷ್ಟತಿಯಭಿಷೇಕ | ಕನುರಾಗದಿಂದೆಯ್ದಿದನು ||
ಎಸುತನಾಲ್ದೆರೆದನಿಳಿಂಪನಿಕರವೆಲ್ಲ | ಮಿಸಿಸುವೇಗದೊಳೆಯ್ದಿದುದು ||೧೦೧||

ತುಂಬಿದುರಗಲೋಕವೆಲ್ಲತಂತಮ್ಮಕು | ಟುಂಬಸಹಿತಬಂದುದಾಗ ||
ಶಂಬರರಿಪುಸಂಹರಣನನಾಮಜ್ಜ | ಸಂಬೊಗಿಸುವಲೀಲೆಯೊಳು ||೧೦೨||

ಗಾಡಿವಡೆದಗರಿಮನಮಜ್ಜನವಕೊಂ | ಡಾಡಿಮೂಡುವೆವೆಂದೆನುತ ||
ಮಾಡಪೆತಡವಸಂದಾಯಕ್ಷರುಗಳ | ನಾಡುಬೀಡೆಲ್ಲವೆಳ್ದುದುದು ||೧೦೩||

ತೆಕ್ಕೆತೆಕ್ಕೆಯೊಳುಬೋಯಿಸರಭವನಮಜ್ಜ | ನಕ್ಕೆಮಹಾವಿಭವದೊಳು ||
ಲೆಕ್ಕವಿಲ್ಲದೆನಡೆತಂದರುತಂತ | ಮ್ಮೊಕ್ಕಲುಗಳುಸಹವಾಗಿ ||೧೦೪||

ಮಾರಮದಾಪಹರಣಗೆಮಜ್ಜನಮನ | ವಾರೆಮಾಡುವೆವೆಂದೆನುತ ||
ಊರೆಂಟುಸಗ್ಗದರಸುಗಳುತಮ್ಮೂರು | ಕೇರಿಸಹಿತಬಂದರಾಗ ||೧೦೫||

ಮನೆಗಾಹಿಗಮಹೀಂದ್ರರನನುವ್ರತದಿಂ | ಮನೆಗೆಮೋಗಾವಲಿರಿಸಿ ||
ಮನಭಕ್ತಿಯಿಂಬಂದರಖಿಲಕಲ್ಪಜರಿಂತು | ಮನೆಯೊಳಗೊಬ್ಬರುಳಿಯದೆ ||೧೦೬||

ಹರಿಮೃಗಹಯವೃಷಮೇಷಮಕರಪಕ್ಷಿ | ಕರಿಹುಲಿಸಿಮ್ಮಲುಲಾಯ ||
ನರರಾದಿಯಾದನಾನಾವಾಹನವನೇರಿ | ಭರದಿನೆಯ್ತಿತುಸುರನಿಕರ ||೧೦೭||

ಸಾಂದ್ರಭಕ್ತಿಯೊಳಿಂದ್ರನಂತಃಪುರದಪು | ರಂಧ್ರಿಯರೆಲ್ಲರುಸಹಿತ ||
ಇಂದ್ರಾಣಿನಡೆತಂದಳತಿವಿಭವದಿನೇಮಿ | ಚಂದ್ರನಜನನೋತ್ಸವಕೆ ||೧೦೮||

ಪದ್ಮನೇತ್ರದಪದ್ಮಸನ್ನಿಭಹಸ್ತದ | ಪದ್ಮಾಸನದಕೋರಕಿತ ||
ಪದ್ಮಕುಚದಪದ್ಮಿನಿಯರೆಯ್ದಿದರಾ | ಪದ್ಮಾವತಿಯರೊಂದಾಗಿ ||೧೦೯||

ಬೆರಕೆನವರತ್ನಭೂಷಣರುಚಿದೆಸೆದೆಸೆ | ಪರಿದುಚಿತ್ರಿಸಲಂಬರವನು ||
ಗರಗರಿಯಗಾಡಿವಡೆದಗಂಧರ್ವರ | ತರುಣಿಯರೈದಿದರಂದು ||೧೧೦||

ಪವಳದುಟಿಯಪವಳದಕುಡಿವೆರಳಿನ | ಪವಳವಾವುಗೆವಜ್ಜೆಗಳ ||
ನವನಾಗನತಿಯರೈತಂದರುಪವಳದ | ನವಲತಿಕಾವನದಂತೆ ||೧೧೧||

ತಳಿರ್ವಜ್ಜೆಯತಾರಾವಳಿನಖಗಳ | ಪೊಳೆವಪೊಂಬಾಳೆದೊಡೆಗಳ ||
ಎಳೆಲತೆನಡುವಿನಿಳಿಯದಹರೆಯದಿಂದ್ರ | ಲಲನೆಯರೈದಿದರಾಗ ||೧೧೨||

ಚಂದ್ರಮುಖದಚಂದ್ರಿಕಾಪಾಂಗದಬಾಲ | ಚಂದ್ರಸಮಾನಾಧರದ ||
ಚಂದ್ರಲೋಕದಸುದತಿಯರೈದಿದನೇಮಿ | ಚಂದ್ರನಜನನೋತ್ಸವಕೆ ||೧೧೩||

ಕುಂದಕುಟ್ಮಳರದನವಕುಂಕುಮಗಂಧ | ದಿಂದೀವರಲೋಚನದ ||
ಬಂದುಗೆದುಟಿಯುಬ್ಬುಮುಖದಕಿನ್ನರಿಯರೆ | ಯ್ದಂದರಂಬರಪುಷ್ಪದಂತೆ ||೧೧೪||

ಸುಳಿನಾಭಿಯಸುಲಲಿತಲಾವಣ್ಯಾಂಬು | ವೆಳೆವಾಳೆಗಣ್ಮಲರುಗಳ ||
ವಳಿವೀಚಿಯಮರಿಯರೈತಂದರಾಗಸ | ಹೊಳೆಯಿಳಿತಪ್ಪಂದದೊಳು ||೧೧೫||

ಚೆಂದಳಿರ್ದುಟಿಯುಚೆಲ್ವಡೆದತರುಣಶಾಖೆ | ಯುಂದದನಳಿತ್ರೋಳುಗಳ ||
ಸುಂದರಿಯರು ಜಂಗಮಸುರಲತಿಕಾ | ನಂದನದಂತೆಯ್ದಿದರು ||೧೧೬||

ಈತೆರದಿಂದನಿಮಿಷಜನವೆಯ್ದೆ ಸಂ | ಪ್ರೀತಿಮಿಗಲುಸಗ್ಗದಿಂದ ||
ಸಾತಿಶಯುದವೈಭವದಿಸುರೇಂದ್ರನಿ | ಳಾತಳಕಿಳಿತಂದನಾಗ ||೧೧೭||

ಸಂತಸದಿಂಸುರಪಸ್ನಗತಾರಾ | ವ್ಯಂತರರೆಲ್ಲರುಸಹಿತ ||
ಅಂತಃಸದೆಯುಚ್ಯುತಸಪುರವರಕ | ತ್ಯಂತವಿಭವದಿಂಬರಲು ||೧೧೮||

ಸಂದಣಿಸಿದಪಲಮಣಿಪುಷ್ಪಕಗಳು | ಪಂದರಿಸಿತುಗಗನದೊಳು ||
ಅಂದುಕುಂಭಜನೀಂಟಿದರತ್ನಾಕರ | ದಂದವೆಮಾರ್ಪೊಳೆವಂತೆ ||೧೧೯||

ನಾನಾತೆರದನಿಳಿಂಪರರತ್ನವಿ | ಮಾನಸಿಯುನ್ಮಾರ್ಗವನು ||
ನೂನಮಿಲ್ಲದೆತುಂಬಿತುಲೋಕಮೂವಲ್ಲ | ವಾನಾಲ್ಕುಲೋಕವೆಂಬಂತೆ ||೧೨೦||

ಅನಿಮಿಷಪತಿಯೀತೆರದಿನಾಲ್ಕುಂತೆರ | ದನಿಮಿಷರೆಲ್ಲರು ಸಹಿತ ||
ವನಧಿವಿಜಯುಪನಪಾಧೀಶ್ವರನರ | ಮನೆಯುಮೋಗಡೆಬಂದುನಿಂದು ||೧೨೧||

ಶಚಿಗೆಪೆಸಸನಿಜರತ್ನವಿಭೂಷಣ | ರಚಿದೆಸೆದೆಸೆಯೊಳಾವರಿಸೆ ||
ಸಚರಾಚರಸತ್ವಜಿನಶಿಶುವಿನಗೃಹ | ಕುಚಿತದಿಂದವೆನಡೆತಂದು ||೧೨೨||

ಜನನಿಯುಮುಂದೊರಗಿದಶಿಶುವನುಕಂಡು | ಮನದನುರಾಗದಿನೋಡಿ ||
ಘನತರವಪುಭಕ್ತಿಯಿಂಪೊಡವೆಬಲವಂದು | ವಿನಮಿತೆಯಾಗುತಿಂದ್ರಾಣಿ ||೧೨೩||

ಮಾಯಾನಿದ್ರೆಯುನಾಜಿನಜನನಿಗೆ | ಪ್ರೀಯಾದದಿಂಮಾಡಿಬಳಿಕ ||
ಮಾಯದನಿಸನನಿರಿಸಿಯೆತ್ತಿಕೊಂಡಳಂ | ದಾಯತಿಯಿಂದಾನಿಸುವ ||೧೨೪||

ಬಡವರೊಡವೆಗಂಡಂತೆವ್ಯೆಗಣ್ಣಾಸ | ಪಡದಿಮ್ಮೆಮನಸೆತ್ತಿಕೊಂಡು ||
ಸಡಗರದಿಂಬರೆಕಂಡುಸಗ್ಗಿಗರೆಲ್ಲ | ಬಿಡನುಲಿದರುಜಯುವೆಂದು ||೧೨೫||

ಇಂತುಬಂದಾಶಚಿಯಾನಿಸುವನಸಿಜ | ಕಾಂತನಕ್ಕೆಯೊಳುಕೊಡಲು ||
ಸಂತಸದಿಂದತಳೆದು ನಿಜಭಕ್ತಿಯೊ | ಳಂತಮಿಲ್ಲದೆಸುತಿಗೆಯ್ದು ||೧೨೬||

ಐರಾವತಮನಡರಿತೊಡೆಯೊಳು ಜಿನ | ದಾರಕನನುಮೆಲ್ಲನಿರಿಸಿ ||
ಆರಂಭಾರವಮಣನುಸುರಸೇನೆಯು | ಮೇರುಗೆನಡೆಯುಹೇಳಿದನು ||೧೨೭||

ಕೊಡೆಯಹಿಡಿದನೀಶಾನೇಂದ್ರಚಮರವ | ಬಿಡದಿಕ್ಕಲುಳಿದಿಂದ್ರರುಗಳು ||
ಪಡಿಯುರನಾಗಲುಫಣಿಪತಿಯಾಲೋಕ | ಮೊಡೆಯಗೆಕಡುಭಕುತಿಯೊಳು ||೧೨೮||

ಮದಸಾರಿಯೇರಿದಮದಮಾತಂಗಕೆ | ವದನಬತ್ತೀಸವಾಮುಖಕೆ ||
ರದನವೆಂಟೆಂಟಾರದನವೊಂದೊಂದಕೆ | ಸದಮಲಸರಸಿಯೊಂದೊಂದು ||೧೨೯||

ಆ ವೊಂದೊಂದುಸರಸಿಗಾಲೆಕ್ಕದ | ತೀವಿದನಾಳಂಗಳಿಗೆ ||
ಹೂವುಮೂವತ್ತೆರಡವರೊಂದೊಂದಕೆ | ಮೂವತ್ತೆರಡೆಸಳುಗಳು ||೧೩೦||

ಆವಸರುಹಪತ್ರವೊಂದಕೆಬತ್ತೀಸ | ದೇವಿಯರತಿಮುದದಿಂದ ||
ಹಾವಭಾವಸದ್ವಿಲಾಸವಿಭ್ರಮವಡೆ | ದೋಪವೆಸಟಿಸುತಿಪ್ಪರು ||೧೩೧||

ಚಂಡಾಳಿಯಾಡಿದ ಒಂಡಿನಭವನವು | ಕಂಡುನೆಟ್ಟಿಲುಪೋಷವೆಂದು ||
ಪುಂಡರೀಕವನುನಾಲ್ವೆರಲುಸೋಂಕದೆಸಗ್ಗ | ವೆಂಟಿಸೂಸೆದುನರ್ತಿಸಿದರು ||೧೩೨||

ಪರವುಜಿನೇಶನಪಾದಪೀಠಕೆನಲು | ಪರಪಿಂದವನೆಟ್ಟಿಲಷವು ||
ಸಿರುತಮೆಂದೆಸುತಸಿಳಿಂಪನಾರಿಯರಲ್ಲಿ | ಚರಣವಿಷದೆಸಟಿಸಿದರು ||೧೩೩||

ತಾಳದೊಳಗುವಿಸ್ತಾರದಗೀತಗಳೊಳು | ಸೊಳ್ಳೆಸುನಮುಪ್ಪಳಿಯೊಳು ||
ಮೇಳವಮಾವವಾಟಿದರಾಪೆಣ್ಗಳು | ಬೋಳ್ಕೆಸಲಾಸುರರುಗಳು ||೧೩೪||

ಸರಸಿಯುತೆರೆವೊಯ್ಲಿಂದಸಂಚಲಿಸುವ | ಸರಸಕಂಜವಕಷುಚೆಲುವ ||
ಧರಿಯಿಸಿದಪಿಚರುಕೊಂಡಾಡುತಿರಲಾ | ವಿರದಾಟಿದರುನರ್ತನವನು ||೧೩೫||

ಇಂತತಿವಿಭವದಿಂಮೇರುಗಿರಿಗೆ ದೇವ | ಸಂತತಿಸಹಿತೆಯ್ತಂದು ||
ಸಂತಸಬಿಂದಾಗಿರಿಯಪಾಂಡುಕಶಿಲೆ | ಗಂತಮಿಲ್ಲದಭಕುತಿಯೊಳು ||೧೩೬||

ತಂದದರೊಳು ಸಿಮ್ಹಪೀಠವವಿರಚಿಸಿ | ಕಂದರ್ಪರಿಪುವಕುಳ್ಳಿರಿಸಿ ||
ಅಂದದಿಸೌಧರ್ಮೈಶಾನೇಂದ್ರರು | ಮಂದೇತರಭಕ್ತಿಯೊಳು ||೧೩೭||

ಕಲಶಾರ್ಚನೆಗೆಯ್ದಾಶಕ್ರರೀರ್ವರಂ | ದಲಘುಭುಜವಸಾಸಿರವ ||
ತಳೆದೊಂದುಕ್ರೋಶದಹವಣಿನಕಾಂಚನ | ಕಲಶಂಗಳನೆತ್ತಿಕೊಂಡು ||೧೩೮||

ಅಮೃತಾಂಬುನಿಧಿಯುಂಬುವನಂಜೆಯೊಳುಳಿ | ದಮರರೆಲ್ಲರುಮೊಗೆಮೊಗೆದು ||
ತಮತಮಗತಿಭರದಿಂಕೊಡಲಾಯಿಂದ್ರ | ರವಿತಬಾಹುಗಳಿಂದೆತ್ತಿ ||೧೩೯||

ಗಗನದೊಳಗೆಪಲಪರೆಗಳುಣ್ಮುತ್ತಿರೆ | ಸೊಗಸುಗಡಲತನಿವಾಲ ||
ಮಿಗೆಹರುಷದಿನಭಿಷೇಕಮಾಡಿದರಾ | ನಿಗಮನಿಲುಕದನಿರ್ಮಲಗೆ ||೧೪೦||

ಮೊಳಗುದುಂದುಭಿಯುವರಿಕ್ಕಿದನುಣ್ಣೊಡ | ವೆಳಗಿಂದ್ರಧನುದೇವಿಯರ ||
ಬೆಳತಿಗೆಗಣ್ಮಿಂಚೆನಲಾ ಅಭಿಷೇಕ | ಮಳೆಗಾಲವಾಯ್ತುಭವಂಗೆ ||೧೪೧||

ಅಂದುವಂಥಿಸಿತನ್ನ ಗುಟ್ಟುಗೆಡಿಸಿತೀ | ಮಂದರವೆಂದುಕ್ಕೋಪದೊಳು ||
ಬಂದ-ಪಾಲ್ಗಡಲ-ಬೇಗದಿಸುಂಗುವ್ವೊಲುಸುರಿ | ತಂದುದಭವನಭಿಷೇಕ ||೧೪೨||

ಹಿಂದಣಜನ್ಮದತಪದೊಳಗಾನೀ | ಯಂದದಿಮಳೆಗಾಲದೊಳು ||
ನಿಂದೆನೆಂದವತ್ತೋರುವಂತಭಿಷೇಕದೊ | ಳಂದವಡೆದನಘವೈರಿ ||೧೪೩||

ಅಲ್ಲಲ್ಲಿಗಾಹೊನ್ನಬೆಟ್ಟದಜರಿಯೊಳು | ನಿಲ್ಲದಿಳಿವಹಾಲಧಾರೆ ||
ಬಲ್ಲರಬಗೆಗೊಳಿಸಿತು ವೈಡೂರ್ಯದ | ಕಲ್ಲಬೆಟ್ಟದಸೂತ್ರದಂತೆ ||೧೪೪||

ಪಳುಕಿನಪರ್ವತವೋಸವ್ಯಾಮೃತ | ಶಿಲೆಯಶೈಲವೊವಜ್ರಗಿರಿಯೊ ||
ಕಲಿಲವಿಜಯನಭಿಷೇಕದ ಹಾಲೊಳು | ಮುಳುಗಿದಮಂದರಗಿರಿಯೊ ||೧೪೫||

ಮುಂರಹಿತನವ್ಯೆಯಭಿಷೇಕದ ಸುಧೆ | ಬಳಸಿದೊಡಾಮೇರುಶಿಖರಿ ||
ಇಳೆಯೆಂದೆಂಬಪೀಠದಮೇಲೆ ಥಳಥಳ | ಥಳಿಪಬೆಳ್ಳಿಯಲಿಂಗವಾಯ್ತು ||೧೪೬||

ಮುತ್ತಾ ಅಭಿಷೇಕದಹಾಲಹನಿವ್ಯೆಯ | ಹತ್ತಿದೊಡಾಮೇರುಶಿಖರಿ ||
ಚಿತ್ರರಸುಪ್ಪಾಗಸವೆಂಬಗುಡಿಗಿಟ್ಟ | ಮುತ್ತಿನಕಂಬದಂತಾಯ್ತು ||೧೪೭||

ಅರತುದಿಂಗಡಲೆಲ್ಲವೆಂಬಂದದಿಮನ | ದೆರಕದೊಳಾಸುರಸಮಿತಿ ||
ಮಿರುಗುವಸಲವುಹಸ್ತದಿಸವ್ಯತಾಂಬುವ | ತರಸಂದುಮಜ್ಜನಗೆಯ್ಸಿ ||೧೪೮||

ಇಂತಭಿಷೇಕವಮಾಡಿಯಿಂದ್ರಾಣಿಯ | ಕಾಂತನೊಸೆದುಜಿನಶಿಶುಗೆ ||
ಸಂತಸದಿಂಗಂಧೋದಕಮಜ್ಜನ | ವಂತಳುವದೆಮಾಡಿದನು ||೧೪೯||

ಬಳಿಕಂಬುತೆರೆದರ್ಚನೆಮಾಡಿಸಗ್ಗಿಗ | ಬಳಗಸಹಿತಜಿಸಪತಿಯ ||
ವಿಲಸಿತವುಪ್ಪೈರಾವತದೊಳಗಿಟ್ಟು | ತಳರಿದನಾಸುರರಾಜ ||೧೫೦||

ಸಕಲದೇವರ್ಕಳುಸಹಿತಾಪುರವರ | ಕಕಲಂಕಮಹಿಮನತಂದು ||
ಚಕಿತಕುರಂಗಲೋಚನೆಶಿವದೇವಿಗೆ | ಮುಕುಳಿತಕರಕಂಜನಾಗಿ ||೧೫೧||

ಜಲಧಿವಿಜಯನಪೂಜಿಸಿಮಣಿಮಂಟಪ | ದೊಳಗಾಶಿಶುವಕುಳ್ಳಿರಿಸಿ ||
ಬಳಿಕಸುರರುಪೊಗಳಲುಜಾತಕರ್ಮವ | ನೆಳಸಿರಚಿಸಿಯಂತರದೊಳು ||೧೫೨||

ಸುರವಜಾಜಿಸೆವಾದ್ಯವನಮರೀಜನ | ವುರುಮುದದಿಂಪಾಡುತಿರಲು ||
ಪುರುಹೂತನೊಸೆದುನಾಟ್ಯಮನಾಡಿದನಾ | ವರಜಿನಶಿಶುವಿನಮುಂದೆ ||೧೫೩||

ನಿಟ್ಟಿಸಲೆರಡುದಿಟ್ಟಿಗಳೆಯ್ದುವೆಂದಾ | ನಿಟ್ಟಿಸಲ್ಗಣ್ಣಸಾಸಿರವ ||
ನೆಟ್ಟನೆಧರಿಸಿನಿರೀಕ್ಷಿಸಿದನುಮನ | ಮುಟ್ಟಿವಾಸವನಾಜಿನನ ||೧೫೪||

ಮತ್ತಾತಗೆನೇಮಿನಾಥನೆಂಬೊಳ್ಪಿನ | ರಿತ್ತೊಸಗೆಯಮರ್ತ್ಯಲೋಕದೊಳಗೆಯು ||
ಮೊತ್ತದಸುರರುವೆರಸಿಮಾಡಿಬಳಿಕಾ | ಚಿತ್ತಜರಿಪುವಿಗೆಸಮಸಿ ||೧೫೫||

ಜಿನನಭಿಷೇಕೋತ್ಸವವನೀತೆರದಿಂ | ದನಿಮಿಷವಲ್ಲಭನೆಸಗಿ ||
ಮಿನುಗುವರತ್ನಾಭರಣಸುವಸ್ತ್ರಾದಿ | ಜಿನಶಿಶುವನುಸಿಂಗರಿಸಿ ||೧೫೬||

ಮೇನಕಿರಂಭೆಯೂರ್ವಶಿಯರುಮೊದಲಾ | ದಾನಾರಿಯರನಾಟಿಸಗೆ ||
ಸಾನಂದದಿದಾಡಿಯರಾಗಿಸೀಮಂ | ದಾನಾಕವಲ್ಲಭನುಸುರಿ ||೧೫೭||

ಸುರಸೋದಗೆಯುಮಕ್ಕಳವಾಡಿಬಳಿಕಾ | ಅರುಹನಜನನೀಜನಕರ ||
ಹರುಷದಿಜೀವ್ಯೊಂದಾಸಗ್ಗಕಾಸುರ | ಪರಿವೃಢನೆಯ್ದಿಪತ್ತಿತ್ತ ||೧೫೮||
ಸುಧರೆಗೆಯೆಳೆಮಕ್ಕಳಾಗಿಕ್ರೀಡಿಸುತಿರೆ | ಸುರಸತಿಯರುಸಾಕುತಿರಲು ||
ಸುರಲೋಕದಾಹಾರವನುಂಡುಬೆಳೆದನು | ಸುರಪರಿವೃಢಪೂಜಿತನು ||೧೫೯||

ಬಾಲದೊಡವತೊಟ್ಟುತೊಡಲುಮುಡಿಯುನತಿ | ಲೀಲೆಯಿಂನುಸುಬಿದಟ್ಟಿಯು ||
ಲೋಲನಾಗಿಸಗ್ಗಿಗರೊಡನಾಡುತ | ಕಾಲವಿಜಯನೊಪ್ಪಿದನು ||೧೬೦||
ಬಾಲಕಾಲಮಸಿರದೀ ದಾಟಿಬಳಿಕಾ | ಲೀಲಾನಿಧಿಯೊಪ್ಪಿದನು ||
ನೀಲಶ್ಯಾಮಲಕೋಮಲಗಾತ್ರನು | ಮೂಲೋಕವಲ್ಲಭಂದಳಿಸಲು ||೧೬೧||
ಉತ್ತಮಸಂದ್ಯಾವರ್ತಸ್ವಸ್ತಿಕನು | ಸ್ಫೋಟೋತ್ತರಶತಸಾಸಿರವ ||
ಉತ್ತಮಚಿಹ್ನೆಯುತನುರಸ್ತ್ರೀಸಹಸ್ರ | ಯೊತ್ತರದೋಷವರ್ಜಿತನು ||೧೬೨||
ಮೃದುಮಧುರೋಪೇತಗಂಭೀರವಚನನು | ವಿದಿತತ್ರಿಜ್ಞಾನಸಂಯುತನು ||
ಸೆದಮಲತಿಲಕಾಲಕಾಮುಖ್ಯನವಶತ | ಮುದಿತವ್ಯಂಜನಸಂಯುತನು ||೧೬೩||
ಚರಮಾಂಗನುದಶಧನುಪ್ಪತ್ಸೇಧನು | ವರವಜ್ರವೃಷಭನಾರಾಚ ||
ಸುರುಚಿರಸಮಚತುರಸ್ರಮಸಾರ | ವರುಷದಾಯುಷ್ಯರಂಜಿತನು ||೧೬೪||
ಈತೆರದಿಂನೇಮೀಶ್ವರನಾಪ್ರ | ರ್ಕೀತಕವನುತನ್ನ ಪದಕೆ ||
ಪ್ರೀತಿಯಿಂದೆರಗಿಸಿಕೊಳುತಲೋಕದೊಳುವಿ | ಖ್ಯಾತನಾಗಿಯೊಪ್ಪಿದನು ||೧೬೫||
ಸುರಪರಿವೃಢಫಣಿಪತಿಜನತಾಧೀಶ | ವರಮಣಿಮಕುಟಾಂಘ್ರಿಯುಗಲ ||
ನಿರುಪಮ ಬೋಧನೊಪ್ಪಿದನುಸದ್ಭವ್ಯಬಂ | ಧುರಕವನಿಧಿಪದದ್ವಮನು ||೧೬೬||
ಇದುಜಿನಪದಸರಸಿಜಮಡಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗೊದವಿದಾಶ್ವಾಸದ್ವಾವಿಂಶ ||೧೬೭||

ಇಪ್ಪತ್ತೆರಡನೆಯ ಸಂಧಿ ಸಂಪೂರ್ಣಂ.

## ೨೩ ದ್ರೌಪದೀಸ್ವಯಂವರ ಸಂಧಿ:

———:o:———

ಶ್ರೀಮದಮರಪತಿ ಮೌಳಿಕೀಲಿತ ಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆ ನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ವಿಸ್ತರವಾಗಿರಂಜನೆಯನು ಹಡೆದಾ | ಹಸ್ತಿನಪುರವರದೊಳಗೆ ||
ದುಸ್ತರವಿಕ್ರಮಯುತರಿಪುಭೂಭುಜ | ಮಸ್ತಕಪದಪಾಂಡುರಾಜ ||೨||

ಕುರುಜಾಂಗಣದೇಶವಸತಿಬಲದಿಂ | ದಿರದಾಳುತಿರಲೊಂದುಪಗಲು ||
ಪುರದವನಕೆಸುವ್ರತರೆಂಬ ಮುನಿಪತಿ | ಬರಲಾಬಳಿಗೆಯ್ದಿದನು ||೩||

ಉರುತರಭಕ್ತಿಯಿಂದೆರಗಿಹರಕೆಯಾಂತು | ಪರಧರ್ಮೋಪದೇಶವನು ||
ಸಿರವಿಸಲವರು ನಿರ್ವೇಗಚಿತ್ತದೊಳಂ | ಕುರಿಸೆದೀಕ್ಷೆಯಬೇಡಿದನು ||೪||

ಅನುರಾದಿಂದೀಕ್ಷೆಯಬೇಡೆಕರಮೊಳ್ಳಿ | ತೆನುತಾಮುನಿಯೆಂದನವಗೆ ||
ಮನುಜಾಧಿಪಕೇಳಿಂದಿಗೆಪದಿಮೂರು | ದಿನದಾಯುಷ್ಯವುನಿನಗೆ ||೫||

ಎನೆಪಾಂಡುರಾಜನವರಿಗೆ ವಂದಿಸಿ ತನ್ನ | ಮನೆಗೆಯ್ದಿ ಧರ್ಮಸಂವನಗೆ ||
ಅನುರಾಗದಿಂ ಪಟ್ಟವಕಟ್ಟಿ ಪೂಜಾ | ವಸಿತೆಸಹಿತ ದೀಕ್ಷೆಗೊಂಡು ||೬||

ಪದಿಮೂರುಪಗಲುತಪಂಗೆಯ್ದು ಜೀವಿತಾಂ | ತ್ಯದೊಳಾಪಾಂಡುಮನೀಶ ||
ವಿದಿತಾಮರಲೋಕಪ್ರಾಪ್ತನಾದನು | ಮುದದಿಪೃಥುವಿಪೊಗಳ್ವಂತೆ ||೭||

ಇತ್ತಕೌರವಪಾಂಡುನಂದನರನು ಮನ | ವಿತ್ತುಭೀಷ್ಮರು ಸಾಕುತಿರಲು ||
ಮತ್ತೊಂದುದಿನ ಬಿಲ್ಲೋಜನು ದ್ರೋಣನು | ಬುತ್ತಮನೋಹರಭೂಸುರನು ||

ಆರಾಜಾನ್ವಯಾಗತನುಕೃಪನುವಿಡಿ | ದಾರಾಜಭೀಷ್ಮರಕಾಣೆ ||
ಕಾರುಣ್ಯದಿಂದಮನ್ನಿಸಿಯಾಪಾಂಡವ | ಕೌರವರುಗಳನು ಕರೆಸಿ ||೯||

ಇವರಿಗೆ ಬಿಲುವಿದ್ಯೆಯನು ತೋರಿಸಿಯೆಂದು | ಸವಿನಯದಿಂದಾಸುತರ ||
ಅವರಕ್ಕೈವಶಮಾಡಲಾಸೂರ್ಯವರ್ಗ | ವಿವಿಧಮಪ್ಪಾವಿದ್ಯೆಯನು ||೧೦||

ವಿನಯದಿ ತೋರುತಲಿರಲಾನೃಪ ತ | ನ್ನಸುಜಾತೆ ಸುಂದರಿಯೆಂಬ ||
ವನಜಮುಖಿಯನಾದ್ರೋಣಂಗೆ ಮದುವೆಯ | ವಿನಯದಿಂದಲಿಮಾಡಿದನು||೧೧||

ಆಮಿಥುನದಗರ್ಭದೊಳಗೊಗೆದಶ್ವ | ತ್ಥಾಮನೆಸರನಂದನನು ||
ಕೋಮಲಗಾತ್ರನುಬೆಳೆದುಜವ್ವನದೊಳು | ದ್ದಾಮವಿಕ್ರಮಯುತನಾದ ||೧೨||

ಮತ್ತಾನೂರ್ವರು ಸುಕುಮಾರರ್ಗೆ | ಯುತ್ತಮಶರವಿದ್ಯೆಯನು ||
ಬಿತ್ತರದಿಂ ದ್ರೋಣಾಚಾರ್ಯನೇಕ | ಚಿತ್ತದಿನಭ್ಯಾಸಿಸುತ ||೧೩||

ಇರಲತ್ತ ಚಂಪಾಪುರದೊಳು ಭಾನುಭೂ | ವರನು ಕನ್ನೆಯನರೆಗಂಡು ||
ಧುರಧೀರಕರ್ಣಗೆ ಪಟ್ಟವಕಟ್ಟಿಬಂ | ಧುರಜಿನದೀಕ್ಷೆವಡೆದನು ||೧೪||

ಸುರಭಿಗಿಮ್ಮಡಿ ಸುರಭೂಜಕೆ ನೂರ್ಮಡಿ | ಪರುಷಕೆನಾಲ್ವಡಿಯೆಸೆವ ||
ವರಚಿಂತಾಮಣಿಗೈಮಡಿಯಾಗಿ ಬಂ | ಧುರದಾನಿಯಾದನಾಕರ್ಣ ||೧೫||

ಇಳೆಯನಾಳುತ ಕರ್ಣನೊಂದುಹಗಲು ತನ್ನ | ಕುಲಭೂಷಣವಿವರವನು ||
ತಿಳಿವೆನೆನುತ ಕೈಲಾಸಮಹಾಚಲ | ಕಲಘುವಿಕ್ರಮನಡೆತಂದು ||೧೬||

ಆಶೈಲದ ಕೆಳಗೊಂದು ಸುರವ್ಯಾಪ್ರ | ದೇಶದೊಳಗೆ ಕುಳ್ಳಿರ್ದು ||
ಆಶುಚಿಷೋಡಶಾಕ್ಷರಮಂತ್ರಂಗಳ | ನೇ ಶುದ್ಧಮಾಗಿಜಪಿಸಲು ||೧೭||

ಅವನಿಗೆ ಜ್ವಾಲಾಮಾಲಿನಿವಜ್ರದ | ಕವಚ ದಿವ್ಯಾಸ್ತ್ರಂಗಳನು ||
ಸವಿನಯದಿಂದಿತ್ತು ಬಳಿಕೇನಬೇಡೆನೆ | ಲವಳೊಳಗಿಂತುಸುರಿದನು ||೧೮||

ಎಲೆದೇವಿ ಯೆನ್ನ ಜನನಿಯಾರೆಂಬುದ | ನಲಸದೆ ನನಗರುಪೆನಲು ||
ಜಲಜಲಿಪುರಿಮಾಲೆಯೆಂಬ ವಸ್ತ್ರವನಿತ್ತು | ಬಲಯುತಗಿಂತುನುಡಿದಳು ||೧೯||

ಇದನಾರುಪೊದೆದು ಪಡುಕಮಿರ್ದಾಕೆಯೆ | ಯಧಟನಿನಗೆಮಾತೆಯೆಂದು ||
ಮುದದಿಂನುಡಿದಾದೇವಿ ಬೀಳ್ಕೊಡಲಾ | ಚದುರನೂರಿಗೆ ತಿರುಗಿದನು ||೨೦||

ಪುರವನುಹೊಕ್ಕು ಸುಖದೊಳಿರುತಿರ್ದ | ತರಣಿತನುಜನೊಂದುದಿವಸ ||
ವರಹಸ್ತಿನಾಪುರದೊಳು ಕೌರವಪಾಂಡ | ವರ ಶರವಿದ್ಯೆಯ ಕೀರ್ತಿ ||೨೧||

ಹರೆಯಲು ಕೇಳಿಯುವರನಾನೋಳ್ಪೆನೆಂ | ದಿರದೆ ಪುರವಪೊರಮಟ್ಟು ||
ಭರದಿಹಸ್ತಿನಪುರಕೆಯ್ದಿ ಕುಮಾರರ | ಗರುಡಿಮನೆಯ ಹೊಕ್ಕುನಿಂದು ||೨೨||

ಇವರೇ ದಿವ್ಯಶರಾಸನವಿದ್ಯಾ | ಪ್ರವರರು ಮತ್ತೀವಿದ್ಯೆ ||
ಇವರುತಾನೈಸೆಯೆಂದೆಂಬ ಕರ್ಣನಮಾತ | ನವಧಾರಿಸಿಪಾಂಡವರು ||೨೩||

ಖತಿಯನು ಮನದೊಳುತಾಳಿ ಮತ್ತೆವಿಸ್ಮ | ಯಾತಿಶಯಮಪ್ಪವಿದ್ಯೆಯನು ||
ನುತಿಸವೆಕಟಕಿಯಾಡಿದನಿವನೆಂತ | ಪ್ರತಿಬಲನೋಯೆಂದುನುಡಿಯೆ ||೨೪||

ಆವೇಳೆಯೊಳಾಕೌರವ ಕರ್ಣನ | ಲಾವಣ್ಯಾಕಾರವನು ||
ಭಾವಿಸಿಯಿವನು ಸಾಮಾನ್ಯನಲ್ಲೆನುತ ಮ | ಹಾವಿನಯದಿ ಹತ್ತಿರೆಯ್ದಿ ||೨೫||

ಆ ಕರ್ಣನಕೈವಿಡಿದು ಬಳಿಕ ತ | ನ್ನೇಕಾಸನಕೆಕರೆಯಲು ||
ಭೂಕಾಂತ ಕೇಳು ನಾನಾಗೆಂದರಿಯದೆ | ಈಕೃತ್ಯವನೆಣಿಸುವರೆ ||೨೬||

ಎನಲಿಂತೆಂದನು ಕೌರವನಾರವಿ | ತನಯನಿಗೆಲೆಬಲವಂತ ||
ಮನುಜಾಭಾಸರಿಗೀರೂಪೀವೀರ | ವನುಕರಿಸದುಧರೆಯರಿಯೆ ||೨೭||

ಎಂದುನುಡಿದು ತನ್ನರ್ಧಾಸನಕೆ | ಯ್ತಂದು ಕುಳ್ಳಿರಿಸಿಕೊಂಬಾಗ ||
ಎಂದನದೋರ್ವನಿವನು ಚಂಪೆಯ ಸೂರ್ಯ | ನಂದನನೆಂಬನುಡಿಯನು ||೨೮||

ಕೇಳಿಚಿತ್ತದೊಳು ಕೌರವನತಿಹರ್ಷವ | ತಾಳಿ ಮತ್ತಾಕರ್ಣನೊಳು ||
ಲೀಲೆಯಿಂದಲಿನುಡಿಯುತ್ತಿರಲಾ ಭೀಮ | ನಾಲೋಕಿಸಿ ಕೋಪಗೆಯ್ದು ||೨೯||

ಕಿಸುಗಣ್ಣಿಂದ ನೋಡುತ್ತಿರಲದನರಿ | ದುಸುರ್ದನುಕರ್ಣನಿಂತೆಂದು ||
ಪಸುಳೆಕೇಳು ಕರಿಕಳಭದನೋಟಕೆ | ಬಸವಳಿವುದೆ ಮೃಗರಾಜ ||೩೦||

ಎನಲೆಂದನು ನಿನ್ನನಾರೆಂದರಿಯದೆ | ವಿನಯದಿ ನರಿಗದ್ದುಗೆಯೊಳು ||
ಮನಹೇಸದೆ ಕುಳ್ಳಿರಿಸಬಹುದೆಯೆಂ | ದನಿಲನಂದನನಬಿರುನುಡಿಯೆ ||೩೧||

ಆನುಡಿಗಾಕುರುಪತಿಕೋಪವಿ ಭೀಮ | ಸೇನನನೀಕ್ಷಿಸುತಿರಲು ||
ಮಾನವನೋರ್ವನುಬಂದು ಭೀಷ್ಮರಕೂಡೆ | ತಾನಾವಾರ್ತೆಯನುಸುರೆ ||೩೨||

ಆನುಡಿಯನು ಕೇಳಿಬಂದು ಕೌರವಭೀಮ | ಸೇನರನಾಭೀಷ್ಮನೃಪತಿ ||
ಏನಿದುಕೋಪಮೆನುತ ನಿಜಭವನಕೆ | ತಾನೆಯ್ದಿಸಲನಿತರೊಳು ||೩೩||

ಕಡುನೇಹದಿಂ ಕುರುಪತಿಯಾಕರ್ಣನ | ನೊಡಗೊಂಡುಮಂದಿರಕೆಯ್ದಿ ||
ಒಡನುಂಡೊಡನುಟ್ಟೊಡನಾಡುತ ಪಲ | ವೊಡವೆಯನೊಲವಿಂ ಕೊಟ್ಟು ||೩೪||

ತನ್ನುತ್ಪತ್ತಿಯುಚಿತ್ತದೊಳಗೆನುಂ | ಪನ್ನನುದಶವಂದವನು ||
ಮನ್ನಿಸಿಕೊಟ್ಟು ಬಳಿಕತಾನವನೊಳ | ಭಿನ್ನತೆಯಿಂಕೂಡಿಹನು ||೩೫||

ಎಕ್ಕಕ್ಕೆಯಿಂಕುರುಪತಿ ಭೀಮಸೇನರು | ಲೆಕ್ಕಿಸದೊಬ್ಬರೊಬ್ಬರನು ||
ಮಿಕ್ಕಗದಾವಿದ್ಯಾಪರಿಣತರಾಗಿ | ಸೊಕ್ಕಾನೆಯಂತೊಪ್ಪಿದರು ||೩೬||

ಹೇಳುವೆನೇನನರ್ಜುನನುಬಿಲ್ಲೊಳು ಬ | ಲ್ಲಾಳುಸಕಲನುಕೊಂತದೊಳು ||
ಬಾಳನೊಳಗೆನಹದೇವನಗ್ಗಳರಾಗಿ | ಭೂಲೋಕದೊಳಗೆಮೆರೆದರು ||೩೭||

ಒಬ್ಬರೊಬ್ಬರುಪೋದವಾರಿಯುಮೆಟ್ಟರು | ಒಬ್ಬರೊಬ್ಬರೊಳುನುಡಿಯರು ||
ಒಬ್ಬರೊಬ್ಬರನೋಡರುಕೌರವರೊಳು | ಗಬ್ಬಿಗಳಾಗಿಪಾಂಡವರು ||೩೮||

ಅನಿಲಸುತನಪಲುಗುಣರದೋರ್ವಲದೊಂದು | ಘನತೆಯಕಂಡುಕೌರವನು ||
ಮನದೊಳುರವನುಘೃತಆಹುತಿಯುನುಕೊಂ | ಡನಲಸಂಬಮಾಕ್ಕಿಯೊಳು ||೩೯||

ಇಂತವರಿರ್ದದ್ರೋಣನೊಂದುದಿವಸತನ್ನ | ಪಿಂತಣಾಹರೆಯುದನನುಸು ||
ಕಂತುಸದೃಶಪಾಂಚಾಲಾಧಿಪತಿಯನು | ಸಂತಸದಿನೋಳ್ಪೆನೆಂದು ||೪೦||

ಕರಿಪುರವನುಪೊರಮಟ್ಟದ್ರುಪದಭೂ | ವರನಲ್ಲಿಗೆಬರಲವನು ||
ಸಿರಿಮದದಿಂಸತ್ಕರಿಸದೆಮರೆದಾ | ದರವಮಾಡದೆಸುಮ್ಮನಿರಲು ||೪೧||

ಅದಕೆಲಜ್ಜಿಸಿಬಂದಾದ್ರೋಣನತಿಕೋಪ | ಹೃದಯನುಗಜಪುರಕೆಯ್ದಿ ||
ಅಧಟನಂತಕಸುತನೊಳುತಾನೆಯ್ದಿದ | ಹದನನುಸುರೆಕೇಳುತವೆ ||೪೨||

ಎಮ್ಮಗುರುವಮನ್ನಿಸದಾದ್ರುಪದನ | ಹಮ್ಮಬಿಡಿಸುವೆನೆಂದು ||
ತಮ್ಮನರ್ಜುನನುಭಟರದೇವಗುಸುರಲು | ಸುಮ್ಮಾನದಿಂಪೊರಮಟ್ಟು ||೪೩||

ಅತಿಕೋಪದಿಂಪೋಗಿಕಾದಿಯಾಪಾಂಚಾಲ | ಪತಿಯನುಪೆಡಗೈಗಟ್ಟಿ ||
ಕ್ಷಿತಿಯೆಲ್ಲಪೊಗಳಲುತಂದುಯುಧಿಷ್ಠಿರ | ಪತಿಯುಮುಂಗಡೆಯೊಳುನಿಲಿಸೆ ||೪೪||

ಪಾಡುಗೆಡಿಸಿಪಿಡಿತಂದಾದ್ರುಪದನ | ನೋಡೆಂದುಗುರುವನುಬರಿಸೆ ||
ನೋಡಿಯೆನ್ನನುನಾಜ್ಞೆಸಿದೆಯೆನುತಮಾತ | ನಾಡಿಲಜ್ಜಿಸಿಬಳಿಕವನ ||೪೫||

ನಿಜನಗರಿಗೆಕಳುಹಲುಕಂಡುಪಾರ್ಥನ | ಭುಜಬಲದೊಂದೇಳಿಗೆಗೆ ||
ಗಜಪುರವೆಲ್ಲಪೊಗಳುತಿರಲುರಗ | ಧ್ವಜನಾಸುಡಿಯನುಕೇಳಿ || ||೪೬||

ಎಕ್ಕಟಿಗಲಿಭೀಮನಮೇಲಣಕೋಪ | ವುಕ್ಕುವಘೃತದೊಳಗುದಕ ||
ಒಕ್ಕವೊಲಾದುದರ್ಜುನನ ವಿಕ್ರಮದ | ವುಕ್ಕೆವದಿಂಕೌರವಗೆ ||೪೭||

ಇನ್ನಿವರಸುಕೃತಕದಿಕೊಂದಲ್ಲದೆ | ಯೆನ್ನಬಾಳುವೆಯಿಲ್ಲವೆಂದು ||
ತನ್ನೊಳುತಾಚಿಂತಿಸಿಕುರುಭೂಪತಿ | ಮುನ್ನತನಗೆವಶವಾದ ||೪೮||

ವಾರಾಣಸಿಪುರದೊಳುಜತುಗೇಹವ | ನಾರರಿಯದವಾಳ್ಕಿಯೊಳು ||
ನೇರವಾಗಿಮಾಡಿಸಿಧೃತರಾಷ್ಟ್ರಮ | ಹೀರಮಣನಬಳಿಗೆಯ್ದಿ ||೪೯||

ಜನಕಚಿತ್ತೈಸೆನ್ನ ಬಿನ್ನಪವನುಪಾಂಡು | ತನುಜಾತರುಮನ್ನಿಸದೆ ||
ಮನದೊಳುಬಗೆಯದುದ್ಧತರಾಗಿರ್ಪುದ | ನಿನಿಸುತಾಳುವುದಿಲ್ಲನಾನು ||೫೦||

ಒಂದೊರೆಯೊಳಗತಿನಿಸಿತಮಪ್ಪಸಿಯೆರ | ಡೊಂದುವಣೆಯುವದರಂತೆ ||
ಒಂದೂರೊಳಗೀರ್ವರರಸುತನನಾಳ್ವ | ದಂದವಹುದೆಭೂಪಾಲ ||೫೧||

ಎನಲೆಲೆತನುಜಾತನಿನ್ನಯ ಮನಸಿಗೆ | ಯನುವಪ್ಪಂತುಮಾಡುವೆನು ||
ಎನುತವನನುಬೀಳ್ಕೊಟ್ಟು ಬಳಿಕಧರ್ಮಜ | ತನುಜನಕರೆಯಿಸಿಕೊಂಡು ||೫೨||

ಮಗನೆಕೇಳುಧರ್ಮಜನಾನುನಿನಗೊಂದು | ಸೊಗಯಿಪಮಾತನೊರೆವೆನು ||
ಬಗೆಗೊಂಡಾನುಡಿಯನು ಕೈಕೊಳ್ಳೆಂದು | ಮಿಗಿಲಾಗಿಬೋಧಿಸಿನುಡಿಯೆ ||೫೩||

ಆನುಡಿಗಿಂತೆಂದನೆಲೆಪ್ರಿಯಜನಕಾ | ನೀನೆನಗುಸುರುವನುಡಿಯ |
ನಾನುಮೀರುವುದಿಲ್ಲನಿರವಿಸಿಮೆನಲಾ | ಭೂನುತನುಸುರಲುಕೇಳಿ ||೫೪||

ನಿಮ್ಮಾರ್ವರುಭೂವರರೊಳಗೋರ್ವರು | ನಮ್ಮದೇಶದೊಳೊಂದುಪುರಕೆ ||
ಸಮ್ಮದದಿಂಪೋಗಿನಿಮ್ಮದೇಶಮನಾಳ್ವ | ದೆಮ್ಮನುಮತವೆಲೆಮಗನೆ ||೫೫||

ನೀವೇಪೋದಪಿರೋ ಅಲ್ಲದೊಡೆಕುರು | ಭೂವರನನುಕಳುಹುವೆವೊ ||
ಈವಿಧವನುನಿನ್ನಮನದೊಳಗೆರಡಿಲ್ಲ | ದೇವುಸುರುವುದೆಲೆಮಗನೆ ||೫೬||

ಎಂದುನುಡಿದನುಡಿಯನುಕೇಳಿಯಾಧರ್ಮಜ | ನಂದನನಿಂತುನುಡಿದನು ||
ತಂದೆಕೇಳುನಿಮ್ಮಯಚಿತ್ತಕೆಬಂದು | ದೊಂದೂರಿಗಾನುಪೋದಪೆನು ||೫೭||

ಎನಲೆಂದನುನಿನ್ನನುಜರುಸಹಿತಾ | ಜನನುತವಾರಾಣಸಿಗೆ ||
ಅನುರಾಗದಿಂಪೋಗಿಸಲೆಸುಖದಿಂದಾ | ಜನಪದವನುರಕ್ಷಿಸುವುದು ||೫೮||

ಎಂಬುದಂತೆಗೆಯ್ವೆನೆಂದುಸದ್ಗುಣನಿಕು | ರುಂಬನವನಬೀಳ್ಕೊಂಡು ||
ಇಂಬುವಡೆದಶುಭದಿನದೊಳಗನುಜರು | ಬೆಂಬಳಿಯೊಳುಪೊರಮಡಲು ||೫೯||

ಅನುರಾಗದಲಿಭೀಷ್ಮರಿಗೆವಂದಿಸಿಬಂಧು | ಜನಗಳನುರೆಬೀಳ್ಕೊಂಡು ||
ಅನಿಮಿಷಪತಿವಿಭವದಿಪೊರಮಟ್ಟನು | ಜನನುತನಾನಾಗಪುರವ ||೬೦||

ಭರದಿಂದಪೊರಮಟ್ಟಾವಾರಾಣಸೀ | ಪುರಕೆಪೋಗಲ್ಕಿರ್ದ ||
ಕುರುರಾಜನಪೇರ್ಗಡೆಸಲೋಚನನೆಂಬ | ನುರುಮುದದಿಂದಿದಿರ್ಗೊಂಡು ||೬೧||

ಕೃತಕವಿಂದಮಾಡಿದರಗಿನಮನೆಗಾ | ಕ್ಷಿತಿಪಕುಮಾರರಹೊಗಿಸಿ ||
ಅತಿಸುಖದಿಂದಿರಲಲ್ಲಿಗೆವಿದುರನು | ಸ್ನತಿಕೆವಡೆದಮತುಕದೊಳು ||೬೨||

ತೊಳಪರಗಿನಮನೆಯನುಮಾಡಿದೀಪಾ | ವಳಿಯೊಳಗಾದೀವಿಗೆಗಳ ||
ಬೆಳಗುವನೆವದಿಂದಾಮನೆಯನುಸುಟ್ಟು | ತುಳಿಲಾಳುನಿಮ್ಮನೆಲ್ಲರನು ||೬೩||

ಕುರುಪತಿಕೊಲುವಕಜ್ಜಮನೆಸಗಿದನಿದು | ನಿರುತಮೆಂದುಗೂಢಚರರ ||
ತ್ವರಿತದಿನೆಯ್ದಿಸಲಾಮಾತನವರುಬಂ | ದೊರೆಯಲದಸುತಾಮರಿದು ||೬೪||

ಮುನ್ನಸುರಂಗವೆಂಬೊಂದುಬಿಲವತಾವು | ಚೆನ್ನಾಗಿಸಮೆದುಕೊಂಡಿರಲು ||
ಅಸ್ನಿಗಮೂದೀಪಾವಳಿಬರಲಾ | ಸನ್ನಿಯಸಂಕೇತದವರು ||೬೫||

ದೀವಿಗೆಗಳನುಬೆಳಗಲಾವುರಿಲಾ | ಕ್ಷಾವಾಸವನಿರದಡರೆ ||
ಆವುತ್ತಮಸತ್ವೋಪೇತರುಕೊಂತಿ | ದೇವಿಸಹಿತಪೊರಮಟ್ಟು ||೬೬||

ಅಸುರುಚಿರಬಿಲದಿಂನಡುವಿರುಳಿನೊ | ಳೋಸರಿಸದೆನಡೆತಂದು ||
ಭಾಸುರಮೂರ್ತಿಗಳದಿರದೆಹೊಕ್ಕರೊಂ | ದಾಸುರಮಪ್ಪಡವಿಯನು ||೬೭||

ಅಲ್ಲಿಕಿಮ್ಮೀರನೆಂಬೋರ್ವದಾನವಸತಿ | ಬಲ್ಲಿದನಾನಿರ್ದೆಡೆಗೆ||
ನಿಲ್ಲದೆಬಂದವರಾರೆಂದಿದಿರಾಗಿ | ಪೊಲ್ಲದಮುನಿಸಿಸಿಂಬಾದ ||೬೮||

ಹಿರಿಯದೊಂದುಮರವನುಕಿಳ್ತುತಿರ್ರನೆ | ತಿರುಹಿಹೊಡೆವೆನೆಂಬಾಗ ||
ಉರುಕೋಪದಿಂದಗದೆಯಕೈವಿಡಿದಾ | ಮರುತಸಂದನನಿದಿರಾಗಿ ||೬೯||

ಪರ್ವತವನುವಜ್ರದಂಡವಪಿಡಿದುಸು | ಪರ್ವಾಧಿಪತಿಪೊಡೆವಂತೆ ||
ದೋರ್ವಲಶಾಲಿಯಸುರನಹೊಡೆದುಕೊಂದ | ಸುರ್ವಿಯೆಲ್ಲಡಿರುವಂದದೊಳು ||೭೦

ಇತ್ತಕೌರವನಾಪಾಂಡವಭೂಪಾ | ಲೋತ್ತಂಸರರಗಃವನೆಯೊಳು ||
ಸತ್ತರೆಂಬವಾರತೆಗೇಳಿಸಂತಸ | ವೆತ್ತುನಿಶ್ಚಿಂತದಿಂದಿರ್ದ ||೭೧||

ಅರಗಿನಮನೆಯೊಳಗಾಪಾಂಡುತನುಜರು | ಮರಣಪಡೆದವಾರ್ತೆಯನು ||
ಹರಿವಂಶದವನೀಶ್ವರರೆಲ್ಲರುಕೇಳಿ | ಪಿರಿದುದುಃಖವತಾಳಲಿತ್ತ ||೭೨||

ಆಮಹಿಮಂಬುತದ್ವೀಪಿನರಕ್ಷಕನು | ದ್ದಾಮಸತ್ವೋಪೇತನಾದ ||
ಕಾಮುದನಸುರನಕೊಂದುದಯದೊಳಭಿ | ರಾಮತೆಯನುನೆರೆಪಡೆದ ||೭೩||

ಕಾಸಾರಮೆಂಬಪುರದವನದೊಳಗಾ | ವಾಸಿಗರಿರಲಲ್ಲಿಯರಸು ||
ವಾಸವನಿಭಧಾಸ್ಯರಾಜನರಮಣಿಧ | ರಾಸುಂದರಿಯೆಂಬವಳು ||೭೪||

ಅವರೀರ್ವರಸುತೆಕುಸುಮಮಾಲಿನಿಯೆಂಬ | ಯುವತಿಯಪ್ರತಿಮವಿಲಾಸೆ ||
ಅವಳನುಧರ್ಮನಂದನಗಲ್ಲದೀಯೆನಂ | ದವರನುಸಯದಿಂದಿರಲು ||೭೫||

ಅರಗಿನಹರ್ಮ್ಯದೊಳಗೆಪಾಂಡುತನುಜರು | ಮರಣಪಡೆದರೆಂಬಮಾತು ||
ಹರೆಯಲುಕೇಳಿದುಃಖಿತನಾಗಿಧಾನ್ಯಭೂ | ವರನೋರ್ವಮುನಿಯೆಡೆಗೆಯ್ದಿ ||೭೬||

ನತನಾಗಿಕ್ಕೈಮುಗಿದೆಲೆಮುನಿತಿಲಕಾ | ಜತುಗೃಹದೊಳುಪಾಂಡುಸುತರು ||
ಹತವಾದರೆನ್ನತನೂಜೆಯುನಾಧರ್ಮ | ಸುತಗೀವೆನೆಂದುಸಂಬಿರ್ದೆ ||೭೭||

ಅವರಳಿದುದುನಿಜವೋಹುಸಿಯೋಯೆಂಬ | ವಿವರವನಿರವಿಸೆಂದೆಸಲು ||
ಅವಧಿಜ್ಞಾನಿಗಳಾಚರಮಾಂಗರ್ಗೆ | ಭುವನದೊಳುಂಟೆಕಂಟಕವು ||೭೮||

ಅದರಿಂದವರುಕಿಚ್ಚಿನೊಳಗಳಿದುದುಪುಸಿ | ಯುಧಟಕೇಳಿಂದಿಸದಿಸದ ||
ಉದಯದೊಳಗೆನಿನ್ನೂರವನಕೆಬಂದ | ರಿದನುನೀನರಿಪೋಗೆಂದು ||೭೯||

ಮುನಿಪತಿಯಾಜನಪತಿಯನುಬೀಳ್ಕೊಡ | ಲನುಸಯದಿಂದೆಯ್ತಂದು ||
ವನದಮಧ್ಯದೊಳುಕುಳ್ಳಿರ್ದಾಕೊಂತೀ | ತನುಜಾತರಕಂಡನಾಗ ||೮೦||

ಹರುಷದಿನಿಜಗೃಹಕೆಯ್ದಿಸಿಯಾದಿನ | ದಿರುಳೊಳುಕುಸುಮಮಾಲೆಯನು
ಉರುಶೋಭೆಯಿಂದಮದುವೆಯಮಾಡಿದನಾ | ವರಗುಣಿಧರ್ಮನಂದನಗೆ ||೮೧||

ಬಂದುಗೆದುಟಿಯಬಲ್ಮುಗುಳುವೊಂದಾವರೆ | ಯಂದದಘನಕುಚಯುಗದ ||
ಕುಂದರದನದಕುಂಕುಮಗಂಧಿಯನಾ | ನಂದದಿಮದುವೆಮಾಡಿದನು ||೮೨||

ಅಂದದಿನಂಬರಮಧ್ಯೆಯನಾದಲಿ | ತೇಂದೀವರನೇತ್ರೆಯನು ||
ಸಂದಸದ್ವೃತ್ತಸುಭಗರಾಜಹಂಸಗಾ | ನಂದದಿಮದುವೆಮಾಡಿದನು ||೮೩||

ಸಂತಸದಿಂದಾಸ್ತ್ರೀರತ್ನದೊಡನ | ತ್ಯಂತಾಸಕ್ತಿಯೊಳಿರ್ದು ||
ಅಂತಕಾತ್ಮಜನಲ್ಲಿಂಪೋಪಕಜ್ಜವ | ತಾಂತವಕದಿನೆಣಿಸಿದನು ||೮೪||

ತಮ್ಮಪಯಣವನುಧಾನ್ಯರಾಜಗೆಪೇಳಿ | ಸುಮ್ಮಾನದಿನೊಂದಿರುಳು ||
ತಮ್ಮಂದಿರೊಡವರೆತತ್ಪುರವರವನು | ಘಮ್ಮನೆಪೊರಮಟ್ಟನಾಗ ||೮೫||

ಕೊಂತಿಸಹಿತಕಡುದೊಡ್ಡಿತಪ್ಪೊಂದುವ | ನಾಂತರಾಳವಹೊಕ್ಕುಬಳಿಕ ||
ಸಂತತಸುಖಿಸುವತಾಪಸರಾಶ್ರಮ | ವಾಂತವಕದಿನೆಯ್ದಲಾಗ ||೮೬||

ಅಲ್ಲಿಯೋರ್ವಳುಹರಸುರಿಗಣ್ಣಿನಳಿದಲ | ರ್ವಿಲ್ಲಬಲ್ಲಹನಗಲ್ಕೆಯೊಳು ||
ನಿಲ್ಲದೆರತಿತಪಮಿರ್ದಪಳೋಯೆನೆ | ಫುಲ್ಲಾಕ್ಷಿತಪಗೈಯುತಿರಲು || ||೮೭||

ಟೆಟ್ಟುಜಡೆಯಬಿಳುಪೇರಿಸಿಪಲ್ಗಳ | ಸುಟ್ಟುವಲ್ಕಲದುಡಿಗೆಯನು ||
ತೊಟ್ಟುಭಸ್ಮವನಂಗೋಪಾಂಗದೊಳುಬಗೆ | ಯಿಟ್ಟುತಪಸುಗೈಯುತಿರಲು ||೮೮||

ರನ್ನದರಮಣಿಯೆಂಬಂತಪರಂಜಿಯು | ಹೊನ್ನಕುಮಾರಿಯೆಂಬಂತೆ ||
ತನ್ನತನುವತಾಮರೆದುತಪಂಗೆಯ್ವ | ಕನ್ನೆಕಣ್ಬಗೆಗೊಪ್ಪುತಿರಲು ||೮೯||

ಈಯೋಳುವರೆಯದೊಳೀಚಲ್ವಿಕೆಯನಾಂ | ತಾಯತಾಕ್ಷಿಗೆತಪವೇಕೆ ||
ಈಯಂದವನುಸುರೆಯರಿವೆನೆನುತಕೊಂತಿ | ಯಾಯೆಡೆಗಿರದೆಯ್ಯಂದು ||೯೦||

ತರುಣಿನಿನಗೆಕಿರುವರೆಯದೊಳೀಕೀ | ಪಿರಿದಪ್ಪತಪಮಿದನೆನಗೆ ||
ಒರೆವುದೆನುತಕೀರಿಕೇಳಿಕಣ್ದೆರೆದಾ | ತುರದಿಕಂಡಳುಧರ್ಮಸುತನ ||೯೧||

ಕಟ್ಟೊಲವಿಂತಪವನುಮಾಡುತಾಮಂಜು | ವೆಟ್ಟವುಗಳುಶಂಕರನ ||
ದಿಟ್ಟಿದೆರೆದುನೋಡಿದಂತಾಸತಿಕ | ಣ್ಣಿಟ್ಟುನೋಡಿದಳಾನೃಪನ ||೯೨||

ಜರಿದುದುಕ್ಕೈಯುಜಪದಮಾಲೆಕಣ್ಗಳೋ | ಳ್ವರಿಸಿದುದಾನಂದವಾರಿ ||
ಪರಿದುದುಕ್ಕೈರವಾಕ್ಷಿಯಕಣ್ಮನವಾ | ನರನಾಥಚಂದ್ರಸಮೇತೆ ||೯೩||

ಇಂತುನಿರೀಕ್ಷಿಸುತಾಯಿಂದುಮುಖಿತ | ನ್ನಂತರಂಗದಕಾರ್ಯವನು ||
ಕೊಂತಿದೇವಿಯೊಳುಕಣ್ಗಳನೀರಮಿಡಿವುತ | ತಾಂತಳುವದೆಪೇಳ್ದಳಿಂತು ||೯೪||

ಎನ್ನಜನಕವಿಂಧ್ಯಕನಾತನಸತಿ | ಚೆನ್ನೆಸುರಕ್ಷಣೆಯವರ್ಗೆ ||
ಕನ್ನೆವಸಂತಸುಂದರಿಯೆಂಬಸುತೆನಾನು | ಮುನ್ನಯುಧಿಷ್ಠಿರನೃಪಗೆ ||೯೫||

ಎನ್ನನುಕೊಡುನೆಂದಿರೆಜತುಗೇಹದೊ | ಳುನ್ನತರಳಿದುದಕೇಳಿ ||
ಅನ್ನಿಗನೋರ್ವರಮಗಗೆಮ್ಮಯ್ಯನು | ಮನ್ನಿಸಿಕೊಡುವೆನೆಂದೆಣಿಸೆ ||೯೬||

ಆವಾರತೆಯನಾನರಿದುಬ್ಬೆಗದಿನೆ | ಮ್ಮಾವೂರನುಪೊರಮಟ್ಟು ||
ಆವಾವರರಿಯದಂದದಿಬಂದುಭರದಿಂ | ದೀವನಮಧ್ಯವಹೊಕ್ಕು ||೯೭||

ಮುಂದಣಭವಕಾದೊಡಾಧರ್ಮತನುಜನೊ | ಳೊಂದಿಸೌಖ್ಯವನುಹಡೆವೆನು ||
ಎಂದೀತೆರದತಾಪಸರೂಪಧರಿಸಿದೆ | ನೆಂದುತಾನೆಯ್ದಿದತೆರನ ||೯೮||

ಆನಾರಿನುಡಿಯೆನಿವೇದಿಸಿದಳುಕೊಂತಿ | ಮಾನಿನಿಬಿಡುದುಃಖವನು ||
ನೀನಿಚ್ಚೈಸುವಪತಿಯಿವನೆಂದುಮ | ಹಾನುಭಾವನತೋರುತವೆ ||೯೯||

ತಾಮೆಯ್ದಿದವೃತ್ತಕವನವಳಕೂಡೆ | ಪ್ರೇಮದಿಮಾತಾಡಿಬಳಿಕ ||
ಕೋಮಲೆಯಿನ್ನುನಿಶ್ಚಲಮುರುಮೆಂದಾ | ಭಾಮೆಯನವರೂರ್ಗೆಕಳುಹೆ ||೧೦೦||

ಸುಗುಣರಲ್ಲಿಂಪೋಗಿತ್ರಿಸ್ಥಂಗಮೆಂಬೊಂದು | ನಗರಿಯಪೊರವನದೊಳಗೆ ||
ಸೊಗಯಿಪಚಂದ್ರನಾಥನಬಸದಿಯಹೊಕ್ಕು | ವೊಗುಮಿಗೆಯೊಲವಿನೊಳೆರಗಿ ||೧೦೧||

ಅಲ್ಲಿರ್ದವೀರಾಚಾರ್ಯಮುನೀಶಗೆ | ಯುಲ್ಲಾಸದಿಂಪೊಡಮಟ್ಟು ||
ಸೊಲ್ಲಿಸಲವರುಧರ್ಮವಕೇಳುತಿರ್ಪನ್ನೆ | ಗಲ್ಲಿಗಾಪಟ್ಟಣದರಸು ||೧೦೨||

ಭರತಷಟ್ಖಂಡವಾಳಿದ ಮುನ್ನಿನಚಕ್ರಿ | ಧರರಾಪನ್ನೀರ್ವರುಗಳ ||
ಉರುತರಮಪ್ಪೈಸಿರಿವೆಣ್ಗಳೆಂದೆನೆ | ವರತನುಜೆಯರೊಡವರಲು ||೧೦೩||

ಅನುದಿನಮಂಬರದೊಳು ಭ್ರಮಿಸಿದುದೊಂದು | ತನುವಿನಾಸರು ಹಿಂಗಲೆಂದು ||
ಮನವೊಸೆದಿಳಿದಬಾರಹಭಾಸ್ಕರರ ನಿಜ | ವನಿತೆಯರಿವರೆಂಬಂತೆ ||೧೦೪||

ಪನ್ನೀರ್ವ್ವರುಕುವರಿಯರೊಡವರೆ ಬಂದು | ಸನ್ನುತಮಪ್ಪಭಕ್ತಿಯೊಳು ||
ಚೆನ್ನಾಗಿಯಾದೇವರು ಗುರುವಿನಕಾಲ್ಗೆ | ತನ್ನಮಂಡೆಯನಿಟ್ಟು ಬಳಿಕ ||೧೦೫||

ಎಲೆಯವಧಿಜ್ಞಾನಿ ಮುನಿಪಕಿಯೆನ್ನೀ | ಒಲವಿನತನುಜೆಯರಿವರ ||
ಬಲವಂತಸಂತತಕಪುತ್ರಗೆ ಕೊಡಲೆಂದು | ನೆಲೆವಾಡಿಕೊಂಡಿರ್ದನೀಗ ||೧೦೬||

ಆ ಲಲಿತಾಂಗನನುಜರುವೆರಸಿಲಾ | ಕ್ಷಾಲಯದೊಳುಸತ್ತರೆಂದು ||
ಬಾಲೆಯರಿವರುಬ್ಬೆಗದಿಂತಪವನು | ತಾಳುವೆವೆಂದೆನುತಿಹರೆ ||೧೦೭||

ಎನೆಮುನಿಯೆಂದನೆಲೇಮನುಜೇಶಾ | ಘನಮಹಿಮರುಪಾಂಡವರು ||
ವಿನುತಚರಮದೇಹಿಗಳವರಿಗೆಕೇ | ಡನುಕರಿಸುವುದಿನಿಸಿಲ್ಲ ||೧೦೮||

ಎಂಬುದುಚಂಡವಾಹನನಾಮುನಿಪನ | ಕೆಂಬಜ್ಜೆಗೆಪಣೆಯಿಟ್ಟು ||
ಅಂಬುಜಮುಖಿಯರಣುಗೆಯರುಸಹಿತಾ | ಡಂಬರದಿಂಪೋದನಿತ್ತ ||೧೦೯||

ಆವಮಾತುಗೇಳಿಧರ್ಮಜನಾಬಳಿಯಿಂ | ಭೀಮಾರ್ಜುನರಮಳುಗಳು ||
ಆಮಾತೃಕೊಂತಿಸಹಿತಮುನಿನಾಥನ | ಕೋಮಲಪದಪದ್ಮಕೆರಗಿ ||೧೧೦||

ಪೊರಮಟ್ಟಾಭೀಮಾಟವಿಯನುದಾಂಟಿ | ಪರತೊಂದುನಗರಮನೆಯ್ದಿ ||
ಉರುವಜಿನಾಲಯವನುಹೊಕ್ಕುಜಿನಪತಿ | ಗೆರಗಿಯೊರಗಿರಾತ್ರಿಯೊಳು ||೧೧೧||

ಅಲ್ಲಿಂದವೆಪೊರಮಟ್ಟಾವಸುಧಾ | ವಲ್ಲಭರಂದೈತಂದು ||
ಸಲ್ಲಲಿತಂಬಡೆದೊಂದಗ್ರಹಾರಕೆ | ಯುಲ್ಲಾಸದಿಂದೆಯ್ದಿದರು ||೧೧೨||

ಆಪೂರಮುಂದೆರಂಜಿಸುವಾರವೆಯೊಳು | ಭೂವರರವರುನಿಂದಿರಲು ||
ತೀವಿಭಕ್ಷ್ಯವನೊಂದುಬಂಡಿಯೊಳೋರ್ವಭೂ | ದೇವನಮುಗನಕುಳ್ಳಿರಿಸಿ ||೧೧೩||

ಅವನೇರಿದಬಂಡಿಯಹಿಂದೋರ್ವಳು | ತವೆಶೋಕಿಸುತೆಯ್ತರಲು ||
ಅವನೀಶರಿಂತಿದೇನೆಂದುಕೇಳಿದೊಡಾಗ | ಲವಳಿಂತೆಂದಾಡಿದಳು ||೧೧೪||

ಹರಿಪುರಮೆಂಬಪಟ್ಟಣದೊಳುಬಾಣನೆಂ | ಬರಸಪ್ಪಮದಯುತನಾಗಿ ||
ಧರೆಯನಾಳುತಮಾಂಸಾಹಾರಲೋಲುಪ | ನಿರಲೊಂದಾನೊಂದುಪಗಲು||೧೧೫||

ಎಡೆಬಿಡುವಿಲ್ಲದೆತನ್ನಕೈಯೊರೆತಂ | ದಡುಗೆಮಾಡುವಬಾಣಸಿಗನು ||
ಅಡಗುದೊರಕದಿರಲರಸಿಬರುತ್ತೊಂ | ದೆಡೆಯೊಳಗೋರ್ವಮಾನವನು ||೧೧೬||

ಮರಣವಡೆದುಬಿದ್ದಿರೆಕಂಡಾಮೈಯ | ಸರಿದುಮತ್ತಾಮಾಂಸವನು ||
ತ್ವರಿತದಿತಂದಡುಗೆಯಮಾಡಿಯುಣಲಿಕ್ಕ | ಲಿರದಾನೃಪನದನವಿದು ||೧೧೭||

ಸವಿಯಾಯ್ತಾಮಾಂಸವೇತರದೆಂಬುದ | ವಿವರಿಸೆಂದೆನುತಾಗ್ರಹದಿ ||
ಅವನೀಪತಿಕೇಳಿದೊಡತಿಭೀತಿಯಿಂ | ದವನಿಂತೆಂದಾಡಿದನು ||೧೧೮||

ಅಡಗುದೊರಕದಿರೆ ನರಮಾಂಸವತಂ | ದಡುಗೆಯಮಾಡಿದೆನೆಂದು ||
ಕಡುಬೆದರುತಪೇಳಲಂಜಲುಬೇಡನೀ | ನಡುವುದಿಂದು ಮೊದಲಾಗಿ ||೧೧೯||

ಈನರಮಾಂಸವನೆಂದುನುಡಿದುಮ | ತ್ತಾನೃಪನತ್ಯಾಸೆಯಿಂದ ||
ಮಾನವರನುಕೊಂದುತರಿಸಿಯಾಮಾಂಸವ | ತಾನುಂಡುತಣಿವುತಲಿಹನು ||೧೨೦||

ಅರಸಿರದೆಸಗುವನಾಚಾರವಕಂಡು | ಪುರಪ್ರಜನವೆಲ್ಲನೆರೆದು ||
ತ್ವರಿತದಿಂದವನಮಗಗೆ ಪಟ್ಟವಕಟ್ಟಿ | ಪುರದಿಂತಗುಳಿದರವನ ||೧೨೧||

ಭ್ರಷ್ಟನಾಗಿ ಬಂದಾಬಾಣಸನತ್ಯಂತ | ದುಷ್ಟನುತನ್ನತನುವಿಗೆ ||
ತುಷ್ಟಿಯಪ್ಪಂತೆರಾಕ್ಷಸವಿದ್ಯೆಯನುಮನ | ದಿಷ್ಟದಿನಭ್ಯಾಸಮಾಡಿ ||೧೨೨||

ಆ ವಿದ್ಯೆಯಿಂದರಾಕ್ಷಸರೂಪುವಡೆದುಮ | ತ್ತಾವಾವಪಳ್ಳಿಪಳ್ಳಿಯೊಳು ||
ಹೇವವಿಲ್ಲದೆಮನುಜರಕೊಂದುತಿಂಬನು | ಭೂವಲಯವುಬೆಚ್ಚುವಂತೆ ||೧೨೩||

ಈ ರೀತಿಯಿಂಕೊಂದುತಿನುತ್ತೈದುತೀಯಗ್ರ | ಹಾರವಹೊಕ್ಕಿಲ್ಲಿರ್ಪ ||
ಹಾರುವರೆಲ್ಲರಲೆಕ್ಕವಿಲ್ಲದೆಕೊಂದು | ಪೂರಿಸುವನುತನ್ನೊಡಲ ||೧೨೪||

ಘನವಾಗಿಕೊಲುವರಕ್ಕಸನಟ್ಟುಳಿಗೆಪುರ | ಜನವೆಲ್ಲನೆರೆದೈಯ್ತಂದು ||
ವಿನತರಾಗಿಯೆದಿನಕೊಬ್ಬರೊಬ್ಬರತಂದು | ನಿನಗೆಬಲಿಯನುಕೊಡುವೆವು ||೧೨೫||

ಎಂದಾಬಾಣಾಸುರನದಕೊಡಂಬಡು | ವಂದದಿನುಡಿದಾದ್ವಿಜರು ||
ಒಂದೊಂದುದಿನಕ್ಕೋರ್ವಪಾರ್ವನನಿರದೆ | ಯ್ತಂದುಬಲಿಯಕೊಡುತಿಹರು ||೧೨೬||

ಈ ಬಂಡಿಯಹೋರಿಯಿದರೊಳುತೀವಿ | ದಿರ್ಭಕ್ಷ್ಯಸಹಿತಮ್ಮೂರ ||
ಈ ಭೂಸುರರನೆಲ್ಲರತಿಂಬವಬಿಡನೀ | ಕ್ಷೋಭೆಕಾರರಕ್ಕಸನು ||೧೨೭||

ಇಂದೆನ್ನಮಗನಸಮದುವೆಬಂದುದುಮ | ತ್ತಿಂದೇ ಈ ಬಾಣಸಬಾರಿ ||
ಎಂದಾತಸವೃತ್ತಾಂತವನುಸುರಲಿಂ | ತೆಂದಾಡಿದಳುಕೊಂತಿದೇವಿ ||೧೨೮||

ಕೇಳೆನ್ನ ನುಡಿಯಪಾರ್ವತಿಯೆನಗೈವರು | ಬಾಲರುಂಟವರೊಳಗೋರ್ವ ||
ಹಾಳೊಡಲಿನಭೀಮಸೆಂಬೀಪಾಪಿಗೆ | ಕೂಳನಾದೊರಕಿಸಲಾರೆ ||೧೨೯||

ಆದರಿಂದಾರಾಕ್ಷಸಗೀತನುಜನ | ನದಿರದೆಬಲಿಯ ಕೊಡುವೆನು ||
ಇದಕೆಸಂಶಯಬೇಡೆಂದುಮಾತಾಡಿದು | ತ್ರಧಟನನಾವಾಯುಸುತನ ||೧೩೦||

ಕರೆದುಮನ್ನಿಸಿ ತೋರಿಯಿಾಬಂಡಿಯನ್ನವ | ನಿರುತದಿಂಭೋಜನಗೆಯ್ದು ||
ಕರುಣತೆಗೆಡುಬಕಾಸನಕೊಂದುಬಾರೆಂದು | ಪರಸುತನನುಹರಸುತವೆ ||೧೩೧||

ಆತುಬಪಬಂಡಿಯನೇರಿಸಿಬಳಿ | ಕಾತರುಣಬ್ರಾಹ್ಮಣನ ||
ಭೂತಳಕೆಳುಪಿಸಿಲಿಸಿಮುಂದಕೆವಾಯು | ಜಾತನಪೋಗೆನಲಾಗ ||೧೩೨||

ಬಂಡಿಯೊಳಗೆತ್ತಿದಕಜ್ಜಾಯದ | ಪಿಂಡವಬಲಗೈಪಿಡಿದು ||
ಕೊಂಡೆಡಗೈಯಿಂದವನನೇಡಿಸುತಾ | ಗಂಡರದೇವನೆಯ್ದಿದನು ||೧೩೩||

ಮುಸುಡಮುರುಂಕಿಸಿ ಮುಷ್ಟಿಗೊಳ್ಳೆಂದಾ | ಪುಸಿದುಕೋಪದೊಳುಸಿಂದಿರ್ದ ||
ಅಸುರನಿದಿರುನಡೆದಣಕವಾಡುವನಾ | ಅಸಮವಿಕ್ರಮಿಯನಿಲಜನು ||೧೩೪||

ಅದನುಕಂಡಾರಾಕ್ಷಸನಿವನಿಯಾಟ | ವದುಭುತವೆಂದಾಯೆಡೆಗೆ ||
ಇದಿರಾಗಿಬಂದುಕೋಪಾಟೋಪದಿಂದಾ | ಅಧಟನಮೇಲ್ವಾಯ್ದನಾಗ ||೧೩೫||

ಸೊಕ್ಕಾನೆಗಂಡುಸಿಂಗದ ಮೇಲ್ವಾಯ್ವಂತೆ | ರಕ್ಕಸನಣ್ಮಿಗ್ಮಿಸುತ ||
ಎಕ್ಕಟಗಲಿಯಲರಣಾಗನಮೇಲೆತ್ತ | ನ್ನುಕ್ಕುವ ವಿಕ್ರಮದಿಂದ ||೧೩೬||

ಸಿಡಿಲಂತೆ ಸಿಡಿಸಿಡಿದೆರಗುವವನಕಂಡು | ಕಡುಮುಳಿದಿಂತುನುಡಿದನು ||
ಒಡಹಾರುವರನೆಲ್ಲರ ಕೊಂದುತಿಂದಾ | ಪೊಡಲಸೀಳದೆಬಿಡೆನೆಂದು ||೧೩೭||

ಬಿಡುನುಡಿದಾಬಕಾಣನನಾಭೀಮನಿ | ಮ್ಮಡಿಜವನಂದದಿಮುನಿದು ||
ಎಡಗಾಲಿಂದಹಂಜಿಯಹೊಸೆವಂದದಿ | ಕೆಡಹಿಹೊಸೆದುಕೊಂದನಾಗ ||೧೩೮||

ಅದನುಕಂಡಾಪಳ್ಳಿಯಪಾರ್ವರೆಲ್ಲರು | ಮುದದಿಂದಮಿಗೆಕೊಂಡಾಡಿ ||
ಅಧಟರದೇವಕೇಳಿಂದಿನದಿನನಿ | ನ್ನುದರದೊಳ್ನಾವುಪುಟ್ಟಿದೆವು ||೧೩೯||

ಎಂದಾಭೀಮಸೇನಗೆಹರುಷದಿಯಭಿ | ವಂದಿಸಿಯಳಿದಪಾಂಡವರ್ಗೆ ||
ಸಂದಭಕ್ತಿಯೊಳಿರದೆರಗಿಕೊಂತಿಗೆಬಲ | ವಂದುನಮಸ್ಕಾರಮಾಡಿ ||೧೪೦||

ಇಂದೆಮ್ಮೂರಿಗೆ ಬಿಜಯಂಗೈಯಬೇ | ಕೆಂದತಿವಿನಯದಿಂಕರೆದು ||
ಮಂದೇತರವಿಕ್ರಮಿಗಳನೂಡಗೊಂಡು | ಬಂದುಪಚರಿಸಿದರವರು ||೧೪೧||

ಒಂದೊಂದುದಿನಕ್ಕೋರ್ವರೋರ್ವರವನೆಗೈ | ತಂದುಮಜ್ಜನಭೋಜನವನು ||
ಅಂದವಡೆದುಮಾಡಿಕೆಲದಿನವಿರ್ದ | ಲ್ಲಿಂದಮುಂದಕೆತೆರಳಿದರು ||೧೪೨||

ಕಾಳಮೃಗಾಳವಾಚಾಳಾಭೀಳಶುಂ | ಡಾಲಸೃಗಾಳಸಾರ್ದೂಲ ||
ವ್ಯಾಳಾದಿಮೃಗದಿಕ್ಕೆಯಾದಾರಣ್ಯವ | ನಾಲಲಿತಾಂಗರೆಯ್ದಿದರು ||೧೪೩||

ಆನಿತರೊಳಾಪಗಲಳಿಯುಲಾಬಿಂಜದೊ | ಳನಿಲಮಾರ್ಗವಚುಂಬಿಸುವ ||
ಘನತರಮಪ್ಪೊಂದುವಟವಿಟಪಿಯಕಂಡು | ಏಸುತರದನುಸಾರಿದರು ||೧೪೪||

ಅಲ್ಲಿಯುಧಿಷ್ಠಿರಮೊದಲಾದಸೋದರ | ರೆಲ್ಲನಿದ್ರೆಯೊಳೊರಗಿರಲು ||
ಬಲ್ಲಿದನಾಭೀಮನವರಿಗೆಕಾಪಾಗಿ | ಸಲ್ಲೀಲೆಯಿಂದಿರುತಿರಲು ||೧೪೫||

ಮಾರುತನಾತನ್ನಮಗಗಾರುಧಿರೋ | ದ್ಗಾರಿವೆಸರ್ವಗದೆಯುವಗೆ ||
ಸೇರುವುದೆಂದಲ್ಲಿಗವನನುಕರಿವಂತೆ | ಸೌರಭ್ಯವೆರಸಿತೀಡಿದುದು ||೧೪೬||

ಎಲ್ಲಿಯುದೀಯಾಮೋದಾನಿಲನೆಂದು | ಬಲ್ಲಿದನದರಬೆಂಬಳಿಯ ||
ಮೆಲ್ಲನೆಬರಲೊಂದುಬಲುಹೊದರಿನತಳ | ದಲ್ಲಿದಿವ್ಯಾರ್ಚನೆಸಹಿತ ||೧೪೭||

ಘೀಕರತರಮಪ್ಪಗದೆಯಿಂಲಾಮುಂದೆ | ಏಕಚಿತ್ತದೊಳುಕುಳ್ಳಿರ್ದ ||
ಏಕಾಂಗವೀರವಿದ್ಯಾಸಾಧಕನಿರ | ಲಾಕಲಿಮರುತನಂದನನು ||೧೪೮||

ಕಡಮುನದಕೆನೀಡಲಾಗವೆಭೋಂಕನೆ | ಒರಲುದ್ದಾಮಸುಕೃತನು ||
ಧರಿಪಿಯುದನುಸೋದರರೊರಗಿದವಟ | ತರುವಿನಲ್ಲಿಗೆ ಸಾರಿದನು ||೧೪೯||

ಆನಿತರೊಳಾಯೆಡೆಗಾವನದೇವತೆ | ಯನುರಾಗದಿಂಬಪ್ಪತೆರನ ||
ಅನುಕರಿಸುತ್ತೋರ್ವಳಧಿಕಲಾವಣ್ಯದ | ವನಿತಾಮಣಿನಡೆತಂದು ||೧೫೦||

ಚಿನ್ನದಬೊಂಬೆಯಂದದಿಚಿಕ್ಕಹರೆಯದ | ಚೆನ್ನೆಮೆಲ್ಲನೆನಡೆತಂದು ||
ಉನ್ನತಮಪ್ಪವಿಲಾಸದಿನಾಸಂ | ಪನ್ನಸಾಹಸಿಯೆಡೆಗೆಯ್ದಿ ||೧೫೧||

ತೊಡೆಸೋಂಕಿಕುಳ್ಳಿರಲಾಮರುತಾತ್ಮಜ | ಮಡದಿನೀನೇನುಕಾರಣದಿ ||
ನಡೆತಂದುಕುಳ್ಳಿದೆ-ನೀನಾರನಂದನೆ | ನುಡಿನಿನ್ನಯವೃತ್ತಕವ ||೧೫೨||

ಎನಲೆಂದಳೀವನನಿಧಿಯಮಧ್ಯದೊಳಿರ್ಪ | ಜನನುತಶಾಧ್ಯನಗರಿಯ ||
ಮನುಜೇಶಸಿಹ್ಮಘೋಷಣನೆಂಬಖಚರನ | ವನಿತೆಸುದರ್ಶನೆಯುವರ ||೧೫೩||

ತನುಜೆಸುಕೇಶಿಯೆಂಬಳುನಾನುಮತ್ತೆನ್ನ | ಜನಕನೀರ್ವರುಚಾರಣರ ||
ವನಜೋಪಮಾಂಘ್ರಿಗೆವಂದನೆಗೆಯ್ದುಮ | ತ್ತನುನಯದಿಂದಿಂತುನುಡಿದ ||೧೫೪||

ಎನ್ನ ತನೂಜೆಸುಕೇಶಿಗೆ ವರನಾರು | ಸನ್ನುತರಿದನೆನಗಿರದೆ ||
ಮನ್ನಿಸಿನಿರಪಿಸಿಯೆನಲಾವಿಭುಗೆಂದ | ರುನ್ನತಬೋಧಸಂಯುತರು ||೧೫೫||

ಅರಸಕೇಳಿಚ್ಛಾಪುರನಿಕಟದೊಳಿ | ದುರ್ಗರುಕಾಂತಾರಮಧ್ಯದೊಳು ||
ಪಿರಿದುಮಗುರ್ವಿಪಾಲದಮರದಿದಿರೊಳು | ಸರಿಯುಮದಂಡಕ್ಕೆನಿಪ ||೧೫೬||

ರುಧಿರೋದ್ಗಾರಿಯೆಂಬೊಂದುಗದೆಯುಸುಸ | ದ್ವಿಧಿಯಿಂದಸಾಧಿಸಿದವಗೆ ||
ವಿಧುಮಂಡಲಮುಖಿನಿನ್ನ ಮಗಳು ನಿಜ | ವಧುವಪ್ಪಳೆಂದುಸುರಿದರು ||೧೫೭||

ಎಂದು ನಿರೂಪಿಸಿದಾಯತಿರಾಯಗೆ | ಬಂದಿಸಿನಮ್ಮ ಜನಕನು ||
ಮಂದೇತರಸೌಖ್ಯದಿಂದಿರಲೊಂದಾ | ನೊಂದುದಿನದೊಳೀನೆಲದ ||೧೫೮||

ವನಧಿಮಧ್ಯದಲಂಕಾದ್ವೀಪದಧಿಪತಿ | ಘನಗತಿಖಚರಸುತನ್ನ ||
ತನುಜಹಿಡಿಂಬಗೆನ್ನನುಬೇಡಿಸೇಹದಿ | ಯನುಚರರಸುಕಳುಹಿದನು ||೧೫೯||

ಅವರುಬಂದೆಮ್ಮಯ್ಯಗೆ ಕರಗಳಮುಗಿ | ದವಿರಳಮಪ್ಪಸ್ನೇಹದೊಳು ||
ವಿವರಿಸಿನನ್ನ ಬೇಡಿದೊಡುಸುರಿದನು | ಸುವಿವೇಕದೊಳಿಂತೆಂದು ||೧೬೦||

ಆದೂತರಕೂಡೆಯಾಮುನಿಪತಿಪೇಳಿ | ದಾದೇಶಮನೆನ್ನ ಜನಕ ||
ಸಾದರದಿಂಪೇಳಲವರಾಖಗಗೆನಿ | ವೇದಿಸಿದರುನನ್ನ ತೆರನ ||೧೬೧||

ಆವನರಿದಾಹಿಡಿಂಬನುದಿವ್ಯಪುಷ್ಪೀ | ಗದೆಯುನರ್ಚಿಸಿಯಿಾಯೆಡೆಯೊಳು ||
ಪದೆದುಸಾಧಿಸುತಿರ್ದನದುಕಾರಣದಿಂ | ವಿದುಹಿಡಿಂಬವನಮಾಯ್ತು ||೧೬೨||

ನಾನಾದೇಶಪುರುಷನಿಚ್ಛೆಯಿಂಬಂ | ದಾನಂದದಿಂದೀಹಿಡಿಂಬ ||
ಕಾನನದೊಳಗಿರಲೆನಗೀಪಿಡಿಂಬೆಯೆಂ | ಬಾನಾಮಸಂಭವಿಸಿದುದು ||೧೬೩||

ದುರುಳನದೆಸೆಯಿಂದೀಪ್ರೊತ್ತಿಸಿಚ್ಛಾ | ಪುರಮಿಾನಾಡುಪಾಳಾಯ್ತು ||
ಗರುವಕೇಳೆನ್ನ ಪುಣ್ಯದಿನಿನ್ನ ದರ್ಶನ | ದೊರಕಿದುದೆಂಬಾಗಲತ್ತ ||೧೬೪||

ದಿಟ್ಟ ಹಿಡಿಂಬನಮ್ಮಂತ್ರಸಮಾಪ್ತನಾ | ಡಿಟ್ಟದೆರೆದುದಿವ್ಯಗದೆಯ ||
ದಿಟ್ಟಿಸಿಕಾಣದೆನಾನನುದಿನಮನ | ಮುಟ್ಟಿಸಾಧ್ಯವಮಾಡಿದುದನು ||೧೬೫||

ಅವಿಚಾರದಿನೊಯ್ದನವಸುರರಾಕ್ಷಸನೋ | ದಿವಿಜನೋವಿದ್ಯಾಧರನೋ ||
ಅವನತಲೆಯನೆಂಡಾಡುವೆನೆಂದತಿ | ತವಕದಿನಲ್ಲಿಂದೆಳ್ದು ||೧೬೬||

ಆವಿಪಿನಾಂತರದೊಳಗರಸುತಬಂ | ದಾವಿಟಪಿಯಮೂಲದೊಳು ||
ಆವನಿತಾಮಣಿಯೊಡನಿರೆಕುಳ್ಳಿ | ರ್ದಾವಾಯುಪುತ್ರನಕಂಡು ||೧೬೭||

ಚಂಡಕೋಪದಿನೆಲವೋಯೆನ್ನಗದೆಯನು | ಕೊಂಡೊಯ್ದವನೇನೀನು ||
ಹಿಂಡುವೆನಸುವನಿನ್ನಂಗದಿಂದೆಂದು | ದ್ದಂಡನೊಂದುದಂಡವಿಡಿದು ||೧೬೮||

ಕೂಡುಕೊಡುಪುಲಮಾನಿಸಯೆನ್ನಗದೆಯನೆಂ | ದೊಡನೆತ್ತಿಪೊಯ್ದರಕ್ಕಸನ ||
ಕಡುದೊಡ್ಡಿತಪ್ಪಗದೆಯನೆಡಗೈಯೊಳು | ಪಿಡಿದಾಫಲ್ಗುನಾಗ್ರಜನು ||೧೬೯||

ಆರಕ್ಕಸನುಮಲ್ಲಯುದ್ಧವಮಾಡಲು | ಮಾರುತಿಯುವನಕಾಲ್ವಿಡಿದು ||
ತಾರಗೆಯಂದುರಿಘೂರ್ಣಿಸಲೆಣ್ದೆಸೆಯಾ | ಧಾರಿಣಿಗಪ್ಪಳಿಸಿದನು ||೧೭೦||

ತ್ರಿಭುವನೈಕವೀರನತಿಕೋಪದಿಂದಾ | ಸುಭಟನನೆಲಕಪ್ಪಳಿಸಿದ ||
ರಭಸಕ್ಕಾಮರದಡಿಯೊಳಗೊರಗಿರ್ದ | ವಿಭುಗಳೆಲ್ಲರುಕಣ್ದೆರೆದು ||೧೭೧||

ಪನಿದಚ್ಚರಿಯೆಂದುಕೇಳ್ದಣ್ಣನೊಳುಭೀಮ | ನೇನನುತದ್ವೃತ್ತಕಮನು ||
ತಾನೊರೆಯಲುಕೇಳಿಯನುಜನಸಾಹಸ | ಕಾನಂದವೆತ್ತಿರುತಿರಲು ||೧೭೨||

ಆಸಿತರೊಳಿಸನುದಯಿಸಲಲ್ಲಿಂಧರ್ಮ | ತಸುಜನನುಜರೊಡಗೂಡಿ ||
ಆಸುರಂಗದಿಮುಂದಕೇಳ್ವವೇಳೆಯೊಳಾ | ವನಿತೆಕರಾಬ್ಜನಮುಗಿದು ||೧೭೩||

ಮನುಸಿಭಚರಿತರಿರಾಬಿನ್ನಪವಿಲ್ಲಿ | ಗನತಿದೂರದೊಳವನಿಂದ |
ಜನನುತಮಿಚಾಭ್ಪುರವಾಳಾರಿಪುರ | ದನುನಯದಿಂದಲ್ಲಿಗೆಯ್ದು ||೧೭೪||

ಮುಂದಕೆವಿಜಯಂಗೆಯ್ವುದೆಂದಾಗ್ರಹ | ದಿಂದಾಪಾಂಡುನಂದನರ ||
ಬಂದುಗೆದುಟಿಯುಬಾಲಕಿನಡೆಯಿಸಿಕೊಂಡು | ಬಂದಾಪೊಳಲನೈದಿದಳು ||೧೭೫||

ಆಸಿತರೊಳಾಹಿಡಿಂಬೆಯುಜನಕನುತನ್ನ | ತನುಜೆತಡೆದುಬಾರದುದಕೆ ||
ಮನದಮರುಕದಿಂದಘನಪಥವಿಡಿದಲ್ಲಿ | ಗನುನಯದಿಂದೆಯ್ದಿದನು ||೧೭೬||

ಬಂದಾಕಾರಣಪುರುಷರಕಂಡ | ಲ್ಲಿಂದಮುಧುತಮಾರ್ಗದೊಳು ||
ತಂದುತನ್ನಾನಗರಿಗೆಕಡುಸಮ್ಮಾನ | ದಿಂದಾತನ್ನನಂದನೆಯ ||೧೭೭||

ಆಕೆಯುನಂಗಸಂಭವನನಲ್ಲಲಿತಪ | ತಾಕೆಯುನತಿವಿಭವದೊಳು ||
ಲೋಕೈಕವೀರಭೀಮಗೆಂದುವೆಯನಾ | ಭೂಕಾಂತನುಮಾಡಿದನು ||೧೭೮||

ಈತೆರದಿಂದಮುಮುವೆಯನನಿಲತನು | ಜಾತನುತಳೆದೊಂದುದಿವಸ ||
ಪ್ರೀತಿಯಿಂದೊಡವೆರದಿರೆಗರ್ಭತಲೆದೋರಿ | ಯಾತನ್ವಿಹಡೆವಳುಮಗನ ||೧೭೯||

ಆಮಗುವಿಗೆಧರ್ಮಸುತನುಘಟೋದ್ಗಜ | ನಾಮವಿಟ್ಟುಕೆಲದಿವಸ ||
ಪ್ರೇಮದಿಂದಿರ್ದಲ್ಲಿಂಪೋಗಲೆಂದೆಂ | ಬಾಮಾತನಾಸಿಹ್ಮಘೋಷ ||೧೮೦||

ಕೇಳಿಚಿಂತಿಸುತಿರಲವನಸಂತೈಸಿತ | ದ್ಬಾಲೆಹಿಡಿಂಬೆಯನಿರಿಸಿ ||
ಲೀಲೆಯಿಂದಾಪುರವನುಪೊರಮಟ್ಟುವಿ | ಶಾಲವಿಕ್ರಮರೆಯ್ದಿದರು ||೧೮೧||

ಸುಲಲಿತಮಪ್ಪಂಗದೇಶವಹೊಕ್ಕಾ | ಕಲಿಕರ್ಣನಕೀರ್ತಿಯನು ||
ಸಲೆಪೊಗಳ್ವಕ್ಕರಿಗರಮಾತುಗೇಳುತ | ಬಲವಂತರೊಂದುದಾರಿಯೊಳು ||೧೮೨||

ಓರ್ವಧರಾಮರನನುಕಂಡುಮುತ್ತಾ | ಮೋರ್ವಲಶಾಲಿಗಳವನ ||
ಪಾರ್ವನೀನೆಲ್ಲಿಂದಿಲ್ಲಿಗೆಬಂದೆಯಾ | ಪೂರ್ವಿಯೊಳಗೆವಾರ್ತೆಯೇನು ||೧೮೩||

ಎನಲಾಧರ್ಮನಂದನಗಾಪಾರ್ವನು | ವಿನಯದೊಳಿಂತುನುಡಿದನು ||
ಜನಸುತಮಪ್ಪಪಾಂಚಾಲದೇಶಕೆಮುಖ್ಯ | ಮೆನಿಪಮಹೇಂದ್ರನಗರಿಯ ||೧೮೪||

ದ್ರುಪದಮಹೀವಲ್ಲಭನಾತನಸುತೆ | ಉಪಮಾತೀತವಿಲಾಸೆ ||
ಅಪರಿಮಿತಕಲಾನ್ವಿತೆದ್ರೌಪದಿಯೆಂಬ | ಚಪಲಲೋಚನೆಯೊಪ್ಪಿದಳು ||೧೮೫||

ತೊಳಗುವಶೋಕೆಯೆಳೆಯತಳಿರುಗಳೋ | ಪೊಳೆವಪವಳವಾವುಗೆಗಳೋ ||
ಎಳನೇಸರುಗುಡಕೆಂದಾವರೆಗಳೋ | ಲಲನಾಮಣಿಯಂಘ್ರಿಗಳೋ ||೧೮೬||

ಎಳೆವರ್ಗಳತುದಿಯೊಳುಮುಂಜುವನಿಗಳು | ತಳತಳಿಸುವನೂಳ್ಕಿಯೊಳು ||
ಲಲಿತಲತಾಂಗಿಯಸೆವಕೇಸಡಿಯೊಳು | ಪೊಳೆದುವುಬೆಳ್ಳುಗುರುಗಳು ||೧೮೭||

ಮಮತೆಮನದೊಳಿಲ್ಲದಯುತಿಗಳನ್ನೈಯ | ಸಮರಿಪಿಡಿವರತಿಪತಿಯ ||
ಸಮದಳದಮಳಾಲಳಸುಂದರತೆಯ | ಸಮನಾದವೂರುಮಾನಿನಿಯ ||೧೮೮||

ಮನಸಿಜನೇರುವಮಾಡುವೆಟ್ಟುಗಳೋ | ಮಿನುಗುವಮಳಲಗುಪ್ಪೆಗಳೋ ||
ನನೆಗಣೆಯನಹೂದೇರಚಕ್ರಗಳೋ | ವನಿತೆಯಗುರುನಿತಂಬಗಳೋ ||೧೮೯||

ಸುದತೀಜನಪತೊರೆದಯುತಿಪತಿಗಳ | ಮದವೆಂಬಗಜಮಸ್ತಕಗಳ ||
ಮಿದುಳಕೆದರುವಸಿಂಗದನಟ್ಟನಡುವಿನ | ಪದಪಗೆಲ್ದುದುನಡುವವಳ ||೧೯೦||

ಸರಸಲಾವಣ್ಯವಾರಾಶಿಯಾವರ್ತವೋ | ಸ್ಮರಕೇಳಿಯಂಬುಜಾಕರವೋ ||
ವರಮೋಹನಮಂತ್ರಾಕ್ಷರಗಳಬಿಂದುವೋ | ತರುಣಿಯನಾಭಿವಲಯವೋ ||೧೯೧||

ಎಳೆಯವಿಟರಮನಸೆಂಬಹಿಸೆಮಿತಿಯ | ತಳರಲೀಯದೆಹರಿತನಯ ||
ತಳುವದೆಬರೆಯುಲೊಪ್ಪಿದಮೂರೇಖೆಯ | ನಿಳಿಕೆಯ್ದುವಳಿನಿತಂಬಿನಿಯ ||೧೯೨||

ಆಸುಳಿನಾಭಿಯಕೊಡದೊಳಿರ್ದಮೃತವ | ನೋಸರಿಸದೆರತಿಕಡೆವ ||
ಭಾಸಿಪನೀಲದಕಡೆಗೋಲಿನಂದವ | ಬಾಸೆತಾಳಿತುಬಾಲವಧುವ ||೧೯೩||

ಕುಸುಮಾಯುಧಚಕ್ರಿಯೆಸೆವಮುಳ್ಗುಡಿಯೋ | ಶಶಿಯುಸಮ್ಮುಖದತಾವರೆಯೋ ||
ಅಸಮಾಸ್ತ್ರಸರಸಿಯಾಡಿಪಹೊನ್ನಬೊಗರಿಯೋ | ಪೊಸಜವ್ವನೆಯನೆಲೆಮೊಲೆಯೋ ||
ನನೆವಿಲ್ಲನೀರನಕ್ಕೈಯುಪಾಶಂಗಳೋ | ಕನಕಾಂಬುಜದನಾಳಗಳೋ ||
ಮಿನುಗುವಮೋಹವಲ್ಲಿಯುಬಿಳಲುಗಳೋ | ವನಿತೆಯಲಲಿತಬಾಹುಗಳೋ ||೧೯೫||

ಸಿರಿಮೊಗವೆಂಬರನ್ನದಕನ್ನಡಿಯನು | ಧರಿಸಿದಹೊನ್ನಹಿಡಿಯನು ||
ಸರಿಮಾಡಿದಸುದತಿಯಸುಗ್ಗೊರಲನು | ಪೊರೆವೆನಿನ್ನೇನೆಂದದನು ||೧೯೬||

ಕಿಲುಬುಹಡೆದಮಾಸದನವಮುಕುರವ | ಕಲೆಯುಡುಗದಪೂರ್ಣವಿಧುವ ||
ಸಲೆಕೆಸರೊಳಗೊಗೆಯದಕನಕಾಬ್ಜವ | ಗೆಲಿದುದುಮುಖಮುಗ್ಧವಧುವ ||೧೯೭||

ಸ್ಮರನೀರಪಿಡಿದಕೆಂಪಿನಗುಂಬದಡಿಯೋ | ಅರುಣಮಣಿಯೋಕೆಂಬರೆಯೋ ||
ತರುಣಪಲ್ಲವವೊಬಿಂಬವೊಬಂದುಗೆಯೋ | ತರುಣಿಮಣಿಯಚೆಂದುಟಿಯೋ ||೧೯೮||

ಸಲೆವಿರಕ್ತರಧೈರ್ಯವೆಂಬಬಲ್ಮೊರಡಿಯ | ಒಲಿದುಛಿದ್ರಿಪವಜ್ರಮಣಿಯ ||
ಗೆಲಿದೆಸೆದುವುಸುಲಿಪಲ್ಗಳಪಙ್ಕ್ತಿಯು | ಲಲಿತಲತಾಕೋಮಲೆಯ ||೧೯೯||

ರತಿಪತಿಪಿಡಿದಪೇಟಲಹೊಂಗೊಳವೆಯೋ | ಅತಿರಂಜಿಸುವೆಳ್ಳಸನೆಯೋ ||
ಹಿತವಳಿಗಾದರೆಮುಗುಳಸಂಪಗೆಯೋ | ಸತಿಯನಾಸಿಕದಚಲ್ವಿಕೆಯೋ ||೨೦೦||

ಬಿಳಿಯತಾವರೆಯೆಸಳ್ಗಳನಡುವಳಿಯೊಳು | ತೊಳತೊಳಪಳಿಕಳಭಗಳು ||
ಎಳಸಿಕುಳ್ಳಿರ್ದವಾಳ್ಕೆಯೊಳುಲೋಚನಗಳು | ಪೊಳೆದಪವಳವದನದೊಳು ||೨೦೧||
ಹರಿಯಕುಮಾರನಬಡಿಕೋಲ್ಗಳಿರವೋ | ಅರಲಂಬನಸಿತೇಕ್ಷುಧನುವೋ ||
ಸ್ಮರನೆಡಗೈಯೆರಲೆಯಕೊಂಬಿನಸುವೋ | ಸರಸಿಜಾಕ್ಷಿಯಕುಡುಪುರ್ಬೋ ||೨೦೨||
ಅಲರಂಬಿನಧಟಿಂದೆಲ್ಲಾಪೊಡವಿಯ | ಒಲಿದೆಚ್ಚುಜಯಿಸಿದಬಳಿಯ ||
ಗೊಲೆಯನಿಳುಹಿಮಡಗಿದಸಿಂಗಾಡಿಯ | ಗೆಲಿದುವುಕಿವಿಕೋಮಲೆಯ ||೨೦೩||

ಮಡದಿಮಣಿಯಮುಕುರೋಪಮವದನೆಯ | ಕಡುರಂಜಿಪತೆಳುವಣೆಯ ||
ಪಡಿಯೆನಬಹುದೆಯೆಸುತಸುರಸಮುದಾಯ | ಕಡಿದುಕೊರೆವರಾಹೆರೆಯ ||೨೦೪||

ತೊಳಗುವತೆಳ್ವಣೆಯೆಂಬಿಂದುಲೇಖೆಯ | ಕೆಳೆಗೊಂಡಮಂಗಳ್ತಲೆಯ ||
ಇಳಿಕೆಯ್ದುರಂಜಿಸಿದುವುಕೋಮಲಾಂಗಿಯ | ಅಳಿಗುರುಳುಗಳನಿಕಾಯ ||೨೦೫||

ಎಸೆವಪರಂಜಿಯತಗಡಬಣ್ಣಿಗೆಯನು | ಮಿಸುಪಸಂಪಗೆಯಧಾತುವನು ||
ಪೊಸಪುಷ್ಯರಾಗರತ್ನದಕಡುರುಚಿಯನು | ಅಸಿಯಳಂಗಪಹೋಲಿಸುವೆನು ||೨೦೬||

ಶರಸತಿಪಿಡಿದುಬಾಜಿಪಕಿನ್ನರಿಯೋ | ಸ್ಮರಧನುವಿನಜೀವೊಡೆಯೋ ||
ವರವನಸತಿಯುದೀವದಕೋಗಿಲೆಯೋ | ಗರುವೆಯುವಳನುನ್ನುಡಿಯೋ ||೨೦೭||

ಅರಲಂಬನಡರ್ವಸೊಕನ್ನೆಯನಡೆಯನು | ಅರಸಂಚೆಯಗಮನವನು ||
ಪರಿಪೂರ್ಣಚಂದ್ರಮಂಡಲದಸದ್ಗತಿಯನು | ಸರಿವರಾಳ್ವಿನವಳಯಾಸವನು ||೨೦೮||

ಪಡೆಯೆಜನ್ಮಸಮನವಳುಕಾವನಾವಿದಿ | ಮೃಡಮುಂತಿಪುಗಳವೆಲೆ ||
ತೊಡರನಿಕ್ಕಿದನದರಂದಾಕೆಗೆರೂಪು | ಗೆಡೆಯನಾಗಿಕಣ್ಗೊಪ್ಪಿದುದು ||೨೦೯||

ಅರಸಕೇಳವನಾಯುಧಶಾಲೆಯೊಳೊಂ | ದುರುತರಕಾಳದಂಡವನು ||
ಪಿರಿದುಗೆಲುವದಿವ್ಯಧನುವುದಯಿಸಿತದ | ಸರಸಮುದದಿಪೂಜೆಗೆಯ್ದು ||೨೧೦||

ಇರಲಲ್ಲಿಗವಧಿಬೋಧನುಮುನಿಪತಿಯೋರ್ವ | ಬರಲಾತಗೆಪೊಡಮಟ್ಟು ||
ಕರವಮುಗಿದುಕೇಳ್ದನೆನ್ನೀತನುಜೆಗೆ | ವರನಾವನಾಗುವನೆಂದು ||೨೧೧||

ಎನಲಿಂತೆಂದರೆಲೇನೃಪವರನಿನ್ನ | ಮನೆಯೊಳೊಗೆದಕಾರ್ಮುಕವ ||
ಇನಿಸುವೇಗದೊಳೇರಿಸಿಗಗನದೊಳುತಿ | ರ್ರನೆಭರದಿಭ್ರಮಿಯಿಸುವ ||೨೧೨||

ಜಂತ್ರದಜಲಚರವನುಭೂವರತಳ | ತಂತ್ರವೆಲ್ಲವುಪೊಗಳ್ವಂತೆ |
ಮಂತ್ರಾಸ್ತ್ರದಿಂಪೆಟ್ಟುರ್ಜುನಸೇನಾ | ಸಂತ್ರಾಸಕನೆಪತಿಯಹನು ||೨೧೩||

ಎಂದುನುಡಿಯಲೀಕಾರ್ಯಧನಂಜಯ | ನಿಂದಲ್ಲದೆಯಾಗದವಗೆ ||
ನಂದನೆನಲ್ಲಳಾಗುವಳೆದುನಿಶ್ಚಯ | ಮೆಂದಾನೃಪವರನಿರಲು ||೨೧೪||

ಲಾಕ್ಷಾಲಯದೊಳಗಾಪಾಂಡವರಾ | ಯುಕ್ಷಯಮಾದವಾರ್ತೆಯನು ||
ಆಕ್ಷಿತಿಪತಿಕೇಳಿದುಃಖಿಸಿಯೋರ್ವಮು | ಮುಕ್ಷುಗೆರೆಗತಿಂತುನುಡಿದ ||೨೧೫||

ದಿವ್ಯಾವಧಿಬೋಧನಕೇಳುಸಜ್ಜನ | ಸೇವ್ಯಮಪ್ಪಾಪಾಂಡವರು ||
ಹವ್ಯವಾಹನನುನೆಡಲುಸತ್ತವಾರ್ತೆತಾ | ಸವ್ಯನಹಿತವಾದುದಿಗ ||೨೧೬||

ನಿರುತಪ್ರೊಯಾವಾರ್ತೆಯೆನಲಾಮುನಿ | ಯೊರೆದನಿಂತೆಂದುಪಾಂಡವರು ||
ಚರಮಾಂಗವರಿಗೆಕೇಡಿಲ್ಲಾಸ್ವಯಂ | ವರಮಂಟಪಕೊದಗುವರು ||೨೧೭||

ಜನನಾಥರೆಲ್ಲರಿರ್ದಂದದಿನಾಥ | ಲ್ಗನನಾಜಾತ್ರಮನೆಸುವ ||
ಮನುಜೇಶನಿನ್ನಮಗಳುದ್ರೌಪದಿಜ | ವನಿತೆಯುಪ್ಪಳಸಂಬಿಪೋಗು ||೨೧೮||

ಎನಲಾನೃಪವರನಾಸ್ವಯಂವರವನು | ಮನಗೊಂಡುಮಾಡಿಸಿಬಳಿಕ ||
ಮನುಜಾಧೀಶರನೆಲ್ಲರನಲ್ಲಿಗೆ | ಏನಯವೊದವೆಕರೆಸಿದನು || ||೨೧೯||

ಎಂದಾವಾರ್ತೆಯನೋದಿದಾಪಾರ್ವನ | ನಂದಾನೃಪರುಬೀಳ್ಕೊಟ್ಟು ||
ಅಂದವಡೆದಪಾಂಚಾಲನಪುರಕಾ | ನಂದದಿನಡೆತಂದರಾಗ ||೨೨೦||
ಅಸಿತರೊಳಾಪಗಲಳಿಯಲ್ಕಾಮರು | ದಿನದುದಯದೊಳುಮುನ್ನರೆದ ||
ಜನಪತಿಗಳನು ಸ್ವಯಂವರಕಾದ್ರುಪ | ದನಸಚಿವರುಬರಿಸಿದರು ||೨೨೧||
ನಾನಾರತ್ನದಚೌಪಳಿಗೆಯೊಳಂ | ಭೂನಾಥರನುಕುಳ್ಳಿರಿಸಿ ||
ಮಾನಿನಿಯನು ಸಿಂಗರಿಸಿಯೆಂದುದ್ರುಪದನು | ಹೀನಾಥನನಿರಿಸಲು ||೨೨೨||
ಆತನಸತಿದೃಢವಥೆತನ್ನಾತನು | ಜಾತೆಗೆಣ್ಣೆಯನೊತ್ತಿಸಿದಳು ||
ಪ್ರೀತಿಯಿಂದಂಗಭವನಪುಷ್ಪಬಾಣಕ್ಕೆ | ಓತುಜಾನಟಿಮುಕ್ಕುವಂತೆ ||೨೨೩||
ಸುರಲತಿಕೆಗೆನವದಿವ್ಯೋದಕವನು | ಸುರನಾರಿಯರೆರೆವಂತೆ ||
ಪಗುಪವೊದವೆಮಜ್ಜನಗೊಳಿಸಿದರಾ | ಅರಮಗಳ್ಗಾಕೆಳದಿಯರು ||೨೨೪||
ಪುಳಿನತಳವಬಳಸಿದನೀರತೆರೆಯಂತೆ | ಲಲನೆಯಗಾಢನಿತಂಬದೊಳು ||
ಕೆಳದಿಯರುಡುಗೆಯುಡಿಸಿದದುಗುಲದಸಿರಿ | ತೊಳತೊಳತೊಳಗಿದುದವಳ್ಗೆ ||೨೨೫||
ತೊಳಪಚಂದ್ರನತುಡುಕಿದರಾಹುವಿನಂತೆ | ಮುಲಘುಕಬರಿಯೊಪ್ಪಿದುದು ||
ನಳಿನವನಳಿಸೇರಿದಂತೆಕಣ್ಗೆಸೆದುದು | ತಿಲಕವವಳವದನದೊಳು ||೨೨೬||
ತಿಳಕಸುವಾಸನೆವರ್ಣಸಿಯೆನೆಕ | ಣ್ಗೊಳಿಸಿತುನಾಸಾಭರಣ ||
ಲಲನೆನಿನ್ನೋಲೆಕಲ್ಲೋಲೆಯಾಗಲಿಯೆಂದು | ಕುಲಿಶದೋಲೆಯನಿಟ್ಟರವಳ್ಗೆ |೨೨೭|
ಮನಸಿಜದೇವಾಭಿಷೇಕಕೆಕಲಶಾ | ರ್ಚನೆಯನುಮಾಡುವಂದದೊಳು ||
ಘನಕುಚದೊಳನವಮೌಕ್ತಿಕಮಾಲೆಯ | ನನುಗೊಳಿಸಿದರಾಸತಿಗೆ ||೨೨೮||
ಮನಸಿಜರಾಜನಮಂತ್ರದೇವತೆಯೋ | ನನೆಗಣೆಯನಪಟ್ಟವಧುವೋ ||
ವನಜೋದರನಣುಗನಜಯಸತಿಯೋ | ಯೆನೆಸತಿಕಣ್ಗೊಳಿಸಿದಳು ||೨೨೯||
ಇಂತುಕೈಗೆಯ್ದೊಡನಾಡಿದಸಖಿಯರ | ಸಂತತಿತನ್ನೊಡನೆಯ್ದೆ ||
ಕಾಂತೆಯಂದಣವೇರಿಯಾಸ್ವಯಂವರಕತಿ | ಸಂತಸದಿಂದೆಯ್ದಿದಳು ||೨೩೦||
ಅಡಪಡಸಕೆಕುಂಚಕರಗಕನ್ನಡಿ ಕೌ | ಳುಡೆಪಾವುಗೆಗದ್ದುಗೆಯ ||
ಮಡದಿಯರೆಡಬಲವನು ಸುತ್ತಿಬರಲಾ | ಕಡುನೀರೆನಡೆತಂದಳಾಗ ||೨೩೧||
ಬಟ್ಟದುಪಂಜಿನಚೆಲ್ವಭಾಮಿನಿಯರು | ಸಿಟ್ಟಿಸಳ್ಗಣ್ಣನೀರೆಯರು ||
ಇಟ್ಟೆಡೆಮೊಲೆಯೇರುಂಜವ್ವನೆಯರು | ಕಟ್ಟೊಲವಿಂದೆಯ್ದಿದರು ||೨೩೨||

ಪುಡಿಜುಟ್ಟು ಪ್ಪೈಗೆಮಲಯಜಾತವನಿಟ್ಟು | ಮುಡಿಯೊಳು ಮಲ್ಲಿಗೆಯಿಟ್ಟು ||
ಬಿಡುಮುತ್ತಿನತೋರಮಣಿಯತೊಡಪನಿಟ್ಟು | ನಡೆದರಾಳಿಯರಳವಟ್ಟು ||೨೩೪||

ಸ್ಮರವೀರಲಕ್ಷ್ಮಿಯಂದದಿಮಾಣಿಕಪತೊಟ್ಟು | ಸರಸಕುಂಕುಮವನಪ್ಪಿಟ್ಟು ||
ಅರುಣಾಂಬರವುಟ್ಟಡಿಗಲತಿಗೆಯಿಟ್ಟು | ಬರುತಿರ್ದರವರಡಿಯಿಟ್ಟು ||೨೩೫||

ತೊಟ್ಟುನೀಲದಕಾಳಪಟ್ಟೆಯನಿರಿವಿಡಿ | ದುಟ್ಟುಕಸ್ತೂರಿಯತೀಡಿ ||
ನಟ್ಟಿರುಳ್ಪೆಣ್ಗಳಂದದೊಳು ಕೆಲಬರಡಿ | ಯಿಟ್ಟರಬಲೆಯೊಡಗೂಡಿ ||೨೩೬||

ಅಂಗಜನರ್ಚಿಸುವಪರಂಜಿಬೊಂಬೆಯ | ಭಂಗಿಯಪೊಂಪೊಂದೊಡಿಗೆಯ ||
ಶೃಂಗಾರದ ಹಳದಿಯಪಟ್ಟೆಯುಡಿಗೆಯು | ತ್ತುಂಗಕುಚೆಯರೆಯ್ದಿದರು ||೨೩೭||

ನಡೆವನಂದನದಂದದಿಪಸುರ್ಪಟ್ಟೆಯ | ನುಡೆಯುಟ್ಟುಮರಕತಮಣಿಯ ||
ತೊಡವಿಟ್ಟು ಮುಡಿದುಕಸ್ತೂರಿಪೊಂಬಾಳೆಯ | ನಡೆದರಾಳಿಯರಾಬಳಿಯ ||೨೩೮||

ಬಗಸೆಗಂಗಳ ಬಡನಡುವಿನಬಲೆಯರು | ನಗೆಗಣ್ಗಳನಾರಿಯರು ||
ಮುಗುಳುವೊಲೆಯಮುದ್ದುಮೊಗದಮಾನಿನಿಯರು | ಮುಂಗುರುಳುಮುಂದೆಯ್ದಿದರು
ತೊಳಗುವತುರುಗೆಪೆಗಣ್ಣತರುಣಿಯರು | ಬಳಲುಮುಡಿಯಭಾಮಿನಿಯರು ||
ನಳನಳಿಸುವನಳಿತೋಳಜವ್ವನೆಯರು | ಇಲನೆಯಮುಂದೆಯ್ದಿದರು ||೨೩೯||

ಕಡೆಗಣ್ಣಿಂದ ಕಾಮುಕರಬೀಳಲ್ಕೊಯ್ದು | ನಡೆಯೊಳಂಚೆಯನುರೆಜರಿದು ||
ಪುಡದಿಯರಂಗಳ ಬಳಗವೆಯ್ತಂದುದು | ಕಡುಸೀರೆಯಬಳಿವಿಡಿದು ||೨೪೦||

ಸೋರುಮುಡಿಯಸೋಗೆ ಮುಡಿಯಮುಗುಳ್ಮುಡಿ | ಯೋರೆಮುಡಿಯಬಲ್ಮುಡಿಯ ||
ತೋರಮುಡಿಯ ತೊಳಗುವಸಿರಿಮುಡಿಗಳ | ನಾರಿಯರೆಯ್ತಂದರಾಗ ||೨೪೧||

ನಗೆಗಣ್ಣನನೆಯಂಬುಗಣ್ಣ ತಾವರೆಗಣ್ಣ | ಬಗಸೆಗಣ್ಣೆಳೆವಾಳೆಗಣ್ಣ ||
ಮಿಗಮರಿಗಣ್ಣ ಮಿಸಿಟುಂಜವ್ವನೆಯರು | ಬಗೆಗೊಳುವಂತೆಯ್ದಿದರು ||೨೪೨||

ಬಣ್ಣದ ಟೆಯಬಾದುಗೆಯಲರ್ದುಟಿಯರಾ | ಪಣ್ಣದುಟಿಯತೊಂಡೆದುಟಿಯ ||
ಸಣ್ಣ ಚೆಂದಳಿರುದುಟಿಯ ಹೆರೆದುಟಿಯುಳ್ಳ | ಪೆಣ್ಣಿಂತಿಣಿಬಂದುದಾಗ ||೨೪೩||

ಕುಂದಕುಟ್ಮಳರದನಂಗಳನವಕರು | ವಿಂದವಮಾಣಿಕ್ಯದಂತಗಳ ||
ಅಂದವಡೆದಪಾಡಿಮದಂತಂಗಳ | ಸುಂದರಿಯರು ಬಂದರಾಗ ||೨೪೪||

ಮುಕುರಮುಖದ ಮುದ್ದುಮುಖದವಿರಾಜಿತ | ವಿಕಸಿತಾಂಭೋರುಹಮುಖದ ||
ಅಕಲಂಕಚಂದ್ರಮುಖದ ಮುಗ್ಧಸತಿಯರ | ನಿಕರವೆಯ್ದಿದುದವಳೊಡನೆ ||೨೪೫||

ಕಳಶಕುಚದ ಕಾಂಚನಕಂಜಾತಕು | ಟ್ಮಳಿತಕುಚದ ಕುಂಭಕುಚದ ||
ತೊಳಪಕರಂಡಕುಚದ ಕೋಮಲೆಯರು | ಲಲನೆಯಮುಂದೆಯಿದ್ದರು ||೨೪೬||

ಬತಸಡುಪಿನಬಳ್ಳಿ ಸಡುವಿನುಂಗುರವಿಡಿ | ಸಡುವಿನಸುಂದೇಹವಡೆದ ||
ಸಡುವಿನಸಿಯ ಸಡುವಿನಸಣ್ಣಸಡುವಿನ | ಮಡದಿಯರೆಯ್ದುಂದರಾಗ ||೨೪೭||

ಪೊಂಬಾಳೆದೊಡೆಯ ಪೊಣ್ಮುವಮೋಹನಮಲ್ಲ | ಗಂಭದೊಡೆಯನುಣ್ದೊಡೆಯ ||
ಇಂಬುವಡೆದಮರಿಯಾನೆಗೈದೊಡೆಗಳ | ಬಿಂಬಾಧರೆಯರೆಯ್ದಿದರು ||೨೪೮||

ತಳಿರ್ವಜ್ಜೆಗಳ ತಾವರೆವಜ್ಜೆಗಳ ಕ | ಣ್ಗೊಳಿಪಲತಗೆವಜ್ಜೆಗಳ ||
ಪೊಳೆವಪವಳವಾವುಗೆವಜ್ಜೆಗಳಸವ | ಲಲನೆಯರೆಯ್ದಂದರಾಗ ||೨೪೯||

ಪಂಚಶರನಪಟ್ಟಗಜಬರುತಿದೆ ಮುಂದೆ | ಸಂಚಲಚಿತ್ತರಲ್ಲಿಂದ ||
ವಂಚಿತೊಲಗಿಯೆಂದು ಬಿಡಮುಗ್ಗಡಿಸುವ | ಕಂಚುಕಿಯರುಕಣ್ಗೆಸೆದರು ||೨೫೦||

ಈತೆರದಿಂದ ಸ್ವಯಂವರಸದನ | ಕ್ಕಾತರಳಾಕ್ಷಿಯೆಯ್ತರಲು ||
ಭೂತಳೇಶರುಮುಪಸಗ್ರಹ ವಡೆದಂತೆ | ಯಾತನುಮರೆದು ನೋಡಿದರು ||೨೫೧||

ಆಗಳವಳಬೆನ್ನಮರೆಯೊಳುಸಿಂದಾ | ಪೂಗೋಲ್ಗಳಿಂದ ಮನ್ಮಥನು ||
ಭೂಗಧಿನಾಥಕುಮಾರಕರೆಲ್ಲರ | ಲಾಗುಗೆಡಿಸಿಬೀಳಲೆಚ್ಚ ||೨೫೨||

ಆಸಮಯದೊಳು ಪಾಂಡವರುಮೆಲ್ಲನೆಬಂದು | ಭೂಸುರರೆಡೆಹೊಕ್ಕಿರಲು ||
ಭಾಸುರಮೂರ್ತಿಗಳವರಲಕ್ಷಣಕೆ ಮ | ತ್ತಾಸಭೆಪಡೆದುದಚ್ಚರಿಯ ||೨೫೩||

ಆಲಲಿತಾಂಗರಿಂತಿರಲು ಸ್ವಯಂವರ | ಶಾಲೆಯೊಳರ್ಚನೆಗೆಯ್ದು ||
ಕಾಲದಂಡಮನೇಳಿಸುವಂದವಡೆದಾ | ಭೀಳಕೋದಂಡಮೊಪ್ಪಿದುದು ||೨೫೪||

ಅದರಮೇಗಡೆಜಂತ್ರದ ಝುಷಮಿರಲಾ | ಸುದತಿಯನೇಹದಕೆಳದಿ ||
ಚದುರೆಸುಂದರಿಯೆಂಬಳು ಪೆರಳೆತ್ತಿ ಸಂ | ಮುದದಿಸಿಂತೆಂದುಸುಡಿದಳು ||೨೫೫||

ಇವನುಕೌರವನಿವನಂಗಾಧೀಶ್ವರ | ನಿವನುತೆಲುಗನಿವಮಗಧ ||
ಇವನುಕನ್ನಡಿಗನಿವನುಕೇರಳನು ಮ | ತ್ತಿವನುಕೊಂಕಣನಿವತಿವುಳ ||೨೫೬||

ಇವನುಕಳಿಂಗನಿವನು ಮಾಳವನು ಮ | ತ್ತಿವನುಸಿಂಧುಜನಿನಗೌಳ ||
ಇವನುಕನ್ನೋಜಿಯಿವನು ಕಾಶ್ಮೀರ ಮ | ತ್ತಿವನುಸೌರಾಷ್ಟ್ರಾಧಿನಾಥ ||೨೫೭||

ಎನುತಕೌರವ ಮೊದಲಾದವನೀಶರ | ಘನತರಮಪ್ಪಚೆಲ್ವಿಕೆಯ ||
ಅನುರಾಗದಿಂ ಪೇಳುತಿರಲಾಸುಡಿ | ವನಿತೆಯಕಿವಿವೊಕ್ಕದಿಲ್ಲ ||೨೫೮||

ಪಾರ್ಥನರೇಂದ್ರ ಚಂದ್ರಮನಸ್ಸ ಹೃದಯ | ಸ್ವಾರ್ಥವಲ್ಲದೆ ಮತ್ತೊಳಿದ ||
ಪಾರ್ಥಿವರೆನ್ನ ಕಣ್ಣಿಗೆ ಪೊಗರೇಸುಸ | ವ್ಯರ್ಥರಾದೊಡಮೆನುತವಳು ||೨೫೯||

ಮನಜಗೆಗೊಂಡುನೋಡದೆ ತಲೆವಾಗಿರೆ | ಲನಿತರೊಳಗೆ ಪಡಿಯರರು ||
ಮನುಜೇಶರ್ಗೆಂದರಲೆ ಭೂಪರಿರಾ | ವನಿತೆ ಬೇಕಾದೊಡೆನಿಮಗೆ ||೨೬೦||

ಈಸಭದೊಳು ನೆರೆತಿರ್ಸನೆತಿರುಗುವ | ಮೀನಪುನುಗುವೆಡೆಗಣ್ಣ |
ಈಸೀರನೆಲ್ಲನೀಕ್ಷಿಸಿ ಯೋಧನುವಿಡಿ | ದಾನದೆಸುವುದೆನಲಾಗ ||೨೬೧||

ಆನುಡಿಗೇಳಿ ಕೆಲರುದುರುದುಂಬಿ ಮ | ಹೀನಾಥನಂದನರುಗಳು ||
ಸಾನಂದದಿನೆಗಳ್ದರುಗ್ರತೆಗಭಿ | ಮಾನವಡಗಿತಿರುಗಿದರು ||೨೬೨||

ಅರೆಬರದನುಬಲವಂದುಜಾರಿದರುಮ | ತ್ತರೆಬರುಪಟ್ಟಿಜಾರಿದರು ||
ಅರೆಬರುಪಿಡಿದುನೆಗಹಲಾರದಾದರು | ಪಿರಿದುಮುಗುರ್ವಿಪಥನುವ ||೨೬೩||

ಅದನುಕಂಡಾಕೌರವನಲ್ಲಿಂದೆಳ್ದು | ಪದವುಮಿಗಲುಬಲವಂದು ||
ಅಧಟಿಂದೆತ್ತಿಮಗುಳ್ದನಾಥನುವಿಗೆ | ಹೆದೆಯನೇರಿಸಲಳವಡದೆ ||೨೬೪||

ಪಿರಿದಾಗಿನಾಣ್ಚಿಕುಳ್ಳಿರ್ದರಸನಕಂ | ಡುರುಬಲಯುತನಿನಸುತನು ||
ಭರದಿಂದೆತ್ತಿಯಾಧನುವಿನಕೊಪ್ಪಿಗೆ | ತಿರುವನೇರಿಸಿನಿಂದುಬಳಿಕ ||೨೬೫||

ಆಧನುವನುತೂನಲ್ಕಾರದೆಯುಂ | ಗಾಧೀಶತಿರುಗೆಲಜ್ಜೆಯೊಳು ||
ಭೂಧವದ್ರುಪದನೀಕ್ಷಿಸಿಯಾನೃಪರೆಲ್ಲ | ಸಾಧಾರಣರೆಂದುಬಗೆದು ||೨೬೬||

ಭೂಸುರಸಭೆಯೊಳಗೀಬಿಲ್ಲನೆತ್ತುವ | ಸಾಸಿಗರುಂಟಾದರೇಳಿ ||
ಓಸರಿಸದೆಯೆಂದುಸಾರಿಸಲದಕೇಳಿ | ಯಾಸಭೆಯಿಂತಾಡಿದುದು ||೨೬೭||

ಸತ್ರದಮನೆಯೊಳುಕುಳ್ಳಿರ್ದುವಿಸ್ತೀರ್ಣ | ಪತ್ರಭಾಜನದಭೋಜನಕೆ ||
ಪಾತ್ರವಲ್ಲದೆಮತ್ತೀರಾಜಪುತ್ರಿಗೆ | ಪಾತ್ರವೆಬಡಬ್ರಾಹ್ಮಣರು ||೨೬೮||

ಸಣ್ಣಗಳಮೆಯೋಗರತೊಗರಿಯತೋಯೆ | ಬೆಣ್ಣೆಗಾಸಿದತುಪ್ಪವೆರೆದು ||
ಅಣ್ಣಂದಿರುಣಬನ್ನಿಯೆನಬೇಕಲ್ಲದೆ | ಹೆಣ್ಣಿಗೆಂದೆಮ್ಮಕರೆವರೆ ||೨೬೯||

ತುಯ್ಯಲುತುಪ್ಪವಬಡಿಸಿಬಳಿಕನಮ್ಮ | ಕೈಯಪರಿಯನೀಕ್ಷಿಸದೆ ||
ಅಯ್ಯಯ್ಯೋನಮಗುಸುರುವರೇಬಲು | ಗೈಯರಿಗಾಗದಬೆಸನ ||೨೭೦||

ಈತೆರದಿಂದುಸುರ್ವಾಬ್ರಾಹ್ಮಣರಾ | ಮಾತುಗೇಳಿನಸುನಗುತ ||
ನೀತಿನಿಪುಣನಿರುಪಮಸತ್ಯನಿಧಿಯಮ | ಜಾತನತಿಪ್ರೀತಿಯಿಂದ ||೨೭೧||

ಪೂರ್ವಿನಸನ್ನೆಯಿಂದೀಕ್ಷಿಸಲರಿದಾ | ದೋರ್ವಲಶಾಲಿ ಫಲ್ಗುಣನು ||
ಪಾರ್ವರಸಭೆಯಿಂದಾತೂಪಿನೊಳೆ | ಳ್ದುರ್ವೀಶರೆಲ್ಲನೋಳ್ಪಂತೆ ||೨೭೨||

ಬಿಟ್ಟಣೆಗಂಟುಕಿವಿಯೊಳಿಟ್ಟಕುಂಡಲ | ಉಟ್ಟದೋತ್ರವುವುಳ್ಳಿಗಡ್ಡ ||
ಪುಟ್ಟಿಬೆರಲದರ್ಭೆಯಿಂಕೃತಕದ್ವಿಜ | ನಿಟ್ಟಣಿಸಿದಸಭೆಯಿಂದ ||೨೭೩||

ಮೆಲ್ಲನೆಳ್ದುಬಪ್ಪಾಗಲಲ್ಲಿರ್ದವ | ರೆಲ್ಲರವನಕಾಣುತವೆ ||
ಸಲ್ಲಳಬಯುಸಿದಯ್ಯಗಳೇನೀವೆಂದು | ಮೆಲ್ಲಸಲಿವುತಿರ್ದರಿಂತು ||೨೭೪||

ಒಡ್ಡಿಸಿದಿಡ್ಡಲಿಗೆಯುವಮುಂದೆಕುಳ್ಳಿರ್ದು | ಗಡ್ಡವಿಾಸೆಯುನೀವಿಕೊಳುತ ||
ಅಡ್ಡಕಿಲ್ಲದುಂಬುವಕಾರ್ಯವಬಿಟ್ಟು | ದೊಡ್ಡಕಾರ್ಯವನೆಣಿಸಿದಿರಿ ||೨೭೫||

ಸುತ್ತಿದವ್ಯೆಯುಯುಜ್ಞೋಪವೀತದಗಂಟು | ಪೊತ್ತಿಹರಿವನವಾಕ್ಕೆಯೊಳು ||
ತುತ್ತನೆತ್ತಲುಬಲ್ಲಕೈಯುಲಿಬೇರಿಲ್ಲ | ನೆತ್ತಲೇಳ್ವುದುಹಸನಾಯ್ತು ||೨೭೬||

ಭೂರಿಭೋಜನದಬ್ರಾಹ್ಮರುಪಟ್ಟಿಗೊಂಬಂ | ತಾರೋಗಣೆಯುವನಾಳ್ವುದನು ||
ದೂರೀಕೃತವಾಡಿಯೊಸ್ಪೃಪತಸುಜೆಗೆ | ಹಾರೈಸುವುದೊಳ್ಳಿತಾಯ್ತು ||೨೭೭||

ನಾರಿಗೆವೋಹಿಸಿಯಾಬಿಲ್ಲಕೊಪ್ಪಿಗೆ | ನಾರಿಯುನಿಟ್ಟುಬಂತ್ರವನು ||
ನಾರಾಚದಿನೆಸಲೆಂಬೀಕಜ್ಜವು | ನ್ನಾರೊಳುಸಂಭವಿಸುವುದು ||೨೭೮||

ಹೊಟ್ಟೆಹರಿವತೆರದಿಂದುಂಬೂಟವ | ಬಿಟ್ಟಾಬಿಂಬಾಧರೆಯು ||
ನೆಟ್ಟನೊಲಿಸಿಕೊಂಬೆನೆಂದೇಳುವಖೂಳ | ದಿಟ್ಟನೀನಲ್ಲದಿನ್ನಾರು ||೨೭೯||

ಎಂದಾನೋಟಕಜನವುಲಿಯುತ್ತಿರ | ಲಂದಾವೀರಕಿರೀಟಿ ||
ಕಂದರ್ಪನೆವಟುವೇಷವನೆರೆತಾ | ಳ್ದಂದದಿನಡೆತಂದನಾಗ ||೨೮೦||

ಈರೀತಿಯೊಳುಬಂದಾದಿವ್ಯಚಾಪವ | ನೇರಂಡವಂಡವನೀಡಿದು ||
ಆರ್ಯೆಯುದೆತ್ತುವಂಗದಿನೆತ್ತಿಗೊಲೆಯಿತ್ತು | ನಾರಾಚವನಲ್ಲಿಹೂಡಿ ||೨೮೧||

ಕೌರವಕರ್ಣದುಶ್ಶಾಸನರಾದಿಯು | ಘೂರವುಣಾರಚೋದ್ಯವಡೆಯೆ ||
ನೀರನೆಳಲನೋಡಿಯಾಜಾತ್ರದವಿಾನ | ನಾರಣರಂಗರಸಿಕನು ||೨೮೨||

ಎಡದಕಡೆಯುಕಣ್ಣಸಟ್ಟನಡುವೆಯುಂಬು | ನಡುವಂದದಿಂಚ್ಚುವುಗುಳ್ದು ||
ನಡೆತಂದಾಪಾರ್ವರೆಡೆಯಿರ್ದಗ್ರಜ | ನಡಿಗೆಸವಿಸಿಕುಳ್ಳಿರಲು ||೨೮೩||

ಬ್ರಹ್ಮದೇವರುಬಾಲೆಗೆಬಗೆಯಿತ್ತಾ | ಬ್ರಹ್ಮಲೋಕವಿನಿಳಿತಂದು ||
ಬ್ರಹ್ಮಚಾರಿವೇಷವನಾನಡೊಡೀ | ಬ್ರಾಹ್ಮಣಗೀಚೆಲುವ್ರಂಟೆ ||೨೮೪||

ಎನುತೆಲ್ಲರುಸಿರುಗೆ ಕೊಂಡಾಡುತಿರಲಲ್ಲಿ | ಜನತಾಧಿಪನಿಕುರುಂಬ ||
ಮನದೊಳುನೆರೆನಾಣ್ಚುವತೆರದಿಂದಾ | ವನಿತಾಮಣಿನಡೆತಂದು ||೨೮೫||

ಬಲ್ಲಿದನಾಪಾರ್ಥನಾಸಭೆಯೊಳುತನ್ನ | ಬಿಲ್ಲಬಿನ್ನಣವತೋರಿದೊಡೆ ||
ಫುಲ್ಲಾಕ್ಷಿಯೊಳಾಪುಲ್ಲಶರನುತನ್ನ | ಬಿಲ್ಲಬಿನ್ನಣವತೋರಿದನು ||೨೮೬||

ನನೆಯಸರಗ್ಗತನ್ನಯತನುಮನವನು | ವನಿತಾಮಣಿಮಾತುಗೊಟ್ಟು ||
ಮನುಜಸುಕುಮಾರಮಧ್ಯಮಪಾಂಡವನಬಳಿ | ಗನುನಯದಿಂನಡೆತರಲು ||೨೮೭||

ರತಿಭಾಪತಿವಂಶಿಗೆಣೆಯುರಮಣಿಯನು | ಸತಿಯರಕುಲಕೆರತ್ನವನು ||
ಅತಿಶಯವಡೆದವನೋಡಸಪುತ್ರಿಕೆಯನು | ಮತಿಯಿಂತ್ಯಸತೆನೋಡಿದನು ||೨೮೮||

ಆಕೆಮನಸಂಗಮವಿಜಯಪತಾಕೆಯು | ನಾಕುವಲಯಲೋಚನೆಯು ||
ಲೋಕಾಶ್ಚರ್ಯವಿಲಾಸಾಸ್ಪತೆಯನು | ದಾಕಂತುನಿಭನೋಡಿದನು ||೨೮೯||

ಇಂತುನೋಡುವನರನಾಥಚಂದ್ರನನಾ | ಕಾಂತಾಮಣಿತನ್ನತನುವ ||
ಕಂತುಕಣೆಗೆಗುರಿಮಾಡಿತಾಗಿದೆವೆ | ಮುಂತೆಗೆಯುವೆನೋಡಿವಳು ||೨೯೦||

ಮತ್ತಾಸೀರೆಕಣ್ಮನದೊಳಪಸರೂಪ | ನೆತ್ತಿಕೊಂಡಾಬಲುಹೊರೆಯ ||
ಹೊತ್ತುಸಿತ್ತರಿಸಲಾರದೆನಡೆಪಂದದಿ | ಮೆತ್ತಮೆತ್ತನೆನಡೆತಂದು ||೨೯೧||

ಅಂಗಜಮೋಹಪಾಶವನಾಸತಿತನ್ನ | ಮುಂಗೈಗವನಕೊರಳ್ಗೆ ||
ಸಂಗೊಳಿಸುವಮಾಳ್ಕೆಯೊಳುಮಾಲೆಯನುಮ | ಸಂಗೊಳಿಸೂಡಿದಳಾಗ ||೨೯೨||

ಮಧ್ಯಮಪಾಂಡವನಾಬಿಲ್ಲನಾಸಿದ್ಧ | ಮಧ್ಯಯರೂಪಪಕ್ರಮದಿ ||
ಸಾಧ್ಯವಮಾಡಲುಳಿದನೃಪತತಿಲ | ಜ್ಜಾಧ್ಯಾನದೊಳಿರ್ದುದಾಗ ||೨೯೩||

ಬಸಗೆವರೆಗಳುಣ್ಮೆದ್ರುಪದನಾಗಳೆಮನ | ಮೊನೆದವನೆಡೆಗೆಯ್ತಂದು ||
ಅಸಮಾನಸತ್ತ್ವಕಿರೀಟಿಯಕಂಡುಸಂ | ತಸಗಡಲೊಳಗಾಳಿದನು ||೨೯೪||

ಭಾವಿಸಿಧರ್ಮಜಭೀಮನಕುಲಸಹ | ದೇವರೆಂಬುದನುರೆತಿಳಿದು ||
ಓವದೆಯುವರವರಿಗೆತಕ್ಕವಿನಯವ | ನಾವಸುಧಾಪತಿಮಾಡಿ ||೨೯೫||

ಆಪವನಸರತಾಯಿಕೊಂತಿಯತನ್ನಾತ್ಮ | ಭವೆಪೆಣ್ಮಣಿದ್ರೌಪದಿಯನು ||
ನೆಮಿನಯದಿಂತೇರೇರಿಸಿನಗರಿಗೆ | ತವಕದಿಕೊಂಡೊಯ್ವಾಗ ||೨೯೬||

ಆಸಿರೆನೆರೆದವನಿಪರಿರೆಬಡವಾರ್ವ | ಗಾನಾರಿಯನಾದ್ರುಪದ ||
ತಾನೀಯಬಹುದೆಯೆನುತಕೌರವಧರ | ಣೀನಾಥನುರುಕೋಪದಿಂದ ||೨೯೭||

ಸಮರಸನ್ನಾಹಭೇರಿಯುಂದನಿಗೆಯ್ದಿಸೆ | ನ್ನಮಿತಸೇನೆಯುಕೂಡಲಾಗ ||
ಕ್ರಮವಿದಲ್ಲವೆನ್ನದೆನೆರೆದಿರ್ದಭೂ | ರಮಣರೆಲ್ಲರುಕೂಡಿದರು ||೨೯೮||

ಪ್ರಳಯವಾರಿಧಿಯಂತೆನಡೆತಪ್ಪಾಟಹ | ಬಲವಕಂಡಾವೂರಹೊಗುವ ||
ಒಲಯುತಪಾಂಡವರಾದ್ರುಪದಸುತಮ್ಮ | ಪೊಳಲಪೊಗದೆತಿರುಗಿದಪ ||೨೯೯||

ಆನರಸಾಭೀಮಸೇನನಿರದೆಧರ್ಮ | ಸೂನುಸಹ ಸಹದೇವ ||
ಭೂನುತದ್ರುಪದಸೃಷ್ಟದ್ಯುಮ್ನರಸುವು | ತ್ತಾನಗರಿಯಮುಂದಿರಿಸಿ ||೩೦೦||

ತೀರನದಿರದೇರಿಗಾಂಡೀವವಸಾರ | ನಾರಾಧಿರೋದ್ಗಾರಿಯನು ||
ಮಾರುತಿಪಿಡಿದುಕೌರವಬಲಜಲಧಿಯ | ನಾರಯ್ಯದೆಹೊಕ್ಕುಬಳಿಕ ||೩೦೧||

ಹೆಸರುಕುರುಹನರಿಯಲುಬಾರದಂತಾ | ಅಸಮಬಲವನೆಲ್ಲವನು ||
ಮುಸಗಿಕೊಲುತ್ತಿರಲಾಸೇನೆಸಮಗಿಡು | ಸುಸರಮಲ್ಲೆಂದೋಡುತಿರಲು ||೩೦೨||

ಸುದತಿಯುಬಯಸಿಬಂದಣ್ಣಂದಿರೊಳಗೆಮು | ಗಿದಿರಾಗುವರಿಲ್ಲೆಂದು ||
ಅಧಟರವರುಕೈದುಗೊಳ್ಳದೆನಿಂದಿರ | ಲದಸುಬೆದರಿಕಾಲ್ಕೆಗೆವ ||೩೦೩||

ಆಕುರುಸೇನೆಯನಾಯಕರುಗಳುಮು | ತ್ತಾಕಲಿಗಳಪೊಗನೋಡಿ ||
ಏಕಾಂಗವೀರರವರುಭೀಮಸರನಾಗ | ಬೇಕೆಂದುಪಿರಿದುನಿಶ್ಚಯಿಸಿ ||೩೦೪||

ಪರಿತಂದಾಕೌರವಭೀಷ್ಮರಾಬಿಲ್ಲ | ಗುರುವಿದುರರ್ಕಳೊಳೊರೆಯೆ||
ನಿರುತವೊಯಿ ದುಪುಸಿಂಹೋಯೆಂದುನುವಿವೇಕ | ಚರರಕಳುಹಲವರರಿದು ||೩೦೫||

ತಿರುಗಿಬಂದವರುಕೌಂತೇಯರೆಂಬುದನವ | ರೊಡೆಯಲೊಡನೆಭೀಷ್ಮವಿದುರ ||
ಗುರುಕೃಪರೆಯ್ತರೆಪಾಂಡವರವರಕಂ | ಡುರುಭಕ್ತಿಯಿಂಸತರಾಗೆ ||೩೦೬||

ಮರಳಿಮರಳಿಹರಕೆಯನಿತ್ತುಮತ್ತಾ | ದರದಿಭೀಷ್ಮರುಧರ್ಮಸುತಗೆ ||
ಒರೆದರುನೀವೆಂತುಜೀವಿಸಿಪೋದಿರಿ | ಯರಗಿನಕರುಮಾಡದಿಂದ ||೩೦೭||

ಎಂದುನುಡಿಯೆಜತುಗೃಹದಿದ್ಧೈವಾಧೀನ | ದಿಂದನಾವುಪೊರಮಟ್ಟು ||
ಒಂದೆವೆಸುತತಮಗಾದತೆರನನಾ | ತಂದೆಗೆಬಿನ್ನವಿಸಿದನು ||೩೦೮||

ಮಗನೆಸದ್ವೈವರಕೆಡಿಸಲಾರ್ಪರೆಸ | ಸ್ವಗನರದನುಜಾಮರರು ||
ಜಗತೀತಳದೊಳೆನುತನುಡಿಯಲ್ಕಾ | ಸುಗಣಿಧರ್ಮಜನಾನುಡಿಯ ||೩೦೯||

ಅವಧಾರಿಸಿಕೈಮುಗಿದೆಂದನಾಕೌ | ರವನಿಂಸಮಗೆಯುಪಾಯ ||
ಸವನಿಸಿತಿಲ್ಲಭಾವಿಸಲುಮತ್ತಾಬಾಧೆ | ನವಗೆಕರ್ಮಾಯತಮುನಲು ||೩೧೦||

ತನುಜನಿನ್ನಯ ಸಮ್ಮತಿಯನಂತುಟಿಂತುಟಿಂ | ದೆನಬಹುದೇಯದರಿಂದ ||
ಮನದೆಗೊಂಡೆನ್ನ ನುಡಿಯ ಸಪಥಾರಿಪು | ದೆನಲು ಧರ್ಮಜನಿಂತು ನುಡಿದ ||೪೧೧||

ಗುರುವಚನವನುಲ್ಲಂಘಿಸುವೆನೆಯೆಂ | ದುತುಭಕ್ತಿಯಿಂ ಕೈಕೊಳಲು ||
ಸುರಸಿಂಧುಜನೆಂದನು ನಿಮ್ಮ ರಾಜ್ಯದೊ | ಳಿಂಯೆ ಂನೊಡೊಡಬಟ್ಟರವರು ||೪೧೨||

ಮತ್ತವರಲ್ಲಿಂದ ತಿರುಗಿ ಬಂಡಾವಿಕ | ಪೋತ್ತಂಸೆರವೃತ್ತಕವನು ||
ಚಿತ್ತರಮಾಗಿ ನುಡಿಯೆ ಕುರುಭೂಪತಿ | ಗೊತ್ತರವ್ರೊತ್ತಿದಂತಾಗೆ ||೪೧೩||

ಆವೇಳೆಯೊಳು ಕರ್ಣನಾಭೀಷ್ಟರಾಪಾಂಡು | ಭೂವರರೇಳ್ಗೆಯವ್ರಾತ ||
ಓವದೆ ನುಡಿಯಲಂತದಕೇಳಿ ಮನದೊಳು | ತೀವಿದ ಕಡುಮುನಿಸಿಂದ ||೪೧೪||

ಇಂತೆಂದನೆಲೆಯ ಜ್ಞಾಪಾಂಡುನಂದನ | ರೆಂತಾನು ವೀರವ್ರೊದವಲು ||
ಅಂತಕಸದೃಶಪರಾಕ್ರಮಿ ಕುರುಭೂ | ಕಾಂತಗೆ ಪಾಸಟಿಯ ಹರೆ ||೪೧೫||

ಏಕಾಂಗವೀರರೆನಿಪ ನಾಯಕರು ಮ | ನೇಕರಿವ ಸಸೇನೆಗುಂಟು ||
ಲೋಕೈಕವೀರನಿವನು ಕುರುಭೂವರ | ಗಾಕೌಂತೇಯರು ಸರಿಯೆ ||೪೧೬||

ಎಂದು ಕಠೋರವಚನವ ನುಡಿದರವಿ | ನಂದನಗಾ ಬಾಂದೊರೆಯ ||
ಕಂದನಿಂತೆಂದನು ಸೋದರರೊಳು ತನ್ನ | ದೊಂದು ಸತ್ತ್ವವತೋರುವುದು ||೪೧೭||

ಅರಸತನದನೀತಿಯಲ್ಲ ಮನಸನೀ | ಧರೆ ಹೊಗಳದಂತದರಿಂದ ||
ಅರೆನಾಡನಾಪಾಂಡವರಿಗಿತ್ತು ಬಾಳ್ವುದು | ನಿರುತವೆಂದಿವುವೊದಲಾದ ||೪೧೮||

ನಾನಾತೆರದೊಡಂಬಡಿಕೆಗಳಿಂದವ | ಹೀನಾಥನನೊಡಂಬಡಿಸಿ ||
ಸಾನಂದದಿಂದೆಯ್ದಿಸಿದನವನಸುಮ | ತ್ತಾನಾಗನಗರೀವರಕೆ ||೪೧೯||

ಆಗುರುಮೊದಲಾದಮಿತ್ರವರ್ಗವನುಸ | ರಾಗದಿಂದವೆಕೂಡಿಕೊಂಡು ||
ಆಗಂಡುಗಲಿಗಳು ಚರಿಸಿದ್ರುಪದಪುರ | ಕಾಗಾಂಗೇಯನೆಯ್ದಿದನು ||೪೨೦||

ಬಳಿಕವನಂಜಯುಗಾದ್ರೌಪದಿಯುಕ | ಗ್ಗೊಳಿಪಂತೆನುಡುವೆಯ ಮಾಡಿ ||
ಬಳುವಳಿಯ ನುದ್ರುಪದನು ಕೊಡಲಲ್ಲಿಂದ | ತಳುವದೆ ಪೊರಮಟ್ಟರಾಗ ||೪೨೧||

ಆಪಾಂಚಾಲಪತಿಯ ಬೀಳ್ಕೊಂಡುನು | ತ್ತಾಪಾಂಡವರು ಸಮೇತ ||
ಆಪುರದಿಂದಮರೇಂದ್ರವೈಭವದಿ ಗಂ | ಗಾಪುತ್ರನು ನಡೆತಂದು ||೪೨೨||

ಸೊಗಯಿಸುವಿಂದ್ರಪ್ರಸ್ಥವೆಸೆರಮೊಂದು | ನಗರಿಗೆಶುಭಲಗ್ನದೊಳು ||
ಹೊಗಿಸಿದೂತರಸಟ್ಟಿ ಕೌರವಸುಮರು | ವಗಲಿಗಲ್ಲಿಗೆ ಕರೆಸುತವೆ ||೪೨೩||

ಅಂತಕಸುತಗಾರಾಜ್ಯಪಟ್ಟವಕಟ್ಟಿ | ಯಂತವರಾಪುರದಿಂದ ||
ಸಂತಸದೊಳುಪೊರಮಟ್ಟುಹಸ್ತಿನಪುರ | ವಂತವಕದಿಪೊಕ್ಕರಾಗ ||೨೧೪||

ಆಧರ್ಮನಂದನನನುಪಮನಕಳಂಕ | ಲಾಧರನವಶಾಂತಮೂರ್ತಿ ||
ಆಧರಣಿಯನೇಕಚ್ಛತ್ರದಿಂದವ | ಗಾಧನದ್ಗುಣರಕ್ಷಿಸುತ ||೨೧೫||

ಮೊದಲುಸುದುವೆಯಾದಧಾಸ್ಯರಾಜನಸುತೆ | ಸದಮಲಶಶಿನಿಭವದನೆ ||
ಚದುರೆಕುಸುಮಮಾಲೆಯಕರೆಸಿದನುರು | ಮುದದಿಂದವಳತಂದೆಸಹಿತ ||೨೧೬||

ಬಳಿಕವಿಂಧ್ಯಕನಾಚಂಡವಾಹನನುಂ | ಡಳಿಕರುತಪಾತ್ರಜೆಯರು ||
ಲಲಿತಲತಾಂಗಿಯರಸುತಂದುಶುಭಲಗ್ನ | ದೊಳಗಾಪವಿಮೂರ್ಧರಸು ||೨೧೭||

ಉತ್ತಮಲಗ್ನದೊಳತಿವಿಭವದಿಭೂ | ಪೋತ್ತಂಸಧರ್ಮನಂದನಗೆ ||
ಇತ್ತುಬಳಿಕಮಿಗೆಸಂತಸದಿಂತಮ್ಮ | ಪತ್ತನಕೈದಿದರಿತ್ತ ||೨೧೮||

ಕುಸುಮಮಾಲೆಗೆಯುಗ್ರಮಹಿಷಿಯುಪಟ್ಟವ | ನೊಸದಿತ್ತುಸುಖಮಿರುತಿರಲು ||
ಅಸದೃಶವೀರಮಾರುತಿಗೆಹಿಡಿಂಬೆಯು | ನಸಿಯಳನಾಸಿತ್ಕಘೋಷ ||೨೧೯||

ಚಿತ್ರರಮಪ್ಪವೈಭವದಿಂದವೆತಂ | ದಿತ್ತತಿಸಮ್ಮದದಿಂದ ||
ಉತ್ತಮವಸ್ತುವನಿತ್ತಣುಗೆಗೆತನ್ನ | ಪತ್ತನಕಿರದೈದಿದನು ||೨೨೦||

ಬಳಿಕನಕುಲಸಹದೇವರ್ಗೆಕೆಲಭೂಪ | ರೆಳಸಿತಂತಮ್ಮಣುಗೆಯರ ||
ಸುಲಲಿತಾಂಗಿಯರಸುತಂದುಸಂತಸದಲ | ತಳೆವುಮದುವೆಯಮಾಡಿದರು ||೨೨೧||

ನಿಃಪ್ರಪಂಚಕಧರ್ಮನಂದನನಾತಿಲ | ಕಪ್ರಸ್ಥಕಣೆಯಪ್ರಸ್ಥ ||
ಅಪ್ರತಿಯೆನಿಪನಾಗಪ್ರಸ್ಥವಾಕನ | ಕಪ್ರಸ್ಥಮೆಂಬನಾಲ್ವಳಲ ||೨೨೨||

ಆ ವಾಯುಪುತ್ರಕಿರೀಟಿನಕುಲಸಹ | ದೇವರ್ಗೆಕೊಡಲಿಂತವರು ||
ಆವೂರುಗಳನೈದಿಯತಿಪುದದಿಂವನು | ಹೀವಲಯಮನಾಳುತಿರಲು ||೨೨೩||

ಧರೆಯೊಳಗುಳ್ಳರಸುಗಳುತಮ್ಮೊಳಗುಳ್ಳ | ಸುರುಚಿರವಸ್ತುವಸ್ತುವನು ||
ವರಸುತೆಯರನುಕಾಣ್ಕೆಯನಿತ್ತುಕೌಂತೇ | ಯರಕಂಡುಸುಖಮಿರುತಿಹರು ||೨೨೪||

ವಿತರಣವಿಕ್ರಮಯುತಪಾಂಡವಭೂ | ಪತಿಗಳಮಿಸುಗುವಕೀರ್ತಿ ||
ಅತಿತೇಜದಿಂಮೊಡಗೂಡಿಪರಿದುವಾ | ಕ್ಷಿತಿತೆರಪಿಲ್ಲದಂದದೊಳು ||೨೨೫||

ತಸ್ನಾಜ್ಞೆಯಿಂದನಾಲ್ವರುತಮ್ಮಂದಿರ | ಸನ್ನುತಸತ್ವಸಂಯುತರ ||
ಚೆನ್ನಾಗಿಧರ್ಮನಂದನನುನಿಲಿಸಿಕೊಂಡು ಸನ್ನುತಕೀರ್ತಿವಡೆದನು ||೨೨೬||

ಧೀರತೆಯೊಳುಸತ್ಯದೊಳುಶುಚಿತನದೊಳು | ದಾರತೆಯೊಳುವಿಕ್ರಮದೊಳು ||
ಚಾರಿತ್ರದೊಳಗಿವನೇಯೆಂದುಪೊಗಳ್ವುದು | ಧಾರಿಣಿಯೂರ್ಧರ್ಮಸುತನ ||೩೩೭||

ಏಕವಚನಸುಪ್ರತಿಷ್ಠಾಚಾರ್ಯನ | ನೇಕಕಲಾಕೋವಿದನು ||
ಲೋಕಪೂಜಿತನಂತಕಸುತನೆಸೆದನಿ | ಳಾಕಾಂತಕುಲಶೇಖರನು ||೩೩೮||

ಇದುಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗಿದು ತ್ರಯೋವಿಂಶಾಶ್ವಾಸ ||೩೩೯||

ಇಪ್ಪತ್ತಮೂರನೆಯ ಸಂಧಿ ಸಂಪೂರ್ಣಂ

## ೨೪. ಪಾಂಡವರ ವನವಾಸ ಸಂಧಿ.

———:೦:———

ಶ್ರೀಮದಮರಪತಿಮೌಲಿಕೀಲಿತಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಅಂತಕನಂದನನೋರ್ವಸಚಿವನನು | ಸಂತಸದಿಂದಪೇಕರೆದು ||
ಇಂತೀಪಾರ್ಥಯನಾದ್ವಾರಾವತಿ | ಗಂತರವನುಮಾಡದೆಯ್ದಿ ||೨||

ಹರಿವಂಶದವರೊಳುಪೇಳೆಂದುಕಳುಹಲು | ಭರದಿಂದವನೆಯ್ದಂದು ||
ಹರಿಬಲದೇವಾದಿಗಳಿಗೆಪಾಂಡವ | ರ್ತವನೆಲ್ಲಪೇಳಲೊಡನೆ ||೩||

ಮಣಿಗಣಭೂಷಣಗಳನೀಯಲುಮನ | ದಣಿವಹಡೆದುಬರಲವನು ||
ಕಣೆಯುಪ್ರಸ್ಥಪುರದೊಳರ್ಜುನನೊಂದು | ಕ್ಷಣವಗಲದೆದ್ರೌಪದಿಯೊಳು ||೪||

ಅತಿಸುಖದಿಂದೊಡಗೂಡಿರ್ದುದ್ವಾರಾ | ವತಿಯೊಳುವಸುದೇವನೃಪಗೆ ||
ಅತಿರೂಪವತಿನೀಲಾಂಜನೆಗೊಗೆದನ | ನ್ನುತಗುಣವತಿಸುಭದ್ರೆಯನು ||೫||

ಕುರುಪತಿಬೇಡಿದೊಡವರುಕೊಡದವಾರ್ತೆ | ಹರೆಯಲುಕೇಳಿಯಾಕೆಯನು ||
ಹರುಷದಿಂತನಗೀವುದೆಂದಲ್ಲಿಗೆಸಚಿ | ವರನುಕಳುಹೆಕಿರೀಟಿ ||೬||

ಅವರೆಯ್ದಿಯಾವಾರತೆಯನುಸುರೆಕೇ | ಶವಕೇಳಿಕರಮೊಳ್ಳಿತೆಂದು ||
ಸವಿನಯದಿಂಕೊಡುವೆವುಬರಪೇಳೆನೆ | ದಿವಿಜೇಂದ್ರಸುತನಲ್ಲಿಗೆಯ್ದಿ ||೭||

ವಸುದೇವವಾಸುದೇವರುಶುಭಲಗ್ನದೊ | ಳಸಮಾನರೂಪವತಿಯನು ||
ಒಸೆದುಮದುವೆಯಮಾಡಲುಕೆಲದಿನವಿರ್ದು | ರಸಿಕರದೇವನರ್ಜುನನು ||೮||

ಗರುವೆಸುಭದ್ರೆಸಹಿತಕಣೆಯುಪ್ರಸ್ಥ | ಪುರಕೆಯ್ದಿರಲಂತವರ್ಗೆ ||
ಸ್ಮರನಿಭನಭಿಮನ್ಯುವೆನೆರಗರಿಮನೋರ್ವ | ವರಸುತನುದ್ಭವಿಸಿದನು ||೯||

ಆಸ್ತ್ರೀಪುರುಷರ್ಗೆಮುದವೆತ್ತುಬೆಳೆದಾ | ಶಾಸ್ತ್ರಸಂಗೀತಸುಚಿತ್ರ
ಶಸ್ತ್ರವಿದ್ಯೆಗಳನೆಲ್ಲವನುಕಲಿತುಕಡುಸು | ಮಾಸ್ತ್ರನಂದದೊಳೊಪ್ಪಿದನು ||೧೦||

ಉತ್ತಮನಭಿಮನ್ಯುವನುಕರೆಸಿಪುರು | ಷೋತ್ತಮತನ್ನಸುತೆಯನು ||
ಮತ್ತಯೌವನೆಸೌಂದರಿಯೆಂಬಳನೊಸೆ | ದಿತ್ತುಮನ್ನಿಸಿಯವರೊಡನೆ ||೧೧||

ಹರಿಸದಿನಾಕರ್ಣಿಯುಪ್ರಸ್ಥಪುರಕಾ | ಹರಿಬಂದಾಸರನೊಡನೆ ||
ಪರಮಸ್ನೇಹದಿಕೆಲದಿನವಿರಲಾ | ಕುರುಪತಿಯಂತದನರಿದು ||೧೨||

ಮಂತ್ರಶಾಲೆಗೆಬಂದುತನಗಾಪ್ತರೆನಿಸುವ | ಮಂತ್ರಿಗಳನುಕೂಡಿಕೊಂಡು ||
ಮಂತ್ರಾಲೋಚನೆಯನುಮಾಡಿದನುಕು | ತಂತ್ರಮುಂದಣಕಾರ್ಯವನು ||೧೩||

ಪಿರಿದಾದುದುಪಾಯಿಗಪಾಂಡವರ್ಗೆ | ಸಿರಿಯದರಿಂಪುಂದೆನಮಗೆ ||
ಧರಣಿಗೆಸುತಸಮಿಲ್ಲೆಂದನೃಪನೊಳಿಂ | ತೊರೆದನುಶಕುನಿಕೈಮುಗಿದು ||೧೪||

ಮಂತಣವೇಕೆಮಹಿಪಜೂಜಿನೊಳಗೆ | ಅಂತಕಸುತನತಿಮೋಹಿ ||
ಅಂತದರಿಂಸಾಳವಾಸಗಿಗಳನುಪಾ | ಯೊಂತರದಿಂದವೆಸವೆದು ||೧೫||

ಬರಿಸಿಯಾತನನೊಂದೊಸಗೆಯನೆವದಿನಾ | ದರದಿನಿರಿಸಿಕೊಂಡುಬಳಿಕ ||
ಹರಿಸದಿನೆತ್ತಮನಾಡಲೆನುತಮೊಗ | ದಿರುಗಿಸಿಕೊಂಡುಕುಳ್ಳಿರಿಸಿ ||೧೬||

ಅಡಿಜೂಜನುನಾಡುಬೀಡನೆಲ್ಲವಗೆಲ್ದು | ಕಾಡೊಳುಹೊಗಿಸುವವಿಡಕೆ ||
ಬೇಡಸಂದೆಗಪೊಂದುಶಕ ನಿನ್ನೃಪಗೆಮಾತ | ನಾಡೆಯಂತದನವಧರಿಸಿ ||೧೭||

ಅತಿಗುಪ್ತದಿಂಪಾಳವಾಸಗಿಗಳನಾ | ಕೃತಕಿಪಾಡಿಸಿಯೊಂದುದಿವಸ ||
ಅತಿಶಯಮಪ್ಪೊಸಗೆಯುನೆಪದಿಂಸಿಂಧು | ಸುತಸವಂಚಿಸಿಧರ್ಮಸುತನ ||೧೮||

ಪ್ರೇಮದಿಕರೆಯಟ್ಟಲನುಜರುಗೂಡಿಯು | ದ್ದಾಮವೈಭವದಿನೈತರಲು ||
ಆಮುನಿಭಸನಿದಿರ್ಗೊಂಡಾಕುರು | ಭೂವಿಶಾಶನ್ನೈಯ್ದಿಸಿಘುರವ ||೧೯||

ವಿನಯೋಪಚಾರದಿಂದಿರಿಸಿಕೊಂಡೊಸಗೆಯ | ನಸುವಾಗಿಮಾಡಿಸಿಬಳಿಕ ||
ಅನಿಮಿಷಪತಿಯುವಿಭವದಿಂದಿರ್ದೊಂದು | ದಿನದೊಳಗೋಲಗವಿರಲು ||೨೦||

ಅರಸುಗಳವರೀರ್ವರಿದಿರೊಳುನೆತ್ತಮ | ನಿರದೀರ್ವರಕ್ಕೈಯಿಂದ ||
ಪಿರಿದುರಚನೆಯೊಳಾಡಿಸುತಿರಲದನಾ | ತುರದಿಧರ್ಮಜನೋಡುತಿರಲು ||೨೧||

ಕುರುಪತಿಯೋರ್ವಗೆಧರ್ಮಜನೋರ್ವಗೆ | ಹರುಷದಿಮೇಲುದಾಯವನು ||
ಒರೆವುತಲಿರೆ ಕೆಲದೊಳಗಿರ್ದಶಕುನಿಯಿಂ | ತಿರದುಸುರ್ದನುಭೂಪರಿರಾ ||೨೨||

ಹೊತ್ತುಹೋಗುವುದಕ್ಕೆನೆಲವೆರಡಾಟವ | ನೆತ್ತಮನಾಡಿಸೀವೆಂದು ||
ಒತ್ತೊಂಬದಿಪೇಳೆಕುರುಪತಿಯಾಸ | ತ್ಯೋತ್ತಂಸನಮೊಗನೋಡೆ ||೨೩||

ಅಂತಾಪೊಡಾಡುವಬನ್ನಿನೀವೆನಲುಕ್ಕೃ | ತಾಂತಸುತನುಮನದೊಳಗೆ ||
ಇಂತೆಣಿಸಿದನಿದಕಾರದವನುರಣ | ಕೆಂತೊದಗುವನಾನೃಪನು ||೨೪||

ಎಂದುಸೆರೆಯುದೊರೆಗಳುಹುಳಿವರುತಪ್ಪ | ದೆಂದೀಗಜೂಜಿಂದಪಾಪ ||
ಬಂದೊಡೆಬರಲೆನುತವೆಯಾಡಲುಮನ | ದಂದಸುಧರ್ಮಸಂದನನು ||೨೫||

ಇಳೆಯಾಧಿಪರಮನವನರಿದಾನೆತ್ತ | ವಲಗೆಯುಶಕುನಿತಂದಿರಿಸಿ ||
ನಿಲಿಸಿಸಾರಿಯನುಹಾಸಂಗಿಯನೀಯಲುಕೈಗೆ | ಚಲದಂಕರಂಪಾಡಿದರು ||೨೬||

ಎರಡುಮೂರಾಟವನಾಡಿದಬಳಿಕಿಂತು | ಟೊರೆವನುಶಕುನಿಭೂವರಗೆ ||
ವರವಿತ್ತ್ಯವಿಾಯೊಂದಾಟಕ್ಕೆಪತ್ತ್ಯನಾ | ಸಿಂಪನಲೊಡಬಟ್ಟರಾಗ ||೨೭||

ತನ್ನವಂಶವನೊರೆಸುವವೊಲುಕೃತಸಂ | ಪನ್ನನುನಾಳವಾಸಗಿಯ ||
ತನ್ನವೆರಡುಕರದಿಂದಲೊರಸಿಕಡು | ಬಿನ್ನಾಣದಿಂದಾಡಿಸಿದನು ||೨೮||

ಕೆಲವುಪಲಗೆಗಳಡಾಳಕತನದಿಂ | ಗೆಲುವನಾತಗೆಕೊಟ್ಟುಬಳಿಕ ||
ಕೆಲವುಪಲಗೆಯುಗೆಲಿದುಧರ್ಮತನುಜಗೆ | ಛಲವನೆದೆಯೊಳುಪುಟ್ಟಿಸಿದ ||೨೯||

ಹಿರಿದುಹಲಗೆಯಾಡಿಧರ್ಮಸುತನಕರಿ | ತುರಗಸಾಮಜಪದಾತಿಯನು ||
ತರತರದಿಂಗೆಲೆಕಂಡುಕನಲ್ದು | ಮರುತನಂದನನಿಂತುನುಡಿದ ||೩೦||

ಸಂಚಿನಹಾಸಂಗಿಯನುಮಾಡಿಯಣ್ಣನ | ವಂಚಿಸಿನೆತ್ತವನಾಡಿ ||
ಮುಂಚೆಗೆಲವಕೊಟ್ಟುಬಳಿಕಿಂತುಟಾಡುವ | ವಂಚನೆಯದುಲೇಸುಲೇಸು ||೩೧||

ಹಲಿಗೆಯಮಾಡಿಧುರಾವನಿಯನುಸಿನ್ನ | ಕುಲವೆಂಬಬಹುಚಾರಿಗಳನು ||
ನಿಲಿಸಿಯೆನ್ನೀಗದೆಯೆಂಬಹಾಸಂಗಿಯಿಂ | ನೆಲಕುರುಳಿಸದೆಬಿಡುವೆನೇ ||೩೨||

ಎನೆದುರ್ಯೋಧನನಾಕ್ಕೈಪೆಸರವನು | ಮನಗೊಳದಿರೆಕಾರ್ಯವಶದಿ ||
ಅನಿಲಸುತನಕಣ್ಣುಸನ್ನೆಯಿಂದಾಧರ್ಮ | ತನುಜನಡಕಕಿಕ್ಕಿದನು ||೩೩||

ಅದನರಿದಾಭೀಷ್ಮನಾವಿದುರನುಕಡು | ಬೆದರಿಹೀನರಮಾಳ್ಕೆಯೊಳು ||
ಸದಮಲರೀಜೂದನಾಡುವರೇಯೆನ | ಲದಕೆಧರ್ಮಜನಿಂತುನುಡಿದ ||೩೪||

ಎನ್ನೀಸೋಲವನಿನ್ನೊಂದುಪರಿಯೊಳು | ಚೆನ್ನಾಗಿಯೆತಿರುಗಿಸುವೆ ||
ಇನ್ನುನೀವಡ್ಡಬರಲುಬೇಡವೆಂದುಗು | ಣೋನ್ನತನವರ್ಗೆಕೈಮುಗಿದು ||೩೫||

ಮರುಮಾತುಗುಡದಂತೆಮಾತನಾಡಲಕ್ಕ | ತೊರೆಯುಣಾಗನುಪರಿತಂದು ||
ಅರಗುಲಿಕೌರವನಾಡುವಜೂದಿನ | ತೆರನನುಧೃತರಾಷ್ಟ್ರಗುನುರೆ ||೩೬||

ಬಳಿಕಿಂತೆಂದನುಬವರದೊಳನಿಲಜಗದೆ | ಗೊಳಲುಕಿರೀಟಿಗಾಂಡಿವವ ||
ತಳೆಯಲುನಿತ್ತರಿಸಲ್ಕಾರ್ಪರೆಬಿದಿ | ಜಲಜೋದರಮಹೇಶ್ವರರು ||೩೭||

ಎಂದುಮುಂದಾಕಿನಿಯಣುಗನುವಿದುರನು | ಮುಂದೆಕೌರವಗೆಕೇಡಪ್ಪ ||
ಅಂದಮನುಸುರಿಸೀನೀಗನಡೆದುನಿನ್ನ | ನಂದನಗತಿಬುದ್ಧಿವೇಳೆ ||೩೮||

ಜೂದನಿಲಿಸಿಮುಂಚೆಗೆಲಿದವನೆಲ್ಲವ | ನಾದ್ಯೈವಜ್ಞಧರ್ಮಜಗೆ ||
ಸಾದರದಿಂದಕೊಡಿಸಿಬಪ್ಪುದೆಂದಾ | ಮೇದಿನಿಯೆರೆಯನಬಳಿಗೆ ||೩೯||

ಧೃತರಾಷ್ಟ್ರನುಕಳುಹಲವನೆಯ್ತಂ | ದತಿಬುದ್ಧಿಯಪೇಳೆತನ್ನ ||
ಸುತನತಿಕುಹಲಾರದೆಮುಗುಳಲುಧರ್ಮ | ಸುತನಿತ್ತಲತಿಜವದಿಂದ ||೪೦||

ಮುತ್ತಿಭಂಡಾರವಸುವಸ್ತುವಾಹನಗಳ | ವೊತ್ತುವನೆಲ್ಲವಸೋಲ್ತು ||
ಚಿತ್ತರಮುಪ್ಪದೇಶಕೆವೊಡ್ಡಮೆಂದಾ | ನೆತ್ತದಸಾರಿಯುಹೂಡೆ ||೪೧||

ಕುರುಪತಿಪೇಡೆಂದುಹಾಸಂಗಿವಿಡಿದಾ | ಸುರಸಿಂಧುಜನಕ್ಕೆಬಿಡಿಸಿ ||
ಪಿಡಿದುಕೋಪದಿಭೀಮಾರ್ಜುನರಾಕುರು | ಧರಣಿಪಗಿಂತುನುಡಿದರು ||೪೨||

ಜನಪತಿಕೇಳೀಕಾರ್ಯವನೆಣಿಪುದು | ನಿನಗೆಸಹಜನುದರಿಂದ ||
ಮನನಿಧನೀವೊಡ್ಡವನಿಲಿಸುವುದಿಲ್ಲ | ವನಿತರಿಂದವಧಿಯುನುಸುರು ||೪೩||

ಎನಲವಧಿಯನ್ನೀವೇಪೇಳೆಮೆನೆಧರ್ಮ | ತನಯನುನಾವಾಡಲಿಲ್ಲ ||
ಇನಿತುವರುಷವೆಂಬುದುನೀವೇಪೇಳೆ | ಮೆನೆಕುರುಪತಿಯುನುಮುತದಿ ||೪೪||

ಈರಾರುವರ್ಷವನದೊಳಿರ್ದುದೇಶವ | ಸಾರದೆಬಳಿಕೊಂದುವರ್ಷ ||
ಆರರಿಯದವೊಲಿರಲುಬೇಕೆಂದಾ | ಧೀರಗೆಶಕುನಿಮಾತಾಡೆ ||೪೫||

ಆನುಡಿಗಾಧರ್ಮನಂದನನೊಡಬ | ಟ್ಟಾನಾಡಬೀಡೆಲ್ಲವನು ||
ಆನದೆಯಾಡಿಸೋಲವನುರೆಪಡೆದುದ | ವ್ಯಾಮನದಿಮನೆಗೆದ್ದುಪೋಗೆ ||೪೬||

ಹರುಷದಿನಾಗಸುಯೋಧನತಾಗೆ | ಲ್ದುರುತರಸಪ್ತಾಂಗವನು ||
ಎರೆದುಚರರನಟ್ಟಲುಧರ್ಮನಂದನ | ನುರುಭಂಗದಿಂದೊಪ್ಪಿಸಿದನು ||೪೭||

ಆವೇಳೆಯೊಳುಭೀಮಾರ್ಜುನರತಿಕೋ | ಪಾವೇಶಮಾನಸರಾಗಿ ||
ಓವದೆತಂತಮ್ಮಕೈದಿಗೆಕೈನೀಡ | ಲಾಸಿಭುವವರನುನೋಡೆ ||೪೮||

ಗಾರುಡಿಗನವೊಗನನುಕಂಡವಿಷಮುಕಾ | ಳೋರಗನಡುಗುವಂದದೊಳು ||
ಧೀರಲಲಿತರಣ್ಣನಾಜ್ಞೆಗಡಗಿದರು | ವೀರಮಾರುತಿಪಲ್ಗುನರು ||೪೯||

ಬಳಿಕತಮ್ಮಸಪ್ತಾಂಗರಾಜ್ಯಮುನಿನಿ | ಸುಳಿಯದೊಪ್ಪಿಸಿಕೌರವಗೆ ||
ತುಳಿಲಾಳ್ಗಳವರಲ್ಲಿರದತಿಮುದದಿಂ | ಪೊಳಲನುಪೊರಮಟ್ಟರಾಗ ||೫೦||

ಪುರವನವರುಪೊರಮಡುವಾಗಲಾಭೀಷ್ಮ | ಗುರುಮೊದಲಾದಿಷ್ಟರುಗಳು ||
ಕುರುಪತಿಯೆಡೆಗೆಯ್ದಿಬೇಡನೀಮುಂಗೆಲ್ದ | ಧರೆಯನವರಿಗೊಪ್ಪಿಸುವುದು ||೫೧||

ಎನಲಾನುಡಿಗೆಕಿವುಡುಗೇಳ್ದರಂತಿರ | ಲನಿತರೊಳವರತಿನೊಂದು ||
ಮುನುನಿಭಪಾಂಡವರೆಡೆಗೆಯ್ದಲವರತಿ | ವಿನಯದಿನವರಡಿಗೆರಗಿ ||೫೨||

ಕಡೆಗಣ್ಣಿಂದುಃಖಾಶ್ರುತೊರೆದುಬೀಳೆ | ನುಡಿದರೆಲೇಮಕ್ಕಳಿರಾ ||
ಅಡವಿಯೊಳಿರ್ಪವರ್ಗಾವೆಂತುಪರಕೆಯು | ಕೊಡುವೆವೆಂದುಮ್ಮಳಿಸಿದರು ||೫೩||

ನಿಮ್ಮಾಶೀರ್ವಾದವೆಪಾಲಿಸುವುದು | ನಮ್ಮನಾದರಿಪುದಿನ್ನೇಕೆ ||
ಉಮ್ಮಳಬೇಡನಾವೆಮ್ಮನನ್ನಿಯನಿನ್ನು | ಸಮ್ಮದದಿಂರಕ್ಷಿಸುವೆವು ||೫೪||

ಎನಲವರವರಸಾಹಸಸತ್ಯಸಂಪದ | ವಿನಯಧೀರೋದಾತ್ತತೆಗೆ ||
ಮನದೊಳುಮೆಚ್ಚಿಮರುಕದಿಂದಬೀಳ್ಕೊಂಡು | ಘನದುಃಖದಿತಿರುಗಿದರು ||೫೫||

ಇತ್ತಲಿಂದ್ರಪ್ರಸ್ಥಪುರವರಕಾಸದ್ಗ | ಣೋತ್ತಂಸರುಪೋಗಿಬಳಿಕ ||
ಮೊತ್ತದನೃಪರುಬೆಂಬಳಿಯೊಳೆಯ್ದಲುಕಂಡು | ಮತ್ತಲ್ಲಿನಿಸುಹೊತ್ತಿರದೆ ||೫೬||

ಪದುಳದಿನಲ್ಲಿಂಪೊರಮಟ್ಟುಗಂಗಾ | ನದಿಯನಿರದೆದಾಂಟಿಬಂದು ||
ಮುದದಿಂದೊಂದುಮಹಾವಟವಿಟಪಿಯ | ಮೊದಲೊಳುಬೀಡನುಬಿಡಿಸಿ ||೫೭||

ಬಳಿವಳಿಬಂದಬಂಧುಗಳಸಾಮಂತಮಂ | ಡಳಿಕರುಗರ್ಾಧಿನಾಥರನು ||
ಅಲಘುವಿನಯವಚನಗಳಿಂಬೀಳ್ಕೊಟ್ಟು | ತಳುವಿದರಲ್ಲಿಯಾಪಗಲು ||೫೮||

ಆ ಮರುದಿನಕೌಂತೇಯರುತಂತಮ್ಮ | ಪ್ರೇಮದಪೆಂಡವಾಸವನು ||
ಆ ಮಾತೃಪಿತೃಗಳಬಳಿಗಟ್ಟಿಪಾಂಚಾಲ | ಭೂಮಿಪಾಶನನುಕುಮಾರಿ ||೫೯||

ಹರುಷದಿನವರಬೆಂಬಳಿಯೊಳುಬರಲಾ | ವರಮಾತೆಕೊಂತಿಸಮೇತ ||
ಭರದಿನಂತಕದೆಸೆಗಾಗಿನಡೆದುಬಂದು | ಪಿರಿಯದೊಂದುವನಕೆಯ್ದಿ ||೬೦||

ವಿದಿತಶತಶೃಂಗವೆಂಬೊಂದಶೈಲದ | ಮೊದರೊಳುಮಿಗೆರಂಜಿಸುವ ||
ಬದರೀವನವನುಸಾರ್ದಲ್ಲಿಯತಿಸಂ | ಮುದದಿಂದಿರುತಿರ್ದರಾಗ ||೬೧||

ಕೌರವನೊಳುಕೌಂತೇಯರುಜೂದಾಡಿ | ಧಾರಿಣಿಯೆಲ್ಲವಸೋಲ್ತು ||
ಆರಣ್ಯವಹೊಕ್ಕಿರ್ಪುದನಾಬಲ | ನಾರಾಯಣರುಕೇಳುತವೆ ||೬೨||

ಧುರಧೀರನತಿಚತುರಕಲಾಪರಿಪೂರ್ಣ | ನುರುಶಕ್ತಿಯುತಕೃಷ್ಣನೆಂಬ ||
ಅರಸುಮಗನಕರೆದಾಪಾಂಡವರಬಳಿ | ಗಿರದೆಯ್ದಿಯಾವನದೊಳಗೆ ||೬೩||

ಪರಬಾಧೆಯವರಿಗಿಲ್ಲದವೊಲುನೀನನ | ವರತವಿರೆಂದುಬೀಳ್ಕೊಡಲು ||
ಭರದಿಂದಾವನಕೆಯ್ದಿಯಾಕೃಷ್ಣನು | ವರಗುಣಿಧರ್ಮಜನೆರಗಿ ||೬೪||

ತಾನಯ್ದಿದಕಾರ್ಯವಬಿನ್ನವಿಸಿಯಾ | ಕಾನನಗವನಿಚ್ಚವಿರಲು |
ಮಾಸನಿಧಿಗಳಲ್ಲಿಕೆಲದಿನವಿರಲೊಂ | ದಾನೊಂದುದಿನದುದಯದೊಳು ||೬೫||

ಧೀರನರ್ಜುನನುವಿನೋದದಿವಿಪಿನವ | ಹಾಂಬರ್ಧದಿಂದವೆಕೆಲವು ||
ದೂರಬರುತ್ತಿಂದ್ರಕೀಲವೆಂಬದ್ರಿಯ | ನಾರೈದುನಿಂದುನೋಡಿದನು ||೬೬||

ಸುರಭಿಯಂದದೊಳುಪಯೋಧರಕಾವಾಸ | ಸ ರತರಂಗಿಣಿಯುಂದದೊಳು ||
ಸುರುಚಿರತರತಟಸಂಯುತವಾಗಿಂ | ವರವತಿ ಕಣ್ಗೆ ರಂಜಿಸಿತು ||೬೭||

ವೃಷಭೇಶನಂತುರುತರಶೃಂಗಾನ್ವಿತ | ವಿಷನ ಲೋಚನನಂತೆ ||
ವಿಷವೃದ್ಧ್ಯಾಭಿವಿಷ್ಣುವಿನಂತೆನಾಗ | ದ್ವಿಷಭಾಸ ರಮಾಶಿಖರಿ ||೬೮||

ಭೂಭೃದ್ಗುಣದಿಭುಜಂಗಾಪಾಸದಿ | ಶೋಭಿಪವನಚರತತಿಯಿಂ ||
ಭೂಭುಜರನುವಿಧುವನುವಾರಾಶಿಯ | ಸಾಭಾಸ ಸರಗೆಲ್ದುದಾಗ ||೬೯||

ಪವಣಿಲ್ಲದೆಯುಗ್ರಖಗಮೃಗಸಂತತಿ | ತವೆಕೊಂಬುಳ್ಳಿಗದಿಂದ ||
ಅವನೀಧರಮತಿಘೋರತರವಾದುದು | ಜವನಿರ್ಪ ನಗರದಂದದೊಳು ||೭೦||

ಅಧಟನವಸುಬಿನದದಿನಾಶೈಲವ | ತುದಿಯನೊ ತುವೆನೆಂದುಬರ್ಪ ||
ಪದದೊಳುಪತಗ್ಯೆಗಟ್ಟಿಜೋಲುತ್ತೊಂದು | ಬಿ ರಕೊನೆಯೊಳೋರ್ವನಿರಲು ||
ಗಗನೇಚರನಿವನಿವನನೀಯೆಡೆಯೊಳು | ಪಗೆನ ಕಟ್ಟಿದನೆಂದು ||
ಬಗೆಮಗಾಂಡೀವಕ್ಕೆ ಶರವಿಟ್ಟುಕಿವಿವರ | ತೆ ಡ ಕಾತುಣ್ಯದಿಂದೆಸಲು ||೭೨||

ಖಂಡಿಸೆಯಾಬಲ್ಲಿದಿರಹಿಂಡಿಲು ಭೂ | ಮಂಡ ಸುರುಳ್ವವೇಳೆಯೊಳು ||
ಚಂಡವಿಕ್ರಮವೇತಂಡಶುಂಡಾಲವೋ | ರ್ದಂಡದಿಪಿಡಿದೆತ್ತಿದನು ||೭೩||

ಮತ್ತಾತನಪಿಡಗಟ್ಟನುಬಿಡಲಾತ | ವೃತ್ತಮನುಜ ಪ್ರನಪದಕೆ ||
ಉತ್ತಮಾಂಗವನೆಲೆಗೊಳಿಸಿಯೆನ್ನ ಸುವನೀ | ನಿ ಪ್ರಿಯಳಾಗುಣವನೆಯೆ ||೭೪||

ಎಂದಖಚರಗಂತೆಂವನುನಿನಗೀ | ಯಂದವನೆ ದರಾರು ||
ಎಂದಕಿರೀಟಿಗೆನುಡಿದನುತನಗಾದ | ದಂದುಗಂನುಕೈಮುಗಿದು ||೭೫||

ಬಲಯುತಕೇಳೀವಿಜಯಾದ್ರಿಯಂಬರ | ತಿಲಕ ಪುಂವೆಂಬಪಟ್ಟಣದ ||
ಇಳೆಯಾಧಿಪ ಸಂದ್ರರಥನಾನೀಯು | ಗ್ಗಳಮಪ್ಪ ಖರಣೇಧರದೊಳು ||೭೬||

ಅಗಣಿತವಪ್ಪವಿದ್ಯೆಯುಸಾಧಿಸಲ್ಕೀ | ಪಗಲೊಳುಬರೆಬೆಂಬಳಿಯೊಳು ||
ಪಗೆವನೋರ್ವನುಮೇಘರಥನೆಂಬಪೆಸರಿನ | ಗಗನಚರನುಬಂದೆನ್ನ ||೭೭||

ಮೋಸದಿಕಟ್ಟಿಪೋದನುನನ್ನೀಸಾವು | ಸಾಸಿಗನಿನ್ನ ಕರುಣದಿ ||
ಓಸರವಾದುದೆನುತಬಳಿಕಿಂತೆಂದ | ನಾಸುಜನೋತ್ತಂಸನೆನೊಳು ||೭೮||

ನಾಸಿಲ್ಲಿಸಾಧಿಸಬಂದವಿದ್ಯಂಗಳ | ಸೀಸೇಸಾಧಿಸೆಂದೊಸೆದು ||
ತನಗಾಪವಿದ್ಯಾಮಂತ್ರಂಗಳ | ತಾನಿತ್ತಾಖಿಂದ್ರರಥನು ||೭೯||

ಉರುತರವಪ್ಪೀಗಿರಿಶಿಖರದೊಳಿರ್ಪ | ಪುರುಜಿನಭವನದವಂದೆ ||
ವರಯುಕ್ತಿಯಾಸನದೊಂದುಂಟಲ್ಲಿಗೆ | ನಿರುತದಿಪೋಗಿಕುಳ್ಳಿರ್ದು ||೮೦||

ಈವಿದ್ಯಾಮಂತ್ರಗಳನುಜಪಿಸಿಮೊಡನು | ತ್ತಾದೇವತೆಗಳೊದಗುವುವು ||
ಸಾದರವಿಂದೆನಲಾಗಗೂಡಿಯವಾಯೆಡೆ | ಗಾದಿಟ್ಟನುನಡೆತಂದು ||೮೧||

ದೇವರದೇವಗೆವಂದಿಸಿಯಾಯುಕ್ತ | ದೇವಿಯಾವಾಸಕೆಬಂದು ||
ಸಾವಧಾನದೊಳುಕುಳ್ಳಿರ್ದು ಜಪಿಸಿದನು | ಪಾವನತರಮಂತ್ರಗಳನು ||೮೨||

ವೈರಿಘಾಜಸಿಲೋಕಮುದವಿಧ್ವಂಸಿಸಿದು | ನೋರಥಸಿದ್ಧಿಯೆಂದೆಂಬ ||
ಸಾರಪುಪ್ಪಾದೇವತೆಗಳು ಮೊದಲಾಗಿ | ವೀರಪಾರ್ಥನೆಬೆಸನೆನುತ ||೮೩||

ಮೂವತ್ತುವಿದ್ಯಾದೇವತೆಗಳುಬಂ | ದಾವಿಭ ವಿನಮುಂದೆನಿಲಲು ||
ಸಾವಧಾನದಿಕೈಕೊಂಡುಪೂಜಿಸುತಿ | ರ್ಪಾವೇಳೆಯೊಳಾಯೆಡೆಗೆ ||೮೪||

ಆ ವಿದ್ಯಾಧರನನುಮುನ್ನ ಕಟ್ಟಿಪೋ | ದಾವೈರಿಬರುತಿರೆಕಂಡು ||
ಈವಾಹಿನಿಗೂಡಿಬರ್ಪವನಾರೆಂ | ದಾವೀರನರ್ಜುನಕೇಳೆ ||೮೫||

ಮೊದಲೆನ್ನಸಿಲ್ಲಿಬಂಧಿಸಿಪೋಗಿಬಳಿಕೆನ | ಗೊದವಿದಬನ್ನವತನ್ನ ||
ಸುದತಿಯರಿಗೆತೋರುವೆನೆಂದವರುಗೂಡಿ | ಮುದದಿಂದಬಹುಬಲಸಹಿತ ||೮೬||

ಬಂದನೆಂದಿಂದ್ರರಥನುಪೇಳುತಿರಲಿಳೆ | ತಂದಲ್ಲಿಬಿದ್ದವೇಣುವನು ||
ದಂದಶೂಕನಪಾಶದಿತಾನುಕಟ್ಟಿದು | ದೊಂದುಕಟ್ಟನುಪರಿಪಡಿಸಿ ||೮೭||

ಹರುಷದಿನಿರ್ದಿಂದ್ರರಥನನುಬಾಲಭಾ | ಸ್ಕರನನಂದದಿನಿಂದಿರ್ದ ||
ನರನನುನೋಡಿವಿಸ್ಮಯಮಾನಸನಾಗಿ | ಮರವಟ್ಟುನಿಂದಿರಲಾಗ ||೮೮||

ಎಲೆಮೇಘರಥಮೋಸದೊಳೀಖಗನನೀ | ನೆಲೆಯೊಳುಕಟ್ಟಿನೀಪೋಗಿ ||
ಲಲನೆಯರಿಗೆತೋರ್ಪೆನೆಂದುಮುಗುಳ್ನುದು | ಕುಲಹೀನರಮತವೈಸೆ ||೮೯||

ಎನಲುಕಡಂಗಿಮತ್ತಾಮೇಘರಥತನ್ನ | ಧನುಗೊಂಡುನರನೊಳಿದಿರ್ಚೆ ||
ಅನಿತರೊಳವನಸಪಿಂತಿಕ್ಕಿಖಚರಸೇನೆ | ಘನತರವಹಕೋಪದಿಂದ ||೯೦||

ಇದಿರಾಗಲುಕಂಡುದಿವ್ಯಶರದಿನಾ | ಅಧಟನಬಲವನೆಲ್ಲವನು ||
ಒದವಿನೆಯಂತಕರಾಜನಸಿಜಪುರ | ಕದನುಕಂಡಾಮೇಘರಥನು ||೯೧||

ಪೊಡೆವಸಿಡಿಲ್ಗಿದಿರಾಗುವಹರಿಯಂತೆ | ಜಡಿವುತ್ತತನ್ನಬಿಡ್ಗವನು ||
ಕಡುಮುನಿಸಿಂದಿದಿರಾಗಲವನಕೈದ | ಕಡಿದನದೊಂದುಮಾರ್ಗಣದಿ ||೯೨||

ಬಳಿಕವನಕ್ಷಂತಕೋಪದಿಎದ್ದಾ | ಬಲವನಿರ್ಮಿಸಿಯದಿರೊಡ್ಡೆ ||
ಬಲವಂತನೊಂದುಬಾಣದಿನಾಎದ್ದಾ | ಬಲವನೆಲ್ಲವನೋಡಿಸಿದನು ||೯೩||

ಅದನುಕಂಡವನುಬೆದರುಪಾಪಾಘನ | ಗದಿರಾಗದಾಗಸಕೊಗೆದು ||
ಬೆದರಿಕಾಲ್ದೆಗೆವುತಲಿರಲಿಂದ್ರರಥನಿಂ | ತಿದುತನಗವಸರವೆಂದು ||೯೪||

ಗಗನಕೆನೆಗೆವಾಪಗೆವನಪೆಂಬಳಿ | ಯೊಗೆದುಪಿಡಿದುಪೆಡಗಟ್ಟಿ ||
ಬಿಗಿದುಭೂತಳಕಿಳಿತಂದೊಪ್ಪಿಸಿದನಾ | ಅಗಣಿತಮಹಿಮನಮುಂದೆ ||೯೫||

ಕಟ್ಟುವಡೆದಬಂದುನಿಂದಾಖಚರನ | ನಿಟ್ಟಿಸಿಯಾಧನಂಜಯನು ||
ಕಟ್ಟುಮ್ಮಳದಿಂದ್ರರಥನಕೈಯಿಂದಾ | ಕಟ್ಟಬಿಡಿಸುತಿಂತುನುಡಿದ ||೯೬||

ಎಲೆಮೇಘರಥಕೇಳಿಂದುಮೊದಲುನೀ | ಯಲಘುವಿಕ್ರಮಿಯಿಂದ್ರರಥಗೆ ||
ಅಲಸದೆಬೆಸನೆಯ್ವುದೆಂದುರೆನಿಯಮಿಸಿ | ಕಲಿಪಾರ್ಥನಾತನಕಳುಪೆ ||೯೭||

ಬಳಿಕಿಂದ್ರರಥನಾಯಿಂದ್ರಕುಮಾರಗೆ | ತುಳಿಲ್ಗೆಯ್ದಿಂತುನುಡಿದನು ||
ಅಲಘುವಿಕ್ರಮಿಬಿಜಯಂಮಾಡುವುದೆನ್ನ | ಪೊಳಲಿಗೆಂಬೊತ್ತಂಬದಿಂದ ||೯೮||

ವರಮಣಿಪುಷ್ಪಕದೊಳ್ಗೇರಿಸಿತನ್ನ | ಪುರಕುರುಮುದದಿಕೊಂಡೊಯ್ದು ||
ಉರುವಿನಯದೊಳುಪಚರಮಾಡಿತನ್ನನೂ | ರ್ವರುತನುಜಾತರಕರೆದು ||೯೯||

ನೀಮಿಾತಗಾಳ್ವೆಸನಾಗಿರಿವೆಂದುನಿ | ಯಾಮಿಸಲಪರೋಲವಿಂದ ||
ಆವಹಿಮಗೆಸಾಧ್ಯವಮಾಡಿಕೊಟ್ಟು | ದ್ದಾವವಿದ್ಯಾವಿತತಿಯನು ||೧೦೦||

ಇಂತಾಪೊಳಲೊಳುಮಾಸತ್ರಯಮಿರ್ದ | ಸಂತಸದಿಂದಾನರನು ||
ಅಂತಕಸುತನಲ್ಲಿಗೆಯ್ದುಲೆಂದಾಖಗ | ಕಾಂತಗೆನಿರವಿಸಲವನು ||೧೦೧||

ಉತ್ತಮರತ್ನಭೂಷಣವಸ್ತ್ರದಿಂದಸ್ತ | ಪೋತ್ತಂಸನಪೂಜೆಗೆಯ್ದು ||
ಚಿತ್ರರಮಪ್ಪವಿಮಾನಮನೇರಿಸಿ | ಮತ್ತಾಸುತರೊಡಗೂಡಿ ||೧೦೨||

ಪಮುಳದಿಂದಲಿಪವಮಾನಮಾರ್ಗದಿಬಂದು | ಬದರೀವನದೊಳಗಿಹ ||
ಅಧಟರದೇವನರ್ಜುನನುಕೊಂತಿಯನಿಜ | ಪದಕೆಪಣೆಯಚಾಚಿದನು ||೧೦೩||
ಬಳಿಕಧರ್ಮಜವಾಯುಸುತರ್ಗೆವಂದಿಸಿತನ | ಗಲಘುಭಕ್ತಿಯೊಳಂಘ್ರಿಯುಗಕೆ ||
ಬಳಿಕಮನಿಟ್ಟುಸಕುಲಸಹದೇವರ | ನೆಳಸಿಹರಸಿಕುಳ್ಳಿರಲು ||೧೦೪||
ಅತಿಭಕ್ತಿಯೊಳಾಖಿಂದ್ರರಥನುಮಮ | ಸುತಭೀಮಮೊದಲಾದವರಿಗೆ ||
ಸತನಾಗಿಯುಚಿತಾಸನದೊಳುಕುಳ್ಳಿರ್ದು | ಕ್ಷಿತಿಪನೊಳಿಂತಾಡಿದನು ||೧೦೫||
ತನಗೆನರಸುಗೆಯ್ದುಜೀವೋಪಕಾರವ | ನನುರಾಗದಿಂಪೇಳಿಬಳಿಕ ||
ಏನುತವಿಕ್ರಮಯುತರೀನೂರ್ವರುತನ್ನ | ತನುಜರಿವರಕ್ಕೈಯಿಂದ ||೧೦೬||
ಸೇವೆಗೊಂಡಿರ್ಪುದೆನೆ.ತಪ್ರಾರ್ಥಿಸಿಪೇಳಿ | ಯಾವಿಭುವಿನಸನ್ನಿಧಿಯೊಳು ||
ಆ ವಿದ್ಯಾಧರನಾಸುಕುಮಾರರ | ಭಾವಶುದ್ಧಿಯೊಳಲ್ಲಿರಿಸಿ ||೧೦೭||
ಬಳಿಕಬಲ್ಲಿದರಬೀಳ್ಕೊಂಡುನಭೋಮಂ | ಡಲದೊಳಗಾಯಿಂದ್ರರಥನು ||
ತಳುವದೆಯ್ದುವನಮಯದೊಳಿತ್ತಲವನೀ | ಲಲನೇಶನಾಕೌರವನು ||೧೦೮||
ವನವಾಸದೊಳುಕಂದಮೂಲಪತ್ರದಿತಮ್ಮ | ತನುವನಿರದೆಚೆನ್ನಾಗಿ ||
ದಿನಚರಿಹೊರೆವಪಾಂಡವರಿಗೆನನ್ನೀ | ಘನತರಮಪ್ಪೈಸಿರಿಯ ||೧೦೯||
ಚೆನ್ನಾಗಿತೋರಲುಬೇಕೆಂದುಬಗೆದಾ | ತನ್ನಬಲವನೆಲ್ಲಗೂಡಿ ||
ಸನ್ನುತರವರಿರ್ದಬದರೀವನಕೆಯ್ದಿ | ಗನ್ನಕಾರನುಬೀಡಬಿಡಲು ||೧೧೦||
ಮರುತಮಾರ್ಗದೊಳುಪೋಪಾಯಿಂದ್ರರಥನಾ | ಕುರುಪತಿಬನಕೆಯ್ತಂದ ||
ಇರವಪ್ರಜ್ಞಪ್ತಿವಿದ್ಯೆಯಿಂನರಿದತಿನಿ | ಷ್ಠುರತರಮಾನಸನಾಗಿ ||೧೧೧||
ಈತನುತ್ತಮಪಾಂಡವರಗಹಿತನನ | ಗೀತಪರನುನಾನಿವಗೆ ||
ಮಾತೇನುಕೇಡನೆಣಿಸಬೇಕೆಂದು ವಿ | ಖ್ಯಾತನಲ್ಲಿಂದಿಳಿತಂದು ||೧೧೨||
ಉರುತರಕೋಪದಿನವನಸಭೆಯಹೊಕ್ಕು | ಕುರುಪತಿದುಃಶ್ಶಾಸನರ ||
ಭರದಿಪಿಡಿದುಕಟ್ಟುವಾಗಲಲ್ಲಿದರ್ಶ | ಮರಗಲಿಗಳುಮಾರ್ಮಸೆಗಿ ||೧೧೩||
ಅಸಿಗೊಳಲವರನೆಲ್ಲರವಿದ್ಯೆಯಿಂದತಾ | ಬಿಸಿಲೆಪ್ಪದಿಂಹಸೆಗೆಯ್ದು ||
ರಸಚಿತ್ರದಂತಕೀಲಿಸಿಬಲುಗಟ್ಟನು | ಬ್ಬಸವಾಗುವಂದದಿಕಟ್ಟಿ ||೧೧೪||
ಆಗಸಕೊಗೆದುಬಳಿಕ್ಕವಿಮಾನದ | ಮೇಗಡೆಯೊಳುಹಾಕಿಕೊಂಡು ||
ಭೂಗಧಿಪರಕೊಂಡಾಖಚರನುಪೋಗು | ವಾಗಲಿತ್ತಾಬೀಡಿನೊಳಗೆ ||೧೧೫||

ಯುಮಾರಿನೃಪರಕೊಂಡುಪೋದುದೆಂ | ದೆಲ್ಲರುಪಂಬ್ಸಕ್ಕಿಯಂತೆ ||
ವೆಬಾಯ್ವಿಡುತಿರೆಯಂರಸಸಪಟ್ಟ | ವಲ್ಲಭೆಯರುಕೆಟ್ಟೆವೆಸುತ ||೧೧೭||

ಟಕೃಪಕರ್ಣವಿಕರ್ಣಶಕುನಿಶಲ್ಯ | ಸುರಸಿಂಧುಸುತಸಿಂಧುನೃಪತಿ ||
ಟಸುತಮೊದಲಾದವೀರಭಟರಮುಂದೆ | ಹೊರಳಿಶೋಕವಮಾಡುತಿರಲು ||

ಸತ್ಯನಿಧಿಪಾಂಡವರಹಂಗಿಸಲು ಬಂ | ದುದುಕಾರಣಕುರುಪತಿಗೆ ||
ಭುತವಾವಾಪತ್ತುಸಂಜನಿಯಿಸಿ | ತಿದನಾವುಮಾಣಿಸಲರಿದು ||೧೧೮||

ದವರೆಲ್ಲನುಡಿಯೆಭಾಸುಮತಿಕೇಳಿ | ಯೊಂದಾಗಿರಾಜಸತಿಯರ ||
ವಣಿಬರೆಧರ್ಮರಾಯನಬಳಿಗೆ | ಯ್ತಂದಾತನಮುಂದೆಬಿಳ್ದು ||೧೧೯||

ಪತಿಭಿಕ್ಷವನೀವುದೆಂದುಕೋಮಲಪದ | ಸರಸಿಜವನುಕಟ್ಟಿಕೊಂಡು ||
ಳುತಲಿರಲಿದೆಲ್ಲಿಯುದೆಂದಾಸತಿ | ಗೊರೆಯಲಿಂತೆಂದುಸುರಿದಳು ||೧೨೦||

ತೆಂದರಿಯೆನಲರ್ವಟ್ಟೆಯಿಂದೋರ್ವ | ನಂತಕಸಂತಿಳಿತಂದು ||
ತೇಯರಾಹುಗೆನೀಸಲ್ಲವೆಯೆನು | ತಂತರಿಸದೆಕೋಪದಿಂದ ||೧೨೧||

ತರಿಕ್ಷಕೆನಿಜಪತಿಯನುಕೊಂಡೊಯ್ದ | ನಂತರಿಸದೆತರಿಸೆಂದು ||
ತಿಕಾರ್ಪಣ್ಯದಿಬಿನ್ನವಿಸಲ್ಕಾ | ಅಂತಕಸುತಕರುಣದೊಳು ||೧೨೨||

ವೊಗವನೋಡಿನಿನ್ನಾತನಿಂದೀ | ಪರಿಯಾಯಿತಿಂತಿದನೀನೆ ||
ಹರಿಸೆನೆಕೆಲದೊಳಗಿರ್ದಮಾರುತಿ | ಯೊರೆದನಿಂತೆಂದಣ್ಣನೊಳು ||೧೨೩||

ವೃಕೊಲುವೆವೆಂಬಹಗೆಯುಮನ್ನಿಗರಿಂ | ಸಾವಹಡೆದುಹೋಗುವುದು ||
ಕೇಳತಿಹಿತವೆಸುಗಲ್ಲವೆಯೆನ | ಲಾವಿಭುವಿಂತೆಂದನಾಗ ||೧೨೪||

ಗಳವೊರೆಗೇಳಿಸುಮ್ಮನಿರ್ಪುದುನೃಪ | ರಂಗವಲ್ಲಂತದರಿಂದ ||
ಸಬೇಕಾತನನೋವನೆನುತು | ತ್ತುಂಗಸದ್ಗುಣಿಭೀಮಗುಸುರೆ ||೧೨೫||

ಪೊಳಗವರುನೂರ್ವರು ನಾವೈವರು | ಪರಬಾಧೆಯಾರಿಗೆಸಗಲು ||
ತದಿನಾವುನೂರ್ವೈವರವರಿಸಿದ | ಪರಿಹರಿಪುದುಮತವೆಂದು ||೧೨೬||

ಯಲದನುಕೇಳಿನರನೋಲೆಯನೊಂದು | ಶರದಿಂದಬರೆದುಮತ್ತೊಂದು ||
ತೊಳುಕಟ್ಟಿಖೇಚರನೇರಿಪೋಪಾ | ವರಪುಷ್ಪಕಮನೆಚ್ಚನಾಗ ||೧೨೭||

ಪುಷ್ಪಾವಿಮಾನವತಾಗಲೊಡನೆಮ | ತ್ತಾಯಿಂದ್ರರಥನದನೋಡಿ ||
ಲರ್ವಟ್ಟೆಯಿಂದಪೆಯಿಳಿದವರಿ | ದಾರ್ಯೆಡೆಗಿರದೆಯ್ತಂದು ||೧೨೮||

ಪದುಳದಿಂದಾಧರ್ಮತನುಜಾತನವ್ಮೃದು | ಪದಮೂಲದೊಳುಕಟ್ಟುವೆರಸಿ ||
ಮುದಯುತರವರನಿರಿಸಿಯಿಂದ್ರರಥನಾ | ಮರುತಮಾರ್ಗಕೆಪೋದನಿತ್ತ ||೧೨೯||

ಸರನತಿಕರುಣದಿನಾಕಟ್ಟಸುಬಿಡ | ಲುರುಲಜ್ಜೆಯಿಂಕೌರವನು ||
ಶಿರವಬಾಗಿರೆಕಂಡಿಂತುನುಡಿದನಾ | ದರದಿಂದೆಲೆಕುರುರಾಯ ||೧೩೦||

ಬಿಜಯಂಗೆಯ್ಯಿರಿನಿಮಗೇಕೆಮನಕ್ಷತ | ನಿಜಪುರಕೆನೆಪಲ್ಮುರಿದ ||
ಗಜದಂತಿಕುರುಪತಿಯೆಳ್ದಾಗಪೋಗಲು | ಸುಜನರಿತ್ತಲುವನದೊಳಗೆ ||೧೩೧||

ಇರಲುಧರ್ಮಜನಸತ್ಯಕೆಮೆಚ್ಚಿಬಂದತಿ | ಹರುಷದಿವನದೇವತೆಯುರು ||
ವರರತ್ನಭೂಷಣಾಂಬರದಿಸರ್ಜನೆಗೆಯ್ದು | ಹರಸಿಸೇಸೆಯನಿಟ್ಟರಾಗ ||೧೩೨||

ಭಯರಹಿತರುಭಾವೋದ್ಭವಸದೃಶರು | ಲಯರುದ್ರನಿಭಕೋಪಯುತರು ||
ಜಯಜಾಯಾವಲ್ಲಭರೊಪ್ಪಿದರಾ | ನಯಗುಣಮಣಿಭೂಷಿತರು ||೧೩೩||

ಇದುಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶನಚರಿತೆಯೊ | ಳಿದುಚತುರ್ವಿಂಶತಿಸಂಧಿ ||೧೩೪||

## ಇಪ್ಪತ್ತನಾಲ್ಕನೆಯ ಸಂಧಿ ಸಂಪೂರ್ಣಂ

# ೨೫. ದ್ರೌಪದಿಯಂ ಕಳ್ದೊಯ್ದ ಸಂಧಿ



ಬಲವಿಷ್ಣುವಮೌಲಿಕೀಲಿತರತ್ನರಾಜಿತ | ಕಲಧೌತಪೀಠಶೋಭಿತನ ||
ಕಲಿಲವಿಜಯನೇಮಿಜಿನಪತಿಪದವನ | ಗೊಲಿದೀವ್ರದುಮುಕ್ತಿಸುಖವ ||೧||

ಅತಿಮುದದಿಂದಾಪಾಂಡವರಾವ್ರು | ದ್ಧತವನದೊಳುಸುಖಮಿರಲು ||
ಕ್ಷಿತಿಸುತಫಲ್ಗುನಸಂಗನೆಗಾದಾ | ಪದಿಗೆಗರ್ಭೋದಯುವಾಯ್ತು ||೨||

ಆಗರ್ಭದೊಳುಕಾಂಚನಕಂಬುತದ | ಪೂಗಳನೀಕ್ಷಿಸುವಿಚ್ಛೆ ||
ಆಗಲಂತದನುವಲ್ಲಭಗೊರೆಯುಲಿಕದು | ರಾಗದಿನೇರಿಪುಷ್ಪಕನ ||೩||

ಆಪೆಣ್ಣಳದನಿಸಹಿತವಾಕನಕ | ದ್ವೀಪಕೆಮರುತಮಾರ್ಗದೊಳು ||
ತ ಪೂರ್ಣಶಶಿರೋಹಿಣಿಗೂಡಿಬರ್ಪಂ | ತಾಪಾರ್ಥನಂದೆಯ್ದಿದನು ||೪||

ಬಳಿಕಾದ್ವೀಪಕಿಳಿದುಫಲಭಾರದಿ | ನಿಳೆಗೆರಗಿದಮಾವ ರದ ||
ನೆಳಲೊಳಬಲೆಯುನಿರಿಸಿಕನಕಾಬ್ಜದ | ಕೊಳದಕಡೆಗೆಪೋಗಲಿತ್ತ ||೫||

ಎರಡನೆಯೆಸೆವದೀವಿಯುಮೂಡಣಾವುಂ | ದರವಭರತಭೂತಳದ ||
ಕರಮೊಪ್ಪುವವಿಜಯಮಾಪ್ರಿಯುರಥನೂ | ಪುರಚಕ್ರವಾಳಪಟ್ಟಣದ ||೬||

ನರಪತಿಪದ್ಮನೆಂಬವನಾದ್ವೀಪದ | ಭರತತ್ರಿಖಂಡಾಧಿನಾಥ ||
ಧುರಧೀರಶಂಖನೆಂಬಖವಾಸುದೇವನೂ | ವರನಸೋದರದವ್ಮೈದುನನು ||೭||

ಅಸುರಾಗದಿಂದಮಾನಮನಡರ್ದಾ | ಅನಿಲಪಥದೊಳೆಯ್ದುತಿರಲು ||
ಅನಿತರೊಳಾವಿಮಾನವುಕೀಲಿಸಿನಿಲೆ | ವನಿತೆಯಿರ್ದಾಸನಿಸದೊಳು ||೮||

ಏಕಿನ್ನೀವಿಮಾನವುಕೀಲಿಸಿತೆಂ | ದಾಕಾಶದಿಂನೆಲಕಿಳಿದು ||
ಆಕಮಲಾಕ್ಷಿಯನಾವಿಧುವದನೆಯ | ನಾಕಳಶೋಪಮಕುಚೆಯ ||೯||

ಆಕೋಕಿಲಾಲಾಪೆಯನಾಚೆಲುವೆಯ | ನಾಕುವಲಯಗಂಧಿಯನು ||
ಆಕಾಂತಾಮಣಿಯನುಕಂಡುವಿರಹ | ವ್ಯಾಕುಲನಾಖೇಚರನು ||೧೦||

ವನದೇವತೆಯೊವಾಸವನವಧುವೊದುಗ್ಧ | ವನಧಿಯಣುಗೆಯೊಮನ್ಮಥನ ||
ವನಿತೆಯೊಬಿದಿಯಸತಿಯೊಶಶಿಯರಸಿಯೊ | ಯೆನುತಪದ್ಮಜನೀಕ್ಷಿಸುತ ||೧೧||

ಅವಲೋಕಿನಿಯೆಂಬವಿದ್ಯೆಯಕರೆದುಮ | ತ್ರಿವಳಕೊಂಡೊಯ್ವುವಾಯುವನು ||
ತವಕದಿಂದುಸುರೆಸಲಾದೇವತೆಯಿಂ | ತವನೊಳುಮಾತನಾಡಿದುದು ||೧೨||

ಗರುವೆಯಿವಳುಸಾಮಾನ್ಯಸಸತಿಯಲ್ಲ | ಭರತತ್ರಿಖಂಡಾಧಿನಾಥ ||
ಪುರುಷೋತ್ತಮನವ್ಯೆದುಸಧರ್ಮಜಾನುಜ | ಚರಮಾಂಗಸರ್ಜುನನರಸಿ ||೧೩||

ಮುಳಿದೊಡೆಮಹಿಯನಾಗಸಕೆಯಾಗಸವನೀ | ಯಿಳೆಗೆಯಿದ್ದಿಸಿತರಬಲ್ಲ ||
ಬಲಯುತನವನಣ್ಣಭೀಮನಂತದರಿಂ | ಲಲನೆನಿನಗೆಸಾಧ್ಯವಲ್ಲ ||೧೪||

ಅಂದವಿಚಾರದಿಸೀತೆಯನೊಯ್ದುದ | ರಿಂದತಿಬಲರಾವಣನು ||
ಹೊಂದಿನಾರಕನಾಗಿಜನಿಸಿದನೆಂಬುದ | ನಿಂದುನೀಬಲ್ಲವನಾಗಿ ||೧೫||

ಪರಮಪತಿವ್ರತೆಯಿವಳನೀನೊಯ್ವುದು | ಸಿರುತವೆುಬೇಡನೆುದೆನಲು ||
ಪಿರಿದಾಗಿನನಗೆಭೀತಿಯತೋರಬೇಡತಿ | ಭರದಿಕೊಂಡೊಯ್ವುವಾಯುವನು ||೧೬||

ಒರೆಯೆನಲಾಕಾಂಚನಕಂಜಾತವ | ತರಪೋದಾಫಲ್ಗುನನ ||
ವರರೂಪಧರಿಸಿಯಿವಳನೊಯ್ವುದೆನಲಾ | ತುರದಿಂದಾರೂಪನಾಂತು ||೧೭||

ಧರಣೀತಳಕಿಳಿತಂದುಕೃತಕಸರ | ಸೀರುಹಮನವಳಕೈಗಿತ್ತು ||
ತರಹರವಿಲ್ಲಿಬೇಡೇಳೆಂದಾಕಾ | ತರಿಯಾಕೆಯಕೈವಿಡಿದು ||೧೮||

ಇಂದುಶೇಖೆಯನುಪಿಡಿದುಸಾರುವರಾತು | ವಂದದೊಳಾಖೇಚರನು ||
ಚೆಂದಳಿರ್ದುಟಿಚೆನ್ನೆಯನಿರದೆತ್ತಿಕೊಂ | ಡಂದಾಗಸಕೆಲಂಘಿಸಿದ ||೧೯||

ತನ್ನವಿಮಾನದೊಳಿರಿಸಿಕೊಂಡೊಯ್ವಾ | ಗನ್ನಕಾರನಚೇಷ್ಟೆಗಂಡು ||
ಸನ್ನುತೆಪರವಿದ್ಯಾಭೇದಿನಿಯೆಂಬ | ರನ್ನದುಂಗುರವಮುಟ್ಟಿಸಲು ||೨೦||

ತಕೃತಕಾಂಗವಳಿದುನಿಂದಖಗನನಿ | ಜಾಕಾರವನೋಡುತವಳು ||
ತಕಣ್ಗಳಮುಚ್ಚಿದಳುಕಮಲಿಸಿದೋ | ಷಾಕರಸನುಕಂಡಂತೆ ||೨೧||

ಈತೆರದಿಂಕಣ್ಮುಚ್ಚಲಬಲೆಯಿ | ಸ್ನೇಹಕೆಬಿಡುಸಂಶಯವ ||
ಓತುನೋಡೆನ್ನನೆನಲುನೋಡದೆಬಿಡು | ವಾತನಿಂತಾಡಿದಳವಳು ||೨೨||

ಎಲವೊಪಾಳ್ಮನೆಗೆಪೊಗುವನಾಯುಂ | ಸಲಸದೆನಾನೋರ್ವಳಿಪ್ಪ ||
ನೆಲೆಗೆಬಂದೆನ್ನಸುಕಳ್ದುಕೊಂಡೊಯ ಮು | ಕಲಿತನವೇಮನುಜರಿಗೆ ||೨೩||

ಎಸುತವನೊಳುನುಡಿದಾಸಂತಕಸ ಸಸಿಲಜರುಗಳನುಜಾತ ||
ಮನುಜಮಂದಾರಪಾರ್ಥನಸತಿದ ತನ | ತನುಜೆದ್ರೌಪದಿಯೆನ್ನನಿವನು ||೨೪||

ಚೋರತನದಿತಂದಪಾತಕನನುಖೇಜ | ಟೋರುಗನರಸನುತಿಯೊಳು ||
ಆರೊಬ್ಬರಳುಕಿಸಿಯೆನ್ನೀಸರೆಯನು | ಕಾರುಣ್ಯಮಾನಸರಾಗಿ ||೩೫||
ಬಿಡಿಸುವವೀರರುಂಟೇಯೆಂದುಶೋಕಿಪ | ಮಡದಿಯುಮೊರೆಯನುಕೇಳ್ದು ||
ನಡುಬಾನೊಳೆಡೆಯಾಡುವವಿದ್ಯಾಧರ | ಕಡುಗಲಿಗಳೊಳ್ಕೆಲಬರು ||೩೬||
ಬಳಿವರಂದದಿಕೇಳದಿಮುಷನುಚಿತವೆಂ | ದಿರಿರಾಗಲೊಡನಾಪದ್ಮ ||
ಅಘಟಿಂದತಿಯುದ್ಧಂಗೆಯ್ದವರನು | ಬೆದರಿಸಿದನುಸಿಂಧುಪನೊಳು ||೩೭||
ಈತೆರದಿಂವೀಚರರನೋಡಿಸಿದಾ | ಪಾತಕಿಯಿರವನುಕಂಡು ||
ಆತರಳಾಕ್ಷಿಯೆನಗೆಶರಣಿಲ್ಲೆಂದು | ಭೂತಳಕಲ್ಲಿಂದುಮುಳಿ ||೩೮||
ಶರಣಾಗುವೀರಫಲ್ಗುನದೇವಯೆನುತುವ | ಧರವೆಸೀಕ್ವನಾಜಿಸನು ||
ವರಪರ್ಣಾಲಘುವೆಂಬಪುಷ್ಟ್ವಯುಗ್ಮಂದ | ತರಿಸಿವಿಮಾನದೊಳಿರಿಸಿ ||೩೯||
ಜೆನ್ನಾಗಿನೀನೊತಬಟ್ಟಿಲ್ಲದೆನಾನು | ನಿನ್ನವ್ಯಸನೊಂಕುವ್ರದಿಲ್ಲ ||
ಇನ್ನುನೀನಿಂತೆಣಿಸಲುಬೇಡವೆನಲುಗು | ಣೋನ್ನತೆಯಿಂತೆಂದಳಾಗ ||೪೦||
ಏತ್ಮಾನುಪೀನೆನ್ನಮುಟ್ಟಿದೆಯಾದೊಡೆ | ಕಿತ್ತಿಡುವೆನುನಾಲಗೆಯ ||
ಮತ್ತೆನ್ನಪತಿನಿನ್ನತನುವಂಬೀಪಪ | ನೊತ್ತಿಕೇಳದೆನುಮ್ಮನಿರದೆ ||೪೧||
ಎನುತನುಡಿದಪುದುನುಡಿಗೇಳಿಯಬಾಳ | ನಿನಿಸುಮುಟ್ಟದೆದ್ರೌಪದಿಯ ||
ಆನಿಲವೇಗದಿನಿಜನಗರಂಗೆಯ್ದಿನಿತನ್ನ | ಮನೆಯೊಳುಕಾಪಲಿರಿಸಿ ||೪೨||
ಅರಘನೊಪ್ಪುರಹಕ್ರಪಾಲಕೆಮ | ತ್ರಾಣಬಾರದಮಾಕ್ಕಿಯೊಳು ||
ಸೇರಿಸಿದನುಪಜ್ರಮಖಿಪರ್ವತನು | ಘೂಣಿಸಿದಾಸಿರಿಪ್ರತದಿ ||೪೩||
ಆಪುರವನಕಪಲವೃದೇವತೆಗಳ | ಕಾವಸನಲಿಸಿಯಾಗಳನು ||
ಆವಗರೊಳುತನ್ನಯುಭಾವಶಂಖಿನು | ಹೀಪಾಲಕವಾಸುದೇವ ||೪೪||
ಅಲ್ಲಿಯತೀರ್ಥೇಶನಸಮವಸೃತಿ | ಗುಲ್ಲಾಸದಿಂಪೋಗಲವನು ||
ನಿಲ್ಲದೆತಾನವನೊಡನೆಯ್ದಿತ್ತಲು | ಫುಲ್ಲಾಕ್ಷಿದ್ರೌಪದಿದೇವಿ ||೪೫||
ಇನಿಯನಮೊಗಗಾಣ್ಬನ್ನವರೆನಗೆನ | ಶನವೊಂದುಭಾಷೆಯುಮಾಳ್ಪ ||
ಅನಿತರೊಳಾಮನೆದೈವಗಳತ್ತವು | ಜನಿಸಿಬಿದ್ದುಡುಪಗಲುಕ್ಕ ||೪೬||
ಅದನುಕಂಡಾದುಷ್ಟನತಂದೆತಾಯಿಗ | ಳದಿರುತಬಂದವಳೊಡನೆ ||
ಸದಮಲಚರಿತೆಪತಿವ್ರತೆನಿನ್ನೀ | ಹೃದಯದೊಳಗೆಚಿಂತೆಬೇಡ ||೪೭||

ಭೂಪನುತನುನಿನ್ನ ಪತಿಯಿರ್ದಲ್ಲಿಗೆ | ಓವದೆನಿನ್ನ ನೆಯ್ದಪೆವು ||
ಈವಚನವನುಸಂಬೆಂದುಕ್ಕೈಮುಗಿದಿ | ಪಾರ್ವೇಳಿಯೊಳುಫಲ್ಗುನನು ||೩೮||

ಅತ್ತಲುತ್ತಮಕನಕಾಬ್ಜವತಂದಾ | ಮತ್ತಗಜೋಪಮಗಮನೆ ||
ಚಿತ್ರವಲ್ಲಭೆದ್ರಾಪದಿಯನುಕಾಣದೆ | ಚಿತ್ತರವೊತ್ತಿದಂತಾಗಿ ||೩೯||

ಒಳಿಕಲ್ಲಿಬಳಸಿದಲತೆವನೆತಾವರೆ | ಗೊಳವೂಗಿಡುಗಳೊಳರಸಿ ||
ಲಲನೆಯಕಾಣದೆಕಳವಳಿಸಿದನು | ವ್ಮಳಿಕೆಯನಾಫಲ್ಗುನನು ||೪೦||

ನನುವಮೂರ್ಛೆವೋಗಿತನ್ನಿಂತಾನೆಳ್ದು | ಸ್ವಸಿಯಳಕೊಂಡೊಯ್ದವನು ||
ಅಸುರನೊಸುರನೊಖೇಚರನೊಪನ್ನಗನೋ | ವಸುಧಾತಳನೊಮತ್ತವನ ||೪೧||

ದಿವಿಜೋರಗನರಲೋಕದೊಳಾವೆಡೆ | ಯವಳಿರಲಲ್ಲಿಗೆವೋಗಿ ||
ತವಕದಿನವನತಲೆಯನುಸೆಂಡೊಯ್ದಿನ್ನ | ಯುವತಿಯತರದೀಡುವೆನೆ ||೪೨||

ಎನುತತಿಕೋಪಾರೂಢವಮಾನಸನಿ | ರ್ಪನಿತರೊಳಾಪದ್ಮನಾಭ ||
ಜನನುತೆಪಾಂಚಾಲಿಯನುಕೊಂಡೊಯ್ವಾಗ | ಘನತರಯುದ್ಧವನಾಡಿ ||೪೩||

ಗೆಲವನುಕಡೆಯದೆಬಂದಖೇಚರನೋಡ | ಸಲಘುವಿಕ್ರಮಯೆಡೆಗೆಯ್ದಿ ||
ಲಲನೆಯನಾಪದ್ಮನಾಭನುಕೊಂಡೊಯ್ದ | ನೆಲೆಯನುಸುವಲದನರಿದು ||೪೪||

ತನ್ನವಿದ್ಯೆಯಿನಾತನುಣೆಯಿದ್ದೆಡೆಯನು | ಚೆನ್ನಾಗಿಯರಿದುನಿಶ್ಚಯಿಸಿ ||
ಉನ್ನತವಿಕ್ರಮಿಯಸಾಧರ್ಮತನುಜನ | ಸನ್ನಿಧಿಗಿರದೆಯ್ತವೆ ||೪೫||

ಲಲನಾವಣಿವೋದವೃತ್ತಾಂತವವೇಳೆ | ಯುಲಘುವಿಕ್ರಮಯುನಿಲಜನು ||
ಮುಳಿಯಲುನಿಲಿಸಿತಾಪೂರ್ವರಣ್ನನಪದ | ತಳಕೆನಮಿಸಿಬೇಳ್ಕೊಂಡು ||೪೬||

ಚಾರುವಿಚಿತ್ರವಿಮಾನವನಡರ್ದಾ | ದ್ವಾರಾವತಿಪುರಕೆಯ್ದಿ ||
ನಾರಿಯನಾಖಳನೊಯ್ದತೆರನಬಲ | ನಾರಾಯಣರೊಳಗುಸುರೆ ||೪೭||

ಆನಾರ್ತೆಯಕೇಳಿಕಡುಮುಳಿದಾಬಲ | ದೇವವಾಸುದೇವರುಗಳು ||
ಆವಾಯುಸುತನನೊಡನೆವಿಮಾನವ | ತಾವೇರಿಯಸಿಲಮಾರ್ಗದೊಳು ||೪೮||

ಜಂಬೂದ್ವೀಪವವೊರವುಟ್ಟಲವ | ಣಾಂಬುಧಿಯನುದಾಂಟುತದರ ||
ಮುಂಬಳಸಿದಧಾತಕಿಖಂಡದಮೂಡ | ಣಿಂಬುವಡೆದಮೇರುಗಿರಿಯ ||೪೯||

ಕಾಲನದಿಕ್ಕಿನಭರತದವಿಜಯಾರ್ಧ | ಶೈಲದತೆಂಕಣತಟದ ||
ಮೇಲೆವಿರಾಜಿಸರಥನೂವುರಚಕ್ರ | ವಾಳಪಟ್ಟಣಮನೆಯ್ದಿದರು ||೫೦||

ಆಪೊರವೞಲೊಳುಬಲಕೇಶವರುಮು | ತ್ತಾಪಾರ್ಥನೊಡಗೂಡಿನಿಂದು ||
ಆಪವನಜನಕಳುಹೆಗದೆವಿಡಿದತಿ | ಕೋಪದಿನಲ್ಲಿಗೆಯ್ತಂದು ||೫೧||

ಪುರವರವನುನೆರೆಕಪಿಸಿದವಜ್ರಬ | ದ್ಧರವನುದ್ಧತಗದೆಯಿಂದ ||
ಭರದಿಪೊಡೆಯಲದುಡಡಿಗೊಂಡಮಣ್ಣಬ | ಗ್ಗರೆಯನೊಡೆದತಿರಸಾಯ್ತು ||೫೨||

ಕಡೆಗಾಲದಕಾರ್ಮುಗಿಲೊಡ್ಡಿನಬರ | ಸಿಡಿಲೆರಗಿದವೊಲಕ್ಕೆಯೊಳು ||
ಕಡುಗಲಿಭೀಮಂಗದಾಪಾತದದನಿ | ಯುಡಿಸಿತುಸಕಲದಿಕ್ತಟವ ||೫೩||

ಆವಜ್ರಮಯಖರ್ಪರವನುವಿಡವಿಲ್ಲ | ದೋವದೆಕಾಯ್ದುಕೊಂಡಿರ್ಪ ||
ದೇವತೆಗಳುಸಿಹ್ಮನಾದವಕೇಳ್ದಗ | ಜಾವಳಿಯಂತೆಬೆಚ್ಚುತವೆ ||೫೪||

ಎಲ್ಲಿಯುಮಾರಿಯೆಲ್ಲಿಯುಮಿಳ್ತುವೆಸುತಾ | ಕಲ್ಲುತಾಗಿದನೆಲ್ಲಿಯಂತೆ ||
ಜೆಲ್ಲಿಪಿಲ್ಲಿಯಾಗುವಂತೋಡಿದುವಲ್ಲಿ | ನಿಲ್ಲದೆದೆಸೆದೆಸೆಗಾಗಿ ||೫೫||

ಲಾಳವುಂಡಿಗೆಗಳಕೆಳ್ತುಬಾಗಿಲಕಾವ | ಲಾಳಡ್ಡವಾದರಬಡಿದು ||
ಕಾಲಯಮನೆಬಂದಾಪಟ್ಟಣವನು | ಕೋಳುಗೊಂಡಂತೆಯ್ದಿದನು ||೫೬||

ಆರರಿಯದತೆರದಿಂನಿಮ್ಮರಾಜಾ | ಗಾರವಪೊಗುವನಾನಲ್ಲ ||
ಸೂರರುಂಟಾದೊಡಿದಿರುಬನ್ನಿಮೆಂದಾ | ವೀರಮಾರುತಿನಡೆತರಲು ||೫೭||

ಅರಸಿಲ್ಲದೂರನಿವನುಹೊಕ್ಕುಪೊಡಮಡೆ | ನೀದುಕೊರತೆಯಹುದೆಂದು ||
ಪುರಪರಿಜನವೆಲ್ಲಸುತ್ತಮುತ್ತಿದುದಾ | ಗಿರಿಯುಮುತ್ತಿದಮಂಜಿನಂತೆ ||೫೮||

ಇಡಿಯಿಡಿಯೆಸೆಯೆಸೆತಿವಿತಿವಿತರಿತರಿ | ಬಡಿಬಡಿಕೊಲ್ಲುಕೊಲ್ಲೆಂದು ||
ಪಿಡಿಗುಂಪಂಬಿಟ್ಟಬಾಳುಬಲ್ಲಡಿಗೊಂ | ಡಡಸಿಮುತ್ತಿದರುಮತ್ತವನ ||೫೯||

ಅಂತವರೆಲ್ಲಹುತ್ತಿರಕೆಯ್ದುವಪರಿ | ಯಂತರತಾಸುಮ್ಮನಿರ್ದ ||
ಅಂತರಿಸದೆತದ್ಗದೆಯನುಕುಪಿತಕೃ | ತಾಂತನಿಡುತತತ್ಕ್ಷಣದೊಳು ||೬೦||

ಅರೆಬರನೊರಸಿನೊಸಜನೊರಸುವವೊಲು | ಅರೆಬರಸಿಡಿದೀಡಾಡಿ ||
ಅರೆಬರನವನಿಯೊಳಪ್ಪಳಿಸುತಕೊಂದ | ನರಸಂಕತನದಿಂದವನು ||೬೧||

ಆನೆಕುದುರೆತೇರಾಳಾದಿಯಬಲು | ಸೇನೆಯೆಲ್ಲವುಬಂದುಮುಸುಕೆ ||
ತಾನದನಿನಿಸುಲೆಕ್ಕಿಸದೆಕೊಂದಿಕ್ಕಿದ | ನಾನೆಲಸೋಕರಿಪಂತೆ ||೬೨||

ತೇರಿಂತೇರನಶ್ವದಿನಶ್ವವಮದ | ವಾರಣದಿಂವಾರಣವನು ||
ಕೂರಾಳಿಂಕೂರಾಳನಿಟ್ಟಿಟ್ಟಾ | ಧೀರಮಾರುತಿಕೊಂದನಾಗ ||೬೩||

ಬೆಳ್ಳಿರಲೆಯಹಿಂಡಬೆದರಿಸಿಪೆರ್ಬುಲಿ | ಬಳ್ಳಿವನೆಗೆಪೋಗುವಂತೆ ||
ತಳ್ಳಂಕಗೊಳಿಸಿತತ್ಪುರವರಾಜಾಲಯ | ಕುಲ್ಲಸದಿಂದೆಯ್ದಿದನು ||೬೪||

ಅದನುಕಂಡಾಪಡಕಣದಾಳ್ಗಳಾರಾಜ | ಸದನದರಣಮಂಡಲಕೆ ||
ಒದಗಿತುತ್ತುರುಬಾಗಿಸಿಂದುಬಾಗಿಲನಿಕ್ಕ | ಲಧಟನನಿಲನಂದನನು ||೬೫||

ಜವನೊಕ್ಕಲಿಕ್ಕಿದಂಡದಿನಿರಪಾಳಪ | ನಿವಹವೆಲ್ಲವನೆಲಕಿಕ್ಕಿ ||
ತವಕದಿಬಾಗಿಲನೊದ್ದುಕೆಡಹಿದ | ತ್ತಾವನಿಸಗೃಹಕೆಯ್ದಿದನು ||೬೬||

ಸುರಲೋಕದಗಂಡನರ್ಜುನದೇವನ | ಸೀರೆಯಾವೆಡೆಯಿರ್ದಪಳೊ ||
ತೋರುತೋರದೊಡೆಕೊಲುವೆನೆಂದಾಗಾಡಿ | ಕಾರದನೆಲ್ಲರನಂಜಿಸುತ ||೬೭||

ಎಕ್ಕಟಿಯೊಳಗಿರ್ದಪ್ರಾಸಪಟಿಯನುಕಂ | ಡಕ್ಕಜೇಗದೊಳೀಳಿಸಲು ||
ದಿಕ್ಕನೆಪೊರಮಟ್ಟು ಸಾಶಯಬಂಕೈಯೊ | ಳಿಕ್ಕಿದಮಣಿಮುದ್ರಿಕೆಯನು ||೬೮||

ಸದವಿಪ್ರಾಭ್ಯೇದಿಸಿಯನುಸುಟ್ಟಿಸೆ | ಗರುವೆಯವನನಿಜರೂಪು ||
ಸಿರುತನಗಾಗಿವಾಯಮಿಲ್ಲೆಂಸುತಾನತಿ | ಭರದಿಂದಪಿಂತನೆಬರಲು ||೬೯||

ಬಾಗಿಲಕಾಪಿನಘಟನಂತತಿಬಂದು | ತಾಗಲಮ್ಮದೆಪೆರಸಾರೆ ||
ಆ ಗಂಡುಗಲಿರಾಜವೀಥಿಗೆನಡೆತ | ಪ್ಪಾಗಲಿರ್ದಾನೆದಿರಾಗೆ ||೭೦||

ಒಡಿಗೆಯಿಂದ ದುರ್ದನೆಲ್ಲಿಯಕಾಯಂದನದಿ | ಕಡುಗಲಿಕ್ಕೈಯೆತ್ತಿಪೊಯ್ಯೆ ||
ಕೆಡೆಯಲವರುಜವನುಂಡುಡರೃನೆತ್ತೀಗ | ಯೊಡಲತಡಹಿಕೊಳುತಿರ್ದ ||೭೧||

ಪೆಂಡಿರೊಳಾಟಿಪಂಭವನಲ ಅಂಗಣ | ಗಂಡಿಗರವಕೊಂದಕೊಲೆಯ ||
ಕಂಡುಬೆದರಿದೂರದೊಳಿರ್ದರಾ ಅಂಬ | ಕಂಡಕಾಗೆಯತೆರನಾಗಿ ||೭೨||

ಪಾಡಿಗನಪಟ್ಟಣದೊಳುತ್ತಸಗಿದಿ | ರಾದವರನುರೆಯಂಜಿಸುತ ||
ಬೀದಿಯಸಿಂಗದಂದದೊಳೆಯ್ದಿದನು | ಸೋದರನಿಕ್ರಮಿಭೀಮಸೇನ ||೭೩||

ಬೆಂಗೊಟ್ಟುಬೆದರಬಾಗಿಲನಿಕ್ಕಿಮನೆಮನೆ | ಯಂಗಣಕೋಡಿದದಾಗ ||
ಅಂಗಡಿಯಾನೆಯಂದದಿಮೆಲ್ಲನೆಯ್ದುವ | ಭಂಗನಕಾಣ ತಿರ್ದವರು ||೭೪||

ಬಳಿಕಾಕಳವಳವನುಕಂಡುಮ್ಮೈಗಲಿ | ಗಳುದುರುದುಂಬಿಕಲಿಗಳು ||
ಅಳಿಗಲಿಗಳುವೃದ್ಧಗಲಿಗಳೆಲ್ಲರಭೀಮ | ನುಳಿಯದೆನೆಲಕಿಕ್ಕಿದನು ||೭೫||

ಕಂಡುಭೀತಿಯೊಳೀತನುಕಡೆಗಾಲದ | ಖಂಡಪರಶುವೊಭೈರವನೋ ||
ದಂಡಧರನೊನಾವಿಂತಪ್ಪವೀರನ | ಕಂಡುದಿಲ್ಲೆನುತಿರಲವರು ||೭೬||

ಎಲೆಪುರಜನರೇಪರಸ್ತ್ರೀಯುಸುಕಳ್ವಾ | ಖಳನನೆನಗೆತೋರ್ಪಿಸಿದೊಡೆ ||
ನೆಲದೊಳುನೆರಪುವೆನೆನುತಗದೆಯತೂಗು | ತಲಸಿಕೆಯಿಂನಡೆತಂದು ||೭೭||

ಪುಂಸೆನಾದುಸಿಯುಸುಸಡೆಯುಸಿತಾನಾ | ಪಿಂದೆನಡೆದುತತ್ಪುರದ ||
ಇಂದಿರದೆಸೆಯೊಳುನಿಂದಿರ್ದ್ದಬಲಗೋ | ವಿಂದಫಲ್ಗುನರಕೂಡಿದನು ||೭೮||

ಅದ್ರುಪದಾತ್ಮಜೆಬಲಗೋವಿಂದರ | ಪಾದಕೆರಗಿಪರಕೆಯನು ||
ಸಾದರದಿಂದತಳೆದುಬಂದುಸಿಂದಲಾ | ಕಾದಲನೆಡದಭಾಗದೊಳು ||೭೯||

ಜಂಬೂದ್ವೀಪದಿಂದಾಪಿಲ್ಲಿಗೆಬಂದ | ರೆಂಬವಾರತೆಯೆಣ್ದೆಸೆಯು ||
ತುಂಬಬೇಕೆನುತಶಂಖವನೂದಿದನಾ | ಅಂಬುರುಹೋದರನಾಗ ||೮೦||

ಅದಿಂತವನಿಯಾಗಸದಿಂಮುಡುತತಿ | ಯುದುರಿದುವಾಶಾದಂತಿ ||
ಬೆದರಿದುವಾವಾಸುದೇವನುಘರಬಂ | ದೊದರಿಯೂದಿದಶಂಖರವಕೆ ||೮೧||

ಅಘಟನಾಸಮುಪಸರಣಪುಂಟಪದೊಳಿ | ದ್ದಘಟಸಲ್ಲಿಯವಾಸುದೇವ ||
ಇದುತಾನೆಲ್ಲಿಯದೆಂದುಕೇಳಿದನಾ | ಸದಿತಬೋಧರುಗಣಧರರ ||೮೨||

ಭೂಪತಿಕೇಳಿಲಂತೆಂದರುಜಂಬೂ | ದ್ವೀಪದಭರತಾರ್ದ್ಧಚಕ್ರಿ ||
ಶ್ರೀಪುರುಷೋತ್ತಮನವನಮೈದುನನತಿ | ಕೋಪಕೃತಾಂತಫಲ್ಗುನನು ||೮೩||

ಚಪನಾಂಗನವನಪ್ಲಭೆವ್ರೌಪದಿಯೆಂಬ | ತರುಣಿಯುನಿನ್ನಮೈದುನನು ||
ದುರುಳತನದಿವಂಚಿಸಿತಂದುನಿಜಪುರ | ವರದೊಳುಸೆರೆಯಿಕ್ಕಿದನು ||೮೪||

ಅದನರಿದಾವೆಂಬಳಿಬಂದವರಾ | ಸುದತಿಯನಲ್ಲಿಂದತಂದು ||
ಪದಪಿಂದೂದಿದಶಂಖಸ್ವರವೆಸ | ಲದಕೇಳಿಯಾಶಂಖಚಕ್ರಿ ||೮೫||

ಅಸಮವಸ್ತುತಿಯುಧವಗೆವಂದಿಸಿ | ಯೋಸರಿಸವೆನಡೆತಂದು ||
ಅಸುರಪುಷ್ಪಕೋಪದೊಳೂರಿಗೈದಿದು | ಹಾಸೇನೆಯನೆಲ್ಲಕೂಡಿ ||೮೬||

ಸಾಗರರಂಗಕೆನಡೆವನಮುಯದೊಳ | ಗಂಗೀಕರಾಮಂತ್ರಿಗಳ ||
ಜಂಗುಳಿನೆರೆದುಬಂದಿಂತೆಂದರಿಮನೃಪ | ರಂಗವೆಶಂಖಚಕ್ರೇಶ ||೮೭||

ಅಪಚಾರದಿಂನಿನ್ನಮೈದುನನಾಪರ | ಯುವತಿಯುವಂಚಿಸಿತಂದು ||
ಭವನದೊಳಿಡೆಸೆರೆಯನುಪಿಂತನಬಂದು | ತವಕದಿಂದಾಬಲ್ಲಿದರು ||೮೮||

ತಮ್ಮಸೊಮ್ಮನುತಾವೊಯ್ಯಲೇತಕೆನಿನ | ಗುಮ್ಮಳಮಿಾವುಜ್ಜುಗವು ||
ಸಮ್ಮತವಲ್ಲೆಂದುಪಲವುಬುದ್ಧಿಯಪೇಳಿ | ಸುಮ್ಮನಿರಿಸೆಯಾನೃಪನ ||೮೯||

ತಾಮಾಬಳಿಯಿಂಬಂದೂರವಱಿಂದಿರ್ದ | ರಾಮಕೇಶವಭೀಮನರರ ||
ತಾಮರೆವಜ್ಜಿಗೆವಗಿಕ್ಕೈಮುಗಿದುಸು | ಪ್ರೇಮದಿನಿಂತೆಂದರಾಗ ||೯೦||

ಕಡುಗಲಿತನದಿಂದಿಲ್ಲಿಗೆಬಂದುನಿ | ಮ್ಮೊಡವೆಯತಂದುಸೀವಿಲ್ಲಿ ||
ತಡವುದಕೇನುಕಾರಣವೆಂದುಪಲತೆರ | ದೊಡಬಡಿಕೆಯಮಾತನಾಡೆ ||೯೧||

ಆಮಾತನವಧಾರಿಸಿರಾಮಕೇಶವ | ಭೀಮಾರ್ಜುನರುಪುಷ್ಪಕವನು ||
ಕೋಮಲೆಯಾದ್ರೌಪದಿಗೂಡಿಯಡರ್ದುಸು | ಪ್ರೇಮದಿತಿರುಗಿದರಾಗ ||೯೨||

ಬದರೀವನವನ್ನೊಕ್ಕುಧರ್ಮಜನನುಕಂ | ಡಧಟರುಭೀಮಗಿರೀಟಿ ||
ಸದಮಲಚರಿತೆಪಾಂಚಾಲಿಯನಲ್ಲಿಸ | ನ್ಮುದದಿಬಲಾಚ್ಯುತರಿರಿಸಿ ||೯೩||

ಕೊಂತಿಮಹಾದೇವಿಯನೊಡಗೊಂಡತಿ | ಸಂತೋಷದಿಂನಿಜಪುರಕೆ ||
ಅಂತರಿಕ್ಷಪಥದೊಳುಪೋದರಿತ್ತಲು | ಕೌಂತೇಯರಾವಿಪಿನದೊಳು ||೯೪||

ನಿಜದೇಶನಿಜರಾಜಧಾನಿನಿಜಾಲಯ | ನಿಜಬಂಧುಜನದಮಧ್ಯದೊಳು ||
ನಿಜಸುಖದೊಳಗಿರ್ದಂದದಿನಿರ್ದರು | ನಿಜಭುಜಬಲಶಾಲಿಗಳು ||೯೫||

ಈರೀತಿಯಿಂದವಧಿಯತಾವುಕೈಕೊಂ | ಡೀರಾರುವತ್ಸರಕಳೆಯೆ ||
ಧೀರೋದಾತ್ತರಲ್ಲಿಂಪೋಪಕಾರ್ಯಮು | ನಾರೈದಾದ್ರೌಪದಿಯನು ||೯೬||

ಆಪಾಂಚಾಲನಬಳಿಗೆಯ್ದಿಸಿತಾ | ವಾಪಳುವನುಪೊರಮಟ್ಟು ||
ಆಪೂರ್ವಮುಖವಾಗಿನಡೆದು ಕಣ್ಗೊಪ್ಪುವ | ಶ್ರೀಪರ್ವತವಸಾರಿದರು ||೯೭||

ಹರುಷದಿಕೆಲದಿನಮಿರ್ದಲ್ಲಿಕಾಂಚೀ | ಪುರಕೈದಿಕೆಲಪಗಲಿರ್ದು ||
ವರುಣದಿಶಾಮುಖವಾಗಿನಡೆದುಬಂ | ದುರುಕರ್ಣಾಟಕಕೆಯ್ದಿ ||೯೮||

ಆವಿಷಯದೊಳುರಂಜಿಸುವವಿರಾಟಮ | ಹೀವಲ್ಲಭಪುರಕೆಯ್ದಿ ||
ಆವೂರಸನ್ನಿಧಿಯೊಳಗಗುರ್ವಿಸುವಮ | ಹಾವಿಪಿನದಮಧ್ಯದೊಳು ||೯೯||

ಕಡುದೊಡ್ಡಿತಪ್ಪಬನ್ನಿಮರದೊಳುತಾವು | ಪಡೆದದಿವ್ಯಾಸ್ತ್ರಂಗಳನು ||
ಮಡಗಿವಿದ್ಯಾದೇವತೆಗಳನವಕೆಕಾಪ | ನಿಡುತಲ್ಲಿಂಬಂದರಾಗ ||೧೦೦||

ರೂಪಪರಾವರ್ತನವಿದ್ಯೆಯಿಂನಿಜ | ರೂಪವಪಲ್ಲಟಮಾಡಿ ||
ರೂಪವನ್ಮಥಧರ್ಮಜನುಧರಾಮರ | ರೂಪನುಕೈಕೊಂಡುಬಳಿಕ ||೧೦೧||

ಕ್ಷೋಣಿಯೊಳಿಂತಪ್ಪಪಾರ್ವನರೂಪನು | ಕಾಣೆವೆನುತಪುರಜನವು ||
ಮಾಣದೆನಿಂದುನೋಡುತ್ತಿರಲವನುವು | ರಾಣಭಟ್ಟವೆಸರಾಂತು ||೧೦೨||

ಇಂತುನಡೆದುಬಂದಾಮಹೀಪತಿಯುಸ | ಭಾಂತರಾಳವಪೊಕ್ಕವಗೆ ||
ಸಂತಸದಿಂದಕ್ಷತೆಯುನಿಟ್ಟಾಸತ್ಯ | ವಂತನುಹರಸಿಕುಳ್ಳಿರ್ದು ||೧೦೩||

ಬಳಿಕಮುಪನ್ಯಾಸಮನಲ್ಲಿಯುಬುಧ | ರೆಳಸಿಕೇಳ್ವಂತುಚ್ಚರಿಸಲು ||
ಇಳೆಯಾಧಿಪನೆಚ್ಚಯವಗೆಜೀವಿತವವೆ | ಗ್ಗಳಮಾಡಿನಿಲಿಸೆಮತ್ತಿತ್ತ ||೧೦೪||

ಮಾರುತಿಯಾಮಹೀಪತಿಯುಕಾಣಲುನೀ | ನಾರೆನಲಾನುಸುವ್ವಾರ ||
ಧಾರಿಣಿಯೊಳುಮಲ್ಲಯುದ್ಧದೊಳೆನಗಿದಿ | ರಾರಿಲ್ಲವೆಂದಲ್ಲಿನಿಲಲು ||೧೦೫||

ಮತ್ತೆಕಿರೀಟಿನಟ್ಟುವನಾನಕುಲನ | ತ್ಯುತ್ತಮಹಯಶಿಕ್ಷಕನು ||
ಮೊತ್ತದಹಟ್ಟಿಯತುರುವಿಗಧ್ಯಕ್ಷಗು | ಣೋತ್ತಂಸನಾಸಹದೇವ ||೧೦೬

ಇಂತೀರೂಪವಕೈಕೊಂಡಾಭೂ | ಕಾಂತನಸಮ್ಮುಖವಾಗಿ ||
ತಂತಮ್ಮತೆರನಪೇಳಲುಕೇಳಿಯುವರನಿ | ಶ್ಚಿಂತದಿನಿರಿಸಿದನವನು ||೧೦೭||

ಇಂತುವೈಗರೆವಾಮತ್ಸ್ಯನಗರಿಯೊಳು | ಕೌಂತೇಯರಿರಲೊಂದುದಿವಸ ||
ಅಂತಕನೇಯುಂದವಡೆದೆಯ್ದಿದನೋಯೆಂ | ಬಂತೊರ್ವನತಿಬಲಯುತನು ||೧೦೮||

ಬಲ್ಲಿದನವನುವಿಷಮುಖರ್ಪರನೆಂಬ | ಮಲ್ಲನಾಪುರವಪೊಕೆಯ್ದಿ ||
ಉಲ್ಲಾಸದಿಂದಕೀಚಕನೆಂಬವನಮುಖ | ದಲ್ಲಿವಿರಾಟನಕಂಡು ||೧೦೯||

ಮಲ್ಲಗಾಳೆಗದೊಳಗೆನಗಿದಿರಾಗುವ | ಬಲ್ಲಿದರನುತಂದುನಿಲಿಸು ||
ನಿಲ್ಲದೆನಲುಬಾಣಸಿಗವೇಷವನಾಂತ | ಗೆಲ್ಲಕಾರನುಭೀಮಸೇನ ||೧೧೦||

ಎಲವೋವಿಷಮುಖರ್ಪರನಿನ್ನೊಳಗುಳ್ಳ | ಬಲುಹನೆನ್ನೊಳುತೋರೆನಲು ||
ನೆಲೆದಾಣ್ಮನುರುಮುದದಿಂಮಲ್ಲರಂಗವು | ನೆಲೆಮಾಡಿಸಿಕುಳ್ಳಿರಲು ||೧೧೧||

ಇದಿರಾದಜಗಜಟ್ಟಿಯುಕಂಡುಕೋಪದಿ | ನಧಟರದೇವಸುವ್ವಾರ ||
ಮದದಂತಿಯನುಮರ್ದಿಪಸಿಕ್ಕ್ಮದಂದದಿ | ನವಿರದೆನೆಲಕಿಕ್ಕಿದನು ||೧೧೨||

ಅದನುಕಂಡಾಮತ್ಸ್ಯನೃಪನಮೈದುನನತಿ | ಮದಯುತನಾಕೀಚಕನು ||
ಪುದಿದಕೋಪದೊಳಿದಿರಾಗಿಖಡ್ಗವಪಿಡಿ | ದೊದರಿಬರಲುಪವನಜನು ||೧೧೩||

ಅವನಖಡ್ಗವನುಸೆಳೆದುಹಾಕಿಕಾಲ್ವಿಡಿ | ದವನೀತಳದೊಳಪ್ಪಳಿಸಿ ||
ಜವನದಾಡೆಯೊಳಿಕ್ಕಲಾನೃಪತಿಯುಸಭೆ | ಯುವಧರಿಸಿದುದುವಿಸ್ಮಯವ ||೧೧೪||

ಅಂತಾದುದನುಕಂಡಾಮತ್ಸ್ಯನೃಪತಿಯಿಂ | ತೆಂದನೆಲೇಬಾಣಸಿಯೆ ||
ಭ್ರಾಂತಕೀಚಕನುಜಟ್ಟಿಗೆಸಲುವಾಗಿತ | ನ್ನಿಂತಾನೆಯುಳಿದುಹೋದುದಕೆ ||೧೧೫||

ನಿನ್ನ ಮನದೊಳಿಣಿಕೆಯುಮಾಡಬೇಡೆಂದು | ಮನ್ನಿಸಿಕಳುಹಲೆಯ್ತಂದು ||
ನನ್ನಿ ಕಾರರುಪಾಂಡವರುವ್ಯೆಗರೆದಿರ | ಲನ್ನೆಗಮಿತ್ತ ಕೌರವಗೆ ||೧೧೬||

ಅವಧಿಯಿಾರಾರುಸಂವತ್ಸರಮಾಪಾಂ | ಪಾಂಡವರಿಗೆಪರಿಪೂರ್ಣವಾಯ್ತು ||
ಅವರಿರ್ದಜ್ಞಾತವಾಸದನೆಲೆಯುನು | ವಿವರಿಸದವಿಚಾರದಿಂದ ||೧೧೭||

ಇಂತುಮೆಲ್ಲನೆಮಾಡಿಕೊಂಡಿಹರೇಭೂ | ಕಾಂತಕೇಳೆಸುತಾಶಕುನಿ ||
ಮಂತಣವನುಮಾಡಲವಕೇಳಿಯಾಭೀಷ್ಮ | ರಿಂತೆಂದರಿಳೆಯುವಲ್ಲಭಗೆ ||೧೧೮||

ಎಲೆಮಗನೇಕೇಳವರವಧಿಯದಿನ | ಸಲೆಸಂದಿತಂತದರಿಂದಾ ||
ಕಲಿಗಳಕರೆಸಿಯವರನಾಡುಬೇಡುವ | ನೊಲಿದೀವುದುಚಿತವುನಿನಗೆ ||೧೧೯||

ಅಲ್ಲದಿರ್ದೊಡೆಕಾರ್ಯತಪ್ಪುವುದೆನಲಾ | ಸೊಲ್ಲಗೆಕೋಪಾಗ್ನಿಯೊಗೆದು ||
ಪೊಲ್ಲಮನಿಸಿನಿಂದಿಂತೆಂದನೀವಾರ | ಗೆಲ್ಲನಹಾರ್ಕೈಸುತಿಹಿರಿ ||೧೨೦||

ಎನುತೆಂದನೆನ್ನೀಕರ್ಣಸೋವಗೆಲೋಕ | ದನಿಮಿಷದನುಜಪನ್ನಗರು ||
ವೊನೆಯೊಳಗಿದಿರಾಗಲಣ್ಮರದರಿನೆನ್ನ | ಘನತರಮಪ್ಪಸೇನೆಯೊಳು ||೧೨೧||

ಹರಿಹರವಿಧಿಗಳ್ಗೆ ಹರುವಹೇಳುವೆಪೆಂಪು | ದೊರೆಗಳುನಿಮ್ಮರಿಕೆಯೊಳು ||
ಧರೆಹೊರದಂತಕಿರಥರುಮಹಾರಥ | ರಿರಲೆನಗೇಕೆವಿಚಾರ ||೧೨೨||

ಎಂದುಕೌರವತನ್ನ ಗರ್ವವನುಸುರಲು | ಮಂದಾಕಿನಿಯನಂದನನು ||
ಮುಂದಣಕಾರ್ಯವನೀನೇನೋಡಿಕೊ | ಳ್ಳೆಂದುಮನೆಗೆಪೋಗಲತ್ತ ||೧೨೩||

ಒಳಿಕವಿಚಾರಪರಾಪರದೂತರು | ಗಳನುಕರೆಸಿಪಾಂಡವರು ||
ಹಳುವಿನೊಳಗೆಹನ್ನೆರಡುವರುಷವಿರ್ದು | ಬಳಿಕಲ್ಲಿಗೆಯ್ದಿದರವರು ||೧೨೪||

ತಿಳದುಬೇಗದಿಬನ್ನಿ ವೆಂದುಕಳುಹಲವ | ರಲಸದೆಬಂದೆಲ್ಲೆಡೆಯೊಳು ||
ತೊಳಲಿಯರಸಿವಿವರದೊಳುವಿರಾಟನ | ಪೊಳಲೊಳಗವರೊಂದುವರುಷ ||೧೨೫||

ಸತ್ಯಮನುದ್ಧರಿಸಲುವ್ಯೆಗರೆದರ | ಸತ್ಯಂತವಿವರದಿಪರಿದು ||
ಭೃತ್ಯರರಸಿಬಂದುಪೇಳೆಕರೆಸಿದನು | ಕೃತ್ಯಾಧಿಕಾರಿಶಕುನಿಯ ||೧೨೬||

ಬಳಿಕೆಂದನಾಪಾಂಡವರುವಿರಾಟನ | ಪೊಳಲೊಳಗಿರ್ದಸಂಶಯುವ ||
ತಿಳಿವುದಕಾವುದುಪಾಯಮೆಂದಾಭೂ | ಲಲನೇಶನುಕೇಳಲವನು ||೧೨೭||

ಪೆರತಿಲ್ಲಮತ್ಸ್ಯಮಹೀಶನನಗಿರಿಯ | ಹೊರಗೆಹರಿದುಮೇವುತಿರ್ಪ ||
ತುರುವನುನಾವುಹಿಡಿಯಲುಸ್ಯೆರಿಪುದಿಲ್ಲ | ನೆರೆಗಲಿಗಳುಪಾಂಡವರು ||೧೨೮||

ಈಮೈಯೊಳಗಲ್ಲದವರಕಾಣುವುದಿಲ್ಲ | ಭೂಮಿಪಾಶ್ವರಕೇಳೆನಲು ||
ಆಮಾತನವಧಾರಿಸಿಬೇಗತನ್ನ | ದ್ರಾಮಸೇನೆಯನೆಲ್ಲಬರಿಸಿ ||೧೩೯||

ಬಳಿಕತ್ರಿಗರ್ತಾಧೀಶಸುಶರ್ಮನ | ಗ್ಗಳಿಕೆವಡೆದರಥಿಕರನು ||
ತಳುವದೀರೇಳುಸಾಸಿರವನುಪಥವಮಾಡಿ | ಕಳುಹಲವರುಬೇಗಪೊಯ್ದು ||೧೪೦||

ಆನಗರಿಯುತೆಂಕಣದಿಕ್ಕಿನೊಳಗಿರ್ಪ | ಕಾನೊಳಪ್ಪೇವತ್ತುರುವನು ||
ಆನಲಂತಾವಾರ್ತೆಯಕೇಳಿಮತ್ಸ್ಯಮ | ಹೀನಾಥಕೆಕ್ಕಳಗೆಳಲಿ ||೧೪೧||

ಉತ್ತರನನುನಗರಿಯೊಳುಕಾವಲನಿಕ್ಕಿ | ಮುತ್ತೊಂದಿನಸುತಡೆಯದೆ ||
ಮೊತ್ತದಚತುರಂಗವಾಹಿನಿಯುದಿರದೆ | ಸುತ್ತಿತನ್ನೊಡನೈದಿಬರಲು ||೧೪೨||

ಅನಿತರೊಳಿತ್ತಲಂತಕಸೂನುಬಂದುತ | ನ್ನನುಜರೊಳಿಂತುನುಡಿದನು ||
ಕುನಯದಿಂದಾಕೌರವಕೊಟ್ಟವಧಿಯು | ದಿನಮಿಂದುಪರಿಪೂರ್ಣವಾಯ್ತು ||೧೪೩||

ನಾವಿರ್ದುದನುಕಾಣಿಸಿಕೊಳ್ಳಬೇಕೆಂ | ದೀಪ್ರತುರುವನೆಲ್ಲವನು ||
ಓಪದೆಬಂದುಪಿಡಿದರಿದನುರೆಯರಿ | ದಾಪಿರಲತಿದೋಷವಹುದು ||೧೪೪||

ಎಂದುಫಲ್ಗುನನನಿರಿಸಿತಾನಾವಾಯು | ನಂದನನನುಕೂಡಿಕೊಂಡು ||
ಬಂದು ವಿರಾಟಸೈನಿಕನನುಬೇಗದಿ | ಪಿಂದಿಕ್ಕಿಬರಲನಿಲಜನು ||೧೪೫||

ಗದೆಗೊಂಡುಗಡಿತಡೆಯಿಲ್ಲವೆಂಬಂದದಿ | ಸವಿತನಿಕುರುಸೈನಿಕದ ||
ಇದಿರಾದವರನೆಲ್ಲರಬಡಿದಾಕಾಲ | ಸಂದರಪೋಪಾವಮಾಡಿದನು ||೧೪೬||

ಬಳಿಕಿದಿರಾದಸುಶರ್ಮನಪೆಡಗಟ್ಟ | ನುಳಿಯದೆಕಟ್ಟಿಥತ್ತ್ರಜಗೆ ||
ಅಲಘುವಿಕ್ರಮಿತಂದೊಪ್ಪಿಸಲಾಕುರು | ಬಲವೆಲ್ಲನಾಚಿಕೋಡಿದವು ||೧೪೭||

ಧರ್ಮತನುಜನಾವರ್ಮವಬಿಸುಟಿಸು | ಶರ್ಮನಬಿಟ್ಟುಕಳುಹಲು ||
ಪೇರ್ಮೆಯಿನಾಮತ್ಸ್ಯನೃಪತಿತಿರುಗಲಿತ್ತ | ದುರ್ಮಂತ್ರಿಯಾಕುರುಸೇನೆ ||೧೪೮||

ಆಮರುದಿನವಿಳೆಬೆಸಲೆಯಾದಾದವಿ | ನಾಮತ್ಸ್ಯಪುರದೆಡೆಗಡೆಯು ||
ಸೀಮೆಯೊಳಗೆಮೇವತುರುಗಳನೆಲ್ಲವ | ಸಾಮುಪಲ್ಲದೆಬಂದುಪಿಡಿಯೆ ||೧೪೯||

ಓಲಗದೊಳಗಿರ್ದಮತ್ಸ್ಯನೃಪತಿಗೆ ಗೋ | ಪಾಲಕನೋರ್ವನುಬಂದು ||
ಆಲಿಸಿನೋಡಬಾರದಬಲವೆಮ್ಮಗೋ | ಜಾಲವಬಂದುಪಿಡಿದುದು ||೧೫೦||

ಕರುಬೇರೆತಾಯಿಬೇರಾದಹಿಂಡನುಕಂಡು | ತುರುಗಾವಲವರುಬೇಡೆನಲು ||
ಅರಗುಲಿತನದಿನವರತಲೆವೊಯ್ದುವೈ | ಮರೆದುನಿಂದದೆಮೆಸಲಾಗ ||೧೫೧||

ಎತ್ತರವಾದಕೋಪದಿಗದ್ದುಗೆವೊಯ್ದು | ಮುತ್ತುವನೇಳ್ವವೇಳೆಯೊಳು ||
ಉತ್ತರನೆಳ್ದುಕೈಮುಗಿದೀತುರುಗಳ | ವೊತ್ತುವನಾತಿರುಗಿಪೆನು ||೧೪೨||

ಎನುತಾವುತ್ತರನಾನಿಜಜನಕಗೆ | ಘನತರಮುಪ್ಪಪಂಥವನು ||
ಅನುವಾಗಿನುಡಿದುಪಟ್ಟಣವನುಪೊರಮಡು | ವನಿತರೊಳಾಪಾಂಡವರು ||೧೪೩||

ತಂತಮ್ಮಗದೆದಿವ್ಯಕೋದಂಡಕೂರ್ವಾಳು | ಕೊಂತಂಗಳಾದಿಯಾಯುಧವ ||
ಸಂತಸದಿಂದಾಬನ್ನಿಯಮರದಿಂ | ದಾತರಿಸಿದೆತಂದರಾಗ ||೧೪೪||

ಅನಿತರೊಳಾವುತ್ತರತನ್ನಸೇನೆಯ | ನನುವಾಗಿಮೋಹರಮಾಡಿ ||
ವನನಿಧಿಯಂತೆಘೂರ್ಣಿಪಕುರುಸೇನೆಯ | ಮೊನೆಯೊಳಗೀಕ್ಷಿಸಿನೋಡಿ ||೧೪೫||

ಶಿರಮನಳ್ಳಾಡಿಮನಸುಗುಂದಿನಿಂದಿರ | ಲನಿಲಜನಾಫಲ್ಗುನನು ||
ಪಿರಿದುಕೋಪದೊಳೊಂದೊಂದುರಥವನೇರಿ | ಕುರುಬಲಕಿದಿರಾದರಂದು ||೧೪೬||

ಒಡೆದುದಜಾಂಡವಾಗಸಪಿಳಿಗುರುಳ್ದುದು | ಕೆಡೆದುದುವಾಸವಶಿಖರಿ ||
ಸಿಡಿದುದುಭೂತಳವೆಂಬಂತೆಧನುವಜೇ | ವಡೆಯಲುಕಲಿಪಾರ್ಥನಾಗ ||೧೪೭||

ಶರವೊಂದರಿಂದಸಾಸಿರರಥಪತ್ತುಸಾ | ಸಿರಗಜಲಕ್ಷಕುದುರೆಯು ||
ನರರನುಪತ್ತುಲಕ್ಷವನಾನೆಲದೊಳು | ನೆರಪಿದನಾಯಿಂದ್ರಸೂನು ||೧೪೮||

ಕಡೆಯಕಾಲದೊಳೆರಗುವಬರಸಿಡಿಲಂತೆ | ಘುಡುಘುಡಿಸುತಲನಿಲಜನು ||
ಕಡುಮುನಿಸಿಂಪೊಡೆಯಲುಪೊಡವಿಗೆಬೀಳ್ದು | ನೆಡೆಯಿಲ್ಲದಾಕುರುಸೇನೆ ||೧೪೯||

ಪರಿವನೆತ್ತರಪೊನಲಿಂಪಡಲಿಟ್ಟಂ | ತುರುಳ್ವಶಬಾನೀಕದಿಂದ ||
ಧುರಧರೆಯತಿಭೀಕರವಾದುದತಿರಥ | ರುರವಣೆಯಿಂದಿದಿರಾಗೆ ||೧೫೦||

ಅವನಿಯಿದಾಗಸವಿದುದಿಕ್ಕೆಂಬಾ | ವಿವರವರಿಯಬಾರದಂತೆ ||
ದಿವಿಜತನೂಭವನಿರದೆಚ್ಚನಾರಾಚ | ನಿವಹಕವಿದುದರಿಬಲವ ||೧೫೧||

ಶತಶರಧಿಯೊಳುಮುಳುಗಿಯತಿರಥರುನಿ | ತ್ತರಿಸಲಾರದೆಜಾರಿದರು ||
ಕುರುಬಲವವನೆಸುಗೆಗೆಮುಗಿಲನಿಲನ | ಭರಕೋಡುವಂತೋಡಿದುದು ||೧೫೨||

ತೆಟ್ಟತೆಟ್ಟೆಯೊಳೋಡುವಕುರುಸೈನಿಕ | ಕೆಟ್ಟುದನೋಡಿಗೊಳ್ಳೆಂದು ||
ದಿಟ್ಟರವರುನಗುತವೆತುರುಗಳನುಹಿ | ಮ್ಮೆಟ್ಟಿಸಿದರುಬೇಗದೊಳು ||೧೫೩||

ಕುರುಬಲವೆಂಬಮಹಾವಿಪಿನಕಕ್ಕಾ | ಮರುತಾತ್ಮಜಧನಂಜಯರು ||
ಮರುತಧನಂಜಯರಾತಾದರೆಂದರೆ | ಬರುಮಿಗೆಕೊಂಡಾಡಿದರು ||೧೫೪||

ಇವರುನಿಶ್ಚಯದಿಂದಪಾಂಡವರೆಂಬುದ | ವಿವರಿಸಿಯಾಕ ರ್ಣಸೇನ ||
ತವಕದಿಹಿಮ್ಮೆಟ್ಟಿತಮ್ಮನಗರಿಗೆಯ್ದಿ | ಯವನಿಪಗರುಹಿದನಿತ್ತ ||೧೫೫||

ಆಕುರುಬಲವನೋಡಿಸಿದಪಾಂಡವರೀ | ಲೋಕೈಕವೀರರೆಂಬುದಕೆ ||
ಆಕರ್ಣಾಟಾಧಿಪತಿಮತ್ಸ್ಯರಾಜನ | ನೇಕಹರ್ಷಚಿತ್ತನಾಗಿ ||೧೫೬||

ಬಂದುಧರ್ಮಜಗೆವಂದಿಸಿಯುಳಿವವರ್ಗ | ಸಂದವಿನಯಗಿಕ್ಕೈಮುಗಿದು ||
ಸಿಂದೀತೆರದಿಬಿನ್ನೈಸಿದನಾಗುಣ | ವೃಂದಾರಕಸತ್ಯನಿಧಿಯೆ ||೧೫೭||

ಆಳಿಗಾಳಾಗಿನೀವತಿಹೀನಸವೇಷವ | ತಾಳಿಯೆನ್ನೊಳುಜೀವಿಸಿದುದು ||
ಕಾಲದಗುಣವೈಸೆಯೆನುತವಿರಾಟಭೂ | ಪಾಲಕನತಿನೊಂದುನುಡಿದು ||೧೫೮||

ಪುರದೊಳಗಷ್ಟಶೋಭೆಯಮಾಡಿಸಿಮದ | ಕರಿಯಮಸ್ತಕದೊಳಗವರ ||
ಹರಿಸದಿನೇರಿಸಿರಾಜಗೃಹಕೆವಜ್ರ | ಧರವಿಭವದಿನಡೆತಂದು ||೧೫೯||

ರಾಜವದನೆಯರಿಕ್ಕೆಲದೊಳುಚಮರವ | ನೋಜೆಯಿಂಗಲುಢಾಳಿಸಲು ||
ರಾಜೇಂದ್ರಚೂಡಾಮಣಿಧರ್ಮಜನನೃಗ | ರಾಜಪೀಠದೊಳುಕುಳ್ಳಿರಿಸಿ ||೧೬೦||

ಮಂಡಳಿಕರುಮನ್ನೆಯರುಸಾಮಂತರು | ದಂಡನಾಯಕರೊಡಗೂಡಿ ||
ಚಂಡವಿಕ್ರಮಿಗಳನೋಲೈಸಿದನುಭೂ | ಮಂಡಲೇಶ್ವರನುವಿರಾಟ ||೧೬೧||

ಇಂತುವಿರಾಟನಪುರದೊಳಗಾಗುಣ | ವಂತರಿಪ್ಪಾಸುದ್ದಿಗೇಳಿ ||
ತಂತಮ್ಮತನುಜೆಯರೊಡಗೂಡಿನೆಲಹೊರ | ದಂತಪ್ಪಸೈನಿಕಸಹಿತ ||೧೬೨||

ಅತಿಮುದದಿಂಧಾಸ್ಯರಾಜವಿಂಧ್ಯಕಭೂ | ಪತಿಚಂಡವಾಹನರೇಂದ್ರ ||
ಸುತಸಹ್ಮಘೋಷಣಪಾಂಚಾಳಪೃಥ್ವೀ | ಪತಿಯಾದಿಯರಸರೈದಿದರು ||೧೬೩||

ಬಳಿಕಾಯಿಂದ್ರರಥಾಂಬರಚರತನ್ನ | ಬಲವನೆಲ್ಲವಕೂಡಿಕೊಂಡು ||
ತುಳಿಲಾಳ್ಗಳುತನ್ನಾನೂರ್ವರುಸುತ | ರೆಳಸಿಬಳಸಿಬಂದನಾಗ ||೧೬೪||

ಮತ್ತಾಮತ್ಸ್ಯನೃಪನನಿಜಸಖನುಗು | ಣೋತ್ತಂಸನಾಪಾಂಡ್ಯನೃಪತಿ ||
ಉತ್ತಮರೂಪಾನ್ವಿತೆನಿಜಸುತೆಯು | ನ್ಮತ್ತಗಜೋಪಮಗಮನೆ ||೧೬೫||

ಲಲಿತಾಂಗಿಯೆಂಬಳನಾಫಲ್ಗುನಗಿತ್ತು | ಬಳಿಕತನ್ನುರುಬಲಸಹಿತ ||
ಬಳಿವಳಿಯಾಗಿತಾನೇಬಂದತಿಸುಖ | ದೊಳುಕೂಡಿಯೋಲೈಸುತಿರಲು ||೧೬೬||

ಮತ್ತೆಕೆಲವುಪೃಥ್ವೀಪಾಲಕರುತ | ಮ್ಮುತ್ತಮಪ್ಪಸುತೆಯರ ||
ಇತ್ತುಸುಖದಿನೋಲೈಸುತಿರಲುಮ | ತ್ತಿತ್ತಯಾದವಪುರದಿಂದ ||೧೬೭||

ಹರಿಸವಿಸತ್ಯಕಸಂಬಸ್ಯಪತಿಬಂದು | ಚರಣಕಮಲಯುಗಕೆರಗಿ ||
ಒಸೆದನಿಂತೆಂದೆಲೆಘರ್ಮತನುಜಕೇಳು | ಮುರರಿಪುತಮ್ಮಪಟ್ಟಣಕೆ ||೧೬೮||

ಸ್ವಾಮಿಯನೊಡಗೊಂಡುಬರಹೇಳಿಯೆನ್ನನು | ಪ್ರೇಮದಿಕಳುಹಿದನೆನಲು ||
ಆಪನಾತನವಧಾರಿಸಿಯಾದವರನು | ಪ್ರೇಮಕುಶಲವಾರ್ತೆಗೇಳಿ ||೧೬೯||

ಬಳಿಕೆಂದನಿಂತುಸುರಿವಪರ್ಜಾಕಾಲ | ಕಳೆವಂತರದೊಳುಬಂದು ||
ಕಲಿಸವಿಜಯನೇಮಿಜಿನಗೆವಂದಿಪೆವೆಂದು | ಕಳುಹಿದನಾಸತ್ಯಕನ ||೧೭೦||

ಇಂತುಕಳುಹಿಸುಖವೊಳಗಿರಲಾತ್ರೀ | ಕಾಂತನಪುರದೊಳಗಿರ್ದ ||
ಕೊಂತಿಯೊಂದಾನೊಂದುದಿನದೊಳುವಿದುರನ | ಸಂತಸದಿಂನೋಡಲೆಂದು ||೧೭೧||

ತ್ವರಿತದಿಪೊರಮಟ್ಟುಬರಲೊಂದುವಿಪಿನವಾಂ | ತರದೊಳಗೋರ್ವಮುನೀಶ ||
ಇರೆಕಂಡುಚರಣಕಮಲಕೆವಂದಿಸಿಯಿಂ | ತೊರೆದಳೆಲೇಜತಿರಾಯ ||೧೭೨||

ಸೊಗಯಿಸುವೆನ್ನಜವ್ವನದೊಳುಮುಂಪೆತ್ತ | ಮಗನಮಂದಸಿನೊಳಗಿಟ್ಟು ||
ಜಗುನೆಯೊಳಗೆಬಿಟ್ಟೆನವನಬಾಳುವೆಯನು | ಒಗೆಗೊಂಡುನಿರವಿಪುದೆನಲು ||೧೭೩||

ನೀಮುನ್ನಹಡೆದಮಗನುಬಲಯುತನಾಗಿ | ಭೂವಿಶ್ವರಕೌರವನ ||
ಪ್ರೇಮದಿನೊಡನುಂಡೊಡನುಟ್ಟುಬೆಳೆದನಿ | ಸ್ಸೀಮನವನುಕರ್ಣನೆನಲು ||೧೭೪||

ಆವಮಾತನವಧಾರಿಸಿಹರ್ಷಿತೆಯಾಗಿ | ಯಾವಮುನಿಪನಬೀಳ್ಕೊಂಡು ||
ಸಾಮಜಪುರಕೆಯ್ದಿವಿದುರನಮನೆಗೆಸು | ಪ್ರೇಮದಿನಾಕೊಂತಿಬಂದು ||೧೭೫||

ಸಾನಂದದೊಳಿರಲೊಂದುದಿನದೊಳಾ | ಕಾನೀನನಬಳಿಗೆಯ್ದೆ ||
ಘೂಸುತನವನಿವಿರೆಳ್ದವಳಡಿಗೆಸು | ವ್ಯಾಸದಿನವಸತನಾದ ||೧೭೬||

ಒಸೆದುನ್ನತಾಸನವಿತ್ತುಮುಗಿದುಕೈಯ | ಬೆಸನಾವುದುಪೇಳಿಮೆನಲು ||
ಹೊಸಹರೆಯದೊಳಾನುಮುಂಪೆತ್ತಚೊಚ್ಚಲ | ಸಿಸುನಿನ್ನನಾಜಗುನೆಯೊಳು ||

ಬಿಟ್ಟೆನಂತದರಿಂನಿನ್ನನೋಡುವೆನೆಂಬ | ಕಟ್ಟುಮ್ಮಳದಿಬಂದೆನೆನಲು ||
ದಿಟ್ಟನದಕ್ಕಾಜ್ವಾಲಾಮಾಲಿನಿ | ಕೊಟ್ಟವುರಿಯವಸ್ತ್ರವನು ||೧೭೮||

ಭರದಿಂದಹೊದಿಯಿಸಲೊಡನಾಪೀತಾಂ | ಬರವೆಳೆದಳಿರಂತಾಗೆ ||
ಸುರುಚಿರಪುಷ್ಪತಮಾಲಲತಿಕೆಯೆನೆ | ಸುದತಿಕಣ್ಗೊಪ್ಪವಡೆದಳು ||೧೭೯||

ಇರೆಕಂಡಿಸುತನಾಕೊಂತಿದೇವಿಯ | ಚರಣಕೆರಗಿಕೈಮುಗಿಯೆ ||
ತೊರೆಯಲುಮೊಲೆಹಾಲ್ಜಂಬುದಿಟ್ಟಿಗಳೊಳು | ಸುರಿಯಲುಬಿಗಿಯಪ್ಪಿದಳು ||

ಈತೆರದಿಂಬಿಗಿಯಪ್ಪಿಬಳಿಕತನು | ಜಾತನೊಳಿಂತಾಡಿದಳು ||
ಪ್ರೀತಿಯಿಂದೋಲೈಸಿಕೊಂಡಿರುನಿನ್ನನು | ಜಾತರಕ್ಕೈಯೆಂದೆನಲು ||೧೮೧||

ಜನನಿಬಿನ್ನಪಕೌರವೇಶನಬಿಡುವುದು | ಕನಸುಮನಸಿನೊಳಗಿಲ್ಲ ||
ಆನಿತರಿಂದಾನುಡಿಬೇಡೆಂದಾಡಿದ | ತನಯಗಿಂತೆಂದಾಡಿದಳು ||೧೮೨||

ತನುಜನೀಪಡೆದದಿವ್ಯಾಸ್ತ್ರಂಗಳನಿ | ನ್ನನುಜರಮೇಲೆಸಬೇಡ ||
ಎನಲಂತೇಗೆಯ್ವೆನೆನ್ನ ಕಥನವನೀ | ಮಿಸಿಸದರೊಳಗಾಡಬೇಡ ||೧೮೩||

ಎಂದುಚಿತ್ರಾಂಬರಮಣಿಭೂಷಣತತಿ | ಯಿಂದಪೂಜಿಸಿವಿನಮಿಸಿದ ||
ಕಂದನಬೀಳ್ಕೊಂಡಾದ್ವಾರಾವತಿ | ಗಂದೆಯ್ದಿಸುಖಮಿರಲಿತ್ತ ||೧೮೪||

ಅಂತಕಸೂನುವಂತತ್ತಾಪಸಾರ್ಕಾ | ಲಾಂತರವೊಳಗಲ್ಲಿಂದ ||
ಸಂತಸದಿಂಪೊರಮಟ್ಟಾಲಕ್ಷ್ಮೀ | ಕಾಂತನಪುರಕೆಯ್ತಂದು ||೧೮೫||

ಒಡನೆಯ್ತಂದವಿರಾಟಮಹೀಶನ | ಕಡುನೇಹದಿಂಬೀಳ್ಕೊಟ್ಟು ||
ನಡೆತಪ್ಪಾಪಾಂಡವರವಾರತೆಗೇಳಿ | ನಡಗರದಿಂದಕೇಶವನು ||೧೮೬||

ಪೊಳಲೊಳಗಷ್ಟಶೋಭೆಯನುಮಾಡಿಸಿಹರಿ | ಕುಲದರಸುಗಳೆಲ್ಲಸಹಿತ ||
ತಳುವದಿದಿರುಬಂದುಹರ್ಷದಿನಾಪುರ | ದೊಳಹೊಗಿಸಿದನುಪಾಂಡವರ ||೧೮೭||

ಇಂತುಬಂದಾಕೌಂತೇಯರುಘನಸ್ನೈಕ | ಕಾಂತಗನೇಮೀಶ್ವರಗೆ ||
ಸಂತಸದಿಂದನಮಿಸಿಯವರೊಳುನಿ | ಶ್ಚಿಂತದಿಸುಖಮಿರ್ದರಲ್ಲಿ ||೧೮೮||

ಭೂಜನವಿನುತಗುಣಾಲಂಕೃತಸುರ | ಭೂಜೋಪಮದಾನಯುತರು ||
ರಾಜೀವಸಖಸಮತೇಜರೆಸೆದರಾ | ರಾಜಾನ್ವಯಶೇಖರರು ||೧೮೯||

ಇದುಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗೊದವಿದಿಪ್ಪತ್ತೈದಾಶ್ವಾಸ ||೧೯೦||

## ಇಪ್ಪತ್ತೈದನೆಯ ಸಂಧಿ ಸಂಪೂರ್ಣಂ

# ೨೬. ಜರಾಸಂಧನು ಕೃಷ್ಣನಮೇಲೆ ದಂಡೆತ್ತಿ ನಡೆದ ಸಂಧಿ



ಉರ್ವಿಕೊರ್ಪಿದಸರ್ವಕರ್ವುರಭಟರಗರ್ವ | ಪರ್ವತಕಶನಿಯೆನಿಸಿದ ||
ಶರ್ವಗೀರ್ವಾಣವಂದಿತನೇಮಿಜಿನಪಗೆ | ಸರ್ವಾಂಗವಿನಮಿತನಹೆನು ||೧||

ನಾರಾಯಣನಾಪಾಂಡವರೊಡಗೂಡಿ | ಭೂರಿಭೋಗಾನ್ವಿತನಾಗಿ ||
ಧಾರಿಣಿಯನುಪರಿಪಾಲಿಸುತಿರಲಾ | ದ್ವಾರಾವತಿಗೊಂದುದಿವಸ ||೨||

ಹಡಗಿನಹರದನೋರ್ವಸುತತ್ಪುರಕಾ | ಹಡಗುಬಂದುಸೇರಲಾಗ ||
ಹಡಗರದಿಂದಾತಡಿಯೊಳುಬೀಡನು | ಬಿಡಿಸಿಪೊಳಲಪೊಕ್ಕನಾಗ ||೩||

ಅನಿಮಿಷಪತಿಯಮರಾವತಿಗೆಣೆಯಾಗಿ | ಎನಿಪಾದ್ವಾರಾವತಿಯ ||
ಮನಗೊಂಡುನಡೆನೋಡುತಿಂತಪ್ಪಪುರವಿಾ | ಮನುಜಲೋಕದೊಳಿಲ್ಲವೆಂದು ||೪||

ಪಿರಿದುಕೊಂಡಾಡುತಬಂದುಗೊಂದಣಗೊಂಡು | ಧರಣೀಶಗೃಹದಬಾಗಿಲೊಳು ||
ಅರಸಿನಸಮಯಗಾಣದೆನಿಂದಪರಭೂ | ವರರನೀಕ್ಷಿಸುತೊಳಹೊಕ್ಕು ||೫||

ಅಪ್ರತಿಹಾರಪುರಸ್ಸರನಾವೈ | ಶ್ಯಪ್ರಭುತಾನಡೆತಂದು ||
ಅಪ್ರತಿವಡೆದಾಸ್ಥಾನಕ್ಕೆಹರಿವಂ | ಶಪ್ರಭುವಿಷ್ಣುವಕಂಡು ||೬||

ತರುಣತರಣಿಮಂಡಲದಮರೀಚಿಯಾ | ವರಿಸಿದಂಜನಗಿರಿಯಂತೆ ||
ಅರುಣರತ್ನಾಂಚಿತಭೂಷಣಪೀತಾಂ | ಬರನಿರೆಭಯಭಕ್ತಿಯಿಂದ ||೭||

ವಿನಮಿತನಾಗಿಯಪೂರ್ವವಸ್ತುವನುತಂ | ದನುನಯದಿಂಕಾಣ್ಕೆಯಿಾಯೆ ||
ವಿನಯದೊಳುಚಿತಾಸನದೊಳಿರಿಸಿಮತ್ತೆ | ಸನುಮಾನದಿಂಮಾತನಾಡಿ ||೮||

ಪ್ರಿಯದಿಂತರಿಸಿಯತ್ಯುತ್ತಮರತ್ನಸಂ | ಚಯಮನನರ್ಘ್ಯವೆಂದೆನಿಸಿ ||
ನಯನಾನಂದಮನೀವವನಿತ್ತನು | ನಯದಿಂಬೀಳ್ಕೊಡಲವನು ||೯||

ಆನಗರಿಯೊಳುಕೆಲವುದಿನಮಿರ್ದುಮ | ನೋನುರಾಗದಿಪೊರಮಟ್ಟು ||
ಮಾನಿತಪಾದಮಾಗಧನಪುರಕೆವೈಶ್ಯ | ತಾನತಿವಿಭವದಿಂಬಂದು ||೧೦||

ಆರಾಜಗೃಹದಶೋಭೆಯನೀಕ್ಷಿಸುತಮ | ತ್ತಾರಾಜಚಕ್ರೇಶ್ವರನ ||
ಆರಾಜಭವನದಮುಂದೆಸಂದಣಿಗೊಂ | ಡಾರಾಜನಿವಹವಕಂಡು ||೧೧||

ಕಡುಪಿರಿದಚ್ಚರಿವಡೆದಾವೈಶ್ಯನು | ಪಡಿಯರರುಗಳಮುಖದೊಳು ||
ಸಡಗರದಿಂದಾಚಕ್ರೇಶನೋಲಗ | ದೆಡೆಗೆಯ್ದಿಸಾಷ್ಟಾಂಗವೆರಗಿ ||೧೨||

ಮುನ್ನಮುರಾರಿತನಗೆವ್ರಡುಗೊರೆಯಿತ್ತ | ರನ್ನವಕಾಣ್ಕೆಯನೀಯೆ ||
ಉನ್ನತವತಿಯುವನೋಡಿಯಚ್ಚರಿವಟ್ಟು | ತನ್ನತಲೆಯತೂಗಿದನು ||೧೩||

ಈನಯವಿಾಗುಣವಿಾಜಾತಿಯಿಾಕಾಂತಿ | ಯಾನಾಕದೊಳಗುದಯಿಸಿದ ||
ಮಾನಿತಮಯವುಪ್ಪಮಾಣಿಕ್ಯಕಲ್ಲದೆ | ಯಿನ್ನೇಂದವಕುದಯಿಸದು ||೧೪||

ಅದರಿಂದೀರತ್ನಮಾವೆಡೆಯೊಳುನಿನ | ಗೊದವಿದವೆಂದುವೈಶ್ಯನನು ||
ಚದುರನವನುನಯದಿಂ ಕೇಳಲಾಭ್ರಾಂತ | ಹೃದಯನಿಂತೆಂದಾಡಿದನು ||೧೫||

ನೀರನಿಧಿಯಮಧ್ಯದೊಳುರಂಜಿಸುವಾ | ದ್ವಾರವತಿಯೊಳುನೇಮೀಶ ||
ವಾರಿಧಿವಿಜಯಬಲಾಚ್ಯುತವಸುದೇವ | ಮಾರಕುಮಾರರೆಂಬವರು ||೧೬||

ಶೂರರುಶುಭಮತಿಗಳುಶುಚಿಗಳುಗಂ | ಭೀರಪುತ್ರಮರೂಪಯುತರು ||
ಧೀರೋದಾತ್ತರವರುನನಗೊಲಿದಿತ್ತ | ಚಾರುಮಣಿಗಳುಚಕ್ರೇಶಾ ||೧೭||

ಎಂದುನುಡಿಯೆಬೂದಿಮುರಸಿದಕೆಂಡವ | ತಂದುಹುಲ್ಲಿಂದಹತ್ತಿಸಿದ ||
ಅಂದದಿನರಸನಮನದಮುನಿಸುವೈಶ್ಯ | ನಿಂದಮೊಗದೊಳುದಯಿಸಿತು ||೧೮||

ಮೊದಲುತಾವೆನಗದಿರದೆದ್ರೋಹಿಗಳಾಗಿ | ಬೆದರಿಯಾದವರುಕೊಂಡದೊಳು ||
ಹುದುಗಿಬೀಳ್ದಿವರೆಂದಾಡಿದವರನುಡಿ | ಯದುಬಕ್ಕಬಯಲಾಯಿತ್ಯಾಗ ||೧೯||

ಎಂದುತುಂಬುರಗೊಳ್ಳಿಯಂದದಿಧಿಟಿಛಿಟಿ | ಲೆಂದುಕಣ್ಗಳಸೋಗೆಯೊಳು ||
ಒಂದಿಪಕೆಂಪಿನಿಂದಾಚಕ್ರಪತಿಯಿಂ | ತೆಂದುಪಿಟ್ಟೆಯನಾಡಿದನು ||೨೦||

ಎನಗಿದಿರಾಗಲಣ್ಮದೆತಾವುಹೊಕ್ಕಾ | ವನಧಿಯೆಲ್ಲವನುತುಳುಂಕಿ ||
ಇನಿಸುತಡೆಯದೆಲ್ಲರತಲೆಗೊಳ್ಳದೊ | ಡೆನಗಿವುವಿಾಸೆಯಲ್ಲೆ ಸುತ ||೨೧||

ಹರವಗೆಹಿರಿದುಡುಗೊರೆಯಿತ್ತುಬೀಳ್ಕೊಟ್ಟು | ಕರೆಸಿಸೇನಾನಾಯಕನ ||
ಉರುತರಮಪ್ಪಬಲವನೆಲ್ಲವನುಸಂ | ವರಿಸಹೇಳಲುಬಳಿಕಿತ್ತ ||೨೨||

ದ್ವಾರಾವತಿನಗರೀವರದೊಳುಬಲ | ನಾರಾಯಣರುಧರ್ಮಸೂನು ||
ಮಾರುತಿಪಾರ್ಥನಕುಲಸಹದೇವರೊ | ಳಾರ್ಯೈದುಮಂತಣಮಿರ್ದು ||೨೩||

ಜೂದಿಂದವಂಚಿಸಿನೀವಾಳುತಿರ್ದಾ | ಮೇದಿನಿಯನುಕೌರವನು ||
ಆದರಿಸದೆಕೊಂಡುನಿಮ್ಮಹೃದಯಕೆವಿ | ಷಾದವತಂದನೆಂದೆನಲು ||೨೪||

ಅಂತಕನಣುಗನಿಂತೆಂದನುಸೋದರ | ರೆಂತಾನುಗ್ರೈದಪ್ಪೊಲ್ಲವೆಯು ||
ಅಂತರಂಗಕೆತಹುದನುಚಿತವೆನಲುವು | ರಾಂತಕನಿಂತುನುಡಿದನು ||೨೫||

ಜನನುತಜವನ ತನುಜನಿನ್ನ ಸತ್ಯಕೆ | ಮನುಮುನಿಗಳುಪಾಸಟಿಯೇ ||
ಎನುತವುತ್ತಿಂತೆಂದನಿನ್ನೊಮ್ಮೆಕೌರವ | ಗನುನಯದಿಂಪಾಂಡವರೊಳು ||೨೬||

ಮುನಿಸಬೇಡವರರಾಜ್ಯವನವರಿಗೆಕೊಟ್ಟು | ವಿನಯವಿಕೂಟಕೊಂಡಿಹುದು ||
ಅನುಮತವೊಂದನುಚರರನಟ್ಟುವೆನೆಂ | ದೆನಲಾಧರ್ಮನಂದನನು ||೨೭||

ಅತಿಮೂರ್ಖನಾಕುರುಪತಿಯುತಿಳಿಹುಬಲ್ಲ | ಚತುರನನಿಃತ್ರಿವೃದ್ಧನನು ||
ಮತಿಯುತನಪ್ಪಮಾನಸನನಟ್ಟುವುದನು | ಮತವೆಂಬಮಾತನುಕೇಳಿ ||೨೮||

ಅಮರರಿಪುತನಗತಿಸಜ್ಜನನು | ದ್ದಾಮಗುಣಾನ್ವಿತನೆನಿಪ ||
ಪ್ರೇಮದಿಕೃಷ್ಣನೆಂಬವನಕರೆದುನೀನು | ಸಾಮಮಾಡದೆಪೋಗೆಂದು ||೨೯||

ಕಳುಹಿದೊಡವನುಕರೇಣುನಗರಗೈದಿ | ತುಳಿಲುಗೆಯ್ದಾಕುರುಪತಿಗೆ ||
ಬಳಿಕತನ್ನುಚಿತಾಸನದೊಳುಕುಳ್ಳಿರ | ಲಲಘುವಿನಯವಚನದೊಳು ||೩೦||

ಯದುಕುಲದವನೀಪಾಲಕರೆಲ್ಲರು | ಪದುಳವಿರ್ದಪರೇಯೆನಲು ||
ಮುದದಿಂದಿಂತುನುಡಿದನೆಲೆನೃಪತಿಯೆ | ಮ್ಮಧಟರುಸುಖವಿರ್ದಪರು ||೩೧||

ಎಂದುಕೈಮುಗಿದುಮುಂದಣಕಾರ್ಯವಾಗಿಮು | ಕುಂದನೃಪತಿದೇವರೆಡೆಗೆ ||
ಇಂದೆನ್ನಕಳುಹಿದನೆನಲಾಕಜ್ಜವೇ | ನೆಂದುಕೇಳಿದೊಡಿಂತುನುಡಿದ ||೩೨||

ಜೂದಿನಮುಖದೊಳುನೀವಂದುಗೆಲಿದಾ | ಮೇದಿನಿಯನುಭೂಪನಿನ್ನ ||
ಸೋದರರನುಕರೆಯಿಸಿಕೊಂಡುಬಳಿಕ | ತ್ಯಾದರದಿಂದೀವುದುಚಿತ ||೩೩||

ಅವರುವೊದಲುಜೂಜಿನೊಳುನೇಮಿಸಿಕೊಂ | ಡವಧಿಯಪದಿಮೂರುವರುಷ ||
ಸವೆದುದೆನಲುಕೇಳಿಯಿಂತೆಂದನಾಭೂ | ಧವನಂದಾಕೃಷ್ಣನೊಳಗೆ ||೩೪||

ದಾಯಾದ್ಯರವರೀರ್ವರುಸಮವೆಂಬಾ | ನ್ಯಾಯವಪರಿಪಟ್ಟುನೀವು ||
ವೈಯಾರದಿಂದವರವರಕೂಡಿಕೊಂಡ | ನ್ಯಾಯವನಾರುಮೆಚ್ಚುವರು ||೩೫||

ಹಿಂದೆಯುಪಾಯದಿಕೊಂಡಧರೆಯನೀ | ಎಂದುಬಿಡಲುಹೇಳಬಹುದೇ ||
ಎಂದುನುಡಿಯೆನೀವೀರ್ವರುತತ್ಸಮ | ವೆಂದುಕಾಣ್ಬರುನಮ್ಮನೃಪರು ||೩೬||

ಕಟ್ಟುಬಂದೋರಗೆಯರಸುಗಳನುಮುಂ | ದಿಟ್ಟುಕೊಂಡಿಹುದುಭೂತಳದ ||
ಕಟ್ಟರಸುಗಳನೀತಿಯನಲ್ಲವೆಂದುಬಾ | ಯ್ಬಿಟ್ಟಾಡುವರೆನೃಪತಿಲಕ ||೩೭||

ಚತುರಕ್ಷೆಯಿಂಕೊಂಡರಾಜ್ಯಮನಾಪಾಂಡು | ಸುತರ್ಗೀಯೆನೆಂಬುದುನಿನಗೆ ||
ಮತವಲ್ಲವೀಪೂತನಾರವಧರಿಪರು | ಕ್ಷಿತಿಹೊಂದಂತವರಿಂದ ||೩೮||

ಲೋಕೈಕವೀರರುತ್ತಮಪುಣ್ಯನಿಧಿಗಳ | ನೇಕಚಿತ್ತದಿಕೂಡೆನಿನ್ನ ||
ಆಕಡೆಗಾಲದಮೃಡನೋಡಬಲ್ಲನೆ | ಯಾಕಡೆಗಣ್ಣನುತೆರೆದು ||೩೯||

ಎಸಲೊಂದಸವರಪುಣ್ಯಾಂಗನೆಪರ್ಣೀಳಿಯು | ನಿನಿಸುಸೀಕೊಂಡುಕೊಸೆವ್ರದು ||
ಅನುಸಯುಮೋಯೆಸಲಿಂತೆಂಪನರಾನ | ಮುನೆಗಿಟ್ಟವರಪಾಯಿಸಿತೇ ||೪೦||

ಅದಕ್ಕೊಳುಳಿದುಬಂದುಮರ್ದಿಸಿಯುಸುರರ | ಸುದತೀರತ್ನಂಗಳನು ||
ವಿದಿತಮುಪಾಯಯುಧಗಳನೋವನೆಗಳಿ | ಸಿದುದನೆಲ್ಲಸನೀಮರಿಯಿರೇ ||೪೧||

ಲೆಕ್ಕವಿಲ್ಲದನಿಮ್ಮವಾಹಿನಿಯೆಲ್ಲವ | ತೊಕ್ಕಸ್ವಯಂವರದೊಳಗೆ ||
ಒಕ್ಕಲಿಕ್ಕಿಕೊಂದುದನೀಮರಿಯಿರೆ | ಯೊಕ್ಕತೂಳದಭಟರವರು ||೪೨||

ಈಸಾಹಸಿಕೃಪನೀಕಲಿರವಿಸುತ | ನೀಸೂರನಶ್ವತ್ಥಾಮ ||
ಈಸುಭಟದ್ರೋಣನೀನೀರಸೈಂಧವ | ನೀಸೆವರೋದ್ಧತಶಕುನಿ ||೪೩||

ಈಬಲವಂತಸಂಸಪ್ತಕರಾನಿ | ವ್ಯಾಮಬಲಗೈಯುವಿಕರ್ಣ ||
ಈಬಂಟನಮರಗಂಗಾತನುಜಾತಮ | ತ್ರೀಬಾಹುಬಲಯುತಶಲ್ಯ ||೪೪||

ಧರೆಹೊರದಂತಪ್ಪಿಯರಥಿಕರು | ಮರವಿಟ್ಟಪೊಲುನೋಡುತಿರಲು ||
ಅರಸನಿನ್ನನುಗಾಂಧರ್ವರಿಂದನೆತಂದ | ನರನುನಾಡರಿಕೆಯುಭಟನೇ ||೪೫||

ದ್ವೀಪಾಂತರಕೆಯಿಲ್ಲಿಂಪೋಗಿಯಾರಥ | ನೂಪುರಚಕ್ರವಾಳವನು ||
ವ್ಯಾಪಿಸಿದಾವಜ್ರಬಿಪಂರವನುಕೋಪಾ | ಟೋಪದಿಂದನುಗ್ಗುವೊಯ್ದು ||೪೬||

ಬೆದರಿಸಿಕಾವಲದೇವತೆಗಳತನ | ಗಿದಿರಾದಾಪ್ರಾರಭಟರ ||
ಸದೆದುತನ್ನಾನಾದುನಿಯುನಿಂದೆತಂ | ದಧಟಭೀಮಗೆಸಪಾನಾರು ||೪೭||

ತುರುಪಹಿಡಿವಸಮಯದೊಳುಧರಾತಳ | ಹೊರವಂತಾವಿನ್ಮಬಲವ ||
ಬರಿಕೆಯುದ್ಧಬೀರಿತೋಡಿಸಿತಿಲ್ಲವೆನಾ | ಡಾಕೆಯೊಳಾವಿಕ್ರಮಿಗಳು ||೪೮||

ಇಂತಪ್ಪವೀರರುನಿನ್ನೊಳಗಿರವಿಲ್ಲ | ದೆಂತುಕೂಡುವರುಭೂಪಾಲ ||
ಪಿಂತೆನೀಕೊಂಡಧರೆಯುಪಾಲಿಪುದೆನ | ಲಿಂತೆಂದನಾಸುಯೋಧನನು ||೪೯||

ಎಲೆಕೃಷ್ಣನೀನುಕೊಂಡಾಡಿದೆಯುವರನೊ | ರ್ವಳನದರಿನಾಹವದೊಳು ||
ಕಲಿಪವಮಾಡಿಗೆಲಿದುಭೂತಳವನು | ಬಲುಪರಿಯಿಂಕೊಳ್ಳ ಹೇಳು ||೫೦||

ಹರಿಹರವಿಧಿಗಳಲ್ಲದೆನನ್ನೊಳುಕಾದಿ | ತರಹರಿಸುವಭಟರುಂಟೇ ||
ನರಲೋಕದೊಳಗೆನುತವೆಬಿರುನುಡಿದಾ | ಕುರುಪತಿಯವನಬೀಳ್ಕೊಡಲು ||೫೧||

ನೀವೀಗೆಸಗಿದಕಾರ್ಯದಫಲವನು | ನೀವೇ ಸೆರೆಯುಂಬಿರೆಂದು ||
ಓವದೆನುಡಿದೆಳ್ದು ಪೊರಮಟ್ಟನವನು | ತ್ತಾವಾರಣಾಪುರವರವ ||೫೨||

ಕತಿಪಯದಿನದಿನಾದ್ವಾರಾವತಿಗೆ ಬಂ | ದತಿಬಲಬಲಕೇಶವರ ||
ಸುತಗುಣಿಧರ್ಮಜನನುಕಂಡಾಕುರು | ಪತಿನುಡಿದುದನುಸುರಿದನು ||೫೩||

ಆನುಡಿಗೇಳಿಬಲಾಚ್ಯುತರಿಂತೆಂದ | ರೀನಿಮ್ಮಕಾರ್ಯಸಂಗರದ ||
ಆನೆಲದೊಳಗಲ್ಲದಾಗದೆನಲುಧರ್ಮ | ಸೂನುವಿಂತೆಂದಾಡಿದನು ||೫೪||

ಕಾದಿದೊಡಲ್ಲದೆಕೊಡೆನೆಂಬುದವನದು | ಸೋದರರನುಕಾದಿಕೊಂದು ||
ಮೇದಿನಿಯನುಧರ್ಮಜನೊಯ್ದನೆಂಬೊಂ | ದಾದುರ್ಜನವನೆಂತುಕಳೆವೆ ||೫೫||

ಎನೆಭೀಮಪಾರ್ಥನಕುಲಸಹದೇವರು | ಕನಲಿಯಿಂತೆಂದಾಡಿದರು ||
ಮನುನಿಭಚರಿತನೀನಿಂತಿರುನಾವಾ | ಘನದುರ್ಯಶವತಾಳುವೆವು ||೫೬||

ಎಲೆಭೂಪನಿನ್ನುತ್ತಮಪುಷ್ಪಸತ್ವವ | ಸಲಿಸಲುನಾವಿಂದುವರ ||
ಸರೆಸೈರಿಸಿದೆವಲ್ಲದೆಸೈರಿಸುವೆವೇ | ಕಲಹಕೆಕೌರವನೊಡನೆ ||೫೭||

ಕುಟಿಲೋಪಾಯದಿಕೊಲಲಾವುದಿಲ್ಲವು | ಘಟವುಪ್ಪಾಚಿರಂಗದೊಳು ||
ದಿಟವಾಗಿನಮ್ಮಗೆಲುವುದಕುಂದೇಯು | ಕ್ಕಟಕಡುಕಪಟಿಕೌರವಗೆ ||೫೮||

ಎಂದುನುಡಿವುತಿರಲಾಹರಿಯೊಡನಿಂ | ತೆಂದನುಬಲಭದ್ರನಿವರ ||
ಅಂದದಿನೆಮಗಾಮಗಧಾಧೀಶಗೆಂ | ದೆಂದಿಗುಳಿಯದುಸಂಗ್ರಾಮ ||೫೯||

ಎನುತಸಂಗ್ರಾಮದಸಮಕಟ್ಟನಾಭೂ | ವನಿತೇಶನೊದವಿಸುತಿರಲು ||
ಅನಿತರೊಳತ್ತಜರಾಸಂಧಚಕ್ರಿಯು | ಮುನಿಸದಳೆದುಭರದಿಂದ ||೬೦||

ರಣಸನ್ನಾಹನಿಸ್ಸಾಳವಹೊಯ್ಸಲು | ಕ್ಷಣದೊಳಗಾಬಲುಸೇನೆ ||
ಗಣನಾತೀತವೆನಲುನೆರೆಯಲುತಲೆ | ಮಣಿದುದಿಳೆಯುಹೊತ್ತಫಣಿಯು ||೬೧||

ಅಂತು ನೆರೆದಸೇನೆಯಕಂಡಾಭೂ | ಕಾಂತನಾಯಾದವರೊಡನೆ ||
ಅಂತವಿಲ್ಲದಕೋಪವನಾಡಿಪೊರಮಡ | ಲಿಂತೆಂದನೋರ್ವಸಚಿವನು ||೬೨||

ಎಲೆನೃಪನಿನಗಮ್ಮದೆಯಾದವರೆಯ್ದಿ | ಜಲರಾಶಿಯೊಳುಮನೆಗಟ್ಟಿ ||
ತಲೆಯಮರೆಸಿಕೊಂಡಿರ್ದವರೊಳುನೀನು | ಸೆಲೆವಾಡುವರೆಕೋಪವನು ||೬೩||

ಎನಲಾವಾಚಸ್ಪತಿಯೆಂಬಸಚಿವಗೆ | ಜನನಾಥನಿಂತುನುಡಿದನು ||
ವನನಿಧಿಯುನಗರ್ಗಾವತೆರದಿತೆರವುಗೊಟ್ಟು | ದೆನಲವನಿಂತುನುಡಿದನು ||೬೪||

ದೇವೇಂದ್ರನವರೆಡೆಗತಿಕರುಣದಿಬಂ | ದಾವಾರಾಶಿಯನೀರಬಗಿದು ||
ತೀವಿದರಚನೆಯಿಂದವೆಸವುದಾದ್ವಾ | ರಾವತಿಯೆಂಬಪಟ್ಟಣವ ||೬೫||

ಅನುರಾಗದಿಂದಲ್ಲಿಯವರನಿರಿಸಿಪೋದ | ನೆನೆಸುರಪತಿಯಾಪುರವ ||
ಅನುಗೆಯ್ದುಕೊಡುವುದಕವರಮಹಿಮೆಯೇ | ನೆನೆಚಕ್ರಿಗವನಿಂತುನುಡಿದ ||೬೬||

ನಳಿನೋದರನಪುಣ್ಯವನೇನನೆಂಬೆನಿ | ನ್ನಳಿಯನವನನೋದರರು ||
ಎಳೆಯರನರುವರಕೊಂದುಮತ್ತವನನೆ | ಗೊಳಲೆಂದುದೇವಕಿಗಳನು ||೬೭||

ಕಳುಹಲವರತಾನುಮೊಲೆಯುಂಬಕಾಲದಿ | ಬೆಳೆಪನ್ನವರಹತವಮಾಡಿ ||
ಒಳಿಕೇಳುದಿನಗೋವರ್ಧನಗಿರಿಯನಂ | ಗುಲಿಯೊಂದರೊಳುಬಿಡದೆತ್ತಿ ||೬೮||

ಕಾಳಾಹಿಯುಕೊಂದುಕನಲವತಂದಾ | ವ್ಯಾಳಶಯ್ಯೆಯನಿರದೇರಿ ||
ಕಾಳದಂಡನನೇಳಿಪಬಿಲ್ಲನೇರಿಸಿ | ಮೇಲೂದಿಪಾಂಚಜನ್ಯವನು ||೬೯||

ಮರಣಮನೆಯ್ದಿಸಿಮಲ್ಲರಕಂಸನ | ಹರಣಾಪಹಾರವಮಾಡಿ ||
ಸುರಪತಿನಿನಗಂಜಿಪೋಪಾಗನಿನ್ನುರು | ತರವಾಹಿನಿಬೆನ್ನೊಳಿಯ್ದ ||೭೦||

ಅವರಮರ್ತ್ಯದೇವತೆಯಗ್ನಿಕುಂಡದೊ | ಳಪರಳಿದಂದವಮಾಡಿ ||
ಅವನಿಪನಿನ್ನವರಗೆತೋರಿಯಲ್ಲಿಂ | ದವರಕಳುಹಿಕೊಡಲಾಗ ||೭೧||

ಪುರಹೂತಬಂದುಪುರವಮಾಡಿಯುವರನ | ಲ್ಲಿರಿಸಿದನಬ್ಧಿವಿಜಯನ ||
ವರಗರ್ಭದೊಳುತ್ರಿಭುವನಪತಿನೇಮಾ | ಶ್ವರನುದಯಿಪಕಾರಣದಿ ||೭೨||

ಅದರೊಳಚ್ಯುತನಿದರ್ಪಶಿಶುಪಾಲನಕೊಂದು | ವಿದಿತವಿಜಯಗಿರಿಗೆಯ್ದಿ ||
ಅಧಟಜಾಂಬವನಕೊಂದವನತನೂಭವೆ | ಮುದವತಿಜಂಭಾವತಿಯನು ||೭೩||

ಮದುವೆಯನಿಂದೆರಡನೆಯವಿಜಯಗೆಪೋಗಿ | ಪದುಳದಿಶಂಖಸ್ವರದಿ ||
ಅದುರಿಸಿಯುವನಿಯನಾಶಂಖಚಕ್ರಿಯ | ಕದನಕಿಚ್ಛೆಯಮಾಡಿನಿಂದ ||೭೪||

ಪುರವೈರಿಕೇಳುಭೂಪಾಲಮತ್ತಾತನ | ವರನಂದನನೀದಿನದ ||
ಅರಲಂಬನತಿವಿಕ್ರಮನುಸಮುಪೇತಬಂ | ಧುರತರಚರಮಶರೀರಿ ||೭೫||

ವನಧಿವಿಜಯರಾಜೇಂದ್ರಚಂದ್ರನನಿಜ | ತನುಜಾತನೇಮಿಕುಮಾರ ||
ವನಿತೆರೋಹಿಣಿಯಮದುವೆಯೊಳ್ಕಲ್ಲರಗೆಲ್ದ | ವಿನುತವಿಕ್ರಮಿವಸುದೇವ ||೭೬||

ಬಲದೇವನೆಂಬವನತಿಬಲಯುತನವ | ಗಳೆಯೊಳಗಾರೆಣೆಯಿಲ್ಲ ||
ಕಲಿಗಳುಪಾಂಡರಾಹರಿಯನುಸೇರಿ | ನೆಲಸಿದರೆಲೆನರನಾಥಾ ||೭೭||

ಇಂತುಸಹಾಯಸಂಪತ್ತಿಯಿದ್ದಾಶ್ರೀ | ಕಾಂತನುನಿನಗಿದಿರಾಗಿ ||
ಎಂತಾನುಸಿಲಲಮ್ಮದೆವನಧಿಯಹೊಕ್ಕ | ಚಿಂತೆಮಿಗಲುಬಾಳುತಹನೆ ||೭೮||

ಎಂದಾಸಚಿವನವಾತುಗೇಳದೆಕೋಪ | ದಿಂದಗದ್ದುಗೆಪ್ರೊಯ್ದೆದ್ದು ||
ಮುಂದಿರ್ದಗಂಧಸಿಂಧುರಮಸ್ತಕವೇರಿ | ಯಂದುಬಾಗಿಲಿಗೆಯ್ದಿನಿಲಲು ||೭೯||

ಚೋಳಕೇರಳಕರ್ಣಾಟಕಮಹಾರಾಷ್ಟ್ರ | ಮಾಳವಮಗಧಕನ್ನೋಜಿ ||
ಗೌಳಗುಜ್ಜರಮರಹಠಸೌರಾಷ್ಟ್ರಸೇ | ಪಾಳಾದಿಯನೃಪವರರು ||೮೦||

ದೋರ್ವಲಗರ್ವಪರ್ವತದುರ್ಗಾರೂಢ | ರೋರೋರ್ವರೆಳ್ದುಕೈಮುಗಿದು ||
ಪರ್ವದಕೋಪಾವೇಶದಿನಾಮಗ | ಧೋರ್ವೀಶಗಿಂತಾಡಿದರು ||೮೧||

ದೊರೆಯೆದ್ದುಹಗರಣವಾಡಿದಂದದಿನೀ | ನಿರವೀಹುಲುಕಜ್ಜಕಾಗಿ ||
ತರಲುಮನವನಾಲೋಕನಗದೆಭೂ | ವರಕೇಳದುಕಾರಣದಿ ||೮೨||

ಕೊಟ್ಟೆಯಾದೊಡೆನನಗೀಬೆಸನನುದಾಳಿ | ಯಿಟ್ಟುತದ್ದ್ವಾರಾವತಿಯ ||
ಸುಟ್ಟುಸೂರೆಯಹೊಯ್ದುಹುಲಿಕರಡಿಗೆಮನೆ | ಗಟ್ಟಿಸದೇಸುಮ್ಮನಿಹೆನೆ ||೮೩||

ಭೂಮಿಪಾಲಕೇಳೆಮಗೀಬೆಸನನುಕೊಟ್ಟೊ | ಡೀವ್ಯೆಯೊಳುದಾಳಿಯಿಟ್ಟು ||
ಆಮಾಧವನಪಟ್ಟಣವನುನಿರ್ಧೂಮ | ಧಾಮಮಪ್ಪಂತುರುಹುವೆವು ||೮೪||

ಏನಿವನತಿವಾಚಾಲನೆನಲುಬೇಡ | ಭೂನಾಥನೀಮೆಚ್ಚುವಂತೆ ||
ಆನಾರಾಯಣನೂರಸುದಂದಹ್ಯ | ಮಾನಮಪ್ಪಂತುಸುಡುವೆವು ||೮೫||

ಬೇಗಬೆಸನನಿತ್ತೊಡೆಬಿಟ್ಟಸುರಿಯೊ | ಳ್ಪೋಗಿವಿಷ್ಣುವಿನವೀರವನು ||
ಲಾಗುಗೆಡಿಸದಿರ್ದೊಡೆಜೋಗಿಜಂಗಮ | ರಾಗುವೆನರಸನಿನ್ನಾಣೆ ||೮೬||

ದುರುಳತನದಿಮಾರ್ಮಲೆತುಗರ್ವದಿನಿನ್ನ | ಚರಣಮೂಲಕೆಮುಗ್ಗದಿರ್ದಾ ||
ಹರಿಯನಗರಿಯೆಂಬುದುಭೂಪಕೇಳಿನ್ನು | ಹರಿದಾಳಿಗೀಡಾಗುವುದೇ ||೮೭||

ಎನ್ನಪರಾಕ್ರಮಾನಲವಾಡವನಿಂ | ಮುನ್ನೀರಹೀರಿಸಿಹರಿಯ ||
ಬನ್ನಬಡಿಸಿವೀಬೆಸನನುಕೊಡದೊಡೆ | ನಿನ್ನಾಣೆನಿನಗೆಭೂಪಾಲಾ ||೮೮||

ಬಲರಾಮನನುಬಾಳ್ದಲೆಗೊಂಡವನಕರ | ತಳದಹಲಾಯುಧಸಹಿತ ||
ಛಲದಂಕಕೇಳ್ನಿನ್ನತೆರಿಗೆಯಹಳ್ಳಿಯೊ | ಳುಳುವೊಕ್ಕಲಮಾಡುವೆವು ||೮೯||

ಬಂದುಹಗಲುಸ್ವೈರಿಸುದಾಳಿಯಿಟ್ಟುಗೋ | ವಿಂದನಹಿಡಿಯಾಳಹಿಡಿದು ||
ತಂದೆಂದಿಸಂದದಿನಿನ್ನ ಕೀಲಾರದ | ಗೊಂದೆಗಳಸುಕಾಯ್ದಿಸುವೆವು ||೯೦||

ಜೀವವಮಾರುತರುಗ್ಮಿಣಿಸಪುರಕೆಪೋದ | ಕಾವಸಕ್ಕೈಸೆರೆತಂದು ||
ಭೂವರಕೇಳ್ನಿನ್ನ ಪದಪದ್ಮಕೆಸಮ್ಮ | ವಾವುಗೆಗಳಸಿಕ್ಕಿಸುವೆವು ||೯೧||

ರೋಹಿಣಿಯುದ್ವಾಹದೊಳ್ಗಿಲ್ಲದರಿಕೆಯೊ | ಳಾಹರಿವೊಯ್ದಂತೆನಿನ್ನ ||
ವ್ಯೂಹದವಮುಂದಾವಸುದೇವಸತಂ | ದಾಹರೆಯುಸುಹೊಯಿಸುವೆವು ||೯೨||

ಕೇಳಿಂದುಪಾಡುಪಂಥವಯಾದವಘೂ | ಪಾಲಕ.ವೂರರೆಲ್ಲರನು ||
ನಾಳೆಗೆನಿನ್ನವೈಗಾಪಿನಾಳಿಯೋಳಿ | ಯಾಳಮಾಡುವೆವುನಿನ್ನಾಣೆ ||೯೩||

ಗಂಡುತನದೊಳಾಪುರವರದೊಳಗಿರ್ಪ | ಪಾಂಡವರುಗಳತಲೆಯನು ||
ಸೆಂಡಾಡದೊಡೆಪ್ಮ್ಮಾವೊಗದೊಳುಮಿಸೆ | ಗೊಂಡಿನಿಸ್ನೊಳುಜೀವಿಸುವೆವೇ ||೯೪||

ದಿಟ್ಟತನದಿವೋಗಿವಸನಿಧಿಯೋಳುಮನೆ | ಗಟ್ಟಿದಬಲಕೇಶವರ ||
ಪಟ್ಟಣವದುಸಮ್ಮಸೇನೆಗೆಧೂಳೀ | ಪಟ್ಟಪಲ್ಲವೆಮಗಧೇಶ ||೯೫||

ಎಂದುತಂತಮ್ಮಬೀರವಸೊದರುವಸ್ನಪ | ವೃಂದದವೊಗವನೀಕ್ಷಿಸುತ ||
ಮಂದಸ್ಮಿತವುಖನಾಭೂಪಾಲಕ | ಚಂದ್ರಸ್ಯದಿದನುಸಂಗರಕೆ ||೯೬||

ಪಾಯುವಬಾರುಪರಾವನಿಪಾಲಸಿ | ಕಾಯುಕರೇಣುಪಂಚಾಸ್ಯಾ ||
ಆಯತವೆಂದೆನುತಾಕಂಚುಕಿಗನಿ | ಕಾಯುವಿರದೆಘೂರ್ಣಿಸಿದುದು ||೯೭||

ಅವನೀಸುರರಾಶೀರ್ವಾದವಮಾಗಧ | ಸಿವಹದಕೊಂಡಾಟದೇಳ್ಗೆ ||
ಕವಿಗಮಕಿಗಳುಗ್ಘಡಣೆಯುಕೇಳುತ | ತವಕದಿನಡೆತಂದನಾಗ ||೯೮||

ಪದಿನಾರುಪಣ್ಣಾಗೆಯನೇರಿಸುದತಿಯು | ರೊದವಿದಸಂತಸದಿಂದ ||
ಚದುರಿಂಧವಲಚಾಮರವಜೀಸಿದರಾ | ವುದಿತಪರಾಕ್ರಮಿಗಾಗ ||೯೯||

ರವಿಯರಥದಸಪ್ತವಾಜಿಗೆಮನದೊಳು | ಸವನೆನಿಸುವತೇಜಿಯೇರಿ ||
ಸಕೋಟಿರಾಯರಾವುತರೈದಿದರಾ | ಭುವನಭುಂಭುಕನನೋಲ್ಕೈಸಿ ||೧೦೦||

ಎಣಿಸಿದೊಡೆಂಬತ್ತನಾಲ್ಕುಲಕ್ಷದೊಳರ್ಧ | ಗಣನೆಯುಮದತಹಸ್ತಿಗಳ ||
ಪಿಣಿಲೇರಿದಜೋದರರೈದಿದರಾ | ಪ್ರಣುತಪರಾಕ್ರಮಿಯೊಡನೆ ||೧೦೧||

ಅತಿರಥರರ್ಧರಥಿಕಸಮರಥಿಕರು | ಸ್ನತರೆನಿಪಾಮಹಾರಥರು ||
ಕ್ಷಿತಿಪನನೋಲೈಸಿನಾಲ್ವತ್ತೆರಡುಲಕ್ಕ | ವತಿಭರದಿಂದೈದಿದರು ||೧೦೨||

ಕೋಟಿಬಲಕ್ಕೋಟೋರ್ವರೆಂದೆನಿಪಸ | ಘಾಟಿಯಿಂದಾಕ್ರತಾಂತನನು ||
ತೋಟಿಗೆಕರೆವವರಾನಾಲ್ವತ್ತೆಂಟು | ಕೋಟಿಭಟರುಬಂದರಾಗ ||೧೦೪||

ಮತ್ತೆಳಿದಾಯಾ ಖಂಡದಭೂಪರ | ಮೊತ್ತದಚತ.ರಂಗಸೇನೆ ||
ತುತ್ತುರುಬಾಗಿತದ್ಬಲವಕೂಡಿದುದಿ | ಪ್ಪತ್ತನಾಲ್ಕಾಸಿರಕ್ಷೋಣಿ ||೧೦೫||

ಪೊಡವಿಯುಪೊತ್ತಫಣೀಂದ್ರನತಲೆಚಪ್ಪೆ | ವಡೆದುದುಯಾಕಿವಿಪಟ್ಟೆ ||
ಒಡೆದುದುಜಿಹ್ವೆಯುಡಗಿದವಂಘ್ರಿಗಳಾ | ನಡೆವಪಡೆಯುಭಾರದಿಂದ ||೧೦೬||

ಧರೆರತ್ನಗರ್ಭೆಯಾದುದರಿಂದಾಬಲ | ದುರುತರಪದಹತಿಯಿಂದ ||
ಪರಿದೇಳ್ವಾರಜಸಹಿತಬಾನೊಳುಸಿಲ್ಕಿ | ಧರೆಯಿಸಿದುವುಗ್ರಹವೆನಲ ||೧೦೭||

ಸೇನಾಪದಹತಿಯಿಂಜನಿಸಿದರಜ | ಮಾನಡುಗಡಲೆಡೆಗೈದಿ ||
ನಾನಾನೆಲೆಯೊಳುಜನಿಸಿದೀವಿಗಳಾದು | ವೇಸಂಬೆನದರುನ್ನತಿಕೆಯು ||೧೦೮||

ಇಳೆಯೊಳಗೆವ್ಮುರಸಂಗಿರಿಲ್ಲೆಂ | ದಲಸವೆಸುವಪರಿವೃಢನ ||
ಕಲಹಕೆಕೈವೀಸಿಕರೆವಂತೆದ್ದುವು | ಪಲವುಪತಾಕಾಸಿವಹ ||೧೦೯||

ಈರೆಂಟುಸಾಸಿರಮಕುಟಾಧೀಶ್ವರ | ರಾರ್ತ್ಯದೊಡನೈದುತಿರಲು ||
ಭೂರಿಷಡಂಗವಾಹಿನಿಗೂಡಿಬಂದನು | ಧಾರಿಣಿಪೊರದವಾಳ್ಕೆಯೊಳು ||೧೦೯||

ವಸುಧೆನೆರೆಯದಾಬಲದಬಲ್ಮೆಗೆಯಾ | ಗಸನೆರೆಯದುಕೇತುತತಿಗೆ ||
ದೆಸೆನೆರೆಯದುವಾದ್ಯದರಘಸಕ್ಕೆನೆ | ಮಸಗಿನಡೆದುಬಂದನಾಗ ||೧೧೦||

ಸೇನಾಪದಪಾತದಿನಮೆದಾನೆಲ | ನಾನಭವಾಯ್ತಾಗಗನ ||
ತಾನಾಧೂಳಿಯುಡರೆನೆಲನಾಯ್ತದ | ಸೇನೆಂದುಬಣ್ಣಿಸಿಪೇಳ್ವೆ ||೧೧೧||

ಇಂತುನಡೆದುಬಂದುತೊರೆಕೆರೆಕಾಲುವೆ | ತಿಂತಿಣಿಗೊಂಡುರಂಜಿಸುವ ||
ಮುಂತಣಕುರುಜಾಂಗಣವಿಷಯದೊಳುಭೂ | ಕಾಂತನುಬೀಡಬಿಡಿಸಲು ||೧೧೧||

ಆ ವಾರ್ತೆಯಕೇಳಿಮುದದಿಂದಕೌರವ | ಭೂವರತನ್ನೊಳಿಂತೆಂದು ||
ಭಾವಿಸಿದನುದಾಯಾದಿಪಾಂಡವರುಗ | ಳಾವೈರಿಗಳಸುತಾವೊಸೆದು ||೧೧೩||

ಕೂಡಿಕೊಂಡಿರ್ದಯಾದವರಿಗೆಚಕ್ರಿಯಿಂ | ಕೇಡುಸಂಭವಿಸಿದುದಾಸು ||
ಮಾಡಿದಪುಣ್ಯದಫಲದಿಂಬೇಡಿದ | ಕಾಡೊಳುಮಳೆಹೊಯ್ದಂತೆ ||೧೧೪||

ಇದುವೇಳೆಸಿನಗೆಂದು ತನಗುಳ್ಳಬಲವನು | ಪದಪಿಂಕೂಡಿಕೌರವನು ||
ಮುದಯುತನಾಗಿಜರಾಸಂಧಚಕ್ರೇಶ | ಗಿದಿರಾಗಿಬಂದುಕೂಡಿದನು ||೧೧೫||

ಲೆಕ್ಕಕ್ಕೆಬಾರದಲೋಕೈಕವೀರರು | ಎಕ್ಕತೂಳದ ಕೋಟಿಭಟರು ||
ಇಕ್ಕೆಲದೊಳು ಸಂದಣಿಸಿಬರಲುಬಂದು | ಹೊಕ್ಕನುಚಕ್ರಿಯಬೀಡ ||೧೧೬||

ಇಂತುಬಂದುಕೌರವಮಗಧೋರ್ವೀ | ಕಾಂತನಸಮ್ಮುಖವಾಗಿ ||
ಇಂತೆಂದನೆಲೆದೇವಸೇನೀ ಪುಲುಕಜ್ಜ | ಕಿಂತುದಂಡೆತ್ತಿನಡೆವರೇ ||೧೧೭||

ಎನ್ನ ಕರೆಸಿಯೊಪ್ಪಿಸೆನಸುಕೊಟ್ಟೊಡೆ | ನಿನ್ನ ಮನಸಿನಭೀಷ್ಟವನು ||
ಚೆನ್ನಾಗಿಸಲಿಸುವೆನೆಂದುನುಡಿದಗಾ | ವುನ್ನತಸತ್ತ್ವನಿಂತೆಂದ ||೧೧೮||

ಎಲೆಸುರಪತಿನಿನ್ನ ಬಲುಬಲನಿನ್ನ ದೋ | ರ್ವಲನಿನ್ನ ಬಂಧುಸಂಪತ್ತಿ ||
ನೆಲದೊಳಗಾವವಗುಂಟೇಯೀನುಡಿ | ಸಲುವುದೆಸಾಧಾರಣರ್ಗೆ ||೧೧೯||

ಎಂದವನನುಕೊಂಡುಕೊನೆದುನುಡಿದುತ | ನ್ನೊಂದಾಗಿಬೀಡನುಬಿಡಿಸಿ ||
ಮುಂದಕ್ಕೆನಡೆವಸಮಯದೊಳುನಾರದ | ಬಂದನುಬಾಂಬಟ್ಟೆಯಿಂದ ||೧೨೦||

ಆ ನಾರದನಕಂಡಿದಿರೆದ್ದುಮಗಧಮ | ಹೀನಾಥನವನತನಾಗಿ ||
ಸಾನಂದದಿನಿಂತುನುಡಿದನೆಲೇಬ್ರಹ್ಮ | ಸೂನುನೀವೀಗಲೆಪೋಗಿ ||೧೨೧||

ಬಲ್ಲಿದಬಲಕೇಶವರೆನ್ನೊಳುಕಾದ | ಬಲ್ಲರೆಯಿದಿರಾಗಿಬರಲಿ ||
ಅಲ್ಲದೊಡೆನಗೆಬಂದೆರಗಲಿಯೆಂದವ | ರ್ಗುಲ್ಲಾಸದಿಂಪೇಳಿಮೆನಲು ||೧೨೨||

ನಸುನಗೆನಗುತನಿನ್ನೀವಾತನವರೊಳ | ಗುಸುರುವೆನೆಂದುಬೀಳ್ಕೊಂಡು ||
ಅಸವಸದಿಂದವಿಮಾನವನೇರಿಯಾ | ಗಸವಟ್ಟೆಗಿರದೆಯ್ತಂದು ||೧೨೩||

ದ್ವಾರಾವತಿಗಿರದೆಯ್ದಿಮುತ್ತಾಬಲ | ನಾರಾಯಣರನುಕಂಡು ||
ಚಾರುಚರಣಕೆರಗಲುಕಡುಹರಸಿಯಾ | ನಾರದನಿಂತುನುಡಿದನು ||೧೨೪||

ಎಲೆವಿಷ್ಣುಕೇಳುತನ್ನಾಜಯವನಿತೆಯ | ನೊಲಿದುನಿನಗೆಕೊಡಲೆಂದು ||
ಇಳೆಯಾಧಿಪತಿಮಾಗಧನಾಕುರುಭೂ | ತಳದೊಳುದಂಡುಬಿಟ್ಟಹನೆ ||೧೨೫||

ಇದಕೆತಕ್ಕುದನುನೀವೇಬಲ್ಲಿರೆನುತನಾ | ರದನುನುಡಿದುಬೀಳ್ಕೊಂಡು ||
ಪದುಳದಿತನ್ನ ವಿಮಾನವನೇರಿನೀ | ರದಪಥಕೆಯ್ದಿದನಿತ್ತ ||೧೨೬||

ನ್ಯಾಯವಿಲ್ಲದೆನನ್ನ ಮೇಲೆತ್ತಿಬಂದಾ | ರಾಯನತಲೆಪರಿಯೆಚ್ಚು ||
ಆಯಾಸವಿಲ್ಲದೆಕೆಡಹುವೆನೆಂದುನಾ | ರಾಯಣನೊದರಿನುಡಿದನು ||೧೨೭||

ಚಕ್ರದಬೆಂಬಳಿಯೊಳುಭೂಚಕ್ರಮ | ನಾಕ್ರಮಿಸಿದತನ್ನಬಲುಪ ||
ನಕ್ರಮದಿಂದೊದೆದದ್ರಿಯನೆತ್ತಿದ | ವಿಕ್ರಮಿವಿಷ್ಣುವಿಗೆಣೆಯೇ ||೧೨೮||

ಎಂದೇಕಕುಂಡಲಗಂಭೀರವಚನದಿ | ಸಂದುವಿಷ್ಣುವಕೊಂಡಾಡಿ ||
ಇಂದೆನ್ನಬಾಹುಕುಠಾರದರಿಪುವನ | ವೃಂದವಕಡಿವೆನೆಂದೆನುತ ||೧೨೯||

ದುಷ್ಟದುರಿತದೂರನೇಮಿಾಶನಿಂತಮು | ಗಿಷ್ಟಸಿದ್ಧಿಯುಂಪೂಗಲೆಂದು ||
ಸಾಷ್ಟಾಂಗವೆರಗಿಕೈಮುಗಿದುಭಕ್ತಿಯೊಳುವಿ | ಶಿಷ್ಟವೀರರುಬೀಳ್ಕೊಂಡು ||೧೩೦||

ಬಳಿಕಸಮುದ್ರವಿಜಯಭೂಪಾಲನ | ತಳಿರಡಿಗವನತರಾಗಿ ||
ಅಲಘುತರಪ್ರೀತಿಯಿಂದಹರಸಿಯಾ | ತುಳಿಲಾಳ್ಗಳಿಗಿಂತುನುಡಿದ ||೧೩೧||

ಎಲೆಮಕ್ಕಳಿರಕೇಳ್ಳೀಮಿಾಕಾಲದ | ಬಲವಾಸುದೇವರ್ಕಳುಗಳು ||
ಕಲಿಗಳುನಿಮಗಾಪ್ರತಿವಾಸುದೇವನ | ಗ್ಗಳಿಕೆಯು ಚಕ್ರಕೈಸೇರಿ ||೧೩೨||

ಆತನತಲೆಯನವರಿಸುತ್ತರಿಸಿಮ | ಹೀತಳವೆಲ್ಲವನೀವು ||
ಖ್ಯಾತಿಯಿಂದಾಳ್ವಿರಿಯಿದುಶಾಸ್ತ್ರಸಿದ್ಧವೆಂ | ದಾತನುಜಾತರಿಗುಸುರೆ ||೧೩೩||

ಮತ್ತೆಕೈಮುಗಿದಿಂತೆಂದರೆಲೇಭೂ | ಪೋತ್ತಂಸನೇಮಿಾಶ್ವರನ ||
ಒತ್ತಿನೊಳಿರಿಮೆಂದಾಬಲನಾಪುರು | ಷೋತ್ತಮನವನಸಲ್ಲಿರಿಸಿ ||೧೩೪||

ಬಳಿಕಮಕ್ಕೋಭಾದಿಯುಪಿತೃಸಮಿತಿಗೆ | ಯಲಘುಭಕ್ತಿಯೊಳುಬಂದೆರಗಿ ||
ಕಳುಹಿಸಿಕೊಂಡುಸಂಗ್ರಾಮನಿಸ್ಸಾಣವ | ತಳುವದೆಹೊಯ್ಸಿದರಾಗ ||೧೩೫||

ಉತ್ತಮನಂತಕಸೂನುಸಹಾಯುಸಂ | ಪತ್ತಿಯೆಲ್ಲನಕೂಡಿಕೊಂಡು ||
ಬಿತ್ತರಪುಷ್ಪವಾಹಿನಿಗೂಡಿಯಾಪುರು | ಷೋತ್ತಮನೊಡಗೂಡಿದನು ||೧೩೬||

ವೀರಮೂರುತಿವಿಕ್ರಮಿಫಲ್ಗುನಧುರ | ಧೀರನಕುಲಸುಕುಮಾರ ||
ಸೂರನುಸಹದೇವನಾರಣಕಾರಯ್ಯ | ದೋರಂಡದಿಂದೊಡವರಲು ||೧೩೭||

ಉತ್ತಮಶಕುನವೊದವೆಯಾಬಲಪುರು | ಷೋತ್ತಮರಾನೆಯನೇರಿ ||
ಚಿತ್ರಜನಾದಿಗಳುಹರಿವಂಶಭೂಪರು | ಸುತ್ತಿಬಳಸಿಬರುತಿರಲು ||೧೩೮||

ಅಸುರನಮೇಲೆಯಮರಪತಿಬರ್ಪಂ | ತಸದೃಶವಿಕ್ರಮಯುತರು ||
ಬಿಸಜೋದರನುಮಗಧರಾಜಗಿದಿರಾಗಿ | ಯೆಸಕವಡೆದುಬಂದನಾಗ ||೧೩೯||

ಮೊದಲಲ್ಲಿಬಿಟ್ಟಿರ್ದಮಗಧಮಹೀಶನ | ವಿದಿತವುಪ್ಪಾಪಾಳೆಯಕೆ ||
ಇದಿರಾಗಿಯನತಿದೂರದೊಳಾಸೇನೆಯ | ಸಧಟನಚ್ಯುತಬಿಡಿಸಿದನು ||೧೪೦||

ಅನಿತರೊಳಾವಿಜಯಾರ್ಧಶೈಲದಿನೆಯ್ದಿ | ಯನುಚರರೊರ್ವ ಕೈಮುಗಿದು ||
ಜನಪಚಿತ್ತೈಕಸುನಿಮ್ಮಾಯವಸರಕತಿ | ಮನದೆಗೊಂಡೊದಗುವೆನೆಂಬ ||೧೪೧||

ಕಾಳಶಂಬರಮೊದಲಾದಂಬರಚರ | ಜಾಲಮನಾಚಕ್ರಧರನ ||
ಓಲೈಸಿಬಾಳ್ವಖೇಚರರೆಯ್ದಲೀಸದೆ | ಮೇಲುವರಿದುನಿಂದಹರೇ ||೧೪೩||
ಎಂದನುಡಿಯಕೇಳಿಬಲರಾಮನೊಡನೆಮು | ಕುಂದನಾಳೋಚನೆಮಾಡಿ ||
ನಂದೇತರವಿಕ್ರಮಯುತವಸುದೇವ | ಕಂದರ್ಪಶಂಭುಕುವರರ ||೧೪೪||
ಸಮುಳದಿವಿಜಯಾರ್ಧಪರ್ವತಿಕೆಯ್ದಿಸಿ | ಪದಪಿಂಬಿಟ್ಟರಲಾಗ ||
ಮುದಯುತಮಗಧಸೆನ್ನಂತೆಯುಳಿವಸೆಂದು | ಉದಧಿಯೊಳಿನಸಸ್ತಮಿಸಿದ ||೧೪೫||
ಮತ್ತಾರಾತ್ರಿಯೊಳೆಸೆದುನಿದ್ರೆಯೊಳಿರ್ದ | ರತ್ತಚಕ್ರಾಧೀಶ್ವರನು ||
ಇತ್ತಬಲಾಚ್ಯುತಭೂಮಿಪಾಲಕರ | ತ್ಯುತ್ತಮಸತ್ತ್ವಸಂಯುತರು ||೧೪೬||
ಇದುಜಿನಪದಸರಸಿಜಸುದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗೊದಪವಿಪ್ಪತ್ತಾರುಸಂಧಿ ||೧೪೭||

## ಇಪ್ಪತ್ತಾರನೆಯ ಸಂಧಿ ಸಂಪೂರ್ಣಂ

# ೨೭. ಪ್ರಥಮಕಾಳಗ ಸಂಧಿ



ಶ್ರೀಮದಮರಪತಿಮೌಳಿಕೀಲಿತಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಮಗಧಮಹೀಶನಮಘಮಥನನಕಾ | ಳಗವನುನೋಡಬೇಕೆಂದು ||
ಸೊಗಯಿಸುವುದಯೋರ್ವೀಧರದುಪರಿಮ | ಕೊಗೆದೆಸೆದನುಲೋಕಚಕ್ಷು ||೨||

ಅರವಿಯುದಯದೊಳಗೆನಿತ್ಯಕರ್ಮವ | ನಾರೈದುಮಾಡಿಮಾಗಧನು ||
ಕೌರವನಸುಮತದಿಂಕಲಿಕರ್ಣಗೆ | ವೀರಪಟ್ಟವಕಟ್ಟಿದನು ||೩||

ಇತ್ತಲೇಕಾಂಗವಿಕ್ರಮಿಪಾರ್ಥಗೆಪುರು | ಷೋತ್ತಮವೀರಪಟ್ಟವನು ||
ಬಿತ್ತರಮಪ್ಪವೈಭವದಿಂದಲೆಕಟ್ಟಿ | ಮತ್ತೆಸಂಗರಕನುವಾದ ||೪||

ಅತ್ತಲುದ್ಧತಚಕ್ರೇಶ್ವರನುರುಗಜ | ದುತ್ತಮಾಂಗವನುಸಿಂಗರಿಸಿ ||
ಹತ್ತಲನೇಕದುಂದುಭಿಗಳರವವೊಳ | ಗಿತ್ತುಸಕಲಭೂತಳವ ||೫||

ವೊಳಗುವವಾದ್ಯಂಗಳಕೂಡೆಭೂತಳ | ವೊಳಗಿತೆತ್ತಿದಕೇತುಗಳ ||
ಬಳಿವಳಿಯೊಳಗೆಯುಶುಭಕೇತುವೆದ್ದುವು | ಬಲಯುತಪೊರಮಡುವಾಗ ||೬||

ಅದನುಕಂಡಿನಿಸೆಣಿಸದೆಯಾಮಗಧನು | ವಿದಿತವಿಕ್ರಮಿನಡೆತರಲು ||
ಅಧಟರನೇಕರರನುಮಕ್ಕಳಿಡಬಲ | ಹದುಗಿಬರಲುಸಂಭ್ರಮದಿ ||೭||

ಆಹವಲಂಪಟನತಿಬಲನಮಿತ್ರಿಯು | ತ್ತಾಸಕದಿಪಂಥನಾತಾಡಿ ||
ಮೋಹರವಾಗಿಯದಿರದೆಯ್ತಂದುದು | ಸಾಹಸಿಯಾಚಕ್ರಿಯೊಡನೆ ||೮||

ಮುಂದುಗೆಡಿಸುವಸೇನಾಪದಧೂಳಿಯು | ನೊಂದಿಜೀಸುವಚಾಮರದ ||
ಮಂದಮಾರುತನಿರದೋಡಿಸಲಾನೃಪ | ವೃಂದಾರಕನೆಯ್ದಿದನು ||೯||

ಈತೆರದಿಂನಡೆತಂದಾಕುರುಧರ | ಣೀತಳದೊಳುನಿಂದುಬಳಿಕ ||
ಖ್ಯಾತನನಾಕರ್ಣನನುಬರಿಸಿಸಂ | ಪ್ರೀತಿಯಿಂದಿಂತುನುಡಿದನು ||೧೦||

ಈಸೇನೆಯನುಸರೋರುಹಕುಸುಮದ | ಸಾಸಿರೆಸಳಮಾಳ್ಕೆಯೊಳು ||
ಓಸರಿಸದೆವಿರಚನೆಗೆಯ್ಯುಮೆಸಲಾ | ಸಾಸಿಗನದನವಧರಿಸಿ ||೧೧||

ಗುರುಶಲ್ಯಶಕುನಿಕುಂಭಜಭೂರಿಶ್ರವ | ಗುರುಸುತಕೃಪಕೃತವರ್ಮ ||
ಸುರಸಿಂಧುಜಸೀರಧ್ವಜಸಿಂಧುಭೂ | ವರಸೋಮದತ್ತಸುಶರ್ಮ ||೧೨||

ಕುರುಪತಿಬಾಹ್ಲೀಕಜಯದತ್ತಬಾಣಾ | ಸುರವೃಷಭಧ್ವಜವಿಂಧ್ಯ ||
ಉರಗಪತಾಕವಿಕರ್ಣಮಿತ್ರಾಪುರಂ | ದರತಾರಕದುರ್ದರುಶನ ||೧೩||

ಆದುಶ್ಶಾಸನದುಂದುಭಿಕನಕಧ್ವ | ಜಾದಿಯನೇಕಭೂವರರ ||
ಆದರದಿಂದಾವ್ಯೂಹಸರೋರುಹ | ದಾದಳದಂತಿರಿಸಿದನು ||೧೪||

ಅಜಿತಂಜಯನಪರಾಜಿತಸಿಹ್ಮ | ಧ್ವಜಕಾಲಮಯಭಾನುಮಿತ್ರ ||
ಗಜರಿಪುರಥಮೊದಲಾದರನಾವಾ | ರಿಜದಕರ್ಣಿಕೆಯಂತಿರಿಸಿ ||೧೫||

ಪರಿವೃತಭಟಸೈನ್ಯಾಂತದೊಳುರುಮದ | ಕರಿಘಟೆಗಳುನಿಂದಿರಲು ||
ವರಗಜವೇರಿದಚಕ್ರಿಯನಾಬಂ | ಧುರಕರ್ಣಿಕೆಯಂತಿರಿಸಿ ||೧೬||

ಆಕರ್ಣಿಕೆಯುಮೇಗಡೆಚಕ್ರರತ್ನಮು | ನಾಕಾಶದಮೇಲಿರಿಸಿ ||
ಲೋಕೈಕವೀರರೆನಿಪಖೇಚರರಚ | ಕ್ರಾಕೃತಿಯಿಂದದಿಬಳಸಿ ||೧೭||

ಭೇದ್ಯಮಲ್ಲದವೊಲಪ್ರತಿಮನಕಂಪನ | ವಿದ್ಯುತ್ಪ್ರಭರೌದ್ರಕೇಶಿ ||
ವಿದ್ಯುದ್ಗಮನಸಶನಿವೇಗರಾದಿಯ | ವಿದ್ಯಾಧರರನಲ್ಲಿರಿಸಿ ||೧೮||

ಗಜಮದಗಂಧಗಂಧದಿಬಳಸಿದಭೂ | ಭುಜರಟ್ಟತೊಡವೇಗುಗಳ ||
ರಜದಿಂದಮವರೊಡ್ಡಿದವ್ಯೂಹದಸರ | ಸಿಜಮತಿಬಂಧುರವಾಯ್ತು ||೧೯||

ಈತೆರದಿಂದಪದ್ಮವ್ಯೂಹಮನಿನ | ಜಾತನುವಿರಚಿಸಲಿತ್ತ ||
ಖ್ಯಾತರುಬಲವಾಸುದೇವರರ್ಜುನನಸಂ | ಪ್ರೀತಿಮಿಗಲುಕರೆಯಿಸುತ ||೨೦||

ಸನ್ನುತನಾಪಟುನಟಕೃಷ್ಣನೆಂಬನ | ಮನ್ನಿಸಿಯಾಫಲ್ಗುನಗೆ ||
ಚೆನ್ನಾಗಿಸಾರಥಿಯಾಗೆಂದುಪೇಳಿಗು | ಣೋನ್ನತರೊಸೆದಿತ್ತರಾಗ ||೨೧||

ಬಳಿಕಾತಗೆಗರುಡವ್ಯೂಹವನುಕ | ಣ್ಗೊಳಿಪಂದದಿಮಾಡುವುದು ||
ತಳುವದೆಸುತಪೇಳಲದನುಕೈಕೊಂಡಾ | ಬಲಯುತವೀರಕಿರೀಟಿ ||೨೨||

ಶರಧಿವಿಜಯಭೂವರನನುಜಾತಗೇ | ಣ್ವಾತುಜಯವಿಜಯಪಾಂಚಾಲ ||
ಗಿರಿಪೂರಣನಭಿಚಂದ್ರನುಸತ್ಯಂ | ಧರರಾದಿಯಾದಭೂವರರ ||೨೩||

ತಂತಮ್ಮಚತುರಂಗಸೇನೆಸಹಿತನೀ | ವಿಂತಿರೆಂದಾಯಕ್ಷವಾಗಿ ||
ಸಂತಸದಿಂದಾಗರುಡನೆಡದರಟ್ಟೆ | ಯಂತೊಡ್ಡಿನಿಲಿಸಿದನಾಗ ||೨೪||

ಭೂವರಧರ್ಮಜಭೀಮನಕುಲಸಹ | ದೇವಮತ್ಸ್ಯನುಮಭಿಮನ್ಯು ||
ಆವಿಂಧ್ಯಕನನುಘಟೋದ್ಘಜರಾದಿಯು | ಭೂವನಿತೇಶರೆಲ್ಲರಸು ||೨೫||

ಬಲಯುತರುಗಳನುತಂತಮ್ಮ ಚತುರಂಗ | ಬಲಗೂಡಿಯಾಖಗಪತಿಯು ||
ಬಲದಕಡೆಯರಟ್ಟೆಯಾಗಿರಿಸೀಮೆಂದು | ಚಲದಂಕನಿಲಿಸಿದನಾಗ ||೨೬||

ರಥನೇಮಿಸಾಗರಚಂದ್ರವಿಂಧ್ಯಕದೃಢ | ರಥಚಿತ್ರಭಾನುವೆಂದೆಂಬ ||
ಪೃಥುವೀಪಾಲಕರನದರತುಂಡದಾದದಿ | ಪೃಥುಬಲಯುತನಿರಿಸಿದನು ||೨೭||

ಸೋಮದೇವಸುಮಣಿಪುತ್ರಾಂಶುಮಾಳಿಮ | ತ್ತಾಮೇಘರಥರಾದಿಯಾದ ||
ಭೂಮಿಪಾಲಕರನದರಕೊರಲಂತೆಯು | ದ್ದಾಮನಾಹಸಿಯಿರಿಸಿದನು ||೨೮||

ಉಗ್ರವಿಕ್ರಮದೇವಸೇನದೀಪಾಯನ | ಸುಗ್ರಸೇನನುಸಿದ್ಧಕೇತು ||
ಅಗ್ರಗಣ್ಯಾಶಕ್ತಿಧ್ವಜರೆಂಬನೃ | ಪಾಗ್ರೇಸರಪಲಬರನು ||೨೯||

ಸಾರೆನಿಲಿಸಿವುತ್ತಾಕೋಪಾಂತಕ | ನಾರಾಯಣನಮುದವೆತ್ತ ||
ವಾರಣಶಿರವನೇರಿಸಿಪುಚ್ಛದಂವದಿ | ಸೇರಿಸಿದನುಹನೆನಾಗಿ ||೩೦||

ಮದಮಾತಂಗವೇರಿಸಿಬಲರಾಮನ | ನದರವಕ್ಷಸ್ಥಲವಾಗಿ ||
ಅಧಟರನೇಕರರಸುಗಳಕೂಡಿಸಂ | ಮುದದಿನಿಲಿಸಿದನಾಗ ||೩೧||

ಅರುಣಚಂದ್ರದಧಿವದನವರಾಹಕಂ | ಧರಪಿಂಗಳಜಯವರ್ಮ ||
ಅರಿಮರ್ದನವಜ್ರಾಂಗಮನೋವೇಗ | ಪರಿಕೇತುವೆಂಬಖೇಚರರ ||೩೨||

ಪಲಬರರಸುಗಳನವರವರುರುತರ | ಬಲವನೆಲ್ಲವಮೋಹರಿಸಿ ||
ಚಲದಂಕಬಲರಾಮಕೇಶವರುಗಳೆಡ | ಬಲದೊಳನಿಲಿಸಿದನಾಗ ||೩೩||

ಇಂತತಿರೌದ್ರವಡೆದಪಡೆಗಳನುಕ್ಕ | ತಾಂತಕುಪಿತಮಾನಸರು ||
ಅಂತರಿಸದೆರವಿಸುತಪಲುಗುಣಭೂ | ಕಾಂತರುರಚನೆಯಮಾಡೆ ||೩೪||

ಆಸಿತರೊಳಾಗಸವಟ್ಟೆಯೊಳಗೆದೇವ | ದನುಜೋರಗವ್ಯಂತರರು ||
ಘನತರವಪ್ಪಕಾಳಗವನೋಡುವೆವೆಂ | ದನುರಾಗದಿನಿಂದರಾಗ ||೩೫||

ಗರಳಮರಿಗೆಗಾಳಿಯುತೋರುವವೊಲು | ತರಣಿತನುಜಪಾರ್ಥರುಗಳು ||
ಭರದಿಂದಕ್ಕೈವೀಸಲಿರದೆಮೊಳಗಿದುವು | ಬಿರುದಿನಬೀರಗಾಳೆಗಳು ||೩೬||

ಕಡೆಯಕಾಲದೊಳುಮೇರೆಯನುಲ್ಲಂಘಿಸಿ | ಪಡುವಣಮೂಡಣಜಲಧಿ ||
ಕಡುಪಿಂದಬಂದುತಾಗುವವೊಲಿತ್ತಟ್ಟಿನ | ಪಡೆಗಳೆರಡುತಾಗಿದುವು ||೩೭||

ಭರದಿಂದಾಘಟೆತತಿಘಟೆತತಿಯೊಳು | ತುರಗಂಗಳುತುರಗದೊಳು ||
ಕರಿಕರಿಯೊಳುರಥರಥದೊಳಿದಿರ್ಚಿದು | ರ್ಧರವಿಕ್ರಮದಿರಿದತಾಗೆ ||೩೮||

ಕಣೆನೆಟ್ಟುಬಿಲ್ಲತೆಗೆದುಬಿಲ್ಲರರೆಬರು | ಡೊಣೆಬೆನ್ನೊಳು ಸೊಗಯಿಸಲು ||
ರಣರಂಗದೊಳುನಲಿನಲಿದಾಡಿದರಾ | ಕುಣಿವನೋಗೆಯುವಾಳ್ಕೆಯೊಳು ||೩೯||

ದೆಸೆಯೊಳುನೆರಕೆಗಟ್ಟಿದವೊಲುಮೇಲಾ | ಗಸದೊಳುಪಂದಲಿಟ್ಟಂತೆ ||
ಮುಸುಕಲುಶರವಲ್ಲಿನೋಡುವರುಸುರಿಗು | ಬ್ಬಸವವಮಾಡಿದುದಾಸಮರ ||೪೦||

ಸುಸಿಪಬಿಸಿಯುರಕುತದಸೂಸುಸಖಂಡ | ದುರುಳ್ವಮುಂಡದಪಾರಿಬೀಳ್ವ ||
ಶಿರದಬೀಳುವಕರುಳಿಂದಾರಣಭೂ | ಕರತರವಸುತೋರಿದುದು ||೪೧||

ಸರಳಿಟ್ಟುಜಿಲ್ಲತೆಗೆವಬಿಲ್ಲುಗಾರನ | ಕೊರಳಸಿದಿರಭಟನೆಸಲು ||
ಭರದಿಂದಾಮುಂಡವವನತಲೆಯುನಾ | ಸರಳಸೆಚ್ಚುದುಚಿತ್ರವಾಗಿ ||೪೨||

ತೆಕ್ಕೆಯೊಳಗೆಕವಲಂಬುಕೀಳದವೊಲು | ಸಿಕ್ಕಿರೆಮುರಿದಾಕಣೆಯು ||
ಎಕ್ಕಟನಲಿಗಳೀಳಿನೆಯುಂದವೆಯೊಕ್ಕ | ರೆಕ್ಕಲವಂದಿಗಳಂತೆ ||೪೩||

ಅಂಬುತೀರೆಪೆದೆಕಿತ್ತುಮುರಿದುಬಿಲ್ಲು | ಬೆಂಬಳಿದೇರಸುಕಂಡು ||
ಬೆಂಬೀಳದುಡುಗೆಯುಸುರಗಿಗಳನುಕಿಳ್ತು | ಮುಂಬರಿದರೆಬರರಿದರು ||೪೪||

ಒಗುವಕರುಳನೋಸೂಂಕುತಸುರಿತಪ್ಪ | ಮೊಗದನೆತ್ತರಸೂರಸುತ್ತ ||
ತೆಗೆಯುಬಾರದೆಬಿಲ್ಲುಬಿಲ್ಲಿಂದವೆಹೊಯ್ದು | ಮಿಗೆಕಾದಿದರುಕೆಲಬರು ||೪೫||

ಪಡಲಿಟ್ಟಂದದಿಬಿಳ್ದಿರುಳುವಬಿಲ್ಲ | ಪಡೆಗೊಂಡುಪರಿಗೆಯಭಟರು ||
ಜಡಿವಖಡ್ಗದಿಮಿಂಚುಮಿಂಚಹೊಯ್ವಂದದಿ | ಕಡುಪಿಂದಹೊಯ್ದಾಡಿದರು ||೪೬||

ಮರಣದಹಡೆದವುಹಾಳಟವಿತತಿಯು | ಹರಿಗೆಗಳಾಧರೆಯೊಳಗೆ ||
ಕರವೆಸೆದುವುಕಾಲಂಗೆಡೆವಾಡಿದ | ಪರಿಯಾಣಗಳಪಜ್ಜೆಯಂತೆ ||೪೭||

ಅಡಿಮುಡಕಣೆಕಾಲುತೊಡೆನಡುವೊಡಲೆದೆ | ಮುಡುಹುಮುಂಗೈಕಿವಿಕೊರಲು ||
ಖಡಿಖಂಡವಾಗಿಮುರಿದೆಹೊಯ್ದಾಡಿದ | ರಡಗನೆಕೆಲವೀರಭಟರು ||೪೮||

ನೆಲವೆಲ್ಲಹೇಸುವಂದದಿನೆರೆಬಿಳ್ದಾ | ಕಲಿಗಳಕಂಡುರಾವುತರು ||
ಭರದಿನೇರಿದರುಕಡೆಯುಕಾಲದಬ್ಧಿಯು | ತೆರೆತೆರೆಗಳು ತಾಗುವಂತೆ ||೪೯||

ಸಿಡಿಲಬಳಗವಾಸಿಡಿಲಬಳಗದೊಳು | ಕಡುಪಿಂದಹೊಯ್ದಾಡುವಂತೆ ||
ಪಡೆಯೆರಡರರಾಯರಾವುತರೋಪದೆ | ಕಡಿದಾಡಿದರುಖಡ್ಗದೊಳು ||೫೦||

ಮಸಕದಿಹೊಯ್ಯೆಸೀಸಕಗೂಡಿತಲೆಗಳಾ | ಹಸಕೆಯ್ದಿ ಬೀಳೆಭೂತಳಕೆ ||
ಎಸಕವಡೆದುದುಗುಂಡಿನಮಳೆಯುಂತೆಭಾ | ವಿಸಿಸೋಡಲಾಜಿರಂಗದೊಳು ||೫೧

ತಲೆಯಪರಿದರಾವುತರಟ್ಟಿಗಳುಕ್ಕೈ | ಯುಲಗಿಂಡಿದಿರಾವುತರ ||
ಮಲೆತುತಿವಿದವೇನೆಂಬೆನುರಣದ | ಗೃಳಿಕೆಯ:ನಾಬಲದೊಳಗೆ ||೫೨

ಎರಡುಹೋಳಾಗಿಹೊಕ್ಕಳುವರಸೀಳಿದ | ವರವಾಹಕರಟ್ಟಿಗಳು ||
ತುರುಗದೆರಡುಕಡೆಯೊಳಗೆಸೆದುವುಹೇರಿ | ನಿರವಾಗಿಯೊಬವರದೊಳು ||೫೩

ಗರಿವರಮುಳುಗಿದಂಬುಗಳಿಲ್ಲಡೆಯೊಳು | ತುರುಗಿರಲಾತುರುಗಗಳು ||
ಬಿರಿತುಹರಿಣಪುಟದೊಳುಹಾರುತಂದಿನ | ಗರಿಗುದುರೆಯೊಲೊಪ್ಪಿದುವು ||೫೪

ಇಂತುಮುಣ್ಮುರಿಗೊಂಡರಾವುತರನುಕಂ | ಡಂತಕಬಹುರೂಪುವಡೆದು ||
ಇಂತೆಯ್ದಿದನೊಯೆಂಬಂತತಿರಥಿಕರ | ತಿಂತಿಣಿಯೊಪ್ಪಿದುದಾಗ ||೫೫

ಕೆಲರಥಿಕರುಪುರಮಥನನಂಬಂದದಿ | ಕೆಲರಥಿಕರುರವಿಯಂತೆ ||
ಕೆಲರಥಿಕರುಶಕಟಾಸುರನಂತಾ | ನೆಲದೊಳುಕಣ್ಗೊಪ್ಪಿದರು ||೫೬

ಸಾರಥಿಗಳಬೊಬ್ಬೆಯುಚಕ್ರದಚೀ | ತ್ಕಾರದಹಯುದಬ್ಬರದ ||
ನಾರಿಯುಟಂಕಾರದರಥಿಕರಕೂಗಿ | ನಾರಭಸವೆತೀವಿದುದು ||೫೭

ಸಾರಥಿಗಳ್ಸತ್ತುಕುದುರೆಗಳ್ಕೆಡೆದುವು | ತ್ತಾರಥಚಕ್ರಗಳೊಡೆದು ||
ಶೂರರವರಪೀವಹೋಹನ್ನೆವರಕ್ಕೈ | ವಾರಪೆಚ್ಚಾಡಿದರಾದು ||೫೮

ಈತೆರದಿಂದೆಚ್ಚಾಡಿರಥಿಕರುವು | ಹೀತಳದೊಳುಬೀಳಲಾಗ ||
ಮಾತಂಗಘಟಕಡೆಗಾಲದಕರಿಯುಜೀ | ಮೂತದಂದದೊಳೆರಗಿದುವು ||೫೯

ಹರಿವಹಸ್ತಿಯವೋಗಡೆಹಾಕಿದಹ | ಕ್ಕರಿಕೆಗಳತಿರಂಜಿಸಿದುವು ||
ಧುರಧರಣೀತಳದೊಳಗಂದಿಸಗಿರಿ | ವರದಟ್ಟಿಗಳೆಂಬಂತೆ ||೬೦

ಕಳಿದುರುಳಿದಗಜದಂತೆಕ್ಕೈಕಾಲ್ಬಾಲ | ಗಳಿನಾನೆಲನೊಪ್ಪಿದುದು ||
ಕಳಿಲೆಕದಳಿವೊಗವಾಳೆಬಲ್ಸಿಕಿಲ | ಹಳುವಕುಮ್ಮರಿಗಡಿದಂತೆ ||೬೧

ಉರುಳಿದಭಟರುಕೆಡೆದವಾಜಿಧರೆಯೊಳು | ನೆರೆದರಥಿಕರಳಿದಾನೆ ||
ಹರವರಿಯಾಗಲಾಹವಧರಣೀತಳ | ಪಿರಿದುಮಗುರ್ವಿಸಿತಂದು ||೬೨

ಆಹಗಲೊಂದಕೆಮಗಧನಬಲದೊಳ | ಕ್ಷೋಹಿಣಿಯೆರಡಳಿಯಿತ್ತು ||
ಸಾಹಸಿಹರಿಯಬಲದೊಳದರರ್ಧ | ಕ್ಷೋಹಿಣಿಯಳಿದುದೇನೆಂಬೆ ||೬೩

ಆಸಮಯದೊಳಾದಿತ್ಯಸಪರದಿ | ಗ್ರಾಸವಹೊಗಲುಮತ್ತಿತ್ತ ||
ಸಾಸಿಗರಾಯಿರ್ವರ್ಬಲದರಸುಗಳುವಿ | ಲಾಸದಿಬೀಡಿಗೆಯ್ದಿದರು ||೧೪||

ಆಯಿರುಳೊಳುಸಂಗ್ರಾಮದಸಮಕಟ್ಟ | ನಾಯಿರ್ವರ್ಬಲದರಸುಗಳು ||
ಆಯತಿಯಿಂಸಮನಿಸುತಿರಲತ್ತಮ | ತ್ತಾಯಿಸಸುದ್ಭವಿಸಿದನು ||೧೫||

ಆರವಿಯುದಯದೊಳತಿವಿಕ್ರಮ ಯುತ | ನಾರಾಯಣನುದೋರ್ವಲದ ||
ಭೂರಿಭೂಭುಜರುವೆರಸಿಯಾನೆಯನೇರಿ | ಯಾರಣರಂಗಕೆಯ್ದಿದನು ||೧೬||

ಉಗ್ರಸೇನಾಪರಿವೃತನಾಗಿನಿಂದಿ | ದುರ್ಗ್ರಸೇನಮಹೀಪತಿಯು ||
ವ್ಯಗ್ರದಿಕರೆದುನೀಪಿಂದಿನರಣಕೇಳಿ | ಗಗ್ರಣಿಯಾಗಿರೆಂದು ||೧೭||

ಆತನೊಡನೆಯತಿಬಲನುಯುಧಿಷ್ಠಿರ | ಭೂತಳೇಶನನುಸಾಹಸಿಗಾ ||
ಶ್ವೇತಸೆಂಬಾಯಿರ್ವರನಿರವೇಳ್ದುವಿ | ಖ್ಯಾತನಿರಲುಬಳಿಕಿತ್ತ ||೧೮||

ಮಗಧಮಹೀಪತಿಶತ್ರುಕ್ಷಯನೆಂ | ಬಗಣಿತವಿಕ್ರಮಯುತನ ||
ಬಗೆಗೊಂಡುಕರೆದಿಂದಿನದೊಂದುರಣಕೇ | ಳಿಗೆಕರ್ತನೀನಾಗೆಂದು ||೧೯||

ನಿರವಿಸಿಬಳಿಕವನೊಡನೆಸುಯೋಧನ | ಸುರಸಿಂಧುಜನನಿರವೇಳಿ ||
ಭರದಿಂದಾಸಮರಾಂಗಣಕುನ್ನತ | ಕರಿಯನಡರಿಬಂದನಾಗ ||೨೦||

ಇಂತುಬಂದಾಜಿರಂಗದೊಳಾಮಗಧಭೂ | ಕಾಂತಶಿರೋಮಣಿನಿಲಲು ||
ಅಂತರಿಸದೆದಳವಾಯರುಕೈವೀಸೆ | ತಿಂತಿಣಿಗೊಂಡಾಸೇನೆ ||೨೧||

ನೆಲನಾಕಾಶಮಂಡಲಗಳೆರಡ ಬಂದು | ಬಲುಪರಿಯಿಂತಾಗುವಂತೆ ||
ಅಲಸದೆಬಂದುತಾಗಿದುವುಮತ್ತಾಯಿರ್ವ | ರ್ಬಲಮತಿಸಾಹಸದಿಂದ ||೨೨||

ಇಂತುಬಂದು ಜೀವಕ್ಕೋಸರಿಸದೆ | ತಿಂತಿಣಿಗೊಂಡಾಬಲವು ||
ಅಂತರಿಸದೆ ತಾಗಿಬೀಳಲುಕಂಡುಕೋ | ಪಾಂತಕನಾಶ್ವೇತನೃಪತಿ ||೨೩||

ಕೆಕ್ಕಳಗೆಳಲಿರಥವನೂಂಕಲುಕಂ | ಡೆಕ್ಕಟಿಗಲಿಗಾಂಗೇಯ ||
ತೆಕ್ಕನೆಬಂದಿದಿರಾಗೆಕಂಡವನನು | ಲೆಕ್ಕವಿಲ್ಲದಶರದಿಂದ ||೨೪||

ಶ್ವೇತನುಬ್ಬಸಗೊಳಿಸಲುಕಂಡುಸುರಸಿಂಧು | ಜಾತನುನ್ನತಕೋಪದಿಂದ ||
ಏತರವಿಕ್ರಮಿಯಿವನೆಂದು ಶರದೊ | ಟ್ಟಾತಲೆಯನುಪರಿದೆಚ್ಚ ||೨೫||

ಅದನುಕಂಡಾವುಗ್ರಸೇನಮಹೀಪತಿ | ಯುಧಟೆಂದಬಹುಬಲಸಹಿತ ||
ಇದಿರಾಗಲುಕುರುಬಲವವಗಿದಿರಾಗಿ | ಹುದುಗಿಕಾದುವಸಮಯದೊಳು ||೨೬||

ವಾರಿಜಸಖಸಪರಾಂಭೋರಾಶಿಗೆ | ಸೇತುಬೀಡಿಗಾಬಲವು ||
ಸಾರಿಯಾಯಿರುಳುಕಳೆದುವುದಯದೊಳೆ | ಳ್ದಾರಣಧರೆಗೆಯ್ತಂದು ||೭೭||

ನಿಲಲುಜರಾಸಂಧನನಾನಿಜಸುತ | ಬಲಯುತಕಾಸುದಂತನಸು ||
ಬಲಕಧ್ಯಕ್ಷ್ನಸೀನಾಗೆಂದುಪೇಳಲು | ಗ್ಗಳನಾಗಿಬಂದವನಿಲಲು ||೭೮||

ಬಲಭದ್ರಸದನುಕಂಡತಿಕೋಪದಿಂದಾ | ಬಲಯುತಗಿದಿರಾಗಿನಿಂದು ||
ತಲೆಬಾಲಗೆಡಿಸುತಿರಲುಕಂಡುಗಾಂಗೇಯ | ನಲಿವರಿದವಗಿದಿರಾಗಿ ||೭೯||

ಅಂತಕಸಂತಿಕಾದುವಭೀಷ್ಮರಸುಪ | ರಂತಪನೆಂಬಭೂವರಸು ||
ಪಿಂತಿಕ್ಕಿನಿಲಲುಕಂಡಾಪಾಂಚಾಲಭೂ | ಕಾಂತನವನಿಗಡ್ಡಬರಲು ||೮೦||

ಕಂಡುಪರಂತಪನವನಿಗುಬ್ಬಸ್ತಮಾಡೆ | ಗಂಡರದೇವಫಲ್ಗುನನು ||
ಗಾಂಡೀವವಿಡಿದವಗಿದಿರಾಗಿಯಾತನ | ದಿಂಡುಗೆಡಹಿಯೆಸುವಾಗ ||೮೧||

ಇತ್ತಿತ್ತಿನಗಿದಿರಾಗೆನಗಣ್ಮಿಗ್ಮೆ | ಸುತ್ತುಶಲ್ಯನುತನ್ನರಥವ ||
ಒತ್ತಂಬದಿಂಕಣೆಗಳಕರೆದನುವಿಕ್ರ | ಮೋತ್ತಂಸಪಾರ್ಥನಮೇಲೆ ||೮೨||

ಕಡುಭರದಿಂದಾಶರಸಂಘಾತವ | ನಡೆಗಡಿಯಾಗಿಖಂಡಿಸುತ ||
ಒಡನಚ್ಚಾಶರತತಿರವಿಕಿರಣವ | ನಡಗಿಸಿತದನೇನೆಂಬೆ ||೮೩||

ಅಘಟಿಂದವರೀರ್ವರೆಸುವಬಾಣಾವಳಿ | ಯಿದುನೆಲನಿದುದೆಸೆಯೆಂದು ||
ಇದುನಭವೆಂಬಭೇದವಕಾಣಿಸದುರೆ | ಪುದಿದುದುನಿಮಿಷಮಾತ್ರದೊಳು ||೮೪||

ಅಂತೀರ್ವರುಕಾದುತ್ತಿರಲಾಕಾಮ | ದಂತನತ್ತಲುಮತಿಭರದಿ ||
ಅಂತಕಸಂತೆಕೆಳಲಿಬಲಭದ್ರಭೂ | ಕಾಂತನೊಳಗೆಕಾದುತಿರಲು ||೮೫||

ಅವನಪಿಂತಿಕ್ಕಿಯುಶನಿಘೋಷನೆಂಬಭೂ | ಧವನಿದಿರಾಗಲುಕಂಡು ||
ಅವನಸುಚಾರಣನೆಂಬೋರ್ವವಿಕ್ರಮಿ | ಜವನದಾಡೆಯೊಳಿಕ್ಕಿದನು ||೮೬||

ಆವೇಳೆಯೊಳಿನನಸ್ತಂಗತನಾಗ | ಲಾವುದ್ಧತಬಲವೆರಡು ||
ಓವದೆತೆಗೆದುತಂತಮ್ಮಪಾಳೆಯವೊಕ್ಕು | ತೀವಿದನಿದ್ರೆಯೊಳಿರಲು ||೮೭||

ಆ ಇನನುದಯದೊಳೆಳ್ದತಿಭರದಿಂ | ದಾಯಿರ್ವಕ್ಕದಸೇನೆ ||
ಆಯಿರ್ವರರಸುಗಳನುಮತದಿಂಕ | ಟ್ಟಾಯತದಿಂದೊಡ್ಡಿನಿಲಲು ||೮೮||

ದೊರೆದೊರೆಗಳುತಂತಮ್ಮಸೇನೆಯನುರು | ತರಕೋಪದಿಂಕೂಡಿಕೊಂಡು ||
ಸುರರಸುರರುತಾಗುವಂತೆಕಾದಿದರಾ | ಸುರತರುಪುಷ್ಪವಿಕ್ರಮದಿ ||೮೯||

ಅಸಮಯುದೊಳುಸತ್ಯಕನೆಂಬಭೂವರ | ನೋಸರಿಸದೆಯ್ದಿದಿರಾಗಿ ||
ಸಾಸಿಗವಜ್ರಬಾಹುವನುಕೃತಾಂತನಿ | ವಾಸಮಹೊಗಿಸಿದನಾಗ ||೯೦||

ಉತ್ತಮಸತ್ತ್ವಜಯದ್ರಥಭೂಪರ | ಸುತ್ತರಸುಕುಮಾರಕನ ||
ಒತ್ತಂಬದಿಂಕಾದಿಯಮಜವನಿಗೆಬೋನ | ವಿತ್ತನನಿಮಿಷಮಾತ್ರದೊಳು ||೯೧||

ಉಸುರಿಗುಬ್ಬಸವಮಾಡುವವಜ್ರಮುಷ್ಟಿಯ | ನಸಮವಿಕ್ರಮಿವಸುಪಾಲ ||
ದೆಸೆಯಾಳ್ವರುದಿವಿಜರುಮೆಚ್ಚುವಂದದಿ | ವಸುಧೆಯೊಳಗೆನೆರಪಿದನು ||೯೨||

ಅಮಿತವಿಕ್ರಮಿನಕುಲನನುಭೂರಿಶ್ರವ | ಸಸುರಾಂಗೆಯ್ಯುತ್ತಿರಲು ||
ಸಮಸಂಭವಸಾಹಸದಿಂವಿತಥನನಿ | ಕ್ರಮದಿಂವಿಗೆಮಾಡಿದನು ||೯೩||

ಓರೋರ್ವರೊಳುಕೋಪವಿದೃಷ್ಟದ್ಯುಮ್ನ | ಭೂರಮಣೇಶನುಕೃಪನು ||
ಓರಣವಾದತಿಸಾಹಸದಿಂದು | ತ್ತಾರಣಕೇಳಿಯೊಳಿರಲು ||೯೪||

ಆಪ್ರಸ್ತಾವದೊಳಾದಿತ್ಯನಪರಾ | ಶಾಪ್ರಮದೆಯುಕೂಡಲೆಂದು ||
ಸುಪ್ರೇಮದಿನೆಯ್ದಿಪಾಳೆಯಕಪ್ರತಿ | ಮಪ್ರತಾಪಿಗಳೆಯ್ದಿದರು ||೯೫||

ಪ್ರತ್ಯಂತಪೃಥ್ವೀಪಾಲಕಜನತಿಮಿರಾ | ದಿತ್ಯರುದ್ಧತವಿಕ್ರಮಿಗಳು ||
ಅತ್ಯಂತಧೀರಲಲಿತರೊಪ್ಪಿದಸುಕೃತ | ಕೃತ್ಯಕೌಂತೇಯಭೂವರರು ||೯೬||

ಇದುಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗಿದುಇಪ್ಪತ್ತೇಳಾಶ್ವಾಸ ||೯೭||

ಇಪ್ಪತ್ತೇಳನೆಯ ಸಂಧಿ ಸಂಪೂರ್ಣಂ

# ೨೫ ಅಭಿಮನ್ಯು ಕಾಳಗಸಂಧಿ



ಉರ್ವಿಕೆಯೊರ್ವಿದಸರ್ವಕರ್ಮಭಟರಗರ್ವ | ಪರ್ವತಕಶನಿಯೆನಿಸಿದ ||
ಸರ್ವಗೀರ್ವಾಣವಂದಿತನೇಮಿಜಿಸಪಗೆ | ಸರ್ವಾಂಗವಿನಮಿತನಹೆನು ||೧||

ಆಯಿರುಳೊಳುನಿದ್ರಾವಮುದ್ರಿತರಾಗಿ | ಯಾಮಿನಿಸುದಯದೊಳೆಳ್ದು ||
ಭೂಯುವತೀಶರೀರ್ವರುಧುರಧರೆಯೊಳ | ಗಾಯತವಾಗಿನಿಂದಿರಲು ||೨||

ಕುರುಪತಿಯುಸುರವಿದ್ಯೋಪೇತಸಂಸಪ್ತ | ಕರನುಕರೆದುನೀವಿಂದು ||
ಸರಸನುನೆಲಕಿಕ್ಕಿಯೆಂದುಬೆಸಸಲಾ | ಧುರಧರೆಗವರೆಯ್ತಂದು ||೩||

ವೆಸೆಯಾಗಸಧರಣೀಮಂಡಲವೆಂಬ | ಹೆಸರನರಿಯಬಾರದಂತೆ ||
ಮುಸುಕವಿಂಮಾಯಾಬಲವನುಬೇಗನಿ | ರ್ಮಿಸಿದರಿಂತಾಸುರವಾಗಿ ||೪||

ಒಮ್ಮೆಕಾಲಾಳಪೌಜೊಮ್ಮೆವಾಜಿಯಪೌ | ಜೊಮ್ಮೆವರೂಥದಪೌಜು ||
ಒಮ್ಮೆವಾರಣದಪೌಜಾಗಿನೋಳ್ಪರಕಣ್ಗೆ | ಗುಮ್ಮನಪ್ಪಂತೊಡ್ಡಿದರು ||೫||

ಸಿಂಗಗಳನುಶರಭಗಳನುಪುದಪರಾ | ತಂಗಮಾದಿಯಕ್ರೂರಮೃಗದ ||
ಜಂಗುಳಿಗಳನುಹೂಡಿದಮಾಯದತೇರ | ಸಂಗರದೊಡ್ಡೊಪ್ಪಿದುದು ||೬||

ಆಕಾಶವನುಚುಂಬಿಸುವಾನೆಯಪೌ | ಜಾಕಲ್ಕಿಯಡರ್ವವಾಹನದ ||
ಆಕಾರವನೇಳಿಪಕುದುರೆಯಪೌಜು | ಭೀಕರವಾಗಿತೋರಿದುದು ||೭||

ಕೆಕ್ಕಳಗಣ್ಣಕೆದರ್ವಕುರುಳಗಗ | ಸಕ್ಕೆಬೆಳೆದುರಂಜಿಸುವ ||
ರಕ್ಕಸರೂಪಿನಕಾಲಾಳ್ಗಳಪೌಜ | ಸಿಕ್ಕಿದರದ್ಭುತವಾಗಿ ||೮||

ಮುಸುಕಿದಿನಿಂತುಮಾಯಾಬಲವನುನಿ | ರ್ಮಿಸಿಮೋಹರವಾಗಿನಿಲಲು ||
ಅಸಮಪರಾಕ್ರಮಿಯುತ್ತರದನರಿದಾ | ವೆಸೆಗೆರಥವನೂಂಕಿದನು ||೯||

ಪೂರಾತಾವಮಾಯಾಸೇನೆಮುತ್ತಾ | ಸೀರನೆಚ್ಚೊಂದಂಬಿನಿಂದ ||
ಪಾರಿದುದಾಪಾರ್ಥಗೆಭೂಲೋಕದ | ಗಾರುಗಲಿಗಳುಪಾಸಟಿಯೆ ||೧೦||

ಜಳಿಕವರುದ್ಧತಮಪ್ಪಸೈನಿಕವನು | ಬಲಯುತನರನಾರ್ದೆಸಲು ||
ಇಳೆಗುರುಳ್ವಟ್ಟಿಯಾಗಸಕೆನೆಗೆವತಲೆ | ಗಳಬಳಗಂಗಳೊಪ್ಪಿದುವು ||೧೧||

ಅದನುಕಂಡಾಶಕ್ರಸೆರುವಿದ್ಯಾಗರ್ವ | ದಧಟಿಂದಮೋಲ್ವಾಯಲಾಗ ||
ಮುದವದರಾತಿಪದ್ರಾವಣಸವರಸು | ಸದೆವುತಿರಲುಬಳಿಕಿತ್ತ ||೧೨||

ಪೊಗಲುವಿಲಯುಭೈರವಗಳವಲ್ಲದಿಂ | ತಗಣಿತಮುಪ್ಪಸೇನೆಯನು ||
ಸೊಗಯಿಪಚಕ್ರದಾದವಿಸೊಡ್ಡಿದನಾ | ವಿಗಡವಿಕ್ರಮಿಯಾದ್ರೋಣ ||೧೩||

ಅದನುಕಂಡಂತಕಸೂನುಪುರಾಂತಕ | ರದಿವದಿಂತಿಪನುಭೇದಿಸುವ ||
ಅಧಟನರ್ಜುನನುರಕ್ಕಸರನಾಹಾಸೇನೆ | ಗಿರಿರಾಜನಿನ್ನಾರುಮಿಲ್ಲ ||೧೪||

ಎಂದುನುಡಿವಸಮಯದೊಳಾಪಾರ್ಥನ | ನಂದನನಾ ಅಭಿಮನ್ಯು ||
ಬಂದುಪುರಾಂತಕಧರ್ಮಸುತರ್ಗಭಿ | ವಂದಿಸಿಬಳಿಕಿಂತುನುಡಿದ ||೧೫||

ನರನಲ್ಲದೀಚಕ್ರವ್ಯೂಹವಪರಿ | ಹರಿಸುವೊಡಾರಿಲ್ಲವೆಂದು ||
ಒರೆಯಬಹುದೆನಗೀಚೆನನನುನೀವು | ಪರಿಪಾಲಿಪುದೆಂದೆನಲು ||೧೬||

ಮಗನೆನಿನ್ನಮೊಗವನುನೋಡುತಾಯನು | ನಗರಿಯುಂದದಿಘೂರ್ಣಿಸುವ ||
ಅಗಣಿತಮುಪ್ಪೀಚಕ್ರವ್ಯೂಹಕೆ | ಹೊಗಿಸುವುದುಚಿತವೆನಮಗೆ ||೧೭||

ತರುಣಕೇಳಿದನುಹೊಗಲುಬಹುದೆಂತೆನು | ತಿರುಗಬಾರವದರಿಂದ ||
ಪರಿಹರಿಸುವುದೀನುಡಿಯನೆನಲುಕೇಳಿ | ಯೊರೆದನಿಂತೆಂದಭಿಮನ್ಯು ||೧೮||

ಕುಸುರಿದರಿವೆನುಕಕ್ಕಸದಿಂದಿದಿರಾ | ದಸುಹೃತ್ಸೇನೆಯೆಲ್ಲವನು ||
ಶಿಶುವಿವನೆನವೇಡಗಜಘಟೆಯನುಸಿಂಗ | ಪಸುಳೆಹೊಗುವುದಕಂಜುವುದೇ ||೧೯||

ಕಿರಿಯನಗಸ್ತ್ಯನೀಂಟನೆಯಂಬುಧಿಯನು | ತರಿಯನೆಕುಲಿಶಪದ್ರಿಯನು ||
ನೆರೆಚಿಕ್ಕವನಿವನೆನವೇಡಬರಿಕೆಯ್ವೆ | ನರಿಕೆಯರಿಪುವಾಹಿನಿಯ ||೨೦||

ದಿಟಗಲಿತನದಿಂದಾಕೌರವನಬಹು | ಕಟಕದೊಳಗೆಮುಸುಕಿದರ್ಗೆ ||
ಪಟುಭಟರುಗಳನುನ್ನತಬಲದಿಂದನಂ | ಕಟಗೊಳಿಸದೆಸುಮ್ಮನಿಹನೇ ||೨೧||

ಚಂಡಪರಾಕ್ರಮದಿಂದಿದಿರಾದವು | ದ್ದಂಡಮಂಡಳಿಕರೆಲ್ಲರನು ||
ಗಂಡುತನದಿಹೊಕ್ಕಾತಲೆಗಳಹೊಡೆ | ಸೆಂಡಾಡದೆಸುಮ್ಮನಿಹನೇ ||೨೨||

ಹಿಂದೆನಾಲ್ಕೈದುದಿನಸದಿಂದನಿಮ್ಮಕೈ | ಯಿಂದಸತ್ವವಾಹಿನಿಗೆ ||
ಇಂದುಸೂರ್ಯರಡಿಯನುಕೊಲ್ಲದಿರ್ದೊಡೆನಿಮ್ಮ | ನಂದನನೇಅಭಿಮನ್ಯು ||೨೩||

ಎಂದಾಗ್ರಹದಿಬೆಸನವೇಡಿದನ್ನಿಜ | ನಂದನನಾರಂಪಧರನ ||
ಕಂದನಿಂತೆಂದನುನಿನ್ನಕಳುಹೆನಿನ್ನ | ತಂದೆನಮ್ಮೊಳುನೋಯದಿಹನೇ ||೨೪||

ಎಂದುನುಡಿಯಲಿಂತೆಂದನರ್ಜುನಗಾನು | ಕಂದನಾಗಿದೇವನಿಮಗೆ ||
ಕಂದನಲ್ಲವೆಭಿನ್ನವಪ್ಪನುಡಿಯನಿಂ | ತೆಂದುಬಾಯ್ಬಿಟ್ಟಾಡುವರೇ ||೨೫||

ಪವನಾತನುಜುರಿಹಿಮ್ಮೆಟ್ಟಿದೊಡಾನಿಂದು | ಕುಲಜನಲ್ಲವೆನಿಜಮಾತ್ರ ||
ಜಲಜೋದರಸಹಜಾತೆಯಾದುದರಿಂ | ನಿಲಿಸುವುದುಚಿತವೆನಿಮಗೆ ||೨೬||

ಅಡ್ಡಾಕಿಲ್ಲದೆಯರಿಸೇನೆಯೊಳಿರ್ಪ | ದೊಡ್ಡಾದೊಡ್ಡಿಗಳಡಗ ||
ಒಡ್ಡಿಸುವೆನುಭೂತಕೆಕೊಡುವೆನೆನಸು | ಗುಡ್ಡೆಣಿಕೆಯುಮಾಡದರಸಾ ||೨೭||

ಕುರಿದರಿಯದೆಮಾರ್ಣೆಸುಕುರುಭೂವರ | ಸರಿಕೆಯುಮುಕ್ಕಳಿಸ್ಲಿದಸು ||
ಒರಿವಾತಲ್ಲಪಾಲಿಸುಬೆಸೆನಸುಗುಜ್ಜು | ಗುಮುಕವಾಡಪೆನಾನಸೇಂದ್ರ ||೨೮||

ಮದವದರಾತಿಮಹೀಶರನೆಲ್ಲರ | ಸದಿರಿಸದೊಡೆನಿನ್ನ ಸುತನೇ ||
ತೊದಲಲ್ಲ ವೀನುಡಿಕೊಡುಬೆಸನಸುನನ | ಗೆದೆಹಾರವಾಡವಿಶೇಶಾ ||೨೯||

ತಲೆವೊದಲಿಲ್ಲದಚಕ್ರವ್ಯೂಹಮ | ನಲಸದೆಪೊಕ್ಕಳ್ಳಿರ್ಪ ||
ಕಲಿಗಳನೆಲ್ಲರನೊಂದುನಿಮಿಷದೊಳು | ತಲೆಬಾಲಗೆಡಿಸೆನಿಮ್ಮಾಣೆ ||೩೦||

ಕಳಹಿಕಳುಹದಿರ್ದೊಡೆಮಾಣೆತದ್ವ್ಯೂಹ | ದೊಳಹೋಗವೆನಿಲ್ಲ ಸಲ್ಲ ||
ಉರ್ವುದುಕೀರ್ತಿಯುಳಿವುದೊಡಲೆಂದಾ | ತುಳಿಲಾಳಾಥರ್ವಸುತಗೆ ||೩೧||

ಎನುತತ್ಯಾಗ್ರಹದಿಂಬೆಸನಸುಬೇಡೆ | ಮನವಲ್ಲದಮನದಿಂದ ||
ಜನತಾಧಿಪಸಿತ್ತಸುಕೇಡಿಗೆಬುದ್ಧಿ | ಯನಿನತೋಷವಪ್ಪುದಿಲ್ಲವಾಗಿ ||೩೨||

ಇಂತುಬೆಸನಕೊಂಡಾಸುಕುಮಾರಕ | ಸಂತಕನಿಥಕೋಪಯುತನು ||
ಸಂಕೋಪದಚಿತ್ತದಿಂದತಿವೇಗದಿ | ಸಂತಃಪುರಕೆಯ್ದಂದು ||೩೩||

ರಣಕೇಳಿ ಶೃಂಗಾರಂಗೆಯ್ವೆನೆಂದೆಂ | ಬಣಿಕೆಯಿಂಬೀಡಿಗೆಬಂದ ||
ಅಣುಗನಕಂಡುಸುಭದ್ರೆಕಣ್ಣೊಳಗಶ್ರು | ಕಣವಿಟ್ಟುನುಡಿದಳಿಂತೆಂದು ||೩೪||

ಎಳೆಬಾಲಕನಿನ್ನ ಸರಿಯರನಕ್ಕಟೋ | ಳಲಸದೆಬಾಲಕೇಳಿಯೊಳು ||
ಒಲಿದುದಿನವನೂಂಕುವಹರೆಯದೊಳೀ | ಬಲುಗೆಲಸವನೆಣಿಸುವರೇ ||೩೫||

ಬಂದುಗಲ್ಲವತಿಮಿಯಲುಹಾಲುಬಳಿಕಿ | ನ್ನೊಂದುಗಲ್ಲವಸುತಿಮಿಯಲು ||
ಬಂದಾಗಿನೆತ್ತರುಬಪ್ಪಕಾಲದೊಳೀ | ಯಂದಮನಿರದೆಣಿಸುವರೇ ||೩೬||

ಘಳಿಪೆರೆಬೆಳೆವಂದದಿಸುತ್ತಮುಮಪ್ಪ | ಕಳೆಯಕಲಿವಕಾಲದೊಳು ||
ಪ್ರಳಯರುದ್ರಂಗಳವಲ್ಲದರಣಕೇಳಿ | ಗಲಸದೆಪೊಗಲೆಣಿಸುವರೇ ||೩೭||

ಇರಿದುಮೆರೆದುಪೊಕ್ಕು ಪೊರಮಡಬಲ್ಲ | ಅರಿಕೆಯಃಧಟರಿರ್ದಂತೆ ||
ದುರುದುಂಬಿತನದೊಳಿಂತಿದನೆಣಿಸುವರೇ | ಕಿರುವರೆಯುದ್ದೊಳಲೆಮಗನೇ ||೩೮||

ಕಂದಕೇಳೀಹೆತ್ತಬಸುರಿಗೆಬೇಗೆಯ | ನೊಂದಿಸುವ್ರದುನೀತಿಯುಲ್ಲ ||
ಎಂದೆಂಬನಿಜವಾತೆಯುನುಡಿಗೇಳಿವು | ತ್ರಿಂತೆಂದುಮಾತನಾಡಿದನು ||೩೯||

ಏನೊಂದುಕಿಡಿಕಿರಿದಾಪೊಡೆದಂದಹ್ಯ | ಮಾನವನುರೆಪಾಪದಿಹುದೇ ||
ಕಾನನವನುಸಿಶ್ಚಯದಿಂದದಕನು | ಮಾನನೇತಕೆನಿಜಜನನಿ ||೪೦||

ಎಕ್ಕಟಿಯೊಳುಪೊಕ್ಕುಕುರುಭೂಪಾಲನ | ಮಕ್ಕಳುಗಳನೆಲ್ಲರನು ||
ಮಿಕ್ಕವಾತೇನಲೆತಾಯೆಜವಂಗುಣ | ಲಿಕ್ಕದಿಹನೆಯಭಿಮನ್ಯು. ||೪೧||

ಎಲೆತಾಯೆನಿನ್ನಕುಲದಕೌಂತೇಯರ | ಕುಲದಸೀಳಿಗೆಯುರಸುಗಳ ||
ತಲೆಗೆಹರಲೆಬಾರದಿಹುದೇರಣಕೇಳಿ | ಗಲಸಿಹಿಮ್ಮೆಟ್ಟಿದೊಡಾನು ||೪೨||

ಬಾರ್ತೆಗೆಸಲ್ಲದಬದುಕುವಡೆದೇಹ | ದಾರ್ತಕ್ಕೆಮನವತಂದಿಕ್ಕಿ ||
ಕೀರ್ತಿಗೆಬದುಕುವ್ರವನುಬಿಟ್ಟಾಅಪ | ಕೀರ್ತಿಗೆಬದುಕಲುಬಹುದೇ ||೪೩||

ಇಂತುನುಡಿದುಬೀಡನುಪೊರಮಟ್ಟತಿ | ಸಂತಸದಿಂತೇರನೇರಿ ||
ಅಂತಕನಿಭಕೋಪದಿಂಬಹುವಿಧಶಸ್ತ್ರ | ಸಂತತಿಯನುಸಂಹರಿಸಿ ||೪೪||

ಕೊನೆವಿಾಸೆಯಜೆನ್ನಗಂಡರೆಂಪೆಸಿಸುವ | ಏನುತವಿಕ್ರಮುಸಂಯುತರ ||
ತನಗೊಂದೋರಗೆಯಾದವರನುಮನ | ದನುರಾಗದಿಂದಾಯ್ದುಕೊಳಲು ||೪೫||

ತರುಣತರಣಿತಮದೊಡ್ಡಸಂಹರಿಸುವ್ರೊ | ಡುರುತರಮುಪ್ಪರಥವನು ||
ಕುರುಹುದಿನೇರುವಂದದಿನಾಸುಕುಮಾರ | ನಿರದೆರಥವನೇರಿದನು ||೪೬||

ಸಾಸಿರ್ವರುರಥಿಕರುತನ್ನೊಡವರೆ | ಕೇಸರಿನಿಜಗುಹೆಯಿಂದ ||
ಆಸುರತರಮಾಗಿಪೊರಮಡುವಂತತಿ | ಸಾಸಿಗನಂತೆಯ್ದಿದನು ||೪೭||

ರಣನಿಸ್ಸಾಣದರವವಮುಣ್ಮೆಭೋರೆನೆ | ಯೆಣಿಕೆಗಗೋಚರವಾದ ||
ಅಣಿಯುರವನುಕಾಣುತಣ್ಮುತವೀರಾ | ಗ್ರಣಿಯಭಿಮನ್ಯುನಡೆದನು ||೪೮||

ಆದರಬಾಯೊಳಗಡಲೊಳಗಿರ್ದಹುಲಿಯಂತೆ | ಕದನಕಠೋರಕುಂಭಜನು ||
ಇದುಚಿತ್ರವಿಾಬಾಲಕನೀವ್ಯೂಹಕೆ | ಯುದಿರದೆನಡೆತಹುದೆನುತ ||೪೯||

ಮುಂದಕೆತನ್ನೊಂದೇರಥವನುನೂಂಕಿ | ಬಂದಿದಿರೊಳಗಿಂತುನುಡಿದ ||
ಸುಂದರನುಭಟರುಪಲಬರಿರ್ದಂತದಿ | ಕಂದಕೇಳ್ನಿನ್ನನಟ್ಟುವರೇ ||೫೦||

ಪುಗಲಳವಲ್ಲಥವಾಮಿಾರಿಪೊಕ್ಕೊಡೆ | ಮಗುಳಹಡೆಯದದರಿಂಪ ||
ಮಗನೆಯಸಾಧ್ಯಮಿಂತಿದುತಿರುಗೆನೆನಸು | ನಗುತನುಡಿದನಿಂತೆಂದು ||೫೧||

ಬಾಲಕನೆಂದುನುಡಿಯಬೇಡಗುರುವೇ | ಬಾಳಿಯಬಲುಬಿಂಜವನು ||
ಬಾಲವಾರಣಪೊಕ್ಕುಪಡಲಿಡುವಂದದಿ | ಬಾಳುಗೆಡಿಪೆನಿಂದುಬಲವ ||೫೨||

ತರುಣಕೇಸರಿಗಿದಿರೇವಾರಣದವೋ | ಹರವೆಂದುಕಡುಭರದಿಂದ ||
ಗುರುಪಾದಮೂಲಕರ್ಚನೆಪುಷ್ಪಮಾತ್ರವ | ಸುರುಮುದದಿಂದವಧರಿಸಿ ||೫೩||

ಎಂದಾತಸತೇರತೇಜಿಯಸೆಚ್ಚಲ್ಲಿ | ನಿಂದಿರ್ದಸಟುಭಟರುಗಳ ||
ಗೊಂದಣವನುತಲೆಬಾಲಗೆಡಿಸಿಶರ | ಸಂದೋಹದಿನೆಚ್ಚನಾಗ ||೫೪||

ಮುಂದಕ್ಕೆನಡೆತಂದಾಚಕ್ರವ್ಯೂಹ | ದೊಂದೆಡೆಯೊಳುನಿಂದಿರ್ದ ||
ಸಂದಸುಭಟಕೃಪಕೃತವರ್ಮರಕಂಡು | ನಿಂದುನಿಟಿಲನೇತ್ರನಂತೆ ||೫೫||

ಕೆಕ್ಕಳಗೆಳಲಿಯವರಸಾರಥಿಸೊಗ | ಕಿಕ್ಕಿದಶ್ವಮನಾನೆಲಕೆ ||
ಇಕ್ಕಿಯವರನಾಣ್ಚಿಸಿರಿಪುವಾಹಿನಿ | ಯುಕ್ಕಮುರಿದ ಮುಂದಕೆಯ್ದಿ ||೫೬||

ದಿಂಡುರುಳಿಸಿಲಗ್ಗೆಗೊಂಡದ್ದಣಪಸುಭೂ | ಮಂಡಲಕಾರಿಪುನೃಪರ ||
ಮಂಡೆಯನಾಮಕ್ಕಳಾಟಿಕೆಯಭಿಮನ್ಯು | ಸೆಂಡಾಟವನಾಡಿದನು ||೫೭||

ಸಾಲಗೊಂಡೊಡ್ಡಿದಗದುರ್ಗಿನೊಡ್ಡಿಯನಿನಿ | ಸಾಳೋಚಿಸದೆಸುವಂತೆ ||
ಲೀಲೆಯೊಳೊಡ್ಡಿದೊಡ್ಡಣವನೆಚ್ಚಾಕಲಿ | ಬಾಲಕೇಳಿಯತೋರಿದನು ||೫೮||

ನಿರುತದಿವ್ಯೆಶಾಖಸ್ಥಾನದಿನಿಂದು | ಭರದಿಸವ್ಯಾಪಸವ್ಯದೊಳು ||
ಉರುವಣೆಯಿಂದೆಸೆಶಾರಿಪುಸ್ಯೆನಿಕ | ವುರುಳ್ದುದುನಿಮಿಷಮಾತ್ರದೊಳು ||೫೯||

ತುತ್ತುರುಬಾಗಿನಿಂದಾಕೌರವಭೂ | ಪೋತ್ತಂಸಸನೇನೆಯೆಂಬ ||
ವೊತ್ತದಬಸವತನ್ನಸ್ತ್ರಕುಠಾರದಿ | ತತ್ತರದರಿದುಬಿಸುಟನು ||೬೦||

ಉರುವೀರರಸಪೂರಿತರಿಪುಸೇನಾ | ಶರಧಿಯನಾ ಅಭಿಮನ್ಯು ||
ವರಕೋಪಾನಲನೆಂಬವಾದವನಿಂ | ಹಿಂದಾಗಿಯೆಹೀರಿಸಿದನು ||೬೧||

ಮಾರಿಯಂದದಿಮುಳ್ಳುಏಸಂದವಿಕಾಲ | ಭೈರವನಂದದಿಬಲವ ||
ವೀರನವನುಪೊಕ್ಕುಪಡಲಿಡುವಂತೆಸಂ | ಹಾರವನಿರದೆಮಾಡಿದನು ||೬೨||

ಅನ್ನೆಗವಮಾ ಅಭಿಮನ್ಯುಚಕ್ರವ್ಯೂಹ | ಮುಂನೆರೆಹೊಕ್ಕುಸಿಕ್ಕಿದನು ||
ಇನ್ನವನಸುತಿರುಗಿಸಿಕೊಳಬೇಕೆನು | ತುನ್ನತವಿಕ್ರಮಯುತರು ||೬೩||

ಭೀಮನಕುಲಸಹದೇವಪಾಂಚಾಲರು | ದ್ದಾಮಸತ್ತ್ವರುನಡೆತರಲು ||
ಆಮೊನೆಗಿದಿರಾಗಿಗುರುತರಣಿಜಮಾದ್ರಿ | ಭೂಮಿಪರುಗಳುನಿಂದಿರಲು ||೧೪||

ಬಳಿಕಿತ್ತಲಾಸುಕುಮಾರಕನಾಬಲ | ದೊಳಹೊಕ್ಕುರಿಪುನೃಪರುಗಳ ||
ತುಳಿವುತಿರಲುಬಂದಾಭೀಷ್ಮರುಮನ | ದಳಲಿಂದಿಂತುನುಡಿದರು ||೧೫||

ಏಸಣ್ಣನಿನ್ನತಂದೆಗಳಾಪುತ್ರಸಂ | ತಾನಕ್ಕರ್ಜನನಿನ್ನ ||
ಏನೆಂದೆನ್ನದೆಚಕ್ರವ್ಯೂಹಕೆ | ಯಾಸದಟ್ಟುವುದುಸಮ್ಮತವೇ ||೧೬||

ಮುಂದರಿಯದೆಕಳುಹಿದೊಡೇನುನೀನಿನ್ನು | ಹಿಂದಕೆಯ್ದಲುವಶವಲ್ಲ ||
ಕಂದಕೇಳದರಿಂದೆನ್ನಹತ್ತಿರಕೆ | ಯ್ತಂದೊಡೆನಿನ್ನಸೆಯ್ದುಸುವೆ ||೧೭||

ಎಂದಭೀಷ್ಮರಿಗಿಂತೆಂದನೆಲೇಯಜ್ಜ | ಸಂದಣಿಸಿದಪೌಜಿಗಳ್ಕಿ ||
ಹಿಂದಕ್ಕೆತಿರುಗಲುಲಜ್ಜೆಯಲ್ಲವೆಕೇ | ಳಿಂದುಕುಲದರಾಯರಿಗೆ ||೧೮||

ಎನೆಕಣ್ಣೀನೀರತುಂಬಿಯಾನದಿಯನಂ | ದನನತಿದುಃಖಿಸುತಿರಲು ||
ಅನುಮಾನಿಸದಾತನತೇಜಿಮ | ಮುನಿದೆಚ್ಚುಮುಂದಕೆನಡೆದು ||೧೯||

ಹದಗೆಯ್ದುರಕ್ತೋದಕದಿರಣಧರೆಯೊಳು | ಮದವದರಾತಿಭೂವರರ ||
ಒದವಿದಬೆಳೆಯನಾಬಿಲ್ಲಬಿನ್ನಾಣದಿ | ಬೆಸೆಯಹಿರಿದುಹಾಕಿದನು ||೨೦||

ಮೃಗದೊಡ್ಡಮುರಿವಭಂಡಿಯಹುಲಿಯಂದದಿ | ನಿರದೆರಥವಹರಿಯಿಸುವಾ ||
ಧುರಗಲಿಯನುಕಂಡುಕುರುಭೂಪಾಲನ | ವರಸುತನಾಲಕ್ಕಣನು ||೨೧||

ಭರದಿಂತಾಗಲುಭೈರವನಂದದಿ | ಸುರವಣೆಯಿಂದಭಿಮನ್ಯು ||
ಸರಳಸರಿಯನುಸುರಿದುಮತ್ತಾವೀರ | ಸುರುತರಮಪ್ಪಸೇನೆಯನು ||೨೨||

ವಾರಣಮಿವುವಾಜಿಯಿವುಭಟತತಿಯಿವು | ತೇರಿವುಯೆಂಬಭೇದವನು ||
ಆರರಿಯದತೆರದಿಂಭಿನ್ನಭಿನ್ನವ | ನಾರಣಧೀರಮಾಡಿದನು ||೨೩||

ಈರೀತಿಯಿಂತನ್ನಸೇನೆಗೆಕದನಕ | ಠೋರಸುಬ್ಬಸಮಾಡುತಿರಲು ||
ಆರಿಬೊಬ್ಬಿರಿವುತಬಂದಿದಿರಾದನು | ಕೌರವನೃಪನಂದನನು ||೨೪||

ನೆಲನಾಗಸವೆಣ್ದೆಸೆಯೆಂಬಭೇದವ | ನೆಲೆಯನರಿಯಬಾರದಂತೆ ||
ಬಲಯುತನುರುಬಾಣವ್ರಾತವನಾ | ಕಲಿಯುತಲೆಗೆಸೂಸಿದನು ||೨೫||

ಅದನುಕಂಡತಿಕೋಪದಿನಾಶರಗಳ | ನುದಿತವಿಕ್ರಮಿಯಭಿಮನ್ಯು ||
ಪವಪಿಂದೊಂದೇಶರದಿಂದಸಲೆಖಂಡಿ | ಸಿದನದನೇನಬಣ್ಣಿಪೆನು ||೨೬||

ಮತ್ತೊಂದುದಿವ್ಯಶರವತೆಗೆದಾಸಾಹ | ಸೋತ್ತಂಸಸುಲಕ್ಷಣಸ ||
ಉತ್ತಮಾಂಗವನುದ್ಧದವರುವೆುಚ್ಚುವವೊಲು | ಕತ್ತರಿಸಿಯೆಹಾಕಿದನು ||೭೭||

ಮಿರುಪರುಣಾಬ್ಜವನಾನಿಜವೈರದಿ | ಹೆರೆಕರ್ಚಿಹಾರುವಂದದೊಳು ||
ಸೆರೆಗಲಿಯೆಚ್ಚಕವಲ್ಗಣೆಪಾರಿತು | ಪರಿದರಿಭಟನಶಿರವನು ||೭೮||

ಎಕ್ಕತೂಳದಬಂಟನಾಫಲ್ಗುನಸೂನು | ಲಕ್ಷಣನಸುಭೂತಳಕೆ ||
ಇಕ್ಕಲವನತಮ್ಮಂದಿರುಸೂರ್ವರು | ತಕ್ಕಿಸಿಂದವಗಿದಿರಾಗೆ ||೭೯||

ಕಡುಮುನಿದನಿಬರತಲೆಗಳನೆಲ್ಲನ | ನೆಡೆವಿಡದೊಂದೇಶರದಿ ||
ಕಡಿಯಲಪರಮಸ್ತಕಚಂದ್ರಲೋಕದ | ಪಡಿಮಾಡಿದುದಾಗಸವನು ||೮೦||

ಆಕಲಿಯೆಚ್ಚಬಾಣದಿಕೌರವಧರ | ಣೀಕಾಂತಸುತರಮೌಳಿಗಳು ||
ಆಕಾಶದೊಳುಕೆದರ್ದುವುಖುರಧನುಕೆದ | ರ್ದಾಕಾರಮನನುಕರಿಸಿ ||೮೧||

ಕೌರವಸುತರನಾಹವಮಂಟಪದೊಳ | ಗಾರ್ಯೆಯುದಮರಾವತಿಯು ||
ನಾರಿಯರಿಗೆಮದುವೆಯಮಾಡಿದನಸಿ | ಧಾರಾಪೂರ್ವಕದಿಂದ ||೮೨||

ಇಂತವರನಸೆಲದೊಳಗೆನೆರಪಿಭಟ | ಸಂತಾನದೊಳಗೊಂದುಳಿಯದೆ ||
ಮುಂತಕ್ಕೆಬನ್ನಿಮೆನುತವೀರವಸಿತಾ | ಕಾಂತನುಸಿಂಪಿರಲಾಗ ||೮೩||

ಭೀಕರಮಪ್ಪೀನಿಷ್ಠುರಚಕ್ರಪ | ತಾಕಿನಿಯೊಳಗೀಪಸುಳೆ ||
ಏಕಕ್ಷೋಹಿಣಿಯಸುಕೊಂದನೆಂದುಮೋ | ಲಾಕಲ್ಪಜರುಕೊಂಡಾಡೆ ||೮೪||

ಅನಿತರೊಳಾಕುರುಧರಣೀಪತಿತನ್ನ | ತನುಜಶತಕವಳಿದುದಕೆ ||
ಮನದೊಳಳಲತಾಳಿಪಿರಿದಾದಚಿಂತೆಯ | ನನುಕರಿಸುತ್ತಿರಲಾಗ ||೮೫||

ದೇವಬಿನ್ನಪಮಾಬೆಸನನುನಸಗಿರ | ದೀವುದೆನುತಸಿಂಧುನೃಪತಿ ||
ಆವಿಭುವಿಂದಾಬೆಸನಹಡೆದುಬಂ | ದೋವದೆತಾಗಿದನಾಗ ||೮೬||

ಪೊಣೆದೋರೋರ್ವರನೆಚ್ಚಂಬುಗಳುಮಧ್ಯ | ರಣರಂಗದೊಳುಕತ್ತರಿಸುತ ||
ಬಣಬೆಯನೊಡ್ಡಿದಂತಾಗಲುಕಪಿಕೇತು | ವಣುಗನಕೈಯಂಬುತೀರೆ ||೮೭||

ಕೊಂಬುಮುರಿದಕರಾನೆಯತೆರದಿಂ | ದಂಬುತೀರಿಯಭಿಮನ್ಯು ||
ಬೆಂಬಿಳದಿರೆಕಂಡುಸೈಂಧವನೆನಗಿ | ನ್ನಿಂಬಾದುದುಕಾರ್ಯವೆಂದು ||೮೮||

ಉರುವಬಾಣದಿನೆಸಲಾಕುವರನತಲೆ | ಪರಿದುಪವನಪಥಕೊಗೆಯೆ ||
ಮಿನುಗುವಬೀರಸಿರಿಯಮಣಿಮೂಡಕೆ | ಯಿರಿಸಿದಕಳಶದಂತಾಯ್ತು ||೮೯||

ಅಂಬರಸತಿಯುವನೀದೇವತೆಗೆಮ | ನಂಬುಗುವಂತರ್ಜಿಸಿದ ||
ಅಂಬುಜವೇನೆಬೀಳ್ದುದುತದ್ವೀರಾವ | ಲಂಬಿಯುಲಲಿತೋತ್ತಮಾಂಗ ||೯೦||

ಆಸಮಯದೊಳಾಗಸದೊಳೀಕ್ಷಿಸುವಸು | ರಾಸುರರಾಕುಮಾರಕನ ||
ಆಸಾಪಗಂಡುಮುರುಗಲಪರಾಂಭೋ | ರಾಶಿಗಾದಿಶ್ಯನ್ನೈದಿದನು ||೯೧||

ಅತ್ತಲುವಸುಪಾಲನೆಂಬವನಾಭೂ | ಪೋತ್ತಂಸಚಕ್ರಿಯುಬಲಕೆ ||
ಎತ್ತರವಾದಾವಜ್ರಕಾಂಡನನಿಳೆ | ಗೊತ್ತಿಬದಿಂದಿಕ್ಕಿದನು ||೯೨||

ಬಳಿಕಿತ್ತಲಾಸಂಸಪ್ತಕರಸುಕಲಿ | ಗಳಕುಲತಿಲಕನರ್ಜುನನು ||
ಮುಳಿಸಿಂದೆಚ್ಚುಮಿಳ್ತುವಿನನಿವಾಸಕ್ಕೆ | ಕಳುಹಿಬೀಡಿಗೆಮುಗುಳ್ವಾಗ ||೯೩||

ಪಾಳೆಯದೊಳಗಭಿಮನ್ಯುವಳಿದುದಕ್ಕೆ | ಗೋಳಿಡುವಾಸುದ್ದಿಗೇಳಿ ||
ಹೇಳಲೇನುಸಿಡಿಲಾಕಿಪಿವೊಕ್ಕಮ | ರಾಳನಂದದಿಬೆದರಿದನು ||೯೪||

ಆನಿತರೊಳಾನಿಜಜನನಿಸುಭದ್ರಾ | ವನಿತೆಯುಂತಃಪುರಸಹಿತ ||
ಇನಿಯುಸಕಾಲಬಾಯೊಳುಬಿಳ್ದಾಕ್ರಂ | ದನಗೈವುತಿಂತುರುಳಿದಳು ||೯೫||

### ಶೋಕವರಾಳಿ—ರಗಳೆ

ಹಾಹಾಸೋಮಾನ್ವಯಮಣಿದೀಪಾ | ಹಾಹಾಮನಸಿಜಸನ್ನಿಭರೂಪಾ ||೧||
ಹಾಹಾಸುರಭೂಜೋಪಮದಾನೀ | ಹಾಹಾನಿರ್ಮಲಮನದಭಿಮಾನೀ ||೨||
ಹಾಹಾಸನ್ನುತವಿಕ್ರಮಶಾಲೀ | ಹಾಹಾಯೆನ್ನವೊಗದಕಣ್ಮಾಲೀ ||೩||
ಹಾಹಾಅಭಿನವರೂಪಜಯಂತಾ | ಹಾಹಾಭೂವಿಶ್ರುತಗುಣವಂತಾ ||೪||
ಹಾಹಾವನನಿಧಿನಿಭಗಾಂಭೀರ್ಯಾ | ಹಾಹಾಮಂದರಶೈಲಸ್ಥೈರ್ಯಾ ||೫||
ಹಾಹಾಕುರುಕುಲವಿಪಿನಕುಠಾರಾ | ಹಾಹಾಸದ್ಗುಣಮಣಿಗಣಹಾರಾ ||೬||
ಹಾಹಾಸುರಘಿಸಮಾನೌದಾರ್ಯಾ | ಹಾಹಾರಾಜಕುಲಾಂಬರಸೂರ್ಯಾ ||೭||
ಹಾಹಾಮಕ್ಕಳಗಳಮಾಣಿಕವೆ | ಹಾಹಾಹೆಣ್ಗಳಿದೆಯುವಮೌಕ್ತಿಕವೇ ||೮||
ಹಾಹಾಕಂಸಾರಿಯಜಾಮಾತೃ | ಹಾಹಾಸುರಕುಜಸನ್ನಿಭದಾತೃ ||೯||
ಎಕ್ಕತೂಳದಭಟತತಿಯಿರ್ದಂತೆ | ತಕ್ಕಿನವೀರಾವಳಿಯಿರ್ದಂತೆ ||೧೦||
ಚಕ್ರವ್ಯೂಹಮನದಿರದೆಹೊಗುತ | ವಿಕ್ರಮದಿಂರಿಪುಗಳಹತಿಯಿಸುತ ||೧೧||
ದಂತನಖಾವಳಿಮುರಿದಹುಲಿಯವೊಲು | ತಾಂತೀರಿದಕೈದಲಿನಿಂದಿರಲು ||೧೨||

ಆಯುಧಮಿಲ್ಲದೆನಿಂದಿರ್ದಸನು | ಸಾಯಲೆಸೆವುದಸುಚಿತವೆಂಬುದನು ||೧೩||
ಭಾವಿಸದಾಪಾತಕಿಬಂದೆಸಲು | ದೇವವಿತತಿಕೊಂಡಾಡುತಮಿರಲು ||೧೪||
ರವಿಯೊಡಲನ:ಜರ್ಜರಿತವಮಾಡಿ | ದಿವಿಜಮಹಿಗೆಹರಿದಾಳಿಯುಮಾಡಿ ||೧೫||
ವೀರಸ್ವರ್ಗದವಿಧುಮುಖಿಯರೆಲ್ಲರಸು | ಆರೈಯುದೆವೊಡಗೂಡಲುನೀನು ||೧೬||
ನಾಸಿದನೇಸಂದದಿಸ್ವೈರಿಪೆಸು | ಭೂಸುತವೀರಕಿರೀಟಿಯುಸೂನು ||೧೭||
ನಿನ್ನನಗಲಿಬಾಳುವುಪೆನಗಿನ್ನೇ | ಕೆನ್ನಕೊರಲದೇವರಹೊಸಹೊನ್ನೇ ||೧೮||
ನೋಡುವಹೊಸರನ್ನದಕನ್ನಡಿಯೋ | ಆಡುವಬೀದಿಯುಸಿಂಗದಮರಿಯೋ ||೧೯||
ಅಂಗಣದೊಳಗಾಡುವಮುದಕರಿಯೆ | ಮುಂಗೈಯೊಳಗೋದಿಸುವರಗಿಳಿಯೋ||೨೦||
ಹತ್ತುಂದೆಸೆಯೊಳುನಿನ್ನಯಕೀರ್ತಿ | ಹತ್ತಿತಲಾ ಅಭಿನವಸಮವರ್ತೀ ||೨೧||
ಇನ್ನೆನಗಾವುದುವಿಧಿಶತಮನ್ಯು | ಸನ್ನಿಭಸಂಪನ್ನಸೆಯುಭಿಮನ್ಯು ||೨೨||
ಆವಂದದಿಜೀವಿಸುವೆಸುನಾನು | ಸಾವಲ್ಲದೆಗತಿಯಿಲ್ಲೆನಗಿನ್ನು ||೨೩||
ಒವರಮುಖದೊಳೊಂದೇದಿನದೊಳಗೆ | ಸವಿದುತ್ತಾದೆಯುಲಾಮಿಳ್ಳುವಿಗೆ ||೨೪||
ಎಂದುಸುಭದ್ರೆಹೊರಳಿನಸುಧೆಯೊಳು | ವೊಂದಿದದುಃಖದಿಹಂಬಲಿಸಿದಳು ||೨೫||
ಅದನೀಕ್ಷಿಸಿಮಧ್ಯಮಪಾಂಡವನು | ಬೆದೆಬೆದೆಬೆಂದೋವದೆಯುಳಲಿದನು ||೨೬||
ದಿಟ್ಟಿಗೆಟ್ಟವೊಗದಂದದಿನವನು | ಕೆಟ್ಟನೆಸುತನೆರೆಹಳವಳಿಸಿದನು ||೨೭||

## ॥ ಪದ ॥

ಇದಿರ್ವಂದವ:ದರ್ಪ್ಪಿಬಾಯೊಳ.ಬಾಯಿಟ್ಟು | ಹದದಂಬುಲವನೀಸಿಕೊಂಡು ||
ಮುದದಿಂದೊಡನೆಮನೆಗೆಬರ್ಪಕಂದನೆ | ಲ್ಲಿದನೇಯೆಂದುಕೇಳಿದನು ||೯೩||
ಅನಿತರೊಳಗೆಬಲಕೇಶವರಾಧರ್ಮ | ತನುಜಪ್ಪಕೋಪರರೆಯ್ದಿ ||
ತನಯುನಳಿದುದಕ್ಕೆಪಿರಿದುದುಃಖಿಸುವಿಂದ್ರ | ತನುಜಾತನನುಪಚರಿಸಿ ||೯೭||
ಮರುತನಂದನನಾದಿಯಾದವೀರರುನಾಣ್ಚಿ | ಶಿರವಬಾಗಿರಲರ್ಜುನನು ||
ಒರೆದನಿಂತೆಂದುಚಕ್ರವ್ಯೂಹಕ್ಕಾ | ತರುಣನೆಯ್ದಿದತೆರನೇನು ||೯೮||
ಎನೆಧರ್ಮಜಾತನಿಂತೆಂದನುಬಿಲ್ಲೋಜ | ನನುಗೆಯ್ದಾಮೋಹರಕೆ ||
ಅನುಮಾನಿಸದೆಹೊಗುವರುಂಟೆಯೆಂದೆಂ | ಬನಿತರೊಳಗೆತಾನೆಯ್ದಿ ||೯೯||

ಉಗ್ರಮಪ್ಪೀವ್ಯೂಹವನುಭೇದಿಪೆನ | ವ್ಯಗ್ರದಿನೆಂದೆಯ್ತಂದು ||
ಆಗ್ರಪದಿಂದೆಮ್ಮನಿರದೆಬೀಳ್ಕೊಂಡುವೀ | ರಾಗ್ರಣಿಯಿರದೆಯ್ದಿದನು ||೧೦೦||

ಎನುತಕೃತಾಂತನಂದನನಾ ಅಭಿಮನ್ಯು | ವಿನಪೋದಂದವನುಸುರ್ವ ||
ಅನಿತರೊಳಗೆಕೆಲದೊಳಗಿರ್ದಾಬಂಧು | ಜನಗಳಿಂತೆಂದಾಡಿದರು ||೧೦೧||

ಶಕ್ರನಂದನಕೇಳ್ಕೃಷ್ಣನಂದನನಪ | ರಾಕ್ರಮಮಾರ್ಗೆಸಮಾನ ||
ಚಕ್ರವ್ಯೂಹಮನಣ್ಮಿತೋರ್ವನೆಹೊ | ಕ್ಕಾಕ್ರಮಿಸಿಯೆಹತಿಸಿದನು ||೧೦೨||

ಗರ್ವನಿಧಿರಾದಗಂಡುಗಲಿಗಳನು | ದೋರ್ವಲದಿಂಹತಮಾಡಿ ||
ಉರ್ವೀಪತಿಕೌರವನಕುಮಾರರ | ನೂರ್ವರತಲೆಗಳನರಿದು ||೧೦೩||

ಕುರಿಯುಮುರಿಯುಹಿಂಡನಾತೋಳಹೊಕ್ಕಂತೆ | ಯರಿಕೆಯರಾತಿಸೈನಿಕರ ||
ನೆರೆಗಲಿಗಳನೆಲ್ಲರಕೊಂದಾನೆಲ | ನುರಿಹೇಸುವಂತೆಮಾಡಿದನು ||೧೦೪||

ಅತನತ್ಯಂತಪರಾಕ್ರಮಮುಪಮಾ | ತೀತಮದ್ಭುತವಿಾನೆಲಕೆ ||
ಮಾತೇನೇಕಾಕ್ಷೋಹಿಣಿಬಲವನು | ಭೂತಕೌತಣವಮಾಡಿದನು ||೧೦೫||

ಸಿಂಧುವಲ್ಲಭನಾರ್ಪನೆಯಾಸಮರಧು | ರಂಧರನನುಜೀವಗೊಳಲು ||
ಬಂಧುರನಖದಂತಹೀನಕೇಸರಿಯುನು | ಸಿಂಧುರಕೊಲುವಂದದೊಳು ||೧೦೬||

ಶರಸಂತತಿಹೀನನಾಗಿನಿಂದಿರ್ದಾ | ಧುರಧೀರನಕೊಂದಸೈನೆ ||
ಕರುಣಮಿಲ್ಲದೆಯೆನಲಾನುಡಿಯುನುಕೇಳಿ | ಪಿರಿದುಕೋಪಾರೂಢನಾಗಿ ||೧೦೭||

ಬಾಲಕನಾಕೈದುವಿಲ್ಲದವನಕೊಂದ | ಖೂಳನನಾಸೈಂಧವನ ||
ನಾಳೆಕೊಲ್ಲದೊಡುರಿಗೆಂಡದೊಳಗೆಬಿಳ್ದು | ಜಾಳಿಸುವೆನುದೇಹವನು ||೧೦೮||

ಇಂತುಪ್ರತಿಜ್ಞೆಯಮಾಡಲುಬಲಕೈಟ | ಭಾಂತಕನಂತಕಸೂನು ||
ಮುಂತಾದವರೆಲ್ಲಬೆಕ್ಕಸವಟ್ಟತಿ | ಚಿಂತೆಯೊಳಿರಲುಮತ್ತಿತ್ತ ||೧೦೯||

ಆಸಾತ್ರಿಯೊಳಿರದಾ ಅಭಿಮನ್ಯುಕು | ಮಾರನೇಳ್ಗೆಯನಾಬಲದ ||
ವೀರವಿತತಿಕೊಂಡಾಡುತೊರಗುತಿರ | ಲಾರವಿಮೂಡಿಪುದಾಗ ||೧೧೦||

ಆ ಭಾಸ್ಕರನುದಯದೊಳುಕೌರವಧರ | ಣೀಭುಜನೆಂದಿನಂದದೊಳು ||
ಶೋಭೆವಡೆದಚಕ್ರವ್ಯೂಹಮನವ | ನೀಭಾರಮಾಗಿಯೊಡ್ಡಿಸಿದ ||೧೧೧||

ತನುಜಾತನಕೊಂದಾಸೈಂಧವನನಿಂ | ದಿನದಿನದೊಳುಕೊಲ್ಲದೊಡೆ ||
ಅನಲಕುಂಡದೊಳಳಿಯುದೆಬಿಡೆನೆಂದುಫ | ಲ್ಗುನನುಸುಡಿದನುಡಿಗೇಳಿ ||೧೧೨||

ಕರಮೊಳ್ಳಿತೆನ್ನಯಕಾರ್ಯಮಾವಾವ | ಪರಿಯೊಳಗೀಸೈಂಧವನ ||
ಪರಿರಕ್ಷಿಸಿಕೊಂಡೀಪಗಲಳಿವನ್ನ | ಬರಮಿರ್ದೊಡೆತಾಸುಸುಡಿದ ||೧೧೩||

ಭಾಷೆಗೆಸಲವಾಗಿಷಾಯುದೆಬಿಡನು | ದ್ವೇಷಿಫಲ್ಗುನನೆಂದೆಸುತ ||
ದೋಷಾಕರಕುಲತಿಲಕನೊಡ್ಡಸುಕಡು | ಭೀಷಣಮಾಗಿಯೊಡ್ಡಿಸಿದ ||೧೧೪||

ಸುತ್ತುವಲಯದೊಳುಕೋಟಿಭಟರ್ಕಳ | ಮೊತ್ತದೊಡ್ಡಣಮೊಪ್ಪಿದುದು ||
ಬಿತ್ತರಮಾದಕೃತಾಂತನಕೋಂಟೆಯು | ಮೊತ್ತದತೆನೆಗಳೆಂಬಂತೆ ||೧೧೫||

ಪಲವಣ್ಣದದಾವಣಿಯಚಾಮರದಬಿಲ್ಲ | ಬಲುವಾಹಿನಿಚಕ್ರವನು ||
ಬಳಸಿದುದಮರಧನುವಿನಬಳಗಮಾ | ಪ್ರಲಯಮೇಘವಸುತ್ತಿದಂತೆ ||೧೧೬||

ಉರಿವಬೇಸಗೆಯಮಧ್ಯಾಹ್ನದುಷ್ಣಾಂಶುವ | ಕಿರಣಗಳಾವಲಯದೊಳು ||
ಪರಿದಂತೆಪಲಸಬಳಗಳಾವ್ಯೂಹವ | ಪರಿವೇಷ್ಟಿಸಿರಂಜಿಸಿದುವು ||೧೧೭||

ಅದರೊಳವ್ಯೈಂಥೊಳಗವನಿಯಬಳಸಿನಿಂ | ದುದಧಿಯತೆರೆಮಾಲೆಯಂತೆ ||
ಅಧಟರೆನಿಪರಾಯುರಾವುತರೇರಿದ | ಕುದುರೆಯಪೌಜೊಪ್ಪಿದುದು ||೧೧೮||

ಮೇರುಪರ್ವತವಬಳಸಿಬಹುರೂಪಾಂ | ತಾರವಿಮಂಡಲವಡರ್ದು ||
ತೇರನಲಾಚಕ್ರವ್ಯೂಹವಸುತ್ತಿ | ದಾರಥದೊಡ್ಡುಶೋಭಿಸಿತು ||೧೧೯||

ಕಾಲಭೈರವನಖರ್ವಡದುರ್ಗದಂತಾ | ಭೀಳಾದ್ರಿಸಮಸಾನುಜದ ||
ಜಾಲವೇಷ್ಟಿತಮಾದಾಪೌಜಿನೇಳ್ಗೆಯ | ನಾಲೋಕಿಪೊಡೇವಲ್ಲ ||೧೨೦||

ಇಳೆಯೊಳಗುಳ್ಳದೇಹಿಗಳಸುವನುಬೆಲೆ | ಗೊಳುವೆನೆನುತಮಿಳ್ತುವಿನ ||
ಪೊಳಲಜನಂಗಳೆಯ್ದಿದಸಂಧಿಯೆನೆಕ | ಣ್ಗೊಳಿಸಿದುದಾಮೋಹರವು ||೧೨೧||

ಕಾಲರುದ್ರನಕಟಕಮೊಹೆಮ್ಮಾರಿಯ | ಪಾಳಯಮೋಜವಪುರಮೋ ||
ಆಲೋಕಿಪನೆಂಬವರಕಣ್ಬಗೆಗಾ | ಭೀಳಮಾದಾಪತಾಕಿನಿಯೂ ||೧೨೨||

ಅಪಕೀರ್ತಿಗವನಿಯಭಾಜನವನುಮಾ | ಕೃಪಗತಸುಕೃತಿಕೌರವನು ||
ವಿಪರೀತಚರಿತನೆಸಗಿದಚಕ್ರವ್ಯೂಹ | ವುಪಮುಸಲತಿಭೀಕರವು ||೧೨೩||

ಹರನ ಹಣೆಯ ಅಗ್ನಿಗಣ್ಣುಭೇದಿಸಬಾರ | ದಿರವಿನಂತೆಸೆವವಾಹಿನಿಯ ||
ಪಿರಿದಗುರ್ವಿಸುವಪಿಂಗಡೆಸೈಂಧವನತಂ | ದಿರಿಸಿದನತಿಜತನದೊಳು ||೧೨೪||

ಉತ್ತಮಸತ್ತ್ವಸುಷ್ಣಾಂಶುತನಯಭಗ | ದತ್ತಬಾಹ್ಲಿಕಭೂರಿಶ್ರವರ ||
ಮತ್ತಾತನಮುಂಗಡೆಕಾಪನಿಟ್ಟನು | ದತ್ತಾವಧಾನವೆಂದೆನುತ ||೧೨೫||

ಏಕಾಂಗವೀರರೆನಿಪಮಾದ್ರಿಭೂಮಿಪ | ನಾಕೃಪಕೃತವರ್ಮರುಗಳ ||
ಆಪೃಥಿವಿಪನಾತನಬಲಗಡೆಯೊಳು | ಕಾಪಿಟ್ಟನತಿಭೀತಿಯೊಳು ||೧೨೬||

ನಾಸಿಗರೆಂದೆನಿಸುವ ಗುರುಭೀಷ್ಮದು | ಶ್ಯಾಸನರಾದಿಯಾದವರ ||
ಆಸೈಂಧವನೆಡಗಡೆಕಾಪನಿರಿಸಿದ | ನೋಸರಮಾಡಬೇಡೆಂದು ||೨೨೭||

ಬಳಿಕುಳಿದೆಕ್ಕತೂಳದಬಲವಂತರ | ಬಳಗವನಲ್ಲಲ್ಲಿರಿಸಿ ||
ಇಳೆಯಾಧಿಪತಿತನ್ನರಸರೆಸಹವಾಗಿ | ಬಳಸಿನಿಂದಿರೆಬಳಿಕಿತ್ತ ||೧೨೮||

ಅಕಲಂಕಶೂರನರ್ಜುನನರಸಗೆಸ | ತ್ಯಕಭೀಮದೃಷ್ಟದ್ಯುಮ್ನ ||
ನಕುಲಘಟೋತ್ಕಚಸಹದೇವರಾದಿಯು | ತ್ಸುಕವಿಕ್ರಮಿಗಳಕಾಪಿರಿಸಿ ||೧೨೯||

ದ್ರುಪದವಿರಾಟಶಿಖಂಡಿಸೋಮಕಭೂ | ಮಿಪಗಾಂಧರ್ವರುವೆರಸಿ ||
ಅಪರಿಮಿತವ್ಯೂಹಸಹಿತರ್ಜುನಸತಿ | ಕುಪಿತಹೃದಯನತಿಭರದಿ ||೧೩೦||

ಮುಸಕದಿ ವಜ್ರವರೂಥವನಿರದೇರಿ | ಹಸಿದಭೈರವಸಂದದೊಳು ||
ನೊಸಲನಯನನಂತೆಮಿಳ್ತುವಿನಂತೆಘೂ | ರ್ಣಿಸುವಮಾರಿಯುಮೂರ್ತಿಯಂತೆ ||

ಕಡುಹಿಂದಾಕಾರ್ಮುಕವನುನೀವಿಜೇ ! ವಡೆಯೆಕಡೆಯಕಾಲದಿನದ ||
ಜಡಧರವೆಡೆಯುಪುರಾಸ್ತ್ರಸನದಿಂ | ಸಿಡಿವಸಿಡಿಲತೆರನಾಯ್ತು ||೧೩೨||

ಬಂಗಪನದೆ ಬಲವಂತಶಿಖಾಮಣಿ | ನಿಂದಿರಬೇಡಮಾರ್ಕ್ಮಲೆತು ||
ಸಂದಣಿಸಿದರಿಪುವಸುಧಾಧರವೃಂದ | ಬಂದೊದರಿದವುಕಾಳೆಗಳು ||೧೩೩||

ಉರಿಯಿಂಸವೆದಪುತ್ರಿಕೆಜೇಸಗೆಯುಕು | ಮ್ಮರಿಗಾಡಹೊಗುವಂದದೊಳು ||
ಉರುತರಕೋಪೋದ್ರೇಕವಮಾನಸನಾ | ಕುರುಬಲವನುಪೊಕ್ಕನಾಗ ||೧೩೪||

ಅದೆಯುದೆಬಂದನಪೂರ್ವಪರಾಕ್ರಮಿ | ಯುಧಟರದೇವನೆಂದೆನುತ ||
ಮದವದರಾತಿಮಂಡಳಿಕರಮಂಡಳಿ | ಗದಗಾಪಂಗೊಂಡುವಾಗ ||೧೩೫||

ಇಂತುಬಂದಾರಥವನುನೂಂಕಿಕುರುಭೂ | ಕಾಂತನಬಲವನೆಲ್ಲವನು ||
ಪಿಂತುಮುಂತುಮಾಡಿತಲೆಬಾಲಗೆಡಿಸು | ತ್ತಂತರಿಸದೆಬರುತಿರಲು ||೧೩೬||

ಅದಿರ್ದರ್ಕೆಲರಡಗಿದರುಕೆಲರ್ಕಡು | ಬೆದರಿದರ್ಕೆಲರುಬ್ಬೆಗೊಂಡು ||
ಎದೆಗೆಟ್ಟರ್ಕೆಲರಾವೋಹರದೊಳು | ಕದನಕರ್ಕಶನುರವಣೆಗೆ ||೧೩೭||

ಪಡಲಿಟ್ಟಂದವನಾವೀರಫಲ್ಗುನ | ನಡಸಿಕೊಲುವಕೊಲೆಗಳ್ಕಿ ||
ತಡೆಯುದಿರ್ದವರುಮದ್ದಳೆಯು ಹೊಕ್ಕಿಲಿಯಂತೆ | ಹುಡಹಾವುತ್ತಿರ್ದರಾಗ ||

ಆರೆಬರಾದಿತ್ಯಮಂಡಲವನೊಡೆದುಪೋಗಿ | ಸುರಲೋಕದ ಸತಿಯರೊಳು ||
ನೆರೆದುಸುಖಿಸಿಯರ್ಜುನದೇವನಹಾಡಿ | ಹರಸುತಿರ್ದರುಹರುಷದೊಳು ||೧೩೯||

ನೆಲನೋಕರಿಪಂದದಿನಾನಾಗರ | ತಲೆಬೇನೆಹಿಂಗುವಂದದೊಳು ||
ಅಲಸದರಾತಿಸೇನಾಚಕ್ರವನಾ | ಬಲಯುತನತಿಹತಿಸಿದನು ||೧೪೦||

ಈಕ್ರಮದಿಂರಿಪುಚಕ್ರಕ್ಷಯಕಾಲ | ಚಕ್ರಸುದ್ಧತವಿಕ್ರಮನು ||
ಶಕ್ರತನುಜನದಿರದೆಪೊಕ್ಕಾಬಲ | ಚಕ್ರವೆಲ್ಲಪಹತಿಸಿದನು ||೧೪೧||

ಅದನುಕಂಡಾಶಲ್ಯಸಮಿತವಾಹಿನಿಗೂಡಿ | ಯಿದಿರ್ವಂದುತಾಗೆಕೋಪದೊಳು ||
ಅಧಟರದೇವನರ್ಜುನನಾಬಲವನೋ | ರ್ವದಲೆಮುಣ್ಮುಳಿಗೊಳಿಸಿದನು ||೧೪೨||

ಒಕ್ಕಲಿಕ್ಕಿದವೊಲಾದಾಸೇನೆಯಕಂಡು | ಕೆಕ್ಕಳಗೆಳಲಿಪಮಾದ್ರಿಪನು ||
ಕಕ್ಕಸದಿಂದಕಣೆಗಳನೆಸುವದಭ | ಸಕ್ಕೆಸುರರುಸಡುಗಿದರು ||೧೪೩||

ಬಾವನ್ನವೀರಮಾದ್ರೀಶ್ವರನೊಳಗರೆ | ಜಾವವಿದಿರ್ಚುತೀಕ್ಷ್ಣನುತ ||
ದೇವರ್ಕಳು ಮೆಚ್ಚುವವೊಲು ಸಾಯದ | ನೋವನವಗೆಪುಟ್ಟಿಸಿದನು ||೧೪೪||

ಆಸಮಯದೊಳುವಿಕ್ರಮಯುತಭಗದತ್ತ | ನಾಸುಪ್ರತಮುಪ್ಪಗಜವನು ||
ಓಸರಿಸದೆಯೇರಿಕಡುಭರದಿಂದಮ | ತ್ತಾಸಾಸಿಗನನೆಯ್ದಿದನು ||೧೪೫||

ಮುಗಿಲಮೇಗಡೆಮಿಳ್ಳಿರವಮಿಂಚಿನವೊಲು | ಧಗಧಗಿಪಂಕುಶದಿಂದ ||
ಗಗನತಳವಚುಂಬಿಸುವಕುಂಭಿಯಕುಂಭ | ಯುಗಳವತಿವಿದುಸೊಂಕಿದನು ||೧೪೬||

ತಂದೆಕಡಿದರಟ್ಟೆಯಕೊಲೆಯುಸುನಿಜ | ನಂದನನಿಂಕೊಂಬೆನೆಂದು ||
ಬಂದಕಜ್ಜಳಗಿರಿಯೆನಲಾಕರಿಯಿಂದ್ರ | ನಂದನನೆಡೆಗೈದಿದುದು ||೧೪೭||

ಬೃಂಹಿತದಿಂಹಲಬರಕರಪದಹತಿ | ಯಿಂಹಲಬರನಿನಿಸರೊಳು ||
ಸಂಹಾರವಮಾಡಲುರಿಪುಸೇನೆಕ | ರಂಹೆದರುತ್ತಿರ್ದುದಾಗ ||೧೪೮||

ಕಾಳಗೂಳಿಯನೇರಿಕಡುಗೋಪದಿಂನಿಜ | ಬಾಳಲೋಚನನವಸುತೆರೆದಾ ||
ಕಾಲರುದ್ರನವೊಲಾನೆಯನೇರಿತದ್ರಿಪು | ಜಾಲವಹತಿಸುತ್ತೈದಿದನು ||೧೪೯||

ಅಂತದಕಂಡನಿಲಜನತಿಕೋಪದಿ | ನಂತಕಸುತನಬೀಳ್ಕೊಂಡು ||
ಅಂತಕನಂತಿದಿರಾಗಲ್ಭಗದತ್ತ | ನಂತರಿಸದೆಕೋಪದೊಳು ||೧೫೦||

ಕಡುಭರದಿಂದೆಡೆವಿಡದೆಕರೆವಕಣೆ | ಯಡಸಿಸುರಿವಸೋನೆಯಾಗೆ ||
ನಡೆತಪ್ಪಮದಕರಿನೋಳ್ಪಜನರಕಣ್ಗೆ | ಕಡೆಯಕಾರ್ಮುಗಿಲಂತಾಯ್ತು ||೧೫೧||

ಕಾಲನೆತ್ತಿದದಂಡದಂತೆಸುಂಡಿಲನುಶುಂ | ಡಾಲತಿರುಹಿತಿರ್ರೈಸುತ ||
ಮೇಲುವರಿದುಬರುತಿರೆಪಸುಗಂಡಶಾ | ರ್ದೂಲನಂದದಿಯೆನಿಲಜನು ||೧೫೨||

ಭರದಿಂದಿದಿರಾಗಿಬಂದುತನ್ನಯವಾಮ | ಕರದಿಸದರಸುಂಡಿಲನು ||
ಮುರಿದುಪಿಡಿದುಸಿಹ್ಮನಾದದಿನಾಘನ | ತರಮುಪ್ಪಗದೆಯೆತ್ತಿಬಡಿಯೆ ||೧೫೩||

ಅಂಜನಗಿರಿವಜ್ರದಂಡದಿನಾಬಲ | ಭಂಜನಹುಯ್ಯೆಬೀಳ್ವಂತೆ ||
ಕುಂಜರವಮಾಕುಂಭಿನಿಗುರುಳಿದುದುಪ್ರ | ಭಂಜನಸುತನಹುಯ್ಲಿಂದ ||೧೫೪||

ಅಂದುಗಜಾಸುರನನುಮರ್ದಿಸಿದಾ | ಯಿಂದುಧರನಮಾಳ್ಕೆಯೊಳು ||
ಮುಂದೇತರಮದಗಜವಕೊಂದಾವಾಯು | ನಂದನನತಿವೇಗದಿಂದ ||೧೫೫||

ಮತ್ತಗಜದಮುಂಡೆಯಿಂದುರುಳ್ವಾಭಗ | ದತ್ತಸಂಘ್ರಿಗಳನುಪಿಡಿದು ||
ಎತ್ತಿನೆಲದೊಳಪ್ಪಳಿಸಿಕಾಲಗೆಬೋನ | ವಿತ್ತನುನಿಮಿಷಮಾತ್ರದೊಳು ||೧೫೬||

ಈಪರಿಯಿಂಭಗದತ್ತಭಟನಕೊಂ | ದಾಪವನಜಗಿದಿರಾಗಿ ||
ಕೋಪದಿಂಭೂರಿಶ್ರವನುಬರಲುಸುಪ್ರ | ತಾಪಿಸತ್ಯಕನೆಯ್ತಂದು ||೧೫೭||

ನೀನೇಕೆವಗೆಂದೆಸುತಬಂದಿದಿರಾಗ | ಲಾನದೆಯಾಸತ್ಯಕನ ||
ಭೂಸುತಭೂರಿಶ್ರವನತಿಕೋಪದಿ | ಮಾನಭಂಗವಮಾಡಿದನು ||೧೫೮||

ಅಂತದನರಿದತ್ಯಂತಕೋಪದಿಬಲ | ವಂತಬಲಾರಿನಂದನನು ||
ಅಂತರಿಸದೆಬಂದವನೆಚ್ಚಘನಶರ | ಸಂತತಿಯನುಖಂಡಿಸುತ ||೧೫೯||

ಭುವನಾತಿಶಯಭುಜಬಲಯುತಭೂರಿ | ಶ್ರವನನಿಮಿಷಮಾತ್ರದೊಳು ||
ಶವಕದಿನೊಂದುದಿವ್ಯಾಸ್ತ್ರದಿಂದೆಚ್ಚು | ದಿವಿಜಲೋಕವನೈದಿಸಿದನು ||೧೬೦||

ಭೂರಿವಿಕ್ರಮಿಭೂರಿಶ್ರವನನುಕೊಂ | ದಾರಥವನುನೂಂಕುತಿಪಾರ್ಥ ||
ವೀರಕಿರೀಟಿಗಣ್ಮಗ್ಮೆನುತಾದ್ರೋಣ | ಸೇರಿಯಂಬಿನಮಳೆಗರೆಯೆ ||೧೬೧||

ಅಮರರಾಗಸದೊಳ್ಭಲರೆನೆಚಾಪಾ | ಗಮಗುರುವಿನವಿಕ್ರಮಕೆ ||
ಅಮಿತಪರಾಕ್ರಮಿಯಾಪಾರ್ಥನೆರಡುಜಾ | ವಮನಶ್ರಮದಿಂಕಾದಿ ||೧೬೨||

ಕೇಣವಕೇಳ್ದೊಂದಿನಿಸೆಸರಿಯದ | ಕ್ಷೀಣಪರಾಕ್ರಮಯುತನಾ||
ದ್ರೋಣಾಚಾರ್ಯನನಾದೋರ್ವಲದಿಂದ | ಪ್ರಾಣಗೆಡಿಸಿಬಿಟ್ಟನಾಗ ||೧೬೩||

ಗುರುವಮೀರಿದಗುಡ್ಡನಾಗಿನಡೆದುಬಂ | ದರಿವಾಹಿನಿಚಕ್ರವನು ||
ಕರುಣಮಿಲ್ಲದೆಕಣ್ಗೆಡಿಸಿಕೊಲುತಬ | ರ್ಪುರವಣೆಯನುಕಾಣುತವೆ ||೧೬೪||

ಬಲ್ಲಿದರಾಭೀಷ್ಮರುಬಂದುತಾಗಲು | ಬಿಲ್ಲಬಿನ್ನಾಣದಿನವರ ||
ಪೊಲ್ಲಮುನಿಸಿನಿಂದಾತೇರನಾಕ್ರೈದ | ನಿಲ್ಲದೆಸುಗ್ಗುಗುಟ್ಟಿದನು ||೧೬೫||

ಶಂಕೆಯಿಲ್ಲದೆಕೌರವಸನೂರ್ವರನುಜಾತ | ರಂಕದಕಲಿಗಳಿದಿರ್ಚೆ ||
ಬಿಂಕದಬೀರದೇಳ್ಗೆಯುನವರಘಟನು | ಕೊಂಕಿಸಿ ಮುಂದಕ್ಕೈದಿವನು ||೧೬೬||

ಕುಪಿತಕೃತಾಂತರೆಂದೆನಿಪರಿಕೆಯುಕೃಪ | ಕೃಪವರ್ಮರಿದಿರಾಗಲವರ ||
ವ್ಯಪಗತರಥಿಕರಮಾಡಿನಡೆದನಾ | ವೃಷಮಾತೀತವಿಕ್ರಮನು ||೧೬೭||

ರುದ್ರಾವತಾರಸರಾತಿಬಲಾವಳಿ | ವಿದ್ರಾವಣನೆಂದೆನಿಪ ||
ಆದ್ರೋಣನತನುಜಾತನಲಜ್ಜಾ | ಮುದ್ರಿತನನುಮಾಡಿದನು ||೧೬೮||

ಅಗಣಿತಮಪ್ಪವಾಹಿನಿಗೂಡಿತಾಗಿದ | ಜಗದೇಕವೀರಕರ್ಣಸನು ||
ತೆಗೆಬಿಗಿಮಾಡಿನಾಲ್ಕೈದುಗಳಿಗೆಯೊಳು | ಮೊಗದಿರುಗಿಸಿಬಿಟ್ಟನಾಗ ||೧೬೯||

ವಿಕ್ರಮಶಾಲಿವಿಕರ್ಣನೇರಿದರಥ | ಚಕ್ರಮನರೆಗಳಿಗೆಯೊಳು ||
ಚಕ್ರವ್ಯೂಹಮದಿರ್ವಂತೆಕಡಿದುಪ | ರಾಕ್ರಮಪಂಚಾನನನು ||೧೭೦||

ಸಂದಣಿಗೊಂಡಸಾಹಸಯುತರೆಲ್ಲರ | ಮುಂಮುಗಿಡಿಸಿನಡೆತಂದು ||
ಮುಂದಿದರ್ಸೈಂಧವನುರುಸೇನಾ | ವೃಂದವಕಂಡತಿಭರದಿ ||೧೭೧||

ತ್ರಿಪುರವಕಂಡತ್ರಿಲೋಚನನಂದದಿ | ಕುಪಿತಹೃದಯನಾರಥವ ||
ಕಪಿಕೇತುಸೂಂಕಿಸರಲಸಂಘಾತದಿ | ರಿಪುಬಲವನುಹತಿಸಿದನು ||೧೭೨||

ನೇಸರಳಿಯುದಮುನ್ನೆನ್ನಸುಕೊಲ್ಲದೊ | ಡಾಸುರದಗ್ನಿಕುಂಡದೊಳು ||
ಓಸರಿಸದೆತಾನಳಿವೆನೆಂದುದುಃಕಡು | ಲೇಸಾಯಿತೆಂಮುಸ್ಯೆಂಧವನು ||೧೭೩||

ಉರುತರಮಪ್ಪವಾಹಿನಿಯುಪಿಂಗಡೆನಿಂ | ದರವಿಂದಸಖನಸ್ತಮಿಸುವ ||
ಪರಿಯಂತರರತಡೆದಿರ್ಪೆನೆಂದಿರಲಾ | ನರಸವನಿರ್ದೆಡೆಗೈದಿ ||೧೭೪||

ತೇರನಡಹಿಯೆಲವೊದ್ರೋಹಿಸಿಲುಕಿದೆ | ವಾರಿಧಿಯೆಡೆವಿಕ್ಕಿದನ ||
ಮಾರುತಮಾರ್ಗದಮರೆವೊಗೆಬಿಡುವುದಿ | ಲ್ಲಾರಯ್ಯದೆನಗಿದಿರಾಗು ||೧೭೫||

ಎಂದುರಥವನೂಂಕಲುಸೈಂಧವನಿಂ | ತೆಂದನುತನ್ನೊಳುತಾನೆ ||
ಪಿಂದಕೆತಿರುಗೆಬಿಡುವನಲ್ಲವಂತೆದ | ರಿಂದಮಿದಿರ್ಚುವೆನೆನುತ ||೧೭೬||

ಹಿಂದುಮುಂದಣಮೈಗಾವಲಬಲಗೂಡಿ | ನಂದುವಹೊಂಗಿಡಿಯಂತೆ ||
ಚಂದದಿನುರಿದುಗ್ರವಿಕ್ರಮಾಗ್ನಿಯಿನೆ | ಯ್ತಂದುಕರೆಯೆಕಣೆಗಳನು ||೧೭೭||

ಅಳುರ್ವಬೇಸಗೆಯುಮಧ್ಯಾಹ್ನದೊಳಗೆಜಲ | ಚಲಿಪಥನಂಜಯನಾಗಿ ||
ಮುಳಿಸುಗಿಚ್ಚಿಂದಗಾಂಡೀವಕ್ಕೆಶರವಿಟ್ಟು | ತಳುವಮಾಡದೆಸುವವೇಳೆಯೊಳು ||೧೭೮||

ತಿರುವಾಯೊಳೊಂದುತೆಗೆವವೇಳೆಯೊಳ್ನೂರು | ಪರಿವವೇಳೆಯೊಳುಸಹಸ್ರ ||
ಅರಿಬಲವನುಖಂಡಿಸುವಲ್ಲಿಶತಸಾ | ಸಿರವಾಗಿಸರಳ್ಗೈದಿದುವು ||೧೭೯||

ಅಂತೈದುವಕಣೆಗಳನುಕಡಿದುಸಿಂಧು | ಕಾಂತಸುದ್ಧತಮಾರ್ಗಣದ ||
ಸಂತತಿಯನುಪಾರ್ಥನಮೇಲೆಕರೆದನ | ತ್ಯಂತಕೋಪಾಟೋಪದಿಂದ ||೧೮೦||

ಅವನಕೈಚಳಕವನಂಬರದೊಳುನೋಳ್ಪ | ದಿವಿಜದನುಜಪನ್ನಗರ ||
ನಿವಹವೆಲ್ಲವುಕೊಂಡಾಡುತಿರಲಾಸರ | ಸವಿರಳಕುಟಿತಮಾನಸನು ||೧೮೧||

ಎಲವೊಕೈದಿಲ್ಲದಹಸುಳೆಯಕೊಂದದೋ | ರ್ಬಲದಿಂದೆಸಗಿದಿರಾಗಿ ||
ನಿಲಲಿದನೆಂತುಸೈರಿಪೆನೆಂದಾಕಡು | ಗಲಿಫಲ್ಗುಣನುಮೂದಲಿಸೆ ||೧೮೨||

ಹಸುಳೆಯಹತಿಸಿದರಿಂದೇನುಸಿದ್ಧಿನಿ | ನ್ನಸುರಿಗುಬ್ಬಸವಮಾಡುವೆನು ||
ಹಸನಾಯ್ತೆನ್ನಯಕಾರ್ಯವಿನ್ನೆನುತನ | ವಸವಿಸಿಶಾಬಾಣವನು ||೧೮೩||

ಧುರಧರಣೀತಳವದಿರ್ವಂಡದನಿನೆಸೆ | ಲರವಿಂದನಖನಸ್ತುತಿಸಿದ ||
ಪರಿಯೊಳುಕತ್ತಲೆಕವಿದುದುಕೌರವ | ಧರಣಿಪನಪಕೀರ್ತಿಯಂತೆ ||೧೮೪||

ತರುಣನನಾತರವಾರಿತೀರಿಡನನು | ಕರುಣವಿಲ್ಲದೆಹತಿಯಿಸಿದ ||
ಉರುತರದೋಷವಡರಿತವನಿಯನೆನೆ | ಭರದಿಹಬ್ಬಿದುದಾತಮವು ||೧೮೫||

ಇನನಸ್ತಂಗತನಾದನಿನ್ನೇತಕೆ | ತನಗಗ್ನಿಕುಂಡವೆಪ್ರಾಪ್ತಿ
ಎನುತರಿಬಲನಾಬಳುತಿರೆಕಂಡಾಯಿಂದ್ರ | ತನಯಮುಗುಳ್ನಗೆನಗುತ ||೧೮೬||

ಚಂಡಾಂಶುಮಾರ್ಗಣವನುಬಿಡಲಾನಿಶೆ | ಖಂಡಿಸಲಾಸೂರ್ಯನನು ||
ಕಂಡುಪಾಂಡವಸೇನೆಯೊಸಗೆಮಾಡುಳ್ಕೊಂಡು | ಕೊಂಡಾಡಿದುದುಪಾರ್ಥನನು ||

ಇನ್ನೊಮ್ಮೆಶರವತಿರುವಿಗಿಟ್ಟುನೋಡೆಂದು | ತನ್ನದಿವ್ಯಾಸ್ತ್ರದಿನವನ ||
ಪಿನ್ನೇಸರುಪಿಂಗಡಲೊಳಗಗುಳದ | ಮುನ್ನಮತ್ಯಂತಕೋಪದೊಳು ||೧೮೮||

ಸುತ್ತಮುತ್ತಿದಸೇನೆಯದಿರ್ವಂದದಿನವ | ಸುತ್ತಮಾಂಗವನಾಗಸವ ||
ಅತ್ಯಹಾರುವತೆರದಿಂದೆಚ್ಚನಾವಿಕ್ರ | ಮೋತ್ತಂಸನಾಶಕ್ರಸೂನು ||೧೮೯||

ಅರುಣೋದಕವೆರಸಿದಸೈಂಧವನಶಿರ | ವುತುಳ್ವವೇಳೆಯೊಳುದ್ದದಿಂದ ||
ಭರ ನಾಭಾನುಮಂಡಲವರುಣದಿಕ್ | ಶರನಿಧಿಯೊಳುಮುಳುಗಿದುದು ||೧೯೦||

ಚಕ್ರವ್ಯೂಹಮಾಕ್ರಂದಿಸಲಾಶಾ | ಚಕ್ರಮಮುಳಿಕುರುಪತಿಯು ||
ಆಕ್ರಮಿಸ್ಸೈಂಧವಶಿತವುರುಳ್ದುದುಭೂ | ಚಕ್ರದೊಳಿನಬಿಂಬವೆರಸಿ ||೧೯೧||

ವೀರರಸಾಂಬುಪೂರಿತಪಾದಾಧುರ | ಧಾರಿಣಿಯೆಂಬಬುಧಿಯೊಳು ||
ಘೋರಸೆಬೀಳ್ಬುಂದುದುಸ್ಸೈಂಧವನತಲೆ | ಯಾರವಿಬಿಂಬದಂದದೊಳು ||೧೯೨||

ಶಕ್ರನಂದನನೆಸುಗೆಯೊಳಾಕುವಲಯು | ಚಕ್ರದ್ರೋಹಿಸ್ಸೈಂಧವನ ||
ವಿಕ್ರಮಿಯುರುಶಿರವಿರದಿಳೆಗುರುಳ್ದುದು | ಚಕ್ರಬಾಂಧವಬಿಂಬದೊಡನೆ ||೧೯೩||

ತ್ರಿಣಯನಭಾಳಲೋಚನದಿನೀಕ್ಷಿಸಬಾರ | ದಣಿಯುರದೊಳುಪಟುಭಟರ ||
ಗಣನಾತೀತವೆನಲುಕೊಂದಾಯಿಂದ್ರ | ನಣುಗನ್ಮೈದಿದಪಾಳಯಕೆ ||೧೯೪||

ಅರಿಕುಲಮದಮಾತಂಗಪಂಚಾನನ | ಸುರುವಿಕ್ರಮಸಂಯುತನು ||
ಸುರಪರಿವೃಢನಂದನನೊಪ್ಪಿದನಾ | ನರನಾಥಕುಲಶೇಖರನು ||೧೯೫||

ಇದುಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗಿದುವಿಪ್ಪತ್ತೆಂಟಾಶ್ವಾಸ ||೧೯೬||

## ಇಪ್ಪತ್ತೆಂಟನೆಯ ಸಂಧಿ ಸಂಪೂರ್ಣಂ

# ೨೯. ಭೀಷ್ಮನಿರ್ವೇಗ ಸಂಧಿ

---

ಶ್ರೀಮದಮರಪತಿಮೌಳಿಕೀಲಿತಪಾದ | ತಾಮರಸದ್ವಯುನಜಗೆ ||
ಕಾಮಮದೇಭಹರಿಗೆನೇಮಿಜಿನಪತಿ | ಗಾವೋದವೆತ್ತೈರಗುವೆಸು ||೧||

ಆಸಮುಯದೊಳಾಪಡೆಗಳುತಮ್ಮನಿ | ವಾಸಕ್ಕೆಬಂದೊರಗಿರಲು ||
ಆಸೂರ್ಯೋದಯದೊಳುಮೊದಲಾದದಿ | ನೋಸರಿಸದೆಯೊಡ್ಡಿನಿಲಲು ||೨||

ಅತ್ತಜರಾಸಂಧನಾಕೌರವನೃಪ | ರಿತ್ತಕೇಶವಧರ್ಮಸುತರು ||
ಮತ್ತಗಜದಮಸ್ತಕಗಳಸಡರಿಕ | ರುತ್ತರನೆಲೆಯೊಳಗಿರಲು ||೩||

ಈರೀತಿಯೊಳುನಿಂದಾನೃಪವರನನು | ಸೇರಿಕಾಲಾಳುಮೇಲಾಳು |
ಆರಥಿಕರುಜೋದರರುಪಥವಸಿರ | ದಾರ್ಕೈಯುದಿಂತಾಡಿದರು ||೪||

ಪಿಂತುಮುಂತಿನವೇಳೆಯುಕಾಗಿಬಿರಿದಿನ | ಪಂಥಪಾಡಿಗೆಸಲವಾಗಿ ||
ಅಂತರಿಸದೆಹೊಳಕೆಯುಸಹಿಡಿದಭಟ | ಸಂತತಿಭರದಿನೆಯ್ದುಂದು ||೫||

ತಪವುಮಾಡದೆತೊಳ್ತಿಗೆಜಮ್ಮವಟ್ಟಿಗೆ | ಪಿಡಿದಂತೊಡ್ಡಿದೊಡ್ಡಣದ ||
ಕಡುಗಲಿಗಳನುಕೈದೆತ್ತದಂದದಿಹುಯ್ಯ | ದೊಡೆಪಂಥವೆಲ್ಲಿಯುದೆಮಗೆ ||೬||

ಬೈದವರನುಬಾಯುಹೊಡೆದವಾಳ್ಕೈಯೊಳಾ | ಕೈದುಗೊಂಡೆಸಗಿದಿರಾಗಿ ||
ವೈದೋರಿನಿಂದಮಹಾಪಟುಭಟರನು | ಹೊಯ್ದಲ್ಲದೆಮಗುಳುವೆಸೆ ||೭||

ಹುಯ್ಯಲಾಗುವುದಿಂದುನಾಳೆಯೆನಲುಬೇಡ | ಕೈಯಕಂಕಣಕೆಕನ್ನಡಿಯೆ ||
ವೈಯಹಾಸದೆಹೋಗಿಹೊಯ್ವುದನಿನಿಸವೆ | ವೊಯ್ಯದೆನೋಡುಜೆನ್ನಾಗಿ ||೮||

ಕೇಳುಕೇಳೆನ್ನಪಂಥವನಾಹವಹೊಕ್ಕು | ಕೋಳುಸೆಹಿತಮುಗುಳುವೆಸು ||
ಏಳುವಬೀಳುವಬಲುಗಾಯಂಗಳ | ತಾಳಿಬಳಿಕತಿರುಗುವೆಸು ||೯||

ಎಂದುಪಂಥವನಾಮುಂದಣಪೌಜಿನ | ದೊಂದುಲಗ್ಗೆಯುಸೂಡಹಾಯ್ದು ||
ಸಂದಣಿಸಿದರಾಸಿಗರಹೊಯ್ದಾಕೋಳ | ತಂದೊಪ್ಪಿಸಿದರೆಕ್ಕಟಿಗರು ||೧೦||
ಆ ಬಿರುದಿನರಾವುತರಿಟ್ಟಸಂಜೋಗ | ಪೆರಸಿಯೇರಿದಕುದುರೆಯುನು ||
ಘದದಿಂದೀಪೌಜಾಪೌಜುಮೆಚ್ಚುಪ | ಪರಿಯೊಳುತಂದೊಪ್ಪಿಸುವೆವು ||೧೧||

ಮೇಲಾಳಮೇಲಲ್ಲದೆಕಾಲಾಳ್ಗಳ | ಮೇಲೆಕೈದೆತ್ತುವುದಿಲ್ಲ ||
ಲಾಲಿಸಿನೋಡೆಂದೆನುತಶ್ವವಾಹಕ | ಜಾಲವಾಡಿದುದುಪಂಥವನು ||೧೨||

ಎನ್ನಾನೆಸೆಗೆಣೆಮಿಗಿಲೆನಿಪಾನೆಯನ | ತ್ಯುನ್ನತವೆನಿಪಮಸ್ತಕದ ||
ರನ್ನಗಳನುನಿನ್ನಜಯಲಕ್ಷ್ಮಿಯೆದೆಯೊಳು | ಚೆನ್ನಸರವಕಟ್ಟುವೆವು ||೧೩||

ಈಗಂಧಗಜದಬೃಂಹಿತವನುನೆರೆಕೇ | ಳ್ದಾಗಾಳಿಬಿರ್ರೆಂಬದನಿಗೆ ||
ಮೇಗಣಾಮುಗಿಲವೋಹರಬಿರಿತೋಡುವಂ | ತಾಗಬೇಕರಿಗಜದೊಡ್ಡ ||೧೪||

ಎನುತಬಿರಿದನೊದರಿಮದಗಜಗಳ | ಘನಕುಂಭಯುಗಕಂಕುಶವನು ||
ಮೊನೆಯಿಕ್ಕಿಮುಂದಕೆಯ್ದುವಹಸ್ತಿವಾಹಕ | ಜನದಜಂಗುಳಿಯೊಪ್ಪಿತಾಗ ||೧೫||

ಪಡಲಟ್ಟಿಂದದಿನಾಪಟುಭಟತತಿ | ಯುಡರಿದತೇರತಿಂತಿಣಿಯ ||
ಕಡುಭರದಿಂದಸಾಳ್ವೆಂದಾರಥಿಕರ | ಗಡಣವಾಡಿದುದುಪಂಥವನು ||೧೬||

ಅತಿರಥರುಗಳಸುವೀರರಿಯೊಡಲನು | ಶತಛಿದ್ರವನುಮಾಡುವೆವು ||
ಅತಿಭರದಿಂಹೊರಕೇರಿಯನಮರಾ | ವತಿಯೊಳಿರದೆಕಟ್ಟಿಸುವೆವು ||೧೭||

ಇಂತೆಂದಾರಥಿಕರುಬಿಡದಾಡುವ | ಪಂತದಪಲವುಮಾತುಗಳ ||
ಅಂತರಿಸದೆಲಾಲಿಸಿಕೇಳುತಾಘೂ | ಕಾಂತರವರುನಿಂದಿರಲು ||೧೮||

ಇಂದಿನಕಾಳಗವನುದೇವನನಗೀವು | ದೆಂದಾಧರ್ಮನಂದನಗೆ ||
ವಂದಿಸಿಬೆಸನಹಡೆದುಕೋಪದಿಂವಾಯು | ನಂದನನತಿಭರದಿಂದ ||೧೯||

ಅಣಿಯಬಾಯೊಳಗಿದಿರಾದಸಾಹಸಿಗರ | ಗಣನೆಯಿಲ್ಲದೆಹತಿಯಿಸುತ ||
ರಣರಾಕ್ಷಸನಂದವನಾಂತಾವಾಯು | ವಣುಗನೋವದೆನಡೆತರಲು ||೨೦||

ಈರೀತಿಯಿಂವೀರಮಾರುತಿನಡೆತರ | ಲಾರಾಯನನುಜಾತರುಗಳು ||
ಪೌರುಷಪುರುಷರುನೂರ್ವರುಮುತ್ತಿದ | ರೈರಾವತವಮುತ್ತುವಂತೆ ||೨೧||

ಓರೋರ್ವರುಸಾಸಿರಸಾಸಿರಬಲು | ತೇರಾನೆವಾಜಿಗಳ್ವೆರಸಿ ||
ಧಾರಿಣಿಯುಬ್ಬರ್ವಂದದಬಂದುತಾಗಿದ | ರಾರಣರಂಗರಸಿಕನ ||೨೨||

ಕುದುರೆಗಳಿಂಕುದುರೆಯುನಾಳಿಂದಾಳ | ಮದಕರಿಯಿಂಮದಕರಿಯು ||
ಅಧಟರೇರಿದರಥದಿಂರಥಗಳಸಿಟ್ಟು | ಸದೆದನುಸಮಯಮಾತ್ರದೊಳು | ||೨೩||

ದೊಡ್ಡಿತಪ್ಪಂಕದಕಣನಂಬಕಣದೊಳ | ಗೊಡ್ಡಿದೊಡ್ಡಣಮೆಂಬಬೆಳೆಯು ||
ಒಡ್ಡಮುರಿವಮೇರೆಕೋಲಾಯಿತಾಭೀಮ | ನಡ್ಡಹೊಯ್ದಾದಂಡರತ್ನ ||೨೪||

ಹತ್ತಿಯಹೊಸೆವತೆರದಿನಿದಿರಾಗಿಕ | ರುತ್ತುನಿಂದಾಕಗ್ಗಲಿಗಳ ||
ಮೊತ್ತವನ್ನವನಾಗಡೆಯಿಂವಿಕ್ರ | ಮೋತ್ತಂಸನರೆದುಹೊಕಿದನು ||೨೫||

ಕಳಿಲೆವಿದಿರಸುರಿಪಂದದಿಮದಗಜ | ಗಳದಂತಗಳನುರೆಕಿಳ್ತು ||
ಬಲವಂತರಸದರಿಂದಬಡಿದನಾ | ಅಲಘುವಿಕ್ರಮಿಯನಿಲಜನು ||೨೬||

ಅಡಿಪರನಾಗಲಾಸೆಯಬೆಸ್ಸಪರವೇ | ಲಡರಿದರಸುನುಕ್ಕಳಸು ||
ಬಡಿವಬಲ್ಲಿನೆಯಕೊಡತಿಯಾಗಲಾಭೀಮ | ಮಡಿವಳನಂತೊಪ್ಪಿದನು ||೨೭||

ನೆತ್ತರುವೆರಸಿನೆಲಕೆಬೀಳ್ವಾನೆಯ | ನೆತ್ತಿಯುಮುತ್ತನಿಲಜನು
ಚಿತ್ರರದಿಂಗಯ್ದಾಬೀರವಳ್ಳಿಯ | ಚಿತ್ರಬಿತ್ತುಪತೆರನಾಯ್ತು ||೨೮||

ಆರಡಿಕಾರಕೌರವಸಬಲವಹೊಕ್ಕು | ವಿಾರಿದವಿಕ್ರಾಂತದಿಂದ ||
ಮಾರಾಂತಮಂಡಳಿಕರಕೊಂದನಾಹೇಸು | ಕೂರೆಯನೂರಸುವಂದದೊಳು ||೨೯||

ಆವುದಾನೆಯುಹೆಣನಾವುದಶ್ವದಹೆಣ | ನಾವುದುರಥಿಕರಹೆಣನು ||
ಆವುದಾಳ್ಗಳಹೆಣನೆಂಬುದನರಿಯದಂ | ತಾವಾಯುಸುತಹತಿಸಿದನು ||೩೦||

ಲೆಕ್ಕವಿಲ್ಲದಕೂರಾನೆಕುದುರೆತೇ | ರೆಕ್ಕತೂಳದಭಟತತಿಯು ||
ಚಿಕ್ಕಟುತಿಗುಣೆಯುತಿಕ್ಕುವಂದದಿನೆಲ | ಕಿಕ್ಕಿದನರೆಗಳಿಗೆಯೊಳು ||೩೧||

ಕಡೆಯಿಲ್ಲದಕರಿಘಟೆಗಳನೆಲಕಿಕ್ಕಿ | ಗಡಿಯಿಲ್ಲದಕುದುರೆಗಳ ||
ಮಡಿಹಿಮಹೀತಳವಾನದಂತಿರ್ಪತೇ | ರ್ಪಡೆಯನೆಲ್ಲವನೊರಸಿದನು ||೩೨||

ಭೂತದಂದದಿಭೂವರಕೌರವನನು | ಜಾತರಮ್ಯೆಗಾಪಿನೆಸೆವ ||
ಚಾತುರ್ದಂತಸೇನೆಯನಿಕ್ಕಿದನವಿ | ಖ್ಯಾತವಿನೋದವಿಕ್ರಮನು ||೩೩||

ಊಣೆಯುವಿಾವಿದ್ಯೆಯೆನ್ನದೆಸವರ | ಕ್ಷೋಣಿಯೊಳಾಪಟುಭಟರ ||
ಬಾಣಸಿಯಾಗಿಜವಗೆಭೀಮನೊಸೆದುವಿ | ನ್ನಾಣದಿನಡಿಗೆವಮಾಡಿದನು ||೩೪||

ಗಡಿಯಂಕಭೀಮಭೀಮನಹೆಗ್ಗೊಲೆಯಕಂಡು | ನಡುಗುವಬಲವಪಿಂತಿಕ್ಕಿ ||
ಅಡಸಿದಕೋಪದಿನಾಸೂರ್ವರ್ಕೈತವದ | ಕಡುಭರದಿಂಮುತ್ತಿದರು ||೩೫||

ಇರಿಯಿರಿಬಡಿಬಡಿಸದೆಸದೆತರಿತರಿ | ಕಡಿಕಡಿಕೊಲ್ಲುಕೊಲ್ಲೆನುತ ||
ತರಿಸಂದುಮುತ್ತಿಮೂವಳಸಿದರಾನೃಪ | ನರಿಕೆಯನುಜರೆಲ್ಲರವನ ||೩೬||

ಗಡೆಯಿಂದಕೆಲರಕೈಗುದ್ದಿಂದಕೆಲಬರ | ನೊದೆದುಕೆಲರನಂಘ್ರಿಯಿಂದ ||
ಮಿದಿದುಕೆಲರನಾಗಸಕಿಟ್ಟುಕೆಲಬರ | ಸದೆದನುನಿಮಿಷಮಾತ್ರದೊಳು ||೩೭||

ಮುಳಿಸಿಂದಾಗದೆಗೊಂಡುಕೌರವಕುಲ | ವಿಲಯನಾಕೌರವಾನುಜರ ||
ತಳಲುವಳಲುಗುಟ್ಟಿಪಡಲಿಟ್ಟಂದದಿ | ನಿಳೆಯೊಳುಸೆರಪಿದನಾಗ ||೩೮||

ಅವನಿಪನನುಜಾತರನೆಲ್ಲರಸೊಪ್ಪು | ಸೊವಡಪ್ಪಂದದಿಕೊಂದು ||
ಪವನನಂದನಭೂತತತಿಗುಣಲಿಕ್ಕಿದ | ನವಗೆಲೋಕದವೀರರೆಣೆಯೇ ||೩೯||

ಹೆಚ್ಚಿಡಕೌರವನೃಪರತಮ್ಮಂದಿರ | ನೊಚ್ಚತವುಳಿಯದಂದದೊಳು ||
ಅಚ್ಚಾಳುಪವನಜನಾಗದೆಯಿಂಪೊಯ್ದು | ನುಚ್ಚುನುರಿಯಮಾಡಿದನು ||೪೦||

ಮಾರಣಮುಖದಮಹೀಶರಿಕ್ಕಿದಕೋರ | ಹಾರದಮುತ್ತುಭೂಮಿಪುಲಿ ||
ಬೀರಸಿರಿಯಭೀಮನಮದುವೆಗೆಕರ್ಣ | ಪೂರಮನಿಟ್ಟಂತಾಯ್ತು ||೪೧||

ಅವರರಗಿನಮನೆಯೊಳುದ್ಧ್ಯತಮುಖದೊ | ಳ್ಳವಗಿತ್ತಪರಿಭವವೆಂಬ ||
ಅವರ ಋಣವತೆತ್ತವರಸುದತಿಯರ | ಕಿವಿಯಪತ್ರವಸೀಳಿಸಿದನು ||೪೨||

ಎಂದುದೇವರ್ಕಳುಮೆಲ್ಲನುಲಿವುತಿರ | ಲೊಂದೆಡೆಮಗಧಮಾಧವರ
ಮುಂದಣರಸುಗಳುಲೆಕ್ಕವಿಲ್ಲದೆಹೋರಿ | ಹೊಂದಿದರಾಹಗಲಿನೊಳು ||೪೩||

ತೊಡಚಬೇಡಕುರುವಂಶದಹೊದರನು | ಕಡಿವಕಠೋರವಿಕ್ರಮನ ||
ಒಡನಳಿಗಲಿಗಳೆನುತಕೌಂತೇಯರ | ಕಡೆಯಕಾಳೆಗಳೊದರಿದುವು ||೪೪||

ಅನಿಶರೊಳಿನನಸ್ತಂಗತನಾಗಲು | ಘನಸೇನೆಯಾಬೀಡಿಗೆಯ್ದೆ ||
ಅನುಜರಳಿವಿಗೆಯಳಲಿಯಾಕೌರವ | ಜನಪತಿಕರೆದುಭೀಷ್ಮರನು ||೪೫||

ಏನಯ್ಯಜಗದೇಕಸಾಹಸಿನೀನಿ | ದ್ದಾನೆನ್ನತನುಜಾನುಜರ ||
ಆನದೆಕೌಂತೇಯರುಕೊಂದರಿದದೆಂದು | ತಾನವರೊಳುನೊಂದುನುಡಿಯೆ ||೪೬||

ಆನುಡಿಗೇಳಿಗದ್ಗದಕಂಠನಾಗಿಮು | ತ್ತಾನದಿಯಣುಗನಿಂತೆಂದ ||
ಈನಾಳಿನದಿನವೆನ್ನಪೌರುಷವನು | ನೀನೋಡೆಂದುಪಚರಿಸಿ || ||೪೭||

ಬೀಡಿಗೆಬಂದುನಿದ್ರೆಯೊಳಿರೆಮುಂಗಡೆ | ಮೂಡೆಮುನ್ನೇಸರುಬಿಂಬ ||
ಗಾಡಿಯಿಂದಾಯಿರ್ವಡೆಗಳುಬಗೆಯೊಳ | ಳ್ಕಾಡದೆಬಂದೊಡ್ಡಿನಿಲಲು ||೪೮||

ಆವೇಳೆಯೊಳೆಳ್ದಾಗಂಗಾಸೂನು | ದೇವರದೇವಗೆನಮಿಸಿ ||
ತೀವಿಸುರತ್ನಭೂಷಣವನಭೇದ್ಯವ | ಪ್ಪಾವಜ್ರಕವಚವತೊಟ್ಟು ||೪೯||

ಬತ್ತೀಸಶಾಯುಧಸಂಯುತರಥವನು | ಹತ್ತಲರಾತಿಕದಂಬ ||
ಅತ್ತತ್ತತೊಲಗಿಯೆನುತಸನ್ನೆಗೆಯ್ವಂತೆ | ಯೆತ್ತಿದಕೇತುವೊಪ್ಪಿದುವು ||೫೦||

ಏಕಾಕ್ಷೋಹಿಣಿಬಲಪರಿವೃತಸುಮ | ತ್ತಾಕಡೆಗಾಲದೀಶ್ವರನ ||
ಆಕಾರವಡೆದುಪಾಂಡವಸೇನೆಗಿದಿರಾಗಿ | ನೂಕಿದನಾತನ್ನರಥವ ||೫೧||

ವಿಧಿಬಂದೀಸುಭಟಾಕಾರದಿನಿರ | ವಧಿಯಾದಕೋಪದಿನಮ್ಮ ||
ವಧಿಯಿಸಲೆಯ್ತಂದುದುನಮಗಿನ್ನೇವ | ವಿಧಿಯೆಂದಾರಿಪುಸೇನೆ ||೫೨||

ಗದಗಾಪಗೊಳುತಿರೆಕಾಲಭೈರವನೆನ | ಲಧಟಭೀಷ್ಮರುನಿಲಲಾಗ ||
ವಿದಿತವಿದ್ಯಾಧರಸಮಿತಿಯರ್ಜುನಗಿ | ದಿದಿರಾಗಿಬಂದುಮಾರ್ಮಸಗೆ ||೫೩||

ತುತ್ತುರುಬಾದವೋಹರವೆಕಾರೊಡ್ಡುತ | ಳತ್ತಳಿಪಸಿಗಳಹೊಳಹೆ ||
ಹತ್ತಿಹರಿವಮಿಂಚಾರಥಿಕರಬಿ | ಲ್ಲೆತ್ತಿದಸುರಧನುವಾಗೆ ||೫೪||

ಗುಡುಗುಗುಮ್ಮೆಂಬನಾನಾವಾದ್ಯಧ್ವನಿ | ಸಿಡಿಲುಹೊಡೆವನಿಸ್ಸಾಳ ||
ಕಡುಪಿಂಕರೆಪಕಣಾವಳಿಮಳೆಯೆನೆ | ಕಡುಸೊಗಯಿಸಿತುಮೋಹರವು ||೫೫||

ಅಂತದಂಬಲಯುಗಾಲದಮುಳಿಗಾಲ | ದಂತತಿಭೀಕರವಾಗಿ ||
ಅಂತರಿಕ್ಷದೊಳುನಿಂದಾಖೇಚರಬಲ | ಸಂತತಿಯತಿಕೋಪದಿಂದ ||೫೬||

ಇಳೆಯೊಳಾಗಸದೊಳುನಿಂದುವಿದ್ಯಾಶರ | ಗಳನಡೆಬಿಡುವಿಲ್ಲದೆಸಲು ||
ಮುಳಿಸಿಂದಾಪಾರ್ಥನಂತದನೆಲ್ಲವ | ನುಳಿಯದೆನೆರೆಖಂಡಿಸುತ ||೫೭||

ಅವರೆಚ್ಚ ಶಿಖಿಬಾಣಕೆಜಲಬಾಣವ | ನವರೆಚ್ಚ ಭೂಧರಶರಕೆ ||
ತವಕದಿವಜ್ರಬಾಣವನೆಚ್ಚುಕೆಡಿಸಿದ | ನವನಸಾಹಸಕೆಣೆಯಾರು ||೫೮||

ಅವರೆಚ್ಚುರಗಶರಕೆಗರುಡಾಸ್ತ್ರವ | ನವರೆಚ್ಚವನಧಿಮಾರ್ಗಣಕೆ ||
ಅವಿರಳವಾದವಡಬತೋಮರಂಗಳ | ನಿವಹವನೆಚ್ಚುಖಂಡಿಸುತ ||೫೯||

ಇವುಮೊದಲಾದವರೆಚ್ಚವಿದ್ಯಾಶರ | ನಿವಹವಪ್ರತಿಶರದಿಂದ ||
ಭುವನೈಕವಿಕ್ರಮಖಂಡಿಸುತಿರಲಿತ್ತ | ತವಕದಿಧರ್ಮನಂದನನು ||೬೦||

ಪವನಜಮತ್ಸ್ಯನಕುಲಸಹದೇವಪಾಂ | ಡವಪಂಚಕರಾದಿಯಾದ ||
ಅವನಿಪರನುಪಲಬರಕೂಡಿನದಿಯಾತ್ಮ | ಭವನಬವರಕಿದಿರಾಗಿ ||೬೧||

ಪವನಜಕ್ಕಲಿಸಿದವೊಲ-ಕಾಲರುದ್ರನ | ನವಗಡಿಸಿದವೊಲುಕೆಣಕೆ ||
ಅವನುಕೆರಳಿಭರದಿಂದಶಿಲೀಮುಖ | ನಿವಹವನಿಡದೆಕರೆಯಲು ||೬೨||

ಒಂದಕ್ಷಯವಾಗಿಸುರಿವಶಿಲೀಮುಖ | ದಿಂದಯುಧಿಷ್ಠಿರಬಲದ ||
ಗೊಂದಣವೆಲ್ಲವುಪಡಲಿಟ್ಟವೊಲುಬೀ | ಳ್ತಂದುದುನಿಮಿಷಮಾತ್ರದೊಳು ||೬೩||

ಕರಿಯಕುದುರೆಯಕಾಲಾಳ್ಗಳರಥಗಳ | ನರಿದರುಣೋದಕವೆರಸಿ ||
ಪರಿವಂಬುರಿಪುಬಲವಿಪಿನವನುರಿಯಿಸು | ಪುರಿಯಬಾಣದವೊಲೊಪ್ಪಿದುದು ||೬೪||

ಅರಲೆಯೊಡ್ಡಿನಮೇಲೆರೆದುಕರೆವಬಲು | ಜಿರಿಗೆಂಡದಮಳೆಯಾಯ್ತು ||
ಸುರಸಿಂಧುಜನೆಚ್ಚಶರದಸಂಗಡಮಾ | ಪರನೃಪಸೇನೆಯಮೇಲೆ ||೬೫||

ಉರುಳ್ವಪದಾತಿಕೆಡೆವಕರಿನೆಲದೊಳು | ನೆರೆದಶ್ವಪುರಿವತೇರಿಂದ ||
ಧುರಧರೆಯಾಕಾಲನಬಾಣಸದಮಂ | ದಿರದಂತೆಭೀಕರವಾಯ್ತು ||೬೬||

ಹೇಳಲೇನವನಬೀರವನಸುಹೃದ್ಬಲ | ಜಾಲದಿನಾಥುರಥಪಣಿ ||
ಕಾಲಗೆಮಾರಿಮಾಡಿದನವಭೋಜನ | ಶಾಲೆಯೆತಾನಿರದಾಯ್ತು ||೬೭||

ಇಂತುಯುಧಿಷ್ಠಿರಬಲವನುಕೊಲ್ವಾ | ಸಂತನುಸುತನತಿಗೊಲೆಯು ||
ಎಂತುನೋಡುವೆನೆಂದುಕರುಣದಿನಪರವಿ | ಶಾಂತರಾಳಕೆಪೋದನಿನನು ||೬೮||

ಅನಿತರೊಳಪಹಾರತೂರ್ಯಮುಸೆಯಲಾ | ಘನತರಮುಪ್ಪಾಸೇನೆ ||
ಜನನಾಥರೊಡನೆಬೀಡಿಗೆಬರಲಾಧರ್ಮ | ತನುಜನನುಜರೊಡಗೂಡಿ ||೬೯||

ದೊಡ್ಡದೊಡ್ಡವರತೃಣಪ್ರತಿಪತ್ತಿಯಿಂ | ದೊಡ್ಡಣದೊಳುಸಿಂಧುಸುತನು ||
ಜಡ್ಡುಮಾಡಿದುದಿಲ್ಲದೇವೆನಿದಕ್ಕೆಂದು | ಗುಡ್ಡೆಣಿಕೆಯಮಾಡಿದನು ||೭೦||

ಭೂತಭವಿಷ್ಯದ್ವರ್ತಮಾನದೊಳುಸಂ | ಜಾತಮಾದಾಸಾಹಸಿಗಳ ||
ರೀತಿಯಲ್ಲಿದುವಂಬರಗಂಗಾತನು | ಜಾತಗೆಜಯಲಕ್ಷ್ಮಿಯೊಲಿವು ||೭೧||

ಬೇಲಿಬೆಳೆಯುಮೇವಂತೆಮಾತೆಯಮೊಲೆ | ಪಾಲೆಗರಳವಾದಂತೆ ||
ಬಾಲತ್ವದಿಂದೆಮ್ಮಸಾಕಿದವನೆಬಿಲ್ಲು | ಕೋಲಹಿಡಿಯೆಕಾವರಾರು ||೭೨||

ಇಂತಿದಕಾವುದುಪಾಯಮೆಂದವರೊಳು | ಮಂತಣವನುಮಾಡಲಾಗ ||
ಚಿಂತೆಯಿದೇಕೆಬೇಡೆಂದುಫಲ್ಗುನಕಾರ್ಯ | ಮಂತಿಕೆಯನುಪೇಳ್ದನಾಗ ||೭೩||

ದೇವಬಿನ್ನಪಗಂಗಾತನುಜಾತವ | ಯೋವೃದ್ಧನತಿಗುಣಯುತನು ||
ಕೋವಿದನವಗೆವೈರಾಗ್ಯವೆಮನದೊಳ | ಗಾವರಿಸಿಹುದದರಿಂದ ||೭೪||

ಅತಿಚಾತುರ್ಯದಬುಧರನುಕಳುಹಿಸಂ | ಸ್ತುತಿಯನಿರ್ವೇಗನೀತಿಯನು ||
ಸುತಿಯನೆವದಿನೋದಿಸಲುಮತ್ತವಗುತು | ಪತಿಯಾಗುವುದುವೈರಾಗ್ಯ ||೭೫||

ಎಂದುಕಿರೀಟಿನುಡಿಯೆಕೇಳಿಯಾಧರ್ಮ | ನಂದನನದನೆಕೈಕೊಂಡು ||
ವಂದಿಗಳನುಕಳುಹಿದೊಡವರಿರದೈ | ತಂದುವಂದಿಸಿಸಿಂಧುಸುತಗೆ ||೭೬||

ವೈರಾಗ್ಯಕಾರಣವಾದನೀತಿಯನವ | ಗಾರ್ಗ್ಯೆಯುದೊರೆಯಲುಕೇಳಿ ||
ಧೀರನದಕೆಮೆಚ್ಚಿಯುಸ್ಥಿರವಿಹಾಸಂ | ಸಾರವೆಂದವರೊಳುನುಡಿದು ||೭೭||

ವಿನಯೋಕ್ತಿಗಳಿಂದಬೀಳ್ಕೊಡಲಾಧರ್ಮಜ | ತನುಜನಸ್ಲಿಗೆಬಂದವನಿಗೆ ||
ಜನಿಸಿದನಿರ್ವೇಗಸ್ಥಿತಿಯನುಪೇಳ | ಲನುರಾಗಸ್ವೈದಿರಲತ್ತ ||೭೮||

ಅನುಚರಿತಭೀಷ್ಮರಮನದೊಳುತೀವಿ | ದಾಸೆಯುಪರನುಡಿಗೇಳಿ ||
ಅನಸಿಯನುಮುಸುಕಿದಮುಗಿಲೆಲರಿಂ | ದೋಸರಿಸಿದತೆರನಾಯ್ತು ||೭೯||

ತುಳಿಲಾಳಾಭೀಷ್ಮರಿಂತೆಣಿಸಿದನಾ | ಯೆಳವಿಯೊಳಿಳೆಯನುತೊರೆದು ||
ಬಳಿಕವರೆಲ್ಲರಸಲಹಿವೃದ್ಧತ್ವವ | ತಳೆದುಮುಕ್ಕಳೊಳುಕಾದುಪ್ರಮು ||೮೦||

ನಿರುತಮಲ್ಲೆಂದುನಿರ್ವೇಗಸಂಯುತನಾ | ದುರುಳಕಳೆದುಹೃದಯದೊಳು ||
ಕುರುಕುಂಭಿನಿಯೊಳೆಂದಿನಂತೊಡ್ಡಿದಾದು | ಧರಾತರಜಿಂದಚಕ್ರದೊಳು ||೮೧||

ಹಿಂಸಾದಿದೋಷೋದ್ಯೋಗದಿನ್ನೈದಿದ | ಸಂಸಾರದಸೌಖ್ಯಮಿದು ||
ಸಂಶಯವೆಂತಪ್ಪುದೆಂದಾಶಾಪಿ | ಧ್ವಂಸಿಯೆಣಿಸಿಚಿತ್ತದೊಳು ||೮೨||

ಹೃದಯದೊಳುಪಶಾಂತತೆಯುಜಡೆದುಬಾಹ್ಯ | ಕೊದವಿದರೌದ್ರಭಾವದೊಳು ||
ಪದುಳದಿನೇರಿರಥವಬಿಲ್ಗೋಲ್ವಿಡಿ | ದದಿರವೆಬಂದೊಟ್ಟೈಸಿಂದು ||೮೩||

ಹಾಸಿತವಾದಮುಕ್ತಾರಮೂರ್ತಿಯನನು | ಹಾಸದೊಳಿರದಳವಡಿಸಿ ||
ನಾನುರಾಗದೊಳುದೀಕ್ಷೆಯನನುಕಂಪಿಯ | ನೂನಭಾವದಿನಿಂದಿವಲು ||೮೪||

ತನುಬೇರೆಯಾತ್ಮನುಬೇರೆಂಬಬುದ್ಧಿಯು | ನನುನಯದಿಂದಳವಡಿಸಿ ||
ಜನಸುತಭೀಷ್ಮರಾಹವಧರೆಯೊಳುರವು | ಜನವಂಜುವಂತೊಡ್ಡಿನಿಲಲು ||೮೫||

ಅದೆಬಂದನದೆಬಂದನುತ್ತಮಸತ್ತ್ವನೆಂ | ದದುರಿಯುಧಿಷ್ಠಿರಸೇನೆ ||
ಅಧಟರದೇವನರ್ಜುನನಬೆಂಬಳಿವಿಂದು | ಹುದುಗಿನಿಂದಾಸಮಯದೊಳು ||೮೬||

ಹೃದಯದೊಳೆಸೆವಶಾಂತತೆಬಹಿರಂಗದೊ | ಳೊದವಿಧರೌದ್ರತೆಯಿಂದ ||
ಸದಮಲಗಿರಿದೊಪ್ಪಿತುಪಾದರಸನರೆ | ಪುದಿದಪೊಂಗರುವಿನಂದದೊಳು ||೮೭||

ನೋಡಿದವರಕಣ್ಗೆನಿಜವೆಂಬಂದದಿ | ಗಾಡಿಯಿಂದಾಬಿಲ್ಗೆಯಂಬ ||
ಹೂಡಿಮುಪ್ಪುರವನೆಸುವಮೃಡನಮೂರ್ತಿಯ | ಮಾಡದಂದದಿನೊಪ್ಪಿದನು ||೮೮||

ಮುಂದುವರಿದರಥವನನೂಂಕಿಮಾರ್ಗಣ | ವೃಂದವನಾಫಲ್ಗುನನು ||
ತಂದಲಂದದಿಕರೆದನಸಮತಾಗುಣ | ದಿಂದನಿಂದಧಟನಮೇಲೆ ||೮೯||

ಅದನುಕಂಡಾಪಾಂಡವಸೇನೆಸಲಿವರಿ | ದದಿರದೆಶರವರುಷವನು ||
ಸದಯುಸಂಗದಮೇಲೆಕರೆಯೆರೋಮಾವಳಿ | ಹುದುಗಿದಂದದಿತಾಗಿದುವು ||೯೦||

ಗರಿವರತಾಗಿಹುದುಗಿದಂಬುಗಳಹೊತ್ತ | ನೆರೆಗಲಿಸದಿಯುಸಂದಸನ ||
ಮಿರುಪಂಗಲತೆರಂಜಿಸಿತುಫಲಪೂಗಳು | ತುರುಗಿದಮಂದಾರದಂತೆ ||೯೧||

ಲಲಿತಾಂಗದೊಳುಪ್ಪುಳುಗಿದಂಬಿನಗರಿ | ಗಳಿನಾಥೀಪ್ಸ್ಮರೊಪ್ಪಿದರು ||
ತಳುವದೆಪೀರಸಗ್ಗಕೆಪಾರಲೆಣಿಸುವ | ಗ್ಗಳದಮಾನಸವಕ್ಕಿಯಂತೆ ||೯೨||

ಅರುಣಾಂಬುವೆರಸಿಪಡದೆಮುರುವೊಸಗೊಂಡ | ಶರಸಂಘಾತಮೊಪ್ಪಿದುದು ||
ಧುರಧೀರಸಂಗದೊಳಾಕೇಜೋವೃಕ್ಷ | ದುರುಬೀಜಾಂಕುರದಂತೆ ||೯೩||

ಆಕಣೆಗಳುಸಟ್ಟಭಾರಕೆಜೋಲ್ದುಪ | ತಾಕಾಸ್ತಂಭವನೊರಗೆ ||
ಆಕಲಿಯಿರವಸುಕಂಡುಪಾಂಡವರಪ | ತಾಕಿನಿಯಾಲಿಬೊಬ್ಬಿರಿಯೆ ||೯೪||

ಆಗಲಂಬರಕಪದಂದದಿಕೌರವ | ನಾಗಲೆಣಿಕೆಯನಿತರೊಳು ||
ರಾಗದಿನಪರಬಿಗ್ಗಧುವಕೂಡುವೆನೆಂದು | ಬೇಗದೊಳಿನಸ್ಯದಿದನು ||೯೫||

ಪಡೆಗಳೆರಡುತಂತಮ್ಮಪಾಳಯಕ್ಕೈದ | ಲೊಡನಿತ್ತಲಾಸತ್ಯಮೂರ್ತಿ ||
ಎಡೆವಿಡುವಿಲ್ಲದೆನಟ್ಟನಾರಾಚದ | ಕಡುಸೋವಿಗೆಣಿಸದೊಂದಿನಿಸು ||೯೬||

ತನುಪನಾತ್ಮನೊಳುಭಿನ್ನವಮಾಡಿನಿಜತತ್ತ್ವ | ವನೆಬಗೆಯೊಳುಭಾವಿಸುತ ||
ಮನಮೊಸೆದುಭಯುಪರಿಗ್ರಹವನುಬಿಟ್ಟು | ಘನತರಸೌಖ್ಯವನೀವ ||೯೭||

ಸುರುಚಿರಪಂಚಪದಂಗಳನೊಸೆದು | ಚ್ಚರಿಸುತ್ತಾಸತ್ಯವಿದನು ||
ನಿರುತದಿನಾಯೆರಡುಂಸೇನೆಬಲಗೊಳು | ತಿರಲಾದೇಹವನುಳುಹಿ ||೯೮||

ಮೊತ್ತಮೊದಲಸಗ್ಗದೊಳುಜನಿಯಿಸಿದೇ | ವೋತ್ತಂಸನಾಗಿಪುಟ್ಟಿದನು ||
ಇತ್ತಲೆರಡುಸೇನೆನಿದ್ರೆಯೊಳಿರಲೆ | ಚ್ಚತ್ತುಭಾಸ್ಕರನುದಯದೊಳು ||೯೯||

ಪೂರ್ವದತೆರದಿಮೋಹರಪೂಡ್ಡಿನಿಲೆಕೌರ | ವೋರ್ವೀಶನಿನಜನಮುಂದೆ ||
ದೋರ್ವಲಶಾಲಿಗಂಗಾತನುಜನಕೊಂದ | ಗರ್ವಫಲ್ಗುಣಗಾರುಪಾಟಿ ||೧೦೦||

ನುಡಿದಭಾಷೆಗೆನಮ್ಮಸೇನಾಚಕ್ರವು | ನೊಡೆದುಸೈಂಧವನಶಿರವನು ||
ಹೊಡೆಸಂದಾಡಿದಪೀರಕಿರೀಟಿಗೆ | ಪಡಿಯಾರುಭೂತಳದೊಳಗೆ ||೧೦೧||

ಎಣಿಕೆಮಾಡದೆಂಣರಂಗವಹೊಕ್ಕ | ನ್ನಣುಗರನಾನೂರ್ವರನು ||
ಕ್ಷಣದೊಳುಕೊಂದಭಿಮನ್ಯುಗೆಲೋಕದ | ಗಣಗಲಿಗಳುಪಾಸಟಿಯೆ ||೧೦೨||

ದುಗಳಿಗೆಯೊಳಗೆನ್ನಣುಗಸತ | ಪ್ಯಂದಿರನಾಸೂರ್ಪರನು ||
ಂದಭೀಮನೆ ಸರಿಯುಪ್ಪವರುಂಟೇ | ಯೆಂದುನುಡಿದನುಡಿಗೇಳಿ ||೧೦೩||

ದಿನಪಗಲೆನ್ನಕೈಯುಪರಿಯುಸೋ | ಡೆಂದುಬೀಳ್ಕೊಂಡುರಥವನು |
ದಿಸೇರಿಬಳಿಕದಿವ್ಯಕವಚವ | ಸೂಂದಿಸಿಜಿಲ್ಕೋಲ್ವಿಡಿದು ||೧೦೪||

ಪತಿಯೇಕಾಕ್ಷೋಹಿಣಿಬಲವನು | ಬೆರಸಿತನ್ನಪಿತಸೇನೆಯನು ||
ಧೀರನಿನಸುತನಾಕಲಿಯೆನೆಪಾಂಡ | ವರಪಡೆಯನುತಾಗಿದನು ||೧೦೫||

ಕೋಪದಿತಾಗಲೆರಡುಪತಾಕಿನಿ | ತಂತವ್ಮೊಳನೆರೆತುದುಗಿ ||
ವಮುಂತನುನೋಡದೆಕಾದೆಬಳಿಕಕ್ಕ | ತಾಂತನೊದಲುತುಂಬಿದುದು ||೧೦೬||

ತ್ಕಲಿಕರ್ಣನವಾಹಿಸಿಯಿರಿ | ಪ್ರೊತ್ತಂಬರಕೆಪಾಂಡವರ ||
ತ್ತದವರೆಜೆಲ್ಲವ್ರಜೆಲ್ಲಷ್ಟೀ ಯಾ | ಗುತ್ತಿದುರ್ದಾರಣದೊಳಗೆ ||೧೦೭||

ಪರಾಕ್ರಮಿಯಾದಿತ್ಯನಣುಗನ | ಬಲದಬಲ್ಮೊಲೆಯುಸ್ಸೈರಿಸದೆ ||
ಲಗೆಟ್ಟುಕೌಂತೇಯರಬಲದಬ್ಬು | ದಲೆಗೊಂಡುದತಿಭೀತಿಯಿಂದ ||೧೦೮||

ವಿಕ್ರಾಂತಕರ್ಣನಕಾಸಿನಚತು | ರಂಗವಾಹಿನಿಯುರವಣೆಗೆ ||
ದಿಗೊಳುತಿದುರ್ದಾರಿಪುಸೇನೆಯ | ಜಂಗುಳಿಯಾಬವರದೊಳು ||೧೦೯||

ಕಂಡಸಿಲನಂದನಸುರಥವನೂಂಕಿ | ಕದನಕರ್ಕಶಕರ್ಣನನು ||
ಗಿದಿರಾಗೆಂಡುನಿಂದನಂ | ದಧಟಿಂದಶರಸಂತತಿಯ ||೧೧೦||

ತ್ತಲೆವಡೆದಾಬಾಣವನುಕಂಡು | ತೊಟ್ಟನೆಕಟಿದೊಂದುಶರವ ||
ರಥನವಮಾಡಲುಕಂಡುಗದೆಗೊಂಡು | ಕಟ್ಟುಗ್ರದೊಳೆಯ್ದಿದನು ||೧೧೧||

ಬಾಣದಿಂದಾಯಿನಸುತನೆಸೆ | ಮರುತಸುತನುಮೂರ್ಛೆಯಿಂದ ||
ನಿಡಲುನೀಲಾದ್ರಿನೆಲಕೆಬೀಳ್ವ | ಪರಿಯೊಳುಬೀಳ್ವದಕಂಡು ||೧೧೨||

ನುಜಘಟೋದ್ಗಜನಾತನ್ನ | ತಾತನಸಂಗಿಕ್ಕಿಸಿದು ||
ನುತರಣಿತನುಜಬೇಗವೆಸಗಿದಿ | ರಾತುನೀಸೋಡುನೋಡೆಂದು ||೧೧೩||

ಕೆಕ್ಕಳಗೆರಳ್ವಂದದಿನು | ತ್ತಾಸೂರ್ಯಸುತನೊಡನಿರ್ದ ||
ಯೋಕಾಕ್ಷೋಹಿಣಿಯುನೆಲ | ಹೇಸುವಂದದಿಕೊಂದನಾಗ ||೧೧೪||

ಲ್ಲದತನ್ನಬಲವನೆಲ್ಲವಕೊಂ | ದವನನಮೋಘಶಕ್ತಿಯೊಳು ||
ತನಿಡೆಬೀಳ್ದನುಸೋಲೆನೋಡುವ | ದಿವಿಜಾವಳಿಪೊಗಳ್ವಂತೆ ||೧೧೫||

ಇಂತುಘಟೋದ್ಗಜಬೀಳಲುಕಂಡುಕೃ | ತಾಂತಕುಪಿತಯುಧಿಷ್ಠಿರನು ||
ಅಂತರಿಸದೆರಥವನುಸೂಂತಿಘನಶರ | ಸಂತತಿಯನುಸೂಸಿದನು ||೧೧೬||

ಉಸಾರರಾಜಪೆಲ್ಲವನುಕಡಿದುಧರ್ಮಜ | ಸೂನುವವಿರಥನಮಾಡೆ ||
ಘೂಸುತವೀರರೆನಿಸುವಮಳ್ಗಳುಬಂ | ದಾಸದೆವೊಸೆಯಿಕ್ಕಿದವು ||೧೧೭||

ಇಂತುಬಂದಪರೆಜ್ಜನಿಸಿತಶಿಳೀಮುಖ | ಸಂತತಿಯನುಹರಿಗಡಿದು ||
ಕೊಂತಿಯಜೊಚ್ಚಲಮಗನಮಳ್ಗಳನಾಗ | ಳಂತೆವಿರಥರಮಾಡಿದನು ||೧೧೮||

ಈತೆರದಿಂಘೀಮಭೀಮತನುಜಧರ್ಮಜ | ಜಾತಮಾದ್ರಾನಂದನರ ||
ಆತರಣಿಬಗೆಲೆಮುತ್ತೊಂದುಕಡೆವಿ | ಖ್ಯಾತಪಿಕ್ರಮಫಲ್ಗುಸನು ||೧೧೯||

ಬೆಂಬೀಳದೆತನಗಿದಿರಾದನೃಪನಿಕು | ರುಂಬವತಾನಿರದೆಜ್ಜ ||
ಅಂಬುಗಳಿಂದಕರುಳ್ಗಳಸೀಳಿಸೀ | ರುಂಬುಳಾಡಿಸಿಕೊಂದನತ್ತ ||೧೨೦||

ಬಲಭದ್ರನೊಡನೆಜರಾಸಂಧನಣುಗಕ | ಗ್ಗಲಿಕಾಲವಯನುರೆಮುಳಿದು ||
ಬಲಯುತನಾಲಾಸಿರಮುಕುಟಾಧೀಶ | ರಲಸದೆತನ್ನೊಡವರಲು ||೧೨೧||

ಆರಘಟೆಯೊಳುರಥವನೂಂಕಿಕೋಪದಿ | ಮಾರಿಮಸಗಿದಂದದೊಳು ||
ಕೂರಂಬುಗಳನೆಚ್ಚುಕೊಂದನೆಲ್ಲರನಾ | ಧಾರಿಣಿಮಿಗೆಹೇಸುವಂತೆ ||೧೨೨||

ಕುದುಹರಿಯಲುಬಾರದರಥತತಿಸುಗ್ಗ | ಸುರಿಯಾದುದುಭಟನಿಕರ ||
ಪರಿವರಿಯಾಯ್ತುಹಯಾವಳಿಪಡಲಿಟ್ಟ | ತೆರನಾದುದುಗಜನಿವಹ ||೧೨೩||

ಪಾರುಪತಲೆಪವಮಾನಪಥಕೆಯೆದೆ | ಯೂರಿನೆಲಕೆಬೀಳ್ವಮುಂಡ ||
ಜಾರೇಳುವರಕುತದಪೊನಲಾಯಿರಿ | ಗಾರನರಣದೊಳೊಪ್ಪಿದುದು ||೧೨೪||

ಹಾರುವರುಂಡಹಿಡಿದಖಡ್ಗಸಹಮಾಗಿ | ಯಾರಯ್ವದೇಳೆಂಟಡಿಯ ||
ಧಾರಣಿಯೊಳುನಡೆದುರುಳ್ವಟ್ಟೆಗಳುನು | ತ್ತಾರಣಾಧರೆಯೊಳೊಪ್ಪಿದುವು ||೧೨೫||

ಇಂತಾಮುಕುಟವರ್ಧನರನಾಲಾಸಿರ | ವಂತನ್ನಭುಜಬಲದಿಂದ ||
ಅಂತರಿಸದೆಕೊಲಲನಿತರೊಳಪರದಿ | ಕ್ಕಾಂತೆಯೊಳಿನನುಕೂಡಿದನು ||೧೨೬||

ಆರಾತ್ರಿಯೊಳಾಯೆರಡುಕಡೆಯಸೇನೆ | ಸೇರಿತಂತಮ್ಮ ಪಾಳೆಯಕೆ ||
ಸಾರಿಸಿದ್ರೆಯೊಳೊರಗಿರೆಮೂಡಿಕಾಣಿಸಿ | ತಾರಪಿಮೂಡಗಡೆಯೊಳು ||೧೨೭||

ಹಲವುಪರೆಗಳುಣ್ಮಿದುವುಮುನ್ನಿಸಂತಾ | ಬಲಗಳೆರಡುಪೌಜನಿಕ್ಕಿ ||
ನೆಲದಾಣ್ಮರು ಮದಗಜವೇರಿ ತಂತಮ್ಮ | ನೆಲೆಯೊಳಗೆಯ್ದಿದರಾಗ ||೧೨೮||

ಕೌರವನಾಕಾರ್ಮುಕಾಚಾರ್ಯನಕರೆ | ದೀರಣವನುಗೆಲುವುದಕೆ ||
ಧೀರನೀನಲ್ಲದನ್ಯಗರ್ಗದೆಂದಾ | ವೀರಪಟ್ಟವಕಟ್ಟಿದನು ||೧೨೯||

ಆವೀರಪಟ್ಟವಕಟ್ಟಿಬೆಸನನೀಯ | ಲಾವೈರಿಬಲಕಿದಿರಾಗಿ ||
ದೇವದಾನವರಾಗಸದೊಳೀಕ್ಷಿಸುತಿರ | ಲೋವದೆಬಿಲ್ಕೋಲ್ವಿಡಿದು ||೧೩೦||

ಅಂತಕನತಿಕೋಪವನಾಸ್ಯದೊಳುತಾಳಿ | ದಂತೆಕಠೋರವಿಕ್ರಮನು ||
ಅಂತರಿಸದೆರಥಗಸೂಸೂಂಕೆದ್ರುಪದಭೂ | ಕಾಂತನಾತಂಗಿದಿರಾಗೆ ||೧೩೧||

ಇಂತಿದಿರಾಗಿಯತ್ಯಂತಕುಪಿತರಾ | ತಂತಮ್ಮಬಲವಕೈವೀಸೆ ||
ಅಂತರಿಸದೆಲಯಸಮಯದಘನಘನ | ವಂತಾಗುವಂತೆತಾಗಿದರು ||೧೩೨||

ಆಸದೆಬಿಲ್ಲೋಜನೆಯ್ತಂದಿರದೆಸು | ವಾನಾರಾಚವಿತಾನ ||
ಆನೆಲದೊಳುಕರಿಯುಲುಕಡೆಗಾಲದ | ಸೋನೆಕರೆವವಾಳ್ಕೆಯೊಳು ||೧೩೩||

ಲಾಳವಟ್ಟಿಯವಾಡಿದುವಾನೆಯೊಡಲನು | ಸೀಳಿದುವಶ್ವವೆದೆಯನು ||
ಹೋಳುಮಾಡಿದುವುರಥವನರಿದುವುಕಾ | ಲಾಳಕೊರಲನಾಕಣೆಗಳು ||೧೩೪||

ಅಂಬಿನಮೊನೆಯೋರಿಂಚಿವಮ್ಮವಾರ | ಕ್ಕಾಂಬುವೊಪ್ಪಿತುಧುರಧರಣಿ ||
ಎಂಬನುದತಿಯಂಬರಲಕ್ಷ್ಮಿಗರ್ಭ್ಯವ | ಸಿಂಜಾಗಿಕೊಡುವಂದದೊಳು ||೧೩೫||

ಕರನರವಯಸಂಚಯದೊಡಲಿಂದೊಕ್ಕ | ಕರುಳಬಳ್ಳಿಗಳೊಪ್ಪಿದುವು ||
ಧುರಧರೆಯೆಂಬಂಬುಧಿಯೊಳುಬೆಳೆದುಬಂ | ಧುರವಾದವಿದ್ರುಮದಂತೆ ||೧೩೬||

ಅರುಣೋದಕವೆರೆದಲಗುಮೆಯ್ಯೊಳುಮೂಡಿ | ಧರಾವೀರಭಟರಂಗದೊಳು ||
ಕರಮೆಸೆದುವುಮತ್ತವರಕೋಪಾನಲ | ದುರಿಯನಾಲಗೆಯಂದದೊಳು ||೧೩೭||

ಗರಿವರಮುಳುಗಿದಂಬುಗಳೀರೆಂಹೊ | ಮ್ಮರಿದುಹಾರುವಹಯವಿತತಿ ||
ಅರಿಕೆಮಾಡಿದುವುತಮ್ಮಂಗನಶ್ವಗಳೀ | ತೆರದಿಹಾರುವುವೆಂಬುದನು ||೧೩೮||

ಈವರಿಯಾನೆಗೊಲೆಯುಕೊಲುತೆಯಿತಪ್ಪ | ಚಾಪಾಗಮಾಚಾರ್ಯನನು ||
ಕೋಪದಿನಂದುತಾಗಿದನುಪಾಂಚಾಳನು | ಹೀಪತಿಯತಿಭರದಿಂದ ||೧೩೯||

ತಗರುತಗರುತಾಗುವತೆರದಿಂದಾ | ಜಗದೇಕವೀರಗುರುವನು ||
ತೆಗೆಬಿಗಿಯಿಲ್ಲದೆಬಂದುತಾಗಿದನಾ | ವಿಗಡವಿಕ್ರಮಿಪಾಂಚಾಳ ||೧೪೦||

ಊಣೆಯವೊಂದಿನಿಸಿಲ್ಲದೆಬಂದಾ | ಬಾಣವ್ರಾತವಮುಕರೆವ ||
ಕ್ಷೋಣೀಪತಿಪಾಂಚಾಳನಕಂಡಾ | ದ್ರೋಣನಿಂತೆಂದಾಡಿದನು ||೧೪೧||

ಬೇಡದ್ರುಪದನನ್ನೊಳುಕಾದಿಯುಸುವನೀ | ಡಾಡುಪಪೊಲ್ಲಮೆಸಿಸಗೆ ||
ನಾಡಾಡಿಯಲ್ಲೆನ್ನ ಕೈಯುಪರಿಯುನೋಡು | ನೋಡೆಂಬನೊಳಿಂತುನುಡಿದ ||೧೪೨||

ಹಾಳೆಬಾಳೆಲೆಯುಹರಹಿರಾಜಾನ್ನದ | ಕೂಳಿಕ್ಕಿ ತೊಯೆತುಪ್ಪವೆರೆದು ||
ತಾಳಿಲವಿಡೆನಿಮ್ಮಾಕೈಯುಪರಿಯುನು | ಹೇಳಬಹುದುಕೇಳಬಹುದು ||೧೪೩||

ಪರಿಯಾಣತುಂಬಿಪಲವುದೋಸೆಕಡುಬತಂ | ದಿಬನಿಬೆಲ್ಲದಹಾಲನೆರೆದು ||
ಹೆರೆದುಪ್ಪವಿಕ್ಕೆನಿಮ್ಮಾಕೈಯುಪರಿಯುನು | ಪಿರಿದಾಗಿಕಾಣಲುಬಹುದು ||೧೪೪||

ಎನೆಕೇಳಿಕೆಕ್ಕಳಗೆರಳಿಕುಂಭಜನುರೆ | ಮುನಿದೊಂದುದಿವ್ಯಾಸ್ತ್ರದಿಂದ ||
ಇನಿಸುವೇಗದೊಳಿಕ್ಕಡಿಮಾಡಿದ್ರುಪದನ | ತನುವಕೆಡೆಯುಲೆಚ್ಚನಾಗ ||೧೪೫||

ಅರುತಿರಲುಕುರುಸೇನೆಯುದನುಕಂಡು | ಕೂರಾಳುಧೃಷ್ಟದ್ಯುಮ್ನ ||
ವೀರಾವೇಷದಿಬಂದುತಾಗಿವನಂ | ದಾರೈಯುದಾಬಿಲ್ಲಗುರುವ ||೧೪೬||

ತಂದೆಯುಕೊಂದಪಗೆಯುಕೊಲ್ಲದೊಡೆಭಂಗ | ವೆಂದುಬಗೆದುಭರದಿಂದ ||
ಬಂದುಬಾಣದಬಳಗವನುರೆಕರೆದನು | ಮುಂದೇತರಕ್ರೋಧದಿಂದ ||೧೪೭||

ಈಪರಿಯೆಸೆವಧೃಷ್ಟದ್ಯುಮ್ನನಕಂಡು | ಚಾಪವಿದ್ಯಾಕೋವಿದನು ||
ಕೋಪದಿನೆಸಲೊಂದುದಿವ್ಯಾಸ್ತ್ರದಿನಂದಿ | ನಾಪಾಪದಫಲದಿಂದ ||೧೪೮||

ತಾನೆಚ್ಚಂಬಿನಬಲುಮೆಕೆಡಲುಚಿತ್ರ | ಮಾನಸನಾಗಿಕುಂಭಜನು ||
ತಾನಿರಲೊಡನಾಧೃಷ್ಟದ್ಯುಮ್ನನ | ಸೂನಕೋಪಾವೇಶನಾಗಿ |೧೪೯||

ಭರದಿಂದೊಂದುಬಾಣದಿನೆಸಲದುಬಂ | ದರಿದುದವನಮಸ್ತಕವನು ||
ಅರಪಿಂದಭವನಳಿಕದೊಳಂದುಒರೆವಾ | ಬರಹವವಿಾರುವರಾರು ||೧೫೦||

ನಿಲ್ಲದೆರಡುಸೇನೆಗೆಹರುವನುಹೇಳ | ಬಲ್ಲಬಿಲ್ಲಾಳಿನಿಸರೊಳು ||
ಹುಲ್ಲಾಳಿನಿಂಸಾವನುಹಡೆವಂತಾಯ್ತು | ತಲ್ಲಾವಿಧಿವಶದಿಂದ ||೧೫೧||

ಎಂದಾಕುರುಸೇನೆಮುರುಗುತಿರಲುಮುದ | ದಿಂದಾರೆಪಾಂಡವಸೇನೆ ||
ಮಂದರಮೇಲೆಕವಿದವೊಲುಧೃತರಾಷ್ಟ್ರ | ನಂದನನತಿಚಿಂತಿಸಿದನು ||೧೫೨||

ಆಸಮಯದೊಳತ್ತಮಕುಟವರ್ಧನರಿ | ಚ್ಛಾಸಿರವನುಕೂಡಿಕೊಂಡು ||
ಓಸರಿಸದೆಶಂಕುಕರ್ಣೆಯೆಂಬವನುಜ | ರಾಸಂಧಚಕ್ರಿಯನುಜನು ||೧೫೩||

ಮುಂದ್ವೈಸಿದರೋಷಾವೇಶದಿಂದಮು | ಕುಂದನೊಡ್ಡಿದಮೋಹರದ ||
ನಂದನೆಂದೆಂಬನರೇಂದ್ರಸೊಗಸಮು | ಸಂದಸಾಹಸದಿನಿದಿರ್ಚೆ ||೧೫೪||

ಪ್ರಕುಪಿತದಿಂದಾಶಂಕುಕರ್ಣಿಯನಾ | ಸಕಲಸೇನೆಯನೊಡವಂದ ||
ಮಕುಟವರ್ಧನರನೆಲ್ಲರನಾಸಂದನನು | ತ್ಸುಕಪಿಕ್ರಮಿಕೊಂದನಾಗ ||೧೫೫||

ಅಸಮಯುದೊಳಂಬರಮಣಿಯಪರದಿ | ಶಾಸಾಗರದೊಳುಹೊಗಲು ||
ಆಸೇನೆಗಳುಬೀಡಿಗೆಬಂದೊರಗಲಂ | ದೋಸರಿಸಿದುದಾರಾತ್ರಿ ||೧೫೬||

ಕುರುಪತಿಯಾದ್ರೋಣಂಗಾದಮರಣಕ್ಕೆ | ಪಿರಿದುಚಿಂತಾಕ್ರಾಂತನಾಗಿ ||
ಇರೆಕಂಡುಕರ್ಣನಿಂತೆಂದನೆಲೆಭೂ | ವರಕೇಳೆನ್ನಬಿನ್ನಪವ ||೧೫೭||

ಧುರದೊಳಗಿದಿರಾದಾಪಾಂಡುಸುತರನು | ಪಿರಿದುಕೋಪಾಟೋಪದಿಂದ ||
ಸದಲವೊಸಗೆನಿಲ್ಲದಂತುಟುಮಾಳ್ಪರಿ | ಬಿರುದಿನವರುನಿನ್ನೊಳುಂಟು ||೧೫೮||

ಏಕಾಂಗವೀರರೇಳಿಗೆಯಸಾಹಸಿಗರು | ಲೋಕವಿಖ್ಯಾತವಿಕ್ರಮರು ||
ಆಕಾಲಗೆಣೆಯೆನಿಸುವಕೋಪಹೃದಯರ | ನೇಕರುಂಟುನಿನ್ನೊಳಗೆ ||೧೫೯||

ಸೂರ್ಯನಮುಂದೆಸೊಡರೆನಿನ್ನೊಳಿರ್ದತಿ | ವೀರ್ಯರುಗಳಮುಂದೆನ್ನ ||
ಶೌರ್ಯಮಸುಸುವುರ್ದುಮತವೇಯಪಗತ | ವೈರ್ಯವನೀಶಕದಂಬ ||೧೬೦||

ಎನ್ನಮೋಹರಕಿದಿರಾದೊಡೆನೀಮೊವ | ಉನ್ನಿಸಿದಾವೈರಿಗಳ ||
ಬನ್ನಬಡಿಸಿಹಿಡಿತಂದುಬಿಡಿಸುವೆನು | ನಿನ್ನಮೊದಲದುಃಖವನು ||೧೬೧||

ಎರಡುಕಡೆಗೆಸರಿಯಾದಮರುಕವುಳ್ಳ | ಗುರುಗಂಗಾತನುಜರನು ||
ಮರಣವಡೆದರೆಂದೇಕೆಮರುಗುವೈ | ಮರುಳುತನದಿಮಹೀಪಾಲಾ ||೧೬೨||

ಬವರದವೊಸಗಿದಿರಾದಾಬಲಯುತ | ರವರಿವರೆಂದೆನಬೇಡ ||
ಜವನಾಗಲಿಬವರದೊಳ್ಕೊಂದುಮರುಳ್ಗಳ | ನಿವಹಕೌತಣವನೂಡುವೆನು ||೧೬೩||

ಕೌಂತೇಯರುಗಿವುಂತೇಯರುನನ್ನಸ್ತ್ರ | ಸಂತತಿಗಿದಿರಾಗಲಹುದೇ ||
ಮಂತಣವನುಬಿಟ್ಟುಬರೆಯಿಸೆನ್ನೀಬಲು | ಪಂತದನುಡಿಯನೆಂದೆಸಲು ||೧೬೪||

ಪರಮಾರ್ಥಮಿದುತಪ್ಪದೆಂದುಕೌರವನೃಪ | ವರನುಕರ್ಣಗೆಯಾದಿನದ ||
ಉರುತರವೀರಪಟ್ಟವಕಟ್ಟಿದನಾ | ದರಪುಗಲತಿವಿಭವದೊಳು ||೧೬೫||

ಈತೆರದಿಂಪಟ್ಟವಕಟ್ಟಿಬಳಿಕಾ | ಭೂತಳೇಶನುಶಲ್ಯನನು ||
ಪ್ರೀತಿಯಿಂದವೆಕರೆಯಿಸಿಸನ್ಮಾನಿಸಿ | ಮಾತನಿಂತೆಂದಾಡಿದನು ||೧೬೬||

ಹಿಂದೆಕರ್ಣನುನೀನುಕೈದೆಗೆವಿರ್ದುದ | ರಿಂದೆನ್ನತನುಜಾನುಜರು ||
ಹೊಂದಿಕುಲಕ್ಷಯವಾಗಿನನ್ನೀನೆಳ | ಲೊಂದುತಾನೆನಿಂತುದೀಗ ||೧೬೭||

ಅಂತದರಿಂಜೀವಿಸುವುದುಕಡುಕಷ್ಟ | ಮುಂತೀತನುವನೀಗುವುದು ||
ಸಂತತಸುಖವೆಂದುದುಃಖಿಸುತಾಭೂ | ಕಾಂತಮುತ್ತಿಂತೆಂದುನುಡಿದ ||೧೬೮||

ಎನಗೆನೀಪೇರ್ವರೆರಡುತೋಳೆರಡುದಿಟ್ಟ | ಅನಿತರಿಂದೀಪರಾಭವವು ||
ಜನಜನಿತಮುಮಾಗಿನಿಮಗಲ್ಲದೆನಸ | ಗಿನಿಸಿಲ್ಲನಿಶ್ಚಯಮಾಗಿ ||೧೬೯||

ಎಂದುಕಣ್ಣಡೆಗುಂದಕವನಾಂತುಕೂರುಗು | ವಂದಮಿಡಿವಕುರುಪತಿಯ ||
ಅಂದವಕಂಡತಿಕಾರುಣ್ಯಹೃದಯಸಿಂ | ತೆಂದುನುಡಿದನುಮಾದ್ರಿಪನು ||೧೭೦||

ಶತ್ರುವರಿಗೆದುಃಖಿಸಲವರೇಳ್ವರೆ | ಯುತ್ತಮಸತ್ತ್ವರಂತಿಪನು ||
ಚಿತ್ತಕ್ಕೆತಪ್ಪುದುಚಿತವೇಭೂಪಾ | ಲೋತ್ತಂಸಕೇಳಜನ್ನಪನ ||೧೭೧||

ಮೊನೆಯೊಳಗೆನಗಿದಿರಾದೊಡೆನೃಪನಿನ್ನ | ತನುಜಾನುಜರನೆಷ್ಟಂಗೆ ||
ಅನುಮಾನವೇಕೆಪಾಂಡವರನೆಷ್ಟನುನಿನ್ನ | ಮನವೆಚ್ಚವೊಲುಕೊಂಬೆನೆನಲು ||೧೭೨||

ಅನುಡಿಯನುಕೇಳಿಹರ್ಷೋತ್ಕರ್ಷನಂ | ದಾನೃಪನಿಂತುನುಡಿದನು ||
ನೀನೆನಗುಳ್ಳನಾದೊಡೆನಾನುಡಿ | ದೀನುಡಿಯನುಸಲಿಸುವುದು ||೧೭೩||

ಎಂದಾವನಾದ್ರೀಶನಕ್ಕೈಯಿಂತಪ್ಪೆ | ನೆಂದೊಡಬಡಿಕೆಯಕೊಂಡು ||
ಮುಂದಣಕಾರ್ಯವನಿಂತಾನೃಪಕುಲ | ವೃಂದಾರಕನಾಡಿದನು ||೧೭೪||

ಇಂದಾಕದನಕರ್ಕಶಿಕರ್ಣನಾಪಾಂಡು | ನಂದನರನುಕೊಲ್ಲುದಕೆ ||
ಸಂದೇಹಮಿಲ್ಲದರಿಂದಾತಗೆಮನ | ಸಂದುಸಾರಥಿಯಾಗಬೇಕು ||೧೭೫||

ಆತಗೊಲಿದುನೀನುಸಾರಥಿಯಾಗಲ | ರಾತಿಗಳೆಂಬಡಪಿಯನು ||
ಮಾತೇನುಮಿಗೆಸುಡುವಗ್ನಿಗನಿಲಕೂಡಿ | ದಾತೆರನಹುದುನಿಶ್ಚಯವು ||೧೭೬||

ಎಂದುಶಲ್ಯನನೊಡಬಡಿಸಿಕರ್ಣಗೆಮನ | ಸಂದುಸಾರಥಿಮಾಡಲತ್ತ ||
ಮುಂದೇತರವಿಕ್ರಮಿದೇವೇಂದ್ರನ | ನಂದನನಾಸುದ್ದಿಗೇಳಿ ||೧೭೭||

ಮಾತಾಳಿಗಳಪ್ಪಮಾಗಧರನುಕರೆ | ದಾತುರದಿಂದೈದಿಸಲು ||
ಆತರಣಿಜನೆಡೆಗೈದಿಯವನಪಿ | ಖ್ಯಾತಿಯನಿರದೆಕೊಂಡಾಡಿ ||೧೭೮||

ಬಳಿಕಿಂತೆಂದರೆಲೇವಿಕ್ರಮಕುಲ | ತಿಲಕಕಿರೀಟಿತನ್ನೊಳಗೆ ||
ಬಲಯುತನಾಗಿನಾಳಿನದಿನದೊಳಗನಿ | ಸಳುಕದೆಕಾದಬೇಕೆನಲು ||೧೭೯||

ಬಲಯುತನಾಮಾತಿಗೆನನುನಗೆನಕ್ಕು | ಬಳಿಕೆಂದನಾನವರೊಗಿ ||
ಎಳಸಿದುದನುವೈದ್ಯನಿತ್ತಂತಾದುದು | ತಳುಪದೆಬರಹೇಳೆಂದು ||೧೮೦||

ಪಲರನ್ನದೊಡವುಪಲವುದಿವ್ಯಾಂಬರ | ಪಲವುನಾಣೆಯಧ್ವಜಾಳಿಗೆಯು ||
ತಲೆಹೊರೆಯಾಗುವಂದದಿನಿತ್ತುಬೀಳ್ಕೊಟ್ಟು | ಕಲಿಕರ್ಣನಿಂತೆಣಿಸಿದನು ||೧೮೧||

ಅಧಟರವರುಪಾಂಡವರೆನಗನುಜಾತ | ರದರಿಂದಿವರನಾನಿರದೆ ||
ಕದನದೊಳಗೆಕೊಂದೊಡೆಪಾಪಸಂಭವಿ | ಪುದಕೆಸಂಶಯವಿನಿಸಿಲ್ಲ ||೧೮೨||

ಆದೊಡೇನೋಕುರುಪತಿಯೆನ್ನನುರೆನಂಬಿ | ಯಾದರದಿಂದರಾಜ್ಯವನು ||
ಆದಾಯಾದ್ಯರಿಗಿತ್ತುದಿಲ್ಲದರಿಂ | ಕಾವಬೇಕೆಂದಿನಸುತನು ||೧೮೩||

ಎರಡಕ್ಕೆಬಿಟ್ಟಕರುವಿನಂದದನತಾನು | ಧರಿಸಿಮತ್ತಿಂತೆಣಿಸಿದನು ||
ಅರಸಿತ್ತಜೋಳದಪಾಳಿಗೆನ್ನಸುವನು | ಪರಿಹರಿಸಿಯೆಕೀರ್ತಿವಡೆವೆ ||೧೮೪||

ಎಂದುನಿಶ್ಚಯಿಸಿನಿದ್ರೆಯೊಳಿರಲಾ ಅರ | ವಿಂದಬಾಂಧವನುದಯಿಸಲು ||
ಮಂದರಧೀರಮಗಧಮಂಡಳೇಶ್ವರ | ಮುಂದೈಸಿದಕೋಪದಿಂದ ||೧೮೫||

ವೀರಜಯದ್ರಥನೆಂಬವನನುಕರೆ | ದೀರಣಕಧಿಕನೀನಾಗಿ ||
ಆರೈಯುದೆಕಾದುವುದೆನುತುನ್ಮಾದ | ವಾರಣಮಸ್ತಕವೇರಿ ||೧೮೬||

ಧುರಧರೆಗೆಯ್ತರಲವಗೆಸಂಪ್ರೀತಿಯಿಂ | ಮುರವೈರಿಪದ್ಮನೆಂಬವನ ||
ಇರಿಸಿತನ್ನಾಮೋಹರದೊಳುತಾನತಿ | ಭರದಿಂದಿರಲಿನಸುತನು ||೧೮೭||

ನಿರ್ವರ್ತಿತಜಿನಪೂಜಾಪರಿಕರ | ಸರ್ವಾಭರಣಭೂಷಿತನು ||
ಗರ್ವಿತನಾವಜ್ರಕವಚವತೊಟ್ಟುಮ | ಗುರ್ವಿಪಮಣಿರಥವೇರಿ ||೧೮೮||

ನಿಲೆಕರ್ಣನಿನ್ನಚಾಗಕೆನಿನ್ನನೆಲೆವೆತ್ತ | ಕಲಿತನಕಾರೆಣೆಯೆಂದು ||
ಉಲಿವಭಟ್ಟರಬಳಗಗಳಿಂದಬವರದ | ನೆಲಕೆಬರಲುಬಳಿಕಿತ್ತ ||೧೮೯||

ಗಂಡರಗಂಡನುದ್ದಂಡನರ್ಜುನವಜ್ರ | ದಂಡೋಪಮಗಾಂಡಿವವ ||
ಕೊಂಡುರಥವನೇರಿನಡೆತಂದನುರಣ | ಮಂಡಲವದಿರುವಂದದೊಳು ||೧೯೦||

ಅರಿನೃಪವಿಪಿನದಾವಾನಲವೈರಿಭೂ | ವರವಂಶವಂಶಕುಠಾರ ||
ಪರಭೂಪಾನ್ವಯಕರಿಹರಿಯೆಯ್ದಿದ | ನುರುವಿಕ್ರಮಿಯರ್ಜುನನು ||೧೯೧||

ಇದುಜಿನಪದಸರಸಿಜ ಮದಮಧುಕರ | ಚದುರರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗಿದುಇಪ್ಪತ್ತೊಂಬತ್ತಾಶ್ವಾಸ ||೧೯೨||

ಇಪ್ಪತ್ತೊಂಬತ್ತನೆಯ ಸಂಧಿ ಸಂಪೂರ್ಣಂ

# ೨೦. ಕರ್ಣಾರ್ಜುನರ ಕಾಳಗ ಸಂಧಿ

---

ಶ್ರೀಮದಮರಪತಿಮೌಳಿಕೀಲಿತಪಾದ | ತಾಮರಸದ್ವಯನಜಗೆ ||
ಕಾಮಮದೇಭಹರಿಗೆನೇಮಿಜಿನಪತಿ | ಗಾಮೋದವೆತ್ತೆರಗುವೆನು ||೧||

ಚಂಡಸಾಹಸಿಕರ್ಣನಮೂರುಲೋಕದ | ಗಂಡನರ್ಜುನನಬಿನ್ನಣದ ||
ಬಂಡಣವನಾನೋಳ್ಪೆವೆಂದುಮರುತ್ಪಥ | ಮಂಡಳಕಮರರೆಯ್ದಿದರು ||೨||

ಸಮರಸಮಯಸಮವರ್ತಿಕಿರೀಟಿಯು | ತ್ತಮಸತ್ತ್ವಸಿಸನಂದನನ ||
ರಮಣೀಯಮಪ್ಪರಣವನೋಳ್ಪೆವೆಂದುಸಂ | ಭ್ರಮದಿಸುರಗರೆಯ್ದಿದರು ||೩||

ಎಕ್ಕತುಳದಬಂಟನಾಫಲ್ಗುನನರಣ | ರಕ್ಕಸನಾರವಿಸುತನ ||
ಎಕ್ಕಟಿಗಾಳೆಗವನುನೋಳ್ಪೆವೆಂದುವ | ಭಕ್ಕೆಜೋಯಿಸರೆಯ್ದಿದರು ||೪||

ಈತೆರದಿಂದವರೀಕ್ಷಿಸುತಿರಲತ್ತ | ಲಾತುಂಗವಿಕ್ರಮಾನ್ವಿತರು ||
ಚಾತುರ್ದಂತವಾಹಿನಿಗೂಡಿಯಾಹವ | ಭೂತಳಕಿರದೆಯ್ದಿದರು ||೫||

ಅಂತಕಸನ್ನಿಭಕೋಪಯುತರವರೀರ್ವರು | ತಂತಮ್ಮನಿಜಪತಾಕಿನಿಯ ||
ತಿಂತಿಣಿಗಿರದೆಕೈವೀಸಿಸೊಡಂದಿನಿ | ಸಂತರಿಸದೆತಾಗಿದುದು ||೬||

ದಿಟಗಲಿತನದಿಂಬಾದಸುಭಟಶತ | ಭಟಲಕ್ಷಭಟಕೋಟಿಭಟರು ||
ಪಟುಗಳವರುತಂತಮ್ಮೊಳುಖಟಿಪಟಿ | ಛಟಿಲೆಂದುಮಿಗೆತಾಗಿದರು ||೭||

ಪ್ರಳಯದಪಗಲಪಣೆಯ-ಲೋಚನಸುತ | ಪ್ಪಳಿಗುಟ್ಟಿದಂದದಿತಾಗಿ ||
ಮುಳಿಸಿಂಮುಂದಲೆಮುಂದಲೆವಿಡಿದ | ಗ್ಗಳದಭಟರುತೊಯ್ದಾಡಿದರು ||೮||

ಅಂಬರಕಾರುತೇಳುವರುಂಡಗಳನಿಕು | ರುಂಬಮುಗ್ಗಿರಿವಮುಂಡಗಳು ||
ತುಂಬಿಪರಿವನೆತ್ತರತೊರೆಸೀಳ್ದುಸೀ | ರುಂಬುಳಾದುವುಕರುಳುಗಳು ||೯||

ಬಿಲ್ಲಬಿನ್ನಣಿಗರೆಚ್ಚುರುಂಡಗಳೆಡ | ವಿಲ್ಲದೆನೆಗೆದುಬೀಳ್ವಾಗ ||
ಸಲ್ಲೀಲೆಯಿಂಧುರಧರಣೀಸತಿತಿರಿ | ಕಲ್ಲಾಡುವತೆರನಾಯ್ತು ||೧೦||

ಮರಣವತಡೆದಮಹಾಭಟರೊರಗಿವ | ಹರಿಗೆಗಳತಿರಂಜಿಸಿದುವು ||
ಹರಿಸದಿವಿಳ್ದುಕಾಲಂಗೆಡೆವಾಡಿದ | ಪರಿಯಾಣಗಳಪಙ್ಕ್ತಿಯಂತೆ ||೧೧||

ಕಿಳ್ತಕಣೆಯಗಾಯದಿಮೈಯಕೆಂಪಿಸ | ನೀರ್ತಡೆಯದೆಚಿಮ್ಮಿದುದು ||
ಅಳ್ತಿಯಿನರುಣಾಂಬುವಿಂದೋಕುಳಿಯನಾ | ಡಿಳ್ತ್ಯವಾಡುವತೆರನಾಗಿ ||೧೨||

ಕರುಳಬಳಗಬಳ್ಳಿವರಿಯಲುಮಿದುಳ್ಗಳ | ತೊರಳೆಕೆದರೆಯೆಡೆವಿಡದೆ ||
ಭರದಿಂದಾಯಕ್ಕತುಳದಭಟಾನೀಕ | ವೃರುಳ್ದುದುನಿಮಿಷಮಾತ್ರದೊಳು ||೧೩||

ಆಸಮಯದೊಳುಶಕುನಿತನ್ನಯಗುರ್ವಿಸು | ವಾಸಾಮಜಸೇನೆವೆರಸು ||
ಮಾಸಂಕದಿಂದಪಾಂಡವಸೇನೆಗಿದಿರಾಗೆ | ಸಾಹಸಗನಾಭೀಮಸೇನ ||೧೪||

ಭಾಂಡದಬೋನದಪಿಳ್ಳೆಗಕ್ಕೆಬಲ್ದಡಿ | ಗೊಂಡಂದದಿಘನಗಡೆಯ ||
ಕೊಂಡುಲೆಕ್ಕಕೆಬಾರದಗಜಘಟೆಗಳ | ಮುಂಡೆಯೆಲ್ಲವತುಯ್ದನಾಗ ||೧೫||

ನೆತ್ತಕ್ಕೆಪ್ರತಿನೆತ್ತವಾಡಲುಬನ್ನಿಮೆ | ನುತ್ತಕೌರವಸಮೂದಲಿಸಿ ||
ಎತ್ತಿಹಾಕುವಪಡಾಳವೆಸಲಾನೆಯಕೊಂಬ | ನೊತ್ತಿಕಿಳ್ತುಭೀಮನಿಟ್ಟು ||೧೬||

ಕೆಲವಾನೆಯಬರಿಕೈವಿಡಿದವನಿಂ | ಕೆಲವಾನೆಯನಪ್ಪಳಿಸಿ ||
ಕೆಲವಾನೆಯಕೊಂಬಕಿಳ್ತಾಗಸಕಿಟ್ಟು | ಕೆಲವಾನೆಯನುಗ್ಗುಗುಟ್ಟಿ ||೧೭||

ಭೀಮಗದಾಪಾತದಿಸಡಿಮೇಲಾಗಿ | ಯಾಮಹಿಯೊಳುಬಿಳ್ದೆಸೆದ ||
ಸಾಮಜಕುಂಭವಂತಕಗೆಯುಡುಗೆವಾಡು | ವಾಮುಡಕೆಯಸಾಲ್ಗಳಂತೆ ||೧೮||

ಸಂಬಾರವಿಟ್ಟಂತೆಕಗಹುವಸಗಿನ | ಕುಂಭಗಳೆನೆಭೀಮಹೊಯ್ದ ||
ಕುಂಭಿಯಕುಂಭಗಳಡಿಮೇಲ್ವಡೆದುದಾ | ಕುಂಭಿನಿಯೊಳಬಿಳ್ದವಾಗ ||೧೯||

ಮದಗಜಮಸ್ತಕವಡಿಯಾಗಲಾವೇಗ | ಇಧಟರುಗಳಸದೆಬಡಿವ ||
ಗದೆಯೆಕೊಡತಿಯಾಗಲುಭೀಮಸೇನನೊ | ಪ್ಪಿದನಾಕಮ್ಮಾರನಂತೆ ||೨೦||

ಇಂತುಕೊಲಲುಕಂಡುಶಕುನಿಯುನಿಲಜನ | ಸಂತಯಿಸದೆಬಂದುತಾಗೆ ||
ಮುಂತುವರಿದುಸಾಳುವನುಶಕುನಿಯಮುರಿ | ವಂತೆಮುರಿದುಕೊಂದನಾಗ ||೨೧||

ಬಳಿಕಭೀಮನಪಿಂತಿಕ್ಕಿಗಾಂಡೀವನ | ತಳೆದುಮುನಿದುಫಲುಗುಣನು ||
ಪ್ರಳಯರುದ್ರನವೊಲಿದಾರ್ಕರ್ಣಗಿದಿರಾಗಿ | ಹಳಚಿದನತಿವೇಗದೊಳು ||೨೨||

ಸಿಡಿಲುಸಿಡಿಲರವದೊಳಗೊಡವೆರೆವಂತೆ | ಕಡುಗಲಿಕರ್ಣಾರ್ಜುನರು ||
ಪಿಡಿದುಕೋದಂಡಕೆತಿರುವಿಟ್ಟುನೀವಿಜೇ | ವಡೆಯಬಲ್ದನಿಗಳೊಪ್ಪಿದುವು ||೨೩||

ಆನದೆಯಾವಿಧದಿಂನಿಂದುಶರಸಂ | ಧಾನವಮಾಡಿಕೋಪದೊಳು ||
ಭೂನುತರಿಸಲುನಭೋಮಾರ್ಗದೊಳುಬಲು | ಸೋನೆಸುರಿವತೆರನಾಯ್ತು ||೨೪||

ಎಡಗಡೆಯೊಳಗವರೆಚ್ಚ ಬಾಣದವೊನೆ | ಯಡಸಿತಾಗಲ್ಜನಿಯಿಸಿದ ||
ಕಿಡಿಯುರಿಹೊಗೆಯೆಸೆದುದುತ್ರಿಪುರವನಾ | ಮೃಡಸುಡುವುರಿಹೊಗೆಯಂತೆ ||೨೫||

ಇಂತುಕೆಲವುಹೊತ್ತುಸಾಧಾರಣಶರ | ಸಂತತಿಯಿಂದೆಚ್ಚಾಡಿ ||
ತಂತಮ್ಮೊಳೋರೋರ್ವರುಭೇದಿಸಬಾರ | ದಂತಕನಿಭಕೋಪದಿಂದ ||೨೬||

ಕರಿಕರದಾಸುಕಾರಿಯುಪ್ಪಕೈಯಿಂದಿವ್ಯ | ಶರವತೆಗೆದುತೊಟ್ಟುಬಳಿಕ ||
ವರಮಂತ್ರಪೂರ್ವಕದಿಂಕರ್ಣನೆಸೆದದ | ಳ್ಕುರಿಯುಬಳಗದಂತೆಬರಲು ||೨೭||

ಸರಸದನಂಬುಧಿಶರದಿಂಮುನಿದೆಸೆ | ಸಿರಿದುಕೋಪದಿನಿನಸುತನು ||
ಗಿರಿಯುಬಾಣದಿನೆಸೆಲಂತದನಾವಜ್ರ | ಶರದಿನದನುಖಂಡಿಸಲು ||೨೮||

ಕಡುಮುನಿದುರಗಾಸ್ತ್ರವನುತಿರುವಿನೊಳ | ಗಿಡಲುಮತ್ತಾವದನವೊಳು ||
ಅಡಸಿದವಿಷದದಳ್ಕುರಿನೋಡುವವೋ | ಗಡೆಯುಮರರನಳರಿಸಿತು ||೨೯||

ಕುರುಬಲಕುಬುಬೆಂದುಕೂಗಲುಕೌಂತೇಯು | ರುರುಬಲತಬ್ಬಿಬ್ಬಿಗೊಳಲು ||
ಶರಣಿತನುಜನಾಫಣಿಯುಬಾಣವನಾ | ಸರನವೋಲಿರದೆಚ್ಚನಾಗ ||೩೦||

ಕಡೆಯುಕಾಲದೊಳುಕಪರ್ದಿಕನಲಿತನ್ನ | ತೊಡವಿನಕಾಳಸರ್ಪನನು ||
ಪಿಡಲದುಬರ್ಪಂದದಿನೆಸಲಾಕಣೆ | ಘುಡುಘುಡಿಸುತನಡೆತರಲು ||೩೧||

ಈಪರಿವರಿವಹಿಶರವನುಕೋಪಾ | ಟೋಪದಿಂಗರುಡಾಸ್ತ್ರದಿಂದ ||
ಆಪಟುಭಟಪಾರ್ಥನೆಸೆಪಾಂಡವರಪಕ್ಕ | ದಾಪಡೆಯಿರದಾರಿದುದು ||೩೨||

ಇಂತಿನಸುತನೆಚ್ಚದಿವ್ಯಶಿಲೀಮುಖ | ಸಂತತಿಯುನುಕಡುಪಿಂದ ||
ಅಂತರಿಸದೆಪ್ರತಿವಿದ್ಯಾಶರದಿವಿ | ಕ್ರಾಂತವಿನೋದಿಗೆಲಿದನು ||೩೩||

ಅದನುಕಂಡತಿಕೋಪದಿಂದವರೂಥವ | ನೊದವಿನೂಂಕಿರವಿಸುತನು ||
ಮದಪತ್ತ್ರಮುನಿಸಿಂದವೆತೆಗೆದಿಡಲವ | ನೆದೆಗೆಯುಮೋಘಶಕ್ತಿಯುನು ||೩೪||

ಕಡುಪಿಂದಾಪಾರ್ಥನಾಶಕ್ತಿಯುನೆಡ | ಗಡೆಯೊಳುದಿವ್ಯಾಸ್ತ್ರದಿಂದ ||
ಕಡಿಖಂಡಮಾಡಲದಕೆಮನದೊಳುಮುನಿ | ಸಡಸಿಮತ್ತಾಕಲಿಕರ್ಣ ||೩೫||

ನೆಲನುಮನಾದೆಸೆಯುಮನಾಗಸವುಮ | ನಲಸದೆದಂದಹ್ಯಮಾಳ್ಪ ||
ನೆಲೆಯಾದಗುರ್ವಣೆಯುನುತೋರುತಿರ್ಪ | ಗ್ಗಲಿಕೆಯುಕಾಲಾಗ್ನಿಶರವ ||೩೬||

ಕನಲಿಯೆಸುವೆನೆಂದುತೆಗೆದುಬಳಿಕನಿಜ | ಜನನಿಗೆರಣರಂಗದೊಳಗೆ ||
ಅನುಜರಮೇಲೆದಿವ್ಯಾಸ್ತ್ರವತೊಡುವುದಿ | ಲ್ಲೆನುತಭಾಷೆಯುಮಾಡಿದೆನು ||೩೭||

ವನನಿಧಿಮೇರೆದಪ್ಪಿದೊಡೆನ್ನನುಡಿಯುನೊಂ | ದನಿಸುವಿಾರುವುದಿಲ್ಲವೆಂದು ||
ಘನಮಹಿಮನುಸುಮ್ಮನಿರೆಕಂಡುವಾಸವ | ತನುಜನಿಂತೆಂದಾಡಿದನು ||೩೮||

ಎನಿಸಸುತನಿನ್ನನೆರೆಮೆಚ್ಚಿಕೌರವ | ಭೂನಾಥನಿರದನರದು ||
ಹೀನರಂದದಿಸುಮ್ಮನೆಯೋಕೆಯಿರ್ದಪೆ | ನೀನೆನೆನಸುನಗೆನಗುತ ||೩೯||

ಇನ್ನನ್ನೈಯಪರಿಯನೋಡುನೋಡೆಂ | ಬನ್ನಗವಮಾಸೂತಶಲ್ಯ ||
ತನ್ನವಿದ್ಯೆಯೊಳುರಥವಜೋಡಿಸಿದನು | ಭಿನ್ನವಿಲ್ಲಿಳೆಯೆಂಬಂತೆ ||೪೦||

ಎಲ್ಲಿನೋಡಿದೊಡಲ್ಲಿಕರ್ಣನರಥವೇ | ನಿಲ್ಲದೆಪೂರಿಸಿದಂತೆ ||
ಬಳ್ಳಿತಾಗಿಯೆಪುಸುಕಲುಕಂಡುಭಾರತ | ಮಲ್ಲನೆಯ್ದಿದನುವಿಸ್ಮಯವ ||೪೧||

ಎಣಿಕೆಯೇತಕೆಶಲ್ಯನೆನಗಿದಬಹುರೂ | ಪಿಣಿಯೆಂಬವಿದ್ಯೆಯಿಂದವನ ||
ರಣದೊಳುಮೊದಲುಕೊಂದೊಡೆಕರ್ಣನನೀ | ಕ್ಷಣದೊಳುಸೋಲಿಸಬಹುದು ||೪೨||

ಎಂದುಸಾರಥಿಕೃಷ್ಣನಾಗನಿವೇದಿಸಿ | ದಂದವಕೇಳಿಕಿರೀಟಿ ||
ನಿಂದುಕೋಪದೊಳಸ್ತ್ರವಿದ್ಯಾಪಹಾರಿಯೆಂ | ಬೊಂದುದಿವ್ಯಾಸ್ತ್ರಮನೆಸಲು ||೪೩||

ಆರವಿಸುತನೇರಿಬಹುರೂಪವಡೆದಾ | ತೇರಾಗಬಯಲಾಯ್ತಿರದೆ ||
ವೀರಕಿರೀಟಿಮುಂದಕೆರಥವನುಸಾರ್ಚಿ | ಯಾರಿಕುಬುಬುಕುಬುಬೆಂದು ||೪೪||

ಮತ್ತೊಂದುಹೆರೆಯಬಾಣವನೆಸಲಾವಿಕ್ರ | ಮೋತ್ತಂಸಶಲ್ಯನಕೊರಲು ||
ಕತ್ತರಿಯೊಳಗರಿವಂದದಿನರಿದುಪ | ಯತ್ತ್ಯಕಾಗಿಪಾರಿದುದು ||೪೫||

ಆಶಲ್ಯನಸಾವಕಂಡತಿರೋಷಾ | ವೇಶನಾಗಿಲಯದಿನದ ||
ಈಶನಂದದಿಶರದೊಟ್ಟಂಗದೇಶಾ | ಧೀಶನೆಸುವಸಮಯದೊಳು ||೪೬||

ಆಧಟರದೇಪನರ್ಜುನನೊಂದುದಿವ್ಯಾ | ಸ್ತ್ರದಿನೆಸಲಾರವಿಸುತನ ||
ಸದಮಲಮಣಿಮಯಮಕುಟಹರಿದುನೆಲ | ಕುರುಳಿತುನಿಜಬಲಬೆದರೆ ||೪೭||

ಪಟಂಜಿಸುವಪಕ್ಷಿಮಗಿರಿಶಿಖರದಿ | ನುರುಳ್ವಚೆನ್ನೇಸರಂದದೊಳು ||
ಸರಸಶರದಿನಿನನಂದನಸಿಕ್ಕಿದ | ಶಿರದಮಕುಟಬಿದ್ದುದಾಗ ||೪೮||

ಕುರುಭೂಪನಜಯಲಕ್ಷ್ಮೀಮಂಟಪ | ವಿರಚಿತನವಮಣಿಕಳಶ ||
ಉರುಳ್ವಂತಾನರಶರಪಾತದಿನಿಳೆ | ಗುರುಳ್ದುದವನಮಣಿಮೌಳಿ ||೪೯||

ಕುರುಕುಂಭಿನೀಶನಕೃತಪುಣ್ಯಪುಂಜದ | ಭರಣಿಯುಪುಚ್ಚುಳುರುಳ್ವ ||
ಪರಿಯೊಳಲಾಕರ್ಣನಮಸ್ತಕದಿಂ | ದಿರದುರುಳಿತುಮಣಿಮಕುಟ ||೫೦||

ಧೃತರಾಷ್ಟ್ರಸುತಸಧ್ಯೈರ್ಯದಸಂಡಹೊಡೆದಿಂದ್ರ | ಸುತನಸ್ತ್ರವೆಂಬಸೆಳೆಯೊಳು ||
ಕ್ಷಿತಿಯೊಳಗೊಡ್ಡಿತೋರಿದವೊಲುನಿಂದಿಸ | ಸುತನಕಿರೀಟವೊಪ್ಪಿದುದು ||೫೧||

ಸುತನಪಂಶಭವನನುಕಂಡುಕುಸಿಯಲು | ಸ್ನತಿಕೆಯಿಂದಿರಲಾಗದೆಂದು ||
ಅತಿವೇಗದಿಂಪೋದಂತೆಪಿಂಗಡಲೊಳು | ಶತಪತ್ರಸಖನಸ್ತಮಿಸಿದ ||೫೨||

ಅಪದದೊಳಗಪಹಾರತೂರಿಯಮುಣ್ಮೆ | ಶಾಪಡೆಗಳುತಂತಮ್ಮ ||
ಆಪಾಳಯಕೆಯ್ದಲಾಕರ್ಣನಪಗತ | ಕೋಪಹೃದಯನಿಂತೆಣಿಸಿದ ||೫೩||

ಅಣಿಯರರೊಳಗೆಲ್ಲರುಕಾಣ್ಬಂತೆನ್ನ | ಮಣಿಮುಕುಟಕೆಭಂಗವಾಯ್ತು ||
ರಣರಸಿಕರ್ಗಿದುಸಾವಲ್ಲವೆಯೆಂ | ದೆಣಿಸಿನಿಶ್ಚಲಚಿತ್ತನಾಗಿ ||೫೪||

ಎನಗಿನ್ನುಭಯಪರಿಗ್ರಹಬಂಧನ | ವನುಚಿತವೆಂದುಭಾವಿಸುತ ||
ಜನನುತಮಪ್ಪಸುದರ್ಶನವೆಂಬೊಂದು | ವನಕಾರಾತ್ರಿಯೊಳೆಯ್ದಿ ||೫೫||

ವಿನಮಿಸಿದಮವರರೆಂಬಮುನೀಶರ್ಗೆ | ವಿನಯದಿಬೇಡೆದೀಕ್ಷೆಯನು ||
ಜನಪತಿನಿನಗೊಂದೇತಿಂಗಳಾಯುಷ್ಯ | ವೆನುತಕೊಟ್ಟರುಕರುಣದಲಿ ||೫೬||

ಆದೀಕ್ಷೆವಡೆದುಸನ್ಯಸನವಕೈಕೊಂ | ಡಾದಿನಪರಿಯಂತರಿರ್ದು ||
ಆದೇಹವನುಬಿಸುಟುಸ್ವರ್ಗದೊಳುದೇವ | ನಾದನವನಿಪೊಗಳ್ವಂತೆ ||೫೭||

ಕರ್ಣಸುತ್ತಮಸಂಯಮದೊಳಗಾಯುಸಂ | ಪೂರ್ಣಮಪ್ಪನ್ನೆಗಮಿರಲು ||
ಕರ್ಣಸ್ಥಲಿಯೆಂದೆಂಬಹೆಸರಿನಸಿ | ವರ್ಣನೆಗಾಯ್ತಾವಸವು ||೫೮||

## ಗದಾಯುದ್ಧ

ಬಳಿಕಿತ್ತಲಾಕುರುಪತಿಯಾನಿಶಿಯೊಳು | ಜಲಧಿವೇಗಡೆಕಪಿದಂತೆ ||
ಬಲಯುತಕರ್ಣನಗಲ್ಕೆಯೊಳಗೆಬೆ | ಬ್ಬಳವೋಗಿಮೈಮರೆದಿರ್ದು ||೫೯||

ಬೆಳಗುಜಾವದೊಳುಕೃಪಾಚಾರ್ಯನುಕೂಡಿ | ಛಲದಂಕನಾತನ್ನಕಡೆಯ ||
ಬಲವರಿಯದವೊಲುಬಹುರೂಪಿಣಿಯೆಂ | ಬಿಳೆಗೆವೆಗ್ಗಳದವಿದ್ಯೆಯನು ||೬೦||

ಆಸಕ್ತಿಯಿಂಪೋಗಿಸಾಧಿಸಲೆಂದಾ | ವೈಶಂಪಾಯನವೆಂಬ ||
ಕಾಸಾರಕೆಪಿಂತುಮುಂತಾಗಿನಡೆತಂ | ದೋಸರಿಸದೆತಡಿಗೆಯ್ದಿ ||೬೧||

ಎನ್ನಕುಲದರಾಯನಸಹಾಯನಾದನಾ | ನಿನ್ನುಗರ್ಭೀಕರಿಸುವೆನು ||
ತನ್ನನೆಂದೆನುತಾಗಸದಿಸಿಳೆಗಿಳಿದಿಂದು | ವಂನನೆಯಿಸಿತಾಸರಸಿ ||೬೨||

ಪರಿಕರವನುವಮಾಡುಛಲವನುನಿನ್ನಸೋ | ದರರೊಳೆಸುತಬೇಡಿಕೊಂಬಾ ||
ಪರಿಯೆನೆನೆಸರಸಿಯುಕೆರೆತಡಿಗೆಯ್ತಂ | ದರಸನಕಾಲ್ಗೆರಗಿದುದು ||೬೩||

ಒಸೆದುಕೊಳನಹೊಗುವೆಡೆಯೊಳುನೀರ್ವೂಳಿ | ನೆಸಳಿಂದೇಳ್ವಳಿವಿತತಿ ||
ವಸುಧೀಶನಪಕೀರ್ತಿವಲ್ಲಿಯುಫಲಮಾ | ಗಸಕೆಹಾರುವತೆರನಾಯ್ತು ||೬೪||

ದ್ರೋಹಿಯಿವನುಹೊಕ್ಕಕೊಳದೊಳಗಿರೆನಮ | ಗಾಹೆಸರೇಬಪ್ಪುದೆಂದು ||
ಊಹಿಸಿತೋರುವಂದದಿಹಾರಿದುವಂ | ದಾಹಂಸತತಿಯಾಗಸಕೆ ||೬೫||

ಕುಲವನೆಲ್ಲವನೀತೆರದಿಂದನೀರೊಳು | ನೆಲೆಯಾಗಿನೆರಪಿದೆನೆನ್ನ ||
ಛಲದಿನೆಸುತ್ತದನಭಿನ್ನಮವಂತೆನೀ | ರ್ನೆಲೆಗೈದಿದನಾನೃಪತಿ ||೬೬||

ಮೈಯಹತ್ತಿದನುಹದ್ಯೈಶ್ವರ್ಯಮನಾ | ರಯ್ಯದೆತಜ್ಜಲದೊಳಗೆ ||
ಕ್ಕೈಯಾರೆತೊಳೆವಂದದಿಹೊಕ್ಕನಾಬಲು | ಗೈಯಕೌರವಭೂವರನು ||೬೭||

ಕೊಳುಗುಳದೊಳುಸತ್ತತನುಜಾನುಜಬಂಧು | ಗಳಿಗೆಲ್ಲೊಂದೇಬಾರಿ ||
ತಳುವದೆನೀರಿಳಿವಂದದಿನಾಕೊಳ | ದೊಳಹೊಕ್ಕನಾನೃಪವರನು ||೬೮||

ಕಾಲಾವಧಿಬರ್ಪನ್ನಗವಮಾಪಾ | ತಾಳದೊಳೊಗೆದುಕುಳ್ಳಿರ್ದಾ ||
ಕಾಲಾಗ್ನಿರುದ್ರನಂತಾನೀರಮಡುವಿನೊ | ಳಾಳಿತನ್ನೃಪನಿರ್ದನಾಗ ||೬೯||

ಪದೆದುಜಲಸ್ತಂಭಮಂತ್ರದುಚ್ಚರಣೆಯ | ನದರಮಡುವಿನೊಳಹೊಕ್ಕು ||
ಅದನುರಗೇಂದ್ರಪತಾಕನಸಾಧಿಸುತಿರ | ಲುದಯವಾದುದುರವಿಬಿಂಬ ||೭೦||

ಇತ್ತಲುಮಗಧಮಹೀಪತಿಯಾಪುರು | ಷೋತ್ತಮರಾನಿಜಬಲದ ||
ಮೊತ್ತದರಸುಗಳಮೋಹರಗೂಡಿಸು | ಪತ್ತಿಯಿಂದೊಡ್ಡನೊಡ್ಡಿದರು ||೭೧||

ಕುರುಪತಿಯಾಮೋಹರದೊಳಿಲ್ಲದುದನು | ಧುರಧೀರರಾಪಾಂಡವರು ||
ನಿರುತಮರಿದುಕಡುಚದುರರೆನಿಸುವನು | ಚರರನಲ್ಲಿಗೆಯಟ್ಟಿದರು ||೭೨||

ಅನಿತರೊಳೋರ್ವನುವೈಶಂಪಾಯನ | ವನಜಾಕರಕೆಕೌರವನು ||
ಇನನುದಯಕೆಮುಂಚೆಪುಗುವುದಕಂಡಾ | ಮನುಜೇಶರೊಳುಸುರಿದನು ||೭೩||

ಕೊಳದೊಳುನಿಜರಿಪುವಿರ್ದುದನರಿದಾ | ಗಳೆಭೀಮನತಿಭೀಮನಾಗಿ ||
ಬಳಿವಳಿಯೊಳಗಗ್ರಜಾನುಜರೆಯ್ತರೆ | ವಿಲಯಭೈರವನಂದದೊಳು ||೭೪||

ಕೆಳಲಿಬಂದಾಕೊಳನನುಮುತ್ತಿಸಿಡಿಲಬಂ | ಗುಳಿಯಂದದಿಪರೆಗಳನು ||
ಮೊಳಗಿಸಿಯಾನೀರಹೊಕ್ಕಕೊಲುವೆನೆಂದು | ಮುಳಿಸಿಂದಾತಡಿಗೆಯ್ದಿ ||೭೫||

ನಿಂದುಗರ್ಜಿಸುವಸಮಯದೊಳಗಾಧರ್ಮ | ನಂದನನಿಂತಾಡಿದನು ||
ಸಂದಸಾಹಸಯುತರಿಗೆನೀವೊರ್ಕ್ಕರ | ಕೊಂದೊಡೆಕೊರತೆಯಾಗುವುದು ||೭೬||

ಇಂತುನುಡಿಯಲನುಜಾತರುಕ್ಕೈಮುಗಿ | ದೆಂತಾನುತೆರದಿಬಲ್ವಗೆಯ ||
ಅಂತರಿಸದೆಕೊಲುವುದುನಯಮೆನಲುಕೃ | ತಾಂತರಂಗನುಧರ್ಮಸೂನು ||೭೭||

ಇನ್ನೇಕನುಜರಿರಾಧರೆಯರಿವಂತೆ | ಮುನ್ನಲೆನ್ನಾನನ್ನಿಯನು ||
ಚೆನ್ನಾಗಿಪಾಲಿಸಿದಿರಿಬಳಿಕೀಕೃತ್ಯ | ಮುಂನೆಸೆವುದುನೀತಿಯಲ್ಲ ||೭೮||

ಎನುತಮಾತಾಡಿದಗ್ರಜನಮಾತನುವಿಚಾರ | ದನಿಲಜನಮನಕ್ಕೈಕೊಂಡು ||
ಮುಳಿಸಿಂದಕೊಳದತಡಿಗೆಬಂದುಭೀಕರ | ನಿನದದಿನಿಂತಾಡಿದನು ||೭೯||

ಛಲದಿಂದನುಜತನುಜಗುರುಹಿರಿಯರು | ಬಲಯುತಬಂಧುಜನವನು ||
ನೆಲಕಿಕ್ಕಿನೀನೋರ್ವನೆಬದುಕುವೆನೆಂದು | ಜಲವಹೊಕ್ಕೆಯಲಾನೃಪತಿ ||೮೦||

ಕಳ್ಳತನದಿಬಂದೀಕೊಳನನುಹೊಕ್ಕು | ಗುಳ್ಳೆವಿಡಿವರಂದದೊಳು ||
ಒಳ್ಳಿತೊಳ್ಳಿತುಬೇಗಲದಿರದೆಪೊರಮಡು | ತಳ್ಳಂಕದಬುದ್ಧಿಬೇಡ ||೮೧||

ಗಾಡಿಯೊಳೆಲ್ಲರ ಮುಂದೆ ಮೀಸೆಯ ತಿದ್ದು | ತಾಡುವುದಾವಮಾತೀಗ ||
ಓಡುವುದೀಚೋರಗಂಡಿಯೆಂದಣಕವ | ನಾಡರೆನಾಪವರೆಲ್ಲ ||೮೨||

ಭೂನುತಭುಜಬಲರಿದ್ದುಗೆಲಲುಬಾರ | ದೀಸಳ್ಳಿಗುಳ್ಳೆಮೀಸುಗಳ ||
ನೇಸವಿಡಿದುಗೆಲ್ವೆನೆಂದುಹೊಕ್ಕೆಯಲಾ | ಈನೀರನಡುಮಡುವಿನೊಳು ||೮೩||

ಪಲವುನುಡಿಯನಿಂತುಪವನಜನುಸುರೆನಿ | ಶ್ಚಲನಾಗಿಕೌರವನಿರಲು ||
ಛಲಿಯಿವನೇತೆರದಿಂಪೊರಮಡನೆಂದು | ವಿಲಯಮೇಳಿಯಸಿಡಿಲಂತೆ ||೮೪||

ಕುರುಪತಿವಂಶಕೃತಾಂತನೆಣ್ದೆಸೆಯನೆ | ಪಿರಿದುಬೆದರುವಂದದೊಳು ||
ಭರದಿಂದಸಿಹ್ಮನಾದವಮಾಡಲಾಕೊಳ | ನಿರದಲ್ಲಕಲ್ಲೋಲಮಾಯ್ತು ||೮೫||

ಆರವವನುಕೇಳಿಬಡಬಾಗ್ನಿಯಂದದಿ | ನೀರೊಳಗಿರ್ದಕೌರವನು ||
ಭೋರನುಲಿಯೆಮಂತ್ರಸ್ಖಲನಮದಾಗ | ಲಾರಯ್ಯದಲ್ಲಿಂದೆಳ್ದು ||೮೬||

ಮುನ್ನೀರನಡುಮಡುವಿಂಪೊರಮಡುವಾ | ಚೆನ್ನೇಸರಂತೆಯಿದ್ದನು ||
ಉನ್ನತವೀರರಸಾನ್ವಿತನಾರಂಗು | ರನ್ನದೊಡವುಜಲಜಲಿಸೆ ||೮೭||

ಅನಿಲಜನೆಲ್ಲಿರ್ದನೊಯೆಲ್ಲಿರ್ದನೊ | ಯೆನುತಗಜರಿಗರ್ಜಿಸುತ ||
ಘನತರಮಪ್ಪಗದೆಯಪೆಗಲೊಳಗಿಟ್ಟು | ವನಜಾಕರವಪೊರಮಟ್ಟು ||೮೮||

ಇಂತುಭರದಿದಂಡಪಡಿದೆಯ್ತಂದಕೃ | ತಾಂತಸಂದವಿಭೀಮಸೇನ ||
ಅಂತರಿಸದೆರುಧಿರೋದ್ಗಾರಿಯುಂತೂಗು | ತಿಂತೆಂದುಮಾತನಾಡಿದನು ||೮೯||

ಎಲೆಕುರುಪತಿನಿನ್ನ ಸಚಿವ ಸಬಲವನು | ಕೊಲಿಸಿದೆವುಂದನರಿಯದೆ ||
ಛಲಬೇಡಧರ್ಮಜನೊಳುಪುದುವಾಳ್ವುದು | ಸಲೆಸುಖವೆನಿಸನುನಗುತ ||೯೦||

ಬಲವೆಲ್ಲತವಿದೊಡಮೇನೊಸನ್ನಿಯದೋ | ರ್ವಲತವಿವುದೆನಿಸಗಳ್ಕಿ ||
ನೆಲನನಿನಿಸನಿಸಗಿತ್ತ ಪೆಸೇಯೆಂಬ | ಬಲುಮೆಮಾತುಗಳಕೇಳುತಪೆ ||೯೧||

ಕರಯುಗಲವಮುಗಿದಿಂತೆಂಪಸತ್ಯಾ | ದರದಿಂದಾಧರ್ಮಸೂನು ||
ಸಿರಿಸುರಧನುವಾರಿಗೆನಲೆಮುನ್ನಿನ | ಪರಿಯೊಳಗೆಮ್ಮ ಪಾಲಿಪುದು ||೯೨||

ಎಲೆಕುರುಕುಲತಿಲಕರಾಯೆಂಬನುಡಿಗೇಳಿ | ಬಲಯುತತನುಜಾನುಜರ ||
ನೆಲದೊಳುನೆರಪಿನಿನ್ನೊಳುಕೂಡಬಲ್ಲೆನೆ | ಕಲಹವಮಾಡಿನಿಮ್ಮೊಳಗೆ ||೯೩||

ಭುಜಬಲದಿಂನಿಮ್ಮನೆಲ್ಲರಗೆಲಿದಾ | ನಿಜರಾಜ್ಯಮನಾಳುವುದು ||
ಭುಜಗಕೇತುಪಮತವೆನೆಕೇಳಿಯುಳಿದಪರಾ | ಡುಜರೆಲ್ಲರಾಪುತಪರಾಗೆ ||೯೪||

ಕುರುಪತಿಯಿಂತೆಂದನಿಮ್ಮಯ್ವರೆಲ್ಲರು | ಧುರದೊಳಗೆನಗಿದಿರಾಗೆ ||
ಭರ ಂನೆಲದೊಳುನೆರಪುವೆನೆನಲಿಾ | ತೊರೆದನುಧರ್ಮನಂದನನು ||೯೫||

ಗರ್ವಿತನೀನುಡಿದಂತಾವೆನಗಿದೊ | ಡುರ್ವಿಪಳಿವುದದರಿಂದ ||
ಓರ್ವರೋರ್ವರೊಳುಕಾದುವುದೆನೆಕೇಳ್ದು | ದೋರ್ವಲಶಾಲಿವಾಯುಜನು ||೯೬||

ಮುನ್ನ ತಾನವನೊಳಿರದೆಕಾದುವೆನೆಂದು | ಸನ್ನದ್ಧನಾದುದರಿಂದ ||
ಎನ್ನೊಳುಪೊರ್ಕಳಿಗೊಳ್ವುದೆನುತವಿಕ್ರ | ಮೋನ್ನತನಿದಿರ್ವಂದುನಿಲಲು ||೯೭||

ಅರಸಿಕೊಲುವೆನೆಂಬಬೇಟೆಗಾರನಮುಂದ | ಕುರುವಬೆಳ್ಳಿಗವೆಯ್ತಪ್ಪ ||
ತೆರನಾಗಿನನಗೆಸಿಕ್ಕಿದೆಯಾನೀನೆಂದು | ನೆರೆಗಲಿಯಾಯುತಮಾಗೆ ||೯೮||

ಬಂದುಮರದಮರೆಗಡೆಯೊಳಗಿರವೆ | ಯ್ತಂದಕೃಪಾಚಾರ್ಯಂಗೆ ||
ನಂದಸುಭಟಕುರುಭೂಪಾಲಸುತನ್ನ | ದೊಂದುದೋರ್ವಲಡಪರಿಯನು ||೯೯||

ನೋಡುನೋಡೆಂದುಭುಜವನಾಸ್ಫಾಳಿಸಿ | ಕೂಡೆಬೊಬ್ಬಿರಿದಾಲಿನಿಲಲು ||
ಪಾಡರಿದಾವಾಮಚರಣವನುಂದಕ್ಕೆ | ನೀಡಿಯನಿಲಸುತನಿಲಲು ||೧೦೦||

ಹೊಕ್ಕದಿರದೆಹಿಡಿಹಿಡಿಯೆಂಪುಬೇಗದಿಂ | ದುಕ್ಕಿನೊಳಾಗದೆಯಿಂದ ||
ಎಕ್ಕಟಿಗಲಿಕುರುಪತಿಹುಯ್ಯಲದತಪ್ಪಿ | ಚೆಕ್ಕನೆಹೊಯ್ಯೆವಾಯುಜನು ||೧೦೧||

ಕುರುಪತಿಯಾಹೊಯ್ಯಲಿಗೆಹೊಳೆದುತಪ್ಪಿ | ಯುಗವಣೆಯಿಂಮತ್ತೆಹೊಯ್ಯೆ ||
ಮರುತಸಂದನಸುಹಿಡಿದುಗದೆಯಿಂಕೆಡು | ಭರವಸದಿಂಪೊಯ್ದನಾಗ ||೧೦೩||

ಉಕ್ಕುಕ್ಕಿತಳಜುವಂದದಿವಜ್ರವಜ್ರದೊ | ಳಿಕ್ಕಿಕ್ಕಿಯಿಂಹೋರುವಂತೆ ||
ಎಕ್ಕತೂಳದಭಟರವರೀರ್ವರುಕಡು | ಕಕ್ಕಸದಿಂದಕಾದಿದರು ||೧೦೪||

ಭರದಿಸವರುಗದೆಗಳಬೀಸೆತಿತುರಿಯ | ಪರಿಯೆನೆಧರೆತಿರುಗಿದುದು ||
ಉರವಣೆಯಿಂಬೊಬ್ಬಿರಿಯೆಮೇಗಡೆಸೋಳ್ಪ | ಸುರಸಂತತಿಬೆದರಿದುದು ||೧೦೫||

ಸಿಡಿಲುಸಿಡಿಲಸವಿರದೆಹೊಡೆವಂದದಿ | ಸಿಡಿಸಿಡಿಪಾಕಗ್ಗಲಿಗಳು ||
ಅಡಸಿಹೊಂಗಿಡಿಯೇಳುವಂತೆಹೊಯ್ದಾಡಿದ | ರೊಡಸತಿಭುಜಬಲದಿಂದ ||೧೦೬||

ತನುಜರಕೊಲೆಗೊಂಡುಗೊಳ್ಳಸುಜಾತರ | ಮುನಿಸಿಂಗೆರಡುಗೊಳ್ಳೆಸುತ ||
ಅನಿಲಸುತನತೊಡೆಮುಡುಹುಗಾಣಿಸಿಹೊಯ್ದ | ನಸುವಾಗಿಯಾಕೌರವನು ||೧೦೭||

ಅರಗಿಸಮನೆಯುರಿಗಿದುಕೃತಕದಜೂದಿ | ನಿರವಿಗಿದೆಸುತತಿಭರಸಿ ||
ಮರುತನಂದನನಾಕುರುಸ್ವಾಪನಪೇ | ರುರಪೆಗಲೆಡೆಹೊಯ್ದನಾಗ ||೧೦೮||

ಅಡಿಕಿರಿದೊಡೆತೊಡೆಯುಡೆನಡುವೆದೆಕೈ | ಮುಡುಹುಕೊರಲ್ಪಣೆಕೆನ್ನೆ ||
ಪೆಡತಲೆಮುಂಡೆಯೆಡೆಯನಾಯುಗಾಣಿಸಿ | ಹೊಡೆದಾಡಿದರಾಕಲಿಗಳು ||೧೦೯||

ಒಮ್ಮೆಹೊಳೆದುಮತ್ತೊಮ್ಮೆಲಂಘಿಸಿಬಳಿ | ಕೊಮ್ಮೆಒಲ್ಗದೆಯಿಂಹಿಡಿದು ||
ಒಮ್ಮೆಹುದುಗಿತಪ್ಪಿಹೊಡೆದಾಡಿದರಂ | ದೊಮ್ಮೆಹೊಯ್ವಾಹೊಯ್ಲುಗಳನು ||
ಹರಿನೀಲಮಾಣಿಕ್ಯದಮೂರ್ತಿಗಳುಗಾ | ಭರಣವನಿಟ್ಟಂದದೊಳು ||
ಕುರುಪತಿಯಸಿತಾಂಗದೊಳಿರದುಣ್ಮುವ | ವರರಕ್ತಬಿಂದುವೊಪ್ಪಿದುದು ||೧೧೦||

ಒಬ್ಬರೊಬ್ಬರಗದೆತಾಗಲುಹೊಂಗಿಡಿ | ಯುಬ್ಬರಸಡುಪೆಸೂಸಿದುದು ||
ಕೊಬ್ಬಿಗಳವರಕೋಪಾಲನಪೊರಮಟ್ಟು | ಹಬ್ಬಿತವೊಮ್ಮೆಳುಕಾದುವಂತೆ ||೧೧೧||

ಓವದೆಕುರುಪತಿಹೊಯ್ಲುಲುಕುಸುಕಿರಿ | ದಾಪಾಯುಜನಕಾಣುತವೆ ||
ಏವೆವೊದಗ್ರಜಾನುಜರುಬೆದರಿದರು | ಹಾವಡರಿದಹುಂಬೆಯಂತೆ ||೧೧೨||

ಇಂತುಕುಕ್ಕುರಿಸಿದಭೀಮಸನಾಕುಪಿ | ತಾಂತಕನಾಗನೆಯೆತ್ತಿ ||
ಅಂತರಿಸದೆಮಸ್ತಕಕೆಹೊಯ್ಯಲುತಾ | ನಾಂತುಮತ್ತಾಗದೆಯಿಂದ ||೧೧೩||

ಸಿಡಿದೆರಗುವಸಿಡಿಲುರವಣೆಯನುವಜ್ರ | ತಡೆವಂತಾಹೊಯ್ಲುಗಳನು ||
ತಡೆದುಮತ್ತಾಮಾರುತಿನೀಡುದೊಳೆತ್ತಿ | ಯಡಸಿಹೊಯ್ದನುಕಡುಪಿಂದ ||೧೧೪||

ಮದಮಾತಂಗವೆರಡುಬರಿಕೈಯೆತ್ತಿ | ಸದೆದುಹೊಯ್ದಾಡುವಂದದೊಳು ||
ಆಭಟರವರುಗದೆಯೆತ್ತಿಹೊಯ್ದಾಡಿದ | ರದಿರದೆನೆಲನದಿರ್ವಂತೆ ||೧೧೫||

ಖಟಿಖಟಿಘಟಿಘಟಿತಟಿತಟಿನಟಿನಟಿ | ಪಟಿಪಟಿತೊಪ್ಪುತೊಪ್ಪೆನುತ ||
ಪಟುಗಳವರುಹೊಯ್ದಾಡುವಗದೆಯುದು | ಘಾಟಮಪ್ಪದನಿಗಳೊಪ್ಪಿದುವು ||೧೧೬||

ಈತೆರದಿಂಕೆಲವೊತ್ತುಹೊಯ್ದಾಡಿಮ | ತ್ತಾತುಳಿಲಾಳುಕೌರವನು ||
ಏತರಕಲಿಯಿವನೆಂದುಬಗೆದುನಿ | ರ್ಭೀತಿಯಿಂತಿರುಪಿಗದೆಯನು ||೧೧೭||

ಕಟ್ಟುಗ್ಗರದಿಕೇಸರಿಲಂಘಿಸುವಂತೆ | ತೊಟ್ಟನೆನೆಗೆದುಮುಸ್ತಕವ ||
ಮುಟ್ಟಿಹೊಯ್ವನೆಂಬಾವೇಳೆಯೊಳು ಭೀಮ | ನಿಟ್ಟಸುಸಿಜಗದೆಯಿಂದ ||೧೧೮||

ಘುಡುಘುಡಿಸುತಮೇಲ್ವಾಯ್ವಸಿಹ್ಮವಕಾಲ | ಹೊಡೆವಸಿಡಿಲಮಾಳ್ಕೆಯೊಳು ||
ಕಡುಪಿಂಮೇಲ್ವಾಯ್ದುಪೊಡೆವನೃಪಸತೋರ | ತೊಡೆಯುತದ್ಗದೆತಾಗಿದುದು ||
ಕಡುಸೊಕ್ಕೇರಿದಕರಿಬರಿಕೈಯೆತ್ತಿ | ಹೊಡೆಯೆಜವಳಿವಾಳೆಗಳು ||
ಕೆಡೆವಂತೆಭೀಮಗದಾಪಾತದಿತೊಡೆ | ಯುಡಿದುವುಕೌರವೇಶ್ವರನ ||೧೨೦||

ನಿಡುದೋಳಬಿಟ್ಟುಪೋಪಾಪೊಡವಿಯುಬಾಚಿ | ಹಿಡಿವಂತಾತೊಡೆಮುರಿದು ||
ಕಡುಗಲಿಯಾಕೌರವನಂದುಕೌಚಿಕ್ಕಿ | ಕೆಡೆದನುಧುರಧರಣಿಯೊಳು ||೧೨೧||

ಒಡಲುವಿಡಿದಮುನ್ನಿನಪೇರರಸವೆಕಿ | ಗ್ಗಡೆಗೆಸೋರುವಸಮನಾಯ್ತು ||
ತೊಡೆಯುಗಾಯದಿಸೊಗುವರುಣೋದಕಮಾ | ಕಡುಗಲಿಕೌರವೇಶ್ವರನ ||೧೨೨||

ಧುರಮಿಲ್ಲಿದನುಮಾರುತಿಭಂಡಾರಿಸು | ಭರದಿನೆನುತಜಯುಜಾಯೆ ||
ಅರಗಿನಮುದ್ರೆಯಿಟ್ಟಂತಾಗದೆಯೊಳು | ಪೊರೆದರಕ್ತಾಂಬುವೊಪ್ಪಿದುದು ||೧೨೩||

ಆಪದದೊಳುಹೆರಸಾರಿಯುನಿಲಸೂನು | ಭಾಪುರೆಭೂಪನಿನ್ನಂತು ||
ಈಪೃಥಿವಿಯೊಳುಛಲಿಗಳಾರುಪೇಳೆಂದು | ಕೋಪವಡಗಿಪೊಗಳಿದನು ||೧೨೪||

ಆವೇಳೆಯೊಳತಿಹರ್ಷದಿಬಂಟರ | ದೇವಪವನಸೂನುವೆನುತ ||
ದೇವಸಮಿತಿಯಾಗಸದೊಳುಕೊಂಡಾಡಿ | ಪೂವಿನಸರಿಯುಸೂಸಿದುದು ||೧೨೫||

ಬೀರವರೆಗಳುಣ್ಮಲುಪಾಂಡವರುಬಿ | ಡಾರಕೆಪೋಗಲಂತದನು ||
ಆರೈದುಕೇಳಿಕೇಶವನುಮೋಗಸುಮ | ಯೂರಕೇಳ್ವಂತೆಸಲಿದನು ||೧೨೬||

ಆಚಕ್ರಿಯಾಕುರುಪತಿಯುವಾರತೆಗುಷ್ಣ | ರೋಚಿಯುಪಾದಗಳುಡುಗೆ ||
ಆಚಕ್ರವಾಕವಿಹಗಮುಳಲ್ವಂತೆಸಂ | ಕೋಚವಡೆದಸಮಯದೊಳು ||೧೨೭||

ಪಡುಗಡಲನುಪಗಲಾಣ್ಮನುಪುಗಲಾ | ಪಡೆಗಳೆರಡುಬೀಡಪೊಗಲು ||
ಕಡುಗಲಿಪಾಂಡವರನುತಮ್ಮ ಪಾಳಯ | ಕೊಡಗೊಂಡುಬಂದುಕೇಶವನು ||೧೨೮||

ಕುರುಪತಿಸತ್ತಕಥನವನೆಲ್ಲಪಕೇಳು | ತಿರಲತ್ತಲಶ್ವತ್ಥಾಮ ||
ಉರುತರಕೋಪದಿನಾಪಾಂಡುಭೂಮೀ | ಶ್ವರರಪಾಳಯವನುಪೊಕ್ಕು ||೧೨೯||

ಲೆಕ್ಕವಿಲ್ಲದಬಲವನುಕೊಲುತಿರಲಾ | ಎಕ್ಕತಳದಸಾಸಿಗನು ||
ಕಕ್ಕಸದಿಂಧೃಷ್ಟದ್ಯುಮ್ನನಿದಿರಾಗ | ಲಿಕ್ಕಿದನವನನಂತಕಗೆ ||೧೩೦||

ತಂದೆಯಕೊಂದಪಗೆಯಕೊಂದದಿವದೆ | ಮುಂದಕೆಯುದ್ಧವಗುರುಸುತನ ||
ಮಂದ್ಯೈಸಿದಮುನಿಸಿಂಪಂಚಪಾಂಡವ | ರಂತಿದಿರೆಯ್ತರಲೊಡನೆ ||೧೩೧||

ಪಾಂಡುನಂದನರವರೆಂದವರಾತಲೆ | ಗೊಂಡುಬಂದಾಕುರುಪತಿಯ ||
ಕಂಡುಕೌಂತೇಯರತಲೆಯನೋಡೆಂದುಪ್ರ | ಚಂಡವಿಕ್ರಮಿತೋರಲಾಗ ||೧೩೨||

ಅವನಿಪನವನುನಿರೀಕ್ಷಿಸಿಕಂಡಾ | ಯಿವುಪಾಂಡವರತಲೆಯಲ್ಲ ||
ಕುವರರುಪಂಚಪಾಂಡವರತಲೆಗಳೆಂದು | ಸುವಿವೇಕತನದಿನಿಂತೆಂದ ||೧೩೩||

ಚರಮಾಂಗರವರುತ್ತಮರೊಳುಫಲವನು | ಪಿರಿದುಮಾಡಿದೆನಿಂದುವರ ||
ಗುರುಸುತನನಗಿನ್ನೇಕೆಕಷಾಯವ | ಚ್ಚರರಸುಖವನೆಳಸುವೆನು ||೧೩೪||

ಎನುತಶ್ವತ್ಥಾಮನನುಬೀಳ್ಕೊಟ್ಟಾ | ಜನಪತಿವಿದುರನೆಂಬೋರ್ವ ||
ಮುನಿಯುಸನ್ನಿಧಿಯೊಳಗುತ್ತಮದೀಕ್ಷೆಯ | ನನುಕರಿಸಿದನಿಳೆಪೊಗಳೆ ||೧೩೫||

ಇಂತುದೀಕ್ಷೆಯನುಸಕಲಭೂಪರೊಡಗೂಡಿ | ತಾಂತಳೆದಾಮರುಪಗಲು ||
ಸಂತತಸುಖವಿಮಾನಸಗ್ಗದೊಳೊಗೆದುನಿ | ಶ್ಚಿಂತವಿರ್ದನುಬಳಿಕಿತ್ತ ||೧೩೬||

ಜನಸುತಜಯಜಾಯಾವಲ್ಲಭರುಸ | ಜ್ಜನಗುಣಮಣಿಭೂಷಿತರು ||
ಮನುನಿಭಚರಿತಪಾಂಡವರೊಪ್ಪಿದರಾ | ವಿನಯವನಧಿಚಂದ್ರಮರು ||೧೩೭||

ಇದುಜಿನಪದಸರಸಿಜಮದಮಧುಕರ | ಚದುರ ಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗೊದವಿದಾಶ್ವಾಸಮೂವತ್ತು ||೧೩೮||

ಮೂವತ್ತನೆಯ ಸಂಧಿಸಂಪೂರ್ಣಂ

# ೩೧. ಕೃಷ್ಣಜರಾಸಂಧ ಕಾಳಗಸಂಧಿ.

---

ಉರ್ವಿಕೋರ್ವಿದಸರ್ವಕರ್ಮಭಟರಗರ್ವ | ಪರ್ವತಕಶನಿಯೆನಿಸಿದ ||
ಸರ್ವಗೀರ್ವಾಣವಂದಿತನೇಮಿಜಿನಪಗೆ | ಸರ್ವಾಂಗವಿನಮಿತನಹೆನು ||೧||

ಆಸಮಯದೊಳುಜರಾಸಂಧಚಕ್ರೇಶ | ನಾಸುರವುಪ್ಪಸೈನಿಕಕೆ ||
ಕೇಸುರಿಗೆಳಸಿನೂಕುವಮಿಳ್ತುವಿನಂ | ತಾಸೂರ್ಯಬಿಂಬಮೂಡಿದುದು ||೨||

ಎರಡುಪಡೆಗಳುಮುನ್ನಿನತೆರದಿಂಧುರ | ಧರಣೀಮಂಡಲದೊಳಗೆ ||
ಮುರರಿಪುಮಾಗಧರುಗಳನುಮತದಿಂ | ದುರವಣೆಯಿಂದೊಡ್ಡಿನಿಲಲು ||೩||

ಬಲಯುತನಾಮಾಗಧತನ್ನಬಲನಸು | ಬಲವಾಗಿರೆಕಂಡುತನ್ನ ||
ಬಲದೊಳಲಘುಬಲರಪ್ಪವಿದ್ಯಾಧರ | ಬಲವನುಕ್ಕೈವೀಸಲಾಗ ||೪||

ವಿದ್ಯುಚ್ಚರಸಂಗಾರದೇವಸುಮಾ | ವಿದ್ಯುತ್ಪ್ರಭನೀಲಕಂಠ ||
ವಿದ್ಯುದ್ವೇಗನಳಿನಕೇತುವೆಂಬಾ | ವಿದ್ಯಾಧರರೆಯ್ದಿದರು ||೫||

ನೆಲದೊಳಾಗಸದೊಳಗೆಡೆವೆರಪಿಲ್ಲದ | ಗ್ಗಳಿಕೆಯಿಂದಿದಿರಾಗಲೊಡನೆ ||
ಬಲಗೋವಿಂದರುತಮ್ಮವಿದ್ಯಾಧರ | ಬಲಕೆಕ್ಕೈವೀಸಿದರಾಗ ||೬||

ಮರುತವೇಗಸಿಹ್ಮದಾಡನಕಂಪನ | ಹರಿಕೇತುವಾವಜ್ರಬಾಹು ||
ಅರುಣಚಂದ್ರದಧಿಮುಖಮಾನಸವೇಗ | ಧುರಧೀರಧ್ರುವಕುಮಾರಕರು ||೭||

ಆಕಾಶಾಬ್ಧಿಯುವೇಳೆಯಂತೊಪ್ಪುವ | ನೇಕವಿದ್ಯಾಸೈನಿಕವ ||
ಜೋಕೆಯಿಂದಲೆಕೂಡಿಯಾರಿಪುಬಲಕಾಗಿ | ನೂಕಿದರತಿಭಯದಿಂದ ||೮||

ಸಿಡಿಲುಸಿಡಿಲತಾಗುವಂದದಿಖಚರರ | ಪಡೆಗಳೆರಡುಗಗನದೊಳು ||
ಕಡುಭರದಿಂತಾಗಲೊಡನೆಯುರುಣವಾರಿ | ಸಿಡಿದುದುಮರುತಮಾರ್ಗದೊಳು ||೯||

ಜಡಿವಖಡ್ಗವುಮಿಂಚುಮೊರೆವದುಂದುಭಿಗಳು | ಗುಡುಗುಕೂರ್ಪಾಳಹೊಯ್ಲುಗಳಿ||
ಸಿಡಿಲುಸೂಸುವವರಕುತವೆಮಳೆಯೆನಲಾ | ಪಡೆಯಾಗಸದೊಳ್ಕಾದಿದುದು ||೧೦||

ಇಂತು ವಿದ್ಯಾಧರಚತುರಂಗವಾಹಿನಿ | ಯಂತರಿಕ್ಷದೊಳೆಡೆವಿಡದೆ ||
ಅಂತರಿಸದೆಯುನಿಮಿಷರಚ್ಚರಿವಡು | ವಂತೆಕಾದುತ್ತಿರಲಿತ್ತ ||೧೧||

ನೆಲದೊಳಗಾನೆಲಹೇಸುವಂದದಿನಾ | ನೆಲೆವಟ್ಟೆಗರುಬೊಬ್ಬಿರಿದು ||
ತಲೆಮುಂಡಕರುಳುನೆತ್ತರುಜೋರೆಯೇಳ್ವಂ | ತಲಸದೆಕಾದಿಮಡಿದರು ||೧೨||

ಬೀರಾಳ್ಗಳುಬೀರಾಳೊಳುತೇರೊಳು | ತೇರುಕುದುರೆಕುದುರೆಯೊಳು ||
ಕೂರಾನೆಗಳುಕೂರಾನೆಗಳೊಳಗುಣ್ಮಿ | ಹೋರಟೆಗೊಂಡುರುಳಿದುವು ||೧೩||

ಬಲವಾಸುದೇವರಬಲಮಗಧನನಿಜ | ಬಲಪನೊತ್ತಿನೂಕಲಾಗ ||
ಅಲೆವಗಾಳಿಗೆಮುಗಿಲೋಡುವತೆರದಿಂ | ತಲೆಬಾಲಗೆಟ್ಟೋಡುತಿರಲು ||೧೪||

ಅಂತದಕಂಡುವೃಷಭಸೇನನೆಂಬವ | ನಂತಕನಂದದಿಮುನಿದು ||
ಪಿಂತುಮುಂತನೆಹಾರದೆತನ್ನ ರಥವಮು | ರಾಂತಕಬಲಕೆನೂಕಿದನು ||೧೫||

ಬಿಸಿನೀರಹೊಕ್ಕಬೆಳ್ಳಿಲಿಪಿಂಡುಬೆದರ್ಪಂ | ತಸಮವಿಕ್ರಮಿಯಾಭಟನ ||
ಎಸಕವಡೆದಕೊಲೆಯನುಕಂಡುತಡೆಯದು | ಬ್ಬಸಗೊಂಡುದಾಹರಿಸೇನೆ ||೧೬||

ಮೇಲಾಳಮೇಲೆಕಾಲಾಳುವರೂಥದ | ಮೇಲೆಮೇಲಾಳಾನೆಗಳ ||
ಮೇಲೆವರೂಥಬೀಳಲುಕಂಡಾಬಲ | ಜಾಲವಪೆರಗಡೆನೂಂಕೆ ||೧೭||

ಕೇಸುರಿಗೆಳಲಿಬಳಿಕಬಲಭದ್ರನಂ | ದಾಸಿಹ್ಮವಾಹಿನಿಯೇರಿ ||
ಓಸರಿಸದೆ ಒಂದುಕಾಡಾನೆಹಿಂಡಿಗೆ | ಕೇಸರಿಹೊಗುವಂತೆಹೊಕ್ಕು ||೧೮||

ಹೇಳಬಾರದವಿಕ್ರಮದಿಂದಮಗಧಭೂ | ಪಾಲನಬಲವೆಲ್ಲವನು ||
ಲಾಳವಟ್ಟೆಯಮಾಡಿಪಡಲಿಟ್ಟಂದದಿ | ಕಾಲಗೌತಣವನುಮಾಡಿ ||೧೯||

ಕೈಯಕೂಸನುನೆಲಕಿಕ್ಕುವಂದದಿನಾ | ರೈಯದೆವೃಷಭಸೇನನನು ||
ಮೈಯನಿಕ್ಕಡಿಮಾಡಿನೆಲಕಿಕ್ಕಿಯಾಬಲು | ಗೈಯನುಮುಂದಕ್ಕೆನಡೆಯೆ ||೨೦||

ಇರುಪೆಯಪಿಂಡುಕೆಂಡವಕಂಡಂದದಿ | ನರುಗುಲಿರಾಮನಮೇಲೆ ||
ನೆರೆಗಲಿಗಳುಮೈಯಿಕ್ಕಲಣ್ಮದೆಕಡು | ಹೆರಸಾರಿನಿಂದಿರಲತ್ತ ||೨೧||

ಮಸಕಟಮಾರಿಯಂದದಿರಥವನುನೂಂಕಿ | ಪಸುಪಾಲನುಕೊಲುತಿರಲು ||
ಅಸಮವಿಕ್ರಮಿಕಾಲನಯನವಗಿದಿರಾಗಿ | ನುಸುಕಲುಕಂಡುಕೋಪದೊಳು ||೨೨||

ದಾರಣಪೂರಣದೃಢಎಜಯಂತಕು | ಮಾರಜರತ್ಕುಮಾರಕರು ||
ಆರೈಯದಾಕಾಲವಯನನನುನೂಂಕಿಸಂ | ಹಾರಮಾಡಿದರಾಬಲವ ||೨೩||

ಅತ್ತಲಂಬರತಳದೊಳುಕಾದುವಪುರು | ಷೋತ್ತಮಬಲದಖೇಚರರು ||
ಒತ್ತಂಬದನಿದಿರಾದಸೇನೆಯಹೊಕ್ಕು | ತತ್ತರದರಿವುತಮಿರಲು ||೨೪||

ಆಚಕ್ರಿತನ್ನವೋಹರದೊಳುಕೊಂಕುವ | ಭೂಚರರಸುಮೋಗಡೆಯು ||
ಖೇಚರರಸುಕಂಡುತನ್ನವೋಹರದಸೇ | ನಾಚಕ್ರಕೆಕೈವೀಸೆ ||೨೫||

ಪಿಂಗಡೆತನ್ನಸೇನೆಯನೆಲ್ಲವಮುಳ್ಳು | ನುಂಗುವವೊಲುಬಹುರೂಪ ||
ಸಂಗಳಿಸಿದವೊಲೆಯ್ದುವರಿಪುಬಲವನು | ತ್ರ್ಯಂಗವಿಕ್ರಮಹರಿಕಂಡು ||೨೬||

ಭರದಿಂತನ್ನಬಲಕೆಕೈವೀಸಿದೊ | ಡುರವಣೆಯಿಂಬಂದುತಾಗೆ ||
ಎರಡುಪಡೆಗಳಿಕ್ಕೆಯಿಂಕಾದಿದುವಾ | ಸುರರುಮೋಗಡೆವೊಗಳ್ವಂತೆ ||೨೭||

ಮುರರಿಪುವಿನಬಲಮಾನವಮುಪರ್ತಿಕ | ಪ್ಮರಿಗಡಿವಂತೆಮಾಗಧನ ||
ಆರೆಸೆಲೆಯೊಡ್ಡಣವನುತತ್ತರಿದರಿ | ದುರುಳಿಸಿದುದುನಿಮಿಷದೊಳು ||೨೮||

ತುರಗದಪೆಣದೊಟ್ಟಿಲಾನೆವೆಣದಬಲು | ವೊರಡಿರಥದಬಲುಬಣಬೆ ||
ನರರಕರುಳಬಳ್ಳಿವೆನಲೊಪ್ಪಿದುದಾ | ಧುರಧರಣೀತಳದೊಳಗೆ ||೨೯||

ಇಂತುಬಿಳ್ದಾತನ್ನಚತುರಂಗಬಲವಕ್ಕ | ತಾಂತಕೋಪಮುನಮಾಗಧನು ||
ಮುಂತೆಕಂಡಾದಿವ್ಯರಥವನಡರಿಸಿಡಿ | ಲಂತೆಗಜರಿಗರ್ಜಿಸುತ ||೩೦||

ವರವಜ್ರಕವಚವತೊಟ್ಟುಕೋದಂಡವ | ಭರದಿಪಿಡಿದುಸೂಂಕಲೊಡನೆ ||
ಪರಿಯದಕಂಡುಹದ್ದಿನವಾಹಿನಿಯಿಂ | ಬುರುಶಕಟವನೇರಿಬಂದು ||೩೧||

ಓರೋರ್ವರುಪೂರ್ವಭವಬದ್ಧವೈರದಿ | ನೋರ್ವರೋರ್ವರನೀಕ್ಷಿಸಲು ||
ಪರ್ವಿತುಕೋಪಾನಲನಾಜ್ಯವೆರೆಯುಲ | ಗುರ್ವಿಪತುತವಹನಂತೆ ||೩೨||

ಎಲೆಕೃಷ್ಣನಿನ್ನಕೊಲ್ವುದನುಕಾಯ್ವೊಡೆನಿನ್ನ | ಕುಲದೇವತೆಕೃಷ್ಣಯಕ್ಷಿ ||
ಬಲುಹುಳ್ಳೊಡಡ್ಡಬರಲಿಯೆಂದುಮಿಗೆಮಾ | ದಲಿಸಿಮತ್ತಿಂತೆಂದನಾಗ ||೩೩||

ಒಳ್ಳಿಯನಿರದೇರಿಬೆಸಕೋಲನೇರಿಸಿ | ಗುಳ್ಳಿಯುಕರ್ಚಿವೂರೈಸಿ ||
ಹೊಳ್ಳುವೊರಡಿಯೆತ್ತಿದಬಲ್ಪತೋಹುವು | ದೊಳ್ಳಿತೊಳ್ಳಿತುತುರುಗಾರಾ ||೩೪||

ಎನಗಳ್ಕಿನಾಡುಬೀಡುಗಳೆಲ್ಲವಬಿಟ್ಟು | ವನನಿಧಿಯೊಳುಮನೆಗಟ್ಟಿ ||
ಇನಿತುಕಾಲಜೀವಿಸಿದುದುಸಾಲದೆ | ನಿನಗೆಚಕ್ರಿಯೊಳೇಕೆಬವರ ||೩೫||

ಎಂದುಮಾದಲಿಸೆಮುಕುಂದನೆಂದನುನಿನ್ನ | ಮುಂದಿರದೊಳುಪುಣ್ಯವಶದಿ ||
ಬಂದುಹುಟ್ಟಿದಚಕ್ರಬಲದಿಂದಚಕ್ರಿನೀ | ನೆಂದೆಂಬರುನಾಡುಗರು ||೩೬||

ವಿಕ್ರಮಹೀನರಾದೊಡಮೋನೊಕೋವರ | ಚಕ್ರಮುಳ್ಳಾಕುಂಬರರ ||
ಚಕ್ರಿಯೆಂಬರುಲೋಕದವರುಸೀನವರಂತೆ | ಚಕ್ರಿಯಾದ್ಯೆಲೋಕವರಿಯೆ ||೩೭||

ಸಂಗರದೊಳುಕಾಣಬಹುದುಸವಿಸ್ಮಾರ್ಪರ | ಮುಂಗೈಯುದೊಂದುಶಕ್ತಿಯನು||
ಉಂಗುರವನುನೋಡುವೊಡೆಕನ್ನಡಿಯುಮು | ನಂಗೊಂಡರಸಲದೇಕೆ ||೩೮||

ಎಂದುನುಡಿದಮುರರಿಪುವಿನನುಡಿಗೇಳಿ | ತಂದುಮುನಿಸನುಮಾಗಧನು ||
ಬಂದಿಸಿಬಿಲ್ಗೆ ತಿರುವನೀವಿಜೇವೊಡೆ | ದಾದಮಂಜಿಸಿತುಲೋಕವನು ||೩೯||

ಮುರರಿಪುವಿತ್ತುಶಾರ್ಙ್ಗಗೆತಿರುವೇರಿಸಿ | ಭರದಿಂದನೀವಿಜೇವೊಡೆಯೆ ||
ಸರಿಯಾದುದುಕಟ್ಟಕಡೆಯುಕಾಲದನಿಡಿ | ಉರವಣೆಗದನೇನೆಂಬೆ ||೪೦||

ಉಡುಪಮಂಡಾರಂಭದವೊದಲೊಳುದಿವ್ಯ | ಶರಸಂಧಾನವಮಾಡಿ ||
ಧುರಧೀರರುಕಾಯ್ದುಕೊಳ್ಳೈಸುತೋರ್ವರೋ | ರ್ವರನುರೆಮುನಿದೆಚ್ಚರಾಗ ||೪೧||

ಆರಿಬೊಬ್ಬಿರಿದುಪುಂಖಾನುಪುಂಖಿಯೊಳೆಚ್ಚ | ನಾರಾಚತತಿಗಗನದೊಳು ||
ಸೇರಿಸಿಪಂದಲಿಟ್ಟಂದದಿಕಿಡಿಸಿದು | ಪಾರವಿಬಿಂಬದಕುರುಹ ||೪೨||

ಓರೋರ್ವರೆಚ್ಚಂಬುಗಳನೆಡವಳಿಯೊಳ | ಗೋರೋರ್ವರುಖಂಡಿಸಲು ||
ಮೂರಿಯಡುವುದಕ್ಕೆ ಪುಳ್ಳಿಯುಬಣಬೆಯು | ಸೇರಿಸಿದಂತೊಪ್ಪಿದುದು ||೪೩||

ಅವನೆಚ್ಚದಿವ್ಯನಾರಾಚವಪಿಡಿದುಮ | ತ್ತವನದರಿಂಪಿಡಿದೆಸೆಯೆ ||
ಅದನವನಾಂತೆಸಲಾವಿನಮ್ಮಾಣವ | ದಿವಿಜರಿರದೆನೋಡಿದರು ||೪೪||

ಈಯಂದದಿಂದೋರೋರ್ವರುಗೆಲಲಾರ | ದಾಯುದ್ಧದೊಳಗಾಭಟರು ||
ಛಾಯಾಯುದ್ಧಂಗೆಯ್ವಂದದಿಕಾವಿ | ಯಾಯುಸಬಡಲುಮಾಗಧನು ||೪೫||

ತೆಗೆಯೆಭುಗಿಲ್ಭುಗಿಭುಗಿಲೆನೆದಳ್ಳುರಿ | ಹೊಗೆಹೊಂಗಿಡಿತರಿಗೆಂಡ ||
ಗಗನವನಾವರಿಸಿತುಹರನುರಿಗಣ್ಣ | ತೆಗೆದಂತಾವಹ್ನಿಬಾಣ ||೪೬||

ಅದನೆಸಲುರವಣೆಯಿಂಬರ್ಪುದನುಕಂಡು | ಕದನಕಠೋರಕೇಶವನು ||
ಉದಕಬಾಣದಿನದನಂದಿಸೆಕೋಪದಿ | ಕುದಿದುಮಾಗಧಭೂವರನು ||೪೭||

ಮುನ್ನಕಾಳಿಗನಕೊಂದಾಬಲುಹಗೆಯುನಾ | ನಿನ್ನಕೊಲಲುಬೇಕೆಂದು ||
ಪನ್ನಗಲೋಕವೈಯಿದ್ದುದವೊಲುತೆಗೆದೆಚ್ಚ | ನುನ್ನತಫಣಿಮಾರ್ಗಣವನು ||೪೮||

ಆಸರ್ಪಶರವನುಗರುಡಾಸ್ತ್ರದಿನೆ | ಚ್ಚಾಶಾಸಿಗನ್ನಖಂಡಿಸಲು ||
ಕೇಸುರಿಗೆದರಿಭೂಧರಬಾಣವನುಜ | ರಾಸಂಧನಾರುತೆಸೆಯಲು ||೪೯||

ವರವಜ್ರಬಾಣದಿನಾವಾಸುದೇವನು | ಭರದಿಂದೆಚ್ಚುಖಂಡಿಸಲು ||
ಶರನಿಧಿಬಾಣದಿನೆಸೆವಡಬಾಗ್ನಿಯ | ಶರದಿನದನ್ನಕೆಡಿಸಿದನು ||೫೦||

ಸೊಕ್ಕಾನೆಗಳ ಶರದಿಂ ಮಗಧೇಶ್ವರ | ನೆಕ್ಕೆಯಿಂದಿರದೆಸಲಾಗ ||
ದಿಕ್ಕರಿಗಳು ಬಹುರೂಪವಡೆದು ಬಪ್ಪ | ಲೆಕ್ಕದಿ ಸೆಯ್ಯುರಬಾಡ ||೫೧||
ಅಂಬುಜನಾಭನರಸು ಮಿಗ ಶರವನು | ತುಂಬಿತೆಗೆದು ಬಿಡಲಾಗ ||
ಮುಂಬರಿದವರ ಶಿರಂಗಳ ಸೀಳ್ದು ಸೀ | ರುಂಬುಳಾಡುತ ಬರುತಿರಲು ||೫೨||
ಅದನು ಕಂಡಾ ಚಕ್ರಿಯೆಚ್ಚ ಶರಭಶರ | ಕದುಬಿ ಕೇಸರಿ ಬಾಣವನು ||
ಸದೆದು ಸೀಳಿ ಬರ್ಪುದ ಕಂಡು ಕೋಪದಿ | ಸಧಟರದೇವ ಸಚ್ಯುತನು ||೫೩||
ಉರುತರಮಪ್ಪ ನಿಶಿತ ಗಂಡಭೇರುಂಡ | ಶರದಿ ನದನು ಖಂಡಿಸಲು ||
ಇರುಳ ಬಾಣದಿ ಮಾಗಧನೆಸೆಯ ಸೂರ್ಯ | ಶರದಿನೆಚ್ಚದನೋಡಿಸಿದನು ||೫೪||
ಇವು ಮೊದಲಾದವುತ್ತಮ ವಿದ್ಯಾಬಾಣ | ನಿವಹವನಿರದೆ ತಾನೆಸಲು ||
ಅವನೆಲ್ಲವ ಪ್ರತಿವಿದ್ಯಾಶರದಿ ಕೇ | ಶವನೆಚ್ಚು ಕೆಡಿಸಲು ಕಂಡು ||೫೫||
ಕಡುಗರಳ್ದಾ ಮಾಗಧ ಸಂತ್ಯಕಾಲದ | ಮೃಡನನುಸಿಸಿಂದೆ ವೆಗೆದ ||
ಕಿಡಿಗಣ್ಣಿನ ಕುಳಿಕನ ಸೊಂದು ಸ್ನಾಪ | ಪಡೆದಂತೆ ಕಿಡಿಕಿಡಿವೋಗಿ ||೫೬||
ರಕ್ಷಿತಯಕ್ಷ ಸಹಸ್ರ ರಿಪುಕ್ಷಯ | ದಕ್ಷ ಸುಪ್ರಭವೆಸರ್ವಡೆದ ||
ಲಕ್ಷ ತರಣಿತೇಜೋಯುತ ಚಕ್ರಕೆ | ದಕ್ಷಿಣಕರವನೀಡಿದನು ||೫೭||
ಕಡಲೇಳಿರದೆ ಕುದಿಯೆ ತಳತಳಗೂಳಿ | ಪೊಡವಿಯೆಣ್ಣೆ ಸೆಸಡನಡುಗೆ ||
ನಡುಬಾನೊಳುರಿ ಹೊಗೆ ತೀವಲು ಚಕ್ರವ | ಹಿಡಿದು ತಿರುಹಲಾ ಚಕ್ರಿ ||೫೮||
ಪಗಲೊಳೆತ್ತಿದ ಪಂಜಿನ ಪರಿಯಂತಾ | ಪಗಲಾಣ್ಮನ ಮಂಡಲವು ||
ಮಗಧಾಧಿಪತಿ ತಿರುಹುವ ಚಕ್ರ ಧಗಧಗ | ಧಗಿಪ ಕಾಂತಿಯೊಳೊದಗಿದುದು ||೫೯||
ಇಂತು ತಿರ್ರನೆ ತಿರುಗುವ ಚಕ್ರವ ಕಂಡು | ಚಿಂತೆಯಿಂದಾ ಯಾದವರು ||
ಇಂತೆಂದರು ಹರಿಗಿದು ಪರಿಹರಿಸು ಪ್ರೌ | ಢಂತುಟು ತನ್ನಳವಲ್ಲ ||೬೦||
ಎನುತ ಮಂತಣಗೊಳುತಿರಲತ್ತ ಮಗಧನ | ಘನತರ ಬಲವತಿಮುದದಿ ||
ವನಮಾಲಿಗಿದು ಕಡೆಯೆಂದು ಬೊಬ್ಬಿರಿದಾರು | ವನಿತರೊಳಾ ಕೇಶವನು ||೬೧||
ತರಣಿಕಿರಣವ ಕಂಡಾ ಸೂರ್ಯೋಪಲ | ವುರಿವಂತಾ ದಿವ್ಯಚಕ್ರ ||
ತಿರುಗುವುದನು ಕಂಡು ಕೇಸುಂಗೆರಳ್ದು | ತಿರುವಾಯ್ಗುಂಬನು ಹೂಡಿ || ||೬೨||
ನಿಲಲೆಡಬಲವೊಳು ಭುವನೈಕವಿಕ್ರಮಿ | ಬಲರಾಮ ಧರ್ಮಜ ಭೀಮ ||
ಕಲಿಪಾರ್ಥ ನಮುಳ್ಳ ಕುಬಾಣ ಪೂರ್ಣ | ಚಲದಂಕ ನಾವ ನೃಪಾಲ ||೬೩||
ಧುರಧೀರನಭಿಚಂದ್ರನೊದಲಾದ ಭೂಭುಜ | ರುರವಣೆಯಿಂ ಕೇಶವನ ||
ಪರಿತಂಸುಮುಟ್ಟದ ಮುನ್ನ ಕಡಿವೆವೆಂದು | ಶರದೊಟ್ಟು ನಿಂದಿರಲಾಗ ||೬೪||

ಎಲೆಕೃಷ್ಣಸಾಯದೆಬಂದೆರಗಲ್ಲಸೊ | ಡಲಸದೆಕಾಯ್ದುಕೊಳ್ಳೆಂದು ||
ಚಲದಾಕನಾಸುಪ್ರಭಾತಚಕ್ರಮಸಂ | ದಲಘುವೇಗದೊಳಿಡಲಾಗ ||೧೫||
ಎಡೆಯೊಳುತತ್ತ್ವರಡರಿವೆವೆನುತಬಿ | ಲ್ವಿಡಿದುಸಂಧಾನದಿನಿಂದ ||
ಕಡುಗಲಿಗಳಕಣ್ಣವಂಚಿಸಿಯಾಚಕ್ರ | ಘುಡುಘುಡಿಸುತಮುಟ್ಟಿಬಂದು ||೧೬||
ಬಲಯುತಬಲಸಸುಜನಪೂರುಸೊಳುಕ | ಣ್ಸೊಗ್ಳಿಪಂದದಿಬಲವಂದು ||
ತಳುವದೆಬಲದಬಾಹುವಿನಗ್ರದೊಳುನಿಂದು | ದಿಳೆಗಾಶ್ಚರ್ಯವುಪ್ಪಂತೆ ||೧೭||
ಇಂತಾದುದನುಕಂಡತಿಮುದದಿಂದಮು | ರಾಂತಕನಾಚಕ್ರವಿಡಿದು ||
ಇಂತೆಂದನೆಲೆಮಾಗಧಕೇಳುತೀರಿತು | ಪಿಂತೆನೀನೆಸಗಿದಪುಣ್ಯ ||೧೮||
ಅದರಿಂದನೀನೆನ್ನಗೆಲುವುದಿಲ್ಲೆಂದತಿ | ಪದುಳದಿಂದೆಯ್ತಂದೆನ್ನ ||
ಪದಕೆಸಮಿಸುಬೇಗದಿನಿನ್ನಮನದೊಳು | ಹುದುಗಿದಮಾನವನುಳಿದು ||೧೯||
ಎಂದುನುಡಿಯೆಕರಗಿದಲೋಹರಸದುಷ್ಣ | ಸಂದುವಾಗಾನೀರೊಳಗೆ ||
ಬಂದುನಿಮಿಷಗುಳುಗುಳಿಪಂತೆಮಾಗಧ | ನೆಂದನಿಂತೆಂದುಘೂರ್ಣಿಸುತ ||೨೦||
ಗಾರುಮಾತೇಕೆಲಪ್ಪೋಗೋವಳನಾಸು | ಪಾರಿಸಲೆನ್ನಕೈಯಿಂದ ||
ಪಾರುಂಬಳಿಪೋದೊಡೆನ್ನವಿಕ್ರಮದೇಳ್ಗೆ | ಪಾರಿದುದೇಯೆಂದೆನುತ ||೨೧||
ನೆಲದೊಳುನೆರೆವುದನಸಕರಿಸಂತೆಭೂ | ತಳಕಾರಥದಿಂದುಮುಕಿ ||
ಅಲಸದೆಝುಳಿಪಿಸುತುರುಚಂದ್ರಹಾಸವ | ನಲಘುವಿಕ್ರಮಿಬರುತಿರಲು ||೨೨||
ಮುನಿದುಮುರಾಂತಕನಾಚಕ್ರದಿಂದಿಡ | ಲನಿತರೊಳಾಮಾಗಧನ ||
ಮಿಸುಗುವಮುಕುಟರಂಜಿತಶಿರವರಿದುದಂ | ದನಿಮಿಷಪತಿಪೊಗಳ್ವಂತೆ ||೨೩||
ಪರಿವೇಷದಮಧ್ಯದೊಳಗಣದೋಷಾ | ಕರಮಂಡಲವೊಯೊಂಬಂತೆ ||
ಕರವೊಪ್ಪಿತಾಮಗಧೇಶನಮಸ್ತಕ | ಮುರುತರಚಕ್ರದನಡುವೆ ||೨೪||
ವೀರರಸಾಬ್ಧಿಯಾವರ್ತಮಧ್ಯದರಕ್ತ | ವಾರಿಜವೆಂಬಂದವೊಳು ||
ಆರಾಯನಪಂದಲೆಚಕ್ರಮಧ್ಯದೊ | ಳಾರೈಯದೆತಿರುಗಿದುದು ||೨೫||
ರಾಹುಹಿಡಿಯಲೊಡನಸ್ತಂಗತಮ | ಪ್ಪಾಹಗಲಾಣ್ಮನಂತಾಯ್ತು ||
ಆಹರಿಯಿಟ್ಟುರುಚಕ್ರಸಹಿತಬೀ | ಳ್ವಾಹಗೆಯೆಸೆವುತ್ತಮಾಂಗ ||೨೬||
ಸುರರಾಜನಿಡೆರತ್ನಶೈಲಶಿಖರಿಯಿಳೆ | ಗುರುಳ್ವಂತಾಚಕ್ರವಿಂದ ||
ಹರಿಯಿಡೆಮಗಧನಮಣಿಗಣಯುತಶಿರ | ವುರುಳ್ದುದುಧರಣೀತಳಕೆ ||೨೭||
ಮಡುತವಾಗದೊಳುಗುಡಿಯುಕಟ್ಟಿನವಸ್ತ್ರವ | ನಿರದೆನಾರದನಟಿಸಿದನು ||
ಅರಲಸರಿಯುನಸುಸುರಿದುಸುರಸತಿಯರು | ಹರಸಿಸೇಸೆಯುಸೂಸಿವರು ||೨೮||

ಅನಿತರೊಳುಣ್ಮೆಯುಭಯಘೋಷಧ್ವನಿ | ಜನನುತರಾಮಕೇಶವರು ||
ಅಸುರಾಗದಿಂಪಾಂಡವರುಸಹಿತಬೀಡಿ | ಗನಿಮಿಷಪತಿವಿಭವದೊಳು ||೭೯||
ಬರಲತ್ತವಿಜಯಾರಾಧಾರ್ಚಲಕಾಘನ | ತರವಿಕ್ರಮವಸುದೇವ ||
ಸ್ಮರಶಂಭುಸುಕುಮಾರರುಪೋಗಿತದ್ದ್ವರ | ಧರೆಯೊಳುಖಚರಭೂವರರ ||೮೦||
ಮೊತ್ತದೊಳರೆಬರಸೋಡಿಸಿಯರೆಬರ | ನೊತ್ತಂಬದಿಂಕಾದಿಗೆಲಿದ ||
ತತ್ತರದರಿದರೆಬರಬಳಿಕರೆಬರ | ವಿತ್ತವಕೊಂಡೀತೆರದಿ ||೮೧||
ಎಲ್ಲರಕಾಣಿಸಿಕೊಂಡರಾಗ...ಪಿಂ | ನಿಲ್ಲದೆಕುರುಭೂಮಿಗಾಗಿ ||
ಬಲ್ಲಿದರಾಬಲಕೇಶವರೆಡೆಗತಿ | ಸಲ್ಲೀಲೆಯಿಂತಿರುಗಿದರು ||೮೨||
ಬಳಿಕವಮಾಗಧನಸ್ತಿರುತನುಜರುಬಂಧು | ಬಳಗವನೆಲ್ಲವಬರಿಸಿ ||
ಅಲಘುವಿನ...ವಸುಸ...ರಯ...ಡುಗೊರೆಯಿತ್ತು | ಕಳುಹಿಯುವರಪಟ್ಟಣಕೆ ||೮೩||
ಅಮರುದಿನಸಿಜಸುತರೆಲ್ಲವಿಗೆಯು | ದ್ದಾಮದುಃಖದೊಳಳುತಿಪ್ಪ ||
ಆಮಾತ್ಯಪಿತೃಧೃತರಾಷ್ಟ್ರಗಾಂಧಾರಿಯು | ನಾಮಹಿಮರುಪಾಂಡವರು ||೮೪||
ಪದಯುಗಕೆರಗಿಯವರಮನನಿಡಿವಂತೆ | ಸದುವಿನಯವನಾಡಿಬಳಿಕ ||
ವಿದುರನಸುಪಚರಿಸುತಬಂಧುಗಳದುಃಖ | ದೊಡವನೆಲ್ಲವಪಡಿಸಿದರು ||೮೫||
ಬಳಿಕಚೋದಿಲಮಗನಾಕರ್ಣನಳಿದುದ | ಕಳಲ್ವಜನನಿಕೊಂತಿಯುನು ||
ಬಳಲುತಪಾಂಡವರೇಕಮ್ಮನಿನಗು | ವ್ಮ್ಮಳವೆಂದುಮಾಡೆಬಿನ್ನಪವ ||೮೬||
ಆಕರ್ಣನವೃತ್ತಾಂತವನೆಲ್ಲವ | ನಾಕೊಂತಿಸುತರಿಗರಿಪಲು ||
ಈಕಾಯನನುಸೆವ ಗರಿಸಲಿಲ್ಲವೆಯೆಂದು | ಭೂಕಾಂತರಳಲಿದರಾಗ ||೮೭||
ಆದುಃಖದೊಳಿಪ್ಪಪಾಂಡವರೆಡೆಗೆವಾ | ಮೋದರನಿರದೆಯ್ತಂದು ||
ಆದರದಿಂದುಪಚರಿಸಿಬಳಿಕಬೀಡಿ | ಗಾದಿಸದೊಳುಮಗುಳಿದನು ||೮೮||
ಆಮರುದಿವಸದುದಯದೊಳರುಮುದದಿಂ | ರಾಮಕೇಶವರುಪಾಂಡವರ ||
ಪ್ರೇಮದಿಕೂಡಿಕೊಂಡಾನಿಜಪುರಕೆಯು | ದ್ದಾಮವಿಭವದಿನೆಯ್ದಿದರು ||೮೯||
ವ ಗಪಸಕೊಂದುಮಕ್ಕಳುಬಪ್ಪುದನುಕೇಳಿ | ಸುಗುಣಿಸಮುದ್ರವಿಜಯನು ||
ನಗರಿಯೊಳಷ್ಟಶೋಭೆಯನುಮಾಡಿಸಿಯೊಗು | ಮಿಗೆಹರುಷದೊಳಿದಿರ್ವರಲು ||೯೦||
ವೃದ್ಧಪದಲಲಿತಾರುಣಸರಸೀರುಹಕೆ | ಸದುವಿನಯದೊಳಬಂದೆರಗೆ ||
ಮುದದಿಂದಾಮಕ್ಕಳಪಿಗಿಯಪ್ಪಿಯು | ಗ್ಗದಮರುಕದಿಹರಸಿದನು ||೯೧||
ಈಕ್ರಮದಿಂದಹರಕೆಯಿಂತುನಗರದಿ | ಕ್ಷಕ್ರಮನೆಲ್ಲಮನಿರದೆ ||
ಚಕ್ರರತ್ನದದಿವ್ಯಕಾಂತಿಯಾಕ್ರಮಿಸೆತ್ರಿ | ವಿಕ್ರಮನಂದೆಯ್ತಂದು ||೯೨||

ನಡೆನೋಡುವನಗರೀನಾರಿಯರಕಣ್ಣ | ಕಡೆಯೊಳೊರೆತುಬೀದಿವರಿವ ||
ಕಡುವೆಳಗಿನಕಾಳ್ಪೂರದೊಳಗೆಹೊಕ್ಕು | ನಡೆತಂದರಾರಾಜಗೃಹಕೆ ||೯೩||
ಸತಿಯರುರುಹರಸಿತಳಿವಸವಶೇಷಾ | ಕ್ಷತೆಯಾಂತುಗಜಮಸ್ತಕದಿ ||
ಅತಿಮುದದಿಂದಿಳಿದಪಸಿಗೆಯ್ದಿಯು | ಚ್ಯುತನುವಂದಿಸಿನೇಮಿಜಿನಗೆ ||೯೪||
ಮತ್ತೆತುಳಿಲ್ಗೆಯ್ದಿಂತೆಂದನೆಲೆದೇ | ವೋತ್ತಮನಿನ್ನಸೇವೆಯೊಳು ||
ಉತ್ತಮಪದವಹುದೀಚಕ್ರಧರನಂ | ಪತ್ತೊದಗುವುದೇನುಚೋದ್ಯ ||೯೫||
ಎಂದುವರ್ಣಿಸಿಕೆಲಹೊತ್ತಿರ್ದುಬೀಳ್ಕೊಂಡು | ಬಂದುಯಾದವಪೂರ್ವರರ್ಗೆ ||
ವಂದನೆಯನುಮಾಡಿಹರಕೆವಡೆದುನಿಜ | ಮಂದಿರಕೆಯ್ತಂದನಾಗ ||೯೬||
ಓಲಗಶಾಲೆಯೊಳಗೆಸಿಹ್ಮಪೀಠದ | ಮೇಲೆಕುಳ್ಳಿರ್ದುರಾಮುದದಿ ||
ಓಲೈಸಿಬಂದರಾಜಾನೀಕವನುತ | ಮ್ಮಾಲಯಕೊಲಿದುಬೀಳ್ಕೊಟ್ಟು ||೯೭||
ಬಳಿಕನಿಜಾಲಯಕೆಯ್ದಿಕಿರಿದುಮಗ | ಲಳಿಯಲುಧರ್ಮನಂದನನ ||
ಅಲಘುವಿನಯದಿಂದಹಸ್ತಿನನಗರಿಗೆ | ಕಳುಹಿದನಾಕೇಶವನು ||೯೮||
ಮುರರಿಪುವನುಬೀಳ್ಕೊಂಡುಹಸ್ತಿನಪುರ | ಕಿರದನುಜರುಗೂಡಿಬಂದು ||
ಹರುಷದೊಳರಮನೆಪೊಕ್ಕುಯುಧಿಷ್ಠಿರ | ನರನಾಥಚಂದ್ರನೊಪ್ಪಿದನು ||೯೯||
ತದನಂತರವೊಳಗಾಧೃತರಾಷ್ಟ್ರಗೆ | ವಿದುರಗೊಲಿದುಬೇರೆಬೇರೆ ||
ವಿದಿತಮಪ್ಪವಿಷಯಮನಿತ್ತುಸಲೆಸ | ಮ್ಮದದಿಂದಾನಗರಿಯೊಳು ||೧೦೦||
ಅಣುಗಿನನುಜರಸಿರಿಸಿತಾನೆಸೆವದ | ಕ್ಷಿಣಮಧುರಾಪುರಕೆಯ್ದಿ ||
ಕ್ಷಣವುಳಿಯದೆಧರ್ಮವರ್ತನದೊಳುಧರ್ಮ | ನಣುಗನುಸಲೆಸುಖಮಿರ್ದ ||೧೦೧||
ಇಂತಾಧರ್ಮಸುತಸುಜನಸುಜರುಗೂಡಿ | ಸಂತಸದಿಂಕೀರ್ತಿಯೆಂಬ ||
ಕಾಂತಾಮಣಿಯನುಹರವರಿಯಾಡದಿ | ಗಂತದೊಳಾಡಿಸಲಿತ್ತ ||೧೦೨||
ವರುಣಾನಂದದಿವಾಸುದೇವಭೂವರನಾ | ಶರಧಿಮಧ್ಯದಿಶೋಭಿಸುವ ||
ಪುರವರದೊಳುಸಲೆಸುಖಮಿರ್ದಾಮಾರ್ಗ | ಶಿರಶುದ್ಧದಶಮಿಯಹಗಲು ||೧೦೩||
ಹರುಷದಿಂದಾದಿಗ್ವಿಜಯೋದ್ಯೋಗಮ | ನಿರದೆರಚನೆಗೈವುದೆಂದು ||
ನಿರಪನೊಡನತಿಭರದಿಂದಸೇನಾ | ವರರುಬೆನೆಸಲನಿತರೊಳು ||೧೦೪||
ಮಾರಾಂತರಪುಕರಿಹರಿಯುಘರ್ಜನೆಯನು | ವಿಾರುವದೇವನಂಜನಿತ ||
ಆರುಮಹಾಭೇರಿಯದನಿಗೆಯ್ಸಿಯಾ | ರಾರುಶಂಖವಪೂರೈಸಿ ||೧೦೫||
ಆನುರಾಗದಿಂಕ್ರೀಂಪತ್ಸಲರಾಂಥನನಾ | ಜಿನಪತಿನೇಮೀಶ್ವರನ ||
ಮನಗೊಂಡುಪೂಜಿಸಿಸ್ತುತಿಗೆಯ್ದುಮೃದುಪದ | ವನಜಕೆರಗಿಬೀಳ್ಕೊಂಡು ||೧೦೬||

ಪೂಜಿಸಿಚಕ್ರಾದಿಯಾದರತ್ನಂಗಳ | ರಾಜಿಪಶುಭಲಗ್ನದೊಳು ||
ರಾಜಮಂದಿರಪನುಪೊರಮಟ್ಟುಬಳಸಿದ | ರಾಜಮಂಡಲಮಧ್ಯದೊಳು ||೧೦೭||
ಹಮುಷವಿಬಲಕೇಶವರುಸಿಹ್ಮವಾಹಿನಿ | ಗರುಡವಾಹಿನಿಯೆಂಬರಥವ ||
ಇರದೇರಿರಾಜಘಾನಿಯಪೊರಮಟ್ಟಾ | ಧರೆಯ ದಿರ್ವಂದದಿನಡೆದು ||೧೦೮||
ಕಡೆಯಿಲ್ಲದಬಹುಕಟಕದಪದಘೂಳಿ | ಯುಡರೆ ಧೂಳಿದುದಂಬುರಾಶಿ ||
ವೃಡನನುಂಡೆಪ ಗಂಗೆಯೆಲ್ಲವನ್ನಾದುದು | ಪೊಡೆಯಲರಸದಂಡುನಡೆಯೆ
ಈಪರಿಯಿಂದನಡೆದುವಿಜಯಾರ್ಧವು | ಹಾಪರ್ವತವಮುಟ್ಟಿಬಂದು ||
ಕೋಪಕೃತಾಂತಸಂದಾಯರ್ಾಖಂಡದ | ಭೂಪರನೆರಗಿಸಿಕೊಂಡು ||೧೧೦||
ಮುತ್ತಾಖಚರಾದಿಯುವಿದ್ಯಾಧರ | ರುತ್ತಮವಸ್ತುಸಂತತಿಯು ||
ಮತ್ತಯೌವನೆಯುವಸ್ತ್ರಾಪಣ್ಮಿಕ್ಕಳ | ನೊತ್ತಿಕಪ್ಪವಕೊಂಡುಬಳಿಕ ||೧೧೧||
ಹರುಷದಿಕೈಲಾಸಗಿರಿಗೆಯ್ದಿಭರತೇ | ಶ್ವರಪಿರಚಿತಚೈತ್ಯಗೃಹದ ||
ವರಜಿನರೆಪ್ಪತ್ತನಾಲ್ವರಪದಯುಗ | ಸರಸಿಜಕೆರಗಿಬಂದಾಗ ||೧೧೨||
ಬಳಿಕಗಂಗೆಯುಮೂಡಣವ್ಲೇಚ್ಛಖಂಡದ | ಒಲಯುತಬಹುಭೂಭುಜರಿಂ ||
ತುಳಿಲುಗೆಯಿಸಿಕೊಂಡುತರುಣೀರತ್ನಂ | ಗಳನುಕಪ್ಪವಕೊಂಡುಬಂದು ||೧೧೩||
ಸುರಗಂಗೆಯುನಾಲಾಂತಿಯುವಡುವಣ | ಧರೆತೆರಪಿಲ್ಲದುದದೊಳು
ಉರುಸೇನಾಪನುನ್ನಿತರಾಗಿದಕ್ಷಿಣ | ಶರಧಿವಿಷಯದೊಳಗಿರ್ದ ||೧೧೪||
ಮಾಗಧವರತಪ್ರಭಾಸಾಗರರಿಂ | ಬಾಗಂಡುಗಲಿಯುಮರರನು ||
ಬೇಗದಿನಾಭಸುಂತರಾಭರಣವ | ನಾಗಕಪ್ಪವಕೊಂಡುಬಳಿಕ ||೧೧೫||
ಪಡುವಣಶರಧಿಯು ಸಿಂಧುನದಿಯುಸಟ್ಟ | ನಡನಣವ್ಲೇಚ್ಛದೇಶವನು ||
ನಡುಗಿಸಿಯವನ್ಯ [illegible] ಣಿಸಿಕೊಂಡು | ಪಡೆವುಪಲವುವಸ್ತುಗಳನು ||೧೧೬||
ಇಂತುತ್ರಿಖಂಡವುಂಡಲವನುಸಾಧಿಸಿ | ಸಂತಸದಿಂತಿರುಗಿದರು ||
ಪಿಂತೆಮುಂತೆ [illegible] ಸಿರಸ್ಸೃಪ | ಸಂತತಿಯೋಲೈಸಿಬರಲು ||೧೧೭||
ಗಗನದೊಳಿಸಿಸೆಡೆರಪಿಲ್ಲದಂದದಿ | ಗಗನಗಾಮಿಗಳೆಯ್ತರಲು ||
ಅಗಣಿತಮಪ್ಪವಾಹಿನಿಗೂಡಿಯಾನಿಜ | ನಗರಿಗರದೆನಡೆತರಲು ||೧೧೮||
ಮುತ್ತಿನಾರತಿಯನೆತ್ತುವಸೇಸೆಯಿಕ್ಕುವ | ಬಿತ್ತರದಿಂದಹರಸುವ ||
ವೃತ್ತಕುಚೆಯುರಗೊಂದಣಪಿಂಸಿಜಗೃಹ | ಕುತ್ತಮರೆಯ್ತಂದರಾಗ ||೧೧೯||
ಆಮರುದಿನದೊಳುವಿಪ್ಯಾಧರಪನ್ನ | ಗಾಮರರಬ್ಧಿವಿಜಯರು ||
ಆಮಹಿಮನುಧರ್ಮ್ಮಸಂಪನಮೊದಲಾದ | ಭೂಮಿಪರೆಲ್ಲರೆಯ್ತಂದು ||೧೨೦||

ಭಾಸುರಬಹುಮಣಿಪೀಠದೊಳಾಬಲ | ವಾಸುದೇವರಕುಳ್ಳಿರಿಸಿ ||
ಸಾಸಿರದೆಂಟುಕೊಡದತೀರ್ಥಾಂಬುವ | ಸೂಸಿದರಾಮಸ್ತಕದೊಳು ||೧೨೧||
ಬಳಿಯೊಳುದಿವ್ಯಭೂಷಣದಿವ್ಯವಸ್ತ್ರಂ | ಗಳಿಸೊಪ್ಪುವಂತಲಂಕರಿಸಿ ||
ಎಳೆಮುತ್ತಿನಸೇಸೆಯುಸಿರಿದಲೆಯೊಳು | ತಳೆದೊಲವಿಂಹರಸಿದರು ||೧೨೨||
ಸಾಸಿರಯಕ್ಷರಕ್ಷಿತಚಕ್ರಗದೆಶಕ್ತಿ | ಯಾಶಂಖಶಾರ್ಙ್ಗಕೌಸ್ತುಭವು ||
ಭಾಸುರನಂದಕವೆಂಬ ಮಹಾರತ್ನ | ವೋಸರಿಸದೆಬೆಸಗೆಯ್ಯೆ ||೧೨೩||
ಹರಿನೀಲವರ್ಣನನಂತವೀರ್ಯನುದಶ | ವರಕಾರ್ಮುಕೋತ್ಸೇಧಯುತನು ||
ಎರಡೆಂಟುಸಾಸಿರಮಕುಟಾಧೀಶ್ವರ | ಗೆರಗನುಮರ್ಧಚಕ್ರೇಶ ||೧೨೪||
ಪದಿನಾರುಸಾಸಿರಸತಿಯರಿಗರಸನು | ವಿದಿತಏಕಾಂತಸಂಯುತನು ||
ಸದಮಲಮೂರ್ತಿಭುವನಘುಂಘುಕನೊ | ಪ್ಪಿದನಾಪುರುಷೋತ್ತಮನು ||೧೨೫||
ಸಾಸಿರದಿನ್ನೂರುವರ್ಷಾಯುಷ್ಯನು | ಧಾಸೂತಿವರ್ಣಾಂಗನೆಂಟು ||
ಸಾಸಿರಸುದತೀಜನಪತಿಪತ್ತುಶ | ರಾಸನತನುವಿನುತ್ಸೇಧ ||೧೨೬||
ಹಲಮುಸಲಗದಾಪರಿಘವೆಂಬಾನಾಲ್ಕು | ವಿಲಸಿತಮಪ್ಪರತ್ನಗಳು ||
ಬಲರಾಮಗೆಸಾಸಿರಯಕ್ಷರಕ್ಷಿತ | ಗಳುಸಮನಿಸಿಯೊಪ್ಪಿದುವು ||೧೨೭||
ಇಂತ ಬಲಾಚ್ಯುತರವನಿಯೆಲ್ಲವನಿ | ಶ್ಚಿಂತದಿನಾಳುತಮಿಹರು ||
ಸಂತಸದಿಂಶಶಿಸೂರ್ಯರುಸಕಲದಿ | ಗಂತವನಾಳ್ವಂದದೊಳು ||೧೨೮||
ಜಗದೇಕವೀರಜಯಾಂಗನೆಗಧಿಪತಿ | ಯುಗಣಿತಮಣಿಭೂಷಣನು
ನಗಧರನರಸುಗೆಯ್ದುಸುನೃಪವರಕುಲ | ಗಗನವಾರಿಜಬಾಂಧವನು ||೧೨೯||
ಇದುಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗಿದುಮೂವತ್ತೊಂದಾಶ್ವಾಸ ||೧೩೦||

ಮೂವತ್ತೊಂದನೆಯ ಸಂಧಿ ಸಂಪೂರ್ಣಂ

# ೩೨. ನೇಮೀಶ್ವರ ನಿರ್ವೇಗಸಂಧಿ

ನಿರ್ಮಲಶುಕ್ಲಧ್ಯಾನಾನಲದಗ್ಧ | ಕರ್ಮಕಾಂತಾರಸಂತಾನ ||
ಧರ್ಮರಥಕನೇಮಿಯೆನಿಸಿದ ಶ್ರೀಜಿನ | ಧರ್ಮಪಾಲಕನವಂದಿಸುವೆ ||೧||
ಈಪರಿಯಿಂದೆಸೆವಾಬಲಕೇಶವ | ರಾಪುಷ್ಪಚಾಪಾದಿಯಾದ ||
ಭೂಪರೆಲ್ಲರುಭಯಭಕ್ತಿಯಿಂನೇಮಿಯ | ಶ್ರೀಪಾದಕೆಮುಗ್ಗುತಿರಲು ||೨||
ಸುರಪತಿಯನುದಿನಕಳುಹಿದದಿವ್ಯಾಂ | ಬರದಿವ್ಯರತ್ನಭೂಷಣವ ||
ವಿರಚನೆಗೆಯ್ದುಮೂಲೋಕಾಧಿಪತಿನತ | ಚರಣನುನೇಮೀಶ್ವರನು ||೩||
ಅಮರಸತಿಯರುವತ್ತನಾಲ್ವರುದಿವ್ಯ | ಚಮರವನೊಲಿದಿಕ್ಕುತಿರಲು ||
ಸಮರಂಜಿಸುವುರಗಾಮರಯಕ್ಷಕಿನ್ನರ | ಸಮಿತಿಯೋಲೈಸಿಕೊಂಡಿರಲು ||೪||
ಒಂಪಾನೊಂದುಸಾವಿರಭೂಪಾಲಕ | ವೃಂದವೋಲಗಗೊಟ್ಟಿರಲು ||
ಸಂದಣಿಸಿದತಾರಾವಮಧ್ಯದಚಂದ್ರ | ಸಂದದಿಸಭವನೊಪ್ಪಿದನು ||೫||
ಅಲ್ಲಿಕೆಲಬರೆಳ್ದುಕೈಮುಗಿದಾದೇವ | ವಲ್ಲಭನಿನ್ನಬಾಹುವಿನ ||
ಬಲ್ಲಿತಸೀಕ್ಷಿಸಬೇಕಸಲಾಕ್ಕೆಯ | ಸುಲ್ಲಾಸದಿಂದವನೀಡಿದನು ||೬||
ಮದನರಿಪುವೆಳ್ದುಮೃತ್ಯುಂಜಯನಾಕಿರು | ವೆರಲಬಗ್ಗಿಸಿನೋಡಲಾಗ ||
ವಜ್ರಮಣಿಯದಂಡವಹರಿನೀಲದ | ಕರುಬಾಗಿಸಿದಂತಾಯ್ತು ||೭||
ಮತ್ತಾಮದನಸಮದಾಪಹರಣನಿರ | ದೆತ್ತಿತೋಲಾದಂಡದಿಂದ ||
ಎತ್ತಿದಜೆಂಡಿನಬೊಂಬೆಯಂದದಿಪುರು | ಷೋತ್ತಮನಂದೊಪ್ಪಿದನು ||೮||
ಹರುಷದಿಸಭಸನೀಡಿದಹಸ್ತಮನಾ | ಹರಿಹಿಡಿದಾಡುತೊಪ್ಪಿದನು ||
ಹರಕಂದಸದಡ್ಡಗೊಂಬಿನಡಿಯೊಳಾ | ಹರಿದಾಡುವತುಂಬಿಯಂತೆ ||೯||
ಆನೀಸಿಯೊಳಂಬರಮಂಡಲದಿಂದ | ಪೂವಿನಮಳೆರತ್ನವೃಷ್ಟಿ ||
ದೇವದುಂದುಭಿವೊಳಗಲುಹರಿಯಂಗದೊ | ಳಾವರಿಸಿತುಸಸುಲಜ್ಜೆ ||೧೦||
ಮತ್ತೆಕೆಲವುದಿನದಿಂಮೇಲೆಮಧುಮಾಸ | ವೊತ್ತಂಬಿಸೆತುಂಬಿದಿರುವ ||
ಎತ್ತಿಕರ್ಪಿನಬಿಲ್ಗೆಗಣೆಗಳನಿರ | ದಿತ್ತುಕೊಬ್ಬಿರಿದನಂಗಜನು ||೧೧||
ಸ್ಮರನೆನ್ನಹೂವಿನಮಾರ್ಗಣದಿಂಹರಿ | ಹರವಿಧಿಗಳಗೆಲ್ದನೆಂದು ||
ಉರುಗಬ್ಬದಿಂಬಿಬ್ಬನೆಬಿರಿವಂದದಿ | ಬಿರಿದೊಪ್ಪಿದುವುಮಲ್ಲಿಗೆಗಳು ||೧೨||

ಎಳೆಗೆಂಪಿಯೊಳಸಿಜೀಸಿತುಮಾಮರದೊಳು | ತಳಿರೆದ್ದುವು ಕೋಗಿಲೆಗಳು ||
ಗಳಪಿದುವಾಶಾತಾಮರೆಗೊಳಗಳುನೆರೆ | ತಿಳಿದುವು ಚೈತ್ರಮಾಸದೊಳು ||೧೩||
ಇಂತುಬಂದಾಮಧುಮಾಸದೊಳಾಶ್ರೀ | ಕಾಂತನುನೇಮೀಶನೆಡೆಗೆ ||
ಸಂತಸದಿಂಬಂದುಕರಕಮಲವಮುಗಿ | ದಿಂತೆಂದುಬಿನ್ನವಿಸಿದನು ||೧೪||
ದೇವಬಿನ್ನಪವೀಮಧುಮಾಸದೊಳಗೊಪ್ಪು | ವಾವುದ್ಯಾನಕೆಬಂದು ||
ಆವನಜಲಕೇಳಿಯೊಳಿರಬೇಕೆನೆ | ಲಾವಚನಕ್ಕೊಡಂಬಡಲು ||೧೫||
ಆನೇಮೀಶಸಹಿತಕೇಶವತನ್ನ | ಮಾನಿನಿಯರಕೂಡಿಕೊಂಡು ||
ಆನಂದನವನಕತಿವೈಭವದಿಂ | ದಾನಂದದೊಳೆಯ್ದಿದನು ||೧೬||
ಇಂತುಬನವಮೊಕ್ಕನೇಮೀಶನಾಗುಣ | ವಂತಬಲಾಂಬುಜೋದರರು ||
ಸಂತಸದಿಂವನದೊಳುವಿಹರಿಸುತದ | ನಂತರದೊಳುರಾಜಿಸುವ ||೧೭||
ಪಳಚನೊಪ್ಪುವಪಂಕಜಾಕರವನುಪೊಕ್ಕು | ಬಳಿಕಕ್ರೀಡಿಸಿಕೆಲಹೊತ್ತು ||
ಕಳೆಯೆನೇಮೀಶನುಪೊರಮಟ್ಟುವಸ್ತ್ರಂ | ಗಳನುಕಳೆವಸಮಯದೊಳು ||೧೮||
ಫುಲ್ಲನಾಭನಸಂಕೇತದೊಳಾಲೋಕ | ವಲ್ಲಭನೇಮಿಕುಮಾರ ||
ನಲ್ಲೀಲೆಯಿಂಸತ್ಯಭಾಮೆಗೆತಾನು | ಟ್ಟೊಲ್ಲಣಿಗೆಯಕೊಡುವಾಗ ||೧೯||
ಭರತತ್ರಿಖಂಡಚಕ್ರಾಧೀಶನಪಟ್ಟ | ದರಸಿಯುಟ್ಟುಳಿದವಸ್ತ್ರವನು ||
ಹಿರಿದುಹೀನರವಾಕ್ಯದೊಳುಹಿಡಿನೆನೆಯೆಂ | ದುರುಗರ್ವದಿಂಮಾತನಾಡೆ ||೨೦||
ಆನುಡಿಯನುಕೇಳಿಕೋಪದಿರುಗ್ಮಿಣಿ | ಯೇನಕ್ಕಸುರರುಗಳಿವನ ||
ಸ್ನಾನೋದಕವನಂಗೋಪಾಂಗದೊಳಿ | ಟ್ಟಾನತರಪ್ಪುದನರಿಯ ||೨೧||
ಎನಲಿಂತೆಂದಳುಕಿರಿಯಂದಿನೊಳುನೆರೆ | ಮುನಿದುಬಂದಾರಕ್ಕಸಿಯರ ||
ಇನಿಸಳುಕದೆಕೊಂದಾಘನಗೋವ | ರ್ಧನಪರ್ವತಮನಿರದೆತ್ತಿ ||೨೨||
ಉರಗಶಯ್ಯೆಯನೇರಿಯೇರಿಸಿಶಾರ್ಙ್ಗಿಯ | ನಿರದೂದಿಪಾಂಚಜನ್ಯವನು ||
ದುರಗಲಿಯಾವಮಾಗಧನಕೊಂದಾತಗೆ | ಸರಿಯಾರವನಿಯೊಳೆನುತ ||೨೩||
ತೊತ್ತುಗಳಸವನೆನಗೆಪೇಳ್ವರೆಯೆನ | ಲುತ್ತಮೆರುಗ್ಮಿಣಿದೇವಿ ||
ಮತ್ತಮಿಂತೆಂದಳುನೇಮೀಶ್ವರನು | ತ್ಪತ್ತಿಯಾಗುವುದಕೆಮುನ್ನ ||೨೪||
ನರವರೂಪನುಕಂಡೊಡೆಹೇಸಿಮುಟ್ಟುವ | ಸುರರೆಲ್ಲವಗರ್ಭಣಸಾದ ||
ಸುರಪತಿಯಾಪನ್ನಗಪತಿಯಕ್ಷೇ | ಶ್ವರರೆಲ್ಲರಕೂಡಿಕೊಂಡು ||೨೫||
ಅರದಿಂಗಳುಪರಿಯಂತರನ್ನದಮಳೆ | ಗರೆಯಿಸಿಶಿವದೇವಿಯನು ||
ನೆರೆಪೂಜಿಸಿಗರ್ಭಶೋಧನೆಯನುಮಾಡಿ | ಯರಿಕೆಯತನ್ನಸತಿಯರ ||೨೬||

ಆನಾರಿಗೆ ತೋಳ್ಕಿರಾಗೆಂದುನಿಯಮಿಸ | ಲಾನೇಮಿಶ್ವರನುದಿಸೆ ||
ಆನಂದದಿಮೇರುಗಿರಿಗೆಯ್ದುಪಾಲ್ಗಡ | ಲಾನೀರಸಭಿಷೇಕಮಾಡಿ ||೨೭||

ಬಳಿಕಮರರನಾತ್ತಗೆಭೃತ್ಯರವಮಾಡಿ | ಬಲರಿಪುವೆಸಗಿದತೆರನ ||
ಇಳೆಯರಿಯದೆಯೆಸುತಿಂತೆಂದಳಾನಿ | ಷ್ಕಳಸದೊಳಿನಕಾಲನೀರ ||೨೮||

ಮಮತೆಯಿಂದಮಜ್ಜನವಮಾಡುವಸುರ | ಸಮಿತಿಯೆಡದಕಾಲ್ವೆರಲ ||
ಅಮರಿದೆಗಾದೊಡೆಸೀನೇಲೋಕಕ್ಕೆ | ರಮಣಿಯೆನಲುಮಿಗೆನಾಚ್ಚಿ ||೨೯||

ಸತ್ಯಭಾಮೆಪೊಗಳಿತ್ತರುಗ್ಮಿಣಿದೇವಿ | ಯತ್ಯಂತಚಿತ್ತಶುದ್ಧಿಯೊಳು ||
ನಿತ್ಯಸುಖಮನುಜಯಸಿಯಾವಸ್ತ್ರವ | ಭೃತ್ಯಭಾವದಿಧರಿಸಿದಳು ||೩೦||

ಬಳಿಕಬಲಾಚ್ಯುತರಾನೇಮಿನಾಥನ | ಸಲಘುತರಪ್ರೀತಿಯಿಂದ ||
ಲಲಿತಾಂಬರಭೂಷಣದಿಂಪೂಜಿಸಿ | ಪೊಳಲನೆಯ್ದಿದರುಮತ್ತಿತ್ತ ||೩೧||

ಆಸತ್ಯಭಾಮೆಯಗರ್ವದನುಡಿಗೇಳಿ | ಭಾಸುರಬೋಧಸಂಯುತಗೆ ||
ಓಸರಿಸದೆಮುನಿಸೊಗೆದುದುನೀರೊಳು | ಕೇಸುರಿಹುಟ್ಟಿದಂದದೊಳು ||೩೨||

ಆಮುನಿಸಿಂಬನನುಪೂರಮಟ್ಟರ | ಗಾಮರಸಂತತಿತನ್ನ ||
ಪ್ರೇಮದಿನೊಲ್ಲಿಸಿಬಲಲಾಸೆಯನೇರಿ | ಯಾಮಹಿಮನುಪುರಕೆಯ್ದಿ ||೩೩||

ಆಶಸ್ತ್ರಶವನವಹೊಕ್ಕುಬಳಿಕ್ಕೇರಿ | ಯಾಶಯ್ಯೆಯನಗುರ್ವಿಸುವ ||
ಆಶಾರ್ಙ್ಗಯನಸಹಗ್ಯಯಿಂದೇರಿಸಿ | ಯಾಶಂಖನನಕೈಕೊಂಡು ||೩೪||

ಎಡದ ಕಡೆಯನಾನಾಪುಟದುಸುರಂ | ಪೊಡವಿನಡುಗುವಂದದೊಳು ||
ಪಿಡಿದೂದಲಾಶಾಗಜವದರಿಡುವ್ರಮೋ | ಗಡೆಗಾಕಾಶಪಾರಿದುದು ||೩೫||

ಆರವನನುಕೇಳಿಮುರಿದುಕಂಬವಮದ | ವಾರಣಪಾವಾಜಿಗಳು ||
ಆ ರಾಜಧಾನಿಯಕೇರಿಕೇರಿಗಳೊಳು | ಚಾರಿಪರಿಪ್ರತಿರಲಾಗ ||೩೬||

ಎಲ್ಲಿಂದದೀಯದ್ಭುತವೆಂದುಬಲದೇವ | ನಿಲ್ಲದೆಗದೆಯಧರಿಸಿದ ||
ಫುಲ್ಲನಾಭನಸಿಯನುರ್ಝುಳಪಿಸಿದನು | ಬಲ್ಲಿತಪ್ಪಾಪಸರಗೇಳಿ ||೩೭||

ಅನಿತರೊಳಾತ್ರಿಭುವನಗುರುವನಿಮಿಷ | ಜನಸಂತತಿಯೊಡಗೂಡಿ ||
ಅನುರಾಗದಿಂದಾನೆಯನೇರಿತನ್ನರ | ಮನೆಗೆಪೋಗಲುಬಳಿಕಿತ್ತ ||೩೮||

ಆದಿವ್ಯರತ್ನಂಗಳಕಾಯ್ದಿರ್ಪಮ | ಹಾದೇವತೆಗಳೆಯ್ತಂದು ||
ಆದಾಮೋದರನೊಳಗುಸುರಿದುವಂ | ದಾದಾವಾರ್ತೆಯೆಲ್ಲವನು ||೩೯||

ಇಂತೆಂಬನುಡಿಯನುಕೇಳಿಮತ್ತಾಪ್ರೈ | ತ್ಯಾಂತಕನತಿಚಿಂತೆಯನು ||
ಅಂತರಿಸದೆತಾಳಿಬಳಿಕತನ್ನೊಳುತಾ | ನಿಂತೆಂದೆಣಿಸಿದನಾಗ ||೪೦||

ಸುರನರಫಣಿಲೋಕವನೆರಗಿಸಿಕೊಂಬ | ವರಭುಜಬಲಯುತನಿವನು ||
ಇರದೆನ್ನರಸುತನವನೆಳೆದೊಯ್ವೊಡೆ | ಭರದಿಂಬಾರಪರುಂಟೇ ||೪೧||

ಎಂದುಚಿಂತಿಸಿಬಲಭದ್ರಸಚರಿಸಿಯಿಂ | ತೆಂದನುವನಜೋದರನು ||
ಸಂದಸಾಹಸಿಯಿಾನೇಮಿಕುಮಾರಕ | ನಿಂದೆಮ್ಮೊಡೆತನಮಿಲ್ಲ ||೪೨||

ಇದಕಿನ್ನಾವುದುತೆರನೆನಲಿಂತೆಂದ | ನುದಿತಸದ್ಗುಣಿಬಲದೇವ ||
ಚದುರರಿಂತಿದನುಪರಾಂಬರಿಸುವರೇ | ಸದಮಲಬೋಧಸಂಯುತರು ||೪೩||

ಅಡಸಿದವೋಹೋದ್ರೇಕದಗಾಜ್ಯದ | ತೊಡರೊಳುಸಿಲುಕುವರಲ್ಲ ||
ಕಡೆಗಾಣಿಸದಪದಕಲ್ಲದೆಯೆಂಬಾ | ನುಡಿಗೆಮುಕುಂದನಿಂತೆಂದ ||೪೪||

ಹಿಂದಣತೀರ್ಥಾಧೀಶರೆಲ್ಲರುಮನ | ಸಂದುಚಕ್ರೇಶಸಂಪದಕೆ ||
ಬಂದಬಳಿಕಬಹುಸುಖಜೀವಪದಗಂಡ | ರೆಂದುಸುರುವುದನರಿಯಿರೆ ||೪೫||

ಎನಲೇಕಕುಂಡಲನಿಂತುನುಡಿದನಾ | ಅನಘನುಪಾಯಾಂತರದಿ ||
ಮನದೊಳುವೈರಾಗ್ಯಮಪ್ಪುದನೆಸಗುವ | ವೆನೆಹರಿಯದನೆಕೈಕೊಂಡು ||೪೬||

ಬಳಿಕಕೆಲವುದಿನಕಳೆಯಲುನೃಪಕುಲ | ತಿಲಕನಂಭೋಧಿವಿಜಯಗೆ ||
ನಳಿನನಾಭನಿಂತೆಂದುನುಡಿದನಾ | ಕಲಿಸವಿಜಯನೇಮಿಜಿನಗೆ ||೪೭||

ನವಯೌವನೋದಯವಾದುದಂತದರಿಂ | ಸುವಿಧಾನದಿಂಮದುವೆಯನು ||
ತವಕದಿಮಾಡಬೇಕೆನಲಾಬಿನ್ನಪ | ಕವನೀಶ್ವರನೊಡಂಬಡಲು ||೪೮||

ಬಳಿಕತಾವೆಲ್ಲರುಬಂದುನೇಮೀಶನ | ತಳಿರಡಿದಳಕಿರದೆರಗಿ ||
ವಿಲಸಿತವಪ್ಪಮಂಗಲಕಾರ್ಯಕೆಮನ | ವೆಳಸುವಂದದಿನೊಡಂಬಡಿಸಿ ||೪೯||

ಉಗ್ರಕುಲಾಂಬರಭಾಸ್ಕರನವನೀ | ಶಾಗ್ರಣಿಯೆನಿಸಿರಂಜಿಸುವ ||
ಉಗ್ರಸೇನನಸುತೆರಾಜೀವಮತಿಯೆಂ | ಬಗ್ರಸುದತಿಮೊದಲಾದ ||೫೦||

ಹೊಸಹರೆಯದಸತ್ಕಲಾಪರಿಣತೆಯರ | ಸಸಮಾನರೂಪವತಿಯರ ||
ವಸುಧಾಧೀಶನಂದನೆಯರ್ಕೈಸೂರ್ವರ | ಬಿಸಜಾಕ್ಷನುತರಿಸಿದನು ||೫೧||

ತದನಂತರದೊಳುಮನಸಿಜಸ್ನಪನಸಂ | ಮದದಾಸ್ಥಾನಮಂಟಪವೊ ||
ಇದುತಾನೆಂಬಂದದಿರಚಿಸಿದರಾ | ಮದುವೆಯಮಣಿಮಂದಿರವನು ||೫೨||

**ತಳಿಗುಡಿಪಸುಳಿದಳಿರತೋರಣಪೊಸ | ಚಳಿಯುದನೆಲವೇಲುಕಟ್ಟು ||**
**ತೊಳಪಮುತ್ತಿನರಂಗವಲಿಜಾಗಗಳಜಂ | ಗುಳಿಯೊಪ್ಪಿತಾಭವನದೊಳು ||೪೩||**

ಇಂತುಮಂಟಪವರಚನೆಯುಮಾಡಿಸಿತದ | ನಂತರದೊಳುಮುನ್ನತಂದ ||
ಕಾಂತೆಯರನುಷೋಡಶಾಭರಣಗಳಿಂದ | ಸಂತಸದಿಂಶೃಂಗರಿಸಲು ||೪೪||

ಮನಸಿಜಮಂಡಲೇಶ್ವರಸಗ್ರಪಲ್ಲಭೆ | ಯನುರಾಗದಿಂಬಹುರೂಪ ||
ಅನುಕರಿಸಿದಳೋಯೆಂಬಂದದೊಳಾ | ವನಿತಾಮಣಿಗಳೊಪ್ಪಿದರು ||೪೫||

ಮತ್ತಾನೇಮೀಶಗೆದೇವಸತಿಯರು | ಹೊತ್ತುತಂದಾತೀರ್ಥಜಲವ ||
ಚಿತ್ತರದಿಂದಮಜ್ಜನವಮಾಡಿಸಿಬಳಿ | ಕುತ್ತಮಭೂಷಣವಿಡಲು ||೪೬||

ಎನಿತೆನಿತುಂಟುಲೋಕದೊಳುಸುಲಕ್ಷಣ | ವೆನಿತೆನಿತುಂಟುಸೌಂದರ್ಯ ||
ಅನಿತೆಲ್ಲವುಕೂಡಿಹುರಿಯಾದಂದದಿ | ಅನಘನಮೂರ್ತಿಯೊಪ್ಪಿದುದು ||೪೭||

ಬೆರಕೆವಣ್ಣದಪೂವಿನಲತೆಕೃಷ್ಣಾ | ಗರುಭೂಜಮುಪಡರ್ದಂತೆ ||
ಹರಿನೀಲವರ್ಣದನೇಮೀಶಗೆಪಲ | ಪರಲಭೂಷಣಗಳೊಪ್ಪಿದುವು ||೪೮||

ಈರೀತಿಯಿಂಶೃಂಗೆಯ್ದಾನೇಮಿಕು | ಮಾರನನರ್ವಸಚಿವರು ||
ವಾರಣಮಸ್ತಕವೇರಿಸಲಾದೇಪ | ನಾರಿಯರಿಕ್ಕೆಚಾಮರವ ||೪೯||

ಚೆನ್ನಮುತ್ತಿನಲಂಬಣದಿಂದೊಪ್ಪುವ | ರನ್ನದಸತ್ತಿಗೆವಿಡಿದು ||
ಪನ್ನಗಸತಿಯರಿಕ್ಕೆಲದೊಳಾನೆಯನೇರಿ | ಯುನ್ನತಬೋಧಗೆತ್ತಿದರು ||೫೦||

ಕಿನ್ನರಕಾಂತೆಯರೊಸಗೆವಾಡನುಪಾಡೆ | ರನ್ನಗನ್ನಡಿಯರಂಜಿಸುವ ||
ಹೊನ್ನಕಳಶಗಳಹಿಡಿದಾಯೆಡ್ದೆಸೆ | ಗನ್ನೆಯರೊಸೆದೆಯ್ತರಲು ||೫೧||

ಈಪರಿಯಿಂಬರುತಿರೆಕಟ್ಟಿದಿರೊಳ | ಗಾಪಶುವಾತ್ರಷೆಯಿಂದ ||
ಧೂಪಿಸಿಗೋಳಿಡುತಾತಳಿಯೊಳಗೆನಾ | ನಾಪರಿಮರುಗುತವಿರಲು ||೫೨||

**ಅವನುಕಂಡಾಕರುಣಾಬ್ಧಿಚಂದ್ರಮನೇಮಿ | ಕುವರನಾನೆಯನಲ್ಲಿನಿಲಿಸಿ ||**
**ಅವಿವೇಕದಿಂದೀಯೆಡೆಯೊಳಗೀಮೃಗ | ನಿವಹವನಿರಿಸಿದರಾರು ||೫೩||**

**ಎಲ್ಲಾಮೃಗಸಮುದಾಯವಕಾದಿರ್ದ | ವನಚರರಿಂತಾಡಿದರು ||**
**ಜನಸುತನಿಮ್ಮಡಿಗಳಮದುವೆಗೆಬಂದ | ಜನದಭೋಜನಕೆಂದುನಾವು ||೫೪||**

**ತವೆವೆನುತಮೊತ್ತಮೊದಲುಶಮಗೆಗೋ | ವಿಂದನುಕಲಿಸಿದಂದದೊಳು ||**
**ಸಂದೇಹವಿಲ್ಲದೆಪೇಳಲುಕಾರುಣ್ಯ | ದಿಂದಾನೇಮಿಕುಮಾರ ||೫೫||**

ಇನಿತುಮೃಗವನೆಲ್ಲವನುಹತಿಸಿನಾ | ವನುಸಯದಿಂಮದುವೆಯನು ||
ಅನುಕರಿಸುವುದನುವಾತಿಯಾತ್ಪ್ರಥಮಚುಂ | ಬನದೊಳುಪಲ್ಮುರಿದಂತೆ ||೬೬||

ಅನ್ಯಾಯದಿಂಪಸುಗಳಕೊಲ್ಲಿಸಿಮು | ತ್ತೈಸ್ವಲ್ಪಸುಖಕಾಟಿಸುವ ||
ಕನ್ಯೆಯದೊಳುಕಲ್ಯಾಣವಾಗುವಬಗೆ | ಚೆನ್ನಾಯ್ತೆಂದೆಣಿಸಿದನು ||೬೭||

ಇಂತುಚಿಂತಿಸಿನಿರ್ವಾಣಾಂಗನೆಯೊಳು | ಸಂತಸದಿಂಮದುವೆಯನು ||
ಅಂತರವಿಲ್ಲದಾಗುವೆನೆಂದುನಿರ್ವೇಗ | ವಂತಾಳಿಸಿಂದಿರಲಾಗ ||೬೮||

ಪೊಡೆಯಲರನುಬಂದೀಮೃಗವನುಪೊರ | ಮಡಿಸುವುದುತ್ತಮಲಗ್ನ ||
ಅಡಸಿತುದೇವಬಿಜಯಗೆಯ್ವುದೆನಲಾ | ನುಡಿಗೆನೇಮೀಶನಿಂತೆಂದ ||೬೯||

ಈಪರಿಣಯನನೇಕಪಾಪವಮಾಳ್ಪು | ದಾಪೊಳ್ತಿನಸುಖವಿವಾಹ ||
ಆಪರಮಶ್ರೀಯೊಳುಪರಿಣಯನದ | ರೂಪನೆಧರಿಸುವೆನಿರದೆ ||೭೦||

ಹಿಂಸಾನುರೂಪಕಕೆಕಾರಣವಾದೀ | ಸಂಸಾರದಿಂಪೊರಮಡುವೆ ||
ಸಂಶಯವಿಲ್ಲದೆನುತ್ತಕಲ್ಮಷವ | ಧ್ವಂಸನಲ್ಲಿಂಪಿಂತಕೆಯ್ದು ||೭೧||

ಅಕ್ಕಟಕ್ಕಟಸಂಸಾರಶರಧಿಯೊಳು | ಹೊಕ್ಕುಚೊಕ್ಕಳಿಕೆಯಸುಖವ ||
ಒಕ್ಕಲಿಕ್ಕುತ್ತಿರ್ದೆನೆನುತಚಿಂತಿಸಿಮನ | ವಿಕ್ಕಿಮನೆಗೆನಡೆತರಲು ||೭೨||

ಆವಾರತೆಗೇಳಿಯಂಬುಧಿವಿಜಯನು | ಹೀವರಬೆಕ್ಕಸಬಡಲು ||
ತೀವಿದಮೂರ್ಛೆಯಿಂದಾಪೆಣ್ಮಣಿಶಿವ | ದೇವಿಯೊರಗೆಭೂತಳಕೆ ||೭೩||

ನೇಮಿಕುಮಾರನಲ್ಲಿಗೆಬಂದಾಪಿತೃ | ವಾಮಾತೃಗಳನೆಚ್ಚರಿಸಿ ||
ಪ್ರೇಮದಿತನ್ನಮುನ್ನಿನಭವಬದ್ಧದು | ದ್ದಾಮತೆಯನುಪೇಳಿದನು ||೭೪||

ಮಂಜಿನಸಿರಿಮಹದೈಶ್ವರ್ಯವುಘನ | ರಂಜನೆಸಕಲಬಂಧುಗಳು ||
ಸಂಜೆಯಸೊಬಗುಜವ್ವನವಿಂತಿವಕಿನಿ | ಸಂಜದೆಸುಗ್ಗುವನೆಗ್ಗ ||೭೫||

ಎಂದುಪಲವುಪರಿಯಾದಯುಕ್ತ್ಯಾಯುಕ್ತಿ | ಯಿಂದನುವರನೊಡಂಬಡಿಸಿ ||
ಸಂದೆಗವಿಲ್ಲದೆಜಾತರೂಪವತಾಳ್ವೆ | ನೆಂದಿರ್ಪಸಮಯದೊಳು ||೭೬||

ಪರಮನಪರಮವೈರಾಗ್ಯಮನರಿದಾ | ಸುರರುಸುರಿದರಲರ್ಗಳೆಯ ||
ಹರುಷದಿಲೌಕಾಂತಿಕದೇವರೆಯ್ತಂದು | ಚರಣಕಮಲಕೆರಗಿದರು ||೭೭||

ಈತೆರದಿಂವಿನಮಿತರಾಗಿಯೆಲೆದೇವ | ಪ್ರೀತಿಯಿಂಧರ್ಮಾಮೃತವ ||
ಭೂತಳದೊಳುಕರೆವುದ್ಯೋಗಮನೀ | ನಾತುರದಿಂದೆಸೆಗುವುದು ||೭೮||

ಎನುತಬಿನ್ನೈಸಿಪೋಗಲುಬ್ರಹ್ಮಋಷಿಯರಂ | ದನಿತರೊಳಾಸಗ್ಗದರಸು ||
ಅನುರಾಗದಿಂನಾಲ್ಕುತೆರದಮತರುಗೂಡಿ | ಯನಘನಸನ್ನಿಧಿಗೆಯ್ದಿ ||೭೯||

ಚರಣಕೆರಗಿರತ್ನಪೀಠದಮೇಲಾ | ಪರಮನನಿರದೆಕುಳ್ಳಿರಿಸಿ ||
ಶರಧಿಯಹಾಲಸುವರ್ಣಕುಂಭದಿಂದ | ಹರುಷದಿನಭಿಷೇಕವಮಾಡಿ ||೮೦||

ಪರಿರಂಜಿಪಪಲವಣ್ಣದದಿವ್ಯಾಂ | ಬರದಿವ್ಯರತ್ನಭೂಷಣದಿ ||
ಪಿರಿದಾಗಿಪೂಜಿಸಿಹಸವಮಾಡಿದನಾ | ಪರಿನಿಷ್ಕ್ರಮಣಮಂಗಲವ ||೮೧||

ತದನಂತರದೊಳಗಾತ್ರಿಜಗದ್ಗುರು | ವುದಧಿವಿಜಯಶಿವದೇವಿ ||
ಮೊದಲಾದವರಶುಭನಯೋಕ್ತಿಗಳಿಂದ | ಪದುಳದಿಬೀಳ್ಕೊಂಡು... ||೮೨||

ಸುರುಚಿರನಿರ್ವಾಣದುರ್ಗಸೋಪಾನಮ | ನಿರದೇರುವವಮಾಳ್ಕೆಯೊಳು ||
ಸುರಪತಿಕೈಗುಡೆಸುರತುಷೋಷೋಷ ಯನೆ | ವರಮಣಿಶಿಬಿಕೆಯನೇರಿ ||೮೩||

ಧರೆಯೊಳುಭೂಮಿಪರೇಳಡಿವಿದ್ಯಾ | ಧರರೇಳಡಿಯಲ್ಲಿಂದ ||
ಸುರರೇಳಡಿವರಮಾಶಿಬಿಕೆಯಪೊತ್ತು | ಪರಮೋತ್ಸಾಹದಿನಡೆಯೆ ||೮೪||

ಕಿನ್ನರಕಿಂಪುರುಷರುಪಾಡಲಾದೇವ | ಕನ್ನೆಯರೊಸೆದುನರ್ತಿಸಲು ||
ಪನ್ನಗರೊಲಿದುಮುದ್ದಳೆಗುಟ್ಟಲಾಜಿನ | ಗುನ್ನತಿಕೆಯಹರುಷದೊಳು ||೮೫||

ಈವಿಧದಿಂದನಡೆದುಬಂದಾದ್ವಾ | ರಾವತಿಯಾಪೊರವೊಳಲ ||
ಆವುದ್ಯಾನದಮಧ್ಯಪ್ರದೇಶದೊ | ಳಾವಾಸವಾರ್ಚಿತನಿಲಲು ||೮೬||

ಕುಸುಮಾವಲಿಯಸೊಸಲುಶಚಿಯಮರಿಯ | ರೆಸೆವಮುತ್ತಿನರಂಗವಲಿಯ ||
ಹಸುಗೆಯ್ಯಲಾದೇವನಸಮುದರುರತ್ನ | ವಸೆಯೊಳಗಿಳುಹಿದರಾಗ ||೮೭||

ನೆರೆಸಮತೆಯಿನಾಹಸೆಯೊಳುಕುಳ್ಳಿರ್ದು | ತೊರೆದುಯುಗಲಪರಿಗ್ರಹವ ||
ಮಿರುಗುವಾಭರಣವಕಳೆದಸುಬಾಳಿಂ | ದೊರೆಯಸುರ್ಜುವಮಾಳ್ಕೆಯೊಳು ||೮೮||

ನಿರ್ಮಲನಾಪೂರ್ವಮುಖಮಾಗಿಕುಳ್ಳಿರ್ದು | ಕರ್ಮವಲ್ಲರಿಯಬೇರುಗಳ ||
ನಿರ್ಮೂಲನಮಾಡುವಂತೆಕುಂತಳಗಳ | ನೋರ್ವೊದಲೊಳುಕಿಳ್ತನಾಗ ||೮೯||

ಆಕುಂತಳವರನ್ನದಪಡಲಿಗೆಯೊಳು | ನಾಕಾಧಿಪನಾಂತುಕೊಂಡು ||
ಲೋಕೇಶನಕರ್ಮವನುಬಿಡುವಂತೆರ | ತ್ನಾಕರದೊಳುಬಿಟ್ಟನಾಗ ||೯೦||

ಬಳಿಕಹಲವುತೆರದೊಳುತುತಿಗೆಯ್ದಾ | ಬಲವೈರಿಯಾಸಗ್ಗಿಗರ ||
ಬಲಗೂಡಿಬಲಗೊಂಡೆರಗಿಬೀಳ್ಕೊಂಡಾ | ಗಳೆಸಗ್ಗಕೆಯ್ದಿದನಿತ್ತ ||೯೧||

ರಥನೇಮಿಮೊದಲಾದಸಾಸಿರ್ವರು | ಪೃಥುವೀರ್ಯರಾದಿಸಂಯುತರು ||
ಪೃಥಿವೀಪಾಲಕರುಭಯಪರಿಗ್ರಹವನು | ಪೃಥಕುಮಾಡಿದೀಕ್ಷೆಗೊಳಲು ||೯೨||

ಮೊದಲುಮದುವೆಗೆಂದುಬಂದಧಾತ್ರೀಮತಿ | ಮೊದಲಾದನೃಪನಂದನೆಯರು ||
ಚದುರೆಯರರುಸಾಸಿರಸಖಿಯರುಗೂಡಿ | ಪಡೆದುದೀಕ್ಷೆಯಧರಿಸಿದರು ||೯೩||

ಶ್ರಾವಣಶುದ್ಧಚತುರ್ಥಿಯದಿನದೊಳು | ತೀವಿದಚಿತ್ರತಾರೆಯೊಳು ||
ಆವುದಯದೊಳುದೀಕ್ಷೆಯಧರಿಸಿದನಾ | ದೇವರದೇವನೇಮಿನಾಥ ||೯೪||

ಸದಮಲತರಸಪ್ತರ್ಧಿಸಮೇತನು | ಉದಿತಮನಃಪರ್ಯಾಯ ||
ವಿದಿತಬೋಧನುಷಷ್ಠದಿವಸೋಪವಾಸಮ | ಪದುಳದಿಸಿದ್ಧಪಾರಣೆಗೆ ||೯೫||

ನೇಮಿಮುನೀಶನುಗಿರಿನಗರಕೆಬರೆ | ಪ್ರೇಮದಿವರದತ್ತನೆಂಬ ||
ಭೂಮೀಶ್ವರನಿದಿರ್ಗೊಂಡುನಿಲಿಸಿದನು | ದ್ದಾಮಮಂಗಲವಿಧಿಯಿಂದ ||೯೬||

ಭವನಕೆತಂದುಪ್ರತಿಗ್ರಹಮೊದಲಾದ | ನವವಿಧಪುಣ್ಯಸಮೇತ ||
ಸುವಿದಿತಸಪ್ತಸದ್ಗುಣಸಂಪನ್ನನಂ | ದವರಳಭಕ್ತಿಯೊಳೀಯೆ ||೯೭||

ನಿರವದ್ಯಮಪ್ಪಮೃತಾಹಾರಮನಾ | ದರದಿಂದಕಾಯಸ್ಥಿತಿಯ ||
ಇರದೆನಿರ್ವರ್ತಿಸಿಬಳಿಕಾನೇಮಿ | ಶ್ವರನಕ್ಷಯದಾನಮೆಸಲು ||೯೮||

ಸುರಿದುದುಹೊಸಹೊನ್ನಮಳೆಹೂವಿನಸರಿ | ಸುರದುಂದುಭಿಮೊಳಗಿದುದು ||
ಸುರಭಿಸಮೀರನೆಸಗಿತಾಗಸದೊಳು | ಸುರಸಂತತಿಪೊಗಳಿದುದು ||೯೯||

ಬಳಿಕಲ್ಲಿಂಬಂದಾವೂರ್ಜಯಂತಾ | ಚಲದನಿರ್ಜಂತುಕಮಪ್ಪ ||
ಸ್ಥಳದೊಳುತೊಳತೊಳಗುವಚಂದ್ರಕಾಂತೋ| ಪಲದಮೇಗಡೆಗೆಯ್ತಂದು ||೧೦೦||

ಈಯೆಡೆಯಿಂನಾಲ್ಕುಮಾಸಕ್ಕಲ್ಲದೆ | ವೈಯಾವದಿಂದೇಳೆನೆಂದು ||
ಕಾಯೋತ್ಸರ್ಗದೊಳಗೆಕ್ಕೈಯನಿಕ್ಕಿನಿಂ | ದಾಯತಿರಾಯನೊಪ್ಪಿದನು ||೧೦೧||

ಹರಿಕರಿಪರ್ದುಪನ್ನಗಹೆಬ್ಬುಲಿಹುಲ್ಲೆ | ಶರಭಭೇರುಂಡಪಕ್ಷಿಗಳು ||
ಪರಮನಪರಮೋಪಶಾಂತತೆಯನುನೋಡಿ | ನಿರುತದಿನಿಂದಿರುತಿಹವು |೧೦೨||

ಅಗಣಿತಮುಹಿಮನಿಂದಿರಲತ್ತಲಾಗಿರಿ | ನಗರಾಧಿಪತಿವರದತ್ತ ||
ಬಗೆಯೊಳೊಗೆದವೈರಾಗ್ಯದಿತೊರೆದಾ | ಯುಗಲಪರಿಗ್ರಹಗಳನು ||೧೦೩||

ಅಂಗಜಮರ್ದನನಲ್ಲಿಗೆಬಂದುಮ | ನಂಗೊಳಿಪಾದೀಕ್ಷೆಯನು ||
ಅಂಗೀಕರಿಸಿತಪಂಗೆಯ್ಯುತಿರ್ದನು | ಹಿಂಗದಮನದುಪಶಮದಿ ||೧೦೪||

ಮತ್ತಾನೇಮೀಶಚ್ಛದ್ಮಸ್ಥಕಾಲಮ್ಮೈ | ವತ್ತಾರುವಾಸರಕಳೆಯೆ ||
ಒತ್ತಿನೊಳಿರ್ದೊಂದುಬಿದಿರಮೂಲದೊಳೇಕ | ಚಿತ್ತದಿದಿಟ್ಟೈಯುಸಿರಿಸಿ ||೧೦೫||

ಸಾನುಭಾವದಿನಿಂದುತೀವ್ರಮಪ್ಪಘವೆಂಬ | ಕಾನನವೆಲ್ಲವನಿರದೆ ||
ಧ್ಯಾನಪಾವಕನಿಂದಸುಡಲುಕೇವಲಬೋಧ | ಪಾಸದೆಸಾಜನಿಯಿಸಿತು ||೧೦೬||

ಜನಿತರೊಳಾಗಸದಿಂಪೂಸಸಪನಿ | ಪನಿತುದುದೇವದುಂದುಭಿಯು ||
ಧ್ವನಿಯುಣ್ಮಿತುದೇವೇಂದ್ರನಸಿಹ್ಮಾ | ಸನವೋವದೆಕಂಪಿಸಿದುದು ||೧೦೭||

ಆದನುಕಂಡಾಸಗ್ಗದರಸುಜಿನೇಶಗೆ | ಸದಮಲಸಮವಸರಣವ ||
ಪದಪಿಂಸಮೆಯೆಂದುವೈಶ್ರವಣಸಸುಸ | ಪ್ಮದದಿಂಪೇಳ್ಕೊಟ್ಟುಬಳಿಕ ||೧೦೮||

ದನುಜದಿವಿಜಯಕ್ಷಪನ್ನಗರೆಲ್ಲರು | ಮನದೆಗೊಂಡುತಂತಮ್ಮ ||
ಘನತರಮಪ್ಪನಾನಾವಿಧದಾವಾ | ಹನವೇರಿತಸ್ಸೊಡನೆಯ್ದೆ ||೧೦೯||

ಧರಣೀತಳದಿಂದಂಬರಕೈಸಾ | ಸಿರಬಿಲ್ಲಂತರವೊಗೆದ ||
ಅರುಹಗೆತನ್ನಬೆಸದಿಸುಸ್ನಪಿತ್ತೇ | ಶ್ವರವಿರಚಿಸೆರಂಜಿಸುವ ||೧೧೦||

ಅನಘನಸಪವರ್ಗಲಕ್ಷ್ಮಿಯುವರಾಂಗಳ್ಳ | ಕಸುಗೆಯ್ದಮಣಿಮಂಟಪವೊ ||
ಎನೆಕಡುರಂಜಿಪಸಮವಸರಣಕಾ | ಅನಿಮಿಷಪತಿಬಂದನಾಗ ||೧೧೧||

ಇಂತುಬಂದದರಮಧ್ಯದಗಂಧಕುಟಿಯುಸು | ಸಂತಸದಿಂದೊಳಹೊಕ್ಕು ||
ಅಂತರಿಸದೆಮೂರುಸೂಳ್ವರಬಲವಂದು | ಕಂತುಮದಾಪಹರಣಗೆ ||೧೧೨||

ಅಷ್ಟಮಹಾಪ್ರಾತಿಹಾರ್ಯಗನಂತಚ | ತುಷ್ಟಯುಪಿನುತಾತ್ಮಸಿಗೆ ||
ದುಷ್ಟದುರಿತದೂರೀಕೃತನರ್ಹಗೆ | ಸಾಷ್ಟಾಂಗವಿನಮಿತನಾಗಿ ||೧೧೩||

ಜಲಗಂಧಾಕ್ಷತೆನವ್ಯಕುಸುಮಚರು | ಜಲಜಲಿಸುವದೀಪಧೂಪ ||
ಫಲದಿಂದರ್ಚಿಸಿರತ್ನಪಾತ್ರೆಯೊಳುಕ | ಣ್ಗೊಳಿಪಂತರ್ಘ್ಯವನೆತ್ತಿ ||೧೧೪||

ಮತ್ತೆಪಲವುದಿವ್ಯಸ್ತೋತ್ರಮನೇಕ | ಚಿತ್ತದಿಂದಲಿತುತಿಗೆಯ್ದು ||
ಉತ್ತಮಮಪ್ಪಚಿತಾಸನದೊಳುದೇ | ವೋತ್ತಂಸನುಕುಳ್ಳಿರಲು ||೧೧೫||

ಗರುಡಗಂಧರ್ವರಾಕ್ಷಸಯಕ್ಷವಿದ್ಯಾ | ಧರಕಿನ್ನರಕಿಂಪುರುಷ ||
ಉರಗಾಧೀಶರೆಲ್ಲರುನಿಜಬಲಗೂಡಿ | ಯುರುಭಕ್ತಿಯೊಳೋಲೈಸೆ ||೧೧೬||

ಹರಿವಂಶದರಸುಮಕ್ಕಳನೆಲ್ಲರಕೂಡಿ | ನೆರೆದಖೇಚರಭೂಚರರು ||
ಬೆರಸಿಬಲಾಚ್ಯುತರಾಸಮವಸೃತಿ | ಗುರುಮುದದಿಂದೆಯ್ತಂದು ||೧೧೭||

ಮಾನಿತಮಾದಮಾನಸ್ತಂಭವಕಂಡು | ನಾನಾರಾಜಚಿಹ್ನವನು ||
ಆನದಿರಿಸಿಮುಂದಕೆನಡೆದಪ್ರತಿ | ಮಾನಲಲಿತಭಕ್ತಿಯಿಂದ ||೧೧೪||

ಭಾಸುರತರಸೋಪಾನಮನೊಸೆದೇರಿ | ಯಾಸಮವಸೃತಿಗೆಯ್ದಿ ||
ಓಸರಿಸದೆಗಂಧಕುಟಿಯೊಳಗಡೆಹೊಕ್ಕು | ಆಸರ್ವೇಶನಕಂಡು ||೧೧೯||

ಮೂಮೆತಿರಿದುಸಾಷ್ಟಾಂಗನಮಿತರಾಗಿ | ಯಾಮಾನವಕೋಷ್ಟದೊಳು ||
ಪ್ರೇಮದಿಂದಕೈಮುಗಿದುಕುಳ್ಳಿರ್ದರ್ಮ | ತಾತ್ಮಮಹಿಮನರೂಪವನು ||೧೨೦||

ಬಳಿಕೆವೆವ್ವೊಯ್ಯದೆತೆರೆದತೆರಪುಗಣ್ಣ | ಬಳಲುಪಂದದಿನೆರೆನೋಡಿ ||
ಅಲಘುತರಪ್ರಿಯದಿಂಕೆಲವೊತ್ತಿದ್ದರ್ | ಪೊಳಲಸೆಯ್ದಿದರುಮತ್ತಿತ್ತ ||೧೨೧||

ವರದತ್ತಮುನಿಪತಿಸಮವಸರಣಕೆಯ್ದಿ | ಯುರುಹಗೆರಗಿದಾಕ್ಷಣದೊಳು ||
ಸುರುಚಿರಮಪ್ಪಸುಜ್ಞಾನಮೊಗೆದುಗಣ | ಧರಸಂಪದವನೆಯ್ದಿದನು ||೧೨೨||

ಬಳಿಕಬಲಾರಿಕೈಮುಗಿದೆಂದನೆಲೆದೇವ | ಇಳೆಯೊಳುಧರ್ಮಾಮೃತದ ||
ಮಳೆಗರೆಯಿಸಬೇಕೆನಲೊಡಬಟ್ಟಾ | ಗಳೆಯಲ್ಲಿಂಮುಂದಕೆಯ್ದಿ ||೧೨೩||

ಕಡುಪಂಜಿಪಧರ್ಮಚಕ್ರಸಮುಸ್ನಿತ | ನಡೆದುನೆಲಕೆಸುಭಿಕ್ಷವನು ||
ಹಡೆಯಿಸುತಾಯರ್ಾಖಂಡದಜನಪದ | ಕಡರಿಸಿದನುಧರ್ಮವನು ||೧೨೪||

ಭವ್ಯಜನಾಂಬುಜವನಭಾನುಬಲರಿಪು | ಸೇವ್ಯನಪಾರಮಹಿಮನು ||
ದಿವ್ಯವಚನಸಮುಪೇತನೆನಿಸಿದನಾ | ಅವ್ಯಯಸುಖದಾಯಕನು ||೧೨೫||

ಇದುಜಿನಪದಸರಸಿಜಮದವಧುಕರ | ಚದುರಮಂಗರಸರಚಿಸಿದ |
ಮದನಾರಿನೇಮಿಜಿನೇಶಸಂಗತಿಯೊಳ | ಗಿದುದ್ವಾತ್ರಿಂಶದಾಶ್ವಾಸ ||೧೨೬||

## ಮೂವತ್ತೆರಡನೆಯ ಸಂಧಿ ಸಂಪೂರ್ಣಂ

# ೩೩. ಕೃಷ್ಣನ ಸ್ತ್ರೀಯರ ಭವಾವಳಿಸಂಧಿ

ಸುತ್ತಿದಕರ್ಮಭಟರಸೇನೆಯಗೆಲ್ದು | ಮುಕ್ತಿಸಾಮ್ರಾಜ್ಯಸಂಪದಕೆ ||
ಕರ್ತುವಾಗಿಹನೇಜಿನೇಶರಡಿದಾವರೆ | ಗುತ್ತಮಾಂಗವಮಡಗುವೆನು ||೧||

ಭರತತ್ರಿಖಂಡಮನೆಲ್ಲಮನಾಬಲ | ಪುರುಷೋತ್ತಮರತಿಬಲದಿ ||
ಉರುಮುದದೊಳುಪಲವಿಸಪಾಲಿಸೆಗೆಯ್ವು | ತ್ತಿರಲೊಂದಾನೊಂದುದಿವಸ ||೨||

ಧಾರಿಣಿಯೊಳುಕಡುದಯೆಯಿಂಧರ್ಮ | ಸಾರವನೆಲ್ಲಪಸೂಸಿ ||
ದ್ವಾರಾವತಿಯುರೇವತಿಯೆಂಬವನಕಾ | ಮಾರಮಥನನೆಯ್ದಿದನು ||೩||

ಸುರದುಂದುಭಿಯುಸ್ವರಪಕೇಳಿಯಾಬಲ | ಹರಿಮೊದಲಾದಯಾದವರು ||
ಹರುಷದಿಂತಂತಮ್ಮ ಸತಿಯರುವೆರಸಿಬಂ | ದುರುಭಕ್ತಿಯೊಳಿರವೆರಗಿ ||೪||

ಸುತಿಗೆಯ್ದುಮನುಜಕೋಷ್ಠದೊಳುಕುಳ್ಳಿರ್ದುಜಸ | ನ್ನುತಮುಪ್ಪತತ್ತ್ವರೂಪವನು||
ಮತಿಯಿಂತ್ತುಕೇಳಿಬಳಿಕಘನಹರುಷದಿಂ | ಯುತರಾಗಿಪರ್ವೇಳೆಯೊಳು ||೫||

ವರದತ್ತಗಣಧರಗರ್ಗದೇವಕಿದೇವಿ | ಕರವಮುಗಿವೃತ್ತೆಲೆಗುರುವೆ ||
ವರಮುನಿರಾಜರರವರುಚರಿಗೆಗೆಂದು | ಬರಲುಮತ್ತವರಸುಕಂಡು ||೬||

ಪಿರಿದಪ್ಪನೇಹಮದೇಕಾಯಿತೆನಲಾ | ವರಮುನಿಯಿಂತೆಂದನಾಗ ||
ತರುಣೀಮಣಿಕೇಳುಪೇಸಂದುಮಧುರಾ | ಪುರವೊಳುಹೆತ್ತಸಂದನರು ||೭||

ಚರವಸಾಂಗರವರುನೈಗಮದೇವನತ್ಯಾ | ದರದಿಂದೊಯ್ದಿಡೆಯುಲ್ಲಿ ||
ನಿರುತಬೆಳೆದುನಿರ್ವೇಗವಿದೀಕ್ಷೆಯ | ಧರಿಸಿಬಂದವರದರಿಂದ ||೮||

ನಿನಗವರೊಳುನೇಹವೊಪಿದುದೆನೆಕಡು | ಮನದೆಗೊಂಡಾಸತಿಯಿರಲು ||
ಅನುನಯದಿಂಸತ್ಯಭಾಮೆತನ್ನಾಮು | ನ್ನಿನಭವದಿರವಕೇಳಿದಳು ||೯||

ಇಂತುಕೇಳಲುಪೇಳ್ದರುಶೀತಳಜಿನ | ಸಂತಾನಾವಸಾನದೊಳು ||
ಅಂತಾಸಿತುಧರ್ಮವಾಕಾಲದೊಳುಶೋಭೆ | ಯಂತಾಳಿಭದ್ರಿಳವೆಂಬ ||೧೦||

ಪುರದಲ್ಲಿಭೂತಿಶರ್ಮಾಭಿಧಾನದಭೂ | ಸುರಗೆಕಮಲೆಯೆಂಬಸತಿಗೆ ||
ವರಸುತಮುಂಡಶಳಾಯನನೆಂಬವ | ನುರುತರಧೂರ್ತಮಾನಸನು ||೧೧||

ಬಳೆದುಕುಶಾಸ್ತ್ರಂಗಳನಿತದರಿವಾ | ಪೊಳಲೊಳುಘನರಥನೆಂಬ ||
ಇಳೆಯಾಧಿಪತಿವೊದಲಾದಾಪುರಜನ | ಗಳನುತನಗೆವಶಮಾಡಿ ||೧೨||

ಅಲ್ಲದಚರಿತಮನೊಳ್ಳಿತೆಂದವರಿಗೆ | ನಿಲ್ಲದೆಯುಪದೇಶಗೆಯ್ದು ||
ಸಲ್ಲೀಲೆಯಿಂಸಪ್ತವ್ಯಸನದಿನಡೆ | ದಲ್ಲಿವನುಣ್ಮಾಳಿಗೊಂಡುಬಳಿಕ ||೧೩||

ನರಕಾವನಿಯೋಳರೊಳಗುದಯಿಸಿಮತ್ತೆ | ತಿರಿಯಗ್ಗತಿಯಲ್ಲಿಜನಿಸಿ ||
ತಿರುಗಿಬಂದೊಂದಾರಣ್ಯದೊಳಗೆನಿ | ಷ್ಠುರಸಪ್ಪವನಚರನಾಗಿ ||೧೪||

ಕಾಲವನೆರನಾಂತಿರುತೊಂದುದಿನದೊಳು | ಕಾಲಲಬ್ಧಿವಶದಿಂದ ||
ಆಲೋಕಸಗೆಯ್ದೋರ್ವಮುನೀಶನ | ಕಾಲವೋಗಡೆಹಣೆಯಿಟ್ಟು ||೧೫||

ಆವಸತನಾಗಲೀತಸುಭವ್ಯನೆಂಬುದ | ನವಧಿಬೋಧದಿನೆರೆಯರಿದು ||
ನವಿನಯದಿಂಸುವ್ರತಪಪಾಲಿಸಲವ | ನವಧಾರಿಸಿಯವರೊಳಗೆ ||೧೬||

ಪ್ರೀತಿಯಿಂದಲಿನಡೆದಳಿದುವಿಜಯಗಿರಿ | ಯಾತೆಂಕಣಳಕಾಪುರದ ||
ಭೂತಳಪತಿವಿದ್ಯಾಬಲನವಗೆನೆ | ಜ್ಯೋತಿರ್ಮಾಲೆಯೆಂಬವಳ್ಗೆ ||೧೭||

ಹರಿಬಲನೆಂಬತನುಜನಾಗಿಭೂತಳ | ಕರಸಾಗಿರ್ದೊಂದುದಿವಸ ||
ವರಮುನಿಗಳಕಂಡುಪರಮವೈರಾಗ್ಯದಿ | ಧರಿಸಿದನಮಲದೀಕ್ಷೆಯನು ||೧೮||

ಅದರೊಳುನೆಗಳಿಯಳಿದುಸೌಧರ್ಮದೊ | ಳುದಯಿಸಿಯಲ್ಲಿಂಬಂದು ||
ಸುದತೀಮಣಿಸತ್ಯಭಾಮೆನೀನಾದೈ | ಸದಮಲಸುವ್ರತಫಲದಿ ||೧೯||

ಎನಲವಳತಿಹರುಷವತಾಳಿಕಳ್ಪಿರ | ಲನಿತರೊಳಗೆಕೈಮುಗಿದು ||
ಮುನಿಪನನಾರುಗ್ಮಿಣಿದೇವಿತನ್ನಮು | ನ್ನಿನಜನ್ಮವಕೇಳಿದಳು ||೨೦||

ಮಗಧದೇಶದೊಳುಲಕ್ಷ್ಮೀಪುರಮೆಂಬುದು | ಸೊಗಯಿಪುದದರೊಳಗಿರ್ಪ ||
ಸಿಗಮುನೆಂಯುತಸೋಮಶರ್ಮನನಿಜಸತಿ | ಮುಗುಧೆತಂಜೆಸುತೊಂದುದಿವಸ ||೨೧||

ಭೂಸುರಮಣಿದೊಡವಿಟ್ಟುಕನ್ನಡಿನೋಡು | ವಾಸವುಯದೊಳಾಯೆಡೆಗೆ ||
ಆಸಮಾಧಿಗುಪ್ತಮುನಿಪತಿಚರಿಗೆಗೆ | ಮಾಸೋಪವಾಸಾಂತದೊಳು ||೨೨||

ಬರುತಿರೆಗಿಡಿಗಿಡಿಜಂತ್ರದಂತೆಸೆವಾ | ವರಮುನಿಯಂಗದನೆಳಲು ||
ಇರದವಾಕನ್ನಡಿಯೊಳುಬೀಳಲಾದ್ವಿಜ | ತರುಣಿಯಿದೇನೆಂದುನೋಡಿ ||೨೩||

ಕಡುಬೆದದರ್ಬಾಯಿಗೆಬಂದಂವದಿ | ಕೆಡೆನುಡಿದಲ್ಲಿಂತಗುಳಿ ||
ಸಡಗರದಿಂದಿರಲೌದುಂಬರಕುಷ್ಠ | ವೊಡಲೊಳಗಂಕುರವಾಯ್ತು ||೨೪||

ಒಳಿಕಹುಳಿತುನಾತುಕೊಳೆತುಸತ್ತಾತನ್ನ | ನಿಳಯದೊಳಗೆಯಿಲಿಯಾಗಿ ||
ಕೊಳೆವಾವುಪಂದಿಮೂಗಿಲಿಬೆಕ್ಕುಪೆಣ್ಣಾಯಿ | ಬೆಳುಗತ್ತೆಯಾಗಿಸಂಚನಿಸಿ ||೨೫||

ಘೋರದುಃಖವನುಂಡುಸತ್ತುಕಾಳಿಂದೀ | ತೀರದಮಂದಿರವೆಂಬ ||
ಊರೊಳುಮತ್ಸ್ಯನೆಂಬಾಖ್ಯಾಗುಲಿಗಂಗೆ | ನಾರಿಮಂಡೂಕಿಯೆಂಬವಳ್ಗೆ ||೨೬||

ಪೂತಿಗಂಧಿನಿಯೆಂಬಮಗಳಾಗಿಬಳೆದುಮ | ತ್ತಾತತಂದೆತಾಯ್ಗಳುಸಾಯೆ ||
ಆತನುಗಂಧಕೆಹೇಸಿಯಾಪೂರವ | ರಾತುರದಿಂಪೊರಮಡಿಸೆ ||೨೭||

ಜಗುನೆಯತಡಿಗೆಯ್ತಂದಲ್ಲಿರ್ಪಂ | ಬಿಗರೊಡನಾಪರುಗೋಲ ||
ತೆಗೆವುತ್ತಮಿರಲೊಂದದಿನವಪರಾಬ್ಧಿಗೆ | ಪಗಲೆರೆಯುಂಪುಗಲೊಡನೆ ||೨೮||

ಹಿಂದೆಲಕ್ಷ್ಮೀಮತಿಯಾಗಿಕನ್ನಡಿನೋಡು | ವಂದುತನ್ನಾಬೆಂಗಡೆಗೆ ||
ಬಂದಸಮಾಧಿಗುಪ್ತರುಮತ್ತಾಕಾ | ಳಿಂದಿಯತಡಿಯೊಳುನಿಲಲು ||೨೯||

ಆಪೂತಿಗಂಧಿನಿತನ್ನಮುನ್ನಿನಕ | ರ್ಮೋಪಶಮದಿನೆಯ್ತಂದು ||
ತಾಪಸಪತಿಯುಕಟಂಕಟಿಯಾಗಿರ್ದ | ರೂಪುಗಂಡುಕರುಣದೊಳು ||೩೦||

ಬಡವರೊಳಗೆಕಡುಬಡವನಿಂತಿವನುಡ | ಹಡೆಯನೆಸುತಸಾರಕೆಯ್ದಿ ||
ಕಡುಸನ್ನಿವಿಡಿದುಬೀಸುವಬಿರುಗಾಳಿಯು | ಕಡೆಯೊಳುಹುರಿಗೋಲಸಿಲಿಸಿ ||೩೧||

ಶೀತಪವನಸಂಸರ್ಗವಪಿಂಗಿಸಿ | ಪೂತಿಗಂಧಿನಿಕಾದಿರಲು ||
ಆತಪನೋದಯುವಾಗಲ್ಕಣ್ದೆರೆ | ದಾತಾಪಸಕ್ಕೈಯೆತ್ತಿ ||೩೨||

ಅವಧಿಬೋಧದಿಲಕ್ಷ್ಮೀಮತಿಯೆಂಬುದ | ನಖಿಳವನರಿದತಿಮುದದಿ ||
ಅವಳೊಳಿಂತೆಂದರೆಲೇಪೂತಿಗಂಧಿನಿ | ಸವಯೌವನಮದದಿಂದ ||೩೩||

ಅಂದುಭೂಸುರಸವಲ್ಲಭೆಯಾಗಿಕಡುಮುನಿ | ಸಿಂದೆಮ್ಮಬೈದುದರಿಂದ ||
ಸಂದಣಿಸಿದದುಃಖವನುಂಡೆಯೆಸುತಪ | ಳ್ದಂದಭವಮನಿಂತಮೊರೆಯೆ ||೩೪||

ಅರಿದುತನ್ನಮುನ್ನಿನಭವವನುಮನ | ದೆರಕದಿನಾಮುನಿಪತಿಗೆ ||
ಎರಗಿದಪೂತಿಗಂಧಿಗೆಸುವ್ರತವಮುನಿ | ಯೆರೆಯನಿತ್ತುಪೋಗಲಿತ್ತ ||೩೫||

ಬಂಧುರಮಪ್ಪಾಸುವ್ರತವನುಪೂತಿ | ಗಂಧಿಕಣ್ಗಳಸುರೆಹಡೆದ ||
ಅಂಧನಂದನಪಾಲಿಸುವಕಾಲದೊಳುಪ | ಸುಂಧರೆಯೆಂಬಕಂತಿಯರು ||೩೬||

ಬರಲವರೊಡವೋಗಿಯಾರಾಜಗೃಹಪುರ | ವರದಸಿದ್ಧಶಿಲೆಯೆಂಬ ||
ಗಿರಿಯಗುಹೆಯೊಳುಶಕ್ಕಿಂತಿಕೆಯರುಕೊ | ಟ್ಟರುನೋಂಪಿಯನೋಸುತಿರಲು ||೩೭||

ಬಳಿಕಸವೂಾಧಿಗುಪ್ತವ್ರತಿರಾಜರು | ತಳರಬಲ್ಲಿಗೆತತ್ಪುರದ ||
ಇಳೆಯಧಿಪನಮಗಳಾಶ್ರೀಮತಿಯೆಂಬ | ಲಲನೆಬಂದಾಮುನಿಗೆರಗಿ ||೩೮||

ತನ್ನ ಜನ್ಮಪಕೇಳಿಯೂಪೂತಿಗಂಧಿನಿ | ಮುನ್ನಲಕ್ಷ್ಮೀಮತಿತನಗೆ ||
ಮನ್ನಣೆಯಾಳಿಯಾದುದರಿಂದನೇಹದಿ | ತನ್ನಮನೆಗೆಕೊಂಡುಬಂದು ||೩೯||

ಜಿನಗುಣಸಂಪತ್ತಿವೊದಲಾದನೋಂಪಿಯ | ನನುನಯದಿಂದಕೊಡಿಸಲು ||
ವಿನಯದಿನೋಂತುತಮಿರಲೊಂದಾನೊಂದು | ದಿನದೊಳಗಾಕಾಂತಿಯರು ||೪೦||

ನರಸಮುಪ್ಪನ್ನಮನೀಯುಲುತನಗಂಡು | ನಿರತನವಮಾದುದರಿಂದ ||
ಧರಿಸದೆಬಿಸುಡಲಂತದನಲ್ಲಿಯಿರುವೆಗ | ಳಿರದೆಪಲವುಸಂಜನಿಸಿ ||೪೧||

ಮರಣವಡೆಯಲಾಪಾಪಜೆನ್ನನೆಹತ್ತಿ | ಬರೆಕೆಲದಿವಸದಮೇಲೆ ||
ಗುರುಸನ್ನಿಧಿಯೊಳುಸನ್ಯಸನದಿಸತ್ತು | ಸುರುಚಿರಸೌಖ್ಯಮನೀವ ||೪೨||

ಪದಿನಾರನೆಯಸಗ್ಗದದೇವೇಂದ್ರಗೆ | ಸುದತಿಯಾಗಿಭೋಗವನು ||
ಪದಪಿಂಭೋಗಿಸಿಯಲ್ಲಿಂದಿಳಿದೀ | ಚದುರೆರುಗ್ಮಿಣಿಸೀನಾದೆ ||೪೩||

ಆದುನೀನುಬಿಟ್ಟಾನರಸಾನ್ನದೊ | ಳೊಂದಿಜನಿಸಿದಿರುವೆಗಳು ||
ಹೊಂದಿದಪಾಪದಿಸನ್ನ ಜನಕನಿನ್ನ | ಮುಂದೆಯಳಿವದುಃಖಮಾಯ್ತು ||೪೪||

ಎನುತಾಗಣಧರರೊಸೆದುನಿರೂಪಿಸೆ | ಮನದೆಗೊಂಡಾಸತಿಯಿರಲು ||
ಅನಿತರೊಳಾಜಂಭಾವತಿತನ್ನಮು | ನ್ನಿನಜನ್ಮವಬೆಸೆಗೊಳಲು ||೪೫||

ದೇವಗಿರಿಯುಸೀತಾಶ್ರೋತಸ್ವಿನಿ | ಯಾವಾಸವದಿಕ್ಕಿನೊಳು ||
ಶ್ರೀವಿದಶೋಭೆಯುಪುಷ್ಕಲಾವತಿಯೆಂ | ಬಾವಿಷಯದನಡುವೆಸೆವ ||೪೬||

ವೀತಶೋಕಪುರದೊಳುವೈಶ್ಯನೋರ್ವವಿ | ಖ್ಯಾತನುದಮನಕನೆಂಬ ||
ಆತನಸತಿದೇವಮತಿಯೆಂಬಳವರ್ಗೆವಿ | ನೂತೆವಿಮಲೆಯೆಂದೆಂಬ ||೪೭||

ತನುಜೆಸಂಭವಿಸಿಬೆಳೆಯಲಾಪುರದೊಳು | ವಿನುತಸುಮಿತ್ರನೆಂಬವಗೆ ||
ವಿನಯದಿಮದುವೆಯಮಾಡಲವನುಕೆಲ | ದಿನಮವಳೊಳುಸುಖಮಿರ್ದು ||೪೮||

ಮರಣವಡೆಯಲಾವಿಮಲೆವಿಮಲಮಪ್ಪ | ಚರಿತದೊಳೆಸಗಿಸುವ್ರತವ ||
ಧರಿಸಿಮರಣಮುಖದೊಳಗನಿಮಿಷಮೆಂಬ | ಪುರದವನದಮಧ್ಯದೊಳು ||೪೯||

ವನದೇವತೆಯಾಗಿಚೌಸೀತಿಸಾಸಿರ | ದನಿತುವರುಷನೆರೆಬಾಳ್ದು ||
ತನುವವಿಸರ್ಜಿಸಿಮುಂಪೇಳ್ದವಿಷಯದ | ಜನಸುತವಿಜಯನಗರಿಯ || ||೫೦||

ಪರದಸುಮಧುಸೇನನೆಂಬವಗಾತನ | ಗರಣಿಬಂಧುಮತಿಯೆಂಬ ||
ತರಳಲೋಚನೆಗೆಂಬಯುಸೇನೆಯೆಂಬೋರ್ವ | ಪರಸುತೆಯಾಗಿಜವ್ವನವ ||೫೧||

ತಳೆದಾಶ್ರೀಪಂಚವಿಂಯುಪವಾಸವೂ | ಳಿದುಕುಬೇರದಿಕ್ಪತಿಗೆ ||
ಲಲನೆಯಾಗಿಪಂಚಪಲ್ಯೋಪಮಕಾಲ | ಕಳೆಯಲಲ್ಲಿಂದೆಯ್ತಂದು ||೫೨||

ನಿರುಪಮಮೆನಿಸಿಮುಂಪೇಳ್ದಾವಿಷಯದ | ಸುರುಚಿರಪುಂಡರೀಕಿಣಿಯ ||
ವರವೈಶ್ಯನುವಜ್ರಸೇನನಾತನಸತಿಜ | ಕರುಣೆಸುಭದ್ರೆಯಂತವರ್ಗೆ ||೫೩||

ಸುತೆಯಾಗಿಸುಮತಿವೆಸರನಾಂತುಬೆಳದುಸು | ವ್ರತೆಯರೆಂಬಾಕಂತಿಯರಿಗೆ ||
ಅತಿರುಚಿವಡೆದಮೃತಾನ್ನದಾನವನುನ | ನ್ನುತಭಕ್ತಿಯಿಂಮಾಡಿಬಳಿಕ ||೫೪||

ಲಲಿತರತ್ನಾವಳಿಯೆಂಬನೋಂಪಿಯನೋಂ | ತಳಿದುಪೋಗಿಯ್ದೈದನೆಯ ||
ವಿಲಸಿತಮಪ್ಪಕಲ್ಪದದೇವೇಂದ್ರಗೆ | ಲಲನೆಯಾಗಿಸುಖಮಿರ್ದು ||೫೫||

ಪದಿಮೂರುಪಲ್ಯೋಪಮದಾಜೀವಿತಾಂ | ತ್ಯದೊಳೀಧರೆಗೆಯ್ತಂದು ||
ಸುದತೀಮಣಿಜಾಂಭಾವತಿಯಾದೆಯಿಂ | ದುದಿತಬೋಧನುನಿರವಿಸಲು ||೫೬||

ಅನಿತರೊಳಪ್ಯೋಪಮಹಸ್ತವಮುಗಿ | ದನಿಮಿಷನೇತ್ರೆಸುಸೀಮೆ ||
ಅನಘಕೇಳಿನ್ನಜನ್ಮವಬೆಸಸೆನಲತಿ | ವಿನಯದೊಳಿಂತುಸುರಿದನು ||೫೭||

ವಂಧಾತಕಿಖಂಡದಮೂಡಣಮಂ | ದರದಸೀತೆಯಬಲಗಡೆಯ ||
ಧರಣಿಯಮಂಗಲಾವತಿಯೆಂಬವಿಷಯದೊ | ಳುರುತರಶೋಭೆಯನಾಂತ ||೫೮||

ವರರತ್ನಸಂಚಯಪುರಮಿರ್ಪುದದನಾ | ಳ್ವರಸುವಿಶ್ವಸೇನನವನ ||
ಪರಸೂಪರುರಣಾನಂಗದೊಳಗೆಯುಮ | ಪುರಕೆಯ್ದಿಸಲವನಬಲೆ ||೫೯||

ಸುಂದರಿಯೆಂಬವಳಾವಲ್ಲಭನದುಃಖ | ದಿಂದತುಚಕ್ಷಣಿವೊಕ್ಕು ||
ಹೊಂದಿಬಳಿಕವಿಜಯಾರ್ಧಗಿರಿಯೊಳಿರ್ಪ | ದೊಂದುವನದಮಧ್ಯದೊಳು ||೬೦||

ವಾಸವ್ಯಂತರದೇವತೆಯಾಗಿಮ | ನೋನುರಾಗವಿಬರ್ದುಬಳಿಕ ||
ಆನದೆಸತ್ತಾಪಾಪದಫಲದಿಂ | ನಾನಾಭವದೊಳುಬಂದು ||೬೧||

ಜಂಬೂದ್ವೀಪದಭರತಾವನಿಯೊಳ | ಗಿಂಬಾದಶಾಲಿಗ್ರಾಮ ||
ಎಂಬಲ್ಲಿಯಕ್ಷ್ಮಾಂಕನೆಂಬಪರದನನಿ | ತಂಬಿನಿಯಾದೇವಸೇನೆ ||೬೨||

ಅವರೊಳೊಗೆದುಯಕ್ಷಿಯೆಂಬಪೆಸರನಾಂತು | ನವಯೌವನೆಯಾಗಿಬಳಿಕ ||
ಸುವಿನಯದಿಂಚೆಸಮತವಧರಿಸಿಯೊಂದು | ದಿನದೊಳುಮುನಿಪನೋರ್ವಂಗೆ ||೬೩||

ನಿರವದ್ಯಾಹಾರವನಿತ್ತುಬಳಿಕಾ | ಪುರದವನಕೆಪೋಗಲ್ಲಿ ||
ಉರಗದಷ್ಟವಾಗಿಸತ್ತಲ್ಲಿಂಬಂದು | ಸುರುಚಿರಮಪ್ಪೀನೆಲವ ||೬೪||

ಆವಾಸವಗಿರಿಯಾಸೀತೆಯುದಕ್ಷಿ | ಣಾವನಿಯಾನಾಡಿನೊಳಗೆ ||
ಭೂವಿಶ್ರುತಪುಷ್ಕಲಾವತಿಪೆಸರ್ವಡೆ | ದಾವಿಷಯದಮಧ್ಯದೊಳು ||೬೫||

ಉರುಪುಂಡರೀಕಿಣಿಯೊಳಗೆಯಶೋಕನೆಂ | ಬರಸಿಗೆಸೋಮಶ್ರೀಗೆ ||
ವರಸುತೆಯಾಗಿಲಕ್ಷ್ಮೀಕಾಂತೆವೆಸರಾಂತು | ಪಿರಿದುಚೆಲ್ವಿಕೆಯನುಧರಿಸಿ ||೬೬||

ಜನಸುಖವಪ್ಪಜವ್ವನವೇರಿದೀಕ್ಷೆಯ | ನನುರಾಗದಿಕೈಕೊಂಡು ||
ತನುವನಿಳುಹಿಮಾಹೇಂದ್ರಕಲ್ಪದದೇವ | ಗನಿಯಾಗಿಸಂಜನಿಸಿ ||೬೭||

ಪನ್ನೊಂದುಪಲ್ಯೋಪಮಕಾಲಜೀವಿಸಿ | ಭಿನ್ನವವಾಡಿದೇಹವನು ||
ಸನ್ನುತರೂಪೆನುಸೀವೆನೀಸಾವ್ಯೆ | ಮುನ್ನೆಸಗಿದಪುಣ್ಯದಿಂದ ||೬೮||

ಎನಲಾಗಳೆಲಕ್ಷ್ಮೀಕೈಮುಗಿದೆಲೆ | ಮುನಿಪತಿಯೆನ್ನಜನ್ಮವನು ||
ನೆನುವಾನದಿಂದನಿರೂಪಿಸಿಯೆನಲತಿ | ವಿನಯದೊಳಿಂತೆಂದನವನು ||೬೯||

ವಸುಧಾತಳವಿದರೊಳುಸೀತೆಯಿಂದದರಾ | ಜಿಸುವತೆಂಕಣತಡಿಯೊಳಗೆ ||
ಎಸೆವಕಚ್ಛಕಾವತಿಯೆಂಬನಾಡೊಳು | ವಿಸುಗುವರಿಷ್ಟಪಟ್ಟಣದ ||೭೦||

ಅರಸುಸುಷೇಣನೆಂಬವನತಿರೋಗದಿ | ಮರಣವನೆಯ್ದಿಮತ್ತವನ ||
ವರಮಾತೆವಸುಮತಿಯೆಂಬಳವನಮೇಲೆ | ಕರೆಕರೆಗೊಂಡಾರ್ತದಿಂದ ||೭೧||

ತನುವನುಳಿದುವಿಂಧ್ಯಾಟವಿಯೊಳಗೋರ್ವ | ವನಚರವಲ್ಲಭೆಯಾಗಿ ||
ಜನಿಸಿಯಲ್ಲಿಗೆಬಂದಾಚಾರಣರಿಂ | ವಿನುತಚರಿತ್ರಮನಾಂತು ||೭೨||

ಮುಪ್ಪಾಗಿಸತ್ತುಕಾಪಿಷ್ಟದಸುರಪಗೆ | ಯೊಪ್ಪುವನರ್ತಕಿಯಾಗಿ ||
ಇಪ್ಪತ್ತುಪಲ್ಯೋಪಮಾಯುಸ್ಥಿತಿಯನು | ತಪ್ಪದುಂಡಲ್ಲಿಂಬಂದು ||೭೩||

ಈಕ್ಷಿತಿಯೊಳುರಂಜಿಪರಜತಾದ್ರಿಯ | ದಕ್ಷಿಣದೆಸೆಯಶ್ರೇಣಿಯೊಳು ||
ಲಕ್ಷಣವಡೆದಸುಧಾಮನಗರವನು | ರಕ್ಷಿಪನಾಮಾಹೇಂದ್ರ ||೭೪||

ಆನೃಪವರಗೆವಸುಂಧರೆಯೆಂಬೋರ್ವ | ಮಾನಿನಿಗುದಯಂಗೆಯ್ದು ||
ಭೂಸುತೆಯಾಗಿಕಾಂಚನಮಾಲೆಯೆಂಬಭಿ | ಧಾನಮನಾಂತೊಪ್ಪವಡೆದು ||೭೫||

ಹರಿವಾಹನನೆಂಬರಸಗೆಯಾಸ್ವಯಂ | ವರದೊಳುವಲ್ಲಭೆಯಾಗಿ ||
ಇರುತವಮುಕ್ತಾವಳಿಯೆಂಬನೋಂಪಿಯನಾ | ದರದಿಂಹಿರಿದಾಗಿನೋಂತು ||೭೬||

ಗತಬೇವಿಯಾಗಿಮೂಡನೆಯುಸಗ್ಗದಸುರ | ಪತಿಗೆಪಟ್ಟದಸತಿಯಾಗಿ ||
ಅತಿಮುದದಿಂನವಪಲ್ಯೋಪಮಾಯು | ಸ್ಥಿತಿಯೊಳಗಲ್ಲಿಂಬಂದು ||೭೭||

ಸುಪ್ರಭೆಯೆಂಬಪೊಳಲಶಂಬರವೆಸ | ರಪ್ರಭುವಿಗೆಶ್ರೀಮತಿಗೆ ||
ಸುಪ್ರೇಮದಸುಕುಮಾರಿಲಕ್ಷ್ಮಣೆಯುಂ | ಬಪ್ರಮದಾಮಣಿಯಾದೆ ||೭೮||

ಎನೆಗಾಂಧಾರಿತನ್ನಯಜನ್ಮವಬೆಸ | ಸೆನೆನಿರವಿಸಿದನಿಂತೆಂದು ||
ವನಜಾಕ್ಷಿನೀನೀಯಾರ್ಯಾಖಂಡವ | ವಿನುತಕೌಶಲಜನಪದದ ||೭೯||

ಸಾಕೇತನಗರಿಯೊಳಗೆರುದ್ರನೆಂಬವ | ಹೀಕಾಂತನಾತನಸುದತಿ ||
ಲೋಕೈಕರೂಪೆವನಶ್ರೀಯೆಂಬೋರ್ವ | ಳಾಕೆನಿತ್ಯಕೃತ್ಯವಾಗಿ ||೮೦||

ವರಮುನಿಗಳಿಗಾಹಾರದಾನವಮಾಡಿ | ದುರುಸುಕೃತದಫಲದಿಂದ ||
ಮರಣವಹಡೆವುತ್ತಮಸುಖಿನವು | ತ್ತರಕುರುಧರೆಯೊಳಗೊಗೆದು ||೮೧||

ಮೂರುಪಲ್ಯೋಪಮಾಯುಷ್ಯಸುಖಮನುಂಡು | ಜಾರಿಸಿತನುವನಲ್ಲಿಂದ ||
ಪಾರಿಜೋಯಿಸರವಲ್ಲಭನಾಚಂದ್ರಗೆ | ನೀರೆರೋಹಿಣಿದೇವಿಯಾಗಿ ||೮೨||

ಅಲ್ಲಿಂಬಂದೀಭರತದವಿಜಯಾರ್ಧ | ದಲ್ಲಿಯುತೆಂಕಣತಟದ ||
ಸಲ್ಲಲಿತಾಂಬುದವಲ್ಲಭನಗರಿಯು | ಸುಲ್ಲಾಸದಿಂರಕ್ಷಿಸುವನು ||೮೩||

ವಿದ್ಯುತ್ಪ್ರಭನೆಂಬಖೇಚರರಾಜಗೆ | ವಿದ್ಯುನ್ಮಾಲೆಗೆಜನಿಸಿ ||
ವಿದ್ಯಾಕಲೆಗಳನರಿದುರೂಪಿಂದಾ | ಪ್ರದ್ಯುಮ್ನಸತಿಗೆಣೆಯೆನಿಸಿ ||೮೪||

ಕರವೆಸೆವಾಸುರೂಪೆಯುನಿತ್ಯಾಲೋಕ | ಪುರದಮಹೇಂದ್ರವಿಕ್ರಮಗೆ ||
ಉರುಮುದದಿಂಕುಡೆಸಲೆಸುಖವಿದರ್ಾ | ವರದಾಪತಿಗಳೊಂದುದಿವಸ ||೮೫||

ದೇವಗಿರಿಗೆಪೋಗಿದೇವನಪೂಜಿಸು | ವಾವೇಳೆಗೆಯ್ದೆಚಾರಣರು ||
ಸಾವಧಾನದಿಧರ್ಮಧರ್ಮವನುಪೇಳ | ಲಾವೈರಾಗ್ಯಸಂಭವಿಸಿ ||೮೬||

ಓಪನೊಡನೆದೀಕ್ಷೆಯಕೊಂಡಳಿದುಸು | ರೂಪೆಸಗ್ಗದೊಳುಸಂಜನಿಸಿ ||
ಆಪಂಚಪಲ್ಯೋಪಮಕಾಲಬೇವಿಸಿ | ಯಾಪಂಚತ್ವಮನೆಯ್ದಿ ||೮೭||

ಗಾಂಧಾರವಿಷಯದಭೋಗಾವತಿಯೆಂಬ | ಬಾಧುರಪುರದಿಂದ್ರರಥಗೆ ||
ಬಂಧೂಕಾಧರೆಮೇರುಮತಿಗೆಸೀನು | ಗಾಂಧಾರಿಯೆಂಬವಳಾದೈ ||೮೮||

ಎಂದುನಿರೂಪಿಸೆಗೌರಿಯೆಂಬವಳಿಂ | ತೆಂದಳುಜತಿರಾಯನನ್ನ ||
ಹಿಂದಣಭವವಪೇಳೆನಲವರೊಸೆದಿಂ | ತೆಂದರೆಲೇಕೋಮಲಾಂಗಿ ||೮೯||

ಈಮಹಿಯೊಳಗೊಪ್ಪುವನಾಗಪುರದೊಳು | ಹೇಮಾಭನೆಂಬಭೂವರಗೆ ||
ಸೋಮವದನೆಸರಸತಿಯೆಂಬಸತಿಸು | ಪ್ರೇಮದಿನಿರ್ದೊಂದುದಿವಸ ||೯೦||

ಸುಗುಣಿಯಶೋಧರರೆಂಬವಧಿಜ್ಞಾ | ನಿಗಳೊಳುಪೂರ್ವಜನ್ಮವನು ||
ಬಗೆಸಂದುಕೇಳಿಜಾತಿಸ್ಮರಿಯಾಗಿಮೇ | ಲೊಗೆದಚಿಂತೆಯೊಳಿರಲಾಗ ||೯೧||

ಹೇಮಾಭನೆಲೆಸತಿಚಿಂತೆಯೇಕೆಂದುಸು | ಪ್ರೇಮದಿಕೇಳಲಿಂತೆಂದು ||
ಆಮಾನಿನಿಪೇಳ್ದಳುತನ್ನಮುನ್ನಿನ | ದ್ದಾಮಮಪ್ಪಾಜನ್ಮದಿರವ ||೯೨||

ವರಧಾತಕಿಖಂಡದಮೂಡಣಾಮಂ | ದರದೊ-ಪರವಿದೇಹದೊಳು ||
ಸುರುಚಿರಕುಮುದಾವತಿವಿಷಯದಭೋಗ | ಪುರದವಿಜಯಸೇನನೆಂಬ ||೯೩||

ಪರದಗೆಜಯಸೇನೆಯೆಂಬವಲ್ಲಭೆಯಾಗಿ | ವರಮುನಿಗಳಿಗೆಭಿಕ್ಷೆಯನು ||
ನಿರವಧಿಯಾಗಿಮಾಡಿಸಿಮರಣಂಗೆಯ್ದು | ಕುರುಭೂಮಿಯೊಳುಸಂಜನಿಸಿ ||೯೪||

ಪದಪಿಂಮೂರುಪಲ್ಯೋಪಮಕಾಲಸು | ಮದದಸುಖಮನನುಭವಿಸಿ ||
ಒದವಿದಮರಣದಿನಾಥರಣೇಂದ್ರಗೆ | ಸುದತಿಯಾಗಿಸಂಜನಿಸಿ ||೯೫||

ತ್ರಿತಯಪಳಿತಕಾಲಜೀವಿಸಿಯಂತಲ್ಲಿ | ಹತವಾಗಿಭೂಪತಿನಿನಗೆ ||
ಸತಿಯಾದೆನೆನಲುವೈರಾಗ್ಯವೊದವಿಯೋರ್ವ | ಯತಿನಾಥನಬಳಿಗೆಯ್ದಿ ||೯೬||

ಹೇಮಾಭನೃಪತಿಯಣುವ್ರತವನುಕೊಳ | ಲಾಮಾನಿನಿಸರಸತಿಯು ||
ಪ್ರೇಮದಿನಾವ್ರತವನುಕೊಂಡುಬಳಿಕತ | ನ್ನಾಮಪ್ಪಯಭಾರವನಿಳುಪಿ ||೯೭||

ಮೊದಲಸಗ್ಗದೊಳುನಿರ್ಜರೆಯಾಗಿಜನಿಯಿಸಿ | ಸದಮಲಸುಖವನುಂಡುಬಳಿಕ ||
ಒದವಿದಮರಣದೊಳೀನೆಲದೊಳಗಿಹ | ಪದವತ್ತವತ್ಸದೇಶದೊಳು ||೯೮||

ಕರವೊಪ್ಪುವಕೌಶಂಬೀನಗರಿಯ | ವರವೈಶ್ಯಸುಮತಿಯೆಂಬವಗೆ ||
ಗರುವೆಸುಭದ್ರೆಗೆಧರ್ಮಿಣಿಯೆಂಬೋರ್ವ | ವರನಂದನೆಯಾಗಿಜನಿಸಿ ||೯೯||

ಬೆಳೆದುಬಳಿಕಜಿನಗುಣಸಂಪತ್ತಿಯಿಂ | ಬಲಘುಸೋಂಪಿಯನುರೆಸೋಂತು ||
ಇಳುಹಿದೇಹಮನಚ್ಯುತಕಲ್ಪದಧಿಪಗೆ | ಲಲನಾಮಣಿಯಾಗಿಜನಿಸಿ ||೧೦೦||

ಪದಿಮೂರುಪಲ್ಯೋಪಮಾಯುಷ್ಯಮಲ್ಲಿ | ದೊರದವಿದಮರಣಮುಖದೊಳು ||
ವಿದಿತಮೆನಿಸುವಾವಿನಿತಾಖಂಡದ | ಗ್ಗದಪೀತಶೋಕಪಟ್ಟಣದ ||೧೦೧||

ಭೂತಳಪತಿಮೇರುಚಂದ್ರನಸತಿವಿ | ಖ್ಯಾತೆಚಂದ್ರಪ್ರಭೆಯುವರ್ಗೆ ||
ನೀತಿನಿಪುಣೆಗೌರಿಯೆಂಬಮೆಸರತನು | ಜಾತೆನೀನಾದೆಯೆಂದೆನಲು ||೧೦೨||

ಅನುರಾಗವನಾಂತಾಪೆಣ್ಮಣಿಯರ | ಲನಿತರೊಳೆಳ್ದು ಕೈಮುಗಿದು ||
ಜನಪನ್ನುತೆಪದ್ಮಾವತಿತನ್ನಮು | ನ್ನಿನಜನ್ಮವಕೇಳಿದಳು ||೧೦೩||

ಮುನಿಪತಿಯಿಂತೆಂದನಿಲ್ಲಿಯಭರತಾ | ವನಿಯವಿನಿತಖಂಡದೊಳು ||
ಮಿಸುಗುವವಂತಿವಿಷಯದುಜ್ಜಯಿನಿಯ | ಜನಪತಿವಿಜಯಸೇನಂಗೆ ||೧೦೪||

ಅಸದೃಶರೂಪಾನ್ವಿತೆಯಪರಾಜಿತೆ | ಗೆಸೆವನಯಶ್ರೀಯೆಂಬ ||
ಬಿಸರುಹದಳಲೋಚನೆಬಿಂಬಾಧರೆ | ಯೆಸೆಳ್ವಂದುಗೆವಾಯ್ದೆರೆಯ ||೧೦೫||

ವರನಂದನೆಯಾಗಿಹಸ್ತಿಸೀರುಷವೆಂಬ | ಪುರಪತಿಹರಿಷೇಣನೃಪಗೆ ||
ಹರುಷದಿಕೊಡಲಲ್ಲಿಯತಿಸುಖವಿಂಬಾಳು | ತಿರಲೊಂದಾನೊಂದುಪಗಲು ||೧೦೬||

ನಿರವದ್ಯಾಹಾರಮನೋರ್ವಯತಿಪತಿ | ಗುರುಭಕ್ತಿಯಿಂಕೊಟ್ಟಫಲದಿ ||
ಮರಣವಹಡೆದುಬಳಿಕಹೈಮವತಮೆಂಬ | ಕುರುಭೂಮಿಯೊಳುಸಂಜನಿಸಿ ||೧೦೭||

ಅಲ್ಲಿಯುಳಿದುಚಂದ್ರಮಗೆರೋಹಿಣಿಯೆಂಬ | ನಲ್ಲಳಾಗಿಬಹುದಿವಸ ||
ನಲ್ಲೀಲೆಯಿಂನಲೆಸುಖವುಂಡಳಿದುಬಂ | ದಿಲ್ಲಿಮಗಧದೇಶದೊಳು ||೧೦೮||

ಕರವೊಪ್ಪುವಶಾಲ್ಮಲಿಗ್ರಾಮದೊಳೋರ್ವ | ಪರದನುವಿಜಯನೆಂಬವಗೆ ||
ವರಸತಿದೇಯಿಲೆಯೆಂಬವಳಿಗೆಸುರು | ಚಿರರೂಪೆಪದ್ಮೆಯೆಂಬೋರ್ವ ||೧೦೯||

ಸುತೆಯಾಗಿಬಳೆದುಹೆಸರನರಿಯದತರು | ತತಿಯಫಲವನೊಲ್ಲೆನೆಂದು ||
ಯತಿಪತಿವರಧರ್ಮರಿಂವ್ರತವನುಕೊಂಡು | ಸತತಸಂತೋಷದೊಳಿರಲು ||೧೧೦||

ಆಶಾಲ್ಮಲಿಗ್ರಾಮವನೋರ್ವಶಬರಾ | ಧೀಶನತ್ಯಾಗ್ರಹದಿಂದ ||
ನಾಶವಮಾಡೆಬೆದರಿಯೊಂದುವಿಪಿನಪ್ರ | ದೇಶಮನಾಪುರಜನವು ||೧೧೧||

ಆಸವಸದಿಂಸಾರಿಹಸಿದೊಡಲಿಂದಾ | ಹೆಸರರಿಯದತರುಫಲವ ||
ಎಸೆದುಮೆಲುತ್ತಿರಲಾಪದ್ಮೆತಾಧರಿ | ಯಿಸಿದಾವ್ರತವನುನೆನೆದು ||೧೧೨||

ಆಹೆಸರರಿಯದಮರದಹಣ್ಗಳವೆಲ್ಲ | ದಾಹಸುವನುಸ್ಮರಿಸದೆ ||
ದೇಹವನುಳಿದುಭೋಗಾವನಿಯೊಳುಪುಟ್ಟಿ | ಯೂಹಿಸಬಾರದಸುಖವ ||೧೧೩||

ಸಲೆಯುಂಡಳಿದುಬಂದಾಸ್ವಯಂಪ್ರಭವೆಂಬ | ನೆಲದಸ್ವಯಂಪ್ರಭಾಮರಗೆ ||
ಒಲವಿನಸುದತಿಸ್ವಯಂಪ್ರಭೆಯಾಗಿನಿ | ರ್ಮಲತರಸೌಖ್ಯವನುಂಡು ||೧೧೪||

ಅಲ್ಲಿಂಬಂದೀಭರತಾರ್ಯಖಂಡ | ದಲ್ಲಿಜಯಂತೀಪುರದ ||
ಬಲ್ಲಹನಾಶ್ರೀಧರನೆಂಬವನಸಿಜ | ವಲ್ಲಭೆಲಕ್ಷ್ಮೀಮತಿಗೆ ||೧೧೫||

ವಿಮಲೆಯೆಂಬಸುತೆಯಾಗಿಭದ್ರಿಳವೆಂಬ | ರಮಣೀಯಮಪ್ಪಪಟ್ಟಣದ ||
ರಮಣಸಂಬಂದನಾದಾವನಿಪಾಲಗೆ | ರಮಣಿಯಾಗಿಬಾಳುತಿರ್ದು ||೧೧೬||

ಒಂದುದಿವಸವರಧರ್ಮರಂಬಾಮುನಿ | ವೃಂದಾರಕನಸನ್ನಿಧಿಗೆ ||
ಬಂದುಧರ್ಮಾಧರ್ಮವಸುಕೇಳಿನಿರ್ವೇಗ | ದಿಂದದೀಕ್ಷೆಯುಕೈಕೊಂಡು ||೧೧೭||

ಬಳಿಕಾಚಾಮ್ಲವರ್ಧನನೋಂಪಿಯನೋಂ | ತಳಿದುಸಗ್ಗದವಾಸವಗೆ ||
ಲಲನೆಯಾಗಿಸೌಖ್ಯಮನುಂಡಿಪ್ಪತ್ತು | ಪಳಿತೋಪಮಕಾಲಬದುಕಿ ||೧೧೮||

ಮರಣಮುಖದಿನೀಯರಿಷ್ಟನಗರಿಯಭೂ | ವರಸುಕನಕವರ್ಮನೃಪನ ||
ವರವಧುವಾಶ್ರೀಮತಿಗೆಪದ್ಮಾವತಿ | ಯುರುರೂಪವತಿಯಾಗಿಜನಿಸಿ ||೧೧೯||

ವನಜೋದರಗೆವಲ್ಲಭೆಯಾದವಳುನೀ | ನೆನಲತಿಹರುಷವತಾಳಿ ||
ವನಜಾನನೆಯಾಗಣಧರಮೃದುಪದ | ವನಜಮೂಲಕೆಮುಗ್ಗಿದಳು ||೧೨೦||

ವಿನಯದೊಳಿಂತುಬಿಸಜನಾಭನನಿಜ | ವನಿತೆಯರೆಣ್ಬರಭವವ ||
ಮನದೆಗೊಂಬವಾಳ್ಕೆಯೊಳುಪೇಳಿದನಾ | ಮುನಿಕುಲಗಗನಭಾಸ್ಕರನು ||೧೨೧||

ಇದುಜಿನಪದಸರಸಿಜಮದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗಿದುತ್ರಯಸ್ತ್ರಿಂಶದಾಶ್ವಾಸ ||೧೨೨||

ಮೂವತ್ತಮೂರನೆಯ ಸಂಧಿ ಸಂಪೂರ್ಣಂ.

## ೩೪. ಮದನನಿರ್ವೇಗ ದ್ವಾರಾವತೀದಹನ ಸಂಧಿ

ಸುಮತಕುಮತಸಿತಾಸಿತಪದ್ಮಕುಮುದ | ಕ್ಕೊರ್ಮೆವಿಕಾಸಮ್ಲಾನತೆಯ ||
ಮಮತೆಯಿಂದಮಾಡುವ ನೇಮಿರವಿಯೆನ್ನ | ಸುಮನದತಮವಪಿಂಗಿಸುಗೆ ||೧||

ಸುರನರಫಣಿಯಕ್ಷರಾಕ್ಷಸವಿದ್ಯಾ | ಧರಕಿನ್ನರಕಿಂಪುರುಷ ||
ಗರುಡಗಾಂಧರ್ವರೋಲೈಸುತಭೀತಿಯೊ | ಳಿರೆರಂಜಿಪಾಜಿನಪತಿಗೆ ||೨||

ಬಳಿಕೇಕಕುಂಡಲನೆಳ್ದುಮುಗಿದುಕರ | ನಳಿನವನಳಿಕದೊಳಿಟ್ಟು ||
ಕಲಿಸವಿಜಯಬೆಸಸೀಜಲಭಂಡಾರ | ದೊಳಗಮರೇಂದ್ರನಿರ್ಮಿಸಿದ ||೩||

ದ್ವಾರಾವತಿನಗರಿಗೆಯಿದರಕ್ಷಿಪ | ನಾರಾಯಣನರಪತಿಗೆ ||
ಭೂರಿಭೂಭುಜರಿಂದೋಲೈಸುವೀಸಿರಿ | ಯಾರೀತಿಯಿಂಚಿರಮಿಹುದೇ ||೪||

ಎನಲಾಕೇವಲಬೋಧನಿಂತೆಂದನು | ವನರಾಶಿಯಮಧ್ಯದೊಳು ||
ಅನಿಮಿಷಪುರಕೆಣೆಯೆನಿಪಾನಗರಿಯ | ವನಮಾಲಿಯಕೇಡಿನಿರವ ||೫||

ಕಳ್ಳಿಂದೀದೀಪಾಯನನಿಕ್ಕುವ | ದಳ್ಳುರಿಯಿಂದೆಲೆನೃಪತಿ ||
ಫುಲ್ಲನಾಭಸುನೀಪೂರ್ವರುಳಿಯಲಲ್ಲಿ | ಯುಳ್ಳವರೆಲ್ಲರುಗೂಡಿ ||೬||

ಈರಾರುವರುಷವೆಂಬಂದಿಗುರಿವುದಾ | ದ್ವಾರಾವತಿಪುರವರವು ||
ವೀರಜರತ್ಕುಮಾರಕನಂಬಿನಿಂದಾ | ನಾರಾಯಣಗೆ ಸಾವಹುದು ||೭||

ಎನಲುಯಾದವಭೂಪಾಲರಸಂತತಿ | ಯನುಕರಿಸಲುವಿಸ್ಮಯವ ||
ಮನುನಿಭಚರಿತರೋಹಿಣಿಯಗ್ರನಂದನ | ವಿನಯದೊಳಿಂತೆಂದನಾಗ ||೮||

ಭವರಹಿತನೆನಮ್ಮಾರ್ವರಮುಂದಣ | ಭವದವಸ್ಥೆಯಪೇಳ್ವುದೆನಲು ||
ಅವರೆಂದ್ಧರೀಕೃಷ್ಣನಳಿದುವಾಳುಕವೆಂಬ | ವಿವಿಧದುಃಖಮನಿರದೀವ ||೯||

ನರಕದೊಳೊಗೆದೇಳ್ಸಾಗರೋಪಮದಾಯು | ಪರಿಪೂರ್ಣಮಪ್ಪನ್ನಮಿರ್ದು ||
ಮರಣವಹಡೆದುತ್ಸರ್ಪಣಕಾಲದೊ | ಳಿರದೆತೀರ್ಥಂಕರನಹನು ||೧೦||

ನೀನೀಕೃಷ್ಣನಸಾವಿನದುಃಖದಿ | ಜೈನದೀಕ್ಷೆಯನುರೆಧರಿಸಿ ||
ಸ್ವಾನುಭಾವದೊಳಂಗವಬಿಟ್ಟೈದನೆ | ಯಾನಾಕದೊಳುಸಂಜನಿಸಿ ||೧೧||

ಅಲ್ಲಿಯುಳಿದುಕೃಷ್ಣತೀರ್ಥಂಕರಂತರ | ದಲ್ಲೀನೆಲದೊಳುನೀನು ||
ಎಲ್ಲಾಕರ್ಮವಕೆಡಿಸಿತೀರ್ಥಂಕರ | ವಲ್ಲಭನಾಗುವೆಯೆನಲು ||೧೨||

ಇನ್ನುಭವಾಂಬುಧಿಯಿಂದೆಯ್ದಲತ್ಯಾ | ಸನ್ನಸರ್ವೇಶನವಚನ |
ರನ್ನದದೀವಿಗೆಯೆಂದಾಕೃಷ್ಣನ | ತ್ಯುನ್ನತಹರುಷವತಾಳಿ ||೧೩||

ಯಾದವರೆಲ್ಲರುಕೂಡಿಜಿನೇಶನ | ಪಾದಕೆರಗಿಬೀಳ್ಕೊಂಡು ||
ಸಾದರದಿಂದ್ವಾರಾವತಿಗಾದಾ | ಮೋದದಿನಿರದೆಯ್ದಿದನು ||೧೪||

ಅಂದಾದೀಪಾಯನನೀಪುರವೆ | ನ್ನಿಂದಕೆಡುವುದಕ್ಕೇನು ||
ಎಂದುನಿರ್ವೇಗದಿಜಿನದೀಕ್ಷೆಯತರಿ | ಸಂದುಧರಿಸಿಪೋದನಿತ್ತ ||೧೫||

ಎನ್ನಗ್ರಜನಕೊಲ್ಲ್ವೀಬಾಣವೇಕೆಂದು | ಮುನ್ನೀರೊಳಗದಹಾಕಿ ||
ತನ್ನನೆಲೆಯಬಿಟ್ಟುಬೇಡವಳ್ಳಿಗೆಪೋದ | ನುನ್ನತನಾಜರತ್ಕುವರ ||೧೬||

ಪುರುಷೋತ್ತಮನಾಪುರವರಪೊಳಗುಳ್ಳ | ಸುರೆಯನೆಲ್ಲವ ನಿಶ್ಶೇಷ ||
ಭರದಿಂದೂರಮುಂದಣಕಲ್ಲುಡೊಣೆಯೊ | ಳ್ಸುರಿಯಿಸಿ ಸುಖವಿರುತಿರ್ದ ||೧೭||

ಶರಧಿಮಧ್ಯದೊಳುಪುರಂದರನಿರ್ಮಿತ | ಪುರವಿಂತಿದಕಕೇಡಹುದು ||
ನಿರುತಕಂಡಾಮನುಜರಬಾಳ್ವೆಯದುಸು | ಸ್ಥಿರವಹುದೇಯೆಂದುಬಗೆದು ||೧೮||

ಇನ್ನುಸಂಸಾರದಪಂಬಲುಬೇಡೆಂದು | ಚೆನ್ನಿಗನಾಚಿತ್ತಭವನು ||
ತನ್ನಜನನಿರುಗ್ಮಿಣಿದೇವಿಯಪದ | ಸನ್ನಿಧಿಗಿರದೈತರಲು ||೧೯||

ಏನಣ್ಣಪರಿಚಾರಕರೋರ್ವರಿಲ್ಲದೆ | ಹೀನರಂತೇಕಾಕಿಯಾಗಿ ||
ನೀನೋರ್ವನೆಬಂದಬಗೆಲೇಸಾಯ್ತೆನ | ಲಾನುಡಿಗಿಂತೆಂದನಾಗ ||೨೦||

ದೇವಿಬಿನ್ನಪವಿಾಜೀವನನಾದಿಯಿಂ | ದೀವಿಧದಿಂದೋರ್ವನಾಗಿ ||
ಓವದೆತಿರುಗುವನದುನಿಶ್ಚಯಮೆಂಬ | ಭಾವಮನರುಪಲೆಯ್ದಿದೆನು ||೨೧||

ಎನಲಿವಚರಮಾಂಗನುವೈರಾಗ್ಯದ | ಮನದಿಂದೆಯ್ದಿದನೆಂದು ||
ವನಿತಾಮಣಿಹೃದಯದೊಳಳ್ಕಿಯಾನಿಜ | ತನುಜಗಿಂತೆಂದಾಡಿದಳು ||೨೨||

ಧೀರಲಲಿತನವಗೇರುಂಜವ್ವನ | ತೀರದೆಂಬಾನುಡಿಗೇಳಿ ||
ಘೋರಮಪ್ಪೀಸಂಸಾರವಸಲೆದುಃಖ | ತೀರಿದೊಡದುತೀರುವುದು ||೨೩||

ಎಂದುಮತ್ತಿಂತೆಂದನಾನೇಮೀಶ್ವರ | ನಂದದಬೆವಸಾಯವನು ||
ಮುಂದುವರಿದುಮಾಡುವೆನೆನ್ನಮೇಲಣ | ದೊಂದುಮಮತೆಬೇಡನಿನಗೆ ||೨೪||

ಎಂದೊಡೆಲೇತನುಜಾತನಿನ್ನಸುಬಿಡು | ವಂದವೆನಗೆತೀರದೆನಲು ||
ಮುಂದುವರಿದುಜವನೊಯ್ವಾಗಬಿಡದಿ | ರ್ಪಂದನಿಮಗೆಸಮುನಿವುದೇ ||೨೫||

ಇಂತೆಂದಾನಿಜಸುತನನುಡಿಯಕೇಳಿ | ಚಿಂತೆಯಿಂದಾನಿಜಜನನಿ ||
ಅಂತರಿಸದೆ ಮೂರ್ಛೆಗೆಸಲೆಕಂಡಾ | ಕಂತುಶೀತಳದಿನೆಚ್ಚರಿಸಿ ||೨೬||

ಎಲೆತಾಯೆನಿನ್ನಸಂಸಾರದದುಃಖದ | ಬಲುಹನೇವಿಸ್ತರನಿಂದ ||
ಸಲೆಕೇಳಿಯಿಂತಪ್ಪದುರ್ವಿಚಾರಮನೀಸು | ನೆಲೆಗೊಳಿಪುದುಮತವಲ್ಲ ||೨೭||

ಎಂದುಯುಕ್ತ್ಯಾಯುಕ್ತಿಯಿಂನಿಜಜನನಿಯ | ನಂದೊಡಂಬಡಿಸಲುಕೇಳಿ ||
ಇಂದುವದನೆಸಿದ್ಧರನಸೋಂಕಿದಲೋಹ | ದಂದದಿನತಿಶುದ್ಧೆಯಾಗಿ ||೨೮||

ಎಲೆನಿರ್ಮಲಾಂಗನೀನೆಸಗಿದುಜ್ಜುಗದ | ಗ್ಗಳಿಕೆಯೆನಗೆಕರ್ತವ್ಯ ||
ನೆಲೆಯಿದನೀನೀಗಲರಿವೆಯೆನಲುಕೇಳಿ | ಗೆಲವಹಡೆದಚಿತ್ತದಿಂದ ||೨೯||

ಮದನಕುಮಾರಮಾತೆಯುಬೀಳ್ಕೊಂಬಾ | ಪದದೊಳುರತಿವೈದರ್ಭೆ ||
ಉದಧಿಕುಮಾರಿಯುರತಿಭರದಿಂಬಂ | ದೊದವಿನುಡಿದರಿಂತೆಂದು ||೩೦||

ಅಕಟಕಟಾ ಅಸುಗೀಶನಮ್ಮೊಳಗಪ್ಪ | ಸಕಲಭೋಗವನೆಡೆವಿಡದೆ ||
ಅಕಲಂಕನಾಗಿಭೋಗಿಸದೆಬೀಳ್ಕೊಡಪಾ | ತಕವುನಿನಗೆಸಂಭವಿಸದೆ ||೩೧||

ಮಳೆಯುಮುಗಿಲನೋಡಿಮನೆಯೊಳಿರ್ದುದಕವ | ತುಳುಕುವಕಡುಹೆಡ್ಡರಂತೆ ||
ಕುಲಗೆಟ್ಟಸವಣರನುಡಿಗೇಳಿನಮ್ಮನಿಂ | ತಿಳಿಗೆಯ್ವೆನೆಂದೆಣಿಸುವರೆ ||೩೨||

ಕಡುನೇಹದಿಂನಡೆನೋಳ್ಪಕಾಮಿನಿಯುರ | ಕಡೆಗಣ್ಣಳಕಾಂತಿಯೆಂಬ ||
ತೊಡವಕೊಡೆದುಬಗೆಗೆಟ್ಟಬೋಳರದೊಂದು | ಸುಡಿಗೇಳಿಮರುಳಾದೆಯಲ್ಲ ||೩೩||

ಸತ್ತುಸಗ್ಗದಸತಿಯರಸುಕೂಡುವೆನೆಂಬ | ಬತ್ತಲೆಗರಮಾತುಕೇಳಿ ||
ಉತ್ತಮರೂಪವತಿಯರ ಭೋಗಂಗಳ | ಸೊತ್ತರಿಸುವೆನೆನಬಹುದೆ ||೩೪||

ಕಂಡಮಾತ್ರದೊಳುಕೈವಲ್ಯಸುಖವನೀವ | ಪೆಂಡವಾಸವನುರೆತೊರೆದು ||
ಮುಂಡೆಹರಿಕರಮಾತನುಕೇಳ್ವುದಕೆಮನ | ಗೊಂಡೆಯಲಾಜೀವಿತೇಶ ||೩೫||

ಹಸಿದುಹಸಿದುಮುಸುಕಿದಪಿತ್ತೋದ್ರೇಕದಿ | ಹುಸಿದುನುಡಿವಕ್ಷಪಣಕರ ||
ಹಸಗೆಟ್ಟಸುಡಿಗೆಮ್ಮೊಳಪ್ಪೀಸೌಖ್ಯಮ | ನಸಮಾಸ್ತ್ರಕೇಳ್ವಿಡಂಬಿಪರೆ ||೩೬||

ಸೂತಕವಿಲ್ಲದಸುದತಿಯರೊಳುಸುಖ | ಮೇತರದೆಂಬಬಲ್ಲವರ ||
ಮಾತುಗೇಳದೆಪುಷ್ಪವತಿಯರಾಗದಸಗ್ಗ | ದಾತರುಣಿಯರ್ಗೆಳಸುವರೆ ||೩೭||

ಮಾರುಡೆಯಿಲ್ಲಮಜ್ಜನಮಿನಿಸಿಲ್ಲಕ | ಪೂರ್ರಪೀಳಿಯುಗೊಳಲಿಲ್ಲ ||
ಆರೋಗಣೆಯಿಲ್ಲದಾಮಿಟಿಮಿಟಿಸಗ್ಗ | ದಾತನ್ಪ್ರಿಯರಿಗೆಳಸುವರೆ ||೩೮||

ಕರುಣವಿಲ್ಲದೆಕಡುನಂಬಿದವರನಾ | ದರಿಸದೆನಿರ್ವೇಗವೊದವಿ ||
ಪರಿಹರಿಸುವುದುಚಿತವೆಪ್ರಾಣನಾಥಾ | ಪರಮದಯಾಜಲನಿಧಿಯೆ ||೩೯||

ಚಿಕ್ಕಹರೆಯದಚಿನ್ನದಬೊಂಬೆಯಂದದ | ಚೊಕ್ಕಳಿಕೆಯಚೆಲ್ವುವಡೆದ ||
ಉಕ್ಕುವಜವ್ವನೆಯರತೊರೆವುದಕೆತಂ | ದಿಕ್ಕಿದೆಯಾನಿನ್ನಮನವ ||೪೦||

ಚೆಲುವರದೇವನಿನ್ನೊಲವೆಜೀವನವಾಗಿ | ಸಲೆಬಾಳುವೊಲುಮೆ ಗಾತಿಯರ ||
ತೊಲಗಿದೆಯಾದೊಡೆನಿನ್ನಬೆಂಬಳಿಯೊಳು | ತೊಲಗುವುದಸುನಿನ್ನಾಣೆ ||೪೧||

ಒಂದುಜೀವಕೆದೇಹವೆರಡಾಗಿಸಲೆಬಾಳು | ವಂದದಮುಗ್ಧಾಂಗನೆಯರ ||
ಇಂದುನೀಬಿಟ್ಟುತೊಲಗಲಿನ್ನುಜೀವಿಸು | ವಂದವಾವುದುತಿಳುಪೆಮಗೆ ||೪೨||

ಭಾವಿಸೆಪಂಚಮಹಾಪಾತಕದೊಳು | ಸ್ತ್ರೀವಧೆಯೇವೆಗ್ಗಳವು ||
ಭಾವಜ್ಞನೀನಗಲಿದಸಮಯಕ್ಕೆಮ್ಮ | ಸಾವುನಿಶ್ಚಯಮದರಿಂದ ||೪೩||

ಪರರಜೀವಕೆಬಾಧೆವಡಿಸಲುಸಪ್ತಮ | ನರಕವೆಂಬಾಸಮಯವನು ||
ನಿರುತದಿನಂಬಿಯಿಂತಿದನೆಣಿಸುವರೇ | ಸರಸಗುಣಾಲಂಕಾರ ||೪೪||

ತರುಣಿಮನದೊಳುತವರೂರವಿಡಂಬಿಸಿ | ಪಿರಿದುನಚ್ಚಿರ್ದರನೆಮ್ಮ ||
ಪರಿಹರಿಸಿದೊಡೆಪಾತಕಸಂಭವಿಸದೆ | ವರಗುಣಮಣಿಭೂಷಣನೆ ||೪೫||

ಹರಿಗೋಲನೇರಿಸಿನಡೆತಂದುತುಂಬಿದ | ತೊರೆಯನಡುವೆಸಟ್ಟುಗವ ||
ಹರಿದುಹಾಕುವರಂದವನೆಣಿಸುವರೇ | ನೆರೆನಂಬಿದಮಾನಿನಿಯರ ||೪೬||

ಪ್ರಾಯವೆಂಬುದುಪರಿಮಳವಲರೊಳಗಿ | ರ್ಪಾಯಿರವಿದಾದೇಹಿಗಳಿಗೆ ||
ಕಾಯಜಕೇಳಿಂತಿದನುತೊರೆವುದ | ನ್ಯಾಯವಲ್ಲವೆಬಲ್ಲವರಿಗೆ ||೪೭||

ನಂಬಿದಬಲೆಯರನೆಮ್ಮನುನೀನುವಿ | ಡಂಬಿಸಿಕೊಲುವುದುಚಿತವೆ ||
ಎಂಬಸುದತಿಯರೊಳಿಂತುನುಡಿದನಾ | ಶಂಬರಮದಮರ್ದನನು ||೪೮||

ಎಲೆಸತಿಯರಿರಾನೀವುನುಡಿದಮಾತು | ನೆಲೆನಿಮ್ಮಕಣ್ಗಳಮುಂದೆ ||
ಬಲನಾರಾಯಣರೀರ್ವರುಳಿಯೆನಮ್ಮ | ಕುಲಜರನೀನಗರಿಯನು ||೪೯||

ಈರಾರುವರುಷಕ್ಕೆವುರಿಹತ್ತಿಬಳಿಕೀ | ವಾರಿಧಿಕೊಂಬುದೆಂಬುದನು ||
ಕಾರುಣ್ಯನಿಧಿನೇಮಿಜಿನಪತಿನುಡಿದುದ | ನಾರೈದಿಂತಪ್ಪನುಡಿಯ ||೫೦||

ಸುಡಿಯಬಹುದೆಯೆಂದಿವುಮೊದಲಾದಸು | ಣ್ನುಡಿಯಿಂದ್ಧಾಮಡದಿಯರ ||
ತಡೆಯದೆತಿಳುಹಿಬಲಾಚ್ಯುತರಸುವೊಡಂ | ಬಡಿಸಿಬಳಿಕಬೀಳ್ಕೊಂಡು ||೫೧||

ಪದುಳದಿಶಂಭುಕುಮಾರಕನಾರತಿ | ಯುದಧಿವಿದರ್ಭಾದೇವಿ ||
ಮೊದಲಾದಸುದತಿಯರರುಸಾಸಿರವೊಡ | ಸದಿರದೆಬೆಂಬಿಡದೆಯ್ದೆ ||೫೨||

ಸಮವಸರಣಕೆಯ್ದಿಯಾಜಿನಪನಪದ | ಕಮಲಕೆರಗಿದೀಕ್ಷೆಗೊಂಬ ||
ಸಮಯಕ್ಕಾರುಗ್ಮಿಣಿಸತ್ಯಭಾಮಾ | ರಮಣೀಮಣಿಯಾದಿಯಾದ ||೫೩||

ಕಮಲೋದರನಪಟ್ಟದಸತಿಯರುಗೂಡಿ | ಸಮವಸರಣಕೆಯ್ತಂದು ||
ಕ್ರಮದಿಂದೀಕ್ಷೆಗೊಂಬಾವೇಳೆಯೊಳು | ತ್ತಮಗುಣಿಶರಧಿವಿಜಯಸು ||೫೪||

ವಸುದೇವಪರಿಯಂತರತನ್ನನುಜರಾ | ವಸುದೇವನಹಲಧರನ ||
ವಸುಧೀಶವಾಸುದೇವನಸುಕುಮಾರಕ | ರಸಮವೀರರುಮೊದಲಾದ ||೫೫||

ಹರಿವಂಶದಸುಕುಮಾರರೆಲ್ಲರುಗೂಡಿ | ಉರುತರವೈರಾಗ್ಯದಿಂದ ||
ಭರದಿಂಸಮವಸರಣಕೆಯ್ದಿದೀಕ್ಷೆಯ | ಧರಿಸಿದರಿಳೆಪೊಗಳ್ವಂತೆ ||೫೬||

ಶಿವದೇವಿಯಾಹರಿವಂಶದರಾಯರ | ಯುವತಿಯರೆಲ್ಲರುಸಹಿತ ||
ಸವಿನಯದಿಂದಲ್ಲಿಗೆಯ್ತಂದುದೀಕ್ಷೆಯ | ನವಧರಿಸಿದಳತಿಭರದಿ ||೫೭||

ಇಂತಿವರೆಲ್ಲರುದೀಕ್ಷೆಯನಾಂತುನಿ | ಶ್ಚಿಂತದಿವಿಮಲಸಂಯಮವ ||
ಅಂತರಿಸದೆಪಾಲಿಸಿಬಳಿಕಾಜೀವಿ | ತಾಂತ್ಯದೊಳೊಗೆದುತಂತಮ್ಮ ||೫೮||

ಪರಿಣಾಮಾನುಸಾರಿಗಳಾದಾಸ್ವರ್ಗ | ವುರುನಿರ್ವಾಣಪದವನು ||
ಇರದೆಪಡೆದರಿತ್ತಬಲದೇವನಾಮರ | ಹರಸಮೋಲಣಾಮಮತೆಯೊಳು ||೫೯||

ಅಂದುತಪಕೆಪೋದದೀಪಾಯನಮುನಿ | ಮುಂದಣಧಿಕಮಾಸವನು ||
ನಿಂದುವಿಚಾರಿಸದೆಯ್ತಂದನಾವಿಧಿ | ಯಂದವಮೀರುವರಾರು ||೬೦||

ಈಯಂದದಿಂಬಂದಾನಗರಿಯಮುಂದೆ | ಯೊಯ್ಯಾರದಿಂಕೈಯಿಕ್ಕಿ ||
ಆಯತಿಪುಂಗವನಾದಿತ್ಯಪ್ರತಿಮಾ | ಯೋಗದೊಳಗೆನಿಂದಿರಲು ||೬೧||

ಆನಗರಿಯೊಳಿರ್ಪರಾಜಕುಮಾರಕ | ರಾನೆಬೇಂಟೆಗೆಪೋಗಿಮಗುಳ್ದು ||
ಸಾನಂದದಿಬರುತಾಬಿಸಿಲಳುರೆಮ | ತ್ತಾನೀರಳ್ಕೆಯೊಳಾಗ ||೬೨||

ಕಲ್ಲಡೊಣೆಗಳೊಳುಮುನ್ನಹೊಯ್ದಾಕ | ಳ್ಳೆಲ್ಲಮೊಣಗಿಮಳೆಯಿಂದ ||
ಅಲ್ಲಿತೀವಿದನೀರಾಗಿರೆಯದಮನ | ದಲ್ಲಿನೀರೆಂದೇಬಗೆದು ||೬೩||

ಭರದಿಂದೊಡವಂದವರುಕುಡಿದುಸೊಕ್ಕಿ | ಬರುತಿವಿರೊಳುನಿಂದಿರ್ದ ||
ವರಮುನಿದೀಪಾಯನನರೂಪವಕಂಡು | ಪಿರಿದುಕೋಪಾಟೋಪದಿಂದ ||೧೪||

ಈಸವಣನಕಂಡಶಕುನವಿನಾಬೇಂಟೆ | ಯೋಸರಿಸಿತುನಮಗೆಂದು ||
ಆಸಂಯಮಿಯಾಪಾದಮಸ್ತಕವರ | ಹೇಸದೆಬಲುಗುಂಡುಗಳ ||೧೫||

ಹೊರಡಬಾರದತೆರದಿಂಹೂಳಿಯಾಪುರ | ವರಕೆಯ್ದಲಾಮುನಿಪತಿಗೆ ||
ಪಿರಿದಪ್ಪಕೋಪವಂಕುರಿಸಲದನುಕೇಳಿ | ಭರದಿಂದಬಲಕೇಶವರು ||೧೬||

ಬರುತಾಹೂಣಿದಕಲ್ಲನಿವಾರಿಸಿ | ವರಸಂಯಮಿಯಕೋಪವನು ||
ಪರಿಹರವನುಮಾಡಬೇಕೆಂದುಪದಯುಗ | ಕುರುಭೀತಿಯಿಂಬೀಳಲಾಗ ||೧೭||

ಅರಸುಗಳಿರನೀವಿರ್ವರುಳಿವಿರೆಂದು | ಬೆರಳನೆರಡನೆತ್ತಿತೋರಿ ||
ಪಿರಿದಾಗಿಕಂಠಗತಪ್ರಾಣನಾಗಲು | ಪುರಕರಸುಗಳೆಯ್ದಲಿತ್ತ ||೧೮||

ಆಯತಿಯಿಂಸೌಧರ್ಮಕಲ್ಪಕೆಕಟ್ಟಿ | ದಾಯುಷ್ಯವೆಲ್ಲವುತೀರಿ ||
ಆಯತಿಯತಿಮುನಿಸಿಂದುಡುಭವನದೊ | ಳಾಯುಷ್ಯಾವಸಾನದೊಳು ||೧೯||

ಘೋರೆನೆವುರಿವುರಿವುಗ್ರನಂತಗ್ನಿಕು | ಮಾರನಾಗಿಸಂಜನಿಸಿ ||
ದ್ವಾರಾಪತಿಪುರವರದಿನಿಂತಾದೆನೆಂ | ದಾರೈಯುದಲ್ಲಿಂದಿಳಿದು ||೨೦||

ನಿಲ್ಲದೆಬಂದಾಕೇರಿಕೇರಿಯನಿರ | ದೆಲ್ಲವನಿಶ್ಶೇಷಮಾಗಿ ||
ಪೊಲ್ಲದಮುನಿಸಿಂದುರುಪಿದನಾದೇವ | ಗೆಲ್ಲಿಯುದಯೆಮುನಿಸೊದವೆ ||೨೧||

ಪದಿನೆಂಟುಪರಿಯಪ್ರಾಕಾರಸದನಂಗಳು | ಹುದುಗಿದಕೇರಿಯೆಲ್ಲವನು ||
ಅದುಮೊದಲಿದುಕಡೆಯೆನ್ನದೊಂದೇಸೊಳೊ | ಳೊದವಿಸುಟ್ಟನುಕೋಪದಿಂದ ||

ಹೊತ್ತುತ್ತಹೊಗೆವುತ್ತಕತ್ತುತ್ತಕವರುತ | ಸುತ್ತುವರಿದುಪುರವರದ ||
ವೊತ್ತಿದಮನೆಯನೆಲ್ಲವನರೆಗಳಿಗೆಯೊ | ಳೊತ್ತಿಹಿಡಿದುದಾಕಿಚ್ಚು ||೨೩||

ತೆಗೆತೆಗೆವೃತ್ತಮುವಸ್ತುವಿತಾನವ | ತೆಗೆತೆಗೆಗಜವಾಜಿಗಳನು ||
ತೆಗೆತೆಗೆಬಾಲವೃದ್ಧರನಂಬಕಳಕಳ | ವೊಗೆಯಿತ್ತೆಲ್ಲಿನೋಡಿದರು ||೨೪||

ಹಿರಿಹಿರಿಮನೆಯಮೇಲಣಹುಲ್ಲಹುಯಿಹುಯಿ | ಹರವಿಹರವಿಯೊಳುನೀರ ||
ಉರಿವೆಡೆವಳಿಯುಮನೆಯುಮುರಿಮುರಿಯೆಂಬ | ಸರವುಣ್ಮಿತೆಲ್ಲಿನೋಡಿದರು ||೨೫||

ಮಾಳಿಗೆಯೋಡುಬಿಲ್ಲೆಯಮನೆಕಲ್ಲದೇ | ವಾಲಯಮಿಟ್ಟಿಗೆವೆಸದ ||
ಶಾಲೆಗಳೆಲ್ಲಪುಲ್ಮನೆಗೆಮುಂಚುರಿದುವು | ಹೇಳಲೇನದರದ್ಭುತವನು ||೨೬||

ಮನಕದಿಭೋಭೋರ್ಗರೆಂದುರೌದ್ರಸ್ವರ | ವೆಸಗಲಂಬುಧಿಘೂರ್ಣಿಪಂತೆ ||
ದೆಸೆದೆಸೆಗಾಸುಟ್ಟುರೆಗಾಳಿಬೀಸಲು | ಪಸರಿಸಿತಗ್ನಿಯಾಪುರವ ||೭೭||

ಕಂಜನಾಭನಪುರವರವನುಸುಡುವಧ | ನಂಜಯಗತಿಬಲವಾಗಿ ||
ಭಂಜಿಸಿದುದರಿಂದಾವಾಯುವಿಗೆಪ್ರ | ಭಂಜನವೆಸರಂದಾಯ್ತು ||೭೮||

ತೊಟ್ಟನೆಮನೆಮನೆಯೊಳವರಿಯಲುಕಿಚ್ಚು | ಕೆಟ್ಟೆವಿನ್ನೆವೈವೆಂದೆಸುತ ||
ತೊಟ್ಟಿಲಶಿಶುಗಳಮೇಲೆಮುಸುಕಿಬಿಳ್ದು | ಬಿಟ್ಟರಸುವಬಾಣತಿಯರು ||೭೯||

ನಡೆಯಲಾರದಗರ್ಭಿಣಿಯರಬಸುರುಗ | ಳೊಡೆದುಹಾರುವಹಸುಳೆಗಳು ||
ಸಿಡಿಮಿಡಿಗೊಂಡುಸಿಲ್ಕಿದಬಳಿಯಿಂಪೊರ | ಮಡದುರಿದರುವೃದ್ಧರುಗಳು ||೮೦||

ಉರಿಯೊಳುಸಿಲುಕಿದೊಲವಿನೋಪರಕಂಡು | ಹರಿದಾಲಿಂಗನಗೆಯ್ದು ||
ಕರಗಿದರಾಮನೆಯನುಹೊಕ್ಕುನೇಹದ | ತರುಣಿಯರಾಕಿಚ್ಚಿನೊಳಗೆ ||೮೧||

ಜಿನಗೃಹದೊಳುಜೀವನದಿಂಬೇರ್ಕೆಯ್ದು | ತನುವನುರಿವಕಿಚ್ಚಿನೊಳಗೆ ||
ನೆನೆದುತಮ್ಮಂದತಮ್ಮಂಗವಬಿಸುಟಲ್ಲಿ | ಮುನಿಗಳೆಯ್ದಿದರುಸದ್ಗತಿಯ ||೮೨||

ಅಂಗಡಿಯಿಂಬೀದಿಗೆಬೀದಿಗಳಿಂ | ದಂಗಣಕಂ ಅಂಗಣದಿಂ ||
ಹಿಂಗದೆಮನೆಗೆಯ್ದಲೀಸದೆನಗರಜ | ನಂಗಳನುರಿಯುರುಪಿದುದು ||೮೩||

ಈವಿಧದಿಂಭುವನವನುಸುಡುವೆನೆಂ | ಬಾವಿವರವನುರೆತೋರ್ಪ ||
ಆವುಗ್ರನಕಣ್ಣುರಿಯಂತಾಶಿಖಿ | ಯಾವರಿಸಿದುದಾಪುರವ ||೮೪||

ಆಯೆಡೆಯಿಾಯೆಡೆಯೆನ್ನದೆಪುರದೊಳ | ಗಾವರಿಸಿದಕಿಚ್ಚಿನಲ್ಲಿ ||
ಬೇವವರನುತೆಗೆವವರಿಲ್ಲಬೆಂದವ | ಗೋವದಯ್ಯೋಯೆಂಬರಿಲ್ಲ ||೮೫||

ವರನವರತ್ನವಿರಾಜಿತಮಪ್ಪಗೋ | ಪುರಗಳನಡರಿದಕಿಚ್ಚು ||
ಕರವೊಪ್ಪುವರೋಹಣಾದ್ರಿಯನಾಕಾ | ಡುರಿಹಬ್ಬಿದತೆರನಾಯ್ತು ||೮೬||

ಮರಕತಮಣಿಗಂಬದಮದನಿಕೆಗಿಟ್ಟ | ಹರಿನೀಲಮಾಣಿಕ್ಯಗಳು ||
ಸರಿವಳಿಯಿಂದುರಿದುವುಮುತ್ತುಗದೆಳೆ | ವರದವೊಗ್ಗಿಗಳೆಂಬಂತೆ ||೮೭||

ಕರುಮಾಡದಿಂದ್ರನೀಲದಮಣಿಗುರುಜೇರಿ | ಹರಿದುಹೊಳೆವಕೇಸುರಿಗಳು ||
ಪಿರಿದೆಸೆದುವುಕಾರ್ಮುಗಿಲೊಡ್ಡಿನೊಳುಕೆಂಪು | ವೆರೆದವಿದ್ಯುಲ್ಲತೆಯಂತೆ ||೮೮||

ಪಳುಕಿನಪಜ್ಜಳಿಸುವಕಲಿಶದವ[illegible] | ಚ್ಚುಳುವಲಗೆಯುಪ[illegible]ಗೆಗಳು ||
ಘಳಿಲನುರಿದುಕರಗಿದುವಾಕರ್ಪೂರ | ವಳುಕುಗಳುರಿಗಂಡಂತೆ ||೮೯||

ಮರಕತರತ್ನಮಂಟಪದೊಳುಹೊಂಗಿಡಿ | ವೆರಸಿದುರಿಯನಾಲಗೆಗಳು ||
ಪರಿದುವಶೋಕಲತಾಗೃಹದೊಳುಪುಷ್ಪ | ವೆರಸಿಯೊಪ್ಪುವತಳಿರಂತೆ ||೯೦||

ಭಿತ್ತಿಯಮೇಲೆತೆತ್ತಿಸಿದಮಾಣಿಕ್ಯದ | ಪುತ್ತಳಿಗಳಸುಸಪ್ತಾರ್ಚಿ ||
ಹತ್ತಿತುತನ್ನಾಸ್ವಾಹಾಸುದತಿಯು | ನೊತ್ತಿತಳ್ಕೈಸುವಂದದೊಳು ||೯೧||

ವರವಿದ್ರುಮರಂಜಿತಮಂದಿರದೊಳಾ | ವರಿದವಂದಿನಕೇಸುರಿಗಳು ||
ಉರುಗೆಂಡದಮಸೆಗಾಪುರಿಬಿರ್ದುಣ | ಉರುಮುದದಿಂಬಂದತೆರದಿ ||೯೨||

ಚಿತ್ತಲವನದಮಧ್ಯದಸರಸಿಯಸುರಿ | ಹತ್ತಿದುದಂತಕನೆಂಬ ||
ಉತ್ತಮವಿಧಿಯದೀಕ್ಷಿತಸಹೋಮದಕಿಚ್ಚು | ಹೊತ್ತಿಹೊಗೆವಮಾಳ್ಕೆಯೊಳು ||

ಈರೀತಿಯಿಂದರಮನೆಯುರಿದದರೊಳು | ಪೂರಿಸಿದಬಲಾಜನವು ||
ಈರೆಂಟುಸಾಸಿರವೆಲ್ಲವಳಿದುದಾ | ಕ್ರೂರಕರ್ಮದಫಲದಿಂದ ||೯೪||

ಮಗ್ನಮಾನಸನಾದಮಧುವಿಧ್ವಂಸಗೆ | ಭಗ್ನಮಾದುದುಭಾಗ್ಯದೇಳ್ಗೆ ||
ಅಗ್ನಿಪುರುಷಗುದ್ಭವಮಾದಾಪುದ | ರಾಗ್ನಿಗೀಡಾಯ್ತಾನಗರಿ ||೯೫||

ಸ್ತ್ರೀಜನದೊಳುಶಿಶುಗಳೊಳುಪುರುಷರೊಳು | ವಾಜಿವಾರಣಪಶುಪಕ್ಷಿ ||
ರಾಜಿಯೊಳಿನಿಸುಳಿಯದೆಬೆಂದುದೀರಾರು | ಯೋಜನದಾಪುರದೊಳಗೆ ||೯೬||

ಅಲ್ಲಕಲ್ಲೋಲವಾಗುವತೆರದಿಂಪುರ | ವೆಲ್ಲವನಾಶಿಖಿಸುಡಲು ||
ಪುಲ್ಲನಾಭನುತಾನಿದುದೇವತಾಕೃತ | ವಲ್ಲದೆಪೆರತಲ್ಲವೆಂದು ||೯೭||

ವಿದಿತಮಪ್ಪಾಚಕ್ರರತ್ನಮನೆನೆಯಲಂ | ತದುಮೊದಲಾದರತ್ನಗಳು ||
ಪದುಳದಿನವರಕಾವಲದೇವತೆಗಳಾ | ಪದದೊಳದೃಶ್ಯತೆವಡೆಯೆ ||೯೮||

ಇಂತಿದುನಮ್ಮಮುನ್ನಿನಪಾಪಫಲವೆಂದು | ಚಿಂತಾತುರಚಿತ್ತನಾಗಿ ||
ದಂತಸಖಾವಳಿಮುರಿದಮೃಗಾಧಿಪ | ಸಂತೆಮುರಾಂತಕನಿರಲು ||೯೯||

ಬಣ್ಣಿಸೆಬಲ್ಲಿದಬಲರಾಮನೆತ್ತುವ | ತಣ್ಣೀರಾಪುರದುರಿಗೆ ||
ಎಣ್ಣೆಯಾದುದುಮಾರುವರಾರಾವಿಧಿ | ಹಣ್ಣಿದತೇರುತೆಕ್ಕೆಯನು ||೧೦೦||

ಭರದಿಂದಾಬಲಭದ್ರನಿಕ್ಕುವನೀ | ರಿರದುಕ್ಕುವತುಪ್ಪದೊಳಗೆ ||
ಸುರಿವನೀರಂತಾದುದೇನೆಂಬೆನಾವಿಧಿ | ಯಿರದೆಮಾಡುವಮಾಟವನು ||೧೦೧||

ಆರೇವತಿಪತಿಕಂಡಿಂತಿದುದುರ್ನಿ | ವಾರಣಮೆಂದುಕೇಶವನ ||
ಆರಕ್ತಗಂಬಳವೊಂದುಸಹಿತಮಾ | ಪೂರನಿರದೆಪೊರಮಡಿಸಿ ||೧೦೨||

ಶರಧಿಯುತೀರದೊಳಗೆನಿಂದಾಪುರ | ವರಮುರಿವುದವಿಸ್ಮಯದಿ ||
ಅರಸುಗಳೀರ್ವರುನಿಂದುನೋಡಿದರಂ | ದುರಿವುರಿವಾನಗರಿಯನು ||೧೦೩||

ಕಡೆವಕಡಲೊಳುದಿಸಿದವಿಷದುರಿಹೊಗೆ | ಎಡಿದಾಕಡೆಗೋಲಾಗೆ ||
ಕಡುರಂಜಿಪವೇರುಗಿರಿಯೆಸಲಬುಧಿಯು | ನಡುವಣೂರಗ್ನಿಯೊಪ್ಪಿದುದು ||೧೦೪||

ಕಾಲಾಗ್ನಿರುದ್ರಸಂಗದೊಳಿರ್ಪಗ್ನಿ | ಜ್ವಾಲೆರಸಾತಳದಿಂದ ||
ಭೂಲೋಕಕುಚ್ಚಳಿಸಿದಸೂಳ್ಕೆಯೊಳಾ | ಭೀಳವಾಯ್ತಾಪುರದಗ್ನಿ ||೧೦೫||

ಕ್ಷಾರಜಲವನಿರದುಂಡುಬಿಗುರ್ತಾ | ವಾರಿಧಿಯಿಂಸುರನದಿಯು ||
ನೀರುಣಲೇಳ್ವವಡಬಶಿಖಿಯೆನೆಕೃಷ್ಣ | ಸೂರಗ್ನಿಯೆಳ್ದುದಂಬರಕೆ ||೧೦೬||

ಪರಿದುಪಾತಾಳಲೋಕವಸುಟ್ಟುವೇಲಣ | ಮರುತಮಾರ್ಗವಚುಂಬಿಸುತ ||
ಪುರವರವನುಸುಡುವಗ್ನಿಯೊಪ್ಪಿದುದಂದಿ | ನುರುಲಿಂಗವೆಂಬವೂಳ್ಕೆಯೊಳು ||೧೦೭

ಇರುಪೆಯುಗೂಡಿಗಿಕ್ಕಿದಕಿಚ್ಚಿನಂತಿಡಿ | ಕಿರಿದುತುಂಬಿದರಾಜಧಾನಿ ||
ಅರಗುಲಿಯುಸುರನಿಕ್ಕಿದಬಲುಗಿಚ್ಚಿನಿಂ | ನೆರೆಬೆಂದುದವೆಗಳಿಗೆಯೊಳು ||೧೦೮||

ನೀರಜನಾಭನಕೃತಕರ್ಮವಶದಿಂ | ದಾರಕ್ಕಸನಿಟ್ಟಕಿಚ್ಚು ||
ದ್ವಾರಾವತಿಯುಜನಂಗಳನಾಜವ | ನೂರೌತಣವಮಾಡಿದುದು ||೧೦೯||

ಆರುದ್ರನಳಿಕಾಂಬಕದಗ್ನಿಯಾಮೂ | ರೂರನುಂಡಂದಿಂದಮೊದಲು ||
ಆರೈದುಪವಾಸದಿರ್ದವಿಷ್ಣುವಿ | ಸೂರಪಾರಣೆಯುಮಾಡಿದುದು ||೧೧೦||

ಪಿಂಡೀಕೃತಮಾಡಿಪಿಡಿದುಪುರಮನಾ | ದಂಡಧರನುಶಿಖಿಮುಖದಿ ||
ಉಂಡಬಳಿಯಂತೊಳೆವಂದದಿನಾನೀರು | ಕೊಂಡುದುನಿಮಿಷಮಾತ್ರದೊಳು ||

ಪಿರಿದುಪುರವಸುಟ್ಟಪಾತಕವನುಪರಿ | ಹರಿಸುವೆನಿಂತುಟೆಂದೆನುತ ||
ಶರಧಿಸ್ನಾನವಗೆಯ್ದಂತಾ ಅಗ್ನಿ | ಯಿರದಡಗಿದುದಬುಧಿಯೊಳು ||೧೧೨||

ಅಂದುರಾಮಾವತಾರದಿನೆನ್ನಕಿರಿದಿಗೆ | ತಂದೆಯಲ್ಲಾಯೆಂದುಮುನಿದು ||
ಬಂದುಸುಗಿದುದೆಸೆಜಲನಿಧಿಯತಿಭರ | ದಿಂದಸುಂಗಿದುದಾಪುರವ ||೧೧೩||

ಮಚ್ಚರದಿಂಮಾಮಸಗಿಯಸುರನಿಟ್ಟ | ಕಿಚ್ಚುವೊಂದರೆಗಳಿಗೆಯೊಳು ||
ಬಚ್ಚತವುಳಿಯದಂದದೊಳಾಪುರವನು | ಬಚ್ಚಬಯಲಮಾಡಿದುದು ||೧೧೪||

ಈರೀತಿಯಿಂನಿಜಪುರಮಗ್ನಿಯೊಳುಬೆಂದು | ನೀರೊಳುನೆರೆದುದಕಂಡು ||
ಆರಾಜರೀರ್ವರಲ್ಲಿಂತೆಂಕಕಡೆಪೋದ | ದಾರಿವಿಡಿದುಬಂದರಾಗ ||೧೧೫||

ಬಲಯುತಭಟರಥಹರಿಕರಿವಿದಶ್ಯಾ | ಬಲದೇವಬಲದಮಧ್ಯದೊಳು ||
ಸಲೆವಿಭವದಿಬರ್ಪವರೇಕಾಂಗದಿ | ನೆಲದೊಳ್ಳೈದಿದರಘವಶದಿ ||೧೧೬||

ಓಸರಮಿಲ್ಲದೋಲ್ಸೈಸಲುಪದಿನಾರು | ಸಾಸಿರಮುಕುಟವರ್ಧನರು ||
ಭಾಸಿಪವಿಭವದೊಳ್ಸೈತರ್ಪವರಿಂತು | ದೇಶಿಗತನದೊಳೆಯ್ದಿದರು ||೧೧೭||

ಮುಸುಕಿದಮಂಡಳಿಕರಮಧ್ಯದೊಳುರಾ | ಜಿಸುವರಸ್ನದಸತ್ತಿಗೆಯ ||
ಮಿಸುಪತಣ್ಣೆಳಲೊಳಗೆಯ್ದುವರೀಕಾಯ್ದ್ವ | ಬಿಸಿಲೊಳುಬರ್ಪಂತಾಯ್ತು ||೧೧೮||

ಹರಲೊತ್ತಿಹದುಗುವಹಜ್ಜೆಮೇಲಣಬಿಸಿ | ಉರಿಗೆಸೆಡೆವತನುಲತಿಕೆ ||
ಸುರಿವಬೆಮರುಸೂಸುವಸೇದೆಯಿಂದಾ | ನರನಾಥರೆಯ್ತಂದರಾಗ ||೧೧೯||

ಈರೀತಿಯಿಂಬಲಹರಿಗಳ್ವೆತಂದೊಂದು | ಭೀರುತೆಯುಸುಹುಟ್ಟಿಸುವ ||
ಆರಣ್ಯವಹೊಕ್ಕೊಂದುಮಾಕಂದವು | ಹೀರುಹವನುಸಾರಿದರು ||೧೨೦||

ಅಲ್ಲಿಹಸಿದಪುಲ್ಲನಾಭನಕಂಡುನೀ | ಸಿಲ್ಲಿರುನಿನಗಶನವನು ||
ನಿಲ್ಲದೆತಪ್ಪೆನೆನುತತಳರಿದನತಿ | ಬಲ್ಲಿದನಾಬಲದೇವ ||೧೨೧||

ಲೋಕೈಕಬಾಹುಬಲಾನ್ವಿತನುರುಭ | ದ್ರಾಕಾರನಮಳಸ್ವರೂಪ ||
ಆಕಾಂತಾರಮಧ್ಯದೊಳಿರದೆಯ್ದಿದ | ನೇಕಕುಂಡಲನತಿಭರದಿ ||೧೨೨||

ಅತಿವೇಗದಿಂದೆಯ್ತಂದಾಕುರುಭೂ | ಪತಿಯುಮೊಮ್ಮಗಕುಯವರನು ||
ಪ್ರತಿಪಾಲಿಸುವಧನದಕುತ್ಮೆಯೆಂಬು | ನ್ನತಿಕೆಯಪುರಕೆಯ್ದಿದನು ||೧೨೩||

ದ್ವಾರಾವತಿಯುರಿದುದಕಂಡಾಬಲ | ನಾರಾಯಣರೀರ್ವರುಳಿಯೆ ||
ಆವೂರೊಳಗೆಲ್ಲರುಸತ್ತರೆಂದೆಂಬಾ | ವಾರತೆಯನುಕೇಳುತವೆ ||೧೨೪||

ಆರಯ್ಯದೆಕಡುಹರ್ಷದಿಂದಾದುರ್ವಿ | ಚಾರಿಮಾಡಿಸಿದನೋಕುಳಿಯ ||
ಆರವಿಯನುರಾಹುಗ್ರಹಿಸಿದೊಡೊಳ್ಳೆ | ನೀರೊಳುತಲೆಯೆತ್ತುವಂತೆ ||೧೨೫||

ಅಂತದನೀಕ್ಷಿಸುತಾಬಲದೇವನ | ತ್ಯಂತದುಃಖಾನ್ವಿತನಾಗಿ ||
ಪಿಂತಣಪಿರಿದಪ್ಪದುಷ್ಕೃತಫಲವೆಸು | ಗಿಂತಾಯ್ತೆಂದೆಣಿಸುತವೆ ||೧೨೬||

ನಾಗದತ್ತನೆಂಬಪರದನಂಗಡಿಗಾಗಿ | ಪೋಗಿತನ್ನೇಕಕುಂಡಲವ ||
ರಾಗದಿನಿತ್ತುಕಲಸುಗೂಳನೀಸಿಕೊಂ | ಡಾಗರಿಮನುತಿರುಗಿದನು ||೧೨೭||

ಭೂಲೋಕವನುಪಾಲಿಸುವಪರಾಕ್ರಮ | ಶಾಲಿಯಚ್ಯುತನಗ್ರಜನು ||
ಪೇಳಲೇನುಕಾಲವಶದಿಕುಂಡಲವನು | ಕೂಳಿಗೆಮಾರುವಂತಾಯ್ತು ||೧೨೮||

ಆನೃಪವರನಾಕಾರಕೆವಿಸ್ಮಯ | ಮಾನಸನಾನಾಗದತ್ತ ||
ಭೂಸುತಮಪ್ಪೀರತ್ನಕುಂಡಲಮಿದ | ನಾನುಧರಿಸಲಳವಲ್ಲ ||೧೨೯||

ಎಂದಾಕುಯುವರಗಾಕುಂಡಲವನು | ತಂದುಕೊಡಲುಕಂಡವನು ||
ಮಂದೇತರವಿಸ್ಮಯನಾಗುತಿಂತಿದ | ತಂದುಕೊಟ್ಟವನಾರೆನಲು ||೧೩೦||

ಭುವನೈಕರೂಪನುತ್ತಮಲಕ್ಷಣಾನ್ವಿತ | ಪ್ರವಿಮಲತರಲಲಿತಾಂಗ ||
ತವಕದಿನೋರ್ವಕಾರಣಪುರುಷನುಬಂದು | ನವರತ್ನಕುಂಡಲವಿತ್ತು ||೧೩೧||

ಕಲಶುಗೂಳನುಕೊಂಡುಪೋದನೆಂಬುದಕೇಳಿ | ನೆಲೆಯಿದುಮತ್ತೋರ್ವನಲ್ಲ ||
ಬಲರಾಮನೆಂದೇಯನುಮಾನದಿಂದರಿ | ದಲಘುತರಕ್ರೋಧದಿಂದ ||೧೩೨||

ಅಂದುಪಾಂಡವರನೇಳಿಸಿನಮ್ಮವಂಶವೆಂ | ಬೊಂದುಮಹಾರಣ್ಯವನು ||
ದಂದಹ್ಯಮಾನವುಪ್ಪಂದದಿನುರುಹಿಸಿ | ಕೊಂದುನಿಶ್ಶೇಷಂಗೆಯ್ದ ||೧೩೩||

ಪಗೆಯೆನಗೊಳಗಾದನೆಂದುಬಗೆದುತ | ನ್ನಗಣಿತಮಪ್ಪಸೈನ್ಯವನು ||
ಮಿಗೆಮುನಿಸಿಂಕೂಡಿಕೊಂಡುಬಂದಾಸಾ | ಸಿಗನೆಯ್ದುವೆಡೆಗೆಯ್ತರಲು ||೧೩೪||

ತೀವಿದಬಲವನುಕಂಡುಹರಿಯಪುಣ್ಯ | ದೇವತೆಗಳಿರೀಕಾಳ ||
ಓವದೆಯಾನಿಮೆಂದಾಕಾಶಕಿಡಲದು | ಭೂವಲಯಕೆಬೀಳಲಾಗ ||೧೩೫||

ಎನ್ನಸುಕೃತದೇವತೆಗಳಿರಾನೀವೀ | ಯನ್ನಮನಾನಿಮೆಂದೆನಲು ||
ಚೆನ್ನಾಗಿಯವುಬಂದಾತುರಕ್ಷಿಸುತಿ | ರ್ಪನ್ನಗಮಾರಿಪುಸೇನೆ ||೧೩೬||

ಮುಸುಕಲುಕಂಡುಮುನಿದುಮಿಗವಿಂಡನು | ಹಸಿದಹೆಬ್ಬುಲಿಹೊಗುವಂತೆ ||
ಅಸಮಪರಾಕ್ರಮಿಯಾದುರ್ಬಲವನು | ಕುಸುರಿದರಿದುಕೊಂದನಾಗ ||೧೩೭||

ಕರಿಯಿಂಕರಿಯನಶ್ವಗಳಿಂದಶ್ವಮ | ನುರುರಥದಿಂರಥಗಳನು ||
ನರರಿಂನರರನೋವದೆಬಡಿದಾನಿ | ಷ್ಠುರವಿಕ್ರಮಿಕೊಂದನಾಗ ||೧೩೮||

ಬಲ್ಲಾನಬಾಳೆಯವನವಹೊಕ್ಕಂದದಿ | ಬಲ್ಲಿದನಾರಿಪುಬಲವ ||
ಎಲ್ಲವಕೊಲಲಾಕುಯುವರನತಿನೊಂ | ದಲ್ಲಿಂದೋಡಿದನಿತ್ತ ||೧೩೯||

ಬಲಯುತನಾಕಲಸೋಗರವನುಕೊಂ | ಡಲಸದೆಬಂದುದೂರದೊಳು ||
ನೆಲದೊಳಗೊರಗಿದಮುರರಿಪುವನುಕಂ | ಡಲಘುದುಃಖಾನ್ವಿತನಾಗಿ ||೧೪೦||

ಎಲೆತಮ್ಮರತ್ನರಂಜಿತನವಶಯ್ಯಾ | ತಳದೊಳುಮಣಿದೀಪಗಳು ||
ಜ್ವಲಿಯಿಸುತಿರೆಮಾಣಿಕಮಂಚದಮೇಲೆ | ಮಲಗುವಗೀವಿಧಿಯಾಯ್ತೆ ||೧೪೧||

ಧವಲಾತಪತ್ರದತಣ್ಣೆಳಲೊಳಗಾ | ಧವಳಾಕ್ಷಿಯರುಢಾಳಿಸುವ ||
ಧವಳಚಾಮರಗಳಿಸೆಸೆವೀಯದುಕುಲ | ದವಗಿಂದೀವಿಧಿಯಾಯ್ತೊ ||೧೪೨||

ಮೇದಿನಿಯೊಳಗುಳ್ಳರಸುಮಕ್ಕಳುನಿನ್ನ | ಪಾದಮೂಲಕೆಮುಗ್ಗುತಿರಲು ||
ಸಾದರದಿಂದಿರ್ಪಮುರವೈರಿಯೇಕಾಕಿ | ಯಾದೆಯಲಾಕರ್ಮವಶದಿ ||೧೪೩||

ಎಂದುರೆಪಲುಬುತಕಣ್ಣಕಡೆಗೆನೀರ | ತಂದುತಮ್ಮನಬಳಿಗೆಯ್ದಿ ||
ಒಂದಿದಮುರುಕದಿಕುಳ್ಳಿರ್ದುಕುಯುವರ | ಸಂದಣಿಸಿದಸೇನೆವೆರಸಿ ||೧೪೪||

ಬಂದುತಾಗಲುತಾನಾಬಲವನುಬಡಿ | ದಂದಮನುಸುರಲುಕೇಳಿ ||
ಇಂದೀವರನಾಭಸದ್ಧೈರ್ಯವಾಯಿದೆ | ಯಿಂದಹಪ್ಪನೆಹಾರಿದುದು ||೧೪೫||

ಇಲ್ಲಿನಾವಿರ್ಪುದೆಲೇಯಣ್ಣಕಾರಿಯ | ಮಲ್ಲೆಂಬಸುಡಿಯನುಕೇಳಿ ||
ಬಲ್ಲಾಳಂದೆಸಗಿದಪಾಪವಶದಿಂ | ಹುಲ್ಲಾಳಾದನೆಂದೆನುತ ||೧೪೬||

ಅಕಟಕಟಾಪಾಪಿವಿಧಿಯೆಭುವನಸ್ತುಂ | ಭುಕನಚಳಿತನಪ್ರತಿಮನು ||
ಅಕಲಂಕವಿಕ್ರಮಾಸ್ವಿತನೀತೆರದಿಂ | ಚಕಿತಹೃದಯನಾದನಲ್ಲ ||೧೪೭||

ಎಂದಾತನುಚಿಂತಿಸುತಾಹರಿಗೂಡಿ | ಮುಂದಕೆತೆರಳಿಯಲ್ಲಿಂದ ||
ಗೊಂದಣಗೊಂಡುಕೊಳ್ಮಿಗಗಳ್ತೀವಿದ | ಮುಂದೇತರೋಲ್ವಣಮಾದ ||೧೪೮||

ಕೌಶಂಬಿಯೆಂಬಮಹಾವಿಪಿನದೊಳೊಂದು | ಕ್ರೋಶಪೂರಮೆಯ್ತಂದು ||
ಆಸಕ್ತಿಯಿಂದೊಂದುವಟಭೂಜಕಾರಾಮ | ಕೇಶವರಿರದೆಯ್ತಂದು ||೧೪೯||

ಪಿರಿದಾದುದುನೀರಳ್ಕೆಯೆಸಲುಹಲ | ಧರನಾನೆಳಲೊಳೊರಗಿದ ||
ಹರಿಗಾರಕ್ತಕಂಬಳವಹೊದಿಸಿನೀರ | ತರಲೆನುತ್ತೈದಿದನಿತ್ತ ||೧೫೦||

ಅಂದಾನೇಮೀಶನವಚನಕೆಭರ | ದಿಂದಜರತ್ಕುಮಾರಕನು ||
ತಂದುಜಲಧಿಯೊಳುಹಾಕಿದಬಾಣವ | ನೊಂದುಮೀನುನುಂಗಲದನು ||೧೫೧||

ಜಾಲಗಾರನೋರ್ವಹಿಡಿದದರೊಡಲನು | ಸೀಳಿಯಾಬಾಣವತೆಗೆದು ||
ಲೀಲೆಯಿಂದಕಾಣ್ಕೆಯನೀಯೆವಿಕ್ರಮ | ಶಾಲಿಜರತ್ಕುಮಾರಕನು ||೧೫೨||

ಹರುಷದಿನಾಸರಲನುಕೊಂಡುವಿಪಿನಾಂ | ತರದೊಳುತೊಳಲುತಬಂದು
ಮರದಡಿಯೊಳಗೊಂದುಕಾಲೊಳುಕಾಲಿಟ್ಟು | ಹರಿಯಾರಕ್ತಗಂಬಳವ ||೧೫೩||

ಮುಸುಕಿಟ್ಟುಮಲಗಿರೆಪಲವಣ್ಣದಿಂರಂ | ಬಿಸುವಮೃಗಮಿದೆಂದುಬಗೆದು ||
ಎಸಲಾಕಣಿಕೃಷ್ಣನಕಮಲಾಂಕಿತ | ಮಿಸುಪಮೆಲ್ಲಡಿಯತಾಗಿದುದು ||೧೫೪||

ಆವೆಲ್ಲಡಿಯುಸುತಾಗಿಮೇಗಡೆಗಾಗಿ | ಯಾವಮಾರ್ಗಣಮೂಡಲೊಡನೆ ||
ದಾಮೋದರನೆಳ್ದುಕಿತ್ತುವುತ್ತದನು | ದ್ದಾಮಕೋಪದೊಳಿರಲಾಗ ||೧೫೫||

ಶರದಿಂದಾಮೃಗವಳಿಯಿತೆನುತಕಡು | ಭರದಿಂದಲ್ಲಿಗೆಯ್ತಂದು ||
ಹರಿಯನುಕಂಡಕಟಾಕೆಟ್ಟೆನಣ್ಣಾ | ಪಿರಿದುಪಾತಕಿನಾನೆಂದು ||೧೫೬||

ಧರೆಯೊಳಗುರುಳಿಶೋಕಂಗೆಯ್ವುತಿರಲಾ | ಮುರರಿಪುಏಂತಿದೇನೆಂದು ||
ಒರೆಯೆಜರತ್ಕುಮಾರಕನಳುತಿಂತೆಂದ | ಸರಸಸಿನ್ನನುಮೃಗವೆಂದು ||೧೫೭||

ಊಹಿಸಿಪಾಪಕರ್ಮದಿಯೆಚ್ಚೆನೆಂದೀ | ದ್ರೋಹಿಯುನಿಕ್ಕಾಜ್ಞೆಗೆಂದು ||
ಹಾಹಾಕ್ರಂದನಮಂಮಾಡುತ್ತಿರ | ಲಾಹರಿಯಿಂತೆಂದನಾಗ ||೧೫೮||

ವಸಧಿಯುಜೀವಸವಸುಪಡಬಾನಲ | ವೆನಿತೆನಿತಸುಹೀರಿದೊಡೆ ||
ಮುನಿಯುದವಸಧಿಯುಂದದಿವನಜೋದರ | ನಿನಿಸುಮುನಿಯದಿಂತುಸುಟದ ||೧೫೯

ಏಕೆಯನುಜನೀಸವಿವೇಕಿಯಲ್ಲಾ | ಲೋಕೈಕಪತಿನೇಮಿನಾಥ ||
ಆಕೇವಲಬೋಧನಾಡಿದುದುಳಿವುದೆ | ಸಾಕುಮಾಣಾದುಃಖವನು ||೧೬೦||

ನೀನಿಲ್ಲಿತಳುವಾಡೆಬಲರಾಮನೆಯ್ತಂ | ದೀನನ್ನಘಾಯವಕಂಡು ||
ತಾನತಿಕೋಪದಿಸಿನ್ನನುಕೊಲ್ಲದೆ | ಯಾಸುವನಲ್ಲದರಿಂದ ||೧೬೧||

ಇಲ್ಲಿಂದಪೋಗೆನಲಾತನುಪೋಗಲು | ಫುಲ್ಲಾಕ್ಷನಾಕಂಬಳವನು ||
ನಿಲ್ಲದೆಹೊದೆದೆನ್ನನೆಚ್ಚವನಸುಜಾತ | ನಲ್ಲದನ್ನಿಗನಾದೊಡವನ ||೧೬೨||

ಕೊಲ್ಲದೆಮಾಣೆನೆಂಬಾರೌದ್ರಧ್ಯಾನ | ದಲ್ಲಿಏಗತಜೀವನಾಗಿ ||
ಪೊಲ್ಲಮಪ್ಪಾಮೂರನೆಯನರಕಬಿಲ | ದಲ್ಲಿಸಂಜನಿಸಿದನಿತ್ತ ||೧೬೩||

ಹಲಧರನುದಕವನರಸಿತೊಳಲ್ದೊಂದು | ಕೊಳನಕಂಡದರೊಳುಹೊಕ್ಕು ||
ಜಲರುಹಪತ್ರದಘಟಿಕೆಯೊಳಾನಿ | ರ್ಮಲಜಲವನುತೀವಿಕೊಂಡು ||೧೬೪||

ಅನುಜನಲ್ಲಿಗೆಬಂದುನಿಜನಿದ್ರೆಗೈದಪ | ನೆನುತತಿಕರುಣಾಹೃದಯನು ||
ಇನಿಸುಪೊತ್ತುಕುಳ್ಳಿರಲಚ್ಯುತನಪದ | ವನಜವನೊಣಮುತ್ತುತಿರಲು ||೧೬೫||

ಎಲ್ಲಿಯದೀನೊಣವೆಂದುಪಚ್ಚಡಿಯನೋಡ | ಲಲ್ಲಿಯಘಾಯವಕಂಡು ||
ತಲ್ಲಣದಿಂದನುಜಾತನಮೊಗವನು | ಮೆಲ್ಲನೆತೆಗೆದುನೋಡಿದನು ||೧೬೬||

ಗತಜೀವನಾಗೆಹಾಹಾಯೆಂದುಮೂರ್ಛೆ | ಗತನಾಗಿನೆಲದೊಳುಬಿಳ್ದು ||
ಅತಿಬಲನೆಂತಾನುವೆಚ್ಚಳ್ತುನೋಡಿಯ | ಚ್ಯುತನಿಸಗೀವಿಧಿಯಾಯ್ತೆ ||೧೬೭||

ಹಾಕಟ್ಟೆಹಾಕಟ್ಟೆನೆಂದುದುಃಖಾಗ್ನಿಯೊ | ಳಾಕೋಪಾಗ್ನಿಯಕೂಡಿ ||
ಲೋಕೈಕವಿಕ್ರಮನಿನ್ನಸುನಿದ್ರೆಯೊ | ಳೀಕಾಲನೆಚ್ಚಿಪೋದವನ ||೧೬೮||

ಕೊಲ್ಲದೆಬಿಡೆನೆಸುತಾಭೀಮಾಟವ | ಯಲ್ಲಿರ್ದುದೊಂದುಹೆಮ್ಮರನ ||
ಸಿಲ್ಲದೆಕಿತ್ತುಪೆಗಲೊಳಿಟ್ಟುಭರದಿಂ | ದಲ್ಲಿಂಮುಂದಕ್ಕೆನಡೆದು ||೧೬೯||

ಆಕಾನನದೆಂಟುದೆಸೆಯೊಳಗಾಕಡೆ | ಯಿಾಕಡೆಯೆನ್ನದೆತೊಳಲಿ ||
ಆಕೋಪಾಂತಕನಾದೊಪ್ರೇಹಿಯಕಾಣ | ದಾಕೃಷ್ಣನೆಡೆಗೈದಿದನು ||೧೭೦||

ಅಂತುಬಂದಾಹೆಣನನುತಳ್ಕೈಸಿವಮು | ರಾಂತಕಮಗಧವಿಧ್ವಂಸಿ ||
ಕಂತುಜನಕಕಂಸಕೋಳಾಹಳನಿನ | ಗಿಂತೀಸಾವೊದಪಿದುದೇ ||೧೭೧||

ಹಾಹಾಹರಿಕುಲಗಗನಭಾಸ್ಕರನೇ | ಹಾಹಾಹರಿವಂಶತಿಲಕ ||
ಹಾಹಾಹರಿವಂಶವನಧಿಶಶಾಂಕ | ಹಾಹಾಯೆನ್ನಸುಜಾತ ||೧೭೨||

ಹಾಹಾನೃಪಕುಲಚೂಡಾಮಣಿಯೇ | ಹಾಹಾಮನುಜಮಂದಾರ ||
ಹಾಹಾರಿಪುನೃಪವಿಪಿನಕುಠಾರ | ಹಾಹಾಯೆನ್ನಸುಜಾತ ||೧೭೩||

ಆತೊಟ್ಟಿಲಶಿಶುವಾಗಿಮೊಲೆಯುಣಚ್ಚಿ | ಪೂತಿನಿಯಸುವನುಹೀರಿ ||
ಖ್ಯಾತಿಪಡೆದನಿನ್ನಾಪುಣ್ಯದಫಲ | ಬೀತುದಲ್ಲಾಬಿಸಜಾಕ್ಷ ||೧೭೪||

ಬೆಟ್ಟಕೆಗರಿಮೂಡಿದವೊಲುರೂಪಳ | ವಟ್ಟಿರಗಿದಕಾಕನನು ||
ರಟ್ಟಿಮುರಿದವೊಲುಪೊಡೆದನಿನ್ನೆಳವಿಯ | ದಿಟ್ಟತನಮದೇನಾಯ್ತೋ ||೧೭೫||

ನಾರಸೀಳುವತೆರದಿಂಸೀಳಿಬಿಸುಟುಕಿ | ಶೋರಾಸುರನಮರ್ದಿಸಿದ ||
ತೋರಹತೋಳಬಲುಮೆಯೇನಾದುದೋ | ವೀರನಾರಾಯಣನಿನ್ನ ||೧೭೬||

ಬೆಂಡಿನಬಂಡಿಯಸೂದೆವಂತಾವು | ದ್ದಂಡಶಕಟರಾಕ್ಷಸನ ||
ದಿಂಡುಗೆಡಹಿಕೊಂದನಿನ್ನೆಳವರೆಯದ | ಗಂಡುತನಮದೇನಾಯ್ತೋ ||೧೭೭||

ರಾಸಭರಾಕ್ಷಸನನುಪಮಶಕ್ತಿಯ | ನೋಸರಿಸದೆನೆಗ್ಗಿಮುರಿದ ||
ಸಾಸಿಗತನವೇನಾಯಿತೊಪವಿನಾರು | ಸಾಸಿರಗೋಪಿಯರರಸಾ ||೧೭೮||

ಕತ್ತರಿಯಂತೆಯಿರುಂಕಿಕೊಲಲ್ಬಂದ | ಮತ್ತಿಯಹೆಮ್ಮರಗಳನು ||
ಕಿತ್ತುಹಾಕಿದನಿನ್ನಬಾಲಕಾಲದಬಲು | ಪೆತ್ತಪೋದುದೊಕಂಸಾರಿ ||೧೭೯||

ತಾಳವೃಕ್ಷವಕಿತ್ತಾಕೈಟಭನಕೈಯ | ನಾಳೋಚಿಸದೆಮುರಿದಿಟ್ಟ ||
ಕಾಳಿಗಸಾಗಸಹತಿಸಿದನಿನ್ನಪ | ಶಾಲವಿಕ್ರಮವೇನಾಯ್ತೋ ||೧೮೦||

ಅಸುರರಹತಿಸಿಯದ್ರಿಯನೆತ್ತಿ ಫಣಿಪನ | ನ್ನೊಸೆದೇರಿಯೇರಿಸಿಧನುವ ||
ಉಸುರೇರಿಸಿಶಂಖವನುಮಲ್ಲರಕೊಂ | ದೆಸಕವೇನಾಯ್ತೊಮುರಾರಿ ||೧೮೧||

ಆರಡಿಕಾರನೆನಿಪಕಂಸನಕಟ್ಟ | ಕೂರಿನಮಧುಕೈಟಭರ ||
ಗಾರುಮಾಡಿಕೊಂದನಿನ್ನಬಲುಮೆಯೆಲ್ಲಿ | ಸೂರೆಹೋದುದೊಸಿರಿಯರಸಾ ||೧೮೨||

ಅಂದುಮಗಧನಿಟ್ಟಾಚಕ್ರವಿಗೆಬಲ | ವಂದುದುಹರಿಕೇಳುನಿನ್ನ ||
ಇಂದೀಹೀನಮಾನಸನೆಚ್ಚ ಕೊಳೆಯಂಬು | ಕೊಂದುದಲಾಕರ್ಮವಶದಿ ||೧೮೩||

ಚಕ್ರಸಹಿತಪರಚಕ್ರವೆಲ್ಲವನುಪ | ರಾಕ್ರಮದಿಂಸಾಧ್ಯಮಾಡಿ ||
ಶಕ್ರಾನುಜನಾಗಿಸಂಪದವಡೆದೀ | ಚಕ್ರಿಗಿಂತೀವಿಧಿಯಾಯ್ತೇ ||೧೮೪||

ನಾನಾದೇಶದನರನಾಥರನಿರ | ದಾಸದೆಯೆರಗಿಸಿಕೊಂಬ ||
ಶ್ರೀನಾರೀಪತಿನಿನ್ನಮೆಲ್ಲಡಿಗಳ | ನೀನೊಣಮುತ್ತುವಂತಾಯ್ತೆ ||೧೮೫||

ಪಸುಳೆವರೆಯದಿಂದಿಳೆಯಚ್ಯುತನೆಂದು | ಪಸರಿಸಿದನ್ವರ್ಥನಾಮ ||
ಪುಸಿಯಾಯಿತಲ್ಲಾಕ್ರೂರಕೃತಾಂತನ | ದೆಸೆಯಿಂನಿನಗೆಮುರಾರಿ ||೧೮೬||

ಕ್ರೂರಕೃತಾಂತಗೆಭಸ್ಮಕವೆಂದೆಂಬ | ರೋಗಮುದಯಮಾಗದೊಡೆ ||
ಈರಾರುಗಾವುದತುಂಬಿದನಿನ್ನೂರ | ನಾರೋಗಣೆಯಮಾಡುವನೆ ||೧೮೭||

ಸ್ಥಿರಮಲ್ಲಮಾತನುವೀಮನೆಯಾಯ್ತೆ | ಸಿರಿಯೆಂಬಾಶ್ರುತವಚನ ||
ನಿರುತದಿದೃಷ್ಟಾನುಭೂತವಿಂದೆನಗಾ | ಯ್ತರವಿಂದನಾಭನಿನ್ನಿಂದ ||೧೮೮||

ಸಣ್ಣದುಪ್ಪಳವಂಚೆಯಹಾಸಿನಮೇಲೆ | ಬಣ್ಣದುಟಿಯಬಾಲೆಯರೊಳು ||
ತಣ್ಣನೆತಣಿದೊರಗುವನೀರಗೆಹುಡಿ | ಮಣ್ಣೊಳುಮಲಗುವಂತಾಯ್ತೇ ||೧೮೯||

ಎಂದಾಬಲಭದ್ರನುನಾನಾಪರಿ | ಯಿಂದಪಿರಿದುಶೋಕಗೆಯ್ದು ||
ಬಂದಿದದುಃಖದಿಮತಿಗೆಟ್ಟುಮರುಳಾಗಿ | ಮುಂದುಗೊಂಡಾಮರುಕದೊಳು ||

ಹರಿನೀಲಗಿರಿಯತಾರಾಚಲವೆತ್ತುವ | ದೊರೆಯೆನೆಕೃಷ್ಣನಂಗವನು ||
ಸುರುಚಿರಮೂರ್ತಿಹಲಾಯುಧನೆತ್ತಿಕಂ | ಧರದೊಳುಧರಿಸಿತಿರುಗಿದ ||೧೯೧||

ಕಡುಸೊಗಯಿಸುವಕಲಾಭೃದ್ಬಿಂಬದ | ನಡುವಣಕರೆಯೆಂಬಂತೆ ||
ಪೊಡೆಯಲರನತನುರುಚಿಬಲರಾಮನ | ಪೆಡತಲೆಯೊಳಗೊಪ್ಪಿದುದು ||೧೯೨||

ಭೂನಾಥರುಗಳೋಲಗಶಾಲೆಗೆಯ್ತಂದು | ನಾನಾವಿಧದಿಶೃಂಗರಿಸಿ ||
ಅನತರಾಗಿಮೆಂದೆಸುತಾಜ್ಞಾಪಿಸು | ತಾನಂದುಭ್ರಮಿಯಿಸುತಿಹನು ||೧೯೩||

ಅಡವಿಯಮಿಗಗಳಿರಾಯೆನ್ನ ಪೆಗಲೇರಿ | ಕಡುಮುನಿದೆನ್ನ ಸುಜಾತ ||
ನುಡಿಜುನೆನ್ನೊಳುನೀಮಾತನಮುನಿಸನು | ಬಿಡಿಸಿಯೆಸುತಗಳವುವಸು ||೧೯೪||

ಈತೆರದಿಂಬಲರಾಮಸುತನ್ನನು | ಜಾತನಶಬವಷಣ್ಮಾಸ ||
ಪ್ರೀತಿಯಿಂದಮರುಳಾಗಿಪೆಗಲೊಳಿಟ್ಟು | ಭೂತಳದೊಳುತಿರುಗುತಿರೆ ||೧೯೫||

ಸುರಲೋಕದಿಂಸಿದ್ಧಾರ್ಥನೆಂದೆಂಬೋರ್ವ | ಸುರಗೂಡಿನ್ನೈಗಮದೇವ ||
ಧರೆಗಿಳಿದಾಬಲನೆಯ್ದುವದಾರಿಯೊ | ಳಿರದೆವಿಗುರ್ವಣೆಯಿಂದ ||೧೯೬||

ಅರೆಯೊಳಗಡಿಮೇಲಾಗಿಬಾಳೆಯುಬಿತ್ತಿ | ದರೆಗುಂಬದಿಂನೀರತಂದು ||
ಎರೆವುತಿರಲುಕಂಡುಬಲರಾಮನಿಂತೆಂದ | ಸೆರೆಹುಚ್ಚುಗಳಿರನೀವೇಕೆ ||೧೯೭||

ಅಲ್ಲದಕೃತ್ಯಮನೆಸಗುವಿರೆನೆಪಗ | ಲ್ಲಿಹೆಣನಹೊತ್ತಿಹುದು ||
ಅಲ್ಲದಕೃತ್ಯಮಲ್ಲವೆಯೆಸಲಾಬಲ | ಪೊಲ್ಲಮುನಿಸಿನಿಂತೆಂದ ||೧೯೮||

ಎನ್ನಸುಜಾತನಿಳಾಚಕ್ರೇಶ್ವರ | ನುನ್ನತಪುರುಷೋತ್ತಮನು ||
ಮುನ್ನೋಡದೆಪೆಣನೆಂದುಮಾತಾಡುವು | ದನ್ಯಾಯವಲ್ಲವೆಪೇಳಿ ||೧೯೯||

ಎಂದುನಿರ್ಘಾಟಿಸಲವರಲ್ಲಿಂಪೋಗಿ | ಮುಂದೊಂದೆಡೆಗೆಯ್ತಂದು ||
ಒಂದು ಕುಡಿಕೆಯೊಳುನೀರಕಡೆವುತ | ಲ್ಲಿಂದಮಳಲಹಿಳಿಯುತಿರೆ ||೨೦೦||

ಮುನ್ನಿಸಂತೆಬಲನವರೊಳುಸುಡಿಯಲು | ನಿನ್ನಸೀನರಿಯದೆನಮ್ಮ ||
ಚೆನ್ನಾಗಿನುಡಿದೆಹೆಣನಹೊತ್ತೆಯೆನಲುಸಂ | ಪನ್ನನದಕೆಬಗೆಗೊಂಡು ||೨೦೧||

ಮೋಹಾಂಧಕಾರತೊಲಗೆಪೆಗಲೊಳಗಿ | ರ್ದಾಹರಿಸತ್ತನೆಂಬುದನು ||
ಊಹಿಸಿಯರಿದುನೆಲಕ್ಕಿಳುಹಿದನಾ | ಸಾಹಸಿಯಾಬಲರಾಮ ||೨೦೨||

ಈತನಗಲ್ಕೆಯೊಳೆಸಗೆವಿವೇಕಮು | ತೀತಮಾಯ್ತಂತದರಿಂದ ||
ಮಾತೇನಧಿಕಭವಾಂಬುಧಿಯನುಹೊ | ಕ್ಕೇತಕಲ್ಲದೆಕೆಡುತಿರ್ದೆ ||೨೦೩||

ಎಂದುಚಿಂತಿಸುತಿರಲಾಸಗ್ಗಿಗರುತಮ್ಮ | ದೊಂದುರೂಪವತೋರುತವೆ ||
ಅಂದುತಾಮೈದಿದಂದವಪೇಳಿಸುಗುಣಿನಿ | ನ್ನಂದಮನೀನೆನೋಡೆನುತ ||೨೦೪||

ಇವುಮೊದಲಾದಯುಕ್ತ್ಯಾಯುಕ್ತಿಯನುಪೇಳಿ | ಯುವನಿಪನನುಬೀಳ್ಕೊಂಡು ||
ದಿವಿಜರಮರಲೋಕಕೆಪೋಗಲಿತ್ತಕೇ | ಶವನಶಬವಸುಡಲೆಂದು ||೨೦೫||

ತುಂಗಿಯೆಂಬಾಗಿರಿವರಕೆಯ್ದಲಾಗಗ | ನಾಂಗಣದೊಳಗಿಂದುಗೂಡಿ ||
ಪಿಂಗದಮೋಹದೊಳಿಪ್ಪತ್ತುಬಾರಿಯು | ಭಂಗನಸೀಸುಟ್ಟೆಯಲ್ಲ ||೨೦೬||

ಎಂದಶರೀರವಚನವಾಗಲುಬಿಸ | ವಂದವಡೆದುಭ್ಬಲರಾಮ ||
ಚಂದನದಿಂಧನದಿಂದಮುಕುಂದನ | ನಂದುಸಂಸ್ಕಾರಮಾಡಿದನು ||೨೦೭||

ತದನಂತರದೊಳಗಾನಗಕೀರ್ವರು | ಸದಮಲಚಾರಣರುಗಳು ||
ಮುದದಿಂದಬರಲವರ್ಗಿರದಭಿವಂದಿಸಿ | ಪದುಳದಿದೀಕ್ಷೆಯಧರಿಸಿ ||೨೦೮||

ಉತ್ತಮಮಪ್ಪಾತಪದೊಳಗಾಸಂಯು | ಮೋತ್ತಂಸನಾರಾಮಯೋಗಿ ||
ಚಿತ್ತಶುದ್ಧಿಯೊಳುನೆಗಳಿಸನ್ನ್ಯಸನದಿ | ಮತ್ತಾದೇಹವನುಳುಹಿ ||೨೦೯||

ಸುರುಚಿರತರಸುಖವಿಮಾವೈದನೆಯಾ | ಸುರಲೋಕದೊಳುಸಂಜನಿಸಿ ||
ನಿರುತಮಪ್ಪಾಸೌಖ್ಯವನುಣುತಾಹಲ | ಧರನಿರ್ದನತಿಹರುಷದೊಳು ||೨೧೦||

ದಿವಿಜಸತಿಯರಿಂದಿವ್ಯಸುಖಮುನನು | ಭವಿಸುತ್ತನಿಶ್ಚಿಂತನಾಗಿ ||
ದಿವಿಜಲೋಕವಪರಿಪಾಲಿಸುತಿರ್ದನು | ದಿವಿಜೇಂದ್ರಕುಲಶೇಖರನು ||೨೧೧||

ಇದುಜಿನಪದಸರಸಿಜವದಮಧುಕರ | ಚದುರಮಂಗರಸರಚಿಸಿದ ||
ಮದನಾರಿನೇಮಿಜಿನೇಶಸಂಗತಿಯೊಳ | ಗಿದುಚತುಸ್ತ್ರಿಂಶದಾಶ್ವಾಸ ||೨೧೨||

## ಮೂವತ್ತನಾಲ್ಕನೆಯ ಸಂಧಿ ಸಂಪೂರ್ಣಂ

# ೩೫. ಮೋಕ್ಷಪ್ರಾಪ್ತಿ ಸಂಧಿ

ಸುರನರಫಣಿಪತಿಮೌಲಿಕೀಲಿತರತ್ನ | ಕಿರಣರಂಜಿತಪಾದನಖನ ||
ನಿರವಧಿಯುಹಸಿರಿಯೊರಡಕೆರೆಯನೇಮಿ | ಚರಣಕಮಲಕೆರಗುವೆಸು ||೧||

ಬಲ್ಲಿದಮೋಹಮಲ್ಲನಹಲ್ಲಮುರಿದತಿ | ಬಲ್ಲಿದನಾಪುಷ್ಪಶರನ ||
ಬಿಲ್ಲಮುರಿದುಪಂಚಶರವಕಳೆದನೇಮಿ | ವಲ್ಲಭನಡಿಗೆರಗುವೆಸು ||೨||

ದ್ವಾರಾವತಿಪುರವರವೆಲ್ಲಮುರಿದಾ | ನೀರೊಳುನೆರೆದುಹೋದುದನು ||
ನಾರಾಯಣನಳಿದುದುಮುಂತಾದಾ | ವಾರತೆಯೆಲ್ಲವಕೇಳಿ ||೩||

ಕುರುಜಾಂಗಣವಿಷಯಾಧೀಶಪಾಂಡವ | ರುರುತರಚಿಂತೆಯುತಾಳಿ ||
ವರಸುತನಭಿಮನ್ಯುಕುವರಂಗಾವು | ತ್ತರೆಗೆಪುಟ್ಟಿದನಂದನನು ||೪||

ಸ್ಮರನಿಭರೂಪಪರೋಕ್ಷಿತನೆಂಬಗೆ | ಧರಣೀಭಾರವೆಲ್ಲವನು ||
ಇರದಿತ್ತುನಿಜಸತಿಯರುಪಲಬರುಭೂ | ವರರುಬೆಂಬಳಿಯೊಳುಬರಲು ||೫||

ಉತ್ತರದೆಸೆಯುಪಲ್ಲವದೇಶದೊಳಿ | ದುರ್ತ್ತಮನೇಮಿಶ್ವರನ ||
ಹತ್ತಿರಕೆಯ್ದಿಸಮವಸರಣವಹೊಕ್ಕು | ಮತ್ತಾಜಿನಪತಿಗೆರಗಿ ||೬||

ತದನಂತರದೊಳುವರದತ್ತಗಣಧರ | ಪದಪದ್ಮಕಳಿಶಿಶುವಾಗಿ ||
ಮುದದಿಂಧರ್ಮನಂದನನುತಮ್ಮಾಪೂ | ರ್ವದಭವವನುಬೆಸಗೊಳಲು ||೭||

ಕೇಳವನೀಪತಿಯೀಭರತದೊಳುವಿ | ಶಾಲವಾದಂಗದೇಶದೊಳು ||
ಭೂಲಲನೆಯುಮುಖದಂತೆರಂಜಿಸುವಶುಂ | ಡಾಲವೆಸರನಗರಿಯೊಳು ||೮||

ಸೋಮಕುಲೋದ್ಭವಘನರಥನೃಪಗೆಮ | ಹಾಮಂತ್ರಿಸೋಮನೆಂಬವಗೆ ||
ಸೋಮೆಗೆಜನಿಸಿದರಾಸೋಮದತ್ತನು | ಸೋಮಿಲನಾಸೋಮಭೂತಿ ||೯||

ಬಳಿದುಜವ್ವನವೇರಲಾನಿಜಜನಕನು | ಬಳಿಕತನ್ನಾವ್ಯೈದುನನು ||
ಲಲಿತಾಂಗನಗ್ನಿಭೂತಿಗೆಯಗ್ಗಿಲೆಯೆಂಬ | ಲಲನೆಗೆಸಂಜನಿಯಿಸಿದ ||೧೦||

ಭೂನುತೆಹೇಮಶ್ರೀಮಿತ್ರಶ್ರೀ | ಯಾನಾಗಶ್ರೀಯೆಂಬ ||
ಮಾನಿನಿಯರನಾಮೂವರುತನುಜರ್ಗೆ | ಸಾನುರಾಗದಿತಂದುಕೊಟ್ಟು ||೧೧||

ಉರುಮುದದಿಂದಿರಲಾಪೂರಬನಕೋರ್ವ | ವರಮುನಿಬರೆಕೇಳುತವೆ ||
ಧರಣಿಪಮೇಘರಥನುಸೋಮಮಂತ್ರೀಶ | ವೆರಸಿತಾನಾಬಳಿಗೆಯ್ದಿ ||೧೨||
ವಿಮಲಮಪ್ಪಾಧರ್ಮವಕೇಳಿನಿಜಸುತ | ವಿಮಲವಾಹನಗೆಪಟ್ಟವನು ||
ಮಮತೆಯಿಂದವೆಕಟ್ಟಿಸೋಮಸಚಿವಗೂಡಿ | ಯಮಲದೀಕ್ಷೆಯನಾಂತನಿತ್ತ ||೧೩
ಆಮಂಡಳಿಕವಿಮಲವಾಹನಗಾ | ಸೋಮದತ್ತನುಸೋಮಿಲನು ||
ಸೋಮಭೂತಿಗಳುಮೂವರುತನ್ನವಿಶ್ವಾಸ | ಭೂಮಿಗಳಾಗಿರುತಿರಲು ||೧೪||
ಅನುರಾಗದಿಂದವಿಮಲವಾಹನನೊಂದು | ದಿನದವಸಂತಮಾಸದೊಳು ||
ವನಕೆಪೋಗಲುಸೋಮದತ್ತಮಹಾಮಂತ್ರಿ | ತನಗೊಂದುಕಾರ್ಯಕಾರಣದಿ ||
ಮನೆಯೊಳುಳಿದುಸೋಮಿಲಸೋಮಭೂತಿಯೆಂ | ಬನುಜರೀರ್ವರುಕೂಡಿತನ್ನ ||
ವನಿತೆಧನಶ್ರೀಯಾಸೋಮಿಲನಂ | ಗನೆಮಿತ್ರಶ್ರೀಯರನು ||೧೬||
ಕಳುಹಿದೊಡಿತ್ತಕಿರಿಯಸೋಮಭೂತಿಯು | ಲಲನೆನಾಗಶ್ರೀತನ್ನ ||
ವಿಲಸಿತಮಪ್ಪಶೃಂಗಾರಕೆಸಲವಾಗಿ | ತಳುಮಾಡಲಾಸಮಯದೊಳು ||೧೭||
ಮಾಸೋಪವಾಸದಪಾರಣೆಗೆಂದೋರ್ವ | ನಾಸಂಯಮಿನಡೆತರಲು ||
ಆಸೋಮದತ್ತನವರನುನಿಲಿಸಿನಿಜ | ವಾಸಕೆತಂದುಕುಳ್ಳಿರಿಸೆ ||೧೮||
ಆಗಲವನಿಪಾಲನಚರರೆಯ್ತಂದು | ಬೇಗದಿಕರೆಯಲುಬೆದರಿ ||
ನಾಗಶ್ರೀಯೆಂಬನಾದುನಿಗೆಂದನೀ | ನೀಗಳಿವರ್ಗೆಭಿಕ್ಷೆಯನು ||೧೯||
ಹಸನಾಗಿಯುನುನಯದಿಂಮಾಡಿಸೆನುತತಾ | ನಸವಸದಿಂಪೋಗಲಿತ್ತ ||
ಒಸೆದುನಾನುನಂದನಕೆಪೋಪುದನುಮಾ | ಣಿಸಬಂದನೀಪಾಪಿಯೆಂದು ||೨೦||
ಮುನಿಸಿಂದುರಿದುವಿಷನುವಿಷಭಕ್ಷ್ಯವ | ನನುವಮಾಡಿಬಡ್ಡಿಸಲಾಗ ||
ಮುನಿಪನವನುಮೆದ್ದುಸತ್ತುಮುಕ್ತಿಯನೆರೆ | ಮನೆಯೊಳುಜನಿಸಿದನಿತ್ತ ||೨೧||
ಸೋಮದತ್ತನುತನ್ನನಾದುನಿಯೆಸಗಿದು | ದ್ದಾಮಪಾತಕಕಿರದಕ್ಕಿ ||
ಸೋಮಿಲಸೋಮಭೂತಿಯಕೂಡಿಕೊಂಡುಸು | ಪ್ರೇಮದಿತಪನತಾಳಿದನು ||೨೨||
ಪದೆದುಧನಶ್ರೀಮಿತ್ರಶ್ರೀಯೆಂಬ | ಸುದತಿಯರಾದೀಕ್ಷೆಯನು ||
ಒದವಿಸಿಯವರೊಳುತಪಗೆಯ್ದೊಗೆದರು | ಪದಿನಾರನೆಯಸಗ್ಗದೊಳು ||೨೩||
ಸೋಮದತ್ತಚರದಿವಿಜನುಮೊದಲಾದ | ತಾಮೈವರುಸಗ್ಗಿಗರು ||
ಪ್ರೇಮದಿಕೂಡಿಸುಖದೊಳಿರಲಿತ್ತಲು | ಭೂಮಿಪವಿಮಲವಾಹನನು ||೨೪||

